ಗಳಗನಾಥ ಸುರಸಗ್ರಂಥಮಾಲೆಯ

೪೬ ನೆಯ ಗ್ರಂಥ.



ಶ್ರೀ

(ಸಚಿತ್ರ)

# ಶೈವಸುಧಾರ್ಣವ.



ಇದನ್ನು

ವೇಂಕಟೇಶ ತಿರಕೋ ಕುಲಕರಣಿ ಗಳಗನಾಥ.

ಪೆನಶನರ ಅ॥ ಮಾಸ್ತರ,

ಟ್ರೇನಿಂಗಕಾಲೇಜ

ಧಾರವಾಡ

ಹಾಗು

ಶ್ರೀ ಮಲ್ಲಾರಿದೀಕ್ಷಿತ ಚಿಂತಾಮಣಿದೀಕ್ಷಿತ ಕಕ್ಕನವರ,

ಗುರ್ಲಹೊಸೂರ.

ಈ ಉಭಯರು ಬರೆದರು.

೧೯೨೩

[ಮೊದಲನೇ ಆವೃತ್ತಿ ೨೦೦೦ ಪ್ರತಿಗಳು.]

(ಶಕೆ ೧೮೪೫ ರುಧಿರೋದ್ಗಾರಿ ಸಂವತ್ಸರ)

ಬೆಲೆ ೩॥ ರೂ.

ಮುದ್ರಕ—ವೇಂಕಟೇಶ ತಿರಕೋ ಕುಲಕರಣಿ ಗಳಗನಾಥ.
ಮುದ್ರಣಾಲಯು—ಶ್ರೀ ವೇಂಕಟೇಶ ಪ್ರಿಂಟಿಂಗ ಪ್ರೆಸ್ ಹಾವೇರಿ.
ಪ್ರಕಾಶಕ—ವೇಂಕಟೇಶ ತಿರಕೋ ಕುಲಕರಣಿ ಗಳಗನಾಥ.
ಪ್ರಸಿದ್ಧಿಸುವ ಸ್ಥಳ–ಶ್ರೀ "ಸದ್ಗುರು" ಆಫೀಸ ಹಾವೇರಿ ಜಿ. ಧಾರವಾಡ

Printed by V. T. Kulkarni, Galgnath, at the
VENKATESH PRINTING PRES,
HAVERI,
Dt. DHARWAR.

# ಪ್ರಸ್ತಾವನೆ.

(೧) ವೈದಿಕರಾದ ನಮಗೆ ಧರ್ಮಾರ್ಥ-ಕಾಮ-ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳನ್ನು ಕುರಿತು ಬೋಧಿಸುವ ಪೂಜ್ಯ ಸದ್ಗ್ರಂಥಗಳೆಂದರೆ ಶ್ರುತಿ-ಆಗಮ-ಸ್ಮೃತಿ-ಪುರಾಣಗಳು. ಅವುಗಳೊಳಗೂ ಸಾಮಾನ್ಯಜನರಲ್ಲಿ ಧಾರ್ಮಿಕವೃತ್ತಿಯನ್ನು ಜಾಗ್ರತಗೊಳಿಸಲಿಕ್ಕೆ ಪುರಾಣಗಳು ಅತ್ಯಂತ ಸಮರ್ಥವಾದವುಗಳು. ಈ ಪ್ರಬಲಸಾಧನಗಳು ಅನಾದಿಕಾಲದಿಂದ ನಮ್ಮ ಲೌಕಿಕ-ಪಾರಮಾರ್ಥಿಕ ಪ್ರಗತಿಗೆ ಸಾಧನಗಳಾಗುತ್ತ ಬಂದಿದ್ದರೂ, ಕಾಲಮಹಿಮೆಯಿಂದ ಅವೇ ಮಹತ್ವದ ಶ್ರೇಷ್ಠಸಾಧನಗಳು ಈಗ ಕೆಲಸಕ್ಕೆ ಬಾರದವಾಗಿರುತ್ತವೆ! ವೈದಿಕರಲ್ಲಿ ಹುಟ್ಟಿಯೂ ಹುಟ್ಟದಹಾಗಾಗಿರುವ ನಮ್ಮ ಮುಖದಿಂದ "ಹಾಳು ಪುರಾಣಗಳು" ಎಂಬ ತಿರಸ್ಕಾರದ ಉಕ್ತಿಯು ಹೊರಡಹತ್ತಿ, ನಾವು ಈ ಸಾಧನಗಳನ್ನು ಪರಿತ್ಯಜಿಸಿದಾಗಿನಿಂದ ನಮಗೆ ಧರ್ಮದ ಪರಿಜ್ಞಾನವಿಲ್ಲದಾಯಿತು; ಅದರಿಂದ ನಮ್ಮಲ್ಲಿ ಸ್ವಾರ್ಥವು ಹೆಚ್ಚಲು, ನಮ್ಮ ವೈದಿಕತ್ವವು ಹಾಳಾಗುತ್ತಬಂದು ನಾವು ಕೇವಲ ನೀಚಸ್ವಾರ್ಥದ ಸೆಳವಿಗೆ ಬಿದ್ದು ಪ್ರತ್ಯಕ್ಷ ಹಡೆದ ತಾಯಿತಂದೆಗಳೊಡನೆಯೂ, ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳೊಡನೆಯೂ, ಮಾಡಿಕೊಂಡ ಹೆಂಡತಿಯೊಡನೆಯೂ, ಒಂದೇ ಹೊಟ್ಟೆಯ ಅಣ್ಣತಮ್ಮಂದಿರೊಡನೆಯೂ ಸ್ವಾರ್ಥಬುದ್ಧಿಯಿಂದಲ್ಲದೆ ಧರ್ಮದಿಂದ ನಡೆಯದವರಾಗಿ ಸ್ವಸುಖೈಕಮಗ್ನರಾಗಿ ಹೋಗಹತ್ತಿರುವೆವು! ಇಂಥಬಳಿಕ ಅಪ್ರತ್ಯಕ್ಷನಾಗಿರುವ 'ದೇವರ, ಅಥವಾ ಜಗತ್ತಿನಮೇಲೆ ಪ್ರೇಮಮಾಡಲು, ಬೋಧಿಸುವ ಸತ್ಪುರುಷರ ಪರಿವೆಯು ನಮಗೆ ಹ್ಯಾಗೆ ಉಳಿಯಬೇಕು? ಪ್ರಾಣಿಮಾತ್ರರಲ್ಲಿ ಸದ್ಭಾವ-ದಯಾ-ದಾಕ್ಷಿಣ್ಯಗಳಿಲ್ಲದವರಾಗಿ ದುರಾಶೆಯ ಮಾತ್ಸರ್ಯದಿಂದ ನಾವು—"ಒಳ್ಳೆಯದೆಲ್ಲ ನಮಗಿರಬೇಕು" "ಮಾಡಬಾರದ್ದು ಮಾಡಿ ಮಂದಿಯದನ್ನು ನಮ್ಮ ಮನೆಯಲ್ಲಿ ತುಂಬಿಕೊಳ್ಳಬೇಕು" "ಎಲ್ಲಿಯ ದೇವರು, ಎಲ್ಲಯ ಧರ್ಮ" ಇತ್ಯಾದಿ ಕ್ಷುದ್ರವಾದ ನರಕಸಾಧನೆಯ ನಾಸ್ತಿಕವಿಚಾರಗಳಿಂದ ಪ್ರೇರಿತರಾಗಿ ನೀಚತಮ-ಪ್ರವರ್ತಿಸಹತ್ತಿರುವೆವು "ಯಾರು ಹಾಳಾದಭಾಗ್ಯವೇನು? ನಾವಷ್ಟು ಸುಖದಿಂದ ಇದ್ದರಾಯಿತು" ಎಂಬ ಸಂಕುಚಿತ ಹೀನಭಾವನೆಯು ನಮ್ಮಲ್ಲಿ ಹೆಚ್ಚಿ, ನಾವು ದೋಷೈಕದೃಷ್ಟಿಯವರಾಗಲು, ಎರಡನೆಯವರ ಹಂಗೇನೆಂದು ಪರಸ್ಪರರ ಸಂಬಂಧ ಕಡಿದುಕೊಂಡು ದೂರ ದೂರ ಸಿಡಿದುಹೋಗುವ ಪ್ರವೃತ್ತಿಯೇ ನಮ್ಮಲ್ಲಿ ಪ್ರಬಲವಾಗಹತ್ತಿರುವದು. ಈ ರೀತಿಯಿಂದ ಕ್ರೂರ ಪಶುತ್ವವು ನಮ್ಮಲ್ಲಿ ಬರತೊಡಗಿ ನಾವು ಯಾವಕೆಲಸಕ್ಕೂ ಬಾರದವರಾದೆವು; ಇಹ-ಪರಗಳಲ್ಲಿ ನಮಗೆ ಸುಖವಿಲ್ಲದಾಯಿತು; ಸಿಕ್ಕವರು ಸಿಕ್ಕಕ್ಕ ಸವತ್ತನ್ನು ಎಳೆಯಹತ್ತಿದರು! ಒಟ್ಟಿನಲ್ಲಿ ಇಷ್ಟೆಲ್ಲ ದುರ್ದೆಸೆಯು ನಮಗೆ ಪ್ರಾಪ್ತವಾಗಲಿಕ್ಕೆ, ನಮ್ಮಲ್ಲಿಯ ಪ್ರೇಮಬಂಧನವು ಹರಿದು ಹೋದದ್ದೇ ಕಾರಣವು.

(೨) ಪ್ರೇಮೋತ್ಪತ್ತಿಯಾಗಬೇಕಾದರೆ ಪರಸ್ಪರರು ಯಾವದೊಂ...
ಸಂಬಂಧದಿಂದ ಬದ್ಧರಾಗಿರಬೇಕಾಗುತ್ತದೆ. ಪಿತಾ-ಪುತ್ರಸಂಬಂಧದಂಥ ... ಗಳೂ, ಗುರುಶಿಷ್ಯಸಂಬಂಧದಂಥ ವೃತ್ತಿಸಂಬಂಧಗಳೂ, ರಾಜ-ಪ್ರಜಾಸಂಬಂಧದಂಥ ರಕ್ಷಣಹೇತುಸಂಬಂಧಗಳೂ, ದೇಶಬಾಂಧವ್ಯದಂಥ ಸುಖಹೇತುಸಂಬಂಧಗಳೂ, ವಸು... ಧೈವಕುಟುಂಬಕದಂಥ ಶಾಂತಿದಾಯಕ ಸಂಬಂಧಗಳೂ ತಮ್ಮ ತಮ್ಮ ಧರ್ಮರಜ್ಜು... ಗಳಿಂದ ಮನುಷ್ಯರು ಒಬ್ಬರಿಂದೊಬ್ಬರು ಸಿಡಿದು ಹೋಗದಂತೆ ಕಟ್ಟಹಾಕುತ್ತಿರುವವು. ಈ ಬೇರೆ ಬೇರೆ ಸಂಬಂಧಗಳ ಧರ್ಮಗಳೆಲ್ಲ ಮೇಲೆಹೇಳಿದ ಶ್ರುತ್ಯಾದಿ ನಮ್ಮ ಧಾರ್ಮಿಕ ಗ್ರಂಥಗಳಿಂದ ಗೊತ್ತಾಗುತ್ತಿದ್ದು, ಆ ಗ್ರಂಥಗಳ ಅವಲೋಕನವೇ ನಿಂತುಹೋಗಿರುವದ... ರಿಂದ, ಆ ಸಂಬಂಧಗಳು ಹೆಸರಿಗೆ ಮಾತ್ರ ಉಳಿದು, ಅವುಗಳ ಧರ್ಮರೂಪರಜ್ಜುಗಳು ಹರಿದುಹೋಗುತ್ತಿರುವದರಿಂದ, ಅಂದರೆ ಅವರವರು ತಮ್ಮ ತಮ್ಮ ಧರ್ಮಗಳಂತೆ ನಡೆ... ಯದ್ದರಿಂದ ಕಟ್ಟುಹರಿದ ಹೊರೆಯೊಳಗಿನ ಕಟ್ಟಿಗೆಗಳ ಸ್ಥಿತಿಯು ನಮ್ಮದಾಗಿರುತ್ತದೆ. ಆ ಬೇರೆ ಬೇರೆ ಸಂಬಂಧಿಕರು ತಮ್ಮ ತಮ್ಮ ಧರ್ಮಗಳನ್ನು, ಧರ್ಮಪ್ರಭುವಾದ ಈಶ್ವ... ರಸಾಕ್ಷಿಯಿಂದ ಪಾಪ-ಪುಣ್ಯಕ್ಕಂಜಿ ಪಾಲಿಸಿದರೆ, ಅದರಿಂದ ಈಶ್ವರಪ್ರೀತಿಯಾಗಿ ಅವರ... ವರಿಗೆ ಇಹಪರಗಳಲ್ಲಿ ಸುಖವುಂಟಾಗುವದು; ಆದರೆ ಈಗಿನ ಧರ್ಮಭ್ರಷ್ಟತೆಯು ಮೂ... ಲಕ ಈಶ್ವರೀಕ್ಷೋಭಉಂಟಾಗಿರಲು, ಇಲ್ಲದವರು ಒಂದುಬಗೆಯಾಗಿ ಅತ್ತರೆ ಇದ್ದವರು ಒಂದುಬಗೆಯಾಗಿ ಅಳುತ್ತಿರುವರು. ಒಟ್ಟಿಗೆ ಧರ್ಮಹೀನವಾದ ಈಗಿನ ಕಾಲದಲ್ಲಿ ಜಗತ್ತೇ ಅಂತಸ್ತಾಪದಿಂದ ಉರಿಯುತ್ತಿರುವದರಿಂದ ಅದಕ್ಕೆ ಸುಖವಿಲ್ಲ. ಈಗಿನ ಜಗತ್ತು... ನೋಡಲಿಕ್ಕೆ ಚಂದಕಾಣುತ್ತಿದ್ದರೂ ನಡೆಯಲಿಕ್ಕೆ ಭಯಂಕರವೂ, ದುಃಖದಾಯಕವೂ ಆಗಿರುತ್ತದೆ. ಧರ್ಮಹೀನರಾದ ಈಗಿನ ದೇಹಾತ್ಮವಾದಿ ಅಹಂಕಾರಿಗಳು ಪೂಜ್ಯ ಪೂಜಕಭಾವವನ್ನು ಬಿಟ್ಟುಕೊಟ್ಟು ದೇವರನ್ನೂ, ಗುರುಹಿರಿಯರನ್ನೂ, ಪರಲೋಕ... ವನ್ನೂ ಲೆಕ್ಕಿಸದೆ—"ನಮಗಿಂತ ಬಲ್ಲವರಾರು? ಎಂದೋ ಆಗಿಹೋಗಿರುವ ಹಿಂದಿನವರ ಮಾತನ್ನು ನಾವು ಯಾಕೆ ಕೇಳಬೇಕು? ನಮ್ಮಂತೆ ಅವರೂ ಮನುಷ್ಯರೇ ಅಲ್ಲವೇ? ಹಳೆಯ ಶ್ರುತಿ-ಸ್ಮೃತಿಗಳ ಸಂಬಂಧವೇನು? ಅಸಂಭವವರ್ಣನಗಳುಳ್ಳ ಪುರಾಣಗಳ ಗೊಡವೆ ನಮಗೇಕೆ? ಈಗಿನ ಕಾಲಕ್ಕೆ ತಕ್ಕ ಹೊಸಸ್ಮೃತಿಗ್ರಂಥವನ್ನು ಉಂಟುಮಾಡಿ ಕೊಂಡರಾಯಿತು" ಇತ್ಯಾದಿರೀತಿಯಿಂದ ಹರಟುತ್ತ, ಶ್ವಾನ-ಸೂಕರಗಳಂತೆ ವಿಧಿನಿಷೇಧ ಗಳಿಲ್ಲದೆ ಸಿಕ್ಕದ್ದನ್ನು ತಿನ್ನುತ್ತ ಸಿಕ್ಕಲ್ಲಿ ತಿರುಗುತ್ತ ಮನಸ್ಸಿಗೆ ಬಂದಂತೆ ನಡೆಯುವರು. ಇಂಥವರಿಗೆ ಪರಲೋಕದಲ್ಲಿ ಯಾವ ಗತಿಯಾಗುತ್ತಿರಬಹುದೆಂಬದು, ಅವರು ಈ ಲೋಕ... ದಲ್ಲಿ ಸಂಪಾದಿಸಿದ ಶಾಂತಿ-ಸಜ್ಜನಾನುರಾಗ-ಕೀರ್ತಿಗಳಮೇಲಿಂದ ಒಡೆದುಕಾಣುವಹಾಗಿ ರುವದು. ಧರ್ಮಕ್ಕನುಸರಿಸಿದ ತನ್ನ ಕರ್ತವ್ಯವನ್ನು ಪುನಃಪೂರ್ವಕವಾಗಿ ಮಾಡಿ ಯ... ಚ್ಛಾಲಾಭಸಂತುಷ್ಟನಾದ ಧರ್ಮಿಷ್ಠನಿಗೆ ದೊರೆಯುವ ಸುಖ-ಶಾಂತಿಗಳು, ಅಹಂ... ರಿಗಳೂ, ವಿಷಯಸುಖಮಗ್ನರೂ ಆದ ಧರ್ಮಭ್ರಷ್ಟರಿಗೆ ಪೃಥ್ವಿಯ ಸಾಮ್ರಾಜ್ಯಪ್ರಾ... ಪ್ತಿಯಾದರೂ ಸರ್ವಥಾ ದೊರೆಯಲಾರವು. ಧರ್ಮಿಷ್ಠನಿಂದ ಅನ್ಯರಿಗೆ ಅಭಯವೂ,...

 

ಧರ್ಮಭ್ರಷ್ಟನಿಂದ ಅನ್ಯರಿಗೆ ಭಯವೂ ಉಂಟಾಗುವವು. ಧರ್ಮಹೀನರಾದ ಈಗಿನ ಸ್ವಚ್ಛಂದವೃತ್ತಿಯುವರ ಸ್ಥಿತಿಯು ಒಳಗೆ ಭಗಭಗ ಹೊರಗೆ ಝಗಝಗ ಎಂಬಹಾಗೆ ಇರುವದೆಂಬದು ಎಲ್ಲರ ಅನುಭವಕ್ಕೆ ಬರುವಮಾತಾಗಿರುವದು. ಈಗಿನ ಹೀನಸ್ಥಿತಿಯು ಸಾಧಾರಣವಾಗಿ ಮನುಷ್ಯಮಾತ್ರರಿಗೇ ಉಂಟಾಗಲಿಕ್ಕೆ, ಅವರವರು ತಮ್ಮ ತಮ್ಮ ಧರ್ಮಗ್ರಂಥಗಳ ಪರಿಶೀಲನವನ್ನು ಭಕ್ತಿಯಿಂದ ಮಾಡಿ ಅದರಂತೆ ವಿವೇಕದಿಂದ ಆಚರಿಸದೆ ಇರುವದೇ ಕಾರಣವಾಗಿರುವದು-

(೩) ನಮ್ಮ ಸನಾತನ ವೈದಿಕಧರ್ಮಕ್ಕೆ ಮೇಲೆಹೇಳಿದಂತೆ ಶ್ರುತಿ-ಆಗಮ-ಸ್ಮೃತಿ-ಪುರಾಣಗಳು ಪ್ರಮಾಣಗಳಾಗಿದ್ದರೂ, ಪುರಾಣಗಳನ್ನು ಬಿಟ್ಟು ಬರಿಯ ಶ್ರುತ್ಯಾದಿಗಳನ್ನು ನೋಡಿದರೆ ಧರ್ಮದ ಸ್ವರೂಪವು ಅಸ್ಥಿಪಂಜರದಂತೆ ಅಸುಂದರವಾಗಿಯೂ, ರುಕ್ಷವಾಗಿಯೂ ತೋರುವದೆಂದು ವಿವೇಕಾನಂದರಂಥ ಕುಶಲಧಾರ್ಮಿಕರು ಹೇಳುವದು ಸಮಂಜಸವಾಗಿರುವದು! ಇಂಥ ಮಹತ್ವದ ಪುರಾಣಗಳ ಶ್ರವಣವು, ನವನಾಗರಿಕ ಕಾಲವೆಂದು ಅಭಿಮಾನಪಡುವ ಈಗಿನ ಕಾಲದಲ್ಲಿ ಬಹುತರ ನಿಂತು ಹೋಗಿರುವದಲ್ಲದೆ, ಪುರಾಣಶ್ರವಣ ಮಾಡುವ ಕೆಲವು ವಿವೇಕಶೂನ್ಯಧಾರ್ಮಿಕರು ಶಿವವಿಷ್ಣ್ವಾದಿದೇವತೆಗಳ ಶ್ರೇಷ್ಠತ್ವಕ್ಕಾಗಿ ಬಡಿದಾಡುತ್ತ ಶೈವಪುರಾಣಗಳನ್ನು ವೈಷ್ಣವರೂ, ವೈಷ್ಣವಪುರಾಣಗಳನ್ನು ಶೈವರೂ ನಿಂದಿಸುತ್ತ ಕುತ್ಸಿತತನದಿಂದ ತಮಗೆ ವಿರೋಧವಾದ ಪುರಾಣಗಳನ್ನು ಕಣ್ಣೆತ್ತಿ ನೋಡದೆ ಇರುವರು. ಇಂಥವರಿಗೆ ಪುರಾಣಗಳು ತೀಕ್ಷ್ಣಧಾರೆಯ ಶಸ್ತ್ರಗಳಂತೆ ಧಾರ್ಮಿಕಸದ್ಭಾವನೆಯ ಉಚ್ಛೇದಕ್ಕೆ ಕಾರಣವಾಗುತ್ತವೆಂದು ಹೇಳಬಹುದು. ಇಂಥ ವೈಷ್ಣವರಾಗಲಿ, ಶೈವರಾಗಲಿ ಸದ್ಭಾವದ ಧಾರ್ಮಿಕರಾಗಿರದೆ, ಅಹಂಭಾವದ ಕಲಹಲಂಪಟರಾಗಿರುವರೆಂದು ಖಂಡಿತವಾಗಿ ಹೇಳಬಹುದು. ಇವರಿಗೆ ಪುರಾಣಗಳು ಉದ್ಧಾರದ ಸಾಧನಗಳಾಗಿರದೆ, ಕಾಲುಕೆದರಿ ಜಗಳತೆಗೆಯಲಿಕ್ಕೆ ಸಾಧನಗಳಾಗಿರುವವು. ತಮ್ಮ ಧರ್ಮಪಂಥ, ತಮ್ಮ ಗುರುಗಳು, ತಮ್ಮ ಔಪಾಸ್ಯದೇವತೆ, ತಮ್ಮ ಆ ಔಪಾಸ್ಯದೇವತೆಯ ಸಂಬಂಧದ ಪುರಾಣಗಳು, ತಮ್ಮ ಮತಗ್ರಂಥಗಳು ಇವುಗಳಲ್ಲಿ ಭಕ್ತಿ-ವಿಶ್ವಾಸಗಳುಳ್ಳವರಾಗಿ ತಮ್ಮ ಧರ್ಮದಂತೆ ತಾವು ಆಚರಿಸುವದನ್ನು ಬಿಟ್ಟು "ಮನೆಗೆಲಸ ಮಾಡಲಾರದ ಬಜಾರಿ ಹೆಂಗಸು ಬೆಳಗಾಗುತ್ತಲೆ ನೆವತೆಗೆದು ನೆರೆಯವರ ಸಂಗಡ ಕಾಲುಕೆದರಿ ಜಗಳ ತೆಗೆಯುವಂತೆ" ಅನ್ಯಪಂಥದವರೊಡನೆ ಜಗಳ ತೆಗೆಯುವದು ದುಃಖದ ಸಂಗತಿಯು! ತಮ್ಮ ಗತಿಯನ್ನು ತಾವು ನೋಡಿಕೊಂಡು ಮಂದಿಯಸಂಗಡ ಉದಾರಮನಸ್ಸಿನಿಂದ ನಡೆದುಕೊಳ್ಳಲಾರದವರು ಧರ್ಮಿಷ್ಠರು ಹ್ಯಾಗೋ ತಿಳಿಯದು- ಪತಿವ್ರತಾಸ್ತ್ರೀಗೆ ತನ್ನ ಪತಿಯೇ ಅಧಿದೈವತವಾಗಿ ತೋರುವಂತೆ ಶೈವರಿಗೆ ಶಿವನೂ, ವೈಷ್ಣವರಿಗೆ ವಿಷ್ಣುವೂ ಅಧಿದೈವತಗಳಾಗಿ ತೋರುವದು ಸ್ವಾಭಾವಿಕವು; ಆದರೆ ಇದಕ್ಕಾಗಿ ಜಗಳವೇಕೆ! ಹೀಗೆ ಪುರಾಣಗಳ ನೆವದಿಂದ ಕಲಹ ಬೆಳೆಸುವದಕ್ಕಿಂತ ಪುರಾಣಗಳನ್ನು ನೋಡದಿರುವದೇ ಒಂದು ಬಗೆಯಿಂದ ನೆಟ್ಟಗೆಂದು ಹೇಳಬೇಕಾಗುತ್ತದೆ; ಯಾಕಂದರೆ ಇದರಿಂದ ಧಾರ್ಮಿಕ ಕಲಹಗಳಾದರೂ ಕಡಿಮೆಯಾದಾವು.

[೪] ಒಟ್ಟಿಗೆ, ಪುರಾಣಗಳನ್ನು ಮೂಲತಃ ನೋಡದಿರುವದೂ, ನೋಡಿದರೂ ವಿವೇಕ ವಿಲ್ಲದೆ ನೋಡುವದೂ ಹಾನಿಕರವೆಂದು ಖಂಡಿತವಾಗಿ ಹೇಳಬಹುದು- ಈ ಸ್ಥಿತಿಯು ಆದಷ್ಟು ಕಡಿಮೆಯಾಗಿ ವಿವೇಕದಿಂದ ಪುರಾಣಗಳನ್ನು ಅವಲೋಕಿಸುವ ಅಭಿರುಚಿಯು ಸಾರ್ವತ್ರಿಕವಾಗಿ ಜನರಲ್ಲಿ ಉಂಟಾಗಬೇಕೆಂದು ತಿಳಿದು, ಅನಾದಿಕಾಲದಿಂದ ನಮ್ಮ ರಾಷ್ಟ್ರೀಯ ಗ್ರಂಥಗಳಾಗಿರುವ ಮಹಾಭಾರತ, ಭಾಗವತ, ರಾಮಾಯಣಗಳಲ್ಲಿ, ಭಾಗವತವನ್ನು ಎಲ್ಲರಿಗೂ ಓದಲು ಸಾಧ್ಯವಾಗುವಂತೆಯೂ, ಅದರೊಳಗಿನ ಧಾರ್ಮಿಕ, ನೈತಿಕ, ಅಧ್ಯಾತ್ಮಿಕ, ವ್ಯಾವಹಾರಿಕತತ್ವಗಳು ಕಣ್ಣಮುಂದೆ ಕಟ್ಟುವಂತೆಯೂ "ಭಾಗವತಾಮೃತ" ವೆಂಬ ಹೆಸರಿಟ್ಟು ಈಗ ಆರು ತಿಂಗಳಹಿಂದೆ ನಾನು ಪ್ರಸಿದ್ಧಮಾಡಿರುವೆನು; ಅದರಂತೆಯೇ ಶೈವರಿಗಾಗಿ "ಭಾಗವತಾಮೃತ" ದಷ್ಟೇ ವಿಸ್ತಾರವಾದ "ಶೈವಸುಧಾರ್ಣವ" ವೆಂಬ ಈ ಪುಸ್ತಕವನ್ನು ಬಹು ಶ್ರಮಬಟ್ಟು ಸತ್ಪರಿಣಾಮವಾಗುವಂತೆ ಬರೆದು ಮುದ್ರಿಸಿ ಸಿದ್ಧಪಡಿಸಿರುತ್ತೇನೆ- ಈ ಗ್ರಂಥಕ್ಕೆ ಲಿಂಗಪುರಾಣ, ಶಿವಪುರಾಣ, ಸ್ಕಂದಪುರಾಣ, ಮಹಾಭಾರತ, ಭಾಗವತ, ವೀರಶೈವ ಗ್ರಂಥಗಳು ಮೂಲಾಧಾರವಾಗಿರುವವು. ಸಮಾಜದ ತಪ್ಪುತಿಳುವಳಿಕೆಗೆ ಕಾರಣವಾದ "ವ್ಯಾಸನತೋಳು" "ಶರಭಾವತಾರ" ಗಳಂಥ ಹಲವು ಸಂಗತಿಗಳ ರಹಸ್ಯ ಸ್ಫೋಟವನ್ನು ಮಾಡಿ ಸಮಾಜದಲ್ಲಿ ವಿತುಷ್ಟತೆಯು ಇಲ್ಲದಂತಾಗಬೇಕೆಂದು ಯಥಾಮತಿ ಮನಃಪೂರ್ವಕವಾಗಿ ಯತ್ನಿಸಿರುತ್ತೇನೆ. ಈ ಪುಸ್ತಕದಲ್ಲಿ ಸಂಗ್ರಹಿಸಿರುವ ವಿಷಯಗಳನ್ನು ಆಯಾ ಪುರಾಣಗಳೊಳಗಿಂದ ಆರಿಸಿಕೊಳ್ಳಲಿಕ್ಕೆ ಶ್ರಮವಾಗಿರುವದಂತು ಸರಿಯೆ; ಆದರೆ ಆ ವಿಷಯಗಳ ರಹಸ್ಯವನ್ನು ಬರೆಯಲಿಕ್ಕೆ ಅದಕ್ಕೂ ಹೆಚ್ಚು ಶ್ರಮವಾಗಿರುವದೆಂದು ವಿನಯದಿಂದ ತಿಳಿಸುವೆನು. ಒಟ್ಟಿಗೆ, ನಾನು ಈ ಮೊದಲೆ ಬರೆದಿರುವ "ಭಾಗವತಾಮೃತ" ವನ್ನು ವೈಷ್ಣವರೂ ಶೈವರೂ ಕೂಡಿಯೇ ಅಗತ್ಯವಾಗಿ ಓದಬೇಕೆಂದು ಹೇಳುವಂತೆ, ಈ "ಶೈವಸುಧಾರ್ಣವ" ವನ್ನು ಶೈವರೂ ವೈಷ್ಣವರೂ ಕೂಡಿಯೇ ಅಗತ್ಯವಾಗಿ ಓದಬೇಕೆಂದು ಹೇಳುವೆನು; ಯಾಕಂದರೆ ನಾನು ಕೈಕೊಂಡಿರುವ ಪುರಾಣಪ್ರಸಿದ್ಧೀಕರಣ ಪದ್ಧತಿಯು, ಹಾಗು ರಹಸ್ಯ ವಿವೇಚನಪದ್ಧತಿಯ ಗುಣದೋಷಗಳ ವಿಚಾರವು ಸರ್ವತ್ರ ಆಗಿ, ನಾನು ಇನ್ನು ಬೇಗನೆ ಬರೆಯಬೇಕಾಗಿರುವ "ಭಾರತಾಮೃತ" ಹಾಗು "ರಾಮಾಯಣಾಮೃತ" ವೆಂಬ ಅತಿ ಮಹತ್ವದ ಉಚ್ಚಪ್ರತಿಯ ದೊಡ್ಡ ಗ್ರಂಥಗಳ ರಚನೆಗೆ ನನಗೆ ಬಹುಮಟ್ಟಿಗೆ ಸಹಾಯವಾಗುವದಲ್ಲದೆ, ಪುರಾಣಶ್ರವಣದ ವಿಷಯದ ವಿವೇಕವು ಜನರಲ್ಲಿ ಹೆಚ್ಚಲಿಕ್ಕೆ ಬಹುಮಟ್ಟಿಗೆ ಸಹಾಯವಾದೀತೆಂದು ನನಗೆ ತೋರುತ್ತದೆ.

(೫) ಹೀಗೆ ಹಲವು ಪುರಾಣಗಳ ಅವಲೋಕನಮಾಡಿ "ಶೈವಸುಧಾರ್ಣವ"ವನ್ನು ಬರೆದನಾನು, ಪುರಾಣಗಳನ್ನು ಯಾವದೃಷ್ಟಿಯಿಂದ ಅವಲೋಕಿಸಿರುವೆನೆಂಬದರ ದಿಗ್ದರ್ಶನ ಮಾಡುವೆನು. ಶ್ರೀವೇದವ್ಯಾಸರು ಹದಿನೆಂಟು ಪುರಾಣಗಳನ್ನು ರಚಿಸಿದ್ದು ಲೋಕೋದ್ಧಾರಕ್ಕಾಗಿಯೆಂದು ನಾನು ತಿಳಿದಿರುವೆನಲ್ಲದೆ, "ಭಿನ್ನರುಚಿರ್ಹಿಲೋಕಃ" ಎಂಬಂತೆ ಲೋಕವು ಭಿನ್ನ ರುಚಿಯುಳ್ಳದ್ದಾದ್ದರಿಂದ ಆ ಭಿನ್ನರುಚಿಗೆ ತಕ್ಕಂತೆ ಒಬ್ಬ ಪರಮಾತ್ಮ

ನನ್ನೇ ಹಲವು ನಾಮ-ರೂಪ-ಕ್ರಿಯೆಗಳಿಂದ ಹಲವು ದೇವತೆಗಳಾಗಿ ಅವರು ವರ್ಣಿ...
ವರೆಂದು ನಾನು ತಿಳಿದಿರುತ್ತೇನೆ. ಹೀಗೆ ಪುರಾಣೋಕ್ತ ದೇವತೆಗಳು ನಾಮ-ರೂಪ-ಕ್ರಿಯೆ ಗಳಿಂದ ಭಿನ್ನವಾಗಿದ್ದರೂ ದೇವತ್ವದಿಂದ ಆ ದೇವತೆಗಳು ತತ್ವತಃ ಅಭಿನ್ನವಾಗಿರುತ್ತವೆಂದು ನಾನು ತಿಳಿದಿರುವೆನು. ಮದುವೆಯ ಮದಿಮುಗನು ದೇವಸ್ವರೂಪವೆಂದು ತಿಳಿದು ಆತನಿಗೆ ಸರ್ವರೂ ಶ್ರೇಷ್ಠತ್ವಕೊಟ್ಟುಮನ್ನಿಸಿನಡಕೊಳ್ಳುವಂತೆ, ಭಕ್ತರನು ಉದ್ಧರಿಸಲುಯಾವದೊಂದುಪುರಾಣದಲ್ಲಿ ಅಗ್ರಗಣ್ಯವಾಗಿನಿಂತದೇವತೆಗೆ ಉಳಿದದೇವತೆಗಳು ಅಗ್ರಸ್ಥಾನವನ್ನು ಕೊಟ್ಟು ಮನ್ನಿಸಿ ತಾವೆಲ್ಲರೂ ಆದೇವತೆಯ ಅನುವರ್ತಿಗಳಾಗಿ ನಡೆದುಕೊಂಡಿರುವರು. "ಯೇಯಥಾ ಮಾಂಪ್ರಪದ್ಯಂತೇ ತಾಂಸ್ತಥೈವ ಭಜಾಮ್ಯಹಂ" ಎಂಬ ಭಗವದುಕ್ತಿಯಂತೆ ಭಜಕರಭಾವನೆಗನುಸರಿಸಿ ದೇವರುಭಜಕರಿಗಾಗಿಇರುವನು. ಹೀಗೆಹಲವುದೇವತೆಗಳ ಔಪಾಸನೆಗೆ ಆಸ್ಪದಕೊಡುವದೊಂದು ವೈದಿಕಧರ್ಮದ ಉದಾತ್ತವಾದ ವಿಶೇಷಲಕ್ಷಣವಾಗಿರುವದು. ಭಕ್ತಿ-ಜ್ಞಾನ-ವೈರಾಗ್ಯಯುಕ್ತರಾಗಿ ಯಾರು ಯಾವ ದೇವತೆಯನ್ನು ಭಜಿಸಿದರೂ ಅವರಿಗೆ ಸದ್ಗತಿಯು ಉಂಟಾಗುತ್ತದೆಂಬದು ಪುರಾಣದ ಮಥಿತಾರ್ಥವಾಗಿರುವದು; ಆದ್ದರಿಂದಲೇ"ವ್ರತಾನಾಂ ಉತ್ತಮಂ ವ್ರತಂ"ಎಂಬಂತೆ, ಯಾವದೊಂದುಪುರಾಣವು ಉಳಿದಎಲ್ಲ ಪುರಾಣಗಳಲ್ಲಿ, ಹಾಗು ಆ ಪುರಾಣೋಕ್ತದೇವತೆಯು ಉಳಿದ ಎಲ್ಲದೇವತೆಗಳಲ್ಲಿಶ್ರೇಷ್ಠವೆಂದು ವರ್ಣಿಸಲಾಗಿರುವದು. ಪುರಾಣಗಳು ಯಾವ ದೇವತಾಕಗಳಾಗಿದ್ದರೂ ಎಲ್ಲ ಪುರಾಣಗಳು ಭಕ್ತರಲ್ಲಿ ಭಕ್ತಿ-ಜ್ಞಾನ-ವೈರಾಗ್ಯಗಳನ್ನು ಹೆಚ್ಚಿಸುವದಕ್ಕಾಗಿಯೇ ಇರುತ್ತವೆ. ಆಯಾ ದೇವತೆಗಳಲ್ಲಿ ಉಪಾಸಕರ ಚಿತ್ತವು ದೃಢವಾಗುವದಕ್ಕಾಗಿ ಆಯಾ ದೇವತೆಗಳಸರ್ವೋತ್ತಮತ್ವಸ್ಥಾಪಕ ಚರಿತ್ರಗಳೇ ಆಯಾ ಪುರಾಣಗಳಲ್ಲಿ ಹೇಳಲ್ಪಡುವವು. ಶೈವಪುರಾಣಗಳಲ್ಲಿ ಶಿವನೂ, ವೈಷ್ಣವಪುರಾಣಗಳಲ್ಲಿ ವಿಷ್ಣುವೂ, ಅದರಂತೆ ಬೇರೆ ಬೇರೆ ಪುರಾಣಗಳಲ್ಲಿ ಬೇರೆಬೇರೆ ದೇವತೆಗಳೂ, ಅಗ್ರಗಣ್ಯತ್ವೇನ ವರ್ಣಿಸಲ್ಪಟ್ಟದ್ದು, ಆಯಾದೇವತೆಗಳಭಕ್ತರಆತ್ಯಂತಿಕಭಕ್ತಿಯು ತಮ್ಮ ದೈವತದಲ್ಲಿ ಕೂಡುವದಕ್ಕಾಗಿಯಲ್ಲದೆ, ಅನ್ಯದೇವತೆಗಳನ್ನು ಹಳಿಯುವದಕ್ಕಾಗಿ, ಅಥವಾಅನ್ಯದೇವತೋಪಾಸಕರೊಡನೆ ದ್ವೇಷಬಳಿಸುವದಕ್ಕಾಗಿಯಲ್ಲ. ಮನೆಯ ಯಜಮಾನನು ಮನೆಯಜನರಲ್ಲೆಲ್ಲಮುಖ್ಯನಾಗಿರುವಂತೆ, ಆಯಾ ದೇವತೆಯು ಪುರಾಣದಲ್ಲಿ ಆಯಾದೇವತೆಯು ಮುಖ್ಯವಾಗಿರುತ್ತದೆ. ಆಯಾ ಮನೆಯ ಜನರು ತಮ್ಮ ಮನೆಯ ಯಜಮಾನನೊಡನೆ ಭಕ್ತಿ-ವಿಶ್ವಾಸಗಳಿಂದ ನಡೆದುಕೊಂಡು ಗೃಹಸೌಖ್ಯವನ್ನು ಹೊಂದುವದು ಮುಖ್ಯೋದ್ದೇಶವಾಗಿರುವಂತೆ, ಆಯಾ ಪುರಾಣೋಕ್ತದೇವತೆಯಲ್ಲಿ ಆಯಾ ದೇವತೆಯ ಭಕ್ತರು ಭಕ್ತಿ-ವಿಶ್ವಾಸವಿಟ್ಟು ನಡೆದುಕೊಂಡು ದೈವೀಪ್ರಸಾದದಿಂದ ಶಾಶ್ವತಸುಖವನ್ನು ಪಡೆಯುವದು ಮುಖ್ಯೋದ್ದೇಶವಾಗಿರುತ್ತದೆ; ಆದ್ದರಿಂದ ಶೈವರು ವಿಷ್ಣುವಿನಿಗಿಂತ ಶಿವನೇ ಹೆಚ್ಚೆಂದು ವಾದಿಸಿ ವಿಷ್ಣುವಿನೊಡನೆಯೂ, ವೈಷ್ಣವರೊಡನೆಯೂ ದ್ವೇಷಬಳಿಸುವದೂ, ಅದರಂತೆ ವೈಷ್ಣವರು ಶಿವನಿಗಿಂತ ವಿಷ್ಣುವೇ ಶ್ರೇಷ್ಠನೆಂದು ವಾದಿಸಿ ಶಿವನೊಡನೆಯೂ, ಶೈವರೊಡನೆಯೂ ದ್ವೇಷಬಳಿಸುವದೂ ಆಧ್ಯಾತ್ಮಿಕದೃಷ್ಟಿಯಿಂದಂತು ಇರಲಿ, ಲೌಕಿಕದೃಷ್ಟಿಯಿಂದಲೂ ಹಾನಿಕಾರಕವಾಗಿರುವದರಿಂದ ಹಾಗೆಮಾಡುವದು ದುರಭಿಮಾನದ್ಯೋತಕ

ವೆಂಬುದನ್ನರಿಯಬೇಕಾಗುವದು. ಒಟ್ಟಿಗೆ, ಯಾವಸಂಗತಿಯೇ ಇರಲಿ, ನಮ್ಮದು ನಮಗೆ ಶ್ರೇಷ್ಠ, ಅವರದು ಅವರಿಗೆ ಶ್ರೇಷ್ಠವಾದೀತಲ್ಲದೆ, ನಮ್ಮದು ಅವರಿಗೆ, ಅವರದು ನಮಗೆ ಎಂದು ಶ್ರೇಷ್ಠವಾಗಲಿಕ್ಕಿಲ್ಲ; ಆದ್ದರಿಂದ ಶೈವರು ವಿಷ್ಣುಪುರಾಣಗಳನ್ನೋದುವಾಗಲೂ, ವೈಷ್ಣವರು ಶಿವಪುರಾಣಗಳನ್ನೋದುವಾಗಲೂ ಪುರಾಣಗಳೊಳಗಿನ ಕಥೆಗಳಿಗೆ ಮಹತ್ವ ಕೊಡದೆ, ಆ ಕಥೆಗಳಿಂದ ಹೊರಡುವ ಫಲಿತಕ್ಕೂ, ಪುರಾಣರಚನೆಯ ಉದ್ದೇಶಕ್ಕೂ ಲಕ್ಷಕೊಟ್ಟರೆ ಎಲ್ಲ ಪುರಾಣಗಳು ಎಲ್ಲರಿಗೆ ಮಾನ್ಯವಾಗುವವು; ಯಾಕಂದರೆ ಎಲ್ಲ ಪುರಾಣಗಳನ್ನು ರಚಿಸಿದ ಶ್ರೀವೇದವ್ಯಾಸರೇ ಸರ್ವಮಾನ್ಯರಾಗಿರುವರು. ವೈಷ್ಣವರು ಶೈವಪುರಾಣಗಳನ್ನು ಓದುವಾಗ ಶಿವನಸ್ಥಳದಲ್ಲಿ ವಿಷ್ಣುವನ್ನು ಕುಳ್ಳಿರಿಸಿದರೆ ತತ್ವದೃಷ್ಟಿಯಿಂದ (ಚರಿತ್ರದೃಷ್ಟಿಯಿಂದಲ್ಲ) ಆ ಶೈವಪುರಾಣಗಳು ವೈಷ್ಣವಪುರಾಣಗಳೇ ಆಗುವವು. ಇದೇ ಮಾತು ಶೈವರಿಗೂ ಹತ್ತುವದು. ಒಟ್ಟಿಗೆ, ಪುರಾಣೋಕ್ತದೇವತೆಗಳೂ, ಅವುಗಳ ಸಂಬಂಧದ ಕಥೆಗಳೂ ಔಪಚಾರಿಕವೆಂದು ತಿಳಿದು, ಕಥೆಗಳಿಂದ ಹೊರಡುವ ತತ್ವಗಳೂ, ದೇವತೆಗಳ ಔಪಾಸನೆಯಿಂದುಂಟಾಗುವ ಭಕ್ತಿ–ಜ್ಞಾನ–ವೈರಾಗ್ಯಗಳೂ ಮುಖ್ಯವೆಂದು ತಿಳಿದರೆ ವಾದಕ್ಕೆ ಹಾದಿಯೇ ಉಳಿಯುವದಿಲ್ಲ.

(೬) ಪುರಾಣೋಕ್ತದೇವತೆಗಳೆಲ್ಲ ದೃಢಭಕ್ತಿಯ ಔಪಾಸನೆಯಿಂದ ಭಕ್ತರಿಗೆ ಇಷ್ಟಾರ್ಥವನ್ನು ಕೊಡುತ್ತವೆಂಬದಕ್ಕೆ, ಎಲ್ಲ ಪುರಾಣಗಳಲ್ಲಿ ದೇವತೆಗಳ ರೂಪತ್ರಯವನ್ನು ವರ್ಣಿಸಿದ್ದೇ ಸಾಕ್ಷಿಯಾಗಿರುವದು. ಯಾವ ಪುರಾಣದಲ್ಲಿಯೇ ಆಗಲಿ, ಆಯಾದೇವತೆಯ ಮೂಲರೂಪ, ಪ್ರೇರಕರೂಪ, ಕಾರ್ಯಕಾರಿರೂಪ ಎಂಬ, ಅಥವಾ ಸಚ್ಚಿದಾನಂದರೂಪ, ಕಾರಣರೂಪ, ಕಾರ್ಯರೂಪ ಎಂಬಮೂರುರೂಪಗಳುಸಾಧಾರಣವಾಗಿ ವರ್ಣಿಸಲ್ಪಟ್ಟಿರುವವೆಂದು ಹೇಳಬಹುದು. ಗುಣವಿವರ್ಜಿತವೂ, ಧ್ರುವವೂ, ಅಕ್ಷಯ್ಯವೂ, ನಿರಾಕಾರವೂ, ನಿತ್ಯವೂ, ಶುದ್ಧವೂ, ಬುದ್ಧವೂ, ವರ್ಣಿಸಲಶಕ್ಯವೂ ಆದದ್ದೇ ಆಯಾದೇವತೆಯ ಮೂಲರೂಪವಾದಪರಬ್ರಹ್ಮವು. ಈ ಪರಬ್ರಹ್ಮವು ಸೃಷ್ಟಿಮಾಡುವ ಇಚ್ಛೆಯಿಂದ ತನ್ನ ತ್ರಿಗುಣಾತ್ಮಕ ಶಕ್ತಿಯನ್ನು (ಮಾಯೆಯನ್ನು) ನೋಡಿದಾಗ, ಅದು ತನ್ನ ತ್ರಿಗುಣಾತ್ಮಕ ಶಕ್ತಿಯನ್ನು ಜಾಗ್ರತಗೊಳಿಸಿಕೊಂಡದ್ದಾಗುವದು. ಈಮಾಯೋಪಾಧಿಕವಾಗಿ ತೋರುವ ರೂಪವೇ ಆಯಾದೇವತೆಯ ಪ್ರೇರಕರೂಪವು. ಈ ಪ್ರೇರಕರೂಪದ ಜಾಗ್ರತವಾದ ಶಕ್ತಿಯು, ಅಂದರೆ ಮಾಯೆಯ ತ್ರಿಗುಣಗಳಾದ ಸತ್ವ–ರಜ–ತಮಗಳಲ್ಲಿ ಒಂದೊಂದು ಗುಣದಿಂದ ಒಂದೊಂದರಂತೆ ಕ್ರಮವಾಗಿ ವಿಷ್ಣು–ಬ್ರಹ್ಮ–ಮಹೇಶ್ವರರೆಂಬ ತ್ರಿಮೂರ್ತಿಗಳು ಆ ಪ್ರೇರಕಪರಮಾತ್ಮನ ಪ್ರೇರಣೆಯಿಂದ ಉತ್ಪನ್ನನಾದರು. ಕ್ರಮವಾಗಿ ಸೃಷ್ಟಿಯ ಸ್ಥಿತಿ–ಸೃಷ್ಟಿ–ಲಯಗಳನ್ನು ಮಾಡುವ ಈ ಮೂರು ದೇವತೆಗಳೇ ಆಯಾಪುರಾಣಪ್ರತಿಷ್ಠಿತ ದೇವತೆಯ ಕಾರ್ಯಕಾರಿರೂಪವು. ಹೀಗೆ ಯಾವದೊಂದುದೇವತೆಯ ಮೂಲ–ಪ್ರೇರಕ–ಕಾರ್ಯಕಾರಿ ಎಂಬ ಮೂರು ರೂಪಗಳಲ್ಲಿ ಪ್ರೇರಕರೂಪಕ್ಕೇ ಪುರಾಣಗಳಲ್ಲಿ ಮಹತ್ವಬಹಳ. ಆ ಪ್ರೇರಕರೂಪಕ್ಕೆ ಶಿವನೆಂದು ಹೆಸರಿಟ್ಟ ಪುರಾಣಗಳೆಲ್ಲ ಶೈವಪುರಾಣಗಳಾಗಿ, ಆ ಷಡ್ಗುಣೈಶ್ವರ್ಯಸಂಪನ್ನನಾದ ಶಾಶ್ವತಭಗವಾನ್ ಸದಾಶಿವನೆಂಬ ಪ್ರೇರಕರೂಪದ ಮಾಯೆಯ ಮೂರು ಗುಣಗಳಿಂದ ಬ್ರಹ್ಮ–

ವಿಷ್ಣು-ಮಹೇಶ್ವರರೆಂಬ ಮೂರು ದೇವತೆಗಳು ಉತ್ಪನ್ನರಾದರೆಂದು ಆ ಪುರಾಣಗಳಲ್ಲಿ ಹೇಳಿರುವದು. ಅದರಂತೆ ಆದೇ ಪ್ರೇರಕರೂಪಕ್ಕೆ ವಿಷ್ಣುವೆಂದು ಹೆಸರಿಟ್ಟ ಪುರಾಣಗಳೆಲ್ಲ ವೈಷ್ಣವಪುರಾಣಗಳಾಗಿ, ಆ ಷಡ್ಗುಣೈಶ್ವರ್ಯಸಂಪನ್ನನಾದ ಶಾಶ್ವತಭಗವಾನ್ ವಿಷ್ಣುವಿನ ಶಕ್ತಿಯು, ಅಂದರೆ ಮಾಯೆಯು ಮೂರು ಗುಣಗಳಿಂದ ಬ್ರಹ್ಮ-ವಿಷ್ಣು-ಮಹೇಶ್ವರರೆಂಬ ಮೂರು ಮೂರ್ತಿಗಳು ಉತ್ಪನ್ನರಾಗಿರುವರೆಂದು ಆ ಪುರಾಣಗಳಲ್ಲಿ ಹೇಳಿರುವದು. ಇದರಂತೆ ದೇವರ ಈ ಪ್ರೇರಕರೂಪಕ್ಕೆ ಉಳಿದ ಆಯಾದೇವತೆಗಳ ಉಪಾಸಕರಾದ ಸೌರರು. ಗಾಣಪಾತ್ಯರು ಮೊದಲಾದವರು ತಮ್ಮ ಉಪಾಸ್ಯದೇವತೆಯ ಹೆಸರುಕೊಟ್ಟು, ತಮ್ಮ ಆ ದೇವತೆಯ ತ್ರಿಗುಣಾತ್ಮಕಮಾಯೆಯಿಂದ ತ್ರಿಮೂರ್ತಿಗಳೆಂಬ ಕಾರ್ಯಕಾರಿರೂಪಗಳು ಉತ್ಪನ್ನವಾದವೆಂದು ವರ್ಣಿಸಿರುವರು. ಅಂದಬಳಿಕ ನಮ್ಮ ದೇವರು ಹೆಚ್ಚು, ನಿಮ್ಮ ದೇವರು ಕಡಿಮೆ ಎಂದು ಬಡಿದಾಡುವದು ಹುಚ್ಚುತನವಲ್ಲವೆ? ಭಗವಾನ್ ವೇದವ್ಯಾಸರೇ ಈ ಪದ್ಧತಿಯಿಂದ, ಅಂದರೆ ದೇವರ ಮೂಲರೂಪ, ಪ್ರೇರಕರೂಪ, ಕಾರ್ಯಕಾರಿರೂಪ ಎಂಬ ಅಥವಾ, ಸಚ್ಚಿದಾನಂದರೂಪ, ಕಾರಣರೂಪ, ಕಾರ್ಯರೂಪ ಎಂಬ ಮೂರುಬಗೆ ದೇವರನ್ನು ವರ್ಣಿಸಿರಲು, ಅವರಲೋಕಕಲ್ಯಾಣದ ಉದ್ದೇಶವರಿಯದೆ ಎಲ್ಲ ಪುರಾಣಗಳಲ್ಲಿ ಅಭಿಮಾನದಿಂದ ಒಬ್ಬರಿಗೊಬ್ಬರು ಬಡಿದಾಡಿದರೆ ನಿರರ್ಥಕತಾಪವಲ್ಲದೆ ಆಗುವ ಬೇರೆಪ್ರಯೋಜನವೇನು?

(೭) ಮೇಲಿನ ೫ನೆಯ ೬ನೆಯ ಕಲಮುಗಳ ವಿಚಾರದಂತೆ ನಾನು ಬರೆದಿರುವ ಈ "ಶೈವಸುಧಾರ್ಣವ" ದಲ್ಲಿ ಮೂರು ಭಾಗಗಳಿದ್ದು, "ಶಿವಚರಿತ್ರಸಂಗ್ರಹ" ವೆಂಬ ಒಂದನೆಯ ಭಾಗದಲ್ಲಿ ಮನೋಹರ ಶಿವಚರಿತ್ರಗಳನ್ನು ಬೋಧಿಸುವ ಹನ್ನೊಂದು ಸುಧಾತರಂಗಗಳನ್ನೂ, "ಜ್ಞಾನಪ್ರದೀಪ" ವೆಂಬ ಎರಡನೆಯ ಭಾಗದಲ್ಲಿ ಜ್ಞಾನದಾಯಕ ವಿಷಯಗಳನ್ನು ಬೋಧಿಸುವ ಹನ್ನೊಂದು ಜ್ಞಾನಪ್ರದೀಪಕಿರಣಗಳನ್ನೂ, ಕಟ್ಟಕಡೆಗೆ "ಶಿವಸ್ತುತಿಗಳು" ಎಂಬ ಮೂರನೆಯ ಭಾಗದಲ್ಲಿ ಹನ್ನೊಂದು ಶಿವಸ್ತುತಿಗಳನ್ನೂ ಹೀಗೆ ಒಟ್ಟಿಗೆ ಮೂವತ್ತುಮೂರು ವಿಷಯಗಳ ನಿರೂಪಣ ಮಾಡಿರುತ್ತದೆ. ಶೈವಸುಧಾರ್ಣವದ ಒಂದನೆಯ ಭಾಗದೊಳಗಿನ ಕಲ್ಯಾಣಕಾರಕಗಳಾದ ಶಿವಚರಿತ್ರಗಳ ಶ್ರವಣದಿಂದ ಭಗವಾನ್ ಸದಾಶಿವನಲ್ಲಿ ಭಕ್ತಿಯು ಹೆಚ್ಚುವದು; ಮುಂದೆ ಎರಡನೆಯ ಭಾಗದೊಳಗಿನ "ಜ್ಞಾನಪ್ರದೀಪ" ದ ಕಿರಣಗಳಿಂದ ಶಿವಸ್ವರೂಪವನ್ನರಿಯಲಿಕ್ಕೆ ಸಹಾಯವಾಗುವದು; ಶ್ರೀ ಸದ್ಗುರು ಕೃಪೆಯಿಂದ ಶಿವಸ್ವರೂಪವನ್ನರಿತು ಶಾಂತರಾದ ಪುಣ್ಯವಂತರಿಗೂ, ಶಿವನ ಒಲುಮೆಯನ್ನು ಸಂಪಾದಿಸಲು ಆತುರಪಡುವ ಮುಮುಕ್ಷುಗಳಿಗೂ ಶಿವನ ಹೊರತು ಅನ್ಯವಿಷಯಗಳು ತುಚ್ಛವಾಗಿ ತೋರುವದರಿಂದ ಅವರ ನಿತ್ಯವ್ಯವಸಾಯಕ್ಕಾಗಿ ಮೂರನೆಯ ಭಾಗದ ಶಿವಸ್ತುತಿಗಳು ಅತ್ಯಂತ ಪ್ರಿಯವಾಗಿರುವವು. ಅವನ್ನು ನಿತ್ಯದಲ್ಲಿ ಪಠಿಸುವವರಿಗೆ ನಿಶ್ಚಯವಾಗಿ ಶಿವಪ್ರಸಾದವುಂಟಾಗುವದು. ಒಟ್ಟಿಗೆ ಒಂದನೆಯಭಾಗದ ಹನ್ನೊಂದು ಸುಧಾತರಂಗಗಳ ಸೇವನದಿಂದ ಸಂತುಷ್ಟನಾದ ಮುಮುಕ್ಷುವು, ಎರಡನೆಯ ಭಾಗದ ಜ್ಞಾನಪ್ರದೀಪದ ಹನ್ನೊಂದು ಕಿರಣಗಳಿಂದ ಪ್ರಬುದ್ಧನಾಗಿ ಭಗವದ್ದರ್ಶನ ಪಡೆ

ಯೆಲು ಪಾತ್ರನಾಗುವನು. ಆ ಮೇಲೆ ಆತನಿಗೆ ಭಗವಂತನ ಸ್ತೋತ್ರದ ಹೊರತು ಅನ್ಯ ವಿಷಯುಗಳು ರುಚಿಸದ್ದರಿಂದ ಆತನು ಮೂರನೆಯು ಭಾಗದಲ್ಲಿ ಕೊಟ್ಟಿರುವಂಥ ಶಿವಸ್ತುತಿ ಗಳಲ್ಲಿ ಮಗ್ನನಾಗತಕ್ಕದ್ದು. ಶೈವರು ಯಾವಪ್ರಭೇದಕ್ಕೆ ಒಳಪಟ್ಟವರೇ ಇರಲಿ, ಅಥವಾ ಯಾವ ಜಾತಿಯವರೇ ಇರಲಿ ಈ "ಶೈವಸುಧಾರ್ಣವ" ವು ಅವರಿಗೆಲ್ಲ ನಿಶ್ಚಯುವಾಗಿ ಸೇವ್ಯವಾಗಿರುವದೆಂಬದನ್ನು ಕಂಡುಕೊಳ್ಳಬಹುದು.

(೮) ಈ ಗ್ರಂಥದಲ್ಲಿಯು ಲಿಂಗೋದ್ಭವಲೀಲೆಯೊಳಗಿನ ಹನ್ನೆರಡು ಜ್ಯೋತಿ ರ್ಲಿಂಗಗಳ ಉತ್ಪತ್ತಿಯು ಕಾರಣಗಳೂ, ತತ್ಸಂಬಂಧೀಯು ವರ್ಣನಗಳೂ ವಾಚಕರಿಗೆ ಕೇವಲ ಹೊಸವೂ, ಬೋಧಪ್ರದವೂ ಆಗಿರುವವು. ಬಹುಜನರಿಗೆ ಹನ್ನೆರಡು ಜ್ಯೋತಿ ರ್ಲಿಂಗಗಳಾವವೆಂಬದೇ ಗೊತ್ತಿಲ್ಲದಿರುವಾಗ, ಅವುಗಳ ವಿಸ್ತೃತವೃತ್ತಾಂತವು ಹ್ಯಾಗೆ ಗೊತ್ತಿರಬೇಕು? ಆ ಹನ್ನೆರಡು ಜ್ಯೋತಿರ್ಲಿಂಗಗಳ ಸುಂದರ ಚರಿತ್ರಗಳನ್ನು ನಮ್ಮ ಪೂಜ್ಯ ಮಲ್ಲಾರಿದೀಕ್ಷಿತ ಚಿಂತಾಮಣಿದೀಕ್ಷಿತ ಕಕ್ಕನವರ ಗುರ್ಲಹೊಸೂರ ಇವರು ಬಹು ಶ್ರಮಬಟ್ಟು ಬರೆದುಕೊಟ್ಟದ್ದಕ್ಕಾಗಿ ನಾನು ಅತ್ಯಂತ ಕೃತಜ್ಞನಾಗಿರುವೆನು. ಅವರ ಬರಹದ ಶೈಲಿಯನ್ನೂ, ವಿಷಯು ಸಂಗ್ರಹದ ಕೌಶಲ್ಯವನ್ನೂ ನೋಡಿ ನನಗೆ ಬಹಳ ಸಂತೋಷವಾಯಿತು. ಅವರು ಒಂದೆರಡುವರ್ಷ ಹೀಗೆಯೇ ಲೇಖನವ್ಯವಸಾಯು ವನ್ನು ವಿದ್ಯಾವ್ಯಾಸಂಗಪೂರ್ವಕವಾಗಿ ಗ್ರಂಥಾವಲೋಕನದೊಡನೆ ಆಸಕ್ತಿಯಿಂದ ಸಾಗಿಸಿದರೆ, ಮಾರ್ಮಿಕಲೇಖಕರಾಗಲು ಸಂಶಯುವಿಲ್ಲ. ಲೇಖನಕತಿಯು ಇವರ ಹುಟ್ಟಗುಣವಿದ್ದಹಾಗೆ ತೋರುತ್ತದೆ; ಇದಲ್ಲದೆ ಚಿತ್ರಕಲೆಯು ಇವರ ಪ್ರೀತಿಯ ವಿಷಯುವಾಗಿದೆ. ಲೇಖಕನಿಗೆ ಈಕಲೆಯು ಜೋಡಾಗಿರುವದರಲ್ಲಿ ಬಹು ಸ್ವಾರಸ್ಯ ಉಂಟು; ಯಾಕಂದರೆ ಲೇಖಕರಂತೆ ಚಿತ್ರಕಾರರೂ ಭಾವಪ್ರದರ್ಶಕರೇ ಇರುವರು. ಆದರೆ ಆಯೋಗವಿರುವದು ಮಾತ್ರ ಅಪರೂಪವು. "ಭಾಗವತಾಮೃತ"ದೊಳಗಿನ, ಹಾಗು ಈ "ಶೈವಸುಧಾರ್ಣವ"ದೊಳಗಿನ ಚಿತ್ರಗಳನ್ನು ಇವರೇ ತೆಗೆದಿರುವರು- ಇನ್ನು, ಲೇಖಕರು ಬರಿಯು ವಿದ್ವಾಂಸರೂ, ಬಹುಶ್ರುತರೂ, ಉತ್ತಮವಾದ ಬರಹದ ಸರಣಿಯುಳ್ಳವರೂ, ಚಿತ್ರಕಲೆಯಂಥ ಅಪರೂಪದ ಕಲೆಯ ಅನುಕೂಲತೆಯಿದ್ದವರೂ ಇದ್ದರೆ ತೀರ ಲಿಲ್ಲ- ಲೇಖಗಳಲ್ಲಿ ಪ್ರಸಾದವೂ, ಓಜಸ್ವಿತೆಯೂ, ಚಿತ್ತಗ್ರಾಹಕತೆಯೂ, ಪರಿಣಾಮ ಕಾರಕತೆಯೂ ಉಂಟಾಗಬೇಕಾದರೆ ನಮ್ಮ ದೀಕ್ಷಿತರಂತೆ ಸದ್ಗುಣ—ಸದಾಚಾರಪೂರ್ವಕವಾದ ಈಶ್ವರೋಪಾಸನಾರೂಪ ಸಾತ್ವಿಕತಪಶ್ಚರ್ಯವು ಲೇಖಕರಿಗೆ ಘಟಿಸುತ್ತಿರಬೇಕಾಗುವದು. ಈ ತಪೋರೂಪಸಾಧನ ಸಾಮಗ್ರಿಯು ಈಗಿನ ಸ್ವಾರ್ಥಪರಾಯಣತೆಯು ಅಧಾರ್ಮಿಕಕಾಲದಲ್ಲಿದುರ್ಲಭವಾದದ್ದರಿಂದ, ಕೇವಲ ಲೌಕಿಕ ಭಾವನೆಯಿಂದ ಬರೆದ ಲೇಖಗಳು ದುಡ್ಡು ಕೂಡಿಸುವವಟ್ಟಿಗೆ, ಬಹಳವಾದರೆ ವಾಚಕರ ಮನೋರಂಜನ—ಮನೋವಿಕಾರಗಳ ಜಾಗತಿಮಾಡುವವಮಟ್ಟಿಗೆ ಮಾತ್ರ ಉಪಯೋಗಿಸುವವು; ಆದರೆ ಮನೋರಂಜನ—ಮನೋವಿಕಾರಗಳ ಜಾಗ್ರತಿಗಳೊಡನೆ ಮನಸ್ಸನ್ನು ಜಗ್ಗಿಕೊಂಡು ತಮ್ಮ ಸತ್ವ ಬಲದಿಂದ ಆ ಮನಸ್ಸನ್ನು ಒಳ್ಳೆಯಹಾದಿಗೆ ಹಚ್ಚುವ ಲೇಖಗಳೇ ಲೇಖಗಳು; ಅಂಥ

ಗೌರವದ ಲೇಖಗಳನ್ನು ಬರೆಯುವ ಲೇಖಕರೇ ಲೇಖಕರು! ಈ ಮಾತನ್ನು ನನ್ನಿಂದ ಮೊದಲಾಗಿ ಎಲ್ಲ ಲೇಖಕರು ನೆನಪಿನಲ್ಲಿಟ್ಟರೆ, ಬಹಳಹಿತವಾಗುವದು.

( ೯ ) ಶಿವಭಕ್ತರಿಗೆ ಪರಮಾನಂದವನ್ನೀಯುವ "ಶೈವಸುಧಾರ್ಣವ" ವೆಂಬ ಈ ಸದ್ಗ್ರಂಥದಲ್ಲಿ ಭಾವಿಕರು ಓದಿ ನಲಿದು ತಲೆದೂಗುವ ವಿಷಯಗಳು ಹಲವು ಇರುವವು. ಒಂದನೆಯ ಸುಧಾತರಂಗದಲ್ಲಿಯ ಶಿವಭಕ್ತರ ಸತ್ವಸಾರವು ಮನಸ್ಸನ್ನು ದಂಗುಬಡಿಸುವದು. ಎರಡನೆಯ ಸುಧಾತರಂಗದ ದಕ್ಷಯಜ್ಞಧ್ವಂಸದಲ್ಲಿಯ ಭಗವತೀ ದಾಕ್ಷಾಯಣಿಯ ದಿವ್ಯಭಾಷಣವನ್ನೋದಿ ವಾಚಕರು ರೋಮಾಂಚಿತರಾಗದೆ ಇರರು. ಅದರಂತೆ ಗಿರಿಜಾಕಲ್ಯಾಣದ ಸ್ವಾರಸ್ಯ, ಅವತಾರಹರ-ಲೀಲೆಯೊಳಗಿನ ಪ್ರಹ್ಲಾದನ ಭಗವದ್ಭಕ್ತಿ, ಬಲಿಚಕ್ರವರ್ತಿಯ ಗಂಭೀರಭಾಷಣ, ಶಬರಶಂಕರಲೀಲೆಯೊಳಗಿನ ದ್ರೌಪದಿ-ಭೀಮ-ಧರ್ಮರ ನೈತಿಕ ಭಾಷಣ, ಅದರಂತೆ ಪ್ರತಿಒಂದು ಲೀಲೆಯಲ್ಲಿ ಕಂಡುಬರುವ ಭಗವಾನ್ ಶಂಕರನ ಭಕ್ತವಾತ್ಸಲ್ಯ-ಕರುಣಾಶಾಲಿತ್ವ-ಸರ್ವೋತ್ತಮತ್ವಾದಿಗಳು, ನಾಲ್ಕನೆಯ ಸುಧಾತರಂಗದಿಂದ ಮುಂದಿನವೆಲ್ಲ ಸುಧಾತರಂಗಗಳ ಕಡೆಯಲ್ಲಿ ಮಾಡಿರುವ ರಹಸ್ಯಸ್ಪಷ್ಟೀಕರಣ, ಜ್ಯೋತಿರ್ಲಿಂಗಗಳ ನೈತಿಕ ಮನೋಹರ ವರ್ಣನ, ಜ್ಞಾನಪ್ರದೀಪದ ಪ್ರತಿಒಂದು ಕಿರಣದ ಸುಪರಿಣಾಮಕಾರಕ ಅಚ್ಚುಕಟ್ಟಿನ ವಿವೇಚನ, ಮನೋಹರವಾದ ಶುದ್ಧಭಾಷೆಯ ಅಪರೂಪದ ಸಂಸ್ಕೃತ ಶಿವಸ್ತುತಿಗಳು ಹೀಗೆ ಒಂದಲ್ಲ ಎರಡಲ್ಲ ಹಲವು ಕಲ್ಯಾಣಕಾರಕ ಮನೋಹರ ಸಂಗತಿಗಳು ಅವಲೋಕನಾರ್ಹವಾಗಿ ಇರುವವು. ಒಟ್ಟಿಗೆ ಎಲ್ಲರೂ ಈ ಪುಸ್ತಕವನ್ನು ದಯಮಾಡಿ ಸಂಪೂರ್ಣವಾಗಿ ಓದಿ ಶಿವಪ್ರಸಾದವನ್ನು ಪಡೆಯಬೇಕೆಂದು ಪ್ರಾರ್ಥಿಸುವೆನು; ಯಾಕಂದರೆ ಭಗವಾನ್ ಸದಾಶಿವನ ಪ್ರೇರಣೆಯಿಂದ ಸಂಗ್ರಹೀತವಾಗಿರುವ ಈ ದಿವ್ಯಪುಸ್ತಕವು ನಿಶ್ಚಯವಾಗಿ ಶಿವಭಕ್ತರ ತರಣೋಪಾಯವಾಗಿರುವದಲ್ಲದೆ, ವಾಚಕರ ವಿವೇಕವನ್ನು ಹೆಚ್ಚಿಸಲಿಕ್ಕೆ ಶ್ರೇಷ್ಠಸಾಧನವಾಗಿರುವದು. ಬುದ್ಧಿಪೂರ್ವಕವಾಗಿ ನಾವು ವಾಚಕರಿಗೆ ಇನ್ನೊಮ್ಮೆ ಹೇಳುವದೇನಂದರೆ, ಅವರು ನಾಲ್ಕನೆಯ ಸುಧಾತರಂಗದಿಂದ ಬಹುತರ ಪ್ರತಿಒಂದು ಸುಧಾತರಂಗದ ಕಡೆಯಲ್ಲಿ ಕೊಟ್ಟಿರುವ ರಹಸ್ಯಸ್ಪಷ್ಟೀಕರಣವನ್ನು ಓದಿಯೇತೀರಬೇಕು. ಒಂದು ಬಗೆಯಿಂದ ಆ ರಹಸ್ಯಲೇಖನದ ಉದ್ದೇಶದಿಂದಲೇ ಈ ಶೈವಸುಧಾರ್ಣವವು ಬರೆಯಲ್ಪಟ್ಟಿರುವದೆಂದು ಹೇಳಬಹುದು.

(೧೦) ಒಟ್ಟಿಗೆ, ಪರಮಮಂಗಲಕರವೂ, ಇಷ್ಟಾರ್ಥದಾಯಕವೂ ಆದ "ಶೈವಸುಧಾರ್ಣವ" ದಂಥ ಬಹುದೊಡ್ಡ ಶೈವೀ ಗ್ರಂಥವು ಭಗವಾನ್ ಶ್ರೀ ಸದಾಶಿವನ ಕೃಪೆಯಿಂದ ನಿರ್ವಿಘ್ನವಾಗಿ ಮುಗಿದದ್ದಕ್ಕಾಗಿ ನಮಗೆ ಪರಮಾನಂದವಾಗಿದೆ. ಈ ಸದ್ಗ್ರಂಥವನ್ನು ಮುದ್ರಿಸುವ ವಿಷಯದಲ್ಲಿ ನಮ್ಮ ಚಿಕ್ಕವಯಸ್ಸಿನ ಚಿರಂಜೀವರಾದ ತ್ರಿವಿಕ್ರಮ ಕಾಳೋ ಕುಲಕರಣಿ, ಕೃಷ್ಣಾಜಿ ಹರಿ ಕುಲಕರಣಿ, ಶಂಕರ ಮಲ್ಹಾರಿ ಜೋಸಿ, ಕೃಷ್ಣಮೂರ್ತಿ ವಲ್ಲಭ ತಟ್ಟಿ, ಗುರುರಾಜ ಕಾಳೋ ಕುಲಕರಣಿ, ಚಿ। ಸೌ। ಕಾವೇರಕ್ಕ ಇವರೂ, ಕೆಲಸಮಾಡಿ ನುರಿತು ಪ್ರಬುದ್ಧರಾದ ಚಿ|| ಶಿವರಾಮ ಕೋಟೇಶ್ವರ

ಕುಲಕರಣಿ, ಚಿಕ್ಕೋಡಿ ಮಲ್ಹಾರಿ ಜೋಸಿ ಮೊದಲಾದವರೂ ನಡುವೆ ಒಂದು ದಿನ ವಿರಾಮ್ಯವನ್ನು ಸಹ ಹೊಂದದೆ ಮನಃಪೂರ್ವಕ ಒಂದೇಸವನೆ ಕೆಲಸಮಾಡಿದ್ದಕ್ಕಾಗಿ ತುಂಬಾ ಸಂತೋಷಪಟ್ಟು ಮನಃಪೂರ್ವಕ ಅವರ ಕಲ್ಯಾಣವನ್ನು ಚಿಂತಿಸುವೆನು. ಅದರಂತೆ ಯಥಾಸ್ಥಿತ ಚನ್ನಾಗಿ ಪ್ರಿಂಟಮಾಡಿ ತಡೆಯಿಲ್ಲದೆ ದೊಡ್ಡಮಷಿನ್ನು ನಡಿಸಿದ್ದಕ್ಕಾಗಿ ಮಿಸ್ಟರ ಉಯಿಲಿಯಮ್ ಲುಯಿಸ್ ಇವರ ಉಪಕಾರವನ್ನು ಸ್ಮರಿಸುವೆನು. ಈ ಎಲ್ಲ ಪುಣ್ಯವಂತರ ಕಣ್ಣು-ಕೈಗಳು ಒಂದು ವರ್ಷದಲ್ಲಿ "ಭಾಗವತಾಮೃತ" "ಶೈವಸುಧಾರ್ಣವ"ಗಳಂಥ ಶ್ರೇಷ್ಠದೇವತಾಕ ಮಹಾಸದ್ಗ್ರಂಥಗಳ ಸೇವೆಯಲ್ಲಿ ವ್ಯವಹರಿಸಿದ್ದರಿಂದ ಅವರು ಧನ್ಯರೆಂದು ನಾನು ಭಾವಿಸುವೆನು! ಅವರು ಒಂದುಬಗೆಯಿಂದ ಕರ್ನಾಟಕದ ಈ ವಾಙ್ಮಯಸೇವೆಯಲ್ಲಿ ಮನಃಪೂರ್ವಕ ದುಡಿದದ್ದನ್ನು ನಾನು ಎಂದೂ ಮರೆಯಲಾರೆನು. ಹೀಗೆ ಭಗವತ್ಸೇವೆ ಮಾಡಿದ ಸುಯೋಗದ ಸತ್ಫಲವು ಭಗವತ್ಕೃಪೆಯಿಂದ ಅವರಿಗೆ ದೊರೆಯದೆ ಇರದು. ಹೀಗೆ ನಮ್ಮ ಬರಹದ ಶ್ರಮ, ನಮ್ಮ ಮುದ್ರಣಾಲಯದವರ ಮುದ್ರಿಸುವ ಶ್ರಮ ಇವು, ನಮ್ಮ ಪುರಾತನ ಆಶ್ರಯದಾತೃಗಳಾದ ಮ- ರಾ- ರಾ- ಮೋರೊಪಂತ ಅಭ್ಯಂಕರರವರ ಮಹದಾಶ್ರಯದಿಂದ ಕಾಗದಗಳು ವಿಪುಲವಾಗಿ ಸಂಗ್ರಹಿಸಲ್ಪಟ್ಟಿದ್ದರಿಂದ ಸಫಲವಾದವು. ಆದ್ದರಿಂದ ಪರಮ ಶಿವೋಪಾಸಕರಾದ ನಮ್ಮ ಆ ಮಹನೀಯ ಅಭ್ಯಂಕರ ವಕೀಲರನ್ನು ಕೃತಜ್ಞತೆಯಿಂದ ನಾನು ವಂದಿಸುವೆನು.

(೧೧) ದೇವರು ನಡೆಸುವತನಕ ಎಲ್ಲ ಚಂದ; ಆತನು ನಡಿಸಿಕೊಟ್ಟರೆಯೇ ನಮ್ಮಂಥ ಅಹಂಕಾರಿಗಳ ಕಾರ್ಯದ ಸಫಲತೆ; ಆದ್ದರಿಂದ ದೇವದೇವೇಶನೂ, ದೇವಸೇವೋತ್ತಮನೂ ಆದ ಭಗವಾನ್ ಸದಾಶಿವನು, ಪಾಮರರಾದ ನಮ್ಮೆಲ್ಲರ ಅಹಂಕಾರದ ಕೃತಿಯನ್ನು ತನ್ನ ಕರುಣಾಶಾಲಿತ್ವದಿಂದ ಮನ್ನಿಸಿ ನಮ್ಮೆಲ್ಲರನ್ನು ಕಣ್ಣುಮೂಗುನೋಯದಂತೆ ಆರೋಗ್ಯವಾಗಿ ಇಟ್ಟು ತನ್ನ ಸೇವೆಯನ್ನು ಪೂರ್ಣಮಾಡಿಸಿಕೊಂಡದ್ದಕ್ಕಾಗಿ ನಾನು ಭಯಭಕ್ತಿಯಿಂದ ಆ ಭಗವಂತನ ಚರಣಕ್ಕೆರಗುವೆನು! ಈ ಸಲಿಗೆಯು ನನಗೆ ನಮ್ಮ ಭಗವಾನ್ ಭೋಲಾನಾಥ ಭವಾನೀಪತಿಯ ಭಕ್ತಾಧೀನತೆಯಮೂಲಕ ಉಂಟಾಗಿರುವದರಿಂದ, ಭಗವಂತನಿಗಿಂತಲೂ ಭಗವದ್ಭಕ್ತರೇ ಶ್ರೇಷ್ಠರೆಂದು ತಿಳಿದು ಯಾವತ್ತು ಶಿವಭಕ್ತರ ಚರಣಗಳಿಗೆ ನಾನು ಭಕ್ತಿಯಿಂದ ಎರಗಿ ಈ ಪ್ರಸ್ತಾವನೆಯನ್ನು ಮುಗಿಸುವೆನು- "ಸರ್ವೇ ಜನಾಃ ಸುಖಿನೋಭವಂತು"

ಸದ್ಗುರು ಆಫೀಸ ಹಾವೇರಿ
ಶಕೆ ೧೮೪೫ ರುಧಿರೋದ್ಗಾರಿ
ಅಧಿಕ ಜ್ಯೇಷ್ಠ ವದ್ಯ ೧೦ ಶನಿವಾರ
ತಾರೀಖು ೯—೬—೧೯೨೩ನೇ.

ಕನ್ನಡಿಗರ ಸೇವಕ
ವೇ. ತಿ. ಕುಲಕರಣಿ.
ಗಳಗನಾಥ



# ವಿಷಯಾನುಕ್ರಮಣಿಕೆ.

## ೨ನೇಭಾಗ-ಜ್ಞಾನಪ್ರದೀಪ.



## ೩ನೇ ಭಾಗ-ಶಿವಸ್ತುತಿಗಳು.

ಓಂ

ನಮೋ ಭಗವತೇ ಸದಾಶಿವಾಯ.

ಶ್ರೀಶೈವಸುಧಾರ್ಣವ ರೂಪವಾದ

ಈ ಭಗವತ್ಸೇವೆಯನ್ನು

ಮಹಾತ್ಮರಾದ ಶ್ರೀ ನಿಜಗುಣ ಶಿವಯೋಗಿಗಳು ತಮ್ಮ

ವಿವೇಕಚಿಂತಾಮಣಿ ಎಂಬ ಗ್ರಂಥದಲ್ಲಿ ಉಲ್ಲೇಖಿಸಿ

ರುವಂತೆ, ಶಿವೋಪಾಸನೆಯು ಕ್ರಮಭೇದದಿಂದ

ಸಾಮಾನ್ಯಶೈವ, ಮಿಶ್ರಶೈವ, ಶುದ್ಧಶೈವ,

ವೀರಶೈವ ಎಂಬ ಪ್ರಭೇದಗಳನ್ನೊಳ

ಗೊಂಡಿರುವ ಸಮಸ್ತ ಪೂಜ್ಯ

ಶೈವಸಮಾಜದ

ಚರಣಸನ್ನಿಧಿಯಲ್ಲಿ

ವಿಧೇಯ ಸೇವಕ

ವೇಂಕಟೇಶ ತಿರಕೋ ಕುಲಕರಣಿ ಗಳಗನಾಥ

ಈತನು

ವಿನಮ್ರನಾಗಿ

ಭಕ್ತಿಪುರಸ್ಸರ

ಕಾಣಿಕೆಯಾಗಿ

ಅರ್ಪಿಸಿರುವನು!

# ಚಿತ್ರಗಳ ಅನುಕ್ರಮಣಿಕೆ.







# ಶೈವಸುಧಾರ್ಣವ!



## ಮಂಗಲಾಚರಣ.

**विश्वेश्वरं सुकरुणार्णवमिष्टदोह। विश्वोद्भव स्थितिलयाभिनिवेशहेतुं॥**
**विद्यांबिकानु विलसत् शुभपार्श्वभागं। तल्लिंगरूपमनिशं प्रणतोस्मिशंभुं॥**

ಶ್ರೀಶೈಲಾಖ್ಯ ಮಹಾ ಶೈವಕ್ಷೇತ್ರದಲ್ಲಿ ಶಿವಭಕ್ತಸಮೂಹದೊಳಗಿನ ವಿವೇಕಶೀಲನೆಂಬ ಶಿಷ್ಯನು ಸಿದ್ಧಮುನೀಶ್ವರನೆಂಬ ಗುರುವರನನ್ನು ನಮಿಸಿ ವಿನಯಭಾವದಿಂದ--- ಸದ್ಗುರೋ, ನೀನು ಸರ್ವಜ್ಞನು. ಭೂತದಯಾಪರನಾದ ನೀನು ಮನುಷ್ಯರ ಕಲ್ಯಾಣ ಕಾರಕವಾದ ಮಾರ್ಗವನ್ನು ಹುಡುಕಿ ಹೇಳಲು ಪರಮಸಮರ್ಥನಾಗಿರುತ್ತೀ. ಇಂಥ ದಿವ್ಯಮಾರ್ಗವನ್ನು ಹುಡುಕಿ ಹೇಳುವದು ಅನ್ಯರಿಗೆ ಸರ್ವಥಾ ಶಕ್ಯವಲ್ಲವು; ಯಾಕಂದರೆ ಈ ಕಲಿಯುಗದಲ್ಲಿ ಜನರು ಬಹಳಮಾಡಿ ಅಲ್ಪಾಯುಷಿಗಳೂ, ಆಲಸ್ಯವುಳ್ಳವರೂ, ಬುದ್ಧಿಮಾಂದ್ಯರೂ, ಭಾಗ್ಯಹೀನರೂ , ರೋಗಗ್ರಸ್ತರೂ ಇರುವರಲ್ಲದೆ, ಶಾಸ್ತ್ರಗ್ರಂಥಗಳಲ್ಲಿ ಮಾಡಹೇಳಿದ ಅನೇಕಕರ್ಮಗಳಲ್ಲಿ ಸದ್ಯಃಫಲದಾಯಕ ಕರ್ಮಗಳಾವವೆಂಬದನ್ನು ತಿಳಿದುಕೊಳ್ಳುವ ಸಾಮರ್ಥ್ಯವು ಎಲ್ಲರಲ್ಲಿಯೂ ಇರುತ್ತದೆಂದು ಹೇಳಲಾಗುವದಿಲ್ಲ; ಆದ್ದರಿಂದ ಸದ್ಗುರೋ, ಅಂತರಾತ್ಮನು ಸುಪ್ರಸನ್ನವಾಗುವ ಸಾರರೂಪ ವಿಷಯವೇನಾದರೂ ಇದ್ದರೆ ಅದನ್ನು ಹುಡುಕಿ ನಮಗೋಸ್ಕರ ಹೇಳು- ಭಗವನ್ , ನೀನೇ ತಾರಕನೆಂದು ನಾವು ದೃಢವಾಗಿ ನಂಬಿರುತ್ತೇವೆ- ತ್ರಿಗುಣಾತ್ಮಕ ಮಾಯೆಗೆ ಆಧಾರವಾಗಿರುವ ಭಗವಾನ್ ಸದಾಶಿವನ ಲೀಲೆಗಳನ್ನು ಕೇಳುವ ಇಚ್ಛೆಯೂ ನಮಗೆ ಆಗಿದೆ; ಯಾಕಂದರೆ ಆ ತ್ರಿಪುರಾಂತಕನ ಲೀಲೆಗಳು ಜಗತ್ತಿನ ಕಲ್ಯಾಣಕ್ಕಾಗಿಯೂ, ಅಭ್ಯುದಯಕ್ಕಾಗಿಯೂ ಇರುವವೆಂಬದರಲ್ಲಿ ಸಂದೇಹವಿಲ್ಲ. ಈ ಭಯಂಕರ ಸಂಸಾರಸಾಗರದಲ್ಲಿ ಮುಣುಗಿದ ಯಾವ ದೀನಮನುಷ್ಯನಾದರೂ ಆ ಸದಾಶಿವನ ನಾಮೋಚ್ಚಾರಮಾಡಿದರೆ, ಕೂಡಲೆ ಭವಬಂಧಮುಕ್ತನಾಗುವನು. ಸದ್ಗುರೋ, ಬಹಳಹೇಳುವದೇನು? ಪ್ರತ್ಯಕ್ಷ ಭಯವೂ ಆ ಭಗವಂತನ ನಾಮಕ್ಕೆ ಹೆದರುವದು! ಭಾಗೀರಥಿಯು ತ್ರೈಲೋಕ್ಯಗಳನ್ನು ಪಾವನ ಮಾಡುವದು ನಿಜವು; ಆದರೆ ಯಾವಾಗ! ಬಹುದಿವಸ ಆಕೆಯನ್ನು ಸೇವಿಸಿದಾಗ; ಆದರೆ ಆ ಸದಾಶಿವನ ಸಾಮರ್ಥ್ಯವು ಲೋಕೋತ್ತರವಾದದ್ದು; ಯಾಕಂದರೆ ಆ ಅಂಬಿಕಾಧವನ ಚರಣಗಳ ಆಶ್ರಯಮಾಡಿ ಶಾಂತರಾಗಿರುವ ಮುನಿಜನರ ಸಮಾಗಮವಾದ ಕೂಡಲೆ ಮನುಷ್ಯನು ಪಾವನನಾಗುವನು. ಅಂದಬಳಿಕ ಮಹಾಮಹಾ ಸಾಧುಪುರುಷರ ಸ್ತುತಿಗೆ ಪಾತ್ರಗಳಾದ ಭಗವಾನ್ ಶಂಕರನ ಕಲಿಮಲವಿಧ್ವಂಸಕವಾದ ಮಂಗಲಕಾರಕ

ಚರಿತ್ರಗಳ ಶ್ರವಣಮಾಡಲಿಕ್ಕೆ ಯಾವ ಮುಮುಕ್ಷುಗಳು ಉತ್ಸುಕರಾಗಲಿಕ್ಕಿಲ್ಲ! ಆದ್ದರಿಂದ ಅಂಥ ಶಿವಚರಿತ್ರಗಳನ್ನು ಶ್ರದ್ಧಾವಂತರಾದ ನಮಗೋಸ್ಕರ ನೀನು ಹೇಳು. ಆ ಷಡ್ಗುಣೈಶ್ವರ್ಯಸಂಪನ್ನನಾದ ಮೃತ್ಯುಂಜಯನ ಕಥೆಗಳನ್ನು ಎಷ್ಟು ಕೇಳಿದರೂ ನಮಗೆ ತೃಪ್ತಿಯಾಗುವದಿಲ್ಲವು. ಅವನ್ನು ಕೇಳಿ ಕೇಳಿದಂತೆ ಮರ್ಮಜ್ಞ-ರಸಿಕ-ಶ್ರೋತೃಗಳಿಗೆ ಹೆಚ್ಚುಹೆಚ್ಚು ಸವಿಹತ್ತಿ ಮತ್ತೂ ಕೇಳುವ ಇಚ್ಛೆಯಾಗುವದು! ಸದ್ಯಕ್ಕೆ ನಾವು ಕಲಿಯಿಂದ ಪೀಡಿತರಾಗಿರುವದರಿಂದ, ಈ ಶ್ರೀಶೈಲವೆಂಬ ಮಹಾ ಶೈವಕ್ಷೇತ್ರದಲ್ಲಿ ದೀರ್ಘಕಾಲದ ಶಿವಪೂಜಾರೂಪ ಯಜ್ಞವನ್ನು ಆರಂಭಿಸಿರುತ್ತೇವಾದ್ದರಿಂದ ಶ್ರೀ ಶಿವಚರಿತ್ರಗಳನ್ನು ಕೇಳಲಿಕ್ಕೆ ಅವಕಾಶವು ಚನ್ನಾಗಿ ದೊರೆತಿರುತ್ತದೆ. ಈ ದುಸ್ತರ ಕಲಿಯು ಪುರುಷರ ಸತ್ವಹರಣ ಮಾಡತಕ್ಕವನಿರುವದರಿಂದ ಆತನ ಪಾಶದಿಂದ ಮುಕ್ತವಾಗುವದು ಪರಮಕಠಿಣವೆಂಬದೇನೋ ನಿಜವು; ಆದರೂ ಆ ಪಾಶದಿಂದ ಮುಕ್ತರಾಗಬೇಕೆಂಬ ಉತ್ಕಟೇಚ್ಛೆಯು ನಮಗೆ ಇರುತ್ತದೆ; ಹೀಗಿರಲು, ಸಮುದ್ರವನ್ನು ದಾಟಹೋಗಲಿಚ್ಛಿಸುವವರಿಗೆ ಕುಶಲನಾದ ಕರ್ಣಧಾರನು ದೊರೆಯುವಂತೆ, ಸುದೈವದಿಂದ ಈ ಪ್ರಸಂಗದಲ್ಲಿ ಸದ್ಗುರುವು ನೀನು ನಮಗೆ ದೊರೆತಿರುತ್ತೀ; ಆದ್ದರಿಂದ ನಾವು ಈ ಮೊದಲೇ ಕೇಳಿದಂತೆ ಭಕ್ತಿವರ್ಧಕವಾದ ಶಿವಕಥೆಗಳನ್ನು ಹೇಳಿ, ಶಿವಸ್ವರೂಪ ಜ್ಞಾನಸಾಧನವಾದ ಜ್ಞಾನಮಾರ್ಗವನ್ನೂ ನಮಗೆ ಉಪದೇಶಿಸು.

ಈ ಮೇರೆಗೆ ವಿವೇಕಶೀಲನ ಮುಖಾಂತರವಾಗಿ ಶಿವಭಕ್ತರು ಮಾಡಿದ ಮಂಗಲಕಾರಕ ಪ್ರಶ್ನೆಗಳನ್ನು ಕೇಳಿ ಸಿದ್ಧಮುನೀಶ್ವರನಿಗೆ ಪರಮಾನಂದವಾಯಿತು. ಹೀಗೆ ಉತ್ತಮಪ್ರಶ್ನಮಾಡಿದ್ದಕ್ಕಾಗಿ ಶಿವಭಕ್ತಸಮೂಹವನ್ನು ಅಭಿನಂದಿಸಿ, ಆ ಮಹಾತ್ಮನು ಮನಸ್ಸಿನಲ್ಲಿ ಭಗವಾನ್ ಸದಾಶಿವನನ್ನು ಧ್ಯಾನಿಸಿ ಅವರ ಆ ಪ್ರಶ್ನೆಗಳಿಗೆ ಉತ್ತರಗಳನ್ನು ಹೇಳತೊಡಗಿದನು. ಆತನು ವಿವೇಕಶೀಲನೇ ಮೊದಲಾದವರನ್ನು ಕುರಿತು—ಎಲೈ ಶಿವಭಕ್ತಶ್ರೇಷ್ಠರೇ, ನೀವು ನನಗೆ ಬಹಳ ಉತ್ತಮಪ್ರಶ್ನಮಾಡಿದಿರಿ; ಯಾಕಂದರೆ ನಿಮ್ಮ ಆ ಪ್ರಶ್ನೆಗಳಿಂದಜನರ ಚಿತ್ತಶುದ್ಧಿಯಾಗಿ ಅವರ ಕಲ್ಯಾಣವಾಗುವದು. ಅಂತರಾತ್ಮನನ್ನು ಸುಪ್ರಸನ್ನನಾಗಿಮಾಡುವ, ಹಾಗು ನಿಷ್ಕಾಮವೂ, ಸುದೃಢವೂ ಆದ ಭಕ್ತಿಯನ್ನು ಶ್ರೀ ಸದಾಶಿವನಲ್ಲಿ ಉಂಟುಮಾಡುವ ಧರ್ಮವೇ ಶ್ರೇಷ್ಠಧರ್ಮವೆಂದು ತಿಳಿಯಿರಿ. ಭಗವಾನ್ ಸದಾಶಿವನಲ್ಲಿ ಅಚಲವಾದ ಭಕ್ತಿಯನ್ನಿಡುವದರಿಂದ ಬೇಗನೆ ವೈರಾಗ್ಯವೂ, ಪರಮೇಶ್ವರವಿಷಯಕವಾದ ಅಹೇತುಕಜ್ಞಾನವೂ ಉತ್ಪನ್ನವಾಗುವವು. ಜನರು ಧರ್ಮವೆಂದು ತಿಳಿದು ಯಾವದೊಂದು ಕಾರ್ಯಮಾಡಿದರೂ, ಆ ಧರ್ಮಾಚರಣೆಯಿಂದ ಅವರಿಗೆ ಪರಮೇಶ್ವರನ ಕಥಾಶ್ರವಣದಲ್ಲಿ ಆಸಕ್ತಿಯುಂಟಾಗದಿದ್ದರೆ ಅದು ವ್ಯರ್ಥಶ್ರಮವೆಂದು ತಿಳಿಯಬೇಕು; ಅದು ನಿಜವಾದ ಧರ್ಮವಲ್ಲವು. ಅರ್ಥಶಾಸ್ತ್ರಾದಿ ಲೌಕಿಕಶಾಸ್ತ್ರಗಳಲ್ಲಿ ಧರ್ಮದಿಂದ ಅರ್ಥವನ್ನು ಸಾಧಿಸಬೇಕೆಂತಲೂ, ಅರ್ಥದಿಂದ ಕಾಮನಾಪೂರ್ತಿಯನ್ನು ಮಾಡಿಕೊಳ್ಳಬೇಕೆಂತಲೂ, ಹೀಗೆ ಕಾಮನಾಪೂರ್ತಿಯನ್ನು ಮಾಡಿಕೊಳ್ಳುವದರಿಂದ ಸುಖಪ್ರಾಪ್ತಿಯಾಗುವದೆಂತಲೂ ಹೇಳಿರುತ್ತದೆ; ಆದರೆ ಈ ಮತವು ಸರಿಯಾದದ್ದಲ್ಲವು. ಧರ್ಮವು

ಮೋಕ್ಷಕ್ಕೆ ಸಾಧನೀಭೂತವಾಗಿರುವದರಿಂದ ಕಾಂಚನಾದಿ ದ್ರವ್ಯರೂಪ ಕ್ಷುದ್ರ ಅರ್ಥವು ಧರ್ಮದ ಫಲವಲ್ಲವು. ಧರ್ಮದ ಫಲವು ಮೋಕ್ಷವಾಗಿರುವದು. ಅದರಂತೆ ಅರ್ಥವು ಧರ್ಮಕ್ಕಾಗಿಯೇ ಇರುವದಲ್ಲದೆ, ಕಾಮಕ್ಕಾಗಿ ಇರುವದಿಲ್ಲವು. ದ್ರವ್ಯದ ಉಪಯೋಗವು ಧರ್ಮವನ್ನು ಹೆಚ್ಚಿಸುವದಕ್ಕಾಗಿಯೇ ಆಗತಕ್ಕದ್ದಲ್ಲದೆ ಸುಖೋಪಭೋಗಕ್ಕಾಗಿ ಆಗುವದು ತಕ್ಕದ್ದಲ್ಲ. ಒಟ್ಟಿಗೆ, ಧರ್ಮದಿಂದ ಸಂಪಾದಿಸಲ್ಪಟ್ಟ ದ್ರವ್ಯವನ್ನು ಧರ್ಮವೃದ್ಧಿಗಾಗಿ ಅಲ್ಲದೆ ಸುಖೋಪಭೋಗಕ್ಕಾಗಿ ಉಪಯೋಗಿಸತಕ್ಕದ್ದಲ್ಲವೆಂಬದನ್ನು ಲಕ್ಷದಲ್ಲಿಡಬೇಕು. ಇನ್ನು ಸಂಸಾರದಲ್ಲಿ ಕಾಮ್ಯವಸ್ತುಗಳನ್ನು ಸಂಪಾದಿಸುವದು ಕೇವಲ ಪ್ರಾಣಧಾರಣೆಗಾಗಿಯಲ್ಲದೆ, ಇಂದ್ರಿಯಗಳ ಚಕ್ಕಂದವನ್ನು ನಡಿಸುವದಕ್ಕಾಗಿಯಲ್ಲ. ಶಿಷ್ಯೋತ್ತಮರೇ, ಪ್ರಾಣರಕ್ಷಣಮಾಡಿ ಜೀವದಿಂದಿರುವದಾದರೂ ಯಾತಕ್ಕೆಂದು ನೀವು ಕೇಳಬಹುದು; ಆದರೆ ಜೀವದಿಂದಿದ್ದಹೊರತು ತತ್ವಜ್ಞಾನವು ಪ್ರಾಪ್ತವಾಗುವದಿಲ್ಲವಾದ್ದರಿಂದ, ಜೀವದಿಂದಿರಬೇಕಾಗುವದೆಂಬದನ್ನು ನೆನಪಿನಲ್ಲಿಡಿರಿ. ಹಲವು ಯಜ್ಞಯಾಗಗಳನ್ನು ಮಾಡುವದಕ್ಕಾಗಿ ಜೀವದಿಂದಿರಬೇಕೆಂದು ಕೆಲವರು ಅನ್ನುವದುಂಟು; ಆದರೆ ಹಾಗಲ್ಲ; ನಿಷ್ಕಾಮ್ಯಕರ್ಮಗಳನ್ನು ಮಾಡಿ ಚಿತ್ತಶುದ್ಧಿಯ ದ್ವಾರದಿಂದ ತತ್ವಜ್ಞಾನವನ್ನು ಸಂಪಾದಿಸುವದೇ ಜೀವಿತದ ಮುಖ್ಯಹೇತುವೆಂದು ನೀವು ತಿಳಿಯಿರಿ.

ಶಿಷ್ಯೋತ್ತಮರೇ, ಇನ್ನು ತತ್ವವೆಂದರೇನೆಂದು ನೀವು ಕೇಳಬಹುದು; ಅದನ್ನು ಹೇಳುತ್ತೇನೆ ಕೇಳಿರಿ. ಈ ಜಗತ್ತಿನಲ್ಲಿ ಪರಮೇಶ್ವರನಿಂದ ಹೊರತಾಗಿ ಎರಡನೆಯದೇನೂ ಇಲ್ಲವು, ಸರ್ವವೂ ಪರಮೇಶ್ವರನೇ ಇರುವನು, ಎಂಬ ಅದ್ವೈತಜ್ಞಾನಕ್ಕೆ ಜ್ಞಾನಿಗಳು ತತ್ವವೆನ್ನುವರು. ಈ ಅದ್ವೈತಜ್ಞಾನಕ್ಕೇ ಕೆಲವರು ಬ್ರಹ್ಮ, ಪರಮಾತ್ಮ, ಭಗವಾನ್ ಎಂತಲೂ ಅನ್ನುವರು. ಶ್ರದ್ಧಾಯುಕ್ತರಾದ ಮುನಿಜನರಿಗೆ, ಅವರ ಅಂತಃಕರಣವು ನಿಷ್ಕಾಮುಕರ್ಮದಿಂದ ಶುದ್ಧವಾಗಿ ಅದು ಜ್ಞಾನವೈರಾಗ್ಯಗಳಿಂದ ಯುಕ್ತವಾದಾಗ ವೇದಾಂತಶ್ರವಣದಿಂದ ದೃಢವಾದ ಭಕ್ತಿಯು ಅವರ ಆ ಅಂತಃಕರಣದಲ್ಲಿ ಹುಟ್ಟುತ್ತಲು, ಅವರ ಅಂತಃಕರಣದಲ್ಲಿಯೇ ಭಗವಾನ್ ಸದಾಶಿವನ ದರ್ಶನವಾಗುವದು. ಆದ್ದರಿಂದ ಶಿವಭಕ್ತಶಿಖಾಮಣಿಗಳೇ, ಅವರವರ ವರ್ಣಾಶ್ರಮಗಳಂತೆ ಹಾಕಿಕೊಟ್ಟಿರುವ ಧರ್ಮಗಳಂತೆ ಅವರವರು ಆಚರಿಸುತ್ತಿರುವಾಗ, ಭಗವಾನ್ ಸದಾಶಿವನಲ್ಲಿ ಭಕ್ತಿಯು ಉತ್ಪನ್ನವಾದರೆ ಮಾತ್ರ, ತಮ್ಮ ಕೈಯಿಂದ ಧರ್ಮಾಚರಣೆಯು ಸರಿಯಾಗಿ ಆಯಿತೆಂದು ತಿಳಿಯಬೇಕು; ಆದ್ದರಿಂದ ಪ್ರತಿಒಬ್ಬ ಶಿವಭಕ್ತನು ತನ್ನ ವರ್ಣಾಶ್ರಮಧರ್ಮಗಳನ್ನು ಆಚರಿಸಿ ಯಾವಾಗಲೂ ಏಕಾಗ್ರಚಿತ್ತದಿಂದ ಆ ಭಗವಾನ್ ಸದಾಶಿವನ ಕಥೆಗಳನ್ನು ಕೇಳುತ್ತಿರಬೇಕು, ಆ ಭಗವದ್ಗುಣಗಳನ್ನು ಸ್ವತಃ ವರ್ಣಿಸುತ್ತಿರಬೇಕು, ಆತನಧ್ಯಾನ-ಪೂಜನಗಳಲ್ಲಿ ಸದಾ ನಿಮಗ್ನನಾಗಿರಬೇಕು. ಸದ್ಭಕ್ತರೇ, ಭಗವತ್ಕಥೆಗಳಲ್ಲಿ ಪ್ರೀತಿಯುಂಟಾಗುವ ಮಾರ್ಗವನ್ನು ಹೇಳುವೆನು ಕೇಳಿರಿ. ಗಂಗಾದಿ ತೀರ್ಥಗಳನ್ನು ಸೇವಿಸಿ ನಿಷ್ಪಾಪರಾಗಬೇಕು; ಸತ್ಪುರುಷರನ್ನು ಸೇವಿಸಬೇಕು; ವೇದಾದಿಗಳಲ್ಲಿ ಶ್ರದ್ಧೆಯನ್ನೂ, ಧರ್ಮದಲ್ಲಿ ನಿಷ್ಠೆಯನ್ನೂ ಹೆಚ್ಚಿಸಬೇಕು; ಅಂದರೆ ಇವೆಲ್ಲವುಗಳ ಯೋಗದಿಂದ ಭಗ

ವಾನ್ ಸದಾಶಿವನ ಕಥೆಗಳ ವಿಷಯವಾಗಿ ಪ್ರೀತಿಯು ಉತ್ಪನ್ನವಾಗುವದು. ಹೀಗೆ ಶಿವ ಕಥಾಶ್ರವಣದಲ್ಲಿ ನಿಮಗ್ನವಾಗಿರಲು, ಸಜ್ಜನಮಿತ್ರನೂ-ಪುಣ್ಯಕಾರಕ ನಾಮಶ್ರವಣ ಕೀರ್ತನಗಳುಳ್ಳವನೂ ಆದ ಭಗವಾನ್ ಸದಾಶಿವನು ತನ್ನ ಭಕ್ತರ ಅಂತಃಕರಣದಲ್ಲಿ ನಿಂತುಕೊಂಡು ಅವರ ಕಾಮ-ಕ್ರೋಧಾದಿ ದುಷ್ಟಶತ್ರುಗಳ ಉಚ್ಛೇದವನ್ನು ಸಮೂಲ ವಾಗಿ ಮಾಡುವನು. ಒಟ್ಟಿಗೆ, ನಾವು ನಿತ್ಯದಲ್ಲಿ ಅನನ್ಯಭಾವದಿಂದ ಭಗವಾನ್ ಸದಾಶಿವನ ಉಪಾಸನೆ ಮಾಡಿದ್ದರಿಂದ ನಮ್ಮ ಮನಸ್ಸಿನ ಪಾಪವಾಸನೆಗಳು ಬಹುತರ ನಷ್ಟವಾದಾಗ, ಉತ್ತಮಃಶ್ಲೋಕನಾದ ಭಗವಂತನಲ್ಲಿ ಭಕ್ತಿಯು ದೃಢವಾಗುವದು; ಹೀಗೆ ದೃಢಭಕ್ತಿಯು ಮನಸ್ಸಿನಲ್ಲಿ ಉಂಟಾಯಿತೆಂದರೆ ತಮೋಗುಣವೂ, ಅದರಿಂದ ಉತ್ಪನ್ನವಾ ಗುವ ಕಾಮ, ಕ್ರೋಧ, ಮದ, ಲೋಭ, ಮೋಹ, ಮತ್ಸರಎಂಬ ಷಡ್ವಿಕಾರಗಳೂ ನಮ್ಮ ಮನಸ್ಸಿನೊಳಗಿಂದ ಜಾರಿ ಹೋಗುವವು. ಆ ಮೇಲೆ ಈ ದೋಷಗಳಿಂದ ಶುದ್ಧ ವಾದ ನಮ್ಮ ಮನಸ್ಸು ಸತ್ವಗುಣವುಳ್ಳದ್ದಾಗಿ ಅತ್ಯಂತ ಸುಪ್ರಸನ್ನವಾಗುವದು. ಈ ಮೇರೆಗೆ ಭಗವದ್ಭಕ್ತಿಯಿಂದ ಸುಪ್ರಸನ್ನವಾದ ಮನಸ್ಸುಳ್ಳವನಿಗೆ ಸರ್ವಸಂಗಪರಿತ್ಯಾಗ ಮಾಡಬೇಕೆನ್ನುವ ಹಾಗೆ ಆಗಹತ್ತುತ್ತದೆ. ಹಾಗೆ ವೈರಾಗ್ಯ ತಾಳಿದ ಬಳಿಕ ಆತ್ಮ ತತ್ವದ ಜ್ಞಾನಉಂಟಾಗುವದು. ಇಂಥ ಜ್ಞಾನದ ಸ್ಥಿತಿಯನ್ನು ಹೊಂದಿದ ಬಳಿಕ, ಹಾಗು ಆತ್ಮನಲ್ಲಿ ಅವನಿಗೆ ಈಶ್ವರನ ದರ್ಶನವಾದ ಬಳಿಕ ಅವನ ಅಹಂಕಾರರೂಪ ಹೃದಯಗ್ರಂಥಿಯು ಹರಿದುಹೋಗಿ ಈಶ್ವರವಿಷಯಕವಾದ ಅವನ ಸರ್ವಸಂಶಯ ಗಳೂನಷ್ಟವಾಗಿ ಅವನ ಸಂಚಿತಾದಿ ಕರ್ಮಗಳಕ್ಷಯವಾಗುವದು; ಆದ್ದರಿಂದ ಭಕ್ತ ಶ್ರೇಷ್ಠರೇ, ಬುದ್ಧಿವಂತರಾದವರು ಭಗವಾನ್ ಸದಾಶಿವನಲ್ಲಿ ಯಾವಾಗಲೂ ಭಕ್ತಿ ಯುಳ್ಳವರಾಗಿರಬೇಕು.

ಸದ್ಭಕ್ತರೇ, ಸತ್ವ, ರಜ, ತಮ ಎಂಬ ಮೂರು ಪ್ರಕೃತಿಯ ಗುಣಗಳಾಗಿರು ವವು. ಸಾಂಖ್ಯಶಾಸ್ತ್ರದಿಂದ ಪುರುಷನೆಂದು ಕರೆಸಿಕೊಳ್ಳುವ ಪರಮಾತ್ಮನು ವಾಸ್ತವ ವಾಗಿ ಆ ಗುಣಗಳಿಂದ ತೀರ ನಿರ್ಲಿಪ್ತನಾಗಿರುವನು; ಆದರೆ ಆತನು ಪ್ರಕೃತಿಯ ಈ ಮೂರು ಗುಣಗಳಿಂದ ಯುಕ್ತನಾಗಿ, ಈ ಜಗತ್ತಿನ ಉತ್ಪತ್ತಿ-ಸ್ಥಿತಿ-ಲಯಗಳನ್ನು ಉಂಟುಮಾಡುವದರಿಂದ ಒಬ್ಬ ಪರಮಾತ್ಮನೇ ಬ್ರಹ್ಮ-ವಿಷ್ಣು-ಶಂಕರ ಎಂಬ ಬೇರೆ ಬೇರೆ ಮೂರು ಹೆಸರುಗಳನ್ನು ಪಡೆದಿರುವನು; ಆದರೆ ಈ ಮೂರು ರೂಪಗಳ ಮೂಲ ಕಾರಣನೂ, ಪ್ರಕೃತಿಗೆ(ಮಾಯೆಗೆ)ಆಶ್ರಯನೂ ಆದ ಆ ಭಗವಾನ್ ಸದಾಶಿವನೆಂಬ ಒಬ್ಬ ಪರಮಾತ್ಮನೇ ಸರ್ವಶ್ರೇಷ್ಠನೆಂದು ತಿಳಿದು ಆತನಲ್ಲಿ ನೀವು ದೃಢಭಕ್ತಿಯನ್ನು ತಾಳತ ಕ್ಕದ್ದು. ಆ ಮೂಲ ಸದಾಶಿವನೇ, ಜಗತ್ಕಲ್ಯಾಣಕ್ಕಾಗಿ ತ್ರಿಮೂರ್ತಿಗಳ ಮುಖಾಂತರ ವಾಗಿ ಹಲವು ಅವತಾರಗಳನ್ನು ಧರಿಸಿರುವನು. ಅಂಥ ಸರ್ವೋತ್ತಮನಾದ ಸದಾಶಿವ ನಲ್ಲಿ ಭಕ್ತಿಯನ್ನು ತಾಳುವದು ಭವಬಂಧವಿಮೋಚನೆಗೆ ಪರಮ ಸಾಧನವಾಗಿರುವದು. ಇನ್ನು ತ್ರಿಗುಣಾತ್ಮಕ ಭಕ್ತರು ತಮ್ಮ ತಮ್ಮ ಗುಣಗಳಿಗನುಸರಿಸಿ ಬೇರೆ ಬೇರೆ ಉಪಾಸ್ಯ ದೇವತೆಗಳನ್ನು ಆರಾಧಿಸಿ ಬೇರೆ ಬೇರೆ ಫಲಗಳನ್ನು ಹೊಂದುವರು; ಆದರೆ ಶಿವಭಕ್ತರಿಗೆ

ಮೋಕ್ಷವೆಂಬ ಪರಮ ಪುರುಷಾರ್ಥವನ್ನು ಕೊಡುವವನು ಭಗವಾನ್ ಸದಾಶಿವನೊಬ್ಬನೇ ಸರಿ! ಆ ವಿಶ್ವವ್ಯಾಪಕನಾದ ಭಗವಾನ್ ಸದಾಶಿವನು, ಸ್ವತಃ ಗುಣಾತೀತನಾಗಿರುವನು; ಆದರೆ ವ್ಯಕ್ತ-ಅವ್ಯಕ್ತ ಎಂಬ ಉಭಯ ಸ್ವರೂಪದ ತ್ರಿಗುಣಾತ್ಮಕ ಮಾಯೆಯನ್ನು ಆಶ್ರಯಿಸಿ, ಆ ಸದಾಶಿವನು ಈ ಸೃಷ್ಟಿಯ ಉತ್ಪತ್ತಿಯನ್ನು ಮಾಡಿರುವನು; ಮತ್ತು ಈ ಸೃಷ್ಟಿಯಲ್ಲಿ ನಾನಾವಿಧ ಪದಾರ್ಥಗಳನ್ನು ಉತ್ಪನ್ನಮಾಡಿ ಅವುಗಳಲ್ಲಿ ತಾನು ಸ್ವತಃ ಪ್ರವೇಶಿಸಿರುವನು. ಹೀಗೆ ಆತನು ತ್ರಿಗುಣಾತ್ಮಕ ವಸ್ತುಗಳಲ್ಲಿ ಪ್ರವೇಶ ಮಾಡಿರುವದರಿಂದ ಆತನೂ ಸ್ವತಃ ತ್ರಿವಿಧ ಗುಣಗಳ ಉಪಾಧಿಗೆ ಒಳಗಾಗಿರುವಂತೆ ತೋರುವನು; ಆದರೆ ನಿಜವಾಗಿ ಆತನು ಹಾಗೆ ಉಪಾಧಿಗೆ ಒಳಗಾಗಿರದೆ, ಸ್ವತಃ ಆತನು ನಿರ್ಗುಣನಾಗಿರುವನು. ನಿಜವಾಗಿ ನೋಡಿದರೆ ಅಗ್ನಿಯು ಎಲ್ಲಿಹೋದರೂ ಒಂದೇ ಇರುವದು; ಆದರೆ ಅದು ಬೇರೆ ಬೇರೆ ಆಕಾರದ ಕಟ್ಟಿಗೆಗಳಲ್ಲಿ ಪ್ರವೇಶಿಸುವದರಿಂದ ಬೇರೆ ಬೇರೆ ಆಕಾರಗಳನ್ನು ಹೊಂದುವಂತೆ, ಪರಮಾತ್ಮನು ಒಬ್ಬನೇ ಇದ್ದರೂ, ಅನೇಕ ಭೂತಗಳಲ್ಲಿ ಆತನು ಪ್ರವೇಶ ಮಾಡಿರುವದರಿಂದ ಆತನು ಬೇರೆ ಬೇರೆಯಾಗಿರುವಂತೆ ತೋರುವನು. ಈ ಸರ್ವವ್ಯಾಪಕ ಪರಮಾತ್ಮನೇ ಭಗವಾನ್ ಸದಾಶಿವನು; ಆ ಭಗವಂತನ ಪ್ರಾಪ್ತಿಯಾಗುವದಕ್ಕಾಗಿ ಸದ್ಗುರುವನ್ನು ಪಡೆದು, ಆ ಸದ್ಗುರುದತ್ತ ಮಂತ್ರದಿಂದ ಪುನೀತರಾಗಿ ಶ್ರೀ ಸದಾಶಿವನ ಚರಿತ್ರಗಳ ಶ್ರವಣಮಾಡಿ ಆತನಲ್ಲಿ ಭಕ್ತಿಯುಳ್ಳವರಾಗಬೇಕಾಗುವದು.

ಈ ಮೇರೆಗೆ ಹೇಳಲು, ಶಿವಭಕ್ತಶಿಖಾಮಣಿಯಾದ ವಿವೇಕಶೀಲನು—ಸದ್ಗುರುವೇ, ನಿನ್ನ ಉಪದೇಶದಿಂದ ಇಂದು ನಾವು ಧನ್ಯರಾದೆವು; ಆದರೆ ಇಷ್ಟರಿಂದ ನಮ್ಮ ತೃಪ್ತಿಯಾಗದಿರುವದರಿಂದ ನಮಗೆ ಹಲವು ಶಿವಲೀಲೆಗಳನ್ನು ಹೇಳು; ಮತ್ತು ಆ ಶಿವಲೀಲೆಗಳ ಶ್ರವಣಕ್ಕೆ ಅಧಿಕಾರವನ್ನು ಪಡೆಯುವದಕ್ಕಾಗಿ ಸಂಪಾದಿಸಬೇಕಾದ ಸದ್ಗುರುವಿನ ಮಹಿಮೆಯನ್ನೂ, ಆ ಸದ್ಗುರುವು ಉಪದೇಶಿಸಿದ ಮಂತ್ರದ ಮಹಿಮೆಯನ್ನೂ ಹೇಳು, ಎಂದು ಪ್ರಾರ್ಥಿಸಲು, ಸಿದ್ಧಮುನೀಶ್ವರನು—ಸದ್ಭಕ್ತರೇ, ನಿಮ್ಮ ಪ್ರಶ್ನಗಳಿಂದ ನನಗೆ ಬಹಳ ಸಂತೋಷವಾಗುವದು; ಯಾಕಂದರೆ ಅವುಗಳಿಂದ ನನಗೆ ಸತ್ಕಥೆಗಳನ್ನು ನಿರೂಪಿಸುವ ಪ್ರಸಂಗವು ಒದಗುವದು. ನಿಮ್ಮ ಪ್ರಶ್ನದಂತೆ ಸದ್ಗುರುವಿನ ಮಹಿಮೆಯನ್ನೂ, ಮಂತ್ರರಾಜನೆನಿಸುವ ಶ್ರೀ ಶಿವಪಂಚಾಕ್ಷರೀಮಂತ್ರದ ಮಹಿಮೆಯನ್ನೂ ಹೇಳುವದಕ್ಕಾಗಿ, ಪ್ರಾಚೀನವಾದದ್ದೊಂದು ಇತಿಹಾಸವನ್ನು ಹೇಳುವೆನು ಕೇಳಿರಿ. ಆ ಮಂಗಲಕಾರಕ ಇತಿಹಾಸವನ್ನು ಹೇಳಕೇಳುವ ಮೊದಲು ನಾವು ಆ ಭಗವಾನ್ ಸದಾಶಿವನನ್ನು ಅನನ್ಯಭಕ್ತಿಯಿಂದ ನಮಸ್ಕರಿಸೋಣ!





## ೧ನೆಯ ಸುಧಾತರಂಗ !



## ಶ್ರೀ ಶಿವಪಂಚಾಕ್ಷರೀ ಮಂತ್ರಮಹಿಮೆ !

(ಶ್ರೀ ಷಡಕ್ಷರಿ ಕವಿವರರ ರಾಜಶೇಖರ ವಿಳಾಸದಿಂದ)

ವೈಭವ:—ಸಿದ್ಧಮುನಿವರರು ವಿವೇಕಶೀಲಾದಿ ಶಿಷ್ಯರನ್ನು ಕುರಿತು—ಸದ್ಭಕ್ತರೇ, ಹಿಂದಕ್ಕೆ ಮೇರುಗಿರಿಯ ದಕ್ಷಿಣದಲ್ಲಿ ಚೋಳರಾಜ್ಯವು, ವೈಭವದಿಂದ ಶೋಭಿಸುತ್ತಿರುವದು. ಆ ರಾಜ್ಯದಲ್ಲಿ ಅರಳಿದ ಕಮಲಗಳಿಂದೊಪ್ಪುವ ಕೆರೆಗಳೂ, ಕುಮುದಗಳಿಂದ ತುಂಬಿದ ಸರೋವರಗಳೂ, ರಾಜಹಂಸಗಳಿಂದ ಶೋಭಿಸುವ ಹೊಳೆಗಳೂ, ಬೆಳೆಗಳಿಂದ ಮೆರೆಯುವ ಹೊಲಗಳೂ, ಹೂಗಳಿಂದ ಕಂಗೊಳಿಸುವ ಉತ್ತಮವಾದ ತೋಟಗಳೂ, ಹೂ-ಕಾಯಿ-ಹಣ್ಣುಗಳಿಂದ ಕೂಡಿದ ಉದ್ಯಾನಗಳೂ ಅಲ್ಲಲ್ಲಿಗೆ ಸೊಗಯಿಸುವವು. ಈ ಚೋಳದೇಶದಲ್ಲಿ ಗಂಗಾನದಿಗೆ ಸಮಾನವಾದ ಮಹಿಮೆಯಿಂದೊಪ್ಪುವ ಕಾವೇರಿಯು ಹರಿಯುತ್ತಿರುವದು. ಆ ಕಾವೇರಿಯ ದಂಡೆಯ ಪ್ರದೇಶದಲ್ಲಿ ಮನೋಹರವಾದ ಬತ್ತದ ಗದ್ದೆಗಳು ಒಪ್ಪುತ್ತಿದ್ದು, ಆ ಗದ್ದೆಗಳನ್ನು ಕಾಯುವ ಪ್ರಮದೆಯರು ತಮ್ಮ ವಿಲಾಸವಿಭ್ರಮದಿಂದ ಮೊದಲು ಪ್ರಾಯಸ್ಥರ ಧೈರ್ಯವನ್ನು ಓಡಿಸಿ, ಆ ಮೇಲೆ ಕರತಳರವದಿಂದ ಗಿಳಿಗಳನ್ನು ಓಡಿಸುವರು. ಈ ಕಳಮಕ್ಷೇತ್ರಕ್ಕೆ ಸಮೀಪದಲ್ಲಿ ಕುಂಕುಮದಿಂದ ಕೂಡಿದ ಭೂದೇವಿಯ ಬೈತಲಿನಂತೆ ಕೆಂಪುಹುಡಿಯಿಂದ ಕೂಡಿದ ರಾಜಮಾರ್ಗವು ಒಪ್ಪುತ್ತಿರುವದು. ಆ ರಾಜಮಾರ್ಗದ ಸಮೀಪದಲ್ಲಿ ಅನೇಕ ಹೂಮಾಲೆಗಳಿಂದೊಪ್ಪುವ ಅರವಟ್ಟಿಗೆಗಳು, ಅಡಿಕೆಯ ಕಂಬಗಳಿಂದಲೂ, ಕಮಲಗಳ ಹಾಗು ಸುಗಂಧೀ ಹೂಗಳ ಗಂಟೆಗಳಿಂದಲೂ, ಕಬ್ಬಿನ ಜಂತೆಗಳಿಂದಲೂ, ಕೇತಕಿಯ ಮಾಳವಂತದಿಂದಲೂ, ಚಿಗುರೆಲೆಗಳ ಹೊದಿಕೆಯಿಂದಲೂ, ಬಾಳದ ಬೇರಿನ ನೆರಿಕೆಯಿಂದಲೂ ಹಾದಿಕಾರರಿಗೆ ರಮಣೀಯಗಳಾಗಿ ಕಂಗೊಳಿಸುವವು. ಆ ಅರವಟ್ಟಿಗೆಗಳಲ್ಲಿ ತರುಣಿಯರು ಸುಗಂಧ ಶೀತಲೋದಕದಿಂದ ಪಾಂಥಸ್ಥರ ನೀರಡಿಕೆಯನ್ನೂ, ತಮ್ಮ ಸೌಂದರ್ಯ-ಹಾವಭಾವ-ಒನಪು-ಒಯ್ಯಾರ-ಮಧುರಭಾಷಣ ಇವುಗಳಿಂದ ಮನದ ನೋವನ್ನೂ ಪರಿಹರಿಸುತ್ತಿರಲು, ಯೌವನಸ್ಥರಾದ ಹಾದಿಕಾರರು ಮೋದಗೊಂಡು ಪರವಶರಾಗುವರು.

ಆ ಚೋಳದೇಶದಲ್ಲಿ ಬಡತನ, ಮಂದತ್ವ, ಕಾಠಿಣ್ಯ, ಚಂಚಲತ್ವ, ಡೊಂಕತನ ಇವು ಕ್ರಮವಾಗಿ ಸ್ತ್ರೀಯರ ನಡು, ನಡಿಗೆ, ಮೊಲೆ, ನೋಟ, ಕುರುಳುಗಳಲ್ಲಿ ಇದ್ದವಲ್ಲದೆ, ಜನರ ಪ್ರಪಂಚ, ಬುದ್ಧಿ, ಕ್ರಿಯೆ, ಮನಸ್ಸು, ನಡತೆ ಇವುಗಳಲ್ಲಿ ಇದ್ದಿಲ್ಲ- ಈ ಪ್ರಕಾರ ಚೋಳರಾಜ್ಯವು ಧರ್ಮದ ನಿವಾಸಸ್ಥಾನವಾದ್ದರಿಂದ ಅಧರ್ಮವು ಸಿಟ್ಟಿನಿಂದ ಅದನ್ನು ತೊಲಗಿ, ಅದರ ವೈರಿಗಳ ಭೂಮಿಯಲ್ಲಿ ನೆಲೆಯಾಗಿರುವದು. ಇಂಥ ವೈಭವಸಂಪನ್ನವಾದ ಚೋಳರಾಜ್ಯದ ಮಧ್ಯದಲ್ಲಿ, ಸಜ್ಜನರಿಗೆ ಆಶ್ರಯವಾದ, ಮತ್ತು ವಿಷ

ವದಲ್ಲಿ ಅಮರಾವತಿಯನ್ನು ಹೋಲುವ ಧರ್ಮವತೀ ಎಂಬ ರಾಜಧಾನಿಯು ಒಪ್ಪುತ್ತಿರುವದು. ಇಂದ್ರನ ನಂದನ ವನವನ್ನು ಹೋಲುವ ಆ ರಾಜಧಾನಿಯು ಉಪವನವನ್ನು ವರ್ಣಿಸುವದು ಸುಲಭವಲ್ಲ. ಆ ವನದಲ್ಲಿ ಮಧುರಧ್ವನಿಯಿಲ್ಲದ ಕೋಗಿಲೆಗಳು ದೊರೆಯುವು, ರಾಜಹಂಸಗಳು ಅಡ್ಡಾಡದ ಸರೋವರಗಳು ಕಾಣವು, ಕಾಯಿಗಳಿಲ್ಲದ ಮಾವಿನ ಮರಗಳು ಒಪ್ಪವು, ಸವಿಮಾತುಗಳಾಡದ ಪೆಣ್ಗಿಳಿಗಳು ತೋರವು, ಭ್ರಮರಗಳಿಂದೊಪ್ಪದ ಕಮಲಗಳು ದೊರಕವು, ಹೂವೂ, ಕುಡಿಗಳೂ ಇಲ್ಲದ ಎಳೆಬಳ್ಳಿಗಳು ಮೆರೆಯುವು, ಮಂದತ್ವವಿಲ್ಲದ ಗಾಳಿಯು ಸುಳಿಯದು . ಅಂದಬಳಿಕ ಆ ವನದ ಮನೋಹರತ್ವವನ್ನೇನು ಹೇಳುವದು? ಆ ವನಮಧ್ಯದಲ್ಲಿ ಎಳೆಮುಗ್ಗೆಗಳಿಂದ ತುಂಬಿದ ಕದರುಮಲ್ಲಿಗೆಗಳೂ, ಕಮಲಗಳಿಂದ ಪೂರ್ಣವಾದ ಸರೋವರಗಳೂ, ಭ್ರಮರಗಳಿಂದ ವ್ಯಾಪ್ತವಾದ ಸೇವಂತಿಗೆಗಳೂ, ಸುಗಂಧಮಯ ಪುಷ್ಪಗಳಿಂದ ಕೂಡಿದ ಪಾದರಿಯ ಮರಗಳೂ, ಅರಗಿಳಿಗಳಿಂದ ಮುತ್ತಿದ ಮಾವಿನ ಗಿಡಗಳೂ, ಚಿಗುರೊಡೆದ ಅಶೋಕ ವೃಕ್ಷಗಳೂ ರಮ್ಯವಾಗಿ ಒಪ್ಪುವವು. ಇದಲ್ಲದೆ ಆ ವನವು ತೆಂಗು, ಬಾಳೆ, ನೇರಿಲ, ಹಲಸು, ಅಡಿಕೆ ಮೊದಲಾದ ಫಲಯುಕ್ತ ವೃಕ್ಷಗಳಿಂದ ದಟ್ಟವಾಗಿರುವದು. ಗಂಧವಹನು ಗಂಧವನ್ನೊಯ್ಯುವದಕ್ಕಾಗಿ ಮಂದಗಮನದಿಂದಲ್ಲಿ ಅಂಡಲೆಯುವನು; ಮತ್ತು ಸುಗಂಧಲೋಲುಪವಾದ ಭ್ರಮರಗಳ ಝೇಂಕಾರ ಧ್ವನಿಯು ಕಿವಿಗಳಿಗೆ ಇಂಪಾಗಿರುವದು. ಇಂಥ ಮನೋಹರವಾದ ಉಪವನದ ಒಳಗಡೆಯಲ್ಲಿ ನೀರಿನಿಂದ ತುಂಬಿದ ಅಗಳತವಿದ್ದು, ಅದು ಭಯಂಕರವೂ, ಗಂಭೀರವೂ ಆಗಿ ತೋರುವದು. ಅದರ ಒಳಗಡೆಯಲ್ಲಿ ಅತ್ಯುನ್ನತವೂ, ಅತಿ ವಿಶಾಲವೂ ಆದ ಕೋಟೆಯು ಶೋಭಿಸುವದು.

ಈ ಧರ್ಮವತೀ ಪಟ್ಟಣವು ಸೋಮ ಸೂರ್ಯ ವೀಥಿಗಳಿಂದಲೂ, ಮುತ್ತು–ರತ್ನಗಳನ್ನು ಮಾರುವವರ ಅಂಗಡಿಗಳಿಂದಲೂ, ಕಂಚುಗಾರರ ಪಸರದಿಂದಲೂ, ಪೂವಡಿಗರ ಸಾಲಿನಿಂದಲೂ ಒಪ್ಪುತ್ತಿರುವದು. ಆ ಪಟ್ಟಣದೊಳಗಿನ ಉಪ್ಪರಿಗೆಗಳು ಬಂಗಾರದವು. ಅಲ್ಲಿಯ ಶಿವಾಲಯಗಳ ಶಿಖರಗಳು ಗಗನಚುಂಬಿತಗಳಾಗಿದ್ದು, ಆ ಶಿವಾಲಯಗಳಲ್ಲಿ ಮದ್ದಲಿ, ಶಂಖ, ಕಹಳೆ, ನರ್ತಕಿಯರ ನೂಪುರ ಇವುಗಳ ಧ್ವನಿಗಳು, ವೇದಗಳ ಮಂಜುಳ ಧ್ವನಿಗಳಲ್ಲಿ ಬೆರೆತು ಶೋಭಿಸುವವು. ಧರ್ಮವತಿಯ ರತ್ನಖಚಿತವಾದ ಅರಮನೆಯು ಬಹು ಮನೋಹರವಾಗಿ ಒಪ್ಪುತ್ತಿತ್ತು. ಪಟ್ಟಣದ ರಾಜಮಾರ್ಗದಲ್ಲಿ ಮಾಂಡಲಿಕ ರಾಜಕುಮಾರರ ನೃತ್ಯಗೀತ ವಾದ್ಯಧ್ವನಿಗಳೂ, ಜಲಪಾನಕ್ಕಾಗಿ ಹೋಗಿ ಬರುವ ಆನೆಗಳ ಘಂಟಾಧ್ವನಿಗಳೂ, ವೇಶ್ಯಾಗೃಹದಿಂದ ಹೊರಹೊರಟ ವಿಟರ ಮೈಗಂಪಿಗೆರಗುವ ಭ್ರಮರಗಳ ರವಗಳೂ ಒಪ್ಪುತ್ತಿರುವವು. ಶಾಸ್ತ್ರಜ್ಞರಿಂದಲೂ, ವೇದವಿಚಾರಿಗಳಿಂದಲೂ, ಶಿವಭಕ್ತರಿಂದಲೂ, ಪತಿವ್ರತಸ್ಥರಿಂದಲೂ,ವೀರಭಟರಿಂದಲೂ, ಹಯಶಿಕ್ಷಕರಿಂದಲೂ , ಗಜಶಿಕ್ಷಕರಿಂದಲೂ , ಧನಿಕರಿಂದಲೂಯುಕ್ತವಾದ ಆ ಧರ್ಮವತೀ ಪಟ್ಟಣದಲ್ಲಿ ಪರಮೈಶ್ವರ್ಯಶಾಲಿಯೂ, ಶಿವಭಕ್ತನೂ, ಸ್ತುತ್ಯನೂ ಆದ ಸತ್ಯೇಂದ್ರಚೋಳನೆಂಬ ಹೆಸರಿನ ರಾಜನು ಸದ್ಧರ್ಮದಿಂದ ರಾಜ್ಯಪರಿಪಾಲನೆ ಮಾಡುತ್ತಿದ್ದನು.

ಆ ಸತ್ಯೇಂದ್ರಚೋಳನು ಅರಿಭಯಂಕರನೂ, ಸದಾಚಾರಿಯೂ, ಬಲಿಷ್ಠನೂ, ಯುದ್ಧಪ್ರಿಯನೂ ಆಗಿದ್ದನು. ಆತನ ಕೀರ್ತಿಯು ದಿಗಂತದಲ್ಲಿಯೂ, ಸ್ವರ್ಗಾದಿ ಲೋಕಗಳಲ್ಲಿಯೂ ಹಬ್ಬಿತ್ತು. ಆ ಮಹಾಪ್ರತಾಪಿಯ ಮುಖವು ಚಂದ್ರನನ್ನು, ವಿಶಾಲನೇತ್ರಗಳು ಕಮಲಗಳನ್ನು, ಕೆಂದುಟಿಯು ಹವಳವನ್ನು, ಕೊರಳು ಶಂಖವನ್ನು, ನಿಡಿದೋಳು ಆದಿಶೇಷನನ್ನು ಹೋಲುವವು. ಆತನ ಕೈಖಡ್ಗವು ಯಾವತ್ತು ವೈರಿರಾಜರನ್ನು ಸೋಲಿಸಿದ್ದಲ್ಲದೆ, ಆತನ ರೂಪವು ಕಾಮನನ್ನೂ, ಕೀರ್ತಿಯು ಚಂದ್ರನನ್ನೂ, ಸಂಪತ್ತು ನಾರಾಯಣನನ್ನೂ, ಪ್ರತಾಪವು ಸೂರ್ಯನನ್ನೂ, ಧೈರ್ಯವು ಪರ್ವತವನ್ನೂ, ಕ್ರೋಧವು ಯಜ್ಞೇಶ್ವರನನ್ನೂ, ಅಂತಃಕರಣವು ಸುರಗಂಗಾಪ್ರವಾಹವನ್ನೂ ಜಯಿಸಿದ್ದವು. ಈ ಭೂವರನಲ್ಲಿ ಲಕ್ಷ್ಮಿಯು ನೆಲೆಯಾಗಿದ್ದು, ಜಯಲಕ್ಷ್ಮಿಯು ಆತನನ್ನು ಬಿಡದೆ ಸೇವಿಸುತ್ತಿರುವಳು.

ಈ ಪ್ರಕಾರ ಶೋಭಿಸುತ್ತಿರುವ ಸತ್ಯೇಂದ್ರಚೋಳರಾಜನ ಪ್ರಿಯಪತ್ನಿಯು, ಅಮೃತದಂತೆ ಮಧುರವಾದ ವಾಕ್ಯಗಳುಳ್ಳವಳೂ, ಅಮೃತದಿಂದ ಯುಕ್ತವಾದ ಕೆಳದುಟಿಯುಳ್ಳವಳೂ, ಅಮೃತಕಿರಣನಾದ ಚಂದ್ರನಂತೆ ಮುಖವುಳ್ಳವಳೂ ಆಗಿ, ಅಮೃತವತಿಯೆಂಬ ಹೆಸರಿನಿಂದ ಶೋಭಿಸುವಳು. ಆ ಸತಿಯ ಸ್ವಚ್ಛವಾದ ಗಲ್ಲಗಳೂ, ಕೆಂದುಟಿಗಳೂ, ಕಪ್ಪುಕೂದಲುಗಳೂ, ನುಣುಪಾದ ಹಣೆಯೂ, ನಗೆಮೊಗವೂ, ದೊಡ್ಡ ಕಣ್ಣುಗಳೂ, ಪುಷ್ಟವಾದ ಮೊಲೆಗಳೂ, ಗಂಭೀರವಾದ ಹೊಕ್ಕುಳವೂ, ತುಂಬಿದ ತೊಗಳೂ ಮನೋಹರವಾಗಿದ್ದವು. ಇಂಥ ಮನೋಹರವಾದ ಶರೀರವನ್ನು ಹೊಂದಿರುವ ರೂಪವು, ಆ ರೂಪವನ್ನು ಶೃಂಗರಿಸುವ ಭರಯೌವನವು, ಮನೋಹರವಾದ ಆ ಯೌವನಕ್ಕೆ ತಕ್ಕ ವಿಲಾಸವು, ಆ ಸದ್ವಿಲಾಸವನ್ನು ಹೆಚ್ಚಿಸುವ ಜಾಣ್ಮೆಯು, ಆ ಜಾಣ್ಮೆಯನ್ನು ವೃದ್ಧಿಗೊಳಿಸುವ ಸದ್ಗುಣಗಳು, ಆ ಸದ್ಗುಣಗಳನ್ನು ಬೆಳಸುವ ಶೈವಸಂಪದವು ಆ ನೃಪಾಂಗನೆಗೆ ಶೋಭಿಸುವವು. ಇಂತು ರೂಪ ಯೌವನ ಸದ್ಗುಣಸಂಪನ್ನಳಾದ ಅಮೃತವತಿಯು ಕಲ್ಪವೃಕ್ಷದಂತೆ ಇದ್ದ ಸತ್ಯೇಂದ್ರಚೋಳರಾಜನನ್ನು ಆಶ್ರಯಿಸಿ ಸುಖಸಂಪದದಿಂದ ಒಪ್ಪುತ್ತಿದ್ದಳು.

ಇಂತು ಸುಶೀಲೆಯೂ, ಸುಂದರಿಯೂ ಆದ ಸತಿಯೊಡನೆ ಸುಖವನ್ನನುಭವಿಸುತ್ತಿದ್ದ ಆ ರಾಜನಿಗೆ ಶಿವಪೂಜಾತತ್ಪರನೂ, ಸ್ವಾಮಿಭಕ್ತಿಯುಳ್ಳವನೂ ಆದ ಪತಿವ್ರೋಹಿ ಎಂಬ ಮಂತ್ರಿಯು ರಾಜಕಾರ್ಯದಲ್ಲಿ ಪರಮದಕ್ಷನಾಗಿ ಸಹಾಯಕನಾಗಿದ್ದನು. ಈ ಪತಿವ್ರೋಹಿಯು ಮಂತ್ರಶಕ್ತಿಯಿಂದೊಪ್ಪುವ ನಿಜಪ್ರತಾಪದಿಂದ ಅರಸನ ಧರ್ಮವನ್ನೂ, ಕೋಶವನ್ನೂ ಬೆಳಸುವನು; ಶಿವಭಕ್ತರು ಬರಲಾಗಿ ಅವರನ್ನು ಸತ್ಕರಿಸಿ ಪೂಜಿಸುವನು; ಅರಿನೃಪರನ್ನು ತನ್ನ ಒಡೆಯನ ಚರಣ ಕಮಲಕ್ಕೆ ಆನತರಾಗ ಮಾಡುವನು. ಸತ್ಯೇಂದ್ರ ಚೋಳರಾಜನು ಪತಿವ್ರೋಹಿಯ ಈ ಸುಗುಣಗಳಿಗೆ ಮೆಚ್ಚಿ, ಆತನನ್ನು ಐಶ್ವರ್ಯಸಂಪನ್ನನನ್ನು ಮಾಡಿದನು. ತರುವಾಯ ಪತಿವ್ರೋಹಿಯು ಮಕ್ಕಳಿಲ್ಲೆಂದು ಚಿಂತಿಸುವ ತನ್ನ ಹೆಂಡತಿಯನ್ನು ಸಮಾಧಾನ ಪಡಿಸುತ್ತ, ತನ್ನ ಗುರುಗಳಾದ ಚಿನ್ನನ

ಶಿವಾಚಾರ್ಯರ ಪಾದಸೇವೆಯನ್ನು ಮಾಡಿದನು. ಆಗ ಆ ಮಹಾತ್ಮರು ಮಾಡಿದ ಪಂಚಾಕ್ಷರೀ ಮಂತ್ರದ ಉಪದೇಶದ ಮಹಿಮೆಯಿಂದ ಪತಿವ್ರೋಹಿಗೆ ಒಬ್ಬ ಸತ್ಪುತ್ರನು ಜನಿಸಲು, ಆತನು ಆ ಮಗುವಿಗೆ ಮಿತವಚನನೆಂದು ಹೆಸರಿಟ್ಟು ಪ್ರೀತಿಯಿಂದ ರಕ್ಷಿಸ ಹತ್ತಿದನು.

ಒಂದು ದಿನ ಸತ್ಯೇಂದ್ರ ಚೋಳರಾಜನು ಸಭೆಯಲ್ಲಿ ಸಿಂಹಾಸನಾರೂಢನಾಗಿರಲು, ಆತನ ರತ್ನಾಭರಣ ಕಾಂತಿಗಳು ಸಭೆಯನ್ನು ಪ್ರಕಾಶಮಯವಾಗಿ ಮಾಡಿದ್ದವು. ಮಂತ್ರಿಗಳು ಪರಿಮಿತ ಸ್ಥಾನಗಳಲ್ಲಿ ಕುಳಿತಿದ್ದರು. ಮಾಂಡಲಿಕ ರಾಜರು ಕಪ್ಪಕಾಣಿಕೆಗಳನ್ನಿತ್ತು ವಿನಯಭಯಗಳಿಂದ ಸೇವಿಸುತ್ತಿದ್ದರು. ಮೊಲೆಗಳ ಭಾರದಿಂದ ಬಾಗಿರುವ ದಿವ್ಯಾಂಗನೆಯರು ತೋಳುಗಳನ್ನು ನೆಗಹಿ ಚಾಮರಗಳನ್ನು ಬೀಸುತ್ತಿದ್ದರು. ಜಯಶಾಲಿಯಾಗೆಂದು ಬಂದಿಗಳು ಹೊಗಳುತ್ತಿದ್ದರು. ಆಗ ಆ ರಾಜಮೌಳಿಯು ಮಂತ್ರಿಶ್ರೇಷ್ಠನಾದ ಪತಿವ್ರೋಹಿಯ ಮುಖವನ್ನು ನೋಡಿ—"ಮಂತ್ರಿಯೇ, ಮೋಕ್ಷಪ್ರದವಾದ ಕಾಶಿಗೆ ಹೋಗಿ ಕಾಲಾರಿಯಾದ ವಿಶ್ವೇಶ್ವರನಿಗೆ ಗಂಗಾಜಲದಿಂದ ತುಂಬಿದ ಸಹಸ್ರ ಘಟಗಳಿಂದ ವೇದೋಕ್ತ ಪ್ರಕಾರವಾಗಿ ಅಭಿಷೇಕವನ್ನು ಮಾಡುವ ಇಚ್ಛೆಯು ನನಗಾಗಿದೆ. ಕಾರಣ ತಡಮಾಡದೆ ಸನ್ನಾಹಗೊಳಿಸೆ"ಂದು ನುಡಿದನು. ಅರಸನ ಮಾತುಗಳನ್ನು ಕೇಳಿ ಪತಿವ್ರೋಹಿಯು ಆತನ ಚರಣಕ್ಕೆರಗಿ—"ಒಡೆಯರೇ, ನಿಮ್ಮಲ್ಲಿ ದೃಢನು ನೆಲಸಿರಲು, ನೀವಿದ್ದ ಸ್ಥಳವೇ ಕಾಶಿಯಲ್ಲವೇ? ಅಂದ ಬಳಿಕ ಎಡತಾಕುವದೇಕೆ? ಗಂಗಾಜಲವನ್ನು ನೀವಿದ್ದಲ್ಲಿಗೇ ತರಿಸುವೆನು" ಎಂದು ಹೇಳಿದನು.

ದೃಢಭಕ್ತಿ:—ಇಂತು ನುಡಿದು ಪತಿವ್ರೋಹಿಯು ಧರ್ಮವತಿಯಿಂದ ಏಳುನೂರು ಗಾವುದದ ಅಂತರದ ಮೇಲಿರುವ ಕಾಶಿಯವರೆಗೆ ಅರಸರನ್ನು ಸಾಲಾಗಿ ನಿಲ್ಲಿಸಿ ಸುವರ್ಣಘಟಗಳಿಂದ ಗಂಗಾಜಲವನ್ನು ತರಿಸಿದನು. ಇದನ್ನು ಸತ್ಯೇಂದ್ರ ಚೋಳನು ನೋಡಿ ಸಂತೋಷಪಟ್ಟು ಸ್ನಾನಮಾಡಿ ಪೂಜಾಗೃಹಕ್ಕೆ ಹೋಗಿ, ವಿಭೂತಿ ರುದ್ರಾಕ್ಷಿಗಳನ್ನು ಧರಿಸಿ, ಮಾಹೇಶ್ವರರಿಂದ ಸುತ್ತುಗಟ್ಟಿದವನಾಗಿ ಮಂತ್ರಪೂರ್ವಕವಾಗಿ ಮಂಗಳಕರವಾದ ಲಿಂಗಕ್ಕೆ ಗಂಗಾಜಲದಿಂದ ಅಭಿಷೇಕವನ್ನು ಮಾಡಿದನು. ತರುವಾಯ ಆ ರಾಜಮೌಳಿಯು ಪಚ್ಚಕರ್ಪುರ, ಶ್ರೀಗಂಧ, ಕಸ್ತೂರಿ, ಕುಂಕುಮ, ಕೇಶರ ಮೊದಲಾದ ಸುಗಂಧ ದ್ರವ್ಯಗಳ ಅನುಲೇಪನದಿಂದಲೂ, ಶುಭ್ರಾಕ್ಷತೆಗಳಿಂದಲೂ, ಕಮಲನೈದಿಲೆ ಮೊದಲಾದ ಪುಷ್ಪಗಳಿಂದಲೂ, ಸುಗಂಧಯುಕ್ತವಾದ ಧೂಪದಿಂದಲೂ, ಪ್ರಕಾಶಮಯದೀಪದಿಂದಲೂ, ರುಚಿಕರವಾದ ಅಮೃತಾನ್ನದ ನೈವೇದ್ಯದಿಂದಲೂ, ಸಕರ್ಪೂರ ತಾಂಬೂಲದಿಂದಲೂ ಶಿವಪೂಜೆಯನ್ನು ವಿಧ್ಯುಕ್ತವಾಗಿ ಮಾಡಿದನು. ಇಂತು ಆ ರಾಜತಿಲಕನು ಶಶಿಮೌಳಿಯನ್ನು ಪೂಜಿಸಿ ರಾಜೋಪಚಾರಗಳನ್ನು ಸಮರ್ಪಿಸಿ, ಶರೀರವು ರೋಮಾಂಚಿತವಾಗಲು, ಆನಂದಾಶ್ರುಗಳು ಉದುರಲು, ಕಂಠವು ಗದ್ಗದವನ್ನು ಹೊಂದಲು, ಶರೀರದಲ್ಲಿ ಕಂಪವು ಹುಟ್ಟಲು, ಘರ್ಮಾಂಬುಕಣಗಳು ವ್ಯಕ್ತವಾಗಲು, ಜಾಡ್ಯವು ಹೆಚ್ಚಾಗಲು, ದೃಢತರಭಕ್ತಿಯೋಗರಸದ ಚಿತ್ತಾಬ್ಧಿಯು ಉಕ್ಕೇ

ರಲು, ಶಿವಲಿಂಗ-ಸಂಪರ್ಕಲೋಲುಪನಾಗಿ ಆ ಲಿಂಗವನ್ನು ಅಪ್ಪಿದಂತೆ ಶೋಭಿಸಿ ದನು. ಆಗ ಭಕ್ತಿಪರವಶನಾದ ಆ ಸತ್ಯೇಂದ್ರ ಚೋಳನು ಜಗದೀಶನಾದ ಶಿವನನ್ನು ಪ್ರಾರ್ಥಿಸಿದನೆಂತೆಂದರೆ—

"ಸುಖಸಮುದ್ರನೂ, ನಿರ್ಮಲನೂ, ನಿರುಪಾಧಿಕನೂ, ಮಾಯಾತೀತನೂ, ಲಿಂಗ ರೂಪನೂ, ಉಪನಿಷತ್ತುಗಳಿಗೆ ನಿಲುಕದವನೂ, ಸರ್ವವ್ಯಾಪಿಯೂ, ಸಚ್ಚಿದಾನಂದ ಸ್ವರೂಪನೂ ಆದ ಪರಮಾತ್ಮನೇ , ನೀನು ನನ್ನನ್ನು ರಕ್ಷಿಸು- ಸೃಷ್ಟಿ-ಸ್ಥಿತಿ-ಲಯಾದಿ ಕರ್ತೃವೇ, ನಿನ್ನ ಹೆದೆಯಾದ ಆದಿಶೇಷನೂ, ಧನುಸ್ಸಾದ ಮೇರುಗಿರಿಯೂ ಈ ಭೂಮಿ ಯನ್ನು ಹೊತ್ತಿರುವವು; ನಿನ್ನ ಸಾರಥಿಯಾದ ಬ್ರಹ್ಮನು ಈ ಲೋಕಗಳನ್ನು ಹುಟ್ಟಿಸಿ ರುವನು; ನಿನ್ನ ಬಾಣವಾದ ಶ್ರೀವಿಷ್ಣುವು ಆ ಲೋಕಗಳನ್ನು ರಕ್ಷಿಸುವನು; ಈ ಜಗ ತ್ತುಗಳನ್ನು ನಿನ್ನ ರಥದ ಗಾಲಿಗಳಾದ ಸೂರ್ಯ ಚಂದ್ರರು ಬೆಳಗುವರು; ನಿನ್ನ ಕುದುರೆ ಗಳಾದ ನಾಲ್ಕು ವೇದಗಳು ಬುಧರನ್ನು ಬೋಧಿಸುವವು. ಅಂದ ಬಳಿಕ ನಿನ್ನ ಮಹಿಮೆ ಯನ್ನು ಹೊಗಳಲು ಯಾರು ಸಮರ್ಥರು? ಹೇ ಮಂಗಲ ಸ್ವರೂಪನಾದ ಅಂಬಿಕಾಧ ವನೇ, ನಿನ್ನ ಅಂಘ್ರಿಗಳನ್ನು ಸ್ಮರಿಸುವವನನ್ನು ದೇವತೆಗಳು ಸ್ಮರಿಸುವರು; ನಿನ್ನ ಚರ ಣಕ್ಕೆ ನಮಿಸುವವರನ್ನು ಮುನಿಶ್ರೇಷ್ಠರು ನಮಸ್ಕರಿಸುವರು; ನಿನ್ನನ್ನು ಸ್ತುತಿಸುವವ ರನ್ನು ವೇದಗಳು ಸ್ತುತಿಸುವವು. ಪರಶಿವನೇ, ನಿನ್ನ ಎಡಗಡೆಯ ಚಂದ್ರ-ನೇತ್ರದಿಂದ ಹುಟ್ಟಿದ ಭೂಮಂಡಲವು ಬ್ರಹ್ಮಾಂಡವೆಂಬ ಹೆಸರನ್ನು ಧರಿಸಿರುವದು; ಮತ್ತು ಆ ಬ್ರಹ್ಮಾಂಡವನ್ನು ರಕ್ಷಿಸಿ, ನಿನ್ನ ಬಲಗಡೆಯ ಸೂರ್ಯನೇತ್ರವು ಮಿತ್ರನೆಂಬ ಹೆಸರನ್ನು ಪಡೆಯಿತು; ನಿನ್ನ ಮೂರನೆಯ ಅಗ್ನಿನೇತ್ರವೆಂಬ ಹಣೆಗಣ್ಣು ಆ ಬ್ರಹ್ಮಾಂಡವನ್ನು ಕಾಲಾಗ್ನಿ ರೂಪದಿಂದ ಸುಟ್ಟಿತು- ಹೀಗಿದ್ದು ಗಿರಿಜಾರಮಣನೇ, ನೀನು ನಿರ್ವಿಕಾರನೆನಿ ಸುವೆಯಲ್ಲ! ! ಭಗವಂತನೇ, ತ್ರಿಲೋಕಗಳನ್ನು ದಹಿಸುವಂಥ ಕ್ರೂರಕಾಲಕೂಟವನ್ನು ಕಂಠದಲ್ಲಿ ಧರಿಸಿ, ನೀನು ಆ ತ್ರಿಲೋಕಗಳನ್ನು ಕಾಯಲಿಲ್ಲವೇ? ಪರಮಾತ್ಮನೇ, ನಿನ್ನ ಚರಣವನ್ನು ಭಜಿಸುವವರಿಗೆ ಧರ್ಮಾರ್ಥಕಾಮಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥ ಗಳು ಪ್ರಾಪ್ತವಾಗುವವು. ಹೀಗಿದ್ದು ನನ್ನ ಮನಸ್ಸು ನಿನ್ನ ವಿಷಯದಲ್ಲಿ ನಿಶ್ಚಲವಾದ ಭಕ್ತಿ ಯನ್ನು ಹೊಂದದಕಾರಣವೇನು? ಇದೇನು ಮನಸ್ಸಿನ ಭ್ರಾಂತಿಯೋ? ಅಥವಾ ತನ್ನ ಮಗನಾದ ಕಾಮನನ್ನು ನೀನು ಕೊಂದದ್ದಕ್ಕಾಗಿ ನಿನ್ನ ಮೇಲೆ ಆ ಮನಸ್ಸು ಮಾಡುವ ಸಿಟ್ಟೋ? ತ್ರಿಗುಣಾತೀತನೇ, ಕರದಲ್ಲಿರುವ ತನ್ನ ಇಷ್ಟಲಿಂಗದಲ್ಲಿ ಮನಸ್ಸು, ಮುಖ ದಲ್ಲಿ ಪಂಚಾಕ್ಷರೀಮಂತ್ರವು, ಕೊರಳಲ್ಲಿ ರುದ್ರಾಕ್ಷಮಾಲೆಗಳು, ಹಣೆಯಲ್ಲಿ ವಿಭೂತಿಯು, ಶರೀರದಲ್ಲಿ ಗುರುಚರಣರಜವು ಇರುವ ನಿನ್ನ ಭಕ್ತನಿಗೆ ಸರಿಯಾದವನು ಅದಾವನಿರು ವನು? ನೀನು ಆತನ ಅಧೀನನಲ್ಲವೇ?

ಈ ಪ್ರಕಾರ ನುತಿಸಿ, ನಮಸ್ಕರಿಸಿ, ತಿರುಗಿ ಶಿವಲಿಂಗ-ಪೂಜೆಯನ್ನು ಸಾಂಗವಾಗಿ ರಚಿಸಿದನಂತರ ಧನಕನಕ-ವಸ್ತ್ರಮಣಿ-ಭೂಷಣಗಳಿಂದಲೂ , ನವಗಂಧ ಮಾಲ್ಯ- ವೀಟಿಕೆಗಳಿಂದಲೂ ಪ್ರೀತಿಪೂರ್ವಕವಾಗಿ ಶರಣರ ಚರಣಾಂಬುಜಗಳನ್ನು ಅರ್ಚಿಸಿದನು.

ತರುವಾಯ ಆನೃಪವರನು ಶರಣರ ಪಾದಗಳಿಗೆ ತಿರುತಿರುಗಿ ನಮಿಸಿ, ಕೈಂಕರ್ಯವನ್ನು ಹೊಂದಿ, ಅವರ ಕಾರುಣ್ಯವನ್ನು ಪಡೆದು, ಈ ಪ್ರಕಾರದ ನಿತ್ಯ ಕರ್ಮದಿಂದ ಕಾಲಕ್ರಮಣವನ್ನು ಮಾಡುತ್ತಿದ್ದನು. ಇತ್ತ ಅಂತಃಪುರದಲ್ಲಿ ಅಮೃತವತಿಯು ಒಂದು ಶುಭ ದಿವಸದ ಸುಪ್ರಭಾತ ಸಮಯದಲ್ಲಿ ಶಿವಲಿಂಗಪೂಜಾನಂತರ ಪುರಾಣವನ್ನು ಕೇಳುತ್ತಿದ್ದಳು. ಆಗ ಅದರಲ್ಲಿ ಮಾರ್ಕಾಂಡೇಯನ ಬಾಲಲೀಲೆಗಳು ಕಿವಿಗೆ ಬೀಳಲು, ಆಕೆಯು ತನಗೆ ಮಕ್ಕಳಿಲ್ಲದಿರುವದನ್ನು ನೆನೆದು, ಉಸುರ್ಗರೆದು ಪುರಾಣವು ಮುಗಿದ ನಂತರ ಸಖಿಯನ್ನು ಕುರಿತು ನುಡಿದಳೇನಂದರೆ:—"ಸಖಿಯೇ, ಚಿಕ್ಕಪ್ರಾಯದಲ್ಲಿ ಮಕ್ಕಳನ್ನು ಹಡೆದು, ಸರಳವಾದ ತೋಳುಗಳಿಂದ ಅಪ್ಪಿ, ದಿಟ್ಟಿಸಿ ನೋಡಿ, ಮುದ್ದು ಕೊಡುವದಕ್ಕೆ ನಾನು ಪುಣ್ಯಮಾಡಿರಲಿಕ್ಕಿಲ್ಲವೆ? ಶಿವಭಕ್ತಿ ಇಲ್ಲದವನ ಬಾಳೂ, ಕವಿತ್ವವಿಲ್ಲದವನ ಜಾಣ್ಮೆಯೂ, ಲಕ್ಷಣವಿಲ್ಲದ ಹೆಣ್ಣೂ, ನಡಿಗೆಯಿಲ್ಲದ ಕುದುರೆಯೂ, ತನಯನಿಲ್ಲದ ಭಾಗ್ಯವೂ ಶೋಭಿಸವು"

ಈ ಪ್ರಕಾರ ಅಮೃತವತಿಯು ಹಲವು ಬಗೆಯಾಗಿ ಹಲುಬಿ, ಹಂಬಲಿಸಿ ಭೂಷಣಗಳನ್ನು ತೆಗೆದಿಟ್ಟು, ಸುಯ್ಯಲರಿಂದ ತನುಲತೆಯು ಬಾಡಿತೆನ್ನುವಂತೆ ಇರುತ್ತಿದ್ದಳು. ಇದನ್ನು ಸಖಿಯರು ನೋಡಿ ಇದೇನೆಂದು ತಮ್ಮಲ್ಲಿ ಚಿಂತಿಸುತ್ತಿರಲು, ಅಷ್ಟರಲ್ಲಿ ಏಕಾಂತಗೃಹಕ್ಕೆ ಭೂವರನು ಬಂದು, ರಾಣಿಯ ಇರವನ್ನು ನೋಡಿದನು. ಅಮೃತವತಿಯು ಪತಿಯು ಬರವನ್ನು ನೋಡಿ, ಎಡಗಯ್ಯಿಂದ ಹಾಸಿಗೆಯನ್ನು ಒತ್ತಿ, ಸುವರ್ಣ ಕಂಕಣಗಳು ಗಲ್ಲೆಂದು ಸಪ್ಪಳ ಮಾಡಲು, ಜಾರಿದ ಸೆರಗನ್ನು ಬಲಗೈಯಿಂದ ಸಾವರಿಸುತ್ತ, ಉನ್ನತವಾದ ಸ್ತನಗಳ ತುದಿಗೆ ಇಳಿಯುವ ಮುಡಿಯನ್ನು ಕುತ್ತಿಗೆಯಿಂದ ಹಿಂದಕ್ಕೆ ನೂಕುತ್ತ ಏಳತೊಡಗಿದಳು. ಆಗ ಸತ್ಯೇಂದ್ರಚೋಳರಾಜನು ಕೈಯ್ಯನ್ನುಹಿಡಿದು ಆಕೆಯನ್ನು ಏಳಗೊಡದೆ, ಅವಳೊಡನೆ ಅರ್ಧಾಸನವನ್ನು ಸ್ವೀಕರಿಸಿ ಕುಳಿತುಕೊಂಡನು.

ಅರಸನು ರಾಣಿಯೊಡನೆ ಕುಳಿತು ಆಕೆಯನ್ನು ಪ್ರೀತಿಯಿಂದ ನೋಡಿ—"ಪ್ರಾಣಕಾಂತೆಯೇ, ನಿನ್ನ ಮುಖವು ಬಾಡಿರುವ ಕಾರಣವೇನು? ನಿನ್ನ ತುಟಿಯು ಏಕೆ ಒಣಗಿದೆ? ನೀನು ಕೈಯ್ಯನ್ನು ಗಲ್ಲದ ಮೇಲಿಟ್ಟುಕೊಂಡು ಕಣ್ಣೀರುಗಳನ್ನು ಮೊಲೆಗಳ ಮೇಲೆ ಸುರಿಸುತ್ತ, ಶ್ವಾಸ ಮಾರುತನಿಂದ ಕೋಮಲವಾದ ತುಟಿಗಳನ್ನು ಬಾಡಿಸಿರುವೆಯಲ್ಲ! ನಿನ್ನ ಕಟಿಯಲ್ಲಿ ಒಡ್ಯಾಣವೂ, ತೋರಸ್ತನಗಳ ಮೇಲೆ ತೋರಮುತ್ತಿನ ಏಕಾವಳಿಯ ಹಾರವೂ, ನುಣ್ಗಲ್ಲಗಳ ಮೇಲೆ ಮಕರಿಕಾ ಪತ್ರವೂ, ಹಣೆಯಲ್ಲಿ ವಿಭೂತಿಯು ಗೆರೆಗಳೂ ಇಲ್ಲವೇಕೆ? ಮೃಗಾಕ್ಷಿಯೇ, ನಿನ್ನ ಚಿಂತೆಯ ನಿಜವಾದ ಕಾರಣವನ್ನು ತಡಮಾಡದೆ ಹೇಳು. ಈ ಚಿಂತಾಭಾರವು ನಿನಗೆ ಯಾರಿಂದ ಆಯಿತು.

ಇಂತು ಅರಸನು ನುಡಿಯಲು, ಓರ್ವ ಗೆಳತಿಯು ಕರಗಳನ್ನು ಮುಗಿದು—"ಸಾರ್ವಭೌಮನೇ, ದೇವಿಯುವರ ಚಿಂತೆಯ ಕಾರಣನ್ನು ಚೆನ್ನಾಗಿ ಕೇಳಬೇಕು. ದೇವಿಯವರು ಮಾರ್ಕಾಂಡೇಯ ಪುರಾಣದಲ್ಲಿ ಮಾರ್ಕಾಂಡೇಯನ ಬಾಲಲೀಲೆಗಳನ್ನು ಕೇಳಿ, ತಮಗೆ ಮಕ್ಕಳಿಲ್ಲೆಂಬ ಚಿಂತೆಯನ್ನು ಹೊಂದಿರುವರು. ರಾಜಶ್ರೇಷ್ಠನೇ, ಶರೀರವೆಂಬ ಬಳ್ಳಿಗೆ

ಫಲವಾವುದು? ಸುತನಲ್ಲವೆ? ಆ ಸುತನಿಲ್ಲದ್ದರಿಂದ ತನುವಲ್ಲಿಯೂ ವ್ಯರ್ಥವೆಂಬದನ್ನು ತಿಳಿದು ದೇವಿಯುವರ ಮನಸ್ಸು ನೊಂದಿರುವದು."

ಗೆಳತಿಯ ಮಾತುಗಳನ್ನು ಕೇಳಿ ಅರಸನು ಚಿಂತೆಯನ್ನು ತಾಳಿ ತನ್ನ ಹೆಂಡತಿಯನ್ನು ಕುರಿತು ನುಡಿದನೇನಂದರೆ—"ಚಂಚಲಾಕ್ಷಿಯೇ, ಶಿವಪೂಜಾಸಕ್ತನೂ, ಶಿವಭಕ್ತಸ್ತೋಮದ ಬಂಧುವೂ ಆದ ಮಗನನ್ನು ನನ್ನ ಮನಸ್ಸಾದರೂ ಬಯಸುವದು. ಎದುರಿಗೆ ಕಲ್ಪವೃಕ್ಷವಿರಲು, ಐಶ್ವರ್ಯವನ್ನು ಪಡೆಯುವದು ಆಶ್ಚರ್ಯವಲ್ಲ. ಅದರಂತೆ ಇಷ್ಟಾರ್ಥಪ್ರದರಾದ ನಮ್ಮ ಗುರೂತ್ತಮ ಚಿದ್ಘನ ಶಿವಾಚಾರ್ಯರೆಂಬ ಯೋಗೀಂದ್ರರಿಂದ ನಮ್ಮ ಈ ಮನೋದಯವು ಸುಲಭವಾಗಿ ನೆರವೇರುವದು. ನೀನು ಚಿಂತೆಯನ್ನು ಮಾಡದೆ, ಸ್ವಸ್ಥ ಮನಸ್ಸಿನಿಂದ ಶಿವಪೂಜೆಗೆಯ್ಯುತ್ತ, ದಾನಧರ್ಮಗಳನ್ನು ಮಾಡುತ್ತಿರು-ಅಂದರೆ ನಿನ್ನ ಕೋರಿಕೆಯು ಸಫಲವಾಗುವದು.

ಈ ಪ್ರಕಾರ ರಾಜನು ರಾಣಿಯನ್ನು ಸಂತಯಿಸುತ್ತಿರಲು, ಆ ರಾಜ ದಂಪತಿಗಳ ಮನೋದಯವನ್ನು ಪೂರ್ಣ ಮಾಡುವದಕ್ಕಾಗಿ ಪುಣ್ಯವು ಆಕಾರಗೊಂಡು ಬರುತ್ತದೋ ಅನ್ನುವಂತೆ, ಚಿದ್ಘನ ಶಿವಾಚಾರ್ಯರು ಅಲ್ಲಿಗೆ ಬಂದರು. ಅರಸನು ಅವರನ್ನು ವಿಭವದಿಂದ ಎದುರ್ಗೊಂಡು ಕರತಂದು, ಮಣಿಖಚಿತವಾದ ಆಸನದ ಮೇಲೆ ಕುಳ್ಳಿರಿಸಿ ಪೂಜಿಸಿ ಪ್ರಾರ್ಥಿಸಿದನು. ಚಿದ್ಘನ ಶಿವಾಚಾರ್ಯರು ಅರಸನ ಭಕ್ತಿಗೆ ಮೆಚ್ಚಿ—"ಎಲೈ ನೃಪವರನೇ, ನಿನ್ನ ಸತ್ಕಾರಕ್ಕೂ, ಪೂಜೆಗೂ ನಾವು ಪ್ರಸನ್ನರಾದೆವು. ನಿನ್ನ ಮನೋದಯುಗಳನ್ನರುಪು, ಅವನ್ನು ನಾವು ನೆರವೇರಿಸುವೆವು." ಅನ್ನಲು ಸತ್ಯೇಂದ್ರಚೋಳನು ಭಕ್ತಿಪರವಶನಾಗಿ ಪುತ್ರಕಾಮನವನ್ನು ಮರೆತು—"ಗುರುವರ್ಯರೇ, ನಿಮ್ಮ ಮುಖದಿಂದ ನಿರ್ಮಲವಾದ ಶಿವಲೀಲೆಗಳನ್ನು ಕೇಳಬೇಕೆಂದು ನನ್ನ ಮನಸ್ಸು ಬಯಸುತ್ತದೆ. ಆದ್ದರಿಂದ ದಯಮಾಡಿ ಆ ಲೀಲೆಗಳನ್ನು ನನಗೆ ಹೇಳಬೇಕೆಂದನು. ಆಗ ಚಿದ್ಘನ ಶಿವಾಚಾರ್ಯರು ಅರಸನ ಭಕ್ತಿಗೆ ಮೆಚ್ಚಿ—"ರಾಜಲಲಾಮನೇ, ಇಷ್ಟಾರ್ಥ ಪ್ರದಗಳಾದ ಶಿವಲೀಲೆಗಳನ್ನು ಸಂತೋಷದಿಂದ ಹೇಳುವೆವು; ಚಿತ್ತಗೊಟ್ಟು ಕೇಳು" ಎಂದು ನುಡಿದು ಮಂಗಳಕರಗಳಾದ ಇಪ್ಪತ್ತೈದು ಶಿವಲೀಲೆಗಳನ್ನು ಹೇಳಿದರು.

ಈಶ್ವರ ಪ್ರಸಾದ:—ಚಿದ್ಘನ ಶಿವಾಚಾರ್ಯರು ಶಿವಚರಿತ್ರಗಳನು ಹೇಳಿ ಸತ್ಯೇಂದ್ರಚೋಳರಾಜನನ್ನು ಕುರಿತು—"ಭೂವರನೇ, ಈ ಚರಿತ್ರಗಳನ್ನು ಕೇಳುವವರು ಸಕಲ ಇಷ್ಟಾರ್ಥಗಳನ್ನು ಪಡೆಯುವರು" ಅನ್ನಲು, ಅರಸನು ಅವರ ಚರಣಕ್ಕೆರಗಿ "ಗುರುವರ್ಯರೇ, ತಮ್ಮಿಂದ ಶಿವಚರಿತ್ರಗಳನ್ನು ಕೇಳಿ, ಕೃತಾರ್ಥನಾದೆನು" ಎಂದು ಹೇಳಿ ಪತಿಮೋಹಿಯೊಡನೆ ಆನಂದದಿಂದ ಕುಳಿತಿದ್ದನು. ಅಷ್ಟರಲ್ಲಿ ಅಮೃತವತೀ ಮಹಾದೇವಿಯು ಅಲ್ಲಿಗೆ ಬಂದು, ಸುಕುಮಾರಾಂಗವು ಬಳುಕುತ್ತಿರಲು, ಗುರುಗಳ ಚರಣಕ್ಕೆರಗಿದಳು. ಚಿದ್ಘನ ಶಿವಾಚಾರ್ಯರು ಆಕೆಯನ್ನು ಪ್ರೀತಿಯಿಂದ ಹಿಡಿದೆತ್ತಿ ಶಿವನನ್ನು ಸ್ಮರಿಸಿ ಆಕೆಗೆ ಪಂಚಾಕ್ಷರೀ ಮಂತ್ರವನ್ನು ಉಪದೇಶಿಸಿದರು. ಇಂತು ಅಮೃತವತಿಯು ಗುರುಮಂತ್ರೋಪದೇಶದಿಂದ ಪರಮ ಸಮಾಧಾನ ಹೊಂದಿರಲು, ಗುರುಗಳು ನುಡಿದರೇನಂದರೆ—

"ತರುಣಿಯೇ, ನಿನ್ನ ಪುಣ್ಯೋದರದಲ್ಲಿ ಸೂರ್ಯವಂಶ-ವರ್ಧಕನಾದ ಓರ್ವ ಕುಮಾರನು ಹುಟ್ಟುವನು- ಈ ಪಂಚಾಕ್ಷರೀ ಮಂತ್ರವನ್ನು ದಿನಾಲು ಜಪಿಸುತ್ತಿರು, ನಮ್ಮ ನುಡಿಯು ಸಟೆಯಾಗಲರಿಯದು."

ಗುರುಗಳಾಡಿದ ಮಾತುಗಳನ್ನು ಕೇಳಿ, ಅರಸನೂ, ಪತಿವ್ರೋಹಿಮಂತ್ರಿಯೂ ಆಚ್ಚರಿಗೊಳ್ಳುತ್ತಿರಲು, ಅಮೃತವತಿಯು ಮನಸ್ಸಿನಲ್ಲಿ ಸಂತೋಷಪಟ್ಟು, ಪತಿಯ ಮುಖವನ್ನು ಕಣ್ಣೊನೆಯಿಂದ ನೋಡಿ ಆನಂದ ಪರವಶಳಾದಳು. ಚಿದ್ಘನ ಶಿವಾಚಾರ್ಯರು ಈ ಪ್ರಕಾರ ಆ ದಂಪತಿಗಳ ಅಭೀಷ್ಟವನ್ನಿತ್ತು, ಅವರ ಅನುಮತಿಯಿಂದ ಸ್ವದೇಶಕ್ಕೆ ತೆರಳಿದರು. ಇತ್ತ ಆ ರಾಜದಂಪತಿಗಳು ಶಿವಪೂಜಾಸಕ್ತರಾಗಿ ಭಕ್ತಿಪೂರ್ವಕ ಪಂಚಾಕ್ಷರೀ ಮಂತ್ರವನ್ನು ಜಪಿಸುತ್ತಿರಲು, ಆ ಮಂತ್ರಪ್ರಭಾವದಿಂದ ಅಮೃತವತಿಯು ಶುಭ ಮುಹೂರ್ತದಲ್ಲಿ ಪುಣ್ಯಗರ್ಭವನ್ನು ಧರಿಸಿದಳು. ಆಗ ಆಕೆಯ ಹೊಟ್ಟೆಯ ಮೇಲಿನ ತ್ರಿವಳಿಗಳು ಮಾಜಿದವು. ಮುಖವು ಬಿಳುಪಾಯಿತು. ನಾಭಿಯು ಗಂಭೀರತೆಯುಳಿದು ಶೋಭಿಸಿತು. ವಿಲಾಸಗಮನವು ಮಂದತ್ವವನ್ನು ಹೊಂದಿತು. ಕುಚಾಗ್ರಗಳು ನಸುಗಪ್ಪಾದವು. ಸೂಕ್ಷ್ಮೋದರವು ಬೆಳೆಯುಹತ್ತಿತು. ಅರಸನು ಸತಿಯ ಈ ಪುಣ್ಯಗರ್ಭಲಾಂಛನಗಳನ್ನು ನೋಡಿ ನಲಿಯುತ್ತಿರಲು, ನವಮಾಸಗಳು ಪೂರ್ಣವಾಗಿ, ಆಕೆಯು ಶುಭಮುಹೂರ್ತದಲ್ಲಿ ಪುತ್ರನನ್ನು ಹಡೆದಳು. ಆಗ ಶಿವಪೂಜಕರ ಬಲಗಣ್ಣು ಹಾರಿತು. ಕೈಲಾಸಾದ್ರಿಯಲ್ಲಿ ಶಂಕರನು ನಲಿದನು. ಭೂದೇವಿಯು ಉತ್ಸಾಹಪಟ್ಟಳು. ಇಂದ್ರಾದಿ ದೇವತೆಗಳು ಸಂತೋಷ ಹೊಂದಿದರು. ಪ್ರಜೆಗಳು ಉತ್ಸಾಹಗೊಂಡರು. ಅರಸನ ಬಂಧುಗಳ ದಯಾವಾರಿಧಿಯು ಉಕ್ಕೇರಿತು. ಓರ್ವ ಪ್ರತಿಹಾರಿಯು ಉತ್ಸವದಿಂದ ಸತ್ಯೇಂದ್ರಚೋಳನ ಒಡ್ಡೋಲಗಕ್ಕೆ ಬಂದು, ಪುತ್ರನು ಜನಿಸಿದ ಶುಭವಾರ್ತೆಯನ್ನು ಅರಸನಿಗರುಹಿದಳು. ಆಗ ಸತ್ಯೇಂದ್ರಚೋಳನು ಪರಮಾನಂದಪಟ್ಟು ಪ್ರತಿಹಾರಿಗೆ ಅಮೂಲ್ಯ ವಸ್ತ್ರಾಭರಣಗಳನ್ನು ಉಚಿತವಾಗಿ ಕೊಟ್ಟು, ಪುತ್ರನನ್ನು ನೋಡುವದಕ್ಕಾಗಿ ಹೊರಟನು. ಸೂತಿಕಾಗೃಹಾಭಿಮುಖನಾದ ಅರಸನು ಸಡಗರಗೊಳ್ಳುವ ವಿಲಾಸಿನಿಯರನ್ನು, ಗುಡಿಗಟ್ಟುವ ಪುರಜನರನ್ನು, ಎಡತಾಕುವ ಬಂಧುಜನರನ್ನು, ಶಿವಾಲಯಕ್ಕೆ ಒಯ್ಯುವ ಬಾಗಿನಗಳನ್ನು, ಹರಿಸುವ ಮಾಹೇಶ್ವರರನ್ನು ನೋಡಿ ಸಂತೋಷಬಡುತ್ತ ಸೂತಿಕಾಗೃಹವನ್ನು ಹೊಕ್ಕನು. ಆಗ ಕುಲವೃದ್ಧೆಯರು ಆತನಿಗೆ ಕುಮಾರನನ್ನು ತೋರಿಸಲು, ಸುಧಾಕರನನ್ನು ಕಂಡು ಸುಧಾಬ್ಧಿಯು ಉಕ್ಕೇರುವಂತೆ, ಸತ್ಯೇಂದ್ರಚೋಳನು ಮಗನನ್ನು ನೋಡಿ, ಉಬ್ಬಿ ಶಿವಪ್ರಸಾದದಮಹಿಮೆಯನ್ನು ವಿಚಾರಿಸಿ ಮನಸ್ಸಿನಲ್ಲಿ ಆನಂದವನ್ನು ಹೊಂದಿದನು. ಆಗ ಮಾಹೇಶ್ವರ ಪರಿವ್ರತರಾದ ಗುರುಗಳು ಬಂದು ಆ ಶಿಶುವಿಗೆ ಶಿವಮಂತ್ರ ಜಲದಿಂದ ಶೇಚನಂಗೆಯ್ದು ಹರಿಸುತ್ತ, ಹಣೆಗೆ ವಿಭೂತಿಯನ್ನು ಹಚ್ಚಿ, ಶೈವಮಂತ್ರಗಳಿಂದ ಪರಿಶುದ್ಧ ಪ್ರಭುಲಿಂಗವನ್ನು ಧಾರಣಂಗೆಯ್ದು, ಜಾತಕರ್ಮವನ್ನು ಮಾಡಿಸಿದರು. ಹರಮಂತ್ರೋದ್ಭವನಾದ ಈ ಕುಮಾರನು ಮಂತ್ರಪ್ರಭಾವದಿಂದ ರಾಜಸ್ತೋಮದಲ್ಲಿ ಅಗ್ಗದ ಕೀರ್ತಿಯನ್ನು ಸಂಪಾದಿಸುವನೆಂದು ತಿಳಿದು

ಆತನಿಗೆ ರಾಜಶೇಖರನೆಂಬ ಹೆಸರನ್ನಿಡುವದಕ್ಕೆ ಹೇಳಿ, ಆ ಗುರುಗಳು ಪರಮೋತ್ಸಾಹದಿಂದ ಹೊರಟು ಹೋದರು. ಅರಸನು ಪುತ್ರೋತ್ಸಾಹದ ಆನಂದದಿಂದ ಮಾಹೇಶ್ವರರನ್ನು ಅನೇಕ ದಾನ-ಧರ್ಮಗಳಿಂದ ತೃಪ್ತಿಪಡಿಸಿ, ಶಿವಚರಿತ್ರಗಳನ್ನು ಕೇಳಿ, ಪರಿತುಷ್ಟ ಹೃದಯನಾದನು. ಬಳಿಕ ಹನ್ನೆರಡನೆಯ ದಿವಸ ಆ ಶಿಶುವಿಗೆ ರಾಜಶೇಖರನೆಂಬ ನಾಮಕರಣವನ್ನು ಮಾಡಿದರು. ರಾಜಶೇಖರನು ಪೂರ್ವಾದ್ರಿಯಲ್ಲಿ ಬೆಳೆಯುವ ಬಾಲಾರ್ಕನಂತೆ, ಸತ್ಯೇಂದ್ರನ ಅಂತಃಪುರದಲ್ಲಿ ದಿನದಿನಕ್ಕೆ ಅಭಿವೃದ್ಧಿಯನ್ನು ಹೊಂದುತ್ತ, ತನ್ನ ಬಾಲಲೀಲೆಗಳಿಂದ ತಾಯಿ ತಂದೆಗಳ, ಹಾಗೂ ಪರಿಜನ-ಪುರಜನ-ಬಂಧುಜನರ ಮನಸ್ಸನ್ನು ಆನಂದಗೊಳಿಸಹತ್ತಿದನು.

ಈ ಪ್ರಕಾರ ಬೆಳೆಯುತ್ತಿರಲು, ಸತ್ಯೇಂದ್ರಚೋಳನು ರಾಜಶೇಖರನನ್ನು ಆತನ ಓರಿಗೆಯುವನಾದ ಮಿತವಚನನೆಂಬ ಮಂತ್ರಿ-ಕುವರನೊಡನೆ ಶುಭ ಮುಹೂರ್ತದಲ್ಲಿ ಸದ್ಗುರುಗಳೆಡೆಯಲ್ಲಿ ಓದಲಿಟ್ಟನು. ಬುದ್ಧಿಶಾಲಿಗಳಾದ ಅವರಿಬ್ಬರು ಕುಮಾರರು ಸಕಲಶಾಸ್ತ್ರಗಳನ್ನೂ, ಶಸ್ತ್ರಾಸ್ತ್ರ ವಿದ್ಯೆಗಳನ್ನೂ, ಗಜ, ಅಶ್ವ ಮೊದಲಾದ ವಾಹನಾರೋಹಣ ವಿದ್ಯೆಗಳನ್ನೂ ಕಲಿತರು. ಕ್ಷೀರಸಾಗರಕ್ಕಿಲ್ಲದ ಕಲೆಯು ಚಂದ್ರನಲ್ಲಿರುವಂತೆ, ಗುರುಗಳಲ್ಲಿಲ್ಲದ ಕಲೆಯು ಅಖಿಲ ರಾಜವಿದ್ಯಾ-ಪರಿಣತರಾದ ಈ ಈರ್ವರು ಕುಮಾರರಲ್ಲಿರುವದೆಂದು ವಿಬುಧರು ಕೊಂಡಾಡಹತ್ತಿದರು. ಈ ರಾಜಶೇಖರ-ಮಿತವಚನರು, ಚರಿತ್ರ-ವಯಸ್ಸು-ಕೀರ್ತಿ-ವಿದ್ಯೆ-ರೂಪ-ಗುಣ ಇವುಗಳಿಂದ ಸಮಾನರಾಗಿ, ನೋಡುವವರಿಗೆ ಬಂಧುಗಳಂತೆ ತೋರುವರು. ರಾಜದಂಪತಿಗಳು ಇವರೀರ್ವರಲ್ಲಿ ಭೇದವನ್ನು ಎಷ್ಟುಮಾತ್ರವೂ ಮಾಡುತ್ತಿದ್ದಿಲ್ಲ. ಸಕಲ ಜನಾನಂದಕರರಾದ ಇವರೀರ್ವರು ಕುಮಾರರಲ್ಲಿ ಮಿತವಚನನಿಗೆ ಯೌವನವೂ, ರಾಜಶೇಖರನಿಗೆ ಬಾಲ್ಯವಿಮೋಚನವೂ ಪ್ರಾಪ್ತವಾಗಿರಲು, ಅವರ ಗುರುಗಳಾದ ಚಿದ್ಘನ ಶಿವಾಚಾರ್ಯರು ಉತ್ಸಾಹದಿಂದ ಬಂದು ಅವರನ್ನು ನೋಡಿ, ಮನಸ್ಸಿನಲ್ಲಿ ಸಂತೋಷಬಟ್ಟು, ಅವರಿಗೆ ಶಿವದೀಕ್ಷೆಯನ್ನು ಕೊಟ್ಟು, ಪಾವನವಾದ ಶಿವತತ್ವವನ್ನು ತಿಳುಹಿ, ಅವರನ್ನು ಲಿಂಗಪೂಜಕರನ್ನು ಮಾಡಿದರು. ಚಿದ್ಘನ ಶಿವಾಚಾರ್ಯರು ಇಂತು ದೀಕ್ಷೆಯನ್ನು ಕೊಟ್ಟು, ಪಂಚಾಕ್ಷರೀ ಮಂತ್ರವನ್ನು ಉಪದೇಶಿಸಿ, ಕೃಪಾರಸಭರ ಕಟಾಕ್ಷದಿಂದ ಆ ಕುಮಾರರನ್ನು ನೋಡಿ, ಪಂಚಾಕ್ಷರೀ ಮಂತ್ರದ ಮಹಿಮೆಯನ್ನು ಹೇಳತೊಡಗಿದರು. "ಎಲೈ ಕುಮಾರಕರೇ, ಈ ಪಂಚಾಕ್ಷರೀಮಂತ್ರವು ಕೋಟಿ ಮಂತ್ರಗಳಿಗೆ ತವರ್ಮನೆಯಾಗಿರುವದು. ಇದು ಶೈವಶಾಸ್ತ್ರವೆಂಬ ವೃಕ್ಷದ ಬಿತ್ತೆಯೂ, ಜ್ಞಾನವೆಂಬ ಸ್ತ್ರೀಯ ಉಜ್ವಳವಾದ ಕನ್ನಡಿಯೂ, ಮುಕ್ತಿಕಾಂತೆಯ ಶಿರೋಮಣಿಯೂ, ಪುರಾತನರಾದ ಆರ್ಯರ ಅಗ್ಗದ ನಿಧಿಯೂ, ಮಹಾ ಮುನಿಗಳ ಚಿತ್ತಕಮಲಕ್ಕೆ ಭ್ರಮರವೂ ಆಗಿರುವದು. ಶರೀರವನ್ನು ಕಷ್ಟಪಡಿಸದೆ, ಅತಿ ದೂರ ಹೋಗದೆ, ಪ್ರಯತ್ನಪೂರ್ವಕವಾಗಿ ಮನಸ್ಸನ್ನು ನಿಗ್ರಹಮಾಡದೆ, ಪರ್ವತವನ್ನು ಮೆಟ್ಟದೆ, ಕಂದಮೂಲಗಳನ್ನು ಭಕ್ಷಿಸದೆ, ಅರಣ್ಯದಲ್ಲಿ ನಿಲ್ಲದೆ, ಮೆಲ್ಲಮೆಲ್ಲನೆ ಉಚ್ಚರಿಸುವವರಿಗೆ ಈ ಷಡಕ್ಷರಾತ್ಮಕವಾದ ಮಂತ್ರವು ಮುಕ್ತಿಯನ್ನು ಕೊಡುವದು. ಅಂದಬ

ಳಿಕ ಇದರ ಮಹಿಮೆಯನ್ನು ವರ್ಣಿಸುವವನಾವನು ? ಪಂಚಾಕ್ಷರಮಂತ್ರ-ಬೀಜದಿಂದ ಶಾಖಾ-ಪಲ್ಲವ-ಫಲಯುಕ್ತವಾದ ವೇದವೃಕ್ಷವು ಶಿವನ ಚಂದ್ರಬಿಂಬದಿಂದ ಹುಟ್ಟಿರುವದು. ಶ್ರುತಿ-ಸ್ಮೃತಿ-ಪುರಾಣಗಳಲ್ಲಿ ಶ್ರುತಿಗಳೇ ಶ್ರೇಷ್ಠವಾದವುಗಳು, ಆ ಶ್ರುತಿಗಳಲ್ಲಿ ಶತರುದ್ರೀಯವು ಅತಿಶಯವಾದದ್ದು. ಆ ಶತರುದ್ರೀಯದಲ್ಲಿ ಪಂಚಮುಖಪರ ಮಂತ್ರವು ಅತ್ಯಂತ ಶ್ರೇಷ್ಠವು. ಈ ಷಡಕ್ಷರೀ ಮಂತ್ರವೇ ಶತಮನ್ಯು-ಉಪಮನ್ಯು ಮುನಿಗಳಿಗೆ ಅಮೃತವನ್ನು ಕೊಟ್ಟಿರುವದು. ದೇವತೆಗಳಿಗೆ ಕಾಮಿತವಸ್ತುವನ್ನು ಕಾಮಧೇನುವೂ, ಚಿಂತಿಸಿದ್ದನ್ನು ಚಿಂತಾಮಣಿಯೂ, ಕಲ್ಪಿಸಿದ್ದನ್ನು ಕಲ್ಪವೃಕ್ಷವೂ ಈಯುತ್ತಿರಲು, ಈ ಪಂಚಾಕ್ಷರೀ ಮಂತ್ರವು ಕಾಮಿತ, ಚಿಂತಿತ, ಕಲ್ಪಿತ ಇಷ್ಟಗಳನ್ನು ಈಯುವದಲ್ಲದೆ, ಇವೆಲ್ಲವನ್ನು ಮೀರಿದ ಉದ್ದಾಮವಾದ ಮೋಕ್ಷಪದವನ್ನು ಸಹ ಕೊಡುವದು. ಅಂದಬಳಿಕ ಇದರ ಮಹಿಮೆಯನ್ನೇನು ವರ್ಣಿಸುವದದೆ? ಪ್ರಾಚೀನರ ಮತದಿಂದ ಈ ಪಂಚಾಕ್ಷರೀ ಮಂತ್ರವು ಮುಕ್ತಿಕಾಂತೆಯ ತಾಯಿಯೂ, ಭಕ್ತಿಯುವತಿಯ ಗೆಳತಿಯೂ, ಶರಣರೆಂಬ ಸ್ತ್ರೀಗೆ ಶಿವನನ್ನು ಎಳದುತರುವ ದೂತಿಯೂ ಆಗಿರುವದು. ಅಂದಬಳಿಕ ಇದಕ್ಕೂ ಹೆಚ್ಚಿನದೇನು ಬೇಕಾಗಿರುವದು? ಈ ಮಂತ್ರ ಮಹಿಮೆಯನ್ನು ಶೇಷ-ಬ್ರಹಸ್ಪತಿ-ಬ್ರಹ್ಮರು ವರ್ಣಿಸಲು ಅಶಕ್ತರಾಗಿರಲು, ನರರ ಪಾಡೇನು? ಆದ್ದರಿಂದ ಇದನ್ನು ನಂಬಿ ಜಪಿಸಿದವರಿಗೆ ನಿರ್ಮಳವಾದ ಶಿವಪದವು ದೊರೆಯುವದು; ಬೇರೆಮಾರ್ಗದಿಂದ ಶಿವಪದವು ದೊರೆಯುವದೆಂಬ ಮಾತು ಆಕಾಶದ ಹೂವಿನಂತೆ ಸಟೆಯಾಗಿರುವದು. ಚರಗಣಗಳ ಚರಣಾಂಬುವನ್ನು ಧರಿಸಿ, ಅವರ ಘನವಾದ ಶೇಷವನ್ನು ಕೈಕೊಂಡು, ಶಿವ ಶರಣರನ್ನು ವಿನಯದಿಂದ ಮನ್ನಿಸಿ, ಸಂತೋಷದಿಂದ ವಿಭೂತಿ ರುದ್ರಾಕ್ಷಗಳನ್ನು ಶರೀರದಲ್ಲಿ ಧರಿಸಿ, ತನ್ನ ಗುರುಹಿರಿಯರ ಪೂಜೆಯನ್ನು ಮಾಡಿ, ಲಿಂಗವನ್ನು ಭಜಿಸುವವರಿಗೆ ಈ ಪಂಚಾಕ್ಷರೀ ಮಂತ್ರವು ಸಿದ್ಧಿಸುವದು."

ಈ ಪ್ರಕಾರ ಚಿದ್ಘನ ಶಿವಾಚಾರ್ಯರು ಮಂತ್ರಮಹಿಮೆಯನ್ನು ಯಥಾಸಾಂಗವಾಗಿ ವಿವರಿಸಲು, ನೃಪತನಯ-ಮಂತ್ರಿಕುವರರ ಹರ್ಷಾಬ್ಧಿಯು ಉಕ್ಕೇರಿತು, ರೋಮಾಂಚಗಳು ಉತ್ಪನ್ನವಾದವು, ಆನಂದಾಶ್ರುಗಳು ಉದುರಿದವು, ಮೈ ಬೆವರೊಡೆಯಿತು. ಆಗ ಅವರೀರ್ವರೂ ಗುರುವಿಗೆ ಸಾಷ್ಟಾಂಗವೆರಗಿ ಹಲವು ರೀತಿಯಿಂದ ಸ್ತುತಿಸಿದರು. ಚಿದ್ಘನ ಶಿವಾಚಾರ್ಯರು ಸಂತುಷ್ಟರಾಗಿ, "ಪಂಚಾಕ್ಷರೀಮಂತ್ರವು ನಿಮ್ಮನ್ನು ರಕ್ಷಿಸಲಿ" ಎಂದು ಅವರನ್ನು ಆಶೀರ್ವದಿಸಿ, ಅವರ ತಂದೆಗಳಿಂದ ಪೂಜಿತರಾಗಿ ತಮ್ಮ ದೇಶಕ್ಕೆ ತೆರಳಿದರು.

ಮಹತ್ವಾಕಾಂಕ್ಷೆ :—ತರುವಾಯ ಸತ್ಯೇಂದ್ರ ಚೋಳರಾಜನು ಮಿತವಚನನಿಗೆ ಸತ್ಕುಲ ಪ್ರಸೂತೆಯೂ, ತಕ್ಕ ವಯಸ್ಸುಳ್ಳವಳೂ, ಉನ್ನತವಾದ ಮತಿಯುಳ್ಳವಳೂ ಆದ ಕಮಲಲೋಚನೆಯೆಂಬ ಮನೋಹರಿಯಾದ ಕನ್ಯೆಯೊಡನೆ ಲಗ್ನವನ್ನು ಮಾಡಿದನು. ಮಿತವಚನನು ಕಮಲಲೋಚನೆಯ ಮುಗುಳುನಗೆಯಿಂದ ಯುಕ್ತವಾದ ಮುಖಕಮಲದ ಸುವಾಸನೆಯನ್ನು ಘ್ರಾಣದಿಂದಲೂ, ವಾಣಿಯ ಸೌಭಾಗ್ಯವನ್ನು ಕಿವಿಗಳಿಂದಲೂ,

ಸುಕುಮಾರಾಂಗದ ಸ್ಪರ್ಶವನ್ನು ದೇಹದಿಂದಲೂ, ಸುಂದರ ರೂಪವನ್ನು ಕಣ್ಣುಗಳಿಂದಲೂ, ಅಧರಾಮೃತವನ್ನು ಜಿಹ್ವೆಯಿಂದಲೂ ಉಪಭೋಗಿಸುತ್ತ ಸಂಸಾರಸುಖವನ್ನು ಅನುಭವಿಸಹತ್ತಿದನು. ಇತ್ತ ರಾಜಶೇಖರನನ್ನು ಯೌವನವು ಸಾರಲು, ಅವನ ಸುಂದರಾಂಗವು ನೇತ್ರಾನಂದವನ್ನೀಯಹತ್ತಿತು. ರಾಜಸೇಖರನು ಒಂದು ಶುಭದಿವಸದಲ್ಲಿ ರಾಜಕುಮಾರರಿಂದೊಡಗೂಡಿ ತಂದೆಯ ಪಾದಸೇವೆಯನ್ನು ಮಾಡಲೆಳಿಸಿ ಒಡ್ಡೋಲಗವನ್ನು ಹೊಕ್ಕನು. ಆಗ ಆ ಯುವರಾಜನು ತನ್ನನ್ನು ಕಂಡು ಮೇಲಕ್ಕೇಳುವ ಮಾಂಡಲಿಕರಾಜರನ್ನು ಕೈಸನ್ನೆಯಿಂದ ಏಳಗೊಡದೆ, “ಹೋ, ಎದುರಾಗಿರಿ” ಎಂದು ಅನ್ನುವ ಬಂದಿಜನರನ್ನು ಕಣ್‌ಸನ್ನೆಯಿಂದ ಮಾತಾಡಗೊಡದೆ, ಬಹಳ ಸಂತೋಷಹೊಂದಿ, ಮುದಕ್ಕೆ ಇಂಬುಗೊಡದೆ ತಂದೆಯ ಚರಣಕ್ಕೆರಗಿದನು. ಸತ್ಯೇಂದ್ರಚೋಳರಾಜನು ಮಗನನ್ನು ಹಿಡಿದೆತ್ತಿ ಅರ್ಧಾಸನವನ್ನು ಕೊಡಲು, ರಾಜಸೇಖರನು ಸಮ್ಮತಿಸದೆ ತಂದೆಯ ಚರಣದೆಡೆಯಲ್ಲಿ ವಿನಯದಿಂದ ಕುಳಿತನು. ಆಗ ಅರಸನು ಪತಿವ್ರೋಹಿಯೊಡನಾಲೋಚಿಸಿ, ರಾಜ್ಯಭಾರವನ್ನು ರಾಜಶೇಖರನ ಭುಜದಲ್ಲಿರಿಸಿ ತಾನು ನಿಶ್ಚಿಂತನಾಗಿ ಶಿವಾರಾಧನೆಯಲ್ಲಿ ಹೊತ್ತುಗಳೆಯಹತ್ತಿದನು. ಯುವರಾಜನಾದ ರಾಜಸೇಖರನು ಪಟ್ಟಾಭಿಷಿಕ್ತನಾದ್ದರಿಂದ ಭೂದೇವಿಯು ಸಂತೋಷವು ಹೆಚ್ಚಿತು, ವೈರಿಗಳ ಸಂತಾಪವು ದುಸ್ಸಹವಾಯಿತು, ಲಕ್ಷ್ಮಿಯು ಆನಂದಯುಕ್ತಳಾದಳು, ಪಂಡಿತರ ದಾರಿದ್ರ್ಯವು ವಿಚ್ಛಿನ್ನವಾಯಿತು, ಈಶ್ವರಭಕ್ತರಿಗೆ ಪರಮವೋದವು ಉಂಟಾಯಿತು. ರಾಜ್ಯಭಾರವನ್ನು ವಹಿಸಿದ ರಾಜಶೇಖರನು ಪ್ರಜೆಗಳಲ್ಲಿ ಕ್ಷೇಮವನ್ನೂ, ಸ್ವಕೀಯಜನರಲ್ಲಿ ಅನುವರ್ತನೆಯನ್ನೂ, ಶರಣರಲ್ಲಿ ಅನುಕೂಲತೆಯನ್ನೂ ಇಟ್ಟು ರಾಜ್ಯವಾಳಹತ್ತಿದನು. ಆತನು ಜಿತಶತ್ರುವೂ, ಹಿತೋದ್ಯೋಗಿಯೂ, ಕ್ಷಮಾಶೀಲನೂ, ಸದುಪಾಯತಂತ್ರನಿಪುಣನೂ, ಸತ್ವವನ್ನು ವಶಮಾಡಿಕೊಂಡವನೂ, ಸದಯಸ್ವಭಾವದವನೂ, ಸದಾ ಶಕ್ತಿಯುತನೂ, ತಂದೆಯಂತೆ ಪೂರ್ಣ ವಿಭವವುಳ್ಳವನೂ ಆಗಿದ್ದನು. ಈ ಯುವರಾಜನು ಐಶ್ವರ್ಯದಲ್ಲಿ ಲಕ್ಷ್ಮೀಕಾಂತನನ್ನು ಹೋಲುವನು, ವಿಭವದಲ್ಲಿ ಇಂದ್ರನನ್ನು ಸರಿಗಟ್ಟುವನು, ಗಾಂಭೀರ್ಯದಲ್ಲಿ ಸಮುದ್ರನಂತೆ ತೋರುವನು, ಅತುಳಕಳಾಪರಿಪೂರ್ಣತೆಯಲ್ಲಿ ಬ್ರಹ್ಮನೆನಿಸುವನು, ವೈರಿ ಸಂಹಾರದಲ್ಲಿ ಕುಮಾರಸ್ವಾಮಿಯಾಗಿರುವನು.

ಇಂತಹ ವಿಭವ–ಗಾಂಭೀರ್ಯ–ಪ್ರತಾಪಶಾಲಿಯಾದ ರಾಜಶೇಖರನು ಒಂದು ದಿನ ಪ್ರಭಾತ ಸಮಯದಲ್ಲಿ ಶಿವಪೂಜಾನಂತರ ಒಡ್ಡೋಲಗದಲ್ಲಿ ಸಿಂಹಾಸನಾರೂಢನಾಗಿದ್ದನು. ಆಗ ಗಾಯಕರು ಗಾಯನಮಾಡಹತ್ತಿದರು, ಮಾಗಧರು ಕರವೆತ್ತಿ ಹೊಗಳುತ್ತಿದ್ದರು, ಕವಿಗಳು ವರ್ಣಿಸುತ್ತಿದ್ದರು, ಮಾಂಡಲಿಕರು ನಮಿಸಿ ಕಪ್ಪವನ್ನೀಯುತ್ತಿದ್ದರು, ಶೈವ ಕೋವಿದರು “ಜಯಿಭವ” ಎಂದು ಆಶೀರ್ವದಿಸುತ್ತಿದ್ದರು, ಮಂಜೀರಧ್ವನಿಯು ಆವರಿಸುತ್ತಿರಲು ಸುಂದರಿಯರು ಕರವೆತ್ತಿ ಚಾಮರಗಳನ್ನು ಬೀಸುತ್ತಿದ್ದರು. ಈ ಪ್ರಕಾರ ನೋಡುವವರ ಕಣ್ಣಿಗೆ ರಮಣೀಯವಾಗಿ ತೋರುವ ಆ ಪ್ರತಾಪಿಯ ಒಡ್ಡೋಲಗದಲ್ಲಿ ಕಂಚುಕಿಗಳು ಗಂಭೀರಸ್ವರದಿಂದ—“ಗುಜ್ಜರನೇ, ಹಿಂದಕ್ಕೆ ಸರಿ; ಮಗಧೇಶನೇ,

ಇಲ್ಲಿ ಕುಳಿತುಕೋ; ಅಂಗನೇ, ನೀನು ಕಾಣಿಕೆಯನ್ನು ಚನ್ನಾಗಿ ಕೊಡು; ಕಳಿಂಗನೇ ನಿಲ್ಲು; ಕರ್ನಾಟಕೇಶನೇ, ಕಡೆಗೆ ಸರಿ; ಕೇರಳನೇ ಬಂದು ನಮಸ್ಕರಿಸು; ಪಾಂಡ್ಯನೇ ಹರಟಬೇಡ; ಪಾಂಚಾಳನೇ ಲಾಳನಿಗೆ ಸ್ಥಳಕೊಡು, ಎನ್ನುತ್ತ ಗರ್ಜಿಸುತ್ತಿದ್ದರು. ಇದಲ್ಲದೆ ಆ ಓಲಗದಲ್ಲಿ ದೂತರು , ಇವು ಕಾಶ್ಮೀರ ದೇಶಾಧಿಪನು ಕೊಟ್ಟಮದ್ದಾನೆಗಳು, ಇವು ಕಾಂಬೋಜದೇಶದ ಅರಸನು ಕಳುಹಿದ ಕುದುರೆಗಳು, ಇವು ಪಾಂಚಾಲದೇಶಾಧಿಪನು ಕೊಟ್ಟ ರತ್ನಗಳು, ಇದು ನೇಪಾಳ ನೃಪಾಲನಿಂದ ಕೊಡಲ್ಪಟ್ಟ ಮೌಕ್ತಿಕಾಭರಣವು, ಭೂಪಾಲನೇ ನೋಡಬೇಕೆಂದು ಚಪ್ಪನ್ನದೇಶದ ಅರಸರು ಕೊಟ್ಟ ಕಪ್ಪಗಳನ್ನು ಒಪ್ಪಿಸುತ್ತಿದ್ದರು.

ಈ ಪ್ರಕಾರ ರಾಜಶೇಖರನು ಅರಿಭಯಂಕರನಾಗಿ ಒಡ್ಡೋಲಗಗೊಂಡಿರಲು, ಓರ್ವ ಕಿರಾತದೂತನು ದರ್ಶನೋತ್ಕಂಠಿತನಾಗಿ ಬಾಗಿಲಲ್ಲಿ ನಿಂತದ್ದನ್ನು ಪ್ರತಿಹಾರನು ತಿಳಿಸಿದನು. ಆಗ ರಾಜಶೇಖರನು ಅವನನ್ನು ಬರಗೊಡೆಂದು ಕಡೆಗಣ್ಣಿನಿಂದ ಸೂಚಿಸಲು, ಪ್ರತಿಹಾರನು ಆ ಕಿರಾತ ದೂತನಿಗೆ ನೃಪಸನ್ನಿಧಿಗೆ ಹೋಗಲಪ್ಪಣೆಗೊಟ್ಟನು. ಚಿಗುರುಗಳ ತಲೆಕಟ್ಟೂ, ಆನೆಹಲ್ಲಿನ ಆಭರಣಗಳೂ, ಕಸ್ತೂರಿಯ ತಿಲಕವೂ, ಮುತ್ತಿನಸರವೂ, ಬಿಲ್ಲು ಬತ್ತಳಿಕೆಗಳೂ ಮೆರೆಯುತ್ತಿರಲು, ಕಿರಾತದೂತನು ಒಳಹೊಕ್ಕು, ದೂರದಿಂದ ಅರಸನಿಗೆ ಪೊಡಮೊಟ್ಟನು. ತರುವಾಯ ಅವನು ದಿಟ್ಟತನದಿಂದ ಕಸ್ತೂರಿ, ಆನೆತಲೆ ಮುತ್ತು, ಜೇನುಕೊಡ, ರತ್ನ ಮುಂತಾದವುಗಳನ್ನು ಕಾಣಿಕೆಯಾಗಿ ಕೊಟ್ಟು, ಹುಲಿ ಚರ್ಮದ ಕಕ್ಷಬಾಳದಲ್ಲಿ ಆನೆ ಹಲ್ಲಿನ ಭರಣಿಯೊಳಗಿರುವ ಒಂದು ಅನರ್ಘ್ಯವಾದ ರತ್ನವನ್ನು ಮುಂದಿಟ್ಟನು. ರಾಜಶೇಖರನು ಆ ರತ್ನದ ಕಾಂತಿಯನ್ನು ನೋಡಿ ಸೋಜಿಗಗೊಂಡು, ಅತಿ ಪ್ರಸನ್ನವಾದ ಮಧುರದೃಷ್ಟಿಯಿಂದ ಕಿರಾತನನ್ನು ನೊಡಿದನು. ಕೂಡಲೆ ಕಿರಾತದೂತನು ನುಡಿದನೇನಂದರೆ—“ ನೃಪವರನೇ, ನಾನು ಕ್ರವ್ಯಾದನೆಂಬ ಹೆಸರಿನ ಕಿರಾತದೂತನು. ನಮ್ಮ ಒಡೆಯನೂ, ನಿಮ್ಮ ಅಡಿಯ ಸೇವಕನೂ ಆದ ಕಲಿಕಾಲಮೇಘನೆಂಬ ಕಿರಾತರಾಜನು ದಕ್ಷಿಣ ಸಮುದ್ರತೀರದಲ್ಲಿರುವ ಪುಳಿಂದಪುರವೆಂಬ ರಾಜಧಾನಿಯಲ್ಲಿ ಅಗಣಿತ ವಿಭವದಿಂದ ಮೆರೆಯುವನು. ಕಲಿಕಾಲಮೇಘನು ಶೂರನೂ, ಘೋರಾರಣ್ಯ ಮಧ್ಯದಲ್ಲಿ ಯಾವಾಗಲೂ ಸಂಚರಿಸುವವನೂ, ಕರ್ಕಶವಾದ ಶರೀರವುಳ್ಳವನೂ, ಬೇಟೆಯಾಡುವದರಲ್ಲಿ ಧೀರನೂ ಆಗಿರುವನು. ಆ ನಮ್ಮೊಡೆಯನು ಬೇಸಿಗೆಯಲ್ಲಿ ಒಂದು ದಿನ ಬೇಟೆಯಾಡಲೆಳಿಸಿ, ಪುಳಿಂದಪುರದ ಉತ್ತರದಲ್ಲಿರುವ ಜೀಮೂತವಸನವೆಂಬ ಪರ್ವತದ ಅರಣ್ಯವನ್ನು ಪುಳಿಂದರೊಡನೆ ಹೊಕ್ಕು ಮೃಗಪಕ್ಷಿಗಳನ್ನು ಸಂಹರಿಸಿದನು. ಅಷ್ಟರಲ್ಲಿ ಒಂದು ಭಯಂಕರವಾದ ಸಿಂಹವು ಆನೆಯ ಮಸ್ತಕವನ್ನು ಸೀಳಿ, ರಕ್ತವನ್ನು ಕುಡಿದು ಮದವೇರಿ, ಸಿಟ್ಟಿನಿಂದ ಬೇಡರ ಮೇಲೆ ಪುಟನೆಗದು, ಅವರನ್ನು ಕೊಲ್ಲತೊಡಗಿತು. ಕಲಿಕಾಲಮೇಘನು ಸಿಂಹದ ಈ ಉಪಟಳವನ್ನೂ, ತನ್ನ ಸೈನಿಕರು ಸಾಯುವದನ್ನೂ ನೋಡಿ ಕೋಪೋದ್ದೀಪಿತನಾಗಿ ಕಣ್ಣುಗಳು ಕೆಂಡದಂತಾಗಲು ಕಿಡುಗಚ್ಚುತ್ತ ಕತ್ತಿಯನ್ನು ಝುಳಪಿಸಿ ನೆಟ್ಟನೆ ಸಿಂಹದೆಡೆಗೆ ಹೋಗಿ ದಿಟ್ಟತನ

ದಿಂದ ಅದನ್ನು ಇಕ್ಕಡಿಯಾಗಿ ಕಡಿದನು. ಆಗ ಅಸುವಳಿದು ಬಿದ್ದ ಆ ಸಿಂಹದ ತಲೆಯನ್ನು ಸೀಳಲು, ಈ ಅಮೌಲ್ಯರತ್ನವು ಹೊರಟಿತು. ಅಷ್ಟರಲ್ಲಿ ಸಿಂಹಳರಾಜನ ಕಾಲಾಳುಗಳು ಅಲ್ಲಿಗೆ ಬಂದು, ಈ ಸಿಂಹವು ನಮ್ಮ ದೇಶದಿಂದ ಬಂದಿರುವದಾದ್ದರಿಂದ ಈ ರತ್ನವು ನಮ್ಮದೆಂದು ಉದ್ಧಟತನದಿಂದ ಜಗಳ ತೆಗೆದರು. ಆಗ ನವೊಡೆಯನು ನನ್ನನ್ನು ಕರೆದು ಈ ರತ್ನವನ್ನು ನವೊಡೆಯನಾದ ರಾಜಶೇಖರ ವಿಭುವಿಗೆ ಒಪ್ಪಿಸೆಂದು ಹೇಳಿ, ನನ್ನ ಕೈಯಲ್ಲಿ ಕೊಟ್ಟದ್ದರಿಂದ ನಾನು ಸನ್ನಿಧಿಗೆ ಬಂದೆನು. ಕಲಿಕಾಲಮೇಘನು ಸಿಂಹಳನ ದಂಡಿನ ಸಂಗಡ ಕಾದುತ್ತಿರುವನು. ನೃಪವರನೇ, ಸಿಂಹಳನ ಉದ್ಧಟತನವನ್ನೇನು ಹೇಳಲಿ! ಅಯ್ವತ್ತಾರು ದೇಶದ ಅರಸರು ವಿಭುಗಳ ಚರಣಕ್ಕೆ ಕಪ್ಪವನ್ನು ಒಪ್ಪಿಸುತ್ತಿರಲು, ಸಿಂಹಳನೊಬ್ಬನು ಮಾತ್ರ ತವ್ಮನ್ನೆಣಿಸದೆ ಯಾವಾಗಲೂ ಸೊಕ್ಕಿನಿಂದ ಮೆರೆಯುತ್ತಿರುವನು-

ಈ ಪ್ರಕಾರ ಕೃವಾಶ್ಯದನು ನುಡಿಯುಲು, ರಾಜಶೇಖರನು ಗಣಕರ ಮೋರೆಯನ್ನು ನೋಡಿದನು. ಆಗ ಆ ರಾಯಭಾರಿಗಳು ಕಯ್ಮುಗಿದು—ವಿಭುವೇ , ಸಿಂಹಳನು ಎಂದೂ ಕಪ್ಪವನ್ನು ಕೊಟ್ಟಲ್ಲೆಂದು ಹೇಳಿದರು- ಅದನ್ನು ಕೇಳಿ ರಾಜಶೇಖರನು ಖತಿಗೊಂಡು ನುಡಿದನೇನಂದರೆ—"ಸೊಕ್ಕಿನಿಂದ ಮೆಯ್ ಮರೆತ ಸಿಂಹಳನಿಗೆ ಯುದ್ಧವೇ ಔಷಧವಾಗಿರುವದು. ಆದ್ದರಿಂದ ಯುದ್ಧಕ್ಕೋಸ್ಕರ ಭೇರಿಯನ್ನು ಹೊಡಿಸತಕ್ಕದ್ದು. ಸಮುದ್ರ ಮಧ್ಯದಲ್ಲಿರುವನಾದ್ದರಿಂದ ನಾನು ಅಜಿಂಕ್ಯನೆಂಬ ಸಿಂಹಳನ ಸೊಕ್ಕು ಒತ್ತಟ್ಟಗಿರಲಿ, ಅವನು ತನ್ನ ಸೈನ್ಯದೊಡದೆ ಇಂದ್ರಾದಿ ದೇವತೆಗಳ ಲೋಕದಲ್ಲಿ ನಿಂತರೂ ಅವನ ಬಲವನ್ನು ನಾಶಮಾಡಿ ನನ್ನ ಬಲವನ್ನು ತೋರಿಸುವೆನು-

ಈ ಪ್ರಕಾರ ರಾಜಶೇಖರನಾಡಿದ ನುಡಿಕೇಳಿ ಮಿತವಚನ ಮಂತ್ರಿಯು ಕಯ್ಮುಗಿದು—"ವಿಭುವೇ, ಇಂದ್ರಾದಿ ದೇವತೆಗಳು ಕೂಡ ನಿನ್ನ ಪ್ರತಾಪಕ್ಕೆ ಹೆದರುತ್ತಿರಲು, ಸಿಂಹಳನ ಪಾಡೇನು? ಅವನು ನಿನಗೆ ಗಣ್ಯನೇ? ಮದಗಜಗಳನ್ನು ಗಾಬರಿಗೊಳಿಸುವ ಸಿಂಹಕ್ಕೆ ಎರಳೆಯು ಎದುರೇ? ಮಹೀಕಾಂತವರೇಣ್ಯನೇ, ನನಗೆ ಈ ಕಾರ್ಯವನ್ನು ನಿಯಮಿಸಬೇಕು, ಆ ಮದಾಂಧನಾದ ಸಿಂಹಳನನ್ನು ಸೆರೆಹಿಡಿದು ತರುವೆನು.

ಮಿತವಚನನ ಈ ವೀರಾಲಾಪಗಳನ್ನು ಕೇಳಿ, ರಾಜಶೇಖರನು ಆತನ ಮುಖವನ್ನು ನೋಡಿ—"ಸಿಂಹಳನು ವಿತತ ಚತುರಂಗ ಬಲನೂ, ಅತಿಸಾಹಸಿಯೂ, ಸಮುದ್ರ ಮಧ್ಯದಲ್ಲಿರುವವನೂ, ಉಧ್ಧಟನೂ ಆಗಿರುವನು. ಇಲ್ಲದಿದ್ದರೆ ಅನ್ಯರಂತೆ ಆತನಾದರೂ ಕಪ್ಪವನ್ನು ಕೊಟ್ಟು, ನಮ್ಮನ್ನು ಸೇವಿಸುತ್ತಿದ್ದನು- ಮಂತ್ರಿವರನೇ, ಇಂತು ಸಿಂಹಳನು ಸಾಹಸ ಬಲಾನ್ವಿತನಾದರೇನಾಯಿತು? ನಿನ್ನಿಂದ ತೀರದ ಕಾರ್ಯವು ಒಂದಾದರೂ ಇರುವದೇ? ಆದರೂ ನನ್ನ ತೋಳತಿಂಡೆಯನ್ನು ತೀರಿಸುವೆನು, ಮತ್ತು ನನ್ನ ಸಾಮರ್ಥ್ಯದ ಇರವನ್ನು ಇಳೆಗೆ ತೋರಿಸುವೆನು."

ಈ ಪ್ರಕಾರ ನುಡಿದು ರಾಜಶೇಖರನು ಮಿತವಚನನನ್ನು ಕೂಡಿಕೊಂಡು ತಂದೆಯ ಬಳಿಗೆ ಹೋಗಿ, ಸಾಷ್ಟಾಂಗವೆರಗಿ, ರತ್ನವನ್ನು ತಂದೆಯ ಮುಂದಿಟ್ಟು, ಎಲ್ಲ ಸಂಗತಿ

ಯನ್ನು ಅರಿಕೆಮಾಡಿ, ಆತನಿಂದ ಆಶೀರ್ವದಿಸಲ್ಪಟ್ಟು ಯುದ್ಧಕ್ಕೆ ಹೊರಡಲುದ್ಯೋಗಿಸಿದನು. ಆ ಯುವರಾಜನ ವಿಜಯಯಾತ್ರೆಗೆ ಸಹಾಯಕಾರಿಯಾಗಿ ಶರದೃತುವು ಪ್ರಾಪ್ತವಾಗಲು, ಆತನು ಹೊರಗಿಕ್ಕಿದ ಸಿಂಹಾಸನವನ್ನೇರಿ, ಮಂತ್ರಿ ಮಿತವಚನನ ಮುಖವನ್ನು ನೋಡಿ, ಸಮರ ಪ್ರಸ್ಥಾನ ಭೇರಿಯನ್ನು ಹೊಡಿಸೆಂದು ಹೇಳಿದನು. ಆಗ ಮಿತವಚನನು ತಂತ್ರಾಧ್ಯಕ್ಷನಾದ ಮೇಘನಾದನನ್ನು ಕರೆಸಿ, ಅಪ್ಪಣೆ ಮಾಡಲು, ಮೇಘನಾದನು ಭಯಂಕರವಾದ ಸಮರ–ಸನ್ನಾಹ ಭೇರಿಯನ್ನು ಹೊಡೆದನು. ಆಗ ಸಮುದ್ರಗಳು ಕಲಕುತ್ತಿರಲು, ದಿಗ್ಗಜಗಳು ಬೆದರುತ್ತಿರಲು, ಉಲ್ಕೆಗಳು ಪತನ ಹೊಂದುತ್ತಿರಲು, ಆ ಭೇರಿಯ 'ಧಳಂ ಧಳಂ' ಎಂಬ ಘೋರಧ್ವನಿಯು ಬ್ರಹ್ಮಾಂಡವನ್ನು ವ್ಯಾಪಿಸಿತು. ಈ ಘೋರನಾದವನ್ನು ಕೇಳಿ ರಾಜಶೇಖರನ ಚತುರಂಗಬಲವು ಸಡಗರದಿಂದ ಸಮರಕ್ಕೆ ಸಿದ್ಧವಾಯಿತು. ಭೂಮಂಡಲವನ್ನು ವ್ಯಾಪಿಸಿ ಹಬ್ಬಿದ ಆ ಚತುರಂಗ ಬಲದ ಕಾಲಧೂಳಿಯಿಂದ ಆಕಾಶಮಂಡಲವೂ, ಕುದುರೆಯ ಹೇಷಾರವ, ಗಜದ ಬೃಂಹಿತಧ್ವನಿ, ರಥದ ಚೀತ್ಕಾರಸ್ವರ, ವೀರಭಟರ ಸಿಂಹನಾದ, ಅನೇಕತರದ ವಾದ್ಯರವ ಇವುಗಳಿಂದ ದಿಗ್ಮಂಡಲವೂ ವ್ಯಾಪಿಸಿದವು. ಆಗ ಗಜಾರೂಢನೂ, ಖಡ್ಗಪಾಣಿಯೂ ಆದ ಕುಮಾರ ರಾಜಶೇಖರನು, ಸೈನ್ಯದ ಈ ಸಡಗರವನ್ನು ನೋಡಿ ಮೋದಪಡುತ್ತ, ತನ್ನನ್ನು ಸೇನಾಪತಿಯೂ, ಮಿತವಚನ ಮಂತ್ರಿಯೂ ಗಜಗಳನ್ನೇರಿ ಹಿಂಬಾಲಿಸಿ ಬರಲು, ಸೂರ್ಯ–ಚಂದ್ರ ವಂಶೋದ್ಭವರಾದ ಅರಸರು ರಥಗಳನ್ನೇರಿ ಸುತ್ತುಗೊಳ್ಳಲು ಉತ್ಸಾಹದಿಂದ ಮುಂದಕ್ಕೆ ತೆರಳಿದನು. ಇಂತು ಸೇನಾ ಪರಿವೃತನಾದ ರಾಜಶೇಖರನು ಮಾರ್ಗಕ್ರಮಣ ಮಾಡಿ ಮಣಿಕಟಕವೆಂಬ ಉನ್ನತ ಪರ್ವತದ ಅಡಿಯಲ್ಲಿ ಹರಿಯುವ ಫೇನಸ್ಮಿತೆಯೆಂಬ ಹೊಳೆಯ ದಡೆಯಲ್ಲಿ ಬಿಡಾರವನ್ನು ಬಿಟ್ಟನು. ಅಷ್ಟರಲ್ಲಿ ಸೂರ್ಯನು ಅಸ್ತಂಗತನಾಗಲು, ರಾಜಕುಮಾರನು ಪ್ರಥಮಯಾಮದಲ್ಲಿ ಮಿತವಚನನೊಡನೆ ಭಕ್ತಿಯಿಂದ ಶಿವಪೂಜೆಯನ್ನು ಮಾಡಿ, ಯುದ್ಧ ಸಂಬಂಧೀಯವಾದ ಸಲ್ಲಾಪಗಳಿಂದ ಆ ರಾತ್ರಿಯನ್ನು ಕಳೆದನು. ತರುವಾಯ ಪ್ರಾತಃಕಾಲದಲ್ಲಿ ಆ ನೃಪಕುಮಾರನು ಶಿವಪೂಜೆಗೆಯ್ದು, ಯಥೋಚಿತ ಪ್ರಾತಃಕಾಲದ ಕರ್ಮಗಳನ್ನು ನೆರವೇರಿಸಿ, ಸೇನಾಪತಿಯಾದ ಮೇಘನಾದನ ಮುಖವನ್ನು ನೋಡಿದನು. ಆಗ ಮೇಘನಾದನು ಸಮರ ಸನ್ನಾಹ ಭೇರಿಯನ್ನು ಹೊಡೆಯಲು, ಆ ಭೇರಿಯ ನಾದವು ದಿಕ್ಕುಗಳನ್ನು ವ್ಯಾಪಿಸಿತು.

**ಉಜ್ವಲ ಪ್ರತಾಪ:**—ಇತ್ತ ಸಿಂಹಳ ದ್ವೀಪ ವಾಸಿಯಾದ ಧೀರ–ಸಿಂಹನೆಂಬ ರಾಜನು ರಾಜಶೇಖರನ ಭೇರಿಯ ಭಯಂಕರ ಧ್ವನಿಯನ್ನು ಕೇಳಿ, ಮೇಘಧ್ವನಿಯನ್ನು ಕೇಳಿದ ಸಿಂಹನಂತೆ ಕೋಪಿಸಿ, ನಾಲ್ಕುದಿಕ್ಕುಗಳನ್ನು ನೋಡಹತ್ತಿದನು. ಸಭಾಸದರೆಲ್ಲರೂ ಧ್ವನಿಯ ಇರವನ್ನು ನೆನೆದು ಆಶ್ಚರ್ಯಭರಿತರಾಗಿದ್ದರು. ಅಷ್ಟರಲ್ಲಿ ಓರ್ವದೂತನು ಅಲ್ಲಿಗೆ ಬಂದು ನಡುಗುತ್ತ ನುಡಿದನೇನಂದರೆ—"ದೇವನೇ, ಪರಮಾಶ್ಚರ್ಯವು, ಆ ಆಶ್ಚರ್ಯವನ್ನು ವರ್ಣಿಸುವದೇನದೆ! ನೆಲವು ಈಯಿತೋ, ದಿಕ್ಕು ಹಡೆಯಿತೋ. ಆಕಾಶದಿಂದ ಇಳಿಯಿತೋ ಅನ್ನುವಂತೆ ಭೂಮಂಡಲವನ್ನೆಲ್ಲ ವ್ಯಾಪಿಸಿ ಅಪ್ರಮಾಣವಾದ

ಸೈನ್ಯವು ಬರುತ್ತಿರುವದು. ಆ ಸೇನೆಯ ಕಾಲ್ತುಳಿತದಿಂದ ಪರ್ವತಗಳು ಹುಡಿಯಾದವು. ಅವರ ವೇಗದಿಂದ ದೊಡ್ಡ ದೊಡ್ಡ ಅರಣ್ಯಗಳು ನೆಲಸಮವಾದವು. ಎದ್ದ ಧೂಳಿಯಿಂದ ಆಕಾಶಗಂಗೆಯು ರಾಡಿಯಾಯಿತು."

ಈ ಪ್ರಕಾರ ಭಯಗೊಂಡು ಚಾರನು ನುಡಿದ ನುಡಿಕೇಳಿ ಸಿಂಹಳನು ಆ ಸೈನ್ಯವೆ ತೃಣದೆಂದು ಕೇಳಿದನು. ಕೂಡಲೆ ಚಾರನು ಮತ್ತೆ ನುಡಿದನೇನಂದರೆ—"ಭೂಪಾಲನೆ, ನಾಲ್ಕು ಸಮುದ್ರಗಳಿಂದ ಸುತ್ತುಗಟ್ಟಿದ ಭೂಮಿಯ ಅರಸರೆಲ್ಲರೂ ಕಪ್ಪಗಳನ್ನು ಕೊಡುತ್ತಿದ್ದು, ಉದ್ಧಟನಾದ ಸಿಂಹಳರಾಜನು ಎಂದೂ ಕಪ್ಪವನ್ನು ಕೊಟ್ಟಿಲ್ಲೆಂದು ರಾಜಶೇಖರನ ರಾಯಭಾರಿಗಳು ಆತನಿಗೆ ಹೇಳಲು, ಚೋಳಾಧಿಪತಿಯಾದ ಆ ರಾಜಶೇಖರನು ಸಿಟ್ಟಾಗಿ ತಮ್ಮೊಡನೆ ಯುದ್ಧಕ್ಕೆ ಬಂದಿರುವನು."

ಸೇವಕನ ಮಾತುಗಳನ್ನು ಕೇಳಿದ ಸಿಂಹಳನ ಕಣ್ಣುಗಳು ಸಿಟ್ಟಿನಿಂದ ಕೆಂಪಾದವು. ಹುಬ್ಬುಗಳು ಕುಣಿಯಹತ್ತಿದವು. ಆಗ ಅವನು ಆವೇಶದಿಂದ ಮೀಸೆಯನ್ನು ಹುರಿಮಾಡಿ ಕತ್ತಿಯನ್ನು ಝಳಪಿಸಿ ಸಿಂಹಾಸನದಿಂದೆದ್ದು ಗರ್ಜಿಸಿ "ಅಮಮಾ! ಆ ರಾಜಶೇಖರನು ಶೂರನಿರುವನು, ನಾನಂತೂ ಕಪ್ಪವನ್ನು ಕೊಡುವದಿಲ್ಲ; ಅವನು ಸಿಟ್ಟಾಗಿ ಬರುವನಷ್ಟೆ? ಆ ಮೇಲೆ ಯುದ್ಧವಲ್ಲವೆ? ಯುದ್ಧದಲ್ಲಂತೂ ಅವನು ಗೆಲ್ಲುವನು, ಬಲಶಾಲಿಯಾಗಿರುವದರಿಂದ, ಗೆಲ್ಲದೆ ಯಾಕೆಇರುವನು!" ಎಂದು ಕೋಪ ಪರವಶನಾಗಿ ನುಡಿದು ಸಂತಾಪವನ್ನು ಸಹಿಸಲಾರದೆ ಮತ್ತೆ ನುಡಿದನೇನಂದರೆ—"ಲಾಳನನ್ನು ಹೊಡೆದು , ಮಾಳವನನ್ನು ಅಳುಕಿಸಿ, ಕೊಂಕಣನನ್ನು ಹೊರಡಿಸಿ, ಗುರ್ಜರನನ್ನು ಹೊರಳಿಸಿ, ನೇಪಾಳನನ್ನು ಓಡಿಸಿ, ಬರ್ಬರನನ್ನು ಕಲಕಿದ ಚೋಳನಾದ ಈ ರಾಜಶೇಖರನ ಹೆಚ್ಚಳವು ಈ ಸಿಂಹಳನ ಮುಂದೆ ನಡೆಯುವದೇ? ನಾನು ಸಮರದಲ್ಲಿ ರಾಜಶೇಖರನ ಭುಜಗಳ ಸಾಮರ್ಥ್ಯವನ್ನು ಹಾಳುಮಾಡುವೆನು, ನನ್ನ ಸಾಮರ್ಥ್ಯವನ್ನು ಚನ್ನಾಗಿ ತೋರಿಸುವೆನು, ಎದುರಾದ ಆತನ ಸೈನ್ಯವನ್ನು ಕೊಂದು ಭೂತಗಣಕ್ಕೆ ಔತಣ ಮಾಡುವೆನು, ಅಪ್ಸರ ಸ್ತ್ರೀಯರ ಬಯಕೆಗಳನ್ನು ನೆರವೇರಿಸುವೆನು, ಆಕಾಶದಲ್ಲಿ ನೋಡುತ್ತಿರುವ ಬ್ರಹ್ಮನ ಕಣ್ಣುಗಳಿಗೆ ಹೊಸ ಆಶ್ಚರ್ಯವನ್ನುಂಟುಮಾಡುವೆನು."

ಈ ಪ್ರಕಾರ ಕೋಪ ಪರವಶನಾಗಿ ವೀರಾಲಾಪಗಳನ್ನು ನುಡಿದು ಭೇರಿಯನ್ನು ಹೊಡಿಸಲು, ತ್ವರೆಯಿಂದ ಆತನ ಸೈನ್ಯವು ಯುದ್ಧ ಸನ್ನದ್ಧವಾಯಿತು. ಆಗ ಸಿಂಹಳನು ಚತುರಂಗ ಬಲವನ್ನು ಕೂಡಿಕೊಂಡು, ಮಾಂಡಲಿಕ ಭೂಪಾಲರು ಸುತ್ತಿಬರಲು ಹಡಗವನ್ನೇರಿ ಹೋಗಿ ರಾಜಶೇಖರನ ಸೈನ್ಯಕ್ಕೆ ಎದುರಾದನು. ಆಗ ಉಭಯ ಪಕ್ಷಗಳ ಸೇನಾನಾಯಕರು ಎದುರಾಗಿರುವ ಪ್ರಚಂಡವಾದ ಬಲಗಳನ್ನು ನೋಡಿ ಖತಿಗೊಂಡು ತಮ್ಮ ತಮ್ಮ ಸೈನ್ಯಕ್ಕೆ ಸನ್ನೆದೋರಿದರು . ಕೂಡಲೆ ಆನೆಗಳು ಆನೆಗಳ ಮೇಲೆ, ಕುದುರೆಗಳು ಕುದುರೆಗಳ ಮೇಲೆ, ಕಾಲಾಳು ಕಾಲಾಳ ಮೇಲೆ, ರಥಗಳು ರಥಗಳ ಮೇಲೆ ಬಿದ್ದು ಯುದ್ಧಾವೇಶದಿಂದ ಮೈ ಮರೆತು ಬೊಬ್ಬೆಗುಟ್ಟುತ್ತ ಘೋರ ಸಂಗ್ರಾಮವನ್ನೆಸಗಿದರು. ಆಗ ಉಭಯ ಸೈನ್ಯದಲ್ಲಿ ಲೆಕ್ಕವಿಲ್ಲದ ವೀರರು ಮಡಿದರು, ಆನೆ ಕುದುರೆಗಳು

ಅಸುವಳಿದವು, ರಕ್ತವು ಘೋರೆಂದು ಹರಿಯಹತ್ತಿತು. ಈ ಪ್ರಕಾರ ಪ್ರಾಣಗಳನ್ನು ತೃಣೀಕರಿಸಿ ಉಭಯ ಸೈನಿಕರು ಹಿಂಜರಿಯದೆ ಕಾದುತ್ತಿರಲು, ರಾಜಶೇಖರನು ಅತ್ತ ನಿಂತು ಸಮರವನ್ನು ಮಾಡುವ ವೈರಿಗಳ ಧೈರ್ಯವನ್ನು ಕಂಡು ಮಿತವಚನನನ್ನು ಕೂಡಿಕೊಂಡು ತನ್ನ ಗಜವನ್ನು ಶತ್ರು ಸೈನ್ಯದ ಮೇಲೆ ನೂಕಿದನು.

ಇಂತು ರಾಜಶೇಖರನು ತನ್ನ ಸೈನ್ಯದ ಮೇಲೆ ಮೀರಿಬರುವದನ್ನು ಅಭಿಮಾನಿಯಾದ ಸಿಂಹಳರಾಜನು ನೋಡಿ, ಸಮರೋತ್ಸಾಹಗೊಂಡು ಪ್ರತಾಪಿಗಳಾದ ತನ್ನ ಮಾಂಡಲಿಕ ಭೂಪಾಲರನ್ನು ಕೂಡಿಕೊಂಡು ಗಜವನ್ನೇರಿ ವೇಗದಿಂದ ರಾಜಶೇಖರನಿಗೆ ಎದುರಾಗಿಬಂದನು. ಆಗ ಉಭಯಸೈನಿಕರು ಆವೇಶದಿಂದ ಒಬ್ಬರನ್ನೊಬ್ಬರು ತಾಗಿದರು. ಸಿಂಹಳನ ಪ್ರಚಂಡಬಲನೆಂಬ ಸೇನಾಪತಿಯು ಧೈರ್ಯದಿಂದ ರಾಜಶೇಖರನಿಗೆ ಎದುರಾಗಲು, ರಾಜಶೇಖರನು ಕೂರಂಬುಗಳಿಂದ ಅವನ ರಥವನ್ನು ಮುರಿದು, ಸಾರಥಿಯನ್ನು ಕೊಂದು, ಧನುಸ್ಸನ್ನು ಖಂಡಿಸಿದ್ದಲ್ಲದೆ, ಅವನ ಶಿರವನ್ನು ಇಳೆಗೊರಗಿಸಿ ಆವೇಶದಿಂದ ರಿಪುಸೈನ್ಯದಮೇಲೆ ಸಾಗಿಹೋದನು. ರಾಜಶೇಖರನ ಈ ಉಪಟಳವನ್ನು ನೋಡಿ ಸಿಂಹಳನು ತನ್ನ ಆನೆಯನ್ನು ಅವನೆದುರಿಗೆ ನಿಲ್ಲಿಸಿ, ಧನುಸ್ಸನ್ನು ಬಿಗಿಹಿಡಿದು ಜೀವಪಡೆದ, ಹದನಾದ ಬಾಣಗಳನ್ನು ಬತ್ತಳಿಕೆಯಿಂದ ಕಿತ್ತು ಹೂಡಿ ರಾಜಶೇಖರನಮೇಲೆ ಬಿಟ್ಟನು. ಅರಿಭಯಂಕರನಾದ ರಾಜಶೇಖರನು ಆ ಬಾಣಗಳನ್ನು ಮಾರ್ಗದಲ್ಲಿ ಇಕ್ಕಡಿಗೆಯ್ದು ಪ್ರತಿಯಾಗಿ ಸಿಂಹಳನ ಮೇಲೆ ಅಸಂಖ್ಯ ಬಾಣಗಳನ್ನು ಸುರಿಸಿದನು. ಸಿಂಹಳನಾದರೂ ಆ ಬಾಣಗಳನ್ನೆಲ್ಲ ಖಂಡಿಸಿ ಉಪಹಾಸದಿಂದ ಗಹಗಹಿಸಿದನು. ಇಂತು ತನ್ನನ್ನು ಲೆಕ್ಕಿಸದೆ ಉಪಹಾಸಮಾಡುವ ಸಿಂಹಳನನ್ನು ರಾಜಶೇಖರನು ನೋಡಿ, ಸಿಟ್ಟಿನಿಂದ ಹುಬ್ಬುಗಂಟಿಕ್ಕಿ ತೀಕ್ಷ್ಣ ಶರದಿಂದ ಅವನ ಆನೆಯನ್ನು ಇಳೆಗೊರಗಿಸಲು, ಕೂಡಲೆ ಸಾರಥಿಯು ರಥವನ್ನು ತಂದದ್ದರಿಂದ ಸಿಂಹಳನು ಹಮ್ಮುಗೆಡದೆ ಆ ರಥವನ್ನೇರಿ ಬೊಬ್ಬಿರಿದನು. ಸಿಂಹಳನು ರಥಾರೂಢನಾದದ್ದನ್ನು ರಾಜಶೇಖರನು ನೋಡಿ ಧರ್ಮಯುದ್ಧ ಮಾಡಲೆಳಸಿ, ತಾನೂ ಆನೆಮಿಂದಿಳಿದು ರಥವೇರಿ ಬಲ್ಪಿನಿಂದ ಮುಂದುವರಿದನು. ಆಗ ಸಿಂಹಳನು ರಾಜಶೇಖರನನ್ನು ಸಿಟ್ಟಿನಿಂದ ನೋಡಿ ನುಡಿದನೇನಂದರೆ:—“ ಎಲೈ ರಾಜಶೇಖರನೇ, ಏಳುನೂರು ಗಾವುದದ ವಿಸ್ತಾರದಲ್ಲಿರುವ ಬಲಿಷ್ಠ ಅರಸರೆಲ್ಲರೂ ಕಪ್ಪಕೊಟ್ಟು ಸೇವಿಸುವರೆಂಬ ನಿನ್ನ ಹೆಚ್ಚಳವು, ಈ ಸಿಂಹಳರಾಜನಲ್ಲಿ ನಡೆಯುವದೆ? ಇಳಾಧಿಪನೇ, ಗವಿಯಲ್ಲಿರುವ ಸಿಂಹನನ್ನು ಕಾಡಾನೆಯು ಮದವೇರಿ ಬಂದು ಬಲಾತ್ಕಾರದಿಂದ ಎಬ್ಬಿಸಿ ಬದುಕುವದೆ? ಅದರಂತೆ ಸಮುದ್ರ ಮಧ್ಯದಲ್ಲಿರುವ ನನ್ನ ಮನೆಯಲ್ಲಿ ಸಮಾಧಾನದಿಂದಿರುತ್ತಿದ್ದ ನನ್ನನ್ನು ಸಿಟ್ಟಿಗೆಬ್ಬಿಸಿ ನೀನು ಹ್ಯಾಗೆ ಜೀವಿಸುವೆ?

ಈ ಪ್ರಕಾರ ಸಿಂಹಳನು ಮೀರಿ ನುಡಿಯಲು, ಸಮರದಲ್ಲಿ ಷಣ್ಮುಖನನ್ನು ಹೋಲುವ ರಾಜಶೇಖರನು ಸಿಟ್ಟಿನ ನಗೆಮೋರೆಯುವನಾಗಿ ನುಡಿದನೇನಂದರೆ, “ಮದದಿಂದ ಎಚ್ಚರದಪ್ಪಿದ ಸಿಂಹಳನೇ, ಭಾಪು! ನೀನು ಶಸ್ತ್ರಗಳನ್ನು ಹಿಡಿದು ಸಮುದ್ರವನ್ನು ದಾಟಿ ಯುದ್ಧಕ್ಕೆ ಬಂದಿರುವೆಯಲ್ಲ! ರಣಭೂಮಿಯಲ್ಲಿ ನನ್ನ ಕರಲಾಘವವನ್ನೊಂದಿಷ್ಟು

ತೋರಿಸುವೆನು ಸಹನಮಾಡು. ಸಿಂಹಳ ಭೂಪತಿಯೇ, ನೀನು ಯುದ್ಧದಲ್ಲಿ ನರಸಿಂಹ ನಿರುವೆ, ಸಂಶಯವಿಲ್ಲ! ಆದರೆ ನಾನು ಶಿವಭಕ್ತನಾದ್ದರಿಂದ ಶರಭರೂಪನಾಗಿ ರಣದಲ್ಲಿ, ನಿನ್ನನ್ನು ಸಂಹರಿಸಿ, ನನ್ನ ಪರಾಕ್ರಮವನ್ನು ತೋರಿಸುವೆನು.

ಈ ಪ್ರಕಾರ ನುಡಿದು, ಭುಜಬಲದಿಂದ ದಾಶರಥಿ-ಶ್ರೀರಾಮನನ್ನು ಜಯಿಸುವ ರಾಜಶೇಖರನು ಕೋಪ ಪರವಶನಾಗಿ, ಚಂಡಶರವನ್ನು ಕಿವಿಯವರೆಗೆ ಜಗ್ಗಿ, ಸಿಂಹಳನ ಮೇಲೆ ಬಿಡಲು, ಆ ಕೂರಂಬು ಸಿಂಹಳನ ವಕ್ಷಸ್ಥಳವನ್ನು ಭೇದಿಸಿ, ಅವನನ್ನು ಮೂರ್ಛೆ ಗೊಳಿಸಿತು. ಇದನ್ನು ಸಿಂಹಳನ ಮಾಂಡಲಿಕ ಭೂಪಾಲರಾದ ಭದ್ರಕೇತು, ಹಿರಣ್ಯ ಕವಚ, ಪ್ರಚಂಡವರ್ಮ, ಲೋಹಿತಾಕ್ಷ, ಕಾಲನೇಮಿ, ಭೀಮನಾದ ಮೊದಲಾದವರು ನೋಡಿ, ರೋಷಭೀಷಣರಾಗಿ ಬಾಣಗಳ ಮಳೆಯನ್ನು ಸುರಿಸುತ್ತ ತಮ್ಮ ತಮ್ಮ ಸೇನೆ ಗಳೊಡನೆ ರಾಜಶೇಖರನನ್ನು ಕವಿದರು. ಆಗ ರಾಜಶೇಖರನು ಕೋಪ ಸಂತಪ್ತನಾಗಿ ಸಾಮರ್ಥ್ಯದಿಂದ ಕೂರಂಬುಗಳನ್ನು ಎಸೆದು, ರಿಪುವರ್ಗವನ್ನು ಸಂಹರಿಸತೊಡಗಿದನು. ಮಿತವಚನನು ತನ್ನ ವಿಭುವಾದ ರಾಜಶೇಖರನ ಈ ಘೋರಕೃತ್ಯವನ್ನು ನೋಡಿ, ಆವೇಶದಿಂದ ಮೈಯ್ಮರೆತು, ಕುದುರೆಯನ್ನೇರಿ ಖಡ್ಗವನ್ನು ಝಳಿಪಿಸುತ್ತ ಮೇಘಮಂಡಲ ವನ್ನು ಹೊಕ್ಕ ಝಂಝಾ ಮಾರುತನಂತೆ ರಿಪು ಸೈನ್ಯವನ್ನು ಹೊಕ್ಕು ಅಖಂಡ ವಿಕ್ರ ಮದಿಂದ ಎದುರಾದವರನ್ನು ತುಂಡರಿಸಹತ್ತಿದನು. ಅಕಟಕಟಾ! ಆಗ ಸೈನ್ಯದಲ್ಲಾದ ಕೊಲೆಯನ್ನೂ, ರಣದ ಭಯಂಕರತೆಯನ್ನೂ ಏನು ವರ್ಣಿಸುವದದೆ? ಅಲ್ಲಿ ಲೆಕ್ಕವಿಲ್ಲದ ವೀರರು ಮಡಿದರು, ಆನೆ ಕುದುರೆಗಳು ತುಂಡರಿಸಲ್ಪಟ್ಟವು, ರಥಗಳು ತುಮುರಾದವು, ರಕ್ತದ ಹೊಳೆಗಳು ಹರಿಯುಹತ್ತಿದವು, ಶಾಕಿನಿ ಡಾಕಿನಿ ಬ್ರಹ್ಮರಾಕ್ಷಸ ಮೊದಲಾದ ಪಿಶಾಚಗಣಗಳು ತಂಡಗೊಂಡು ಆನಂದದಿಂದ ಅಂಡಲೆಯುತ್ತಿದ್ದವು. ಇದೇನು ಕಾಲಾಂ ತಕನ ಹಾವಳಿಯೋ, ಮೃತ್ಯುವಿನ ಮುಳಿಸೋ, ಭೈರವನ ಕೋಲಾಹಲವೋ ಅನ್ನು ವಂತೆ ಆಹವ ಭೂಮಿಯು ಭಯದಿಂದ ಉಕ್ಕುತ್ತ ಕಣ್ಣಿಗೆ ತೋರುತ್ತಿತ್ತು. ಆಗ ಸಿಂಹ ಳನ ಸೈನಿಕರು ಯುದ್ಧಮಾಡಲಾರದೆ ಓಡತೊಡಗಿದರು. ಮೂರ್ಛಿತನಾದ ಸಿಂಹಳನು ಮೂರ್ಛೆತಿಳಿದೆದ್ದು, ತನ್ನ ಸೈನ್ಯವು ಬೆನ್ನು ತೋರಿಸಿ ಓಡಿಬರುವದನ್ನು ನೋಡಿ ಭಯ ಗೊಂಡು ರಣಭೂಮಿಯಿಂದ ಜಾರಿದನು. ಪ್ರಾಣಭಯದಿಂದ ಓಡುವ ಸಿಂಹಳನನ್ನು ರಿಪು ಮದವಿಧ್ವಂಸಕನಾದ ಕುಮಾರ ರಾಜಶೇಖರನು ನೋಡಿ, ಅಮೋಘಬಾಣವನ್ನು ಕೋದಂಡದಲ್ಲಿರಿಸಿ, ಪ್ರಯೋಗಿಸಲು ಉಜ್ಜುಗಿಸಿದನು. ಆಗ ಮಿತವಚನನು—"ವಿಕ್ರ ಮ ಶಾಲಿಯಾದ ರಾಜಶೇಖರ ಭೂಪತಿಯೇ, ನಿನ್ನ ವಿಕ್ರಮದ ಭಯದಿಂದ ಇಂದ್ರಾದಿದಿ ಕ್ಪಾಲಕರು ಒಂದೊಂದು ಮೂಲೆಯನ್ನು ಸೇರಿರಲು, ಪ್ರಾಣಭಯದಿಂದ ಯುದ್ಧಭೂಮಿ ಯಿಂದ ಜಾರಿ ಸಮುದ್ರವನ್ನು ಸೇರುತ್ತಿರುವ ಸಿಂಹಳನು ಎಷ್ಟರವನು? ಅವನ ವಿಕ್ರ ಮವು ಎಷ್ಟರದು! ಆದ್ದರಿಂದ ನೀನು ಸಂಧಾನಗೊಳಿಸಿದ ಶರವನ್ನು ಬಿಡದಿರುವದು ಉಚಿತ ವೆಂದು ನನಗೆ ತೋರುತ್ತದೆ." ಎನ್ನಲು, ಮಿತವಚನನು ಹೇಳಿದ ಹಿತವಚನವನ್ನು ಕೇಳಿ, ಅತಿ ಚತುರನಾದ ರಾಜಶೇಖರನು ಕಿವಿಯ ವರೆಗೆ ಜಗ್ಗಿದ ಬಾಣವನ್ನು ಉಪಸಂಹರಿಸಿದನು.

ಗುಣಗ್ರಾಹಕತೆಯು:—ಇತ್ತ ಸಿಂಹಳನು ಹಡಗವೇರಿ ಸಮುದ್ರದಲ್ಲಿ ಬೆನ್ನು ತೋರಿಸಿ ಓಡಹತ್ತಿದನು. ಆಗ ರಾಜಶೇಖರನು ಸಿಟ್ಟಿನಿಂದ ಸಮುದ್ರವನ್ನು ನೋಡಲು, ಶ್ರೀರಾಮಚಂದ್ರನಿಗೆ ಸಹ ಮಾರ್ಗಕೊಡದ ಆ ಸಮುದ್ರವು ಇಬ್ಭಾಗವಾಗಿ, ರಾಜಶೇಖರನಿಗೆ ಮಾರ್ಗ ಕೊಟ್ಟಿತು! ರಾಜಶೇಖರನು ಆ ಮಾರ್ಗದಿಂದ ಸಿಂಹಳನನ್ನು ಬೆನ್ನಟ್ಟಿ ಅವನ ರಾಜಧಾನಿಯಾದ ಕಮಲದುರ್ಗವನ್ನು ಮುತ್ತಿದನು. ರಾಜಶೇಖರನು ತನ್ನಪಟ್ಟಣವನ್ನು ಮುತ್ತಿದ್ದನ್ನು ಸಿಂಹಳನು ನೋಡಿ, ಕುಪಿತನಾಗಿ ಮತ್ತೆ ಯುದ್ಧಕ್ಕೋಸ್ಕರ ಉಜ್ಜುಗಿಸಲು, ಅವನ ಮಂತ್ರಿಯಾದ ನೀತಿಭೂಷಣನು ಕಯ್ಮುಗಿದು—"ಭೂಪತಿಯೆ, ರಾಜಶೇಖರನನ್ನು ಮನುಷ್ಯ ಭೂಧವನೆಂದ ತಿಳಿಯಬೇಡ, ಅವನು ಶಿವಮಂತ್ರ ಪ್ರಭಾವದಿಂದ ಹುಟ್ಟಿದವನು. ಅವನೊಡನೆ ಯುದ್ಧ ಮಾಡಲು ಶಕ್ಯವಲ್ಲ; ಕಾರಣ ಅವನೊಡನೆ ವಿರೋಧವನ್ನು ಬಿಟ್ಟು, ಸಂಧಿಯನ್ನು ಮಾಡಿಕೊಳ್ಳುವದು ತಕ್ಕದ್ದು. ಶಿವಭಕ್ತರು ಸಾಧಾರಣರಲ್ಲ; ಅವರು ವಡವಾಗ್ನಿಯನ್ನು ಹಿಡಿಯುವರು, ಸೂರ್ಯ-ಚಂದ್ರರನ್ನು ಬೊಟ್ಟಿನಿಂದ ಚಿಮುಟ್ಟುವರು, ಸಪ್ತ ಸಮುದ್ರಗಳನ್ನು ಕುಡಿಯುವರು, ದಿಗ್ಗಜಗಳನ್ನು ಹೊಡೆಯುವರು, ಮೇರುವನ್ನು ಕಿತ್ತು ಮೇಲಿಡುವರು, ಆದಿಶೇಷನನ್ನು ಧರಿಸುವರು, ಬ್ರಹ್ಮಾಂಡವನ್ನು ಒಡೆಯುವರು. ದೂರವೇಕೆ? ಹಡಗದಲ್ಲಿ ಕುಳಿತು ಬರುವ ನಿನ್ನನ್ನು ರಾಜಶೇಖರನು ·ಬೆನ್ನಟ್ಟಲು, ಪರಮ ಶಿವ-ಭಕ್ತನಾದ ಆತನಿಗೆ ಸಮುದ್ರವು ಕೂಡ ಮಾರ್ಗವನ್ನು ಕೊಡಲಿಲ್ಲವೆ? ಇದಲ್ಲದೆ ಆ ನೃಪತನಯನು ಅತಿ ಸಾಹಸಿಯೂ, ಸತ್ಯವಚನಿಯೂ, ಅಧಿಕ ದಯಾಳುವೂ, ಧಾರ್ಮಿಕನೂ, ಪರಹಿತ ಪಂಡಿತನೂ, ಉಚಿತವನ್ನು ಬಲ್ಲವನೂ ಆಗಿರುವನು. ಅವನಲ್ಲಿ ಕಪಟ, ಚಾಂಚಲ್ಯ, ಜಾಡ್ಯ, ನಾಸ್ತಿಕ ಭಾವಗಳು ತಲೆದೋರವು. ಲೋಕದಲ್ಲಿ ಸಮಾನಸ್ಕಂಧರಲ್ಲಿ ಸಂಧಿಯನ್ನು ಮಾಡಿಕೊಳ್ಳಲಾಗದು. ಆದರೆ ತನ್ನಿಂದ ಅತಿ ಬಲಿಷ್ಠನೂ, ಅಜೇಯನೂ ಆದವನಲ್ಲಿ ಮಾಡಿಕೊಳ್ಳುವದು ದೊಡ್ಡಸ್ತನವಲ್ಲವೆ? ಕಲೆಯಿಲ್ಲದ ಚತುರನೂ, ಆತ್ಮಸ್ವರೂಪವನ್ನು ತಿಳಿಯದಯೋಗಿಯೂ, ವೇದವನ್ನು ಅರಿಯದ ಪಾರ್ವನೂ, ಬಲವನ್ನರಿಯದ ದಳಪತಿಯೂ, ನಯದ ಒಲವನ್ನರಿಯದ ಅರಸನೂ ಜ್ಞಾನಿಗಳನ್ನು ಮೆಚ್ಚಿಸರು. ಕ್ಷಿತಿನಾಥನೇ, ನೀತಿ ವಿದ್ಯಾಚತುರ್ಮುಖನಾದ ನಿನಗೆ ನೀತಿಯನ್ನು ಉಪದೇಶಿಸುವದು ಅಯೋಗ್ಯವು. ನಿನ್ನಂತೆ·ನೀತಿಸಾರವನ್ನು ಬಲ್ಲವನು ಯಾವನಿರುವನು? ನನ್ನ ಈ ವಿಜ್ಞಾಪನೆಯನ್ನು ಯೋಚಿಸಿ, ಯೋಗ್ಯಮಾರ್ಗವನ್ನವಲಂಬಿಸಬೇಕೆಂದು ಪ್ರಾರ್ಥಿಸುತ್ತೇನೆ.

ಸಿಂಹಳನು ನೀತಿಭೂಷಣನ ಹಿತವಚನಕ್ಕೆ ಒಡಂಬಟ್ಟು, ಸಂಧಿಗೋಸ್ಕರ ಆತನನ್ನು ರಾಜಶೇಖರನೆಡೆಗೆ ಕಳುಹಿದನು. ನೀತಿಭೂಷಣನು ರಾಜಶೇಖರನ ಮಂತ್ರಿಯಾದ ಮಿತವಚನನನ್ನು ಕಂಡು, ಅವನನ್ನು ಸಂಧಿಗೊಡಂಬಡಿಸಿ, ಅವನೊಡನೆ ರಾಜಶೇಖರನ ಬಳಿಗೆ ಬಂದು ವಿನಯದಿಂದ:—ಯುವರಾಜನೇ, ನೀನು ಇಂದಿನ ಯುದ್ಧದಲ್ಲಿ ತೋರಿಸಿದ ಶೌರ್ಯವನ್ನು ನೋಡಿ, ನಮ್ಮೊಡೆಯನಾದ ಸಿಂಹಳರಾಜನು ಅಚ್ಚರಿಪಟ್ಟು, ಸಂತೋಷಭರಿತನಾಗಿದ್ದಾನೆ. ನಿನ್ನೊಡನೆ ಯುದ್ಧಮಾಡಲು ಆತನು ಇಚ್ಛಿಸುವದಿಲ್ಲ.

ನಿನಗೆ ಕಪ್ಪವನ್ನು ಕೊಟ್ಟು, ಒಡಂಬಡಿಕೆಯನ್ನು ಮಾಡಿಕೊಳ್ಳಲಿಕ್ಕೆ ಸಿದ್ಧನಿದ್ದಾನೆ. ಇದೆಲ್ಲವನ್ನು ವಿಜ್ಞಾಪಿಸುವದಕ್ಕಾಗಿಯೇ ನನ್ನನ್ನು ನಿನ್ನೆಡೆಗೆ ಕಳುಹಿರುವನು. ನೀನು ಪ್ರಸನ್ನಚಿತ್ತನಾಗಿ ನನ್ನ ವಿಜ್ಞಾಪನೆಯನ್ನು ಮನ್ನಿಸಬೇಕು, ಎಂದು ವಿಜ್ಞಾಪನೆ ಮಾಡಿ ಕೊಂಡನು. ಆಗ ರಾಜಶೇಖರನು ಮಿತವಚನನ ಮುಖವನ್ನು ನೋಡಲು, ಮಿತವಚ ನನು ವಿನಯದಿಂದ:—“ ರಾಜಕುಲಮಣಿಯೇ, ಬೇಡಿದವರಿಗೆ ಇಲ್ಲೆನ್ನದೆ ಕೊಡುವ ಅಗ್ಗ ಳಿಕೆಯೂ, ಬೆನ್ನು ಬಿದ್ದವರನ್ನು ಕಾಯುವ ಹೆಚ್ಚಳವೂ, ಎದುರಾದ ವೈರಿಗಳನ್ನು ಸೀಳುವ ಸಾಮರ್ಥ್ಯವೂ, ಆಶ್ರಿತರನ್ನು ಯಾವಾಗಲೂ ಪಾಲಿಸುವ ಒಳ್ಪು, ಶಿವಭಕ್ತರನ್ನು ಮನ್ನಿಸುವ ಮನಸ್ಸೂ, ಸತ್ಯದಲ್ಲಿ ಪ್ರೀತಿಯೂ, ಶಾಸ್ತ್ರದಲ್ಲಿ ಪಾಂಡಿತ್ಯವೂ ನಿಮ್ಮ ವಂಶದವರ ಸ್ವಭಾವಗುಣವಾಗಿರುವದು. ಸಾರ್ವಭೌಮನೇ, ಮೂರುಲೋಕಗಳಲ್ಲಿ ನಿನ್ನ ಸಂಗಡ ಯುದ್ಧಮಾಡಲಿಕ್ಕೆ ಸಮರ್ಥರು ಯಾರಿರುವರು? ಕಾರಣ ಭೂಧವನಾದ ಸಿಂಹಳೇಂದ್ರನಲ್ಲಿ ಒಡಂಬಡಿಕೆಯನ್ನು ಅಂಗೀಕರಿಸುವದು ನಿನಗೆ ಭೂಷಣವಾಗಿರುವದು.

ಈ ಪ್ರಕಾರ ಮಿತವಚನನಾಡಿದ ನುಡಿಗೆ ರಾಜಶೇಖರನು ಸಮ್ಮತಿಸಲು, ನೀತಿ ಭೂಷಣನು ಸನ್ಮಾನಿತನಾಗಿ ಸಿಂಹಳನೆಡೆಗೆ ಬಂದು, ನಡೆದ ಸಂಗತಿಯನ್ನೆಲ್ಲಹೇಳಿದನು. ಅದನ್ನು ಕೇಳಿ ಸಿಂಹಳರಾಜನು ಸಂತೋಷಬಟ್ಟು, ಆತನಿಗೆ ಭೂಷಣಾಂಬರಗಳನ್ನು ಮೆಚ್ಚುಗೊಟ್ಟು, ಚತುರಂಗಬಲವು ಸಿದ್ಧವಾಗಲು, ಮಾಂಡಲಿಕ ಭೂಪಾಲರು ತನ್ನನ್ನು ಸುತ್ತಿಕೊಳ್ಳಲು, ವಾದ್ಯಧ್ವನಿಗಳು ದಿಗಂತವನ್ನು ವ್ಯಾಪಿಸಲು, ರಾಜಶೇಖ ರನನ್ನು ಇದಿರುಗೊಳ್ಳುವದಕ್ಕಾಗಿ ಹೊರಟನು. ಆಗ ರಾಜಶೇಖರನು ಗಜವನ್ನೇರಿ ದೇವೇಂದ್ರನಂತೆ ಅತಿ ವಿಭವದಿಂದ ರಾಜಮಾರ್ಗದಲ್ಲಿ ಬರುತ್ತಿರಲು, ಕುಲೀನರಾದ ಪುರ ಸ್ತ್ರೀಯರು ಕಯ್ಯೊಳಗಿನ ಕೆಲಸಗಳನ್ನು ಬದಿಗಿಟ್ಟು, ರತ್ನದುಪ್ಪರಿಗೆಗಳನ್ನೇರಿ, ಆ ಕುಮಾ ರನನ್ನು ನೋಡತೊಡಗಿದರು-

ಇತ್ತ, ಸಿಂಹಳರಾಜನಿಗೆ ಪಾರ್ವತಿಯ ವರದಿಂದ ಹುಟ್ಟಿದ ಸರ್ವಮಂಗಳೆಯೆಂಬ ರಾಜಪುತ್ರಿಯು ಸೌಂದರ್ಯಶಾರದೆಯೆಂಬ ಸಖಿಯ ಸಂಗೀತವನ್ನು ಆಲಿಸುತ್ತ, ಕ್ರೀಡಾವ ನದಲ್ಲಿ ಕುಸುಮ ಮಂಟಪದಲ್ಲಿ ಹೂವಿನ ಹಾಸಿಗೆಯ ಮೇಲೆ ಕುಳಿತಿದ್ದಳು- ಅಷ್ಟರಲ್ಲಿ ಗೆಳತಿಯರು ಅಲ್ಲಿಗೆ ಓಡಿ ಬಂದು—“ ರಾಜಪುತ್ರಿಯೇ, ಕಮಲದಂತೆ ವಿಶಾಲವಾದ ಕಣ್ಣುಗಳುಳ್ಳವನೂ, ಚಂದ್ರನಂತೆ ಮುಖವುಳ್ಳವನೂ, ಪ್ರಕಾಶದಿಂದ ಮನೋಹರವಾದ ಚಶರೀರವುಳ್ಳವನೂ, ಹೊಸಪ್ರಾಯದ ಗುರುತುಗಳುಳ್ಳವನೂ, ಬಹು ಲುವನೂ, ರಾಜ ರಲ್ಲಿ ಮೀರಿದ ಶೂರನೂ ಆದ ರಾಜಶೇಖರನು ಬರುತ್ತಿರುವನು, ನೋಡಲಿಕ್ಕೆ ಏಳು ” ಎಂದು ಹೇಳಿದರು. ಗೆಳತಿಯರ ನುಡಿಕೇಳಿ ಸರ್ವಮಂಗಳೆಯು ಪ್ರಸನ್ನವದನೆಯಾಗಿ ಬಿಂಕದಿಂದೆದ್ದು, ನೆಲೆವೊಲೆಗಳು ಅದುರದೆ ಶೋಭಿಸಲು, ಬಳಲುಮುಡಿಯು ಹೂಗಳನ್ನು ಸುರಿಸಲು, ಒಡ್ಯಾಣವು ಮಧುರಧ್ವನಿಗೆಯ್ಯಲು, ನೂಪುರಗಳು ಉಲಿಯಲು, ಬಡ ನಡು ಬಳ್ಕಲು, ಸಖಿಯರೊಡನೆ ಮೆಲ್ಲನೆ ರಮ್ಯವಾದ ಹರ್ಮ್ಯವನ್ನೇರಿ, ಅದರ ಮುಂದಿನ ಚಂದ್ರಕಾಂತದ ಕಲ್ಲ ವೇದಿಕೆಯ ಮೇಲೆ ಉತ್ಸಾಹದಿಂದ ನಿಂತು, ವಿಶಾಲನೇತ್ರ

ಗಳಿಂದ ರಾಜಮಾರ್ಗವನ್ನು ನೋಡಹತ್ತಿದಳು. ಅಷ್ಟರಲ್ಲಿ ಕಿರೀಟದ ರತ್ನಗಳ ವಿಚಿತ್ರವಾದ ಕಾಂತಿಯನ್ನು ಆಕಾಶದಲ್ಲಿ ಹರವುತ್ತ, ಮುಖಚಂದ್ರ ಕಾಂತಿಯಿಂದ ತರುಣಿಯರ ನೇತ್ರ ಕುಮುದಗಳನ್ನು ಅರಳಿಸುತ್ತ, ರೂಪದಿಂದ ಕಾಮನನ್ನು ಗೆಲ್ಲುತ್ತ, ರಾಜಶೇಖರನು ಆನೆಯನ್ನು ಹತ್ತಿ ಬರುತ್ತಿದ್ದನು- ಆಗ ಮದನಸುಂದರನಾದ ಆ ರಾಜಕುಮಾರನನ್ನು ಎವೆಯಿಕ್ಕದೆ ಪರವಶೆಯಾಗಿ ನೋಡುವ ಸರ್ವಮಂಗಳೆಯ ವಿಶಾಲ ನೇತ್ರಗಳ ಕಾಂತಿಯು ಹಬ್ಬಿತು; ಮುಖದಲ್ಲಿ ಬೆವರ ಹನಿಗಳು ತೋರಹತ್ತಿದವು; ಮನಸ್ಸಿನಲ್ಲಿ ಕೌತುಕವು ಉತ್ಪನ್ನವಾಯಿತು; ಪುಷ್ಟಸ್ತನಗಳು ಕಂಪಿಸಿದವು; ಲೀಲಾಕಮಲವು ಕೈಯಿಂದ ಜಾರಿತು.

ಈ ಮೇರೆಗೆ ಸಖಿಯರ ತಂಡದಲ್ಲಿ ಎವೆಯಿಕ್ಕದೆ ತನ್ನನ್ನು ನೋಡುವ ಸರ್ವಮಂಗಳೆಯನ್ನು ರಾಜಶೇಖರನು ಕಮಲದೆಡೆಯಲ್ಲಿ ಲಕ್ಷ್ಮಿಯನ್ನು ಶ್ರೀ ಕೃಷ್ಣನು ನೋಡುವಂತೆ ನೋಡಿ, ಕೌತುಕ ರಸಪ್ರವಾಹದಲ್ಲಿ ಮುಳುಗಿ, ಮೋಹಿಸಿದನು. ಸರ್ವಮಂಗಳೆಯ ನಿರತಿಶಯ ಸೌಂದರ್ಯ-ದರ್ಶನದಿಂದ ರಾಜಶೇಖರನ ಧೈರ್ಯವು ಕೆಟ್ಟಿತು; ಮನಸ್ಸು ಚಂಚಲವಾಯಿತು; ಹೃದಯಪಟದಲ್ಲಿ ಸರ್ವಮಂಗಳೆಯ ಚಿತ್ರವು ಮೂಡಿವಿರಹವು ಉತ್ಪನ್ನವಾಯಿತು. ಆಗ ಅವನು ಮನದಲ್ಲಿ—"ಈ ಪ್ರಮದೆಯ ಈ ಮಾಧುರ್ಯವೂ, ನೇತ್ರಕಾಂತಿಯೂ, ಮೆಯ್ ಸೊಬಗೂ, ಮುಖದ ಶೋಭೆಯೂ, ಕಮಲದ ಮೊಗ್ಗೆಗಳನ್ನು ಹೋಲುವ ಈ ಕುಚಗಳೂ, ಈ ಪ್ರಥುಳವೃತ್ತಶ್ರೋಣಿಯೂ, ಈ ವಿಭ್ರಮವೂ, ಈ ಸೌಂದರ್ಯವೂ, ಈ ಸದ್ಗುಣಗಳೂ ನನ್ನ ಮನಸ್ಸನ್ನು ಸೆರೆಹಿಡಿದವು. ಯಾರಿಗೂ ಸೋಲದ ನನ್ನ ಮನಸ್ಸನ್ನು ಈ ಲಲನೆಯ ಸೌಂದರ್ಯವು ಸೋಲಿಸಿತಲ್ಲ! ಶಿವಶಿವಾ, ಶಶಿಮೌಳಿಯ ಮಾಯೆಯನ್ನು ಮೀರಿದವರಾರಿರುವರು!" ಎಂದು ನೆನಿಸಿದನು.

ಇಂತು ನೆನೆದು ವಿಸ್ಮಯಪಟ್ಟು, ಚಲ್ಲಿದ ಕರಣಗಳನ್ನು ಮೆಲ್ಲಮೆಲ್ಲನೆ ಸಮಾಧಾನ ಪಡಿಸುತ್ತ, ಧೀರೋದಾತ್ತನಾದ ರಾಜಶೇಖರನು ಮುಂದಕ್ಕೆ ಸಾಗಿ, ಕಣ್ಮರೆಯಾಗಲು, ಸರ್ವಮಂಗಳೆಯ ಎದೆಯು ಹಾರಹತ್ತಿತು; ಮೆಯ್ ಜುಮ್ಮೆಂದು ಪುಳಕಗಳು ಅಂಕುರಿಸಿದವು; ಮೊಲೆಗಳ ಇರುಂಬಿನಲ್ಲಿ ಬೆವರು ಹುಟ್ಟಿತು; ನುಣ್ದೊಡೆಗಳು ನಡುಗಹತ್ತಿದವು; ಸುಯ್ಯಲರು ಜಿಚ್ಚಗಾಯಿತು; ಶರೀರಕ್ಕೆ ಮೂರ್ಛೆಯು ಬರಹತ್ತಿತು. ಆಗ ಕಳಾರಮೆ ಮೊದಲಾದ ಸಖಿಯರು ಸರ್ವಮಂಗಳೆಯು ಇಂತು ಚಂದಗೆಟ್ಟದ್ದನ್ನು ನೋಡಿ, ವಿಸ್ಮಯಪಟ್ಟು ವಿರಹತಾಪವನ್ನು ಕಡಿಮೆ ಮಾಡುವದಕ್ಕಾಗಿ, ಕೆಂದಳಿರ ಪಲ್ಲಕ್ಕಿಯೊಳಗಿಂದ ಆಕೆಯನ್ನು ಕ್ರೀಡಾವನಕ್ಕೆ ಕರೆದೊಯ್ದರು. ಇನೆಯನ ಅಗಲಿಕೆಯ ಕಿಚ್ಚಿನಿಂದ ಬೇಯುತ್ತಿರುವ ಆ ಮೃಗಾಕ್ಷಿಗೆ ಗೆಳತಿಯರು ಶೀತೋಪಚಾರಗಳನ್ನು ಮಾಡಿದಂತೆ ಆಕೆಯ ವಿರಹತಾಪವು ಹೆಚ್ಚುತ್ತ ಹೋಯಿತು. ಅವಳು ಹೂವನ್ನು ಮುಡಿಯದೆ, ಸಖಿಯರನ್ನು ಪರೀಕ್ಷಿಸದೆ, ಕನ್ನಡಿಯನ್ನು ನೋಡದೆ, ಜಳಕವನ್ನು ಮಾಡದೆ, ಶರೀರವನ್ನು ಶೃಂಗರಿಸದೆ, ಊಟವನ್ನು ಇಚ್ಛಿಸದೆ, ಆಟವನ್ನು ಆಡದೆ, ಬಿಸಿಯಾದಚಿನ್ನದ ಪುತ್ತಳಿಯಂತೆ ಬೇರೊಂದು ಸೌಂದರ್ಯಕ್ಕೆ ಸ್ಥಾನವಾಗಿ ಮನಸ್ಸಿನಲ್ಲಿ ವಿಚಾರಿಸುತ್ತಿದ್ದಳು.

ಇತ್ತ ಕಡೆಯಲ್ಲಿ ಸಿಂಹಳನು ರಾಜಶೇಖರನನ್ನು ಕರೆತಂದು, ಹಲವು ರೀತಿಯಿಂದ ಉಪಚರಿಸಿ, ಅಂತಃಪುರದ ಒಳವಲಯದಲ್ಲಿರುವ ಮಣಿಮಯ ಪ್ರಾಸಾದವನ್ನು ಆತನಿಗೆ ಬಿಡಾರವಾಗಿ ಕೊಟ್ಟು ಊಟ-ಉಪಚಾರಗಳ ಸಲುವಾಗಿ ತಕ್ಕ ಪರಿಚಾರಕರನ್ನು ನಿಯಮಿಸಿದನು. ತರುವಾಯ ಸಾನಂದಹೃದಯನಾದ ಆ ಸಿಂಹಳನು ತನ್ನ ಹೆಂಡತಿಯ ಬಳಿಗೆ ಹೋಗಿ, ಅವಳೊಡನೆ ತನ್ನ ಕುವರಿಯಾದ ಸರ್ವಮಂಗಳೆಯನ್ನು ಈ ಕುಮಾರ ರಾಜಶೇಖರನಿಗೆ ಕೊಡಬೇಕೆಂದು ನುಡಿಯುತ್ತಿದ್ದನು. ಅಷ್ಟರಲ್ಲಿ ಸೌಂದರ್ಯಶಾರದೆ ಯೆಂಬ ಸರ್ವಮಂಗಳೆಯ ಗೆಳತಿಯು ಅಲ್ಲಿಗೆ ಬಂದು ರಾಜಪುತ್ರಿಯ ವಿರಹವನ್ನು ಆ ರಾಜದಂಪತಿಗಳಿಗೆ ತಿಳಿಸಿದಳು. ತಮ್ಮ ವಿಚಾರಕ್ಕೆ ಮಗಳ ಸ್ಥಿತಿಯೂ, ಮನಸ್ಸೂ ಅನುಕೂಲವಿದ್ದದ್ದನ್ನು ತಿಳಿದು, ಅವರು ಆನಂದಪಟ್ಟು, ಈ ಕುವರಿಗೆ ಈ ಕುಮಾರ ನಲ್ಲದೆ, ಅನ್ಯವರನು ಯೋಗ್ಯನಲ್ಲೆಂದು ನಿಶ್ಚಯಿಸಿದರು. ಮರುದಿವಸ ಸಿಂಹಳನು ಈ ಲಗ್ನದ ಪ್ರಸಕ್ತಿಯನ್ನು ತನ್ನ ಮಂತ್ರಿಯೊಡನೆ ನುಡಿಯುತ್ತಿರಲು, ಪತಿವ್ರೋಹಿಯೆಂಬ ರಾಜಶೇಖರನ ಮಂತ್ರಿಯೂ ಅಲ್ಲಿಗೆ ಬಂದನು. ಅರಸನು ಆತನನ್ನು ಉಚಿತಾಸನದಲ್ಲಿ ಕುಳ್ಳಿರಿಸಿದ ಬಳಿಕ ಪತಿವ್ರೋಹಿಯು ಸಿಂಹಳನನ್ನು ಕುರಿತು—"ಭೂಪತಿಯೇ, ಗಿರಿರಾಜನು ಗಿರಿಜೆಯನ್ನು ಚಂದ್ರಶೇಖರನಿಗೆ ಕೊಟ್ಟು ಮದುವೆ ಮಾಡಿದಂತೆ ನೀನು ಸರ್ವಮಂಗಳೆ ಯನ್ನು ರಾಜಶೇಖರನಿಗೆ ಕೊಟ್ಟು ಮದುವೆ ಮಾಡು." ಎಂದು ಹೇಳಿದನು. ಆಗ ಸಿಂಹ ಳರಾಜನು, ಮನೋರಥವು ಪೂರ್ಣವಾದಂತೆ ಆನಂದಪಟ್ಟು, 'ಕೊಟ್ಟೆನು ಕೊಟ್ಟೆ ನೆಂ'ದು ನುಡಿದು ಒಳ್ಳೆಯ ಮುಹೂರ್ತವನ್ನು ತೆಗೆದು ಲಗ್ನಕ್ಕೆ ಅವಶ್ಯವಾದ ಮಂಟ ಪಾದಿಗಳ ಸಿದ್ಧತೆಯ ಕಡೆಗೆ ತೊಡಗಿದನು. ಇತ್ತ ಪತಿವ್ರೋಹಿಯು ರಾಜಶೇಖರನ ಹತ್ತರ ಬಂದು, ನಡೆದ ಸಂಗತಿಯನ್ನು ತಿಳಿಸಿ, ಆತನ ಅಪ್ಪಣೆಯಿಂದ ಧರ್ಮವತಿಗೆ ಬಂದು, ರಾಜಶೇಖರನ ತಂದೆಯಾದ ಸತ್ಯೇಂದ್ರಚೋಳರಾಜನಿಗೆ ಎಲ್ಲ ಸಂಗತಿಯನ್ನು ತಿಳಿಸಿ, ಸರ್ವಮಂಗಳೆಯ ಸೌಂದರ್ಯವನ್ನು ಯಥಾಯೋಗ್ಯವಾಗಿ ವರ್ಣಿಸಿದನು. ಆಗ ಸತ್ಯೇಂದ್ರಚೋಳನು ಆನಂದಪಟ್ಟು, ಮಗನ ವಿವಾಹಕ್ಕೆ ಸಮ್ಮತಿಸಲು, ಪತಿ ವ್ರೋಹಿಯು ಕಮಲದುರ್ಗಕ್ಕೆ ತಿರುಗಿಬಂದು, ರಾಜಶೇಖರನಿಗೆ ತಂದೆಯ ಸಮ್ಮತಿ ಯನ್ನು ತಿಳಿಸಿದನು. ಅದನ್ನು ಕೇಳಿ ರಾಜಶೇಖರನು ಮೋದಪಟ್ಟು, ಭಕ್ತಿಯಿಂದ ಶಿವಪೂಜೆಯನ್ನು ಮಾಡಿ, ಶಿವಕಥಾಶ್ರವಣಂಗೆಯ್ದು, ಭೋಜನ-ಧನ-ವಸ್ತ್ರಾಭರಣಗ ಳಿಂದ ಶಿವಭಕ್ತಸ್ತೋಮವನ್ನು ತೃಪ್ತಿಪಡಿಸಿ, ಆನಂದಪರವಶನಾಗಿರುತ್ತಿದ್ದನು.

ಇತ್ತ ಸಿಂಹಳರಾಜನು ಕುಶಲರಾದ ಕೈಗಾರಿಕೆಯವರಿಂದ ಕಟ್ಟಿಸಿದ ಲಗ್ನಮಂಟ ಪವು ಮುತ್ತಿನ ತೋರಣಗಳಿಂದಲೂ, ಬಂಗಾರದ ಜಗುಲಿಗಳಿಂದಲೂ, ಪಚ್ಚರತ್ನದ ನೆಲಗಟ್ಟಿನಿಂದಲೂ, ಸುತ್ತಲು ಇಳಿಬಿಟ್ಟಿರುವ ರತ್ನದ ಗೊಂಚಲುಗಳಿಂದಲೂ, ರೇಶಿಮೆಯ ವಸ್ತ್ರದ ಮೇಲ್ಕಟ್ಟಿನಿಂದಲೂ, ವಜ್ರದ ಕಂಬಗಳಿಂದಲೂ, ನೀಲರತ್ನದ ಗೊಂಬೆಗಳಿಂದಲೂ ಮನೋಹರವಾಗಿ ಒಪ್ಪುತ್ತಿತ್ತು. ಅಲ್ಲಿ ತರುಣಿಯರು ಇಂದ್ರನೀಲದ ಗೋಡೆಗಳಿಗೆ ಕುಂಕುಮದ ಕಾರಣಿಯನ್ನು ತೆಗೆದು, ಪಚ್ಚನೀಲರತ್ನಗಳ ನೆಲಗಟ್ಟಿನಲ್ಲಿ ಮುತ್ತುರತ್ನಗಳ

ರಂಗವಲ್ಲಿಗಳನ್ನು ಹಾಕುತ್ತಿದ್ದರು. ಆ ಮಂಟಪದ ಮೇಲ್ಗಡೆಯಲ್ಲಿ ಮುತ್ತಿನ ಗೊಂಚಲುಗಳು ತೂಗಾಡುತ್ತಿದ್ದವು; ಕೆಚ್ಚಿದ ರತ್ನಗಳು ಮಿನುಗುತ್ತಿದ್ದವು; ಕೂಡಿಸಿದ ರತ್ನದ ಕನ್ನಡಿಗಳು ಹೊಳೆಯುತ್ತಿದ್ದವು; ಸುತ್ತುಗೊಂಡ ವೈಡೂರ್ಯದ ಲೋವಿಯು ಒಪ್ಪುತ್ತಿತ್ತು; ನಿಲ್ಲಿಸಿದ ನಿಶಾನೆಗಳು ಗಗನಕ್ಕೆ ಮುಟ್ಟುತ್ತಿದ್ದವು. ಇಂತು ರಮಣೀಯವಾದ ವಿವಾಹಮಂಟಪದಲ್ಲಿ ವಿಬುಧರು ನೆರೆದಿದ್ದರು; ರಾಜಪುತ್ರರು ಸಾಲಾಗಿ ಕುಳಿತಿದ್ದರು; ಮರ್ಮವನ್ನು ಬಲ್ಲ ಮಂತ್ರಿಗಳು ಕೂಡಿದ್ದರು; ಸತ್ಕವಿಗಳು ಬಣ್ಣಿಸುತ್ತಿದ್ದರು; ಪ್ರಜೆಗಳು ಸುತ್ತುಗಟ್ಟಿದ್ದರು; ನಾಯಕಿಯರು ಮೆರೆಯುತ್ತಿದ್ದರು; ವಿವಾಹಮಂಗಲ ದ್ರವ್ಯಗಳು ಒಪ್ಪುತ್ತಿದ್ದವು; ಜೋಯಿಸರು ಗಳಿಗೆ ಬಟ್ಟಲವನ್ನು ಕಾಯುತ್ತಿದ್ದರು.

ಈ ಪ್ರಕಾರ ಹೊಗಳಲಶಕ್ಯವಾದ ವಿವಾಹಮಂಟಪವು ವಧೂವರರ ಬರವನ್ನು ಬಯಸುತ್ತಿರಲು, ಸಿಂಹಳರಾಜನ ಅಪ್ಪಣೆಯಿಂದ ಸಖಿಯರು ಸರ್ವಮಂಗಳೆಗೆ ಮಂಗಳ ಸ್ನಾನವನ್ನು ಮಾಡಿಸಿ, ಕೆಂಪು ವಸ್ತ್ರವನ್ನು ಉಡಿಸಿ, ಕುಪ್ಪಸವನ್ನು ತೊಡಿಸಿ, ರತ್ನಾಭರಣಗಳನ್ನು ಇಡಿಸಿ, ಆಕೆಯನ್ನು ಅಲಂಕರಿಸಿದರು. ಇತ್ತ ರಾಜಶೇಖರನಾದರೂ ಮಂಗಲ ಸ್ನಾನವನ್ನು ಮಾಡಿ, ವಸ್ತ್ರಾಲಂಕಾರಗಳಿಂದ ಅಲಂಕೃತನಾಗಿ, ಪರಿವಾರವನ್ನು ಕೂಡಿಕೊಂಡು, ವಾದ್ಯಧ್ವನಿಗಳು ಮೊಳಗುತ್ತಿರಲು, ಇಂದ್ರನ ವೈಭವದಿಂದ ಮಿತವಚನನೊಡನೆ ವಿವಾಹಗೃಹದ ಬಾಗಿಲಿಗೆ ಬಂದು, ಆನೆಯಿಂದ ಇಳಿದನು. ಆಗ ಸಚಿವನು ಕಯ್ಗೊಡಲಾಗಿ, ರಾಜಶೇಖರನು ಮಂಟಪವನ್ನು ಪ್ರವೇಶಿಸಿ, ಮಧುಪರ್ಕವನ್ನು ಕೈಕೊಂಡು, ಪುಣ್ಯಾಹವಾಚನೆಯನ್ನು ಮಾಡುವ ಪುರೋಹಿತರ ಧ್ವನಿಯೊಡನೆ ಭದ್ರಾಸನವನ್ನು ಅಲಂಕರಿಸಿದನು. ಪುರೋಹಿತರು ಮುಹೂರ್ತವು ಸಮೀಪಿಸಿತೆಂದು ಸಿಂಹಳನಿಗೆ ಹೇಳಲು, ಆತನು ಕೇಳಿ, ಕುವರಿಯನ್ನು ಕರೆತರುವದಕ್ಕೆ ಮಂತ್ರಿಗೆ ಹೇಳಿದನು. ಆಗ ಮಂತ್ರಿಯು ಅಂತಃಪುರಕ್ಕೆ ಹೋಗಿ, ರಾಜಪುತ್ರಿಯನ್ನು ಕರೆತಂದನು. ತರುವಾಯ ಸುಮುಹೂರ್ತದಲ್ಲಿ ವಧೂವರರ ಪಾಣಿಗ್ರಹಣವಾಗಿ, ಯಥೋಚಿತ ಕರ್ಮಗಳಿಂದ ವಿವಾಹಕಾರ್ಯವು ನೆರವೇರಿತು. ಈ ನೂತನ ದಂಪತಿಗಳನ್ನು ನೋಡಿ, ಸಿಂಹಳರಾಜನೂ, ಆತನ ಹೆಂಡತಿಯಾದ ಕಳಾಧರೆಯೂ ಆನಂದಪಟ್ಟರು. ಈ ವಿವಾಹವನ್ನು ನೋಡಿದ ಸರ್ವಮಂಗಳೆಯ ಗೆಳತಿಯರ ಸಂಭ್ರಮಕ್ಕೆ ಇಂಬಿಲ್ಲದಾಯಿತು. ಅವರಲ್ಲಿ ಓರ್ವಳು "ಪಾರ್ವತಿಯ ವರದಿಂದ ಹುಟ್ಟಿದ ಈ ಸರ್ವಮಂಗಳೆಯು ಆ ಪಾರ್ವತಿಯ ಪ್ರಸಾದದಿಂದಲೇ ಈ ಯುವರಾಜನನ್ನು ಮದುವೆಯಾದಳು. ಇವರ ಚಂದ, ಇವರ ವಿಭ್ರಮ, ಇವರ ಲಾವಣ್ಯ, ಇವರ ಸೊಬಗು, ಇವರ ಸದ್ಗುಣಗಳು ಇವರಲ್ಲಿ ಅಲ್ಲದೆ, ಮತ್ತಾರಲ್ಲಿಯೂ ದೊರೆಯವು." ಎಂದು ಹೊಗಳಿದಳು. ಇಂತು ಸಕಲ ಜನರ ಮನಸ್ಸಿಗೂ ಆನಂದವಾಗುವಂತೆ ಈ ಮಂಗಲೋತ್ಸವವು ಸಾಗಿರಲು, ಸಿಂಹಳನು ಕನಕರತ್ನಗಳನ್ನಿತ್ತು ವಿಬುಧರನ್ನು ಸಂತೋಷಗೊಳಿಸಿದನು. ರಾಜಶೇಖರನು ಸರ್ವಮಂಗಳೆಯೊಡನೆ ಸಂಸಾರಸುಖವನ್ನು ಅನುಭವಿಸುತ್ತಿದನು.

**ಉತ್ಕರ್ಷ:**—ಶರಣಜನಪ್ರಿಯನಾದ ರಾಜಶೇಖರನು ಕಾಂತೆಯೊಡನೆ ಉಮಾ

ಭವನ ಪೂಜೆಯನ್ನು ಮಾಡುತ್ತ, ಸುಖಸಂಪದವನ್ನು ಅನುಭವಿಸುತ್ತ ಮಳೆಗಾಲ ಚಳಿಗಾಲಗಳನ್ನು ಕಳೆದನು. ತಾಯಿ-ತಂದೆಗಳನ್ನು ಬಿಟ್ಟುಬಂದು ಬಹುದಿವಸಗಳಾದ್ದರಿಂದ ಆತನಿಗೆ ತನ್ನ ರಾಜ್ಯಕ್ಕೆ ಹೋಗುವ ಇಚ್ಛೆಯು ಉತ್ಪನ್ನವಾಯಿತು. ಆತನು ಈ ಸಂಗತಿಯನ್ನು ತನ್ನ ಹೆಂಡತಿಗೆ ತಿಳಿಸಿ, ಸಚಿವನ ಮುಖದಿಂದ ಸಿಂಹಳೇಂದ್ರನಿಗೂ ತಿಳಿಸಿದನು. ಆಗ ಸಿಂಹಳರಾಜನು ತನ್ನ ಹೆಂಡತಿಯೊಡನೆ ನುಡಿದನೇನಂದರೆ—ಅಬಲೆಯೇ, ನನ್ನ ಮಾತನ್ನು ಕೇಳಿ ಅಳಿಯನು ಇಲ್ಲಿಯವರೆಗೆ ನಮ್ಮ ಮನೆಯಲ್ಲಿ ಇದ್ದನು; ಇಷ್ಟೇ ಸಾಕು-ಮತ್ತೆ ಇರಹೇಳುವದು ಯೋಗ್ಯವಲ್ಲ, ಕಾರಣ ಮಗಳನ್ನು ಕಳಿಸತಕ್ಕದ್ದು.

ಇಂತು ಆ ರಾಜದಂಪತಿಗಳು ಯೋಚಿಸಿ ಏಕಚಿತ್ತರಾಗಿ ಮಗಳನ್ನು ಕಳುಹಿಸುವದನ್ನು ನಿಶ್ಚಯಿಸಿದರು. ತರುವಾಯ ಅವರು ಶುಭಮುಹೂರ್ತದಲ್ಲಿ ಮಗಳನ್ನೂ, ಅಳಿಯನನ್ನೂ ಮಂಗಳಾಲಂಕಾರಗಳಿಂದ ಅಲಂಕರಿಸಿ, ಸಿಂಹಾಸನದಲ್ಲಿ ಕುಳ್ಳಿರಿಸಿ, ತೃಪ್ತಿಯಿಲ್ಲದೆ ತಿರುತಿರುಗಿ ನೋಡಿ ಆಶೀರ್ವದಿಸಿದರು. ಆಗ ಕಳಾಧರೆಯು ಮಗಳ ಮುಖವನ್ನು ಅತಿ ಸ್ನೇಹದಿಂದ ನೋಡಿ—ತಂಗೀ, ನೀನು ಗಂಡನ ಇಚ್ಛೆಯಂತೆ ಇರು, ಅತ್ತೆ ಮಾವಂದಿರ ಅಪ್ಪಣೆಯನ್ನು ಮೀರಬೇಡ, ಸಜ್ಜನರ ಹಿತದ ಮಾತುಗಳಿಗೆ ಲಕ್ಷಕೊಡು, ಬಂಧುಗಳನ್ನು ಉಪಚರಿಸು, ಶಿವನಲ್ಲಿ ಸಂಪೂರ್ಣ ಭಕ್ತಿಯನ್ನಿಡು; ತಿಳಿದವಳಾದ ನಿನಗೆ ಹೆಚ್ಚಿಗೆ ಹೇಳುವದೇನದೆ! ಕೀರ್ತಿ ಪಡೆದು ಬಾಳಿ ನಮಗೆ ಆನಂದವನ್ನುಂಟುಮಾಡು-ಎಂದು ಬುದ್ಧಿ ಹೇಳಿದಳು. ತರುವಾಯ ಸಿಂಹಳನು ಮಗಳಿಗೆ ದಾಸಿಯರನ್ನೂ, ಮಣಿ ಮಂಚ ಹಾಸಿಗೆ ಮೊದಲಾದ ಉಪಭೋಗ್ಯ ಪದಾರ್ಥಗಳನ್ನೂ, ಬಳುವಳಿಗಳನ್ನೂ ಕೊಟ್ಟು ಮಂಗಳವಾದ್ಯಗಳೊಡನೆ ತನ್ನ ಪಟ್ಟಣವನ್ನು ಬಿಟ್ಟು ಸ್ವಲ್ಪ ಅಂತರದ ವರೆಗೆ ಕಳುಹಿ, ತಿರುಗಿ ಕಮಲದುರ್ಗವನ್ನು ಸೇರಿದನು. ಇತ್ತ ರಾಜಶೇಖರನು ರಮ್ಯವನಗಳಲ್ಲಿ ಬೀಡು ಬಿಡುತ್ತ, ಪ್ರಿಯಳೊಡನೆ ಸುಖಪಯಣಗಳನ್ನು ಮಾಡುತ್ತ ತನ್ನ ರಾಜಧಾನಿಗೆ ಮುಟ್ಟಿದನು. ಆಗ ಧರ್ಮವತೀ ಪಟ್ಟಣವು ಗುಡಿ ತೋರಣಗಳಿಂದ ಶೃಂಗರಿಸಲ್ಪಟ್ಟು, ಪರಿಜನರೂ, ಪುರಜನರೂ, ಬಂಧುಗಳೂ, ರಾಜಪುತ್ರರೂ ಕೂಡಿ ಅನೇಕ ಮಂಗಳವಾದ್ಯಗಳೊಡನೆ ರಾಜಶೇಖರನನ್ನು ಇದಿರ್ಗೊಂಡು ಕರೆತಂದರು. ಈ ನೂತನ ದಂಪತಿಗಳಿಗೆ ವಿಲಾಸಿನೀಜನರು ರತ್ನದಾರತಿಗಳನ್ನು ಬೆಳಗುತ್ತಿರಲು, ರಾಜಶೇಖರನು ತನ್ನ ಜನನಿ ಜನಕರಿರುವಲ್ಲಿಗೆ ಹೆಂಡತಿಯೊಡನೆ ಹೋಗಿ, ಅವರಿಗೆ ನಮಸ್ಕರಿಸಿ ನಿಂತುಕೊಂಡನು. ಆಗ ಅಮೃತವತೀ ಮಹಾದೇವಿಯೂ, ಸತ್ಯೇಂದ್ರಚೋಳರಾಜನೂ ಅವರನ್ನು ಹರಿಸಿ ಕುಳ್ಳಿರಿಸಿಕೊಂಡು ಸರಸ ಪ್ರಸನ್ನ ದೃಷ್ಟಿಯಿಂದ ನೋಡಿ, ಸೊಸೆಯ ನವಯೌವನ ರೂಪಲಾವಣ್ಯ ಸೌಶೀಲ್ಯ ಸಂಪದಕ್ಕೆ ಸಂತಸಬಟ್ಟು ಉಚಿತ ಮಂಗಳಕಾರ್ಯಗಳನ್ನು ನೆರವೇರಿಸಿ, ಶುಭಮುಹೂರ್ತದಲ್ಲಿ ಸೊಸೆಯನ್ನು ಮನೆದುಂಬಿಸಿಕೊಂಡರು.

ಒಂದಾನೊಂದು ದಿನ ಸಭಾಜನರೆಲ್ಲರೂ ಆನಂದದಿಂದಿರಲು, ಸಿಂಧುದೇಶಾಧಿಪತಿಯು ಎದ್ದುಬಂದು ರಾಜಶೇಖರವಿಭುವಿಗೆ ಪೊಡಮಟ್ಟು ಶ್ರೇಷ್ಠವಾದ ಮುತ್ತಿನ ಕಂಠಭೂಷಣವನ್ನೂ, ವೇಗಶಾಲಿಗಳೂ, ಸುಲಕ್ಷಣಗಳುಳ್ಳವೂ ಆದ ಎರಡು ಬಿಳಿಯ ಕುದು

ರೆಗಳನ್ನೂ ಕಾಣಿಕೆಯಾಗಿ ಕೊಟ್ಟನು. ರಾಜಶೇಖರನು ಆ ಕಾಣಿಕೆಗಳನ್ನು ಸ್ವೀಕರಿಸಿ, ಆ ಉತ್ತಮ ಕುದುರೆಗಳನ್ನು ನೋಡಿ ಸಂತೋಷಪಟ್ಟು ಸಿಂಧುದೇಶಾಧಿಪತಿಯನ್ನು ಪ್ರಸನ್ನ ದೃಷ್ಟಿಯಿಂದ ನೋಡಲು, ಆತನು ಉತ್ಸಾಹಗೊಂಡು ಅಪ್ಪಣೆಪಡೆದು ತನ್ನ ದೇಶಕ್ಕೆ ಹೊರಟು ಹೋದನು. ಅಷ್ಟರಲ್ಲಿ ಮಧ್ಯಾಹ್ನದ ಭೇರಿಯು ಬಾರಿಸಿತು. ಆಗ ರಾಜಶೇಖರನು ಓಲಗವನ್ನು ಬಿಡುವದಕ್ಕೆ ಅಪ್ಪಣೆಯಿತ್ತು, ಎದ್ದು ಬಂದು, ಶುದ್ಧಾಂತಃಕರಣನಾಗಿ ಭಕ್ತಿಯಿಂದ ಮಧ್ಯಾಹ್ನದ ಶಿವಪೂಜೆಯನ್ನು ಮಾಡಿ, ಭಾವದಲ್ಲಿ ಆ ಪರಶಿವ ಮೂರ್ತಿಯು ನೆಲೆಗೊಳ್ಳಲು, ಆತ್ಮ ನೈವೇದ್ಯವನ್ನು ಮಾಡಿದನು.

ಭವಿತವ್ಯ:—ಶಿವಪೂಜೆಯನಂತರ ರಾಜಶೇಖರನು ಮಿತವಚನನೊಡನೆ ಶಿವಪ್ರಸಾದವನ್ನು ಗ್ರಹಿಸಿ, ತಾಂಬೂಲವನ್ನು ಸವಿದು, ಸುಖಾಸನದಲ್ಲಿ ಕುಳಿತು, ಎದುರಿನಲ್ಲಿ ಕಟ್ಟಿರುವ ಕುದುರೆಗಳನ್ನು ನೋಡಿ ಲೀಲೆಯಿಂದ ಮಿತವಚನನನ್ನು ಕುರಿತು—"ಮಿತ್ರನೇ, ಈ ಉತ್ತಮವಾದ ಹೊಸ ಕುದುರೆಗಳನ್ನು ನಾನೊಂದು ನೀನೊಂದು ಹತ್ತಿ, ಸೇನೆಯೊಡಗೂಡಿ ಈ ಪಟ್ಟಣದ ರಾಜಬೀದಿಯಲ್ಲಿ ಸಂಭ್ರಮದಿಂದ ವಿಹರಿಸೋಣ" ಎಂದು ನುಡಿದನು. ಆಗ ಚತುರನೂ, ಉಚಿತ ವಚನಗಳನ್ನು ನುಡಿಯುವವನೂ ಆದ ಮಿತವಚನನು ಈ ವಿಚಾರವು ಉಚಿತವಲ್ಲೆಂದು ಮನಸ್ಸಿನಲ್ಲಿ ತಿಳಿದು ಅರಸನನ್ನು ಕುರಿತು ನುಡಿದನೇನಂದರೆ—"ಉಚಿತಜ್ಞನಾದ ಭೂವರನೇ, ನೀನಿತ್ತ ಅಪ್ಪಣೆಯನ್ನು ನಾನು ನಿರಾಕರಿಸುವೆನೆಂದು ಮನಸ್ಸಿನಲ್ಲಿ ವಿಕಲ್ಪವನ್ನೆಣಿಸಬೇಡ. ಶಿವಭಕ್ತರಿಂದ ತುಂಬಿದ ಈ ಪಟ್ಟಣದಲ್ಲಿ ಸೇನೆಯೊಂದಿಗೆ ಹೊಸಕುದುರೆಗಳನ್ನೇರಿ ವಿಹರಿಸುವದು ವಿಚಾರಿಗಳಿಗೆ ಸಮ್ಮತವಲ್ಲ. ಇದಲ್ಲದೆ ಹೊಸ ಕುದುರೆಗಳನ್ನು ರಕ್ಷಕರಿಂದ ತಿದ್ದಿಸದೆ ಒಮ್ಮೆಲೆ ಹತ್ತುವದೂ ತಕ್ಕದ್ದಲ್ಲ. ಯಾವದೊಂದು ಕಾರಣದಿಂದ ನಮ್ಮಿಂದ ಈ ನಗರದ ಭಕ್ತಜನರಿಗೆ ಕೇಡು ಒದಗಿದರೆ ಭೂನಾಥನಾದ ಚೋಳನೃಪಾಲನು ಸೈರಿಸನು. ಶಿವಭಕ್ತರು ಅಪರಾಧಿಗಳಾದವರನ್ನು ಸುತಸಹೋದರರೆಂದು ನೋಡುವರೇ? ರಾಜಪುತ್ರನೇ, ಅತ್ಯಂತ ಪ್ರತಾಪಶಾಲಿಯೂ, ಕುದುರೆ-ಆನೆಗಳನ್ನೇರುವದರಲ್ಲಿ ಅತಿ ಪ್ರೌಢನೂ ಆದ ನಿನಗೆ ಈ ಕುದುರೆಯನ್ನು ಏರುವ ವಿಷಯವಾಗಿ ನಾನು ಭಯವನ್ನುಂಟುಮಾಡುವೆನೆಂದು ಭಾವಿಸಬೇಡ. ಸಂದಿಗ್ಧ ಕಾರ್ಯಗಳನ್ನು ವಿಚಾರದಿಂದ ಮಾಡಬೇಕೆಂಬದೇ ನನ್ನ ವಿನಂತಿಯು. ಹಿತವಂತರ ವಚನಗಳನ್ನು ಕೇಳದೆ, ಹಿಂದುಮುಂದು ನೋಡದೆ, ಉನ್ನತ ಕಾರ್ಯಗನನ್ನು ವ್ಯಗ್ರತೆಯಿಂದ ಮಾಡುವದು ಸರಿಯಲ್ಲ. ಐಶ್ವರ್ಯದಲ್ಲಿ ಪರಹಿತವೂ, ವಿದ್ಯೆಯಲ್ಲಿ ಅಮತ್ಸರಬುದ್ಧಿಯೂ, ವಿಭುತ್ವದಲ್ಲಿ ನಯಾಚರಣೆಯೂ, ಕಾರ್ಯದಲ್ಲಿ ವಿನಯವೂ ಉಳ್ಳವನಿಗೆ ಲೋಕದಲ್ಲಿ ಸರಿಯಾದವನು ಅದಾವನಿರುವನು? ಮುಂದಾಗುವದನ್ನು ತಿಳಿದು ತಪ್ಪಿಸಿಕೊಳ್ಳುವದು ದೇವತೆಗಳಿಗಾದರೂ ಅಸಾಧ್ಯವು. ಆದರೂ ಭೂಪತಿಯೇ, ಬಲ್ಲವನು ಯೋಗ್ಯವಲ್ಲದ್ದನ್ನು ಮಾಡಲಾಗದು. ಮೀರಿಹೋದದ್ದನ್ನೂ, ಫಲವಿಲ್ಲದ್ದನ್ನೂ, ನಿಂದೆಗೆ ಗುರಿಯಾದದ್ದನ್ನೂ, ಪರರ ಸಂತಾಪನಾಶಗಳಿಗೆ ಕಾರಣವಾದದ್ದನ್ನೂ ಉದಾರಮನಸ್ಸಿನವನು ಮಾಡನು. ಅವಶ್ಯವಾಗಿ ಮಾಡತಕ್ಕ ಕೆಲಸವನ್ನು ಆಗಾಗ್ಗೆ ಆಪ್ತಜನರಲ್ಲಿ ವಿಚಾರಿಸಿ ಮಾಡು

ನವನಿಗೆ ವಿಘ್ನಗಳು ಬರಲಾರವು; ಮತ್ತು ಕಾರ್ಯ ಸಾಧಿಸುವದು ಕಠಿಣವಾಗುವದಿಲ್ಲ. ಪ್ರನ್ಯವನ್ನು ಕೂಡಿಸುವದಕ್ಕೂ, ಪಾಪವನ್ನು ಕಳೆಯುವದಕ್ಕೂ, ಕೀರ್ತಿಯನ್ನು ಹೆಚ್ಚಿಸಲಿಕ್ಕೂ, ಎರಡನೆಯ ಅರಸನನ್ನು ಮೀರುವದಕ್ಕೂ ನಯಜ್ಞರ ಹಿತವೂ ಮಿತವೂ ಆದ ವಚನಗಳು ಸಾಕಾಗಿರುವವು. ಕಾರಣ ಮುಂದೆ ಬರುವದನ್ನು ಧೈರ್ಯದಿಂದ ಲೆಕ್ಕಿಸದೆ, ಬಲ್ಲವರು ಅಲ್ಲೆಂಬದನ್ನು ಮಾಡದೆ, ಶುಭ್ರಕೀರ್ತಿಯನ್ನು ಹೊಂದುವದು ಅರಸನ ಕರ್ತವ್ಯವಾಗಿರುವದು.

ಈಪ್ರಕಾರ ಮಿತವಚನನು ಹಿತವಚನಗಳನ್ನು ನುಡಿಯಲು ರಾಜಶೇಖರನು ಮೃದುಸ್ಮಿತನಾಗಿ—"ಮಿತ್ರನೇ, ಗುಡುಗಿನ ಭಯದಿಂದ ಹಂಸವು ಜಲಕ್ರೀಡೆಯನ್ನು ಆಡದಿರುವವೇ? ಸಂಪಗೆಯ ಹೂವಿನ ವಾಸನೆಗೆ ಹೆದರಿ ಭ್ರಮರಗಳು ವನವಿಹಾರವನ್ನು ಬಿಡುವವೇ? ಮುಳ್ಳುಗಳು ನಡುವವೆಂದು ಹೆದರಿ ವಿನೋದ ಕೇಲಿಯನ್ನು ಬಿಡುವವನು, ಹೇಡಿಯೆಂಬ ನಿಂದೆಗೆ ಗುರಿಯಾಗುವನು. ವಿಚಾರ ಮಾಡಿದರೆ ಇದು ರಾಜಧರ್ಮವಲ್ಲವು." ಎಂದನು. ತಾನು ಹೇಳಿದ್ದನ್ನು ಸಮ್ಮತಿಸದೆ ನರೇಂದ್ರತನಯನು ಆಡಿದ ಮಾತುಗಳನ್ನು ಕೇಳಿ ಮಿತವಚನನು—"ನೃಪವರನೇ, ಆಪ್ತರನಯೋಕ್ತಿಗಳನ್ನು ಒಮ್ಮೆ ಕೇಳಿದರೆ, ದೊಡ್ಡಿಸ್ತನಕ್ಕೆ ಹಾನಿ ಬರಲಾರದು. ಸುಮ್ಮನೆ ಮನಬಂದಂತೆ ಆಚರಿಸುವದು ತಕ್ಕದ್ದಲ್ಲ. ತನ್ನ ಹಿತಾಹಿತಗಳನ್ನು ವಿಚಾರಿಸಬೇಕು. ಅಭಿಮಾನ ನೀತಿಗಳ ಹಾನಿಗೂ, ಶಿವಭಕ್ತಿ–ಧರ್ಮ–ನಿರ್ಮಲಕೀರ್ತಿಗಳ ನಾಶಕ್ಕೂ ಭೂಪತಿಯು ಅಂಜತಕ್ಕದ್ದು. ಆದ್ದರಿಂದ ನೀತಿವಿದ್ಯಾಭರಣನೇ, ರೂಪವನ್ನು ಕನ್ನಡಿಯಲ್ಲಿ ನೋಡುವಂತೆ, ನಿನ್ನ ನಯಕೌಶಲ್ಯವನ್ನು ನನ್ನಲ್ಲಿ ನೋಡುವದು ನಿನಗೆ ಯೋಗ್ಯವು. ಎಂದು ಹೇಳಿದನು.

ಈ ಪ್ರಕಾರ ಮಿತವಚನನು ಹಿತಕರವೂ, ಪ್ರಸನ್ನತರವೂ, ಸದರ್ಥ ಸಮರ್ಥನವೂ ಆದ ಪ್ರಸಂಗವನ್ನು ನುಡಿಯಲು ರಾಜಶೇಖರನು—"ಶಿವನು ಇಟ್ಟ ಹುಲ್ಲುಮುರಿಯನ್ನು ಬ್ರಹ್ಮವಿಷ್ಣು ಮೊದಲಾದ ದೇವತೆಗಳು ಎತ್ತದೆಹೋಗಲು, ಆ ಪರಮ ಮಹೇಶ್ವರನ ಶಾಸನವನ್ನು ಈ ಭೂತಳದಲ್ಲಿ ಮೀರುವವರು ಅದಾರಿರುವರು? ಬರುವ ಶುಭಾಶುಭಗಳು ಹಿಮ್ಮೆಟ್ಟುವವೇ? ಈಗ ನಾವು ಹೊಸಕುದುರೆಗಳನ್ನು ಏರದಿದ್ದರೆ ನಮ್ಮ ಅಶ್ವವಾಹಕತ್ವಕ್ಕೆ ಭಂಗಬರುವದು. ವೈಯ್ಯಾಳಿಯಲ್ಲಿ ಶಿವಶರಣರಿಗೆ ನೋವು ಉಂಟಾದರೆ, ನಮ್ಮ ವಸುಧೀಶನು ಸೈರಿಸನೆಂಬ ಭಯವನ್ನು ವಹಿಸುವದು ತಕ್ಕದ್ದಲ್ಲ. ಈಶಾಜ್ಞೆಯನ್ನು ಬಲ್ಲವನು ಯಾವನೂ ಇಲ್ಲ. ಪ್ರಸಂಗವಶದಿಂದ ವಿಪರೀತ ಕೆಲಸವಾದರೆ ನನ್ನ ಮಹಿಮೆಯನ್ನು ತೋರಿಸಿ, ಮುಕ್ತಿಯನ್ನು ಸೂರೆಗೊಳ್ಳುವೆನು. ಪ್ರಿಯಮಿತ್ರನೇ, ನನ್ನ ಮನಸ್ಸಿನ ಬಯಕೆಯನ್ನು ಇಲ್ಲೆನ್ನದೆ ಪೂರ್ಣಮಾಡತಕ್ಕದ್ದು. ನನ್ನ ತಂದೆಯು ಸಿಟ್ಟಾಗುವನೆಂದು ಎಣಿಸಬೇಡ. ಈ ಕೆಲಸದಲ್ಲಿ ನಿನ್ನ ಅಪರಾಧವಾದರೆ ಅದು ನನ್ನ ಅಪರಾಧವು. ಮನದ ಸಂಶಯವನ್ನು ಬಿಡು. ಆ ಉತ್ತಮಾಶ್ವಗಳನ್ನು ಏರಿ ಅತಿ ಸಂಭ್ರಮದಿಂದ ವಿಹರಿಸೋಣನಡೆ" ಎಂದನು.

ಈ ಪ್ರಕಾರ ನುಡಿದ ರಾಜಶೇಖರನ ಮಾತುಗಳನ್ನು ಮಿತವಚನನು ಕೇಳಿ, ಹಾಗೂ ಹೀಗೂ ಸಮ್ಮತಿಸಿ ತನ್ನ ಮಹತ್ವವನ್ನು ತೋರಿಸುವದಕ್ಕಾಗಿ ಈ ಪ್ರಸಂಗವು ಶಿವಕೃತ ನಾಗಿ ಬಂದಿರುವದೆಂದು ನಿರ್ಧರಿಸಿದನು. ಅಷ್ಟರಲ್ಲಿ ಸೂರ್ಯನು ಅಸ್ತಂಗತನಾಗಿ ಚಂದ್ರನು ಉದಯಿಸಲು, ರಾಜಶೇಖರನು ಪ್ರಥಮಯಾಮದಲ್ಲಿ ಭಕ್ತಿಯಿಂದ ಶಿವಪೂಜೆ ಯನ್ನು ಮಾಡಿ, ಪ್ರಸಾದಮೋದಿತನಾಗಿ, ಮಿತವಚನನನ್ನು ಮನೆಗೆ ಕಳುಹಿ ಸರ್ವಮಂಗ ಳೆಯೊಡನೆ ಆ ದಿನ ರಾತ್ರಿಯನ್ನು ಸುಖದಿಂದ ಕಳೆದನು. ಅಷ್ಟರಲ್ಲಿ ಕೋಮಲೆಯರು "ಭೂರಮಣನೇ, ನಸುಗಾಳಿಯು ಬೀಸುತ್ತಿರುವದು, ನಕ್ಷತ್ರಗಳು ಕಾಂತಿಗುಂದುತ್ತಿ ರುವವು, ಶಿವಗೇಹದಲ್ಲಿ ಶಂಖಗಳು ಧ್ವನಿಮಾಡುತ್ತಿವೆವು. ಪೂರ್ವದಿಕ್ಕು ಕೆಂಪಾಗು ತ್ತಿರುವದು ತಡವೇಕೆ, ಏಳು" ಎಂದು ಎಚ್ಚರಗೊಳಿಸಿದರು. ಆಗ ರಾಜಶೇಖರನು ಹರ ಸ್ಮರಣಪೂರ್ವಕವಾಗಿ, ಮೃದುಶಯ್ಯಾತಳದಿಂದೆದ್ದು, ಆ ಸ್ತ್ರೀಯರಿಂದ ತೋರಿಸಲ್ಪಟ್ಟ ಕನ್ನಡಿಯಲ್ಲಿ ಮುಖವನ್ನು ನೋಡಿದನು. ತರುವಾಯ ಸುಗಂಧೋದಕದಲ್ಲಿ ಮಜ್ಜನಂ ಗೆಯ್ದು ಮಡಿವಸ್ತ್ರಗಳನ್ನುಟ್ಟು, ವಿಭೂತಿರುದ್ರಾಕ್ಷಗಳನ್ನು ಸ್ಥಾನವರಿತು ಧರಿಸಿ, ನಿರ್ಮಲಾಂತಃಕರಣದಿಂದ ಶಿವನನ್ನು ಧ್ಯಾನಿಸಿ, ಭಕ್ತಿಯಿಂದ ಶಿವಲಿಂಗಪೂಜೆಯನ್ನು ಮಾಡಿ, ಆನಂದಪರವಶನಾಗಿ ಸ್ತುತಿಸಿ, ಪಂಚಾಕ್ಷರೀಮಂತ್ರವನ್ನು ಜಪಿಸಿದನು. ಇಂತು ಆ ಭೂವರನು ಪೂಜಾಜಪಗಳನ್ನು ವಿಧ್ಯುಕ್ತವಾಗಿ ಮುಗಿಸಿ, ಶಿವಚರಣೋದಕವನ್ನು ಸ್ವೀಕರಿಸಿ, ಮಾಹೇಶ್ವರವ್ರಜವನ್ನು ಧನಕನಕಸುವಸನ ಮಣಿಭೂಷಣಾದಿಗಳಿಂದ ತೃಪ್ತಿಪಡಿಸಿ ಶರೀರವನ್ನು ಅಲಂಕರಿಸುವದಕ್ಕಾಗಿ ಅಲಂಕಾರಗೃಹಕ್ಕೆ ಹೋದನು. ಆಗ ಒಬ್ಬ ಅಲಂಕರಣ ಚತುರನು ಕಿರೀಟ–ಕರ್ಣಾಭರಣ–ಮೌಕ್ತಿಕಹಾರ–ರತ್ನದುಂಗುರ ಮೊದಲಾದ ಆಭರಣಗಳಿಂದ ಆ ಯುವರಾಜನನ್ನು ಶೃಂಗರಿಸಲು, ಆತನು ಇಂದ್ರ ಕುವರ ನಾದ ಜಯಂತನನ್ನು ಮೆಯ್ಗಾಂತಿಯಿಂದ ಗೆದ್ದನು; ಚಂದ್ರನನ್ನು ಮುಖಕಾಂತಿಯಿಂದ ಜಯಿಸಿದನು; ನಳಕೂಬರನನ್ನು ಸೌಂದರ್ಯದಿಂದ ಮೀರಿದನು; ಕಾಮನನ್ನು ವಿಲಾಸ ವಿಭ್ರಮದಿಂದ ಸೋಲಿಸಿದನು. ಇದರಂತೆ ಮಿತವಚನನಾದರೂ ವಸ್ತ್ರಾಲಂಕಾರಗಳಿಂದ ಅಲಂಕೃತನಾಗಿ ರಾಜಶೇಖರನೆಡೆಗೆ ಬಂದನು. ಆಗ ಆ ನೃಪಕುವರನು ಮಂತ್ರಿಕುವರ ನನ್ನು ಕೂಡಿಕೊಂಡು ಭದ್ರಮಂಟಪದ ಮುಂದಿನ ಮುತ್ತಿನ ಮುಖಮಂಟಪದಲ್ಲಿ ಬಂದು ಭದ್ರಾಸನವನ್ನೇರಿ ಕೆಲವು ಭಟರಿಂದ ಪರಿವೃತನಾಗಿ ಓಲಗವನ್ನು ಮಾಡಿ ಮಂತ್ರಿ ಮಿತವ ಚನನನ್ನು ಕುರಿತು—"ಮಿತ್ರನೇ, ಅಶ್ವಶಾಲೆಯಲ್ಲಿರುವ ಆ ನವಾಶ್ವಗಳನ್ನು ಸಜ್ಜುಗೊ ಳಿಸಿ ತರಿಸೆಂದು ಹೇಳಲು, ಮಿತವಚನನ ಅಪ್ಪಣೆಯಿಂದ ಅಶ್ವರಕ್ಷಕರು ಅವುಗಳನ್ನು ಸಜ್ಜುಗೊಳಿಸಿ ತಂದು ನಿಲ್ಲಿಸಿದರು. ಸೊಕ್ಕಿನಿಂದೊಪ್ಪುವ ಆ ಕುದುರೆಗಳನ್ನು ರಾಜ ಶೇಖರನು ಸಂಭ್ರಮದಿಂದ ನೋಡಿ ಸಂತೋಷಪಟ್ಟು ವಿಹರಣ ಪ್ರಸ್ಥಾನಭೇರಿಯನ್ನು ಹೊಡಿಸೆಂದು ಸೇನಾಪತಿಗೆ ಹೇಳಲು, ಆತನ ಅಪ್ಪಣೆಯಿಂದ ಮೇಘನಾದನು ಬಂದು ಭೇರಿ ಯನ್ನು ಹೊಡೆದನು. ಆಗ ಅದರ ಭಯಂಕರ ಧ್ವನಿಯನ್ನು ಕೇಳಿ ಚತುರಂಗ ಬಲವು ಸಂಭ್ರಮದಿಂದ ಸಜ್ಜಾಗಿ ನಿಂತಿತು. ಇಂತು ಸಡಗರದಿಂದ ನಿಂತ ಅತುಳ ಬಲವನ್ನು

ನೋಡಿ, ರಾಜಶೇಖರನು ಉಬ್ಬೇರಿ ವಂದಿಗಳು ಹೊಗಳುತ್ತಿರಲು, ಕಹಳೆಗಳು ಊದು ತ್ತಿರಲು ಪವನವೇಗವೆಂಬ ಹೆಸರುಳ್ಳ ಕುದುರೆಯನ್ನು ಏರಿದನು ; ಆಗ ಮಿತವಚ ನನು ಹರಿಣಗತಿಯೆಂಬ ಹೆಸರಿನ ಎರಡನೆಯ ಕುದುರೆಯನ್ನು ಏರಿ, ಸುರತುರಂಗ ವನ್ನೇರಿ ಸಾಗುವ ಜಯಂತನನ್ನು, ಕುಬೇರನ ಕುದುರೆಯನ್ನೇರಿ ನಳಕೂಬರನು ಹಿಂಬಾಲಿಸುವಂತೆ ರಾಜಶೇಖರನನ್ನು ಹಿಂಬಾಲಿಸಿದನು. ಆಗ ರಾಜಕುಲಮಣಿಯಾದ ಆ ರಾಜಶೇಖರನು, ಕಿರೀಟಕಾಂತಿಯು ಹಬ್ಬುತ್ತಿರಲು, ಶರೀರಕ್ಕೆ ಹಚ್ಚಿದ ಕಸ್ತೂ ರಿಯ ವಾಸನೆಯು ಪಸರಿಸುತ್ತಿರಲು, ಶ್ವೇತಛತ್ರಗಳು ತಲೆಯಮೇಲೆ ಮೆರೆಯುತ್ತಿರಲು, ಪ್ರಮದೆಯರು ಚಾಮರಗಳನ್ನು ಬೀಸುತ್ತಿರಲು ಪಟ್ಟಣದ ಬೀದಿಯಲ್ಲಿ ಬರುತ್ತಿದ್ದನು. ರಾಜಕುಮಾರರೆಲ್ಲರು ತಮ್ಮ ತಮ್ಮ ದಿವ್ಯಾಶ್ವಗಳನ್ನು ಏರಿ ಆತನನ್ನು ಹಿಂಬಾಲಿಸಿ ದರು. ಆಗ ಸೇನೆಯ ತುಳತದಿಂದೆದ್ದ ಧೂಳಿಯು ಆಕಾಶವನ್ನು ವ್ಯಾಪಿಸಿತು; ಗಜ- ಅಶ್ವ-ರಥ-ಭಟರ ಧ್ವನಿಗಳು ಕಿವಿಗೆ ಕರ್ಕಶವಾದವು. ಪುರಸ್ತ್ರೀಯರು ಮಣಿಹರ್ಮ್ಯ ಗಳನ್ನೇರಿ ಕುತೂಹಲದಿಂದ ನೋಡುತ್ತಿದ್ದರು. ರಾಜಶೇಖರನು ತನ್ನ ಕುದುರೆಯನ್ನು ಚಪ್ಪರಿಸಲು ಅದು ಚಂಡಿನಂತೆ ಪುಟನೆಗೆದು ವಾಯುವೇಗದಿಂದ ಮುಂದಕ್ಕೆ ಸಾಗಿತು. ತನ್ನನ್ನು ಬಿಡದೆ ಹಿಂಬಾಲಿಸಿ ಬರುವ ಮಿತವಚನನೊಡನೆ ಪ್ರತಾಪಿಯಾದ ಆ ರಾಜಕು ಮಾರನು ವಿಳಾಸದಿಂದ ಪುರವೀಥಿಯನ್ನು ದಾಟ ವ್ಯೆಯ್ಯಾಳಿಯ ಬೈಲಿಗೆ ಹೋಗಿ ಸೈನ್ಯ ದಲ್ಲಿ ಇಬ್ಭಾಗ ಮಾಡಿದನು. ತರುವಾಯ ಕುದುರೆಗಳು ಕುದುರೆಗಳಮೇಲೆ, ಆನೆಗಳು ಆನೆಗಳಮೇಲೆ, ಕಾಲಾಳು ಕಾಲಾಳಮೇಲೆ ಬಿದ್ದು ಸಂಭ್ರಮದಿಂದ ವಿನೋದಯುದ್ಧವು ನಡೆಯಿತು.

ಈ ಪ್ರಕಾರ ರಾಜಶೇಖರನು ವಿನೋದಯುದ್ಧವನ್ನು ಚತುರತೆಯಿಂದ ಮಾಡಿ ಸಂಭ್ರಮದಿಂದ ಚತುರಂಗಬಲದೊಡನೆ ಪಟ್ಟಣದ ಕಡೆಗೆ ತಿರುಗಿದನು. ಆಗ ಆನೆಯ ಕುಂಭಸ್ಥಳದಿಂದ ಮದೋದಕವು ಸೋರುತ್ತಿರಲು, ಕುದುರೆಗಳ ಬಾಯಿಂದ ಬುರುಗು ಬೀಳುತ್ತಿರಲು, ಭೇರಿಧ್ವನಿಯು ದಿಕ್ಕುದಿಕ್ಕಿಗೆ ಹಬ್ಬುತ್ತಿರಲು, ಧೂಳಿಯು ಮುಸುಕು ತ್ತಿರಲು ಆ ರಾಜಸೈನ್ಯವು ಮುಂದಕ್ಕೆ ಸಾಗಿತು; ಮತ್ತು ಆ ಅಶ್ವದ್ವಯಗಳು ವಾಯು ವೇಗದಿಂದ ಓಡಹತ್ತಿದವು. ಇಂತಹ ಕುದುರೆಗಳನ್ನು ಸಂತೋಷದಿಂದ ರಾಜಬೀದಿ ಯಲ್ಲಿ ಕುಮಾರರಿಬ್ಬರು, ವಿಚಿತ್ರಗತಿಯಿಂದ ನಡಿಸುತ್ತ ಬರುತ್ತಿರಲು, ಪುರಜನರು ಆನಂ ದದಿಂದ ಈ ಉತ್ಸವವನ್ನು ನೋಡುತ್ತಿದ್ದರು. ಕುಲಸ್ತ್ರೀಯರು ಮೇಲುಪ್ಪರಿಗೆಗಳನ್ನೇರಿ ಕೌತುಕದಿಂದ ಇದನ್ನೆಲ್ಲ ಈಕ್ಷಿಸುತ್ತ ಸುಖಸಲ್ಲಾಪಗಳನ್ನಾಡುತ್ತಿದ್ದರು. ಅವರಲ್ಲೊರ್ವ ವಿದಗ್ಧೆಯು ಮುಗ್ಧೆಯನ್ನು ಕುರಿತು—"ಮೃಗಾಕ್ಷಿಯೇ, ನವಮೌಕ್ತಿಕಾಭರಣಗಳನ್ನು ಧರಿಸಿ ಮುಂದುವರಿಯುವ ತುಂಗತುರಂಗವನ್ನೇರಿ ಬರುವವನು ಕ್ಷಿತಿಪತಿಯಾದ ರಾಜಶೇ ಖರನು; ಆತನಹಿಂದೆ ನವ್ಯಾಭರಣಗಳನ್ನು ಧರಿಸಿ, ಬಿಳಿಯ ಕುದುರೆಯನ್ನು ಕುಣಿಸುತ್ತ ಬರುವವನೇ ಮಿತವಚನನು" ಎಂದು ನುಡಿದಳು. ಈ ಪ್ರಕಾರ ವಿದಗ್ಧೆಯರು ಮುಗ್ಧೆ ಯರಿಗೆ ತೋರಿ ನುಡಿಯುತ್ತಿರಲು, ಮಂತ್ರಲಕ್ಷ್ಮನೂ, ಮಿತವಚನಸಮೇತನೂ ಆದ

ರಾಜಶೇಖರನು ವಿಳಾಸದಿಂದ ಮುಂದಕ್ಕೆ ಬರುತ್ತಿದ್ದನು: ಇತ್ತ ಹರಪ್ರೇರಣೆಯಿಂದ "ತಿರುಕೋಳಾವಿನಾಚಿ" ಎಂಬ ಶಿವಭಕ್ತೆಯು ಮಗನಾದ ಶಂಕರನೆಂಬ ಐದು ವರುಷದ ಹುಡುಗನು ಈ ಕಲಕಲ ಧ್ವನಿಯನ್ನು ಕೇಳಿ, ತನ್ನ ತಾಯಿಯು ನೀರಿಗೆ ಹೋಗಿರಲು, ಭರದಿಂದ ಓಡುತ್ತ ಅಲ್ಲಿಗೆಬಂದು ಜನರನ್ನು ಬಗಿದು ಒಳಗೆ ಹೊಕ್ಕು ನೋಡಹತ್ತಿದನು. ಆಗ ಮುತ್ತುವ ದಂಡಿನ ತಡೆಗಾಲಿಂದ ಆ ಹಸುಳನಾದ ಶಂಕರನು ಭೂಮಿಯಮೇಲೆ ಬಿದ್ದು ಕಂಗೆಟ್ಟು ಅಳುತ್ತ ತಾಯಿಯನ್ನು ಕರೆದು ಬಾಯಿಬಿಡುತ್ತ ಕಯ್ಯೂರಿ ಮೆಲ್ಲನೆ ಏಳುವಷ್ಟರಲ್ಲಿ, ರಾಜಶೇಖರನು ಅವನನ್ನು ನೋಡಿ ತನ್ನ ಕುದುರೆಯನ್ನು ಬೇಗನೆ ದಾಟಿಸಿ " ಹುಡುಗನು ಜೋಕೆ ತೆಗೆ " ಎಂದು ಒದರಿದನು. ರಾಜಶೇಖರನ ಮುಖದಿಂದ ಈ ಧ್ವನಿಯು ಹೊರಡುವದರೊಳಗಾಗಿಯೇ ಮಿತವಚನನ ಕುದುರೆಯು ಕೊಳಗದಿಂದ ಶಂಕರನ ದಿಂಡ ಮುಂಡಗಳು ಬೇರೆಯಾದವು. ಆಗ ಆ ಕುಮಾರರೀರ್ವರು ರಕ್ತದೊಂದಿಗೆ ಬಿದ್ದಿರುವ ಶಂಕರನ ಶಿರಃಕಮಲವನ್ನು ನೋಡಿ, ನೊಂದು, ಬುದ್ಧಿಗೆಟ್ಟು, ಮರುಗಿ, ಶಿವಶಿವಾ! ಶಿವಭಕ್ತ-ಶಿಶುವಿನ ವಧೆಯಾಯಿತು; ಇದರ ಕಾರಣವನ್ನು ಶಿವನೇ ಬಲ್ಲನು, ಎಂದು ಚಿಂತಿಸುತ್ತ, ಅಷ್ಟರಲ್ಲಿ ಮತ್ತೆ ಧೈರ್ಯಗೊಂಡು--"ಛೇ ಛೇ! ಇನ್ನು ಇದಕ್ಕೆ ಚಿಂತೆ ಮಾಡುತ್ತ ಕುಳಿತರೆ ಹೆಚ್ಚಳಕ್ಕೆ ಭಂಗವಲ್ಲವೇ? " ಎಂದು ನಿಶ್ಚಯಿಸಿ, ಮನಸ್ತಾಪವನ್ನು ಧೈರ್ಯವೆಂಬ ಬೆಳದಿಂಗಳಿಂದ ಆರಿಸಿ, ರಾಜದ್ವಾರಕ್ಕೆ ಬಂದು ಕುದುರೆಗಳನ್ನಿಳಿದು ದಂಡನಾಥ, ಮಂಡಲಿಕ ಮೊದಲಾದವರನ್ನು ಕ್ರಮವಾಗಿ ಬೀಳ್ಕೊಟ್ಟು ತಮ್ಮ ತಮ್ಮ ಮನೆಗಳಿಗೆ ಹೋದರು.

ವ್ಯಾಮೋಹ:—ಇತ್ತ ಕಡೆಯಲ್ಲಿ ನೆರೆದ ಜನರು ಆ ಶಿಶುವಿನ ರುಂಡ ಮುಂಡಗಳನ್ನು ಕಂಡು ಕಡುನೊಂದು—"ಅಕಟಕಟಾ! ಈ ಸುಕುಮಾರನು ಯಾರವನು! ಕುದುರೆಯು ಕೊಳಗದ ಹೊಡ್ತದಿಂದ ಮಡಿದನಲ್ಲ!! ಈ ಅನ್ಯಾಯವನ್ನು ಸರಳಮನಸ್ಸಿನವನಾದ ನಮ್ಮ ಸತ್ಯೇಂದ್ರಚೋಳನು ಕೇಳಿದರೆ ಸೈರಿಸುವನೆ? ಶರಣ ಜನರ ಅಭಿಮಾನಿಯಾದ ಆ ಭೂಪತಿಯು ಈ ಶಿವಭಕ್ತ ವಧೆಯನ್ನು ಯಾರು ಮಾಡಿದರೆಂದು ಸಿಟ್ಟುಮಾಡದೆ ಬಿಡುವನೆ? ಹಿಂದಕ್ಕೆ ಮನುಚೋಳನು ಅಪರಾಧಿಯಾದ ಮಗನನ್ನು ಮನ್ನಿಸಲಿಲ್ಲ! ಚಂಡೇಶನು ತಂದೆಯೆಂದು ಬಗೆಯಲಿಲ್ಲ!! ಜಗಚ್ಚೋಳ ನೃಪನು ತನ್ನನ್ನೇ ನೋಡಲಿಲ್ಲ!!! ಆದ್ದರಿಂದ ಏನಾಗುವದೋ! ಮುಂದೆ ಬರುವದನ್ನು ಈಶನೇ ಬಲ್ಲನು." ಎಂದು ಮರುಗುತ್ತಿದ್ದರು. ಅಷ್ಟರಲ್ಲಿ ಶಂಕರನ ತಾಯಿಯಾದ ತಿರುಕೋಳಾವಿನಾಚಿಯು ಕೊಡವನ್ನು ಇಳಿಸಿ, ಮಗನನ್ನು ನೋಡಿ ಕಾಣದೆ ತಳಮಳಿಸಿ ಅತ್ತಿತ್ತ ನೋಡಿ—"ಎಲೈ ನನ್ನ ಕುಮಾರನಾದ ಶಂಕರನೇ, ನಿನ್ನ ಮೊಗದಾವರೆಯನ್ನು ತೋರದೆ ಎತ್ತ ಹೋದೆ? ಮುಗುಳು ನಗೆಯೂ, ತೊದಲು ಮಾತುಗಳೂ ಒಪ್ಪುತ್ತಿರಲು, ಗಿಲ್ ಗಿಲ್ ಎಂದು ಗೆಜ್ಜೆಗಳನ್ನು ನುಡಿಸುತ್ತಾ ನನ್ನನ್ನು ಅಪ್ಪಿಕೊಳ್ಳಲಿಕ್ಕೆ ತಡವೇಕೆ ಮಾಡುವೆ?" ಎಂದುನುಡಿದು ದೊಡ್ಡ ಧ್ವನಿಯಿಂದ ಶಂಕರಾ,ಶಂಕರಾ ಎಂದು ಕೂಗಹತ್ತಿದಳು. ಆದರೂ ಮಗನು ಬಾರದ್ದರಿಂದ ಆ ದುರ್ದೈವಿಯು ಕನಕರಿಸಿ, ರಾಜಪುತ್ರನ ವಿಹರಣವನ್ನು ನೋಡಲಿಕ್ಕೆ ರಾಜಬೀದಿಗೆ ಹೋಗಿರಬಹುದೆಂದು

ಬಗೆದು ಬಗೆಗೆಟ್ಟು ಬಾಯಿಬಿಟ್ಟು ಅಲ್ಲಿಯೂ ಹುಡುಕಿ ಮಗನನ್ನು ನೋಡದೆ—"ಅಕಟಕಟಾ! ನನ್ನ ಕುಮಾರ ಶಂಕರನು ಆನೆಯ ಕಾಲಲ್ಲಿ ಸಿಕ್ಕನೋ, ರಥಗಳ ಗಾಲಿಗೆ ಈಡಾದನೋ, ಕುದುರೆಗಳ ಹತಿಯಿಂದ ಮಡಿದನೋ" ಎಂದು ಬಾಯಿಬಿಡುತ್ತಾ—"ನನ್ನ ಕಂದನು ಯಾವ ಕಡೆಗೆ ಹೋದನು! ನನ್ನ ಸವಿ ಮಾತಿನ ನೀರನು ಎಲ್ಲಿ ಅಡಗಿದನು! ನನ್ನ ಚೆಲ್ವಿನ ಕಣಿಯು ಎತ್ತ ಮರೆಯಾದನು" ಎಂದು ಹಲವು ಬಗೆಯಾಗಿ ಹಲುಬಿದಳು.

ಇಂತು ಅಳುತ್ತಾ ಬರುವ ತಿರುಕೋಳೂವಿನಾಚಿಯನ್ನು ಪುರಜನರು ಕಂಡು, ಮಡಿದ ಹುಡುಗನು ಈಕೆಯ ಮಗನೆಂದು ತಿಳಿದು ಮರಮರನೆ ಮರುಗಿ ಆಕೆಯನ್ನು ಜನರ ಸಂದಣಿಯಲ್ಲಿ ಹೊಗಿಸಿ—"ಈ ನಿನ್ನ ಮಗನು ಅರಸನ ಕುದುರೆಯ ಖುರದ ಹತಿಯಿಂದ ಮಡಿದನೆಂ"ದು ತೋರಿದರು. ಅನಾಥೆಯಾದ ಆ ಅಬಲೆಯು ಮಗನ ರುಂಡ ಮುಂಡಗಳನ್ನು ಕಂಡು, ಕಾಡ್ಗಿಚ್ಚು ಸುತ್ತಿದ ಚಿಗರೆಯಂತೆ ತಳಮಳಿಸಿದಳು. ಆಕೆಯು ಹದ್ದೆರಗಿದ ಹೆಣ್ಣು ಹಾವಿನಂತೆ ಮಿಡುಕಿ ಮಿಡುಕಿ, ಕಡಿದ ಎಳೆವಳ್ಳಿಯಂತೆ ಕೊರಗಿ ಕೊರಗಿ, ತಿಕ್ಕಿ ಇಟ್ಟ ಪೂಮಾಲೆಯಂತೆ ಕಂದಿ ಕುಂದಿ ಹೆಚ್ಚಿದ ದುಃಖದಿಂದ—"ಅಕಟಕಟಾ! ಕೆಟ್ಟೆನು ಕೆಟ್ಟೆನು" ಎಂದು ಭೂಮಿಯಲ್ಲಿ ಹೊರಳಿ ದಿಕ್ಕು ದಿಕ್ಕುಗಳನ್ನು ನೋಡಿದಳು. ಆಗ ಹೆಚ್ಚಿದ ದುಃಖದಿಂದ ಆಕೆಯು—"ಮುದ್ದುಮಗನೇ, ಕಮಲದ ದೇಟನಂತೆ ಮೃದುವಾದ ನಿನ್ನ ಕುತ್ತಿಗೆಯನ್ನು ಕಡಿದು ಉರುಳಿಸಿದವರಾರು?" ಎಂದು ನುಡಿದು ದಿಂಡವನ್ನು ಎತ್ತಿ ತೊಡೆಯಮೇಲೆ ಇಟ್ಟುಕೊಂಡು ಮುಂಡವನ್ನು ಎರಡೂ ಕೈಗಳಲ್ಲಿ ತಕ್ಕೊಂಡು ಅಶ್ರು ಪೂರಿತವಾದ ಕಟಾಕ್ಷಗಳಿಂದ ಈಕ್ಷಿಸಿ, ಮುಖಕ್ಕೆ ಹತ್ತಿದ ಧೂಳಿಯನ್ನು ಸೆರಗಿನಿಂದ ಒರಿಸಿ, ಒತ್ತಟ್ಟಗೆ ಸರಿದ ಮಾಗಾಯಗಳನ್ನೂ ಸೊಟ್ಟಾದ ಅರಳೆಲೆಯನ್ನೂ ನೆಟ್ಟಗೆ ಮಾಡಿ ಗಲ್ಲವನ್ನು ಹಿಡಿದು ಮೆಲ್ಲನೆ ಅಲ್ಲಾಡಿಸಿ ಮುದ್ದು ಕೊಟ್ಟು ನೋಡಿ, ಮಿಕ್ಕಿ ಬಂದ ದುಃಖವನ್ನು ಸೈರಿಸಲಾರದೆ ಮತ್ತೆ ನುಡಿದಳೇನಂದರೆ"ಹಾ ಮಗನೇ, ಹಾ ಮನೋಹರನೇ, ಹಾ ಮದಾನೆಯಂತೆ ಮಂಜುಳ ಗತಿಯುಳ್ಳವನೇ, ಹಾ ಸವಿನುಡಿಯುವನೇ, ಹಾ ನನ್ನ ವಂಶ ಲಲಾಮನೇ, ನಿನ್ನ ಗತಿಯು ಏನಾಯಿತು! ಕಂದಾ, ಯಾವ ಕಡೆಯ ಕುದುರೆಯು, ಯಾವಕಡೆಯ ಅರಸನು, ಯಾವ ಕಡೆಯ ವೈಯ್ಯಾಳಿಯು, ಯಾವಕಡೆಯ ಕಲಕಲ ಧ್ವನಿಯು, ಎಲ್ಲಿಯ ನಿನ್ನ ಹೋಗೋಣವು-ಹಾ ಕುಮಾರನೇ, ನಿನಗೆ ಇದೆಲ್ಲಿಯ ಮರಣವು ಬಂತು !! ಸುಂದರನೇ, ಹಿಂದಕ್ಕೆ ಸತ್ತು ಹೋದ ಆರು ಜನ ಮಕ್ಕಳ ದುಃಖವನ್ನು ನಿನ್ನನ್ನು ನೋಡಿ ಮರೆತಿದ್ದೆನು. ಆದರೆ ಈಗಿನ ದುಃಖವನ್ನು ಹ್ಯಾಗೆ ಮರೆಯಬೇಕು ನನಗೆ ಹೇಳು, ಸುಮ್ಮನಿರಬೇಡ. ಮಗನೇ, ಬೇಗನೆ ದೊಡ್ಡವನಾಗಿ ಧನವನ್ನು ಗಳಿಸಿ ಚರಾರ್ಚನೆಯನ್ನು ಮಾಡಿ, ಹರ ಕೃಪೆಯನ್ನು ಪಡೆದು ಉಜ್ವಲವಾದ ಸುಖವನ್ನು ಕೊಡುವೆಯೆಂದು ನಾನು ತಿಳಿದಿರಲು, ಒಮ್ಮೆ ಕುದುರೆಯ ತುಳತದಿಂದ ಸತ್ತೆಯಲ್ಲ! ನನ್ನ ಅರಗಿಳಿಯೇ, ಕುದುರೆಯು ನಿನ್ನ ಕುತ್ತಿಗೆಯನ್ನು ತುಳಿದಾಗ್ಗೆ ನೀನು ಕಂಗೆಟ್ಟು 'ಅವ್ವಾ' ಎಂದು ನನ್ನನ್ನು ಕರೆದೆಯೋ, ಅಥವಾ ಪಾಪಿಯೆಂದು ನನ್ನನ್ನು ಮರೆತೆಯೋ ಹೇಳು.

ಇಂತು ತಿರುಕೋಳಾವಿನಾಚಿಯು ದುಃಖದಿಂದ ಹಲಬುತ್ತಿರಲು, ನಾನಿದ್ದರೆ ಕುಮಾರರು ಮಾಡಿದ ತಪ್ಪುಗಳನ್ನು ಈ ಸ್ತ್ರೀಯು ಅರಸನ ಮುಂದೆ ಹೇಳುವಳೆಂದು ತಿಳಿದು ಹೋದನೋ ಅನ್ನುವಂತೆ ಸೂರ್ಯನು ಅಸ್ತಂಗತನಾದನು. ದುಃಖವು ತನ್ನನ್ನು ಕವಿದಂತೆ ಎಲ್ಲ ಕಡೆಯಲ್ಲಿ ಕತ್ತಲೆ ಮುಸುಕಿದ್ದನ್ನು ನೋಡಿ ಆ ಅನಾಥೆಯಾದ ಅಬಲೆಯು ಮಗನ ದಿಂಡ ಮುಂಡಗಳನ್ನು ತಕ್ಕೊಂಡು ಮನೆಗೆ ಹೋಗಿ ಅವನ್ನು ಸರಿಯಾಗಿ ಕೂಡಿಸಿಕೊಂಡು—“ ಮಗನೇ, ನೀನು ಹಸಿದಿರುತ್ತೀ ! ಹೊಟ್ಟೆಯು ತೆಳ್ಳಗಾಗಿವೆ, ಮುಖವು ಬಾಡಿದೆ, ಕಣ್ಣುಗಳು ಕಾಂತಿಗುಂದಿವೆ, ಅಯ್ಯೋ! ಉಣ್ಣದೆ ನೀನು ಹೀಗೆ ಇರುವದು ಉಚಿತವೇ? ನಾಳೆ ನಿನ್ನ ಓರಿಗೆಯವರು ಆಡಲಿಕ್ಕೆ ಬಂದು ಶಂಕರನು ಎಲ್ಲಿರುವನೆಂದು ಕೇಳಿದರೆ ಅವರಿಗೇನು ಹೇಳಲಿ! ಕುದುರೆಯ ಕಾಲಲ್ಲಿ ಬಿದ್ದು ಸತ್ತನೆಂದು ಹೇಳಲಿಯಾ? ಸುತನೇ, ನೀನಾಡಿದ ಸ್ಥಳವನ್ನೂ, ನೀನು ಮಲಗಿದ ಹಾಸಿಗೆಯನ್ನೂ, ನೀನು ಉಂಡ ತಾಣವನ್ನೂ, ನೀನಿಟ್ಟ ಒಡವೆಗಳನ್ನೂ ನೋಡಿ, ಇನ್ನು ನಾನು ಎಂತು ಸೈರಿಸುವೆನು! ನೆರೆಮಕ್ಕಳ ಸಂಗಡ ಪ್ರೀತಿಯಿಂದ ಆಡಿಬರಲು, ಮುಸುಕಿದ ಮೈಧೂಳಿಯನ್ನು ಸೆರಗಿನಿಂದ ಒರಿಸಿ, ಮೈತೊಳಿಸಿ, ಚಲೋ ಅನ್ನವನ್ನು ಹಾಕಿ ಮುದ್ದು ಕೊಟ್ಟು ಉಣಿಸಿ, ಶೃಂಗರಿಸಿ ನಿರೀಕ್ಷಿಸುವ ನನ್ನನ್ನು ಬಿಟ್ಟು ನೀನೊಬ್ಬನೇ ಹೋಗುವರೇ! ಅಳುವ ನನ್ನನ್ನು ನೋಡಿ ‘ ತಾಯಿಯೇ ಅಳಬೇಡೆಂ’ದು ಹೇಳಿ ಕಣ್ಣೀರು ಒರಿಸುವದನ್ನು ಬಿಟ್ಟು, ಬಹಳ ಸಿಟ್ಟಾದವರ ಹಾಗೆ ಸುಮ್ಮನೆ ಇರುವೆಯಲ್ಲ! ಅಣುಗನೇ, ನೀನು ಮಡಿದದ್ದರಿಂದ ನಿನ್ನನ್ನು ನೋಡುವ ನನ್ನ ಕಣ್ಣುಗಳು ಇಂಗಿದವು, ಮಾತಾಡಿಸುವ ನಾಲಿಗೆಗೆ ಮುಳ್ಳುವರಿಮಿತು, ಅಪ್ಪಿಕೊಳ್ಳುವ ಕೈಗಳು ಸೇದಿದವು- ಅಯ್ಯೋ! ನನ್ನ ದುಃಖವನ್ನು ಯಾರ ಮುಂದೆ ಹೇಳಲಿ? ನನಗೆ ಯಾರಿದ್ದಾರೆ? ಅಥವಾ ಶಿವಕೃಪೆಯು ತಪ್ಪಿದಮೇಲೆ ಯಾರಿದ್ದು ಏನು ಮಾಡುವರು? ನಿನ್ನನ್ನು ತಂದುಕೊಡುವರೇ?

ಈ ಪ್ರಕಾರ ದುಃಖಮಾಡಿ ಹಲುಬಿ, ಹಂಬಲಿಸಿ, ಕಸುವುಗೆಟ್ಟು, ಉಸುರ್ಗರೆದು, ಹೊಟ್ಟೆಯನ್ನು ಹೊಸೆದು, ದೈನ್ಯವನ್ನು ತೋರಿ, ಹೆಸಗೊಂಡು ಒದರಿ ಒದರಿ—“ಶಂಕರನೇ, ನೀನು ಮಡಿದದ್ದರಿಂದ ನಾನು ಹೇಗೆ ಸೈರಿಸಲಿ; ಗುಣನಿಧಿಯಾದ ಶಂಕರನೇ, ನನ್ನ ಮೊರೆಯನ್ನು ಕೇಳು; ಶಂಕರನೇ, ಕುದುರೆಯ ಖುರಕ್ಕಾಗಿ ಶಿವನಿಂದ ನಿನ್ನನ್ನು ಹಡೆದೆನೇ; ಶಂಕರನೇ, ನಿನ್ನ ಸವಿಮಾತುಗಳನ್ನು ಹೇಗೆ ಮರೆಯಲಿ; ಶಂಕರಾ, ನನ್ನನ್ನು ರಕ್ಷಿಸುವೆಯೆಂದು ನಂಬಿರಲು ಈ ಪ್ರಕಾರ ಮಡಿದೆಯಲ್ಲ; ಶಂಕರನೇ, ನೀನು ಮರಣಹೊಂದಿರಲು ನಾನು ಜೀವದಿಂದಿರುವದರಿಂದ ನಿನ್ನ ಮೇಲೆ ನನ್ನ ಪ್ರೇಮವಿಲ್ಲೆಂದು ತಿಳಿಯಬೇಡ; ಶಂಕರನೇ, ನನ್ನ ಶಿರಚ್ಛೇದವನ್ನು ಮಾಡಿಕೊಂಡು ನಿನ್ನಂತೆ ಆಗದೆ ಇರುವದಿಲ್ಲ. ಭೋ! ಉಮಾಪತೇ, ಪರಮ ಕೃಪಾಕರನೆಂಬ ಬಿರುದುಳ್ಳ ನೀನು ನನ್ನ ಶಂಕರನನ್ನು ಕಸಿದುಕೊಂಡು, ನಟ್ಟಡವಿಯಲ್ಲಿ ಕುರುಡನ ಕೈಯೊಳಗಿನ ಕೋಲನ್ನು ಕಸಕೊಂಡಂತೆ ಮಾಡಿದೆಯಲ್ಲ? ಕರುಣಾಕರೆಯಾದ ಗಿರಿಜಾತೆಯೆ, ನನ್ನನ್ನು ಕೃಪಾಕಟಾಕ್ಷದಿಂದ ನೋಡಿ ರಕ್ಷಿಸು ”

ಇಂತು ದುಃಖಿಸಿ ಪಾರ್ವತೀಪರಮೇಶ್ವರರಿಗೆ ಮೊರೆಯಿಟ್ಟು, ಸೂರ್ಯೋದಯವಾಗಲು, ಆಕೆಯು ಮಗನ ರುಂಡಮುಂಡಗಳನ್ನು ತಕ್ಕೊಂಡು, ಬೀದಿಗುಂಟ ಅಳುತ್ತಾ ಸತ್ಯೇಂದ್ರಚೋಳನ ಅಂತಃಪುರದ ಬಾಗಿಲಲ್ಲಿ ನಿಂತು ನುಡಿದಳೇನಂದರೆ—"ಸತ್ಯಸಂಧನಾದ ಸತ್ಯೇಂದ,ಭೂಪತಿಯೇ, ನಿನ್ನನ್ನು ಮೊರೆಹೊಕ್ಕಿದ್ದೇನೆ, ಶಿವಭಕ್ತೆಯಾದ ನನ್ನ ಮಗನು ಅಳಿದನು, ಕಾಪಾಡು."

ಅಂತಃಪುರದಲ್ಲಿದ್ದ ಸತ್ಯೇಂದ್ರಚೋಳನು ಈ ಆರ್ತಸ್ವರವನ್ನು ಕೇಳಿ, "ಇದು ಶಿವಭಕ್ತರಿಗಾದ ನೋವಿರಬಹುದೋ" ಎಂದು ಗುಡುಗನ್ನು ಕೇಳಿದ ಹಂಸನಂತೆ ಬೆದರಿ ಚಿಂತೆದಾಳ್ದು ಅಂತಃಪುರದಿಂದ ಹೊರಟು ಓಲಗಕ್ಕೆ ಬಂದು ಸಿಂಹಾಸನಾರೂಢನಾಗಿ ರೋದನದ ಧ್ವನಿಯು ಯಾವಕಡೆಯದೆನ್ನುವಷ್ಟರಲ್ಲಿ ಓರ್ವ ವೃದ್ಧ ಕಂಚುಕಿಯು ಬಂದು ಕೈಮುಗಿದು—"ಜೀಯಾ, ಓರ್ವ ಸ್ತ್ರೀಯು ತನ್ನ ಮಗನ ತಲೆಯನ್ನು ಕೈಯಲ್ಲಿ ಹಿಡಿದುಕೊಂಡು ಉಮಾಧವನಿಗೆ ಮೊರೆಯಿಡುತ್ತ ಬಾಗಿಲಲ್ಲಿ ನಿಂತಿರುವಳು" ಅಂದನು. ಅದಕ್ಕೆ ಅರಸನು—"ನಾನೇ ವಿಚಾರಿಸುವೆನು, ಬೇಗನೆ ಆಕೆಯನ್ನು ಒಳಗೆಬಿಡು." ಎನ್ನಲು, ಕಸುವುಗೆಟ್ಟವಳಾದ ತಿರುಕೋಳಾವಿನಾಚಿಯು ಕೈಯಲ್ಲಿರುವ ರುಂಡವೂ, ಉಡಿಯಲ್ಲಿರುವ ಕಬಂಧವೂ, ಹರವಿದ ತಲೆಗೂದಲುಗಳೂ, ಧೂಳಿ ಮುಸುಕಿದ ಶರೀರವೂ, ನೆತ್ತರು ಮುಣುಗಿದ ಸೆರಗೂ, ಸುರಿಯುವ ಕಣ್ಣೀರುಗಳೂ ಭಯವನ್ನುಂಟುಮಾಡುತ್ತಿರಲು, ಆ ವೃದ್ಧ ಕಂಚುಕಿಯ ಅನುಮತಿಯಿಂದ ಒಳಗೆ ಬಂದು ಅರಸನೆದುರಿಗೆ ರುಂಡಮುಂಡಗಳನ್ನಿಟ್ಟು ದೊಡ್ಡ ಧ್ವನಿಯಿಂದ ಅಳಹತ್ತಿದಳು. ಆಗ ಅರಸನು ಕರುಣಾಕಲಿತಚಿತ್ತನಾಗಿ—"ತಾಯೇ, ಅಳಬೇಡ; ನೀನಾರು? ಸತ್ತ ಈ ಹುಡುಗನು ನಿನಗೇನಾಗಬೇಕು? ಕೊರಳು ಕೊಯ್ದ ಅತಿನೀಚನು ಯಾವನು? ಇದನ್ನು ಹೇಳು. ಆ ಖಳನಿಗೆ ತಕ್ಕ ಶಾಸನವನ್ನು ಮಾಡುವೆನು ಎಂದನು." ಆಗ ತಿರುಕೋಳಾವಿನಾಚಿಯು ಹಾಗೂ ಹೀಗೂ ತನ್ನ ದುಃಖವನ್ನು ಸಮಾಧಾನಮಾಡಿಕೊಂಡು, ಕರುಣಾಸಮುದ್ರನಾದ ಸತ್ಯೇಂದ್ರಚೋಳನೆದುರಿಗೆ ತನ್ನ ವೃತ್ತಾಂತವನ್ನು ಹೇಳಿದಳೆಂತೆಂದರೆ—"ನೃಪವರನೇ, ಚಿತ್ತವಿಟ್ಟು ಆಲಿಸು. ನಿನ್ನ ಈ ರಾಜಧಾನಿಯಲ್ಲಿಯ ವ್ಯಾಪಾರಿಗಳಲ್ಲಿ ಐಶ್ವರ್ಯದಿಂದಲೂ, ಗುಣದಿಂದಲೂ, ಶಿವಭಕ್ತಿಯಿಂದಲೂ ಹೆಚ್ಚಳವನ್ನು ಹೊಂದಿ, ರವಿಯೆಂಬುವನೊಬ್ಬ ವಣಿಗ್ವರನು ಇರುತ್ತಿದ್ದನು. ತಿರುಕೋಳಾವಿನಾಚಿ ಎಂಬ ಹೆಸರುಳ್ಳ ನಾನು ಆತನ ಹೆಂಡತಿಯು. ನಾನು ಆತನಿಂದ ಆರುಮಂದಿ ಮಕ್ಕಳನ್ನು ಹಡೆದು ಯಾವದಕ್ಕೂ ಕೊರತೆಯಿಲ್ಲದೆ ಸಂಸಾರಸುಖವನ್ನು ಅನುಭವಿಸುತ್ತಿದ್ದೆನು. ನನ್ನ ಪತಿಯು ಧನಾಭಿಲಾಷೆಯಿಂದ ಯಾವತ್ತು ದ್ರವ್ಯವನ್ನು ಹಡಗದಲ್ಲಿಟ್ಟುಕೊಂಡು ಬೇರೆ ವ್ಯಾಪಾರಿಗಳೊಂದಿಗೆ ಸಮುದ್ರಪರ್ಯಟನ ಮಾಡುತ್ತಿರಲು, ಹಡಗವು ಸಮುದ್ರದಲ್ಲಿ ಮುಳುಗಿ ನನ್ನ ಜೀವಿತೇಶನು ಪ್ರಾಣಕ್ಕೆ ಎರವಾದನು. ಆಗ ನಾನು ಮೂರುತಿಂಗಳ ಗರ್ಭಿಣಿ ಇದ್ದೆನು. ಧನಕನಕದೊಂದಿಗೆ ನನ್ನ ಮನೋವಲ್ಲಭನು ಅಳಿದದ್ದರಿಂದ ನಾನು ಉಳಿದೂ ಅಳಿದಂತಾಯಿತು. ಯಾಕಂದರೆ ರೋಗದಿಂದ ವ್ಯಾಪ್ತವಾದ ಶರೀರವೂ, ಬಡತನವು ಪ್ರಾಪ್ತವಾದ

ಸಂಸಾರವೂ, ನೀಚರ ಗೆಳೆತನವೂ ದುಃಖವನ್ನುಂಟುಮಾಡದೆ ಬಿಡುವದಿಲ್ಲ. ಮಕ್ಕಳ ಮೋರೆಯನ್ನು ನೋಡಿ, ಪತಿಮರಣ ದುಃಖವನ್ನು ಮರೆಯುತ್ತಿರಲು, ಆರು ತಿಂಗಳಲ್ಲಿ ನನ್ನ ಆರುಮಂದಿ ಮಕ್ಕಳೂ ಬೇನೆಯಿಂದ ಒಬ್ಬನಹಿಂದೊಬ್ಬರು ಮಡಿದು ಹೋದರು. ಇಂಥ ಘೋರವಾದ ದುಃಖವನ್ನು ಕರುಣಾಕರನೇ, ನಿನ್ನ ಮುಂದೆ ಹೇಳುವದಕ್ಕಾಗಿಯೇ ಪಾಪಿಯಾದ ನಾನು ಉಳಿದೆನು. ಪುತ್ರವಿಯೋಗದಿಂದ ನನ್ನ ಹೊಟ್ಟೆ ಉರಿಯಿತು, ಜೀವವು ತಳಮಳಿಸಿತು, ಶರೀರವು ಬಾಡಿತು, ನಾನು ಮೂರ್ಛೆ ಬಂದು ಇಳೆಗೊರಗಿದೆನು. ಇಂತು ನಾನು ಮೂರ್ಛೆಯೊಳಿರಲು ಪರಮೇಶ್ವರನು ಅಮಿತಕೃಪೆಯಿಂದ ಬಂದು—ನೀನು ಅಂಜದಿರೆಂದು ಅಭಯುವನ್ನಿತ್ತು ನನ್ನ ಮೈಮೇಲೆ ಕೈಯಾಡಿಸಿ ವಾಮಲೋಚನದಿಂದ ನನ್ನನ್ನು ನೋಡಿ—"ನಿನಗೆ ಓರ್ವ ಗುಣನಿಧಿಯಾದ ಮಗನು ಹುಟ್ಟಿ ನಿನ್ನ ದುಃಖವನ್ನು ನಾಶಮಾಡಿ ನಿನಗೆ ಮುಕ್ತಿಯನ್ನು ದೊರಕಿಸಿಕೊಡುವನೆ"ಂದು ಹೇಳಿ, ಅಂತರ್ಧಾನವನ್ನು ಹೊಂದಿದನು. ತರುವಾಯ ಕೆಲವು ಹೊತ್ತಿನಮೇಲೆ ನಾನು ಮೂರ್ಛೆ ತಿಳಿದೆದ್ದು ಸೋಜಿಗಗೊಂಡೆನು. ನನ್ನ ಮನದ ಚಿಂತೆಯು ಹೋಯಿತು. ದೊರೆಯೇ, ಶಿವದರ್ಶನವಾಗಲು ದುಃಖವು ನಿಲ್ಲಬಹುದೇ? ಇಂತು ನಾನು ಅಂಬಿಕಾಧವನಲ್ಲಿ ನಂಬಿಗೆ ಇಟ್ಟು ಇರುತ್ತಿರಲು, ಹರನ ವರದಂತೆ ಈ ಮಗನು ಹುಟ್ಟಿದನು. ಹರನ ಅಪ್ಪಣೆಯಂತೆ ಈತನಿಗೆ ಶಂಕರನೆಂದು ಹೆಸರಿಟ್ಟು, ಗತಿಯೂ, ಪತಿಯೂ, ಪರಸುಖದನೂ ಈತನೇ ಎಂದು ಕಕ್ಕುಲತೆಯಿಂದ ರಕ್ಷಿಸುತ್ತಿದ್ದೆನು. ಸೂರ್ಯನು ಅಸ್ತಂಗತನಾಗಲು, ಮುಸುಕಿದ ಕತ್ತಲೆಯನ್ನು ಚಂದ್ರನು ಕಳೆಯುವಂತೆ, ನನ್ನ ಪತಿಯಾದ ರವಿಯು ಮಡಿದಮೇಲೆ ಈ ಶಂಕರನು ನನ್ನ ದುಃಖವನ್ನು ಕಳೆದಿದ್ದನು. ಚಿಕ್ಕವನಾಗಿದ್ದರೂ ನಮ್ಮ ಶಂಕರನು ಬಲು ವಿವೇಕಿಯಾಗಿದ್ದನು. ಅವನು ಶಿವಕೀರ್ತನೆಯನ್ನು ಕೇಳುವನು, ಶಿವಪೂಜೆಯನ್ನು ಆಸ್ಥೆಯಿಂದ ನೋಡುವನು, ಶಿವಶರಣರಿಗೆ ನಮಿಸುವನು, ಶಿವನಾಮವನ್ನು ಉಚ್ಚರಿಸುವನು, ಶಿವನಿಗೆ ಕೊಡದೆ ಏನೂ ತಿನ್ನನು. ಇಂತು ನೋಡುವವರಿಗೆ ಅಚ್ಚರಿಯಾಗುವಂತೆ ನಿರ್ಮಲಚರಿತ್ರದಿಂದೊಪ್ಪುವ ನನ್ನ ಹಸುಳ ಶಂಕರನಿಗೆ ಐದು ವರ್ಷಗಳು ತುಂಬಲು, ನಿನ್ನೆ ಮುಂಜಾವಿನಲ್ಲಿ ನಿನ್ನ ಕುಮಾರನೂ, ಮಂತ್ರಿಸುತನೂ, ಒಪ್ಪುವಂತೆ ವಿಹರಿಸಿ ತಿರುಗಿ ಪಟ್ಟಣದಲ್ಲಿ ಬರುವಾಗ್ಗೆ ನಿನ್ನ ಕುವರನ ಕುದುರೆಯ ಖುರದಿಂದ ಈ ನನ್ನ ಕಂದನ ತಲೆಯು ಕಡಿಯಿತು. ನೃಪತಿಯೇ, ನಾನು ಮಗನಿಂದ ಹೆಚ್ಚಿನ ಸುಖಗಳನ್ನು ಪಡೆಯುವೆನೆಂದು ನಂಬಿದ್ದೆನು, ನಿನ್ನ ಮಗನ ಕುದುರೆಯ ಖುರದಿಂದ ಮರಣ ಹೊಂದುವನೆಂಬದನ್ನು ನಾನೇನು ಬಲ್ಲೆನು.

ಸತ್ಯಸಾರ:—ತಿರುಕೋಳಾವಿನಾಚಿಯು ಒಂದುಳಿಯದಂತೆ ತನ್ನ ವೃತ್ತಾಂತವನ್ನು ಹೇಳಲು, ಸತ್ಯೇಂದ್ರಚೋಳನು ಕೇಳಿ ಮನಸ್ಸಿನಲ್ಲಿ ನೊಂದು "ಶಿವಶಿವಾ! ಇದರ ನಿಜಸ್ವರೂಪವನ್ನು ಶಿವನೇ ಬಲ್ಲನು" ಎಂದು ಅಚ್ಚರಿಪಟ್ಟು ತಲೆದೂಗುತ್ತ ಸಮುದ್ರವು ವಡವಾಗ್ನಿಯನ್ನೂ, ಜಲವನ್ನೂ ತಾಳಿದಂತೆ ಆತನು ತಿರುಕೋಳಾವಿನಾಚಿಯ ವಿಷಯವಾಗಿ ಕರುಣವನ್ನೂ, ಮಗನಾದ ರಾಜಶೇಖರನ ವಿಷಯವಾಗಿ ಕೋಪವನ್ನೂ ತಾಳಿ,

ಮಂತ್ರಿಯಾದ ಪತಿವ್ರೋಹಿಯನ್ನು ಬರಮಾಡೆಂದು ವೃದ್ಧಕಂಚುಕಿಗೆ ಅಪ್ಪಣೆಮಾಡಿದನು. ಪತಿವ್ರೋಹಿಯು ಅರಸನ ಅಪ್ಪಣೆಯನ್ನು ವಹಿಸಿ, ಆ ಸ್ಥಾನವನ್ನು ಹೊಕ್ಕು, ಅರಸನಡಿದಾವರೆಗಳಿಗೆ ವಂದಿಸಿ, ಕೃತಾಂಜಲಿಪುಟನಾಗಿ ನಿಂತು, ಬಾಲನ ಶಿರಸ್ಸನ್ನು ಹಿಡಿದು ಅಳುತ್ತ ನಿಂತಿರುವ ತಿರುಕೋಳಾವಿನಾಚಿಯನ್ನು ನೋಡಿ ಮನದಲ್ಲಿ ಯೋಚಿಸಿದ ಹೇನೆಂದರೆ—"ಇದು ನಿನ್ನಿನ ಅಶ್ವದ ಏರಾಟದಲ್ಲಿ ನನ್ನ ಮಗನಿಂದಲೂ, ಅರಸುಮಗನಿಂದಲೂ ಒದಗಿದ ಘೋರಪ್ರಸಂಗವಾಗಿರಬೇಕು. ಇಲ್ಲದಿದ್ದರೆ ಈ ಸುದತಿಯು ಆ ಸ್ಥಾನಕ್ಕೆ ದೊರಿಕೊಳ್ಳಲು ಬರಬಹುದೇ? ಇದು ಶಿವಕೃತವಾದ್ದರಿಂದ ಇದಕ್ಕೆ ಪರಿಹಾರ ವಿಲ್ಲವು. ಇದು ಶಿವನ ಪ್ರಸಾದಕ್ಕೂ, ಅರಸನ ಹೆಚ್ಚಳಕ್ಕೂ ಕಾರಣವಾಗಿರುವದು.

ತೀಕ್ಷ್ಣ ಬುದ್ಧಿಶಾಲಿಯಾದ ಪತಿವ್ರೋಹಿಯು ಈ ಪ್ರಕಾರ ತಿಳಿದದ್ದನ್ನು ಪರೇಂಗಿತಜ್ಞನಾದ ಅರಸನು ಆತನ ಮುಖಲಕ್ಷಣದಿಂದ ತಿಳಿದು, ಅವನ ಜಾಣತನಕ್ಕೆ ಮನಸ್ಸಿನಲ್ಲಿ ಮೆಚ್ಚಿ, ಯಾವ ಸಂಗತಿಯನ್ನೂ ಅವನಿಗೆ ಹೇಳದೆ—"ಮಂತ್ರಿಯೇ, ಅಪರಾಧಿಗಳೂ, ಭೂಭಾರಕರೂ ಆದ ಕುಮಾರರನ್ನು ಕರಿಸೆಂ"ದು ನುಡಿಯುವಷ್ಟರಲ್ಲಿ ಮಂತ್ರಿಕುಮಾರನೂ, ನೃಪತನಯನೂ ಅಲ್ಲಿಗೆ ಬಂದು ಅರಸನಿಗೆ ಸಾಷ್ಟಾಂಗವೆರಗಿ, ತಮ್ಮ ಅಪರಾಧವನ್ನು ಅರಸನು ಅರಿತಿರಬಹುದೆಂದು ಶಂಕಿಸುತ್ತ ಕಂಪಿಸುತ್ತ ಅವರಿಬ್ಬರು ಒತ್ತಟ್ಟಿಗೆ ಸರಿದು ನಿಂತರು. ಆಗ ಅವರೀರ್ವರನ್ನು ಅರಸನು ಕೆಂಪಡರಿದ ಕಣ್ಣುಗಳಿಂದ ನೋಡಿ—ಇಷ್ಟೊಂದು ಉದ್ಧಟತನವು ನಡೆಯುವದೇ? ಶರೀರದ ಮದದಿಂದಲೂ, ಯೌವನದ ಉದ್ರೇಕದಿಂದಲೂ, ಐಶ್ವರ್ಯದ ಗರ್ವದಿಂದಲೂ ಮುಂದಿನ ವಿಚಾರ ತಿಳಿಯದೆ, ಅಪಕೀರ್ತಿಗೆ ಹೆದರದೆ, ಪಾಪಕ್ಕೆ ಬೆದರದೆ, ನನ್ನ ಭಯವನ್ನು ಸ್ವಲ್ಪವಾದರೂ ಎಣಿಸದೆ, ಭೂತಳದಲ್ಲಿ ಸಜ್ಜನರು ಅಲ್ಲೆಂಬದನ್ನು ಎಸಗಿ ಈ ಬಾಲಕನನ್ನು ಕೊಂದಿರಲ್ಲವೇ? ಮಗನೇ, ಶರಣರ ಚರಣಗಳನ್ನು ಅರ್ಚಿಸಿ, ಶಂಕರನನ್ನು ಪೂಜಿಸಿ, ಸಚ್ಚರಿತ್ರೆಯನ್ನು ಹೊಂದಿ, ಶೈವಮತವನ್ನು ವಿಚಾರಿಸಿ ತಿಳಿದು ಉತ್ತಮವಾದ ಉಜ್ವಲಗುಣಗಳನ್ನು ಹೊಂದಿ, ನಿರ್ಮಲಕೀರ್ತಿಯನ್ನು ಸಂಪಾದಿಸಿ ಬಾಳಿ ನಮ್ಮನ್ನು ಉದ್ಧರಿಸುವೆಯೆಂದು ತಿಳಿದಿರಲು, ಒಳ್ಳೇ ಕೆಲಸವನ್ನು ಮಾಡಿದೆ. ವೈರಿ ಅರಸರನ್ನು ಸೋಲಿಸುವದನ್ನು ಬಯಸದೆ, ಶಂಭುಪಾದ ಸೇವೆಯನ್ನು ಹಾರೈಸದೆ, ಶಿವಕಾವ್ಯವನ್ನು ಕೇಳಲಿಚ್ಛಿಸದೆ ಶಿವಭಕ್ತನ ಕೊರಳ ಕೊಯ್ಯುವ ಲೀಲೆಯನ್ನು ಬಯಿಸಿದೆಯಾ? ಶರಣರ ಮನಸ್ಸನ್ನು ನೋಯಿಸಿದ ಪಾಪಕ್ಕೆ ಪರಿಹಾರವಿಲ್ಲದಿರಲು, ಶರಣರ ಶಿಶುವಿನ ಶಿರವನ್ನು ತರಿದ ಪಾಪವು ನಿನ್ನ ಶಿರವನ್ನು ಕೊಟ್ಟರೆ ಹೋಗುವದೇ? ಹರಪೂಜೆಗಿಂತಲೂ ಹರಭಕ್ತರ ಪೂಜೆಯು ಅಧಿಕವೆಂದು ಆಗಮಗಳು ಹೇಳುವದರಿಂದ, ಹರಚರಣದ್ರೋಹಕ್ಕಿಂತಲೂ ಹರಶರಣರ ದ್ರೋಹವು ಮಿಗಿಲಾಗಿರುವದು.

ಕುಪಿತನಾದ ಸತ್ಯೇಂದ್ರ ಚೋಳರಾಜನು ಈ ಪ್ರಕಾರ ನುಡಿದು ಅವರೀರ್ವರನ್ನು ಗದ್ದರಿಸಿ "ನಿಮ್ಮಿಬ್ಬರಲ್ಲಿ ಈ ಶಿಶುವನ್ನು ಯಾವನು ಕೊಂದನು? ಬೇಗನೆ ಹೇಳಿರಿ" ಎನ್ನಲು, ಮಂತ್ರಿ ಕುವರನು ಮುಂದೆ ಬಂದು ಕೈಮುಗಿದು, "ನನ್ನೊಡೆಯನೇ, ನನ್ನ ವಿಜ್ಞಾಪನೆ

ಯನ್ನು ಆಲಿಸಬೇಕು. ನಿನ್ನಿನ ದಿನ ಕುದುರೆಗಳನ್ನೇರಿ ಸೇನೆಯೊಡನೆ ನಾವಿಬ್ಬರೂ ಬರುತ್ತಿರಲು, ವಿಭುವಾದ ರಾಜಶೇಖರನು ಈ ಶಿಶುವನ್ನು ಕಂಡು ಕುದುರೆಯನ್ನು ಜಾಗರೂಕತೆಯಿಂದ ದಾಟಿಸಿ ಮುಂದಕ್ಕೆ ನಡೆದನು. ನನ್ನ ಕುದುರೆಯು ಈ ಶಿಶುವಿನತಲೆಯನ್ನು ಮೆಟ್ಟಲು ರುಂಡ ಮುಂಡಗಳು ಬೇರೆಯಾದವು. ಆದ್ದರಿಂದ ಈ ತಪ್ಪು ನನ್ನದು. ಈ ಶಿಶುವಿನ ಶಿರಸ್ಸಿಗೆ ಬದಲಾಗಿ ನನ್ನ ಶಿರಸ್ಸನ್ನು ಕೊಡುವೆನು" ಎನ್ನಲು, ಅರಸನು ಅವನ ಮಾತುಗಳನ್ನು ಕೇಳಿ ಮಂತ್ರಿಯನ್ನು ನೋಡಿ, ಈ ಶಂಕರನ ಶಿರಸ್ಸಿಗೆ ಮಿತವಚನನ ಶಿರಸ್ಸನ್ನು ಪ್ರತಿಯಾಗಿ ಕೊಡೆಂದು ನುಡಿದನು. ಅಷ್ಟರಲ್ಲಿ ಸತ್ಯಸಂಧನಾದ ರಾಜಶೇಖರನು ಮುಂದೆ ಬಂದು ಕೈ ಮುಗಿದು, "ಈ ಶಿಶುವಿನ ಶಿರಸ್ಸಿಗೆ ನನ್ನ ಶಿರವನ್ನು ಪ್ರತಿಯಾಗಿ ಕೊಡತಕ್ಕದ್ದೆ"ಂದು ನುಡಿದನು. ಆಗ ಸಭಾಸದರು ಆಶ್ಚರ್ಯಪಟ್ಟರು. ಅರಸನ ಮನಸ್ಸು ಹರ್ಷಯುಕ್ತವಾಯಿತು. ಮಂತ್ರಿ ಪತಿಮೋಹಿಗೆ ಅಸಮಾಧಾನವಾಯಿತು. ಆಗ ರಾಜಶೇಖರನು ತಂದೆಯನ್ನು ಕುರಿತು ನುಡಿದನೇನಂದರೆ:—ನೃಪೋತ್ತಮನೇ, ನನ್ನ ಬಿನ್ನಹವನ್ನು ಆಲಿಸಬೇಕು. ಸಿಂಧು ದೇಶಾಧೀಶ್ವರನು ಕೊಟ್ಟ ಈ ಕುದುರೆಗಳನ್ನು ಏರುವದಕ್ಕೆ ನಾನು ಇಚ್ಛಿಸಲು, ಈ ಮಿತವಚನನು—"ಕುದುರೆಗಳು ಹೊಸವು, ಈ ಪಟ್ಟಣವು ಶಿವಭಕ್ತರಿಂದ ತುಂಬಿದ್ದು, ಸೈನ್ಯವು ಅಗಣ್ಯವು, ನಮ್ಮೊಡೆಯನು ಭಕ್ತ ಸಂತಾಪವನ್ನು ತಡೆಯದವನು; ಆದ್ದರಿಂದ ಈ ಅಶ್ವವಿಹಾರವನ್ನು ಮಾಡುವದು ಅಯುಕ್ತವು." ಎಂದು ಮೊದಲೇ ನನ್ನನ್ನು ಹಲವು ರೀತಿಯಿಂದ ಬೋಧಿಸಿದನು. ಆದರೆ ನಾನು ಅದನ್ನು ಧಿಃಕ್ಕರಿಸಿ—"ನಿನ್ನಿಂದ ಯಾವ ತಪ್ಪಾದರೂ ಅದು ನನ್ನದೆಂದು ತಿಳಿದು ನನ್ನ ವಿನೋದಕೇಳಿಗೆ ವಿಘ್ನಮಾಡಬೇಡೆ"ಂದು ಹಟ ಹಿಡಿಯಲು, ಈ ಮಿತವಚನನು ವಿಹಾರವನ್ನು ಒಡಂಬಟ್ಟನು. ಆದ್ದರಿಂದ ನ್ಯಾಯಪಕ್ಷಪಾತಿಯಾದ ಭೂಪತಿಯೇ! ಈ ಅಪರಾಧವು ನನ್ನದು. ನನ್ನ ಶರೀರವನ್ನು ಉಮಾಧವನು ಮೆಚ್ಚುವಂತೆ ಶಂಕರನ ಶರೀರಕ್ಕೆ ಪ್ರತಿಯಾಗಿ ಕೊಡು. ನಿಮಿತ್ತವಿಲ್ಲದೆ ಶಿವಭಕ್ತೆಯ ಮಗನು ಅಳಿದನೆಂದು, ನನ್ನ ಮನಸ್ಸು ನೊಂದಿರುತ್ತದಲ್ಲದೆ, ಜೀವದ ಹಂಗನ್ನುನಾನು ಹಿಡಿದಿಲ್ಲ.

ರಾಜಶೇಖರ ಕುಮಾರನು ನುಡಿದ ನುಡಿ ಕೇಳಿ ಸಭೆಯಲ್ಲಿ ಕುಳಿತ ಪ್ರಸಿದ್ಧರಾದ ವೃದ್ಧರಾಜರೆಲ್ಲರೂ ತಲೆದೂಗಿ ಮನಮೆಚ್ಚಿ ಹೊಗಳಿದರು. ಸತ್ಯೇಂದ್ರ ಚೋಳನು ಇದನ್ನೆಲ್ಲ ವಿಚಾರಿಸಿ ಮಗನ ಬಿನ್ನಹಕ್ಕೆ ಒಡಂಬಟ್ಟು ಮಂತ್ರಿ ಪತಿಮೋಹಿಯ ಮುಖವನ್ನು ನೋಡಿ—ಮಂತ್ರಿವರನೇ, ಇನ್ನು ಸಂದೇಹವೇತಕ್ಕೆ? ಶಿಶುವನ್ನು ಕೊಂದವನು ರಾಜಶೇಖರನೆಂದು ಸಿದ್ಧವಾಯಿತು. ಆದ್ದರಿಂದ ತಡಮಾಡದೆ ಇವನ ಶಿರವನ್ನು ಅರಿದು, ಈ ಶಂಕರನ ಶಿರಸ್ಸಿಗೆ ಪ್ರತಿಯಾಗಿ ಕೊಡೆ"ಂದು ಆಜ್ಞಾಪಿಸಿದನು. ಅರಸನ ಈ ಕಠಿಣ ಶಾಸನವನ್ನು ಕೇಳಿ ಸಭಾಸದರೆಲ್ಲರೂ ಮರಮರನೆ ಮರುಗುತ್ತಿರಲು, ಸಂತೋಷದಿಂದ ರಾಜಶೇಖರನ ಮೈಯುಬ್ಬಿ ಮುಖವು ಕಳೆಯೇರಿತು. ಅವನು ತಂದೆಯ ಚರಣಕ್ಕೆರಗಿ ಅಪ್ಪಣೆಯನ್ನು ಪಡೆದು ಎದ್ದು ನಿಂತು—"ಜನಕನೇ, ನಿಮ್ಮ ಮನಸ್ಸಿಗೆ ಚಿಂತೆಯನ್ನು ಉಂಟುಮಾಡಿದೆನು, ಮತ್ತು ಶಿವಭಕ್ತೆಯ ಮಗನನ್ನು ಪೂಜ್ಯರು ಅಲ್ಲೆನ್ನಲು ಕೊಂದೆನು;

ಅದರಿಂದ ನನಗಿಂತಲೂ ಕೃತಘ್ನರು ಯಾರಿರುವರು ? ನನ್ನ ಈ ಕೃತಘ್ನತೆಯನ್ನೂ, ನನ್ನನ್ನೂ ನೀವು ಮರೆಯುವದು ಹೇಗೆ? ನಿಶ್ಚಯವಾಗಿ ಮರೆಯುವದಾಗದು-'' ಎಂದು ನುಡಿದು, ಅರಸನ ಅಪ್ಪಣೆ ಪಡೆದು, ಪತಿವ್ರೋಹಿಯು ಸಂಗಡ ಬರಲು ಅವನೊಡನೆ ಆ ಧೈರ್ಯಶಾಲಿಯು ನಡೆದನು. ಪತಿವ್ರೋಹಿಯು ರಾಜಶೇಖರನ ಸತ್ಯವಚನಕ್ಕೂ, ಧೈರ್ಯೋನ್ನತಿಗೂ, ಉತ್ಕಟ ಶಿವಭಕ್ತಿಗೂ ಮನಸ್ಸಿನಲ್ಲಿ ಮೆಚ್ಚಿ "ದೇವನೇ, ಶಿವಪೂಜೆಯನ್ನು ಮಾಡಿ ಬಾರೆ''ಂದು ಆತನಿಗೆ ಹೇಳಿ ತಾನೂ ಮನೆಗೆ ಬಂದು ಪರಮ ಭಕ್ತಿಯಿಂದ ಏಕಾಂತ ಭವನದಲ್ಲಿ ಉಮಾಕಾಂತನನ್ನು ಪೂಜಿಸಿದನು. ಶಿವಭೃತ್ಯನೂ, ಸತ್ಯಸಂಧನೂ, ಸ್ವಾಮಿಭಕ್ತಿಯುಳ್ಳವನೂ ಆದ ಪತಿವ್ರೋಹಿಸಚಿವನು ಶಿವಪೂಜಾನಂತರದಲ್ಲಿ ಕೈಯೊಳಗೆ ಖಡ್ಗವನ್ನು ಹಿಡಿದು, "ನಮ್ಮ ವಿಭುವಿನ ಶ್ರೇಷ್ಠನಾದ ಮಗನನ್ನು ಕೊಂದು ಈ ಕೆಟ್ಟ ಶರೀರವನ್ನು ಧರಿಸಲಿಯಾ? ಅಕಟಕಟಾ!! ಈ ಅನ್ಯಾಯವು ನನ್ನಿಂದಾಗದು," ಎಂದು ಪ್ರಾಣಕೊಡಲುಜ್ಜುಗಿಸಿ ಚಂಡಿಕೆಯನ್ನು ಎಡಗೈಯಿಂದ ಹಿಡಿದು ಬಲಗೈಯ ಖಡ್ಗದಿಂದ ಶಿರವನ್ನು ಘರಘರನೆ ಕೊಯ್ದು ಭೂಮಿಯಲ್ಲೊರಗಿಸಿದನು. ನೃಪಾಜ್ಞೆಯನ್ನು ಮೀರದೆ, ನೃಪನ ಮಗನನ್ನು ಕೊಲ್ಲಲಾರದೆ ಪತಿವ್ರೋಹಿಯು ತನ್ನ ಜೀವವನ್ನು ಕೊಟ್ಟನು; ಮಂತ್ರಿಗಳಲ್ಲಿ ಈ ಮಹಾ ಪುರುಷನಿಗೆ ಸರಿಯಾದವರು ದೊರೆಯಲಾರರು; ಎಂದು ಕೇಳಿದ ಪುರಜನರೆಲ್ಲ ಹೊಗಳಹತ್ತಿದರು.

ಇತ್ತ ರಾಜಶೇಖರನು ಸ್ನಾನಮಾಡಿ ಶಿವಪೂಜಾಗೃಹವನ್ನು ಹೊಕ್ಕು, ವಿಭೂತಿ ರುದ್ರಾಕ್ಷಗಳನ್ನು ಧರಿಸಿ, ನಿರ್ಮಲಚಿತ್ತನಾಗಿ ಭಕ್ತಿಯಿಂದ ವಿಧ್ಯುಕ್ತವಾಗಿ ಶಿವಪೂಜೆಯನ್ನು ಮಾಡಿ, ಕಣ್ತುಂಬ ನೋಡಿ ಮನಸ್ಸು ದಣಿಯುವಂತೆ ಸ್ತುತಿಸಿದನು. ಶಿವಪೂಜಾನಂತರ ಆ ರಾಜಕುಮಾರನು ಮಾಹೇಶ್ವರರನ್ನು ಕರಿಸಿ ಭಕ್ತಿಯಿಂದ ಅವರ ಪಾದಪೂಜೆಯನ್ನು ಮಾಡಿ ಕೈಮುಗಿದು ಸೇವಕಭಾವವನ್ನು ವಹಿಸಿ ಪೂರ್ವವೃತ್ತಾಂತವನ್ನೆಲ್ಲ ಅವರಿಗೆ ಹೇಳಿ, ಅವರ ಕಾರುಣ್ಯವನ್ನು ಪಡೆದನು. ಇಂತು ಆ ಯುವರಾಜನು ಶಿವಪೂಜೆಯನ್ನೂ, ಮಾಹೇಶ್ವರಾರಾಧನೆಯನ್ನೂ ಸಾಂಗವಾಗಿ ಮುಗಿಸಿ ಆಭರಣಗಳ ಕಾಂತಿಯು ಹೊಳೆಯುತ್ತಿರಲು, ಮುಖವು ಚಂದ್ರನನ್ನು ಹಳಿಯುತ್ತಿರಲು, ನೇತ್ರಪ್ರಕಾಶವು ಬೆಳದಿಂಗಳನ್ನು ಹೀಯಾಳಿಸುತ್ತಿರಲು ಜನನಿಯೆಡೆಗೆ ಬಂದು ಕನಕಪೀಠದಲ್ಲಿರುವ ಆಕೆಯ ಚರಣಕ್ಕೆರಗಿದನು. ಆಗ ಅಮೃತವತಿಯು ಪುತ್ರಸ್ನೇಹದೊಡನೆ, ತೋಳುಗಳಿಂದ ಮಗನನ್ನು ಹಿಡಿದೆತ್ತಿ ಮೈಮೇಲೆ ಕೈಯಾಡಿಸಿದಳು. ಆ ಮಹಾಸಾಧ್ವಿಯು ನೇತ್ರಗಳಿಂದ ಆನಂದಾಶ್ರುಗಳು ಹೊರಸೂಸಲು ಮನದಣಿಯಾಗಿ ಮಗನನ್ನು ನೋಡಿ, ಮುಂಡಾಡಿ ಆನಂದಪಟ್ಟು ನುಡಿದಳೇನಂದರೆ—ಮಗನೇ, ಹೊಸದೊಂದು ಕಾರ್ಯವು ಒದಗಿರುತ್ತವೆಂದು ಕೇಳಿರುತ್ತೇನೆ. ನಿನ್ನ ಮುಖದಿಂದ ಏನೆಂಬದನ್ನು ನನಗೆ ಹೇಳು.

ಜನನಿಯ ನುಡಿ ಕೇಳಿ ರಾಜಶೇಖರನು—ತಾಯೇ, ನಿನ್ನೆ ಕುದುರೆಯನ್ನೇರಿ ಸೇನೆಯೊಂದಿಗೆ ಬರುತ್ತಿರಲು, ಮಂತ್ರಿಕುವರನ ಕುದುರೆಯ ಖುರ ತಾಕಿ ಓರ್ವ ಶಿವಭಕ್ತಕುವರನ ತಲೆಯು ಹಾರಿತು. ಮಂತ್ರಿಕುವರನ ಅಪರಾಧಕ್ಕೆ ನಾನು ಮೊದಲೇ ಹೊಣೆ

ಯಾದಷ್ಟರಿಂದ ತಂದೆಯು ನನ್ನ ಶಿರಸ್ಸನ್ನು ಆ ಕುಮಾರನ ಶಿರಸ್ಸಿಗೆ ಪ್ರತಿಯಾಗಿ ಕೊಡುವದಕ್ಕೆ ಅಪ್ಪಣೆ ಮಾಡಿರುವನು. ಆದದ್ದರಿಂದ ಜನನಿಯೇ, ನಿಮ್ಮ ಅಡಿಗಳಿಗೆರಗಿ ನಿಮ್ಮ ಅಪ್ಪಣೆ ಪಡೆದು ಹೋಗಲು ಬಂದಿದ್ದೇನೆ. ನನ್ನನ್ನು ನೆನಿಸಿ ಹಲುಬದೆ, ಮಂತ್ರಿಕುವರನನ್ನು ನನ್ನಂತೆ ಭಾವಿಸಿರೆಂದು ಪ್ರಾರ್ಥಿಸುವೆನು. ನಿಮ್ಮಡಿಗಳಿಗೆ ಇನ್ನೊಂದು ವಿಜ್ಞಾಪನೆಯೇನಂದರೆ—"ನೀವು ಬಹುದಿವಸ ಮಕ್ಕಳಾಗದ್ದರಿಂದ ಗುರುಸೇವೆಯನ್ನು ಮಾಡಿ, ಅವರಿತ್ತ ಮಂತ್ರೋಪದೇಶದಿಂದ ನನ್ನನ್ನು ಹಡೆದು, ನನ್ನ ಬಾಲಲೀಲೆಗಳನ್ನು ನೋಡಿದಿರಿ; ಆದರೆ ನನ್ನ ಯೌವನ ವಿಳಾಸವನ್ನು ನೋಡುವಷ್ಟರಲ್ಲಿ ನನಗೆ ಮರಣವು ಪ್ರಾಪ್ತವಾಯಿತು. ಈ ದುಃಖವನ್ನು ನೀವು ಸಹಿಸಬೇಕು."

ಈ ಪ್ರಕಾರ ತನಯನು ವಿಜ್ಞಾಪಿಸಲು, ಸಾಧ್ವಿಯಾದ ಅಮೃತವತಿಯು ಪರಮ ಶಿವಭಕ್ತೆಯಾದ್ದರಿಂದ ತಲೆದೋರುವ ಮನಸ್ತಾಪದ ಮೊಳಿಕೆಯನ್ನು ಧೈರ್ಯವೆಂಬ ಉಗುರಿನಿಂದ ಚಿವುಟ ಒಗೆದು, ಮೊಲೆಹಾಲು ತೊರೆಯಲು ಮಗನನ್ನು ಬಿಗಿದಪ್ಪಿ ಮುದ್ದಿಸಿ ಮುಖವನ್ನು ನೋಡಿ—"ನನ್ನ ಪ್ರಾಣವೇ, ತಡವೇಕೆ ಏಳು. ಶಿವಭಕ್ತನ ಶಿಶುವಿಗೆ ನಿನ್ನ ಶಿರಸ್ಸನ್ನು ಕೊಟ್ಟು ಸತ್ಯದಿಂದ ನನ್ನ ಪತಿಯನ್ನು ಗೆಲ್ಲು; ಮತ್ತು ಪಾರ್ವತೀಪತಿಯ ಚರಣಕಮಲದಲ್ಲಿ ಭ್ರಮರನಂತೆ ರಮಿಸು. ಈ ಸತ್ಯವಚನವು, ಈ ವಿನಯವು, ಈ ಸದ್ಗುಣವು, ಈ ವಿವೇಕವು, ಈ ಸಕಲಕಳಾನಿಪುಣತೆಯು, ಈ ಧೈರ್ಯವು ನನ್ನ ಮಗನಲ್ಲಲ್ಲದೆ ಅನ್ಯರಲ್ಲಿ ದೊರೆಯುವವೆ!"

ಸಾಹಸಭಕ್ತಿ:—ಇಂತು ಅಮೃತವತಿಯು ಎಡಬಲದಲ್ಲಿ ಸಖಿಯರೊಡನೆ ಮಗನನ್ನು ಹೊಗಳುತ್ತಿರಲು, ಧೈರ್ಯಶಾಲಿಯಾದ ರಾಜಶೇಖರನು ರಾಜಬೀದಿಗೆ ಬಂದು ಮಂತ್ರಿಯಾದ ಪತಿಮೋಹಿಯ ವೃತ್ತಾಂತವನ್ನು ದೂತಮುಖದಿಂದ ಕೇಳಿದನು. ತರುವಾಯ ಆತನು ತಂದೆಯ ಬಳಿಗೆ ಬಂದು ಎಲ್ಲವನ್ನು ತಿಳಿಸಲು, ಸತ್ಯೇಂದ್ರಚೋಳನು ಮಂತ್ರಿಯ ಮರಣಕ್ಕಾಗಿ ವಿಸ್ಮಯಪಟ್ಟು ಸಂದಾಯಿಯೆಂಬ ಸೇವಕನ ಮುಖವನ್ನು ಹಿಂದಿರುಗಿ ನೋಡಿ—"ಎಲೈ ಸಂದಾಯಿಯೇ, ನೀನು ಕುವರನ ತಲೆಯನ್ನು ಬೇಗನೆ ತರುವವನಾಗೆಂ"ದು ಆಜ್ಞಾಪಿಸಿದನು. ಆಗ ಸಂದಾಯಿಯು ಮಹಾ ಪ್ರಸಾದವೆಂದು ಭಯಂಕರವಾದ ಖಡ್ಗವನ್ನು ಹಿಡಿದು ಸಂಗಡ ಬರುವ ರಾಜಶೇಖರನೊಂದಿಗೆ ರಾಜಬೀದಿಯಲ್ಲಿ ನಡೆಯುಹತ್ತಿದನು. ಆಗ ಪುರಜನರು ಆ ರಾಜಪುತ್ರನನ್ನು ನೋಡಿ ಮರಮರನೆ ಮರುಗಿ ಅವರಲ್ಲಿ ಕೆಲವರು—"ಈ ಮಹಾಮಹಿಮನು ನಾಲ್ಕು ಸಮುದ್ರಗಳಿಂದ ಸುತ್ತುಗಟ್ಟಿದ ಭೂಮಿಗೆ ಒಡೆಯನು, ಪ್ರಖ್ಯಾತರಾದ ಸಾಮಂತರಾಜರಿಂದ ನಮಿಸಲ್ಪಟ್ಟವನು, ಭರಯೌವನದಿಂದ ಒಪ್ಪುವ ಸುಂದರ ಶರೀರವುಳ್ಳವನು, ಹೀಗಿರಲು ಸತ್ಯಪಾಲನೆಗಾಗಿ ತನ್ನ ಜೀವವನ್ನು ಕೊಡುವನಾದ್ದರಿಂದ ಈತನನ್ನು ಹೋಲುವವರು ಈ ಜಗತ್ತಿನಲ್ಲಿ ಯಾರಿರುವರು" ಎಂದು ನುಡಿಯುವರು. ಮತ್ತೆ ಕೆಲವು ಸ್ತ್ರೀಯರು ಕಣ್ಣೀರು ಸುರಿಸಿ ಘೋರೆಂದು ಅತ್ತು—"ಕುದುರೆಗಳು ಅಂದು ಯಾಕೆ ಬಂದವೋ, ವಿಹಾರಾಪೇಕ್ಷೆಯು ಯಾಕಾಯಿತೋ, ಶಿವಭಕ್ತೆಯಮಗನು ಯಾಕೆ ಮಡಿದನೋ, ಆ ಶಿವಭಕ್ತೆಯು ಯಾಕೆ

ದೂರಿದಳೋ, ಸತ್ಯೇಂದ್ರಚೋಳನು ಕೋಪಿಸಿ ಈ ಕುಮಾರನನ್ನು ಯಾಕೆ ಕೊಲ್ಲುವನೋ" ಎಂದು ಕೊರಲಿದರು.

ಈ ಪ್ರಕಾರ ಪುರಜನರು ದುಃಖಿಸುತ್ತಿರಲು, ರಾಜಶೇಖರನು ತ್ವರಿತದಿಂದ ನಡೆದು, ಉದ್ಯಾನದೆಡೆಗೆ ಬಂದು, ಪದ್ಮಾಸನದಿಂದ ಕುಳಿತುಕೊಂಡು, ಅಂತರಿಕ್ಷದಲ್ಲಿ ಉಮಾಧವನು ಉಮೆಯಿಂದ ಕೂಡಿ ನೋಡುತ್ತಿರಲು, ಧೈರ್ಯದಿಂದ ಖಡ್ಗವನ್ನು ಕಂಠಪ್ರದೇಶಕ್ಕೆ ಏರಿಸಿದನು. ಆಗ ಸಂದಾಯಿಯು—"ಒಡೆಯನು ಪಂಚಾಕ್ಷರೀ ಮಂತ್ರವನ್ನು ನೆನೆಯದೆ ಶರೀರವನ್ನು ನೀಗಲುಯತ್ನಿಸುವದು ಬಹಳ ಆಶ್ಚರ್ಯವಾಗಿದೆ" ಎನ್ನಲು, ರಾಜಶೇಖರನು ಮುಗುಳುನಗೆಯನ್ನು ನಕ್ಕು ನುಡಿದನೇನಂದರೆ—"ಸಂದಾಯಿಯೇ, ನೀನು ನನಗೆ ಆಪ್ತನಲ್ಲವೇ! ನಾನು ಪಂಚಾಕ್ಷರೀ ಮಂತ್ರವನ್ನು ಮರೆತಿರಲು, ನೆನಪು ಮಾಡಿದೆಯಲ್ಲ! ನಿನಗೆ ಸರಿಯಾದವರು ಯಾರಿರುವರು" ಎಂದನು. ರಾಜಶೇಖರನ ನುಡಿಕೇಳಿ ಸಂದಾಯಿಯು—"ನೃಪವರನೇ, ಈ ಮಂತ್ರಮಹಿಮೆಯನ್ನು ಅರುಪಲು ನಾನು ಸಮರ್ಥನೇ? ಮರಣಕಾಲದಲ್ಲಿ ಶಿವಮಂತ್ರ ಜಪವು ಪ್ರಶಸ್ತವೆಂದು ಬಲ್ಲವರಿಂದ ಕೇಳಿದ್ದೇನೆ, ಇದು ಸಟಿಯೋ ದಿಟವೋ ಪೇಳೆ"ನ್ನಲು ರಾಜಶೇಖರನು—"ಸಂದಾಯಿಯೇ, ಈ ಕಾಲಕ್ಕೆ ನಾನು ಪಂಚಾಕ್ಷರೀ ಮಂತ್ರವನ್ನು ನುಡಿದರೆ, ಆ ಮಂತ್ರ ಪ್ರಭಾವದಿಂದ ಖಡ್ಗವು ಹೂಮಾಲೆಯಾಗಿ, ಅರಸನ ಆಜ್ಞೆಗೂ ನಿನ್ನ ಸೇವಕ ಧರ್ಮಕ್ಕೂ ಭಂಗಬರುವದೆಂದು ಹಾಗೆ ಮಾಡುವದಿಲ್ಲೆ"ಂದನು. ಆಗ ಸಂದಾಯಿಯು—"ನನ್ನ ಭೃತ್ಯ-ಕರ್ತವ್ಯವು ನೆರವೇರಿದರೇನು, ನೆರವೇರದಿದ್ದರೇನು? ಅರಸನಾಜ್ಞೆಯು ನಡೆದರೇನು, ನಡೆಯದಿದ್ದರೇನು? ನೀನು ಪಂಚಾಕ್ಷರೀ ಮಂತ್ರವನ್ನು ನುಡಿಯದಿದ್ದರೆ, ಮಹಾದೇವನಲ್ಲಿ ಐಕ್ಯವು ದೊರಕುವದೇ" ಅಂದನು.

ಸಂದಾಯಿಯ ನುಡಿಕೇಳಿ ರಾಜಶೇಖರನು ಮುಗುಳುನಗೆನಕ್ಕು—"ಭೃತ್ಯೋತ್ತಮನೇ, ಸ್ವಲ್ಪ ಹೊತ್ತು ಸುಮ್ಮನಿದ್ದು ನೋಡುತ್ತಿರು, ಅಂದರೆ ಎಲ್ಲ ವಿಧಿಯು ಗೊತ್ತಾಗುವದು" ಎಂದು ಹೇಳಿ ಕೊರಳಿಗೆ ಖಡ್ಗವನ್ನು ಜೊತೆಗೊಳಿಸಿದನು. ಆಗ ಅಂತರಿಕ್ಷದಲ್ಲಿ ಪಾರ್ವತಿಯು ರಾಜಶೇಖರನ ಇರವನ್ನು ನೋಡಿ ಪತಿಯನ್ನು ಕುರಿತು "ದೇವನೇ, ಕುಮಾರನು ಕೊರಳನ್ನು ಕೊಯ್ದುಕೊಳ್ಳುವನು, ಕರುಣಿಸಿ ಉನ್ನತ ಸುಖಗಳನ್ನು ಕೊಡಬೇಕೆ"ಂದು ಬಿನ್ನಯಿಸಲು ಶಂಕರನು—"ಅಗಜಾತೆಯೇ, ಮುಂದೆ ಕಾರ್ಯವಿರುವದು, ಸುಮ್ಮನಿದ್ದು ಭಕ್ತರ ಪ್ರಭಾವವನ್ನು ನೋಡು" ಎಂದು ಹೇಳಿದನು. ಆಗ ರಾಜಶೇಖರನು ಮೃಡನನ್ನು ಮನಸ್ಸಿನಲ್ಲಿ ಧ್ಯಾನಿಸಿ, ಕೈ ಖಡ್ಗದಿಂದ ಕೊರಳನ್ನು ಕರಕರನೆ ಕೊಯ್ದು, ಮಂತ್ರವನ್ನುಚ್ಚರಿಸುವ ಕೊರಳನ್ನು ಕೈಯಲ್ಲಿ ಹಿಡಿದನು. ಆಗ ಉಜ್ವಳಿಸುವ ಒಂದು ಪ್ರಕಾಶವು ಉತ್ಪನ್ನವಾಯಿತು. ಸಂದಾಯಿಯು ಅದನ್ನು ನೋಡಲಾರದೆ ಬಾಗಿ ನಿಂತು ಸ್ತುತಿಸುತ್ತಿರಲು, ರಾಜಶೇಖರನು ರುಂಡವನ್ನು ಅವನ ಕೈಯಲ್ಲಿ ಕೊಟ್ಟನು. ರಾಜಕುಮಾರನು ನುಡಿದಂತೆ ನಡೆದದ್ದನ್ನು ನೋಡಿ ಸಂದಾಯಿಯು ಕೌತುಕಪಟ್ಟನು. ರಾಜಶೇಖರನ ಒಳ್ಳೇ ಮಾತುಗಳೇ ಅವನಿಗೆ ಉಪದೇಶವಾಗಿ ಕೇವಲ

ಪಾಮರನಾದ ಆ ಭೃತ್ಯನು ತನ್ನ ಮನಸ್ಸಿನಲ್ಲಿ ರಾಜಶೇಖರನ ಮೂರ್ತಿಯು ನೆಲೆಗೊಂಡಿರಲು, ಶಿವಮಂತ್ರ ಸಿದ್ಧನೆನಿಸಿಕೊಂಡನು. ಅಂದ ಬಳಿಕ ಸತ್ಸಮಾಗಮದ ಮಹಿಮೆಯನ್ನೇನು ವರ್ಣಿಸುವದದೆ?

ಸಂದಾಯಿಯು ರಾಜಶೇಖರನ ಶಿರಸ್ಸನ್ನು ಕರತಳದಲ್ಲಿ ಪಿಡಿದು, ಬೀದಿಗುಂಟೆ ಬರುತ್ತ ನೃಪವರನಾದ ಸತ್ಯೇಂದ್ರಚೋಳನ ಕೈಯಲ್ಲಿ ಅದನ್ನು ಕೊಟ್ಟನು. ಆಗ ಮುಗುಳುನಗೆಯಿಂದಲೂ, ವಿಭೂತಿಯಿಂದೊಪ್ಪುವ ಹಣೆಯಿಂದಲೂ, ಕುಂಡಲಗಳಿಂದೊಪ್ಪುವ ಗಲ್ಲಗಳಿಂದಲೂ ಶೋಭಿಸುವ ತನಯನ ಮುಖವು, ಎಡಬಿಡದೆ ಪಂಚಾಕ್ಷರೀ ಮಂತ್ರವನ್ನು ಉಚ್ಚರಿಸುವದನ್ನು ನೋಡಿ, ಸತ್ಯೇಂದ್ರಚೋಳನು ಅಚ್ಚರಿಬಟ್ಟು ಕೆಲದೊಳಿದ್ದ ನೃಪರ ಮುಂದೆ ಸ್ತುತಿಸುತ್ತ, ತನ್ನ ಸೇವಕನಾದ ಸಂದಾಯಿಯನ್ನು ಕುರಿತು—"ಎಲೇ ಸಂದಾಯಿಯೇ, ನನ್ನ ಕುಮಾರನು ಮಂತ್ರಯುಕ್ತವಾದ ಶಿರಸ್ಸನ್ನು ಕೊಯ್ದು ಹೇಗೆ ಕೊಟ್ಟನು! ತಡಮಾಡದೆ ಹೇಳು" ಅಂದನು. ಆಗ ಸಂದಾಯಿಯು ತಾನಂದದ್ದನ್ನೂ, ರಾಜಶೇಖರನಂದದ್ದನ್ನೂ ಅರಸನ ಮುಂದೆ ಒಂದುಳಿಯದಂತೆ ಹೇಳಿ, ಮನಸ್ಸಿನಲ್ಲಿ ರಾಜಶೇಖರನ ಮೂರ್ತಿಯನ್ನು ಧ್ಯಾನಿಸಿ ಶಿವನನ್ನು ಸ್ಮರಿಸಿ ಆವೇಶದಿಂದ ಕೊರಳಿಗೆ ಖಡ್ಗವನ್ನು ಜೋತೆಗೊಳಿಸಿ "ಇಗೋ ನೋಡು, ಹೀಗೆ ಕೊರಳು ಕೊಯ್ದುಕೊಂಡನು" ಎಂದು ಹೇಳಿ ಕರಕರನೆ ತನ್ನ ಕೊರಳು ಕೊಯ್ದುಕೊಂಡು ಮಂತ್ರವನ್ನುಚ್ಚರಿಸುತ್ತಿರುವ ಕೊರಳನ್ನು ಅರಸನ ಕೈಯಲ್ಲಿ ಕೊಟ್ಟನು. ಅರಸನು ಭೃತ್ಯನ ಶಿರಸ್ಸನ್ನು ಎಡಗೈಯಲ್ಲಿ ಹಿಡಿದು, ಶುಭ್ರವಾದ ಹಲ್ಲುಗಳು ಮೆರೆಯುತ್ತಿರಲು, ಅದು ಪಂಚಾಕ್ಷರೀ ಮಂತ್ರವನ್ನು ಎಡೆಬಿಡದೆ ಉಚ್ಚರಿಸುತ್ತಿರುವದನ್ನು ನೋಡಿ ಸೇವಕನ ಕೃತ್ಯವು ಹೊಸದೆಂದು ಹೊಗಳಿದನು. ಸತ್ಸಂಗತಿಯ ಮಹತ್ವವನ್ನು ವರ್ಣಿಸುವದು ಅಸದಳವು. ಕೇವಲ ಪಾಮರನಾದ ಸಂದಾಯಿಗೆ ರಾಜಶೇಖರ ಕುಮಾರನ ಸಹವಾಸದಿಂದ ರಾಜಶೇಖರನಂತೆ ಪಂಚಾಕ್ಷರೀ ಮಂತ್ರಜಪವು ದೊರಕಿತು. ಎಲ್ಲಕ್ಕೂ ಮೊದಲು ಪ್ರಾಣಕೊಟ್ಟ ಪತಿಮೋಹಿ ಮಂತ್ರಿಗೆ ಈ ಅಮೋಘಲಾಭವು ದೊರಕಲಿಲ್ಲವಲ್ಲ! ಅಂಬಬಳಿಕ ಪತಿಮೋಹಿಗಿಂತಲೂ ಸಂದಾಯಿಯು ಸತ್ಸಮಾಗಮದ ಯೋಗದಿಂದ ಶ್ರೇಷ್ಠನಾಗಲಿಲ್ಲವೇ?

ಈ ಮೇರೆಗೆ ಸ್ತುತಿಗೆ ಪಾತ್ರವಾದ ಮಹತ್ಕೃತಿಯನ್ನು ಸಂದಾಯಿಯು ಮಾಡಿದ ಮೇಲೆ ಸತ್ಯೇಂದ್ರಚೋಳನು ತಿರುಕೋಳಾವಿನಾಚಿಯನ್ನು ಕುರಿತು—"ಶಿವಭಕ್ತೆಯೇ, ನಿನ್ನ ಮಗನ ಒಂದು ಶಿರಸ್ಸಿಗೆ ಬದಲಾಗಿ ಇವೆರಡು ಶಿರಸ್ಸುಗಳನ್ನಿತ್ತಿರುವೆನು, ನೋಡೆಂದು ಹೇಳಿ ಅವೆರಡು ಶಿರಸ್ಸುಗಳನ್ನು ಶಂಕರನ ಶಿರಸ್ಸಿನ ಎಡಬಲದಲ್ಲಿ ಇಟ್ಟನು. ಸಂದಾಯಿ ರಾಜಶೇಖರರ ರುಂಡಗಳ ಹಲ್ಲಿನ ಪ್ರಕಾಶವು ಅಮೃತದಂತೆಯೂ, ಉಚ್ಚರಿಸಲ್ಪಡುತ್ತಿರುವ ಮಂತ್ರವು ಸಂಜೀವನನೆಂಬ ಮಂತ್ರದಂತೆಯೂ, ಆಗಿ ಶಂಕರನ ಶಿರಸ್ಸಿನಲ್ಲಿ ಪ್ರಾಣಪ್ರತಿಷ್ಠಾಪನವಾಯಿತು. ಆಗ ರಾಜಶೇಖರ–ಸಂದಾಯಿಗಳ ಶಿರಸ್ಸುಗಳು ಶಂಕರನ ಒಂದೊಂದು ಕಿವಿಯಲ್ಲಿ ಪಂಚಾಕ್ಷರೀ ಮಂತ್ರವನ್ನು ಉಪದೇಶಮಾಡಲು, ಆ ಮಂತ್ರವು ಮುಖವೆಂಬ ವಿವರದಿಂದ ಹೊರಡುವದೋ ಅನ್ನುವಂತೆ ಶಂಕರನ ಶಿರಸ್ಸು ತೊದಲುನುಡಿ

ಯಿಂದ ಪಂಚಾಕ್ಷರೀ ಮಂತ್ರವನ್ನು ಉಚ್ಚರಿಸ ಹತ್ತಿತು. ಈ ಅದ್ಭುತವನ್ನು ಕೌತುಕ ಪರವಶರಾಗಿ ಜನರು ಹೊಗಳುತ್ತಿರಲು, ತಿರುಕೋಳಾವಿನಾಚಿಯು ಸಂದಾಯಿಯು ಕಬಂಧದ ಕೈಯಲ್ಲಿರುವ ಖಡ್ಗವನ್ನು ತಕ್ಕೊಂಡು—"ಚೋಳಭೂಪತಿಯೇ, ನನ್ನ ಮಗನ ತಲೆಗೆ ಲೋಕರಕ್ಷಕನಾದ ನಿನ್ನ ಮಗನ ತಲೆಯನ್ನು ಕೊಟ್ಟೆಯಲ್ಲ! ಈಗ ನಾನು ನಿನ್ನ ಸೇವಕನಾದ ಈ ಸಂದಾಯಿಯ ತಲೆಗೆ ನನ್ನ ತಲೆಯನ್ನು ನಿವಾಳಿಯಾಗಿ ಕೊಡುತ್ತೇನೆ" ಎಂದು ಹೇಳಿ, ಕೈಖಡ್ಗದಿಂದ ಶಿರಸ್ಸನ್ನು ಕೊಯ್ದುಕೊಂಡು ಸಮಂತ್ರಕವಾದ ಆ ಶಿರಸ್ಸನ್ನು ಕೊಟ್ಟಳು. ತಿರುಕೋಳಾವಿನಾಚಿಯ ಕೃತಿಗೆ ಆಶ್ಚರ್ಯಪಟ್ಟು ಅರಸನು ಪತಿವ್ರೋಹಿಯ ತಲೆಯನ್ನು ತರಿಸಿ ಅಲ್ಲಿಟ್ಟು ನೋಡುತ್ತಿರಲು, ಅದೂ ಪಂಚಾಕ್ಷರೀ ಮಂತ್ರವನ್ನು ಅನ್ನಹತ್ತಿತು. ಈ ಪ್ರಕಾರ ಪ್ರಾಣವನ್ನು ಧರಿಸದೆ, ಚೇತನವನ್ನು ಹೊಂದಿ ಪಂಚಾಕ್ಷರೀ ಮಂತ್ರವನ್ನು ಬಿಡದೆ ಉಚ್ಚರಿಸುವ ಅಯ್ದು ತಲೆಗಳನ್ನು ಶಿವಧ್ಯಾನಾಸಕ್ತನಾದ ಸತ್ಯೇಂದ್ರಚೋಳನು ನೋಡಿ—"ಪಂಚವರ್ಣದರ್ಶಕವಾದ ಈ ಅಯ್ದು ತಲೆಗಳನ್ನು ನನ್ನ ತಲೆಯಿಂದ ಪ್ರಣವರೂಪವಾಗಿ ಅಲಂಕರಿಸುವೆನು." ಎಂದು ಹೇಳಿ ನಿಶಿತವಾದ ಖಡ್ಗದಿಂದ ತನ್ನ ಕೊರಳನ್ನು ಕೊಯ್ದುಕೊಂಡು ಮಂತ್ರವನ್ನುಚ್ಚರಿಸುತ್ತಿರಲು ಆ ಶಿರಸ್ಸನ್ನು ಕೆಳಗಿಟ್ಟನು. ಅಷ್ಟರಲ್ಲಿ ಮಿತವಚನನು ಆ ಸ್ಥಳಕ್ಕೆ ಬಂದು—"ಪ್ರತ್ಯಕ್ಷ ನನ್ನ ಕುದುರೆಯ ಖುರದಿಂದ ಶಂಕರನ ತಲೆಯು ಕಡಿದದ್ದರಿಂದ ನಾನು ಅಪರಾಧಿಯಾಗಿರಲು, ಈ ಸತ್ಪುರುಷರೆಲ್ಲರೂ ಸಂಶಯಬಡದೆ ಪ್ರಾಣಕೊಟ್ಟರು- ಇವರಿಗಿಂತ ಮೊದಲೇ ನಾನು ಜೀವ ಕೊಡದ್ದರಿಂದ ನನ್ನಂಥ ಸೋಮಾರಿಯು ಯಾವನೂ ಇಲ್ಲವು" ಎಂದು ತನ್ನನ್ನು ಹಳಿದುಕೊಳ್ಳುತ್ತ ಈಶ್ವರಾಂಘ್ರಿಯನ್ನು ಸ್ಮರಿಸಿ ಖಡ್ಗದಿಂದ ಶಿರಸ್ಸನ್ನು ಕೊಯ್ದುಕೊಂಡು ಅದು ಮಂತ್ರವನ್ನು ಅನ್ನುತ್ತಿರಲು ಕೆಳಗಿಟ್ಟನು. ಅಹಹಾ! ಸಾಹಸಭಕ್ತಿಯ ಪರಮಾವಧಿಯಾಯಿತು.

ಇತ್ತ ಅಂತಃಪುರದಲ್ಲಿರುವ ಅಮೃತವತಿಯು ತನ್ನ ಪತಿಸುತ ಮುಖ್ಯರಾದವರೆಲ್ಲರೂ ತಮ್ಮ ಸತ್ವಶೀಲತೆಯೂ, ಸತ್ಯವೂ ವ್ಯಕ್ತವಾಗುವದಕ್ಕಾಗಿ ತಲೆಕೊಟ್ಟರೆಂಬದನ್ನು ತರುಣಿಯರ ಮುಖದಿಂದ ಕೇಳಿ, ಉತ್ಸಾಹಗೊಂಡು ಈಶ್ವರಾರ್ಚನೆಯನ್ನು ಮಾಡಿ ಸೊಸೆಯಾದ ಸರ್ವಮಂಗಳೆಯು ಹಿಂಬಾಲಿಸಲು, ಉದಗ್ರವೃತ್ತಿಯಿಂದ ನಡೆದಳು. ಆಗ ಪತಿದ್ರೋಹಿ—ಮಿತವಚನರ ಹೆಂಡಿರೂ ಆಕೆಯನ್ನು ಹಿಂಬಾಲಿಸಿದರು. ಇಂದ್ರನೀಲ ರತ್ನದ ನೆಲಗಟ್ಟಿನಲ್ಲಿ ಒಪ್ಪುವ ಆ ಶಿರಃಕಮಲಗಳನ್ನು ನೋಡಿ ಅಮೃತವತಿಯು ಎಡಬಲದಲ್ಲಿದ್ದ ಲಲನೆಯರನ್ನು ಕುರಿತು—"ಇದು ಶಿವಭಕ್ತ ಶಿಶುವಾದ ಶಂಕರನ ತಲೆಯು; ಇದು ಪತಿದ್ರೋಹಿ ಮಂತ್ರಿಯ ತಲೆಯು, ಇದು ನನ್ನ ಕುಮಾರನಾದ ರಾಜಶೇಖರನ ತಲೆಯು, ಇದು ಸಂದಾಯಿಯ ತಲೆಯು, ಇದು ನನ್ನ ಪ್ರಾಣನಾಥನ ತಲೆಯು, ಇದು ಮಿತವಚನ ಕುಮಾರನ ತಲೆಯು" ಎಂದು ಬೇರೆ ಬೇರೆಯಾಗಿ ಹೇಳಿ ತನ್ನ ಕೈ ಖಡ್ಗವನ್ನು ಗಟ್ಟಿಯಾಗಿ ಹಿಡಿದು ತನ್ನ ಪತಿಯ ಶಿರದ ಎದುರಿಗೆ ನಿಂತುಕೊಂಡಳು- ಆಗ ಸರ್ವಮಂಗಳೆಯೂ, ಮಂತ್ರಿಯ ಸತಿಸ್ನುಷೆಯರೂ ಅಮೃತವತಿಯ ಚರಣಕ್ಕೆರಗಿ ಕರ

ವಲ್ಲಿ ಖಡ್ಗಗಳನ್ನು ಹಿಡಿದು ತಮ್ಮ ತಮ್ಮ ಪತಿಗಳ ಎದುರಿನಲ್ಲಿ ನಿಂತುಕೊಂಡರು. ಆ ವೀರವನಿತೆಯರ ವೀರವೃತ್ತಿಯನ್ನು ವರ್ಣಿಸಲು ಅಸಾಧ್ಯವು. ಆ ಸತೀಶಿಖಾಮಣಿಗಳು ಕೈಖಡ್ಗವನ್ನು ಝಳಿಪಿಸಿ, ಶೈಲಜಾಪತಿಯನ್ನು ಧ್ಯಾನಿಸಿ ತಮ್ಮ ಪತಿಗಳ ಶಿರಸ್ಸೆಂಬ ಲಿಂಗಗಳನ್ನು ತಮ್ಮ ಶಿರಃಕಮಲಗಳಿಂದ ಪೂಜೆಗೆಯ್ಯುವದಕ್ಕಾಗಿ ಶಿರಸ್ಸುಗಳನ್ನು ತರಿದುಕೊಳ್ಳಲು ಉಜ್ಜುಗಿಸಿದರು. ಆಗ ಪಾರ್ವತೀಧವನು ನಂದಿವಾಹನನಾಗಿ ತ್ರಿನೇತ್ರಗಳೂ, ಸರ್ಪಾಭರಣಗಳೂ, ಗಜಚರ್ಮಾಂಬರವೂ, ನೀಲಕಂಠವೂ, ಮೃದುಹಾಸವೂ ಕಣ್ಣುಗಳಿಗೆ ಆನಂದವನ್ನೀಯುತ್ತಿರಲು, ಆನಂದದಿಂದ ಪ್ರತ್ಯಕ್ಷನಾದನು. ಆಗ ದೇವದುಂದುಭಿಗಳು ಮೊಳಗಿದವು. ಬ್ರಹ್ಮಾದಿದೇವತೆಗಳು ಬಂದರು. ಪೂಮಳೆಯು ಸುರಿಯಿತು. ಇಂತು ಹರಿಬ್ರಹ್ಮೇಂದ್ರಾದಿ ದೇವಗಣ ಪರಿವೃತನಾದ ಸದಾಶಿವನು ಮೃದುಸ್ಮಿತನಾಗಿ, ಆ ಸುದತಿಯರ ಕೈಯೊಳಗಿನ ಭಯಂಕರವಾದ ಖಡ್ಗಗಳನ್ನು ಬಿಸುಟು ಚರಣಕ್ಕೆರಗಿರುವ ಅಮೃತವತಿಯನ್ನು ಹಿಡಿದೆತ್ತಿ—"ನಿನ್ನ ಬಯಕೆಯು ಏನಿರುವದು?" ಎಂದು ಕೇಳಲು ಅಮೃತವತಿಯು "ದೇವನೇ, ಮೊದಲು ಸತ್ತವನಿಗೆ ಪ್ರಾಣವನ್ನು ಕೊಡೆಂದು ಕೇಳಿದಳು." ಶಂಕರನು ಆಕೆಯ ಔದಾರ್ಯಕ್ಕೆ ಮೆಚ್ಚಿ—"ಮಗಳೇ, ಮತ್ತೇನು ಬೇಕೆಂ''ದು ಕೇಳಲು, ಅಮೃತವತಿಯು "ಸದಾಶಿವನೇ, ತಿರುಕೋಳಾವಿನಾಚಿಗೆ ಪ್ರಾಣವನ್ನು ಕೊಡೆಂದು ಕೇಳಿದಳು.'' ಆಗ ಶಿವನು ಮೆಚ್ಚಿ—"ಅಬಲೆಯೇ, ಈ ಶಿರಗಳನ್ನು ಕ್ರಮವಾಗಿ ಎಣಿಸೆಂದು" ಹೇಳಿದನು. ಅಮೃತವತಿಯು ಆ ಶಿರಸ್ಸುಗಳನ್ನು ಒಂದು ಎರಡು ಮೂರು ನಾಲ್ಕು ಐದು ಆರು ಏಳು ಎಂದು ಎಣಿಸಲು, ಅವು ತಮ್ಮ ತಮ್ಮ ಕಬಂಧಗಳನ್ನು ಸೇರಿದವು. ಆಗ ಕಾಲುಗಳು ಶಿವನ ಪ್ರದಕ್ಷಿಣೆಗೆಯ್ಯುವದಕ್ಕಾಗಿ ತವಕಿಸುತ್ತಿರಲು, ಕಣ್ಣುಗಳು ಆ ಮಹಾಮಹಿಮನನ್ನು ನೋಡುವದಕ್ಕೆ ಹಾತೊರೆಯುತ್ತಿರಲು, ಕೈಗಳು ಆ ಉಮಾಧವನನ್ನು ಪೂಜಿಸಲು ಮುಂದುವರಿಯುತ್ತಿರಲು, ನಾಲಿಗೆಯು ಶಂಕರನನ್ನು ಸ್ತುತಿಸಲಿಕ್ಕೆ ಕುಣಿಯುತ್ತಿರಲು, ಆಶ್ಚರ್ಯಕರವಾಗಿ ಧ್ವನಿಯು ಉಂಟಾಗಿ ಸಮಾನ ಮನಸ್ಸಿನವರಾದ ಆ ಭೂಭುಜಾದಿಗಳು ಸಜೀವರಾಗಿ ಶೋಭಿಸಿದರು !

ಈ ಪ್ರಕಾರ ಅರಸನೇ ಮೊದಲಾದವರು ಬದುಕಿ ಕಟ್ಟೆದಿರಿನಲ್ಲಿ ಶೋಭಿಸುತ್ತಿರುವ ಅಷ್ಟ ಮೂರ್ತಿಯನ್ನು ಆನಂದಬಾಷ್ಪಪೂರಿತ ನೇತ್ರಗಳಿಂದ ಸ್ತುತಿಸಿ ನಲಿದರು. ಪಾರ್ವತೀ ಪರಮೇಶ್ವರರು ಅವರನ್ನು ದಯಾರ್ದ್ರದೃಷ್ಟಿಯಿಂದ ನೋಡುತ್ತಿರಲು, ರಾಜಶೇಖರನು ಉಮಾಧವನ ಚರಣಕ್ಕೆರಗಿದನು. ಆಗ ತ್ರಿಪುರಧ್ವಂಸಿಯು ಆ ರಾಜಕುಮಾರನನ್ನು ಹಿಡಿದೆತ್ತಿ ಮುಂಡಾಡಿ—"ಮಗುವೇ, ನಿನ್ನಂತೆ ಪಂಚಾಕ್ಷರೀ ಮಂತ್ರದ ಮಹಿಮೆಯನ್ನು ಈ ಜಗತ್ತಿನಲ್ಲಿ ತೋರಿಸಿದವರಾರು? ನೀನು ಷಣ್ಮುಖ ಉಪಮನ್ಯುಗಳಂತೆ ಷಡಕ್ಷರೀ ಮಂತ್ರದ ಮಹಿಮೆಯನ್ನು ಹೊಂದಿದವನಿರುತ್ತೀ" ಎಂದು ಹೊಗಳಿದನು. ಗಿರಿಜೆಯು ಸಂಭ್ರಮದಿಂದ ಚರಣಕ್ಕೆರಗಿದ ಅಮೃತವತಿಯನ್ನು ಅಪ್ಪಿಕೊಂಡು ಸರ್ವಮಂಗಳೆ ಮೊದಲಾದವರನ್ನು ಕೃಪಾಕಟಾಕ್ಷದಿಂದೀಕ್ಷಿಸಿ ನಿಮ್ಮಂತೆ ಶಿವನನ್ನು ನಂಬಿ

ದವರು ಯಾರಿರುವರು ? ಎಂದು ಹೊಗಳಿದಳು. ಅಷ್ಟರಲ್ಲಿ ಆಕಾಶಮಾರ್ಗದಿಂದ ಪುಷ್ಪಕ ವಿಮಾನವು ಪ್ರಾಪ್ತವಾಗಲು, ಕರುಣಾಳುವಾದ ಶಂಕರನು ಅವರೆಲ್ಲರನ್ನು ಆ ವಿಮಾನದಲ್ಲಿ ಕುಳ್ಳಿರಿಸಿಕೊಂಡು ವಿಳಾಸದಿಂದ ಗಿರಿಜೆಯೊಡನೆ. ಕೈಲಾಸಕ್ಕೆ ತೆರಳಿದನು. ಈಶ್ವರ ಭಕ್ತರಾದ ಸತ್ವಶಾಲಿಗಳಿಗೆ ದೊರೆಯುತಕ್ಕ ಫಲವೇ ಇಂಥಾದ್ದು!

## ೨ ನೆಯ ಸುಧಾತರಂಗ!

## ದಕ್ಷಯಜ್ಞಧ್ವಂಸ.

(ಭಾಗವತ, ಲಿಂಗಪುರಾಣ, ಭಾರತ ಇತ್ಯಾದಿ )

ಈ ಮೇರೆಗೆ ಸಿದ್ಧಮುನಿಗಳು ಶ್ರೀ ಶಿವಪಂಚಾಕ್ಷರೀ ಮಹಿಮೆಯು ವರ್ಣಿಸಿದ್ದನ್ನು ಕೇಳಿ ವಿವೇಕಶೀಲನೇ ಮೊದಲಾದ ಶಿಷ್ಯರು ಪರಮಾನಂದಪಟ್ಟರು. ಶಿವಚರಿತ್ರಗಳನ್ನು ಕೇಳುವ ಉತ್ಸುಕತೆಯು ಅವರಲ್ಲಿ ಹೆಚ್ಚಿತು. ಆಗ ವಿವೇಕಶೀಲನು ಗುರುಗಳನ್ನು ಕುರಿತು—ಸದ್ಗುರೋ, ಶ್ರೀ ಶಿವಚರಿತ್ರ ಶ್ರವಣದಿಂದ ನಾವು ಸಂತುಷ್ಟರಾದೆವು. ಶ್ರೀ ಶಿವಶಕ್ತಿಯು ದಕ್ಷಪ್ರಜಾಪತಿಯ ಹೊಟ್ಟೆಯಲ್ಲಿ ಹುಟ್ಟಿ ದಾಕ್ಷಾಯಣಿಯೆಂಬ ಹೆಸರಿನಿಂದ ಪರಮೇಶ್ವರನ ಪಾಣಿಗ್ರಹಣ ಮಾಡಿದಳೆಂತಲೂ, ಮಾವನಾದ ದಕ್ಷನು ಶಿವದ್ವೇಷಿಯಾಗಿ ಶಿವನಿಂದೆಯನ್ನು ಮಾಡಿದ್ದರಿಂದ ಆತನ ಯಜ್ಞದಲ್ಲಿ ದಾಕ್ಷಾಯಣಿಯು ಯೋಗದಿಂದ ದೇಹತ್ಯಾಗಮಾಡಿದಳೆಂತಲೂ ಕೇಳಿದ್ದೇವೆ; ಆದರೆ ಅಳಿಯ ಮಾವಂದಿರಲ್ಲಿ ಅಷ್ಟು ದ್ವೇಷವುಂಟಾಗಲಿಕ್ಕೆ ಕಾರಣವೇನು? ದಕ್ಷನು ಅಜ್ಞಾನಿಯಲ್ಲ; ಸೃಷ್ಟಿಕರ್ತೃವಾದ ಸಾಕ್ಷಾತ್ ಬ್ರಹ್ಮನ ಮಗನು; ಮೇಲೆ ಆತನಿಗೆ ಸ್ವತಃ ಸೃಷ್ಟಿಯನ್ನು ಮಾಡುವ ಸಾಮರ್ಥ್ಯವು. ಶ್ರುತ್ಯಾಗಮಾದಿಗಳಲ್ಲಿ ಆತನು ಅತ್ಯಂತ ಪ್ರವೀಣನು. ಹೀಗಿದ್ದು, ವೇದಪ್ರತಿಪಾದ್ಯನಾದ ಶ್ರೀ ಸದಾಶಿವನ ನಿಂದೆಯನ್ನು ಮಾಡಿ ಘೋರಪ್ರಾಯಶ್ಚಿತ್ತವನ್ನು ಯಾಕೆ ಅನುಭವಿಸಿದನು? ದಕ್ಷನು ಶಿವನನ್ನು ಕರೆಸದೆ ಯಜ್ಞಮಾಡಲು, ಶಿವಾಧಿಷ್ಠಿತವಲ್ಲದ ಯಜ್ಞವು ಕೊನೆಗಾಣದೆಂಬದನ್ನು ಅರಿತಿದ್ದರೂ, ಶ್ರೀ ಸದಾಶಿವನಿಂದಲೇ ಉತ್ಪನ್ನರಾಗಿರುವ ಬ್ರಹ್ಮ-ವಿಷ್ಣುಗಳು ಆ ಯಜ್ಞಕ್ಕೆ ಯಾಕೆಹೋದರು? ಸದ್ಗುರೋ, ಇವೇ ಮೊದಲಾದ ಗೂಢಸಂಗತಿಗಳನ್ನು ಹೇಳಿ, ಶಿವಮಹಿಮೆಯನ್ನು ವಿಶದವಾಗಿ ವಿವರಿಸು, ಎಂದು ಕೇಳಲು, ಸಿದ್ಧಮುನಿಯು—ಶಿಷ್ಯೋತ್ತಮರೇ, ರಹಸ್ಯಯುಕ್ತವಾದ ಬಹು ಯೋಗ್ಯ ಪ್ರಶ್ನಮಾಡಿದಿರಿ; ನಿಮ್ಮ ಪ್ರಶ್ನಗಳ ಉತ್ತರಗಳನ್ನು ಯಥಾಮತಿ ಹೇಳುವೆನು ಕೇಳಿರಿ. ಶ್ರೀ ಶಿವತಂತ್ರದಿಂದ ಕಾಲಕ್ಕನುಸರಿಸಿ ಆಗತಕ್ಕದ್ದು ತಪ್ಪುವದಿಲ್ಲ. ಅದನ್ನನುಸರಿಸಿಯೇ ಶಿವಾಧೀನರಾದ್ದರಿಂದ ಬ್ರಹ್ಮ-ವಿಷ್ಣುಗಳು ನಡೆಯುಬೇಕಾಯಿತು. ದಕ್ಷಪ್ರಜಾಪತಿಯು ದೇಹಾಭಿಮಾನದಿಂದ ಅಂಧನಾಗಿದ್ದನು. ಆವನ ವಿವೇಕವು ಸಂಪೂರ್ಣನಷ್ಟವಾಗಿತ್ತು.

ತಪಶ್ಚರ್ಯೆ, ವಿದ್ಯೆ, ಧನ, ಸುದೃಢಶರೀರ, ಕುಲ, ಸತ್ತೆ, ಮೊದಲಾದವುಗಳ ಅನುಕೂಲತೆಯಿಂದ ಅವನು ಬಹು ಗರ್ವಿಷ್ಠನಾಗಿದ್ದನು. ಈ ಅನುಕೂಲತೆಗಳ ಸದುಪಯೋಗಮಾಡಿಕೊಳ್ಳಲಿಕ್ಕೆ ಅವನಿಗೆ ಬಾರದಹಾಗಾಗಿತ್ತು. ಈ ಸ್ಥಿತಿಯಲ್ಲಿ ಜಗತ್ಕಲ್ಯಾಣಕ್ಕಾಗಿಯೇ ದುಷ್ಟ ನಿಗ್ರಹ-ಶಿಷ್ಟಪಾಲನಮಾಡುತ್ತಿರುವ ಶ್ರೀ ಸದಾಶಿವನು ದಕ್ಷನ ಕಲ್ಯಾಣಕ್ಕಾಗಿ ಅವನ ಶಾಸನಮಾಡಿ ಅವನ ದುರಹಂಕಾರವನ್ನು ಖಂಡಿಸಬೇಕಾಯಿತು; ಆದ್ದರಿಂದ ಆ ಶಿವಕಾರ್ಯಕ್ಕನುಕೂಲವಾಗಿ ಶಿವಾಧೀನರಾದ ಬ್ರಹ್ಮ-ವಿಷ್ಣುಗಳು ಭವಿಷ್ಯವನ್ನು ತಿಳಿದಿದ್ದರೂ ಶಿವತಂತ್ರದಿಂದ ದಕ್ಷಪ್ರಜಾಪತಿಯ ಯಜ್ಞಕ್ಕೆ ಅನುಕೂಲವಾಗಿ ನಡೆದು, ದಕ್ಷಾಹಂಕಾರಖಂಡನರೂಪ ಪರೋಪಕಾರದ ಕಾರ್ಯವನ್ನು ಸಾಧಿಸುವಾಗ ತಾವೂ ಗಾಸಿಯಾದರು! ಸಚ್ಛಿಷ್ಯರೇ, ಪರೋಪಕಾರಿಗಳಿಗೆ ಸುಖವೆಲ್ಲಿಯದು? ಅವರು ಮಾನಾಪಮಾನಾದಿ ಸ್ವಾರ್ಥದ ಬಾಧೆಗೆ ಒಳಗಾದರೆ ಅವರಿಂದ ಪರೋಪಕಾರವು ಹ್ಯಾಗೆ ಘಟಿಸುವದು? ವಿವೇಕಿಗಳೇ, ಬ್ರಹ್ಮ-ವಿಷ್ಣುಗಳ ಮಾತು ಹೋಗಲಿ, ದಾಕ್ಷಾಯಣಿಯೂ, ಪ್ರತ್ಯಕ್ಷ ಶಂಕರನೂ ದಕ್ಷನ ಕಲ್ಯಾಣಕ್ಕಾಗಿ ಎಷ್ಟು ಗಾಸಿಯಾಗಬೇಕಾಯಿತು ನೋಡಿರಿ; ಜಗನ್ಮಾತೆಯಾದ ದಾಕ್ಷಾಯಣಿಯು ದೇಹತ್ಯಾಗಮಾಡಿ ಪರ್ವತರಾಜನಲ್ಲಿ ಪುನಃ ಜನ್ಮತಾಳಬೇಕಾಯಿತು. ಸಾಕ್ಷಾತ್ ಶ್ರೀ ಶಂಕರನು ತನ್ನ ಶಾಂತವೃತ್ತಿಯನ್ನು ಬಿಟ್ಟು ಕ್ರೋಧವಶನಾಗಿ ವೀರಭದ್ರರೂಪದಿಂದ ಅವತರಿಸಿ ಹಿಂಸಾಪ್ರವೃತ್ತನಾಗಬೇಕಾಯಿತು! ಸಚ್ಛಿಷ್ಯರೇ, ನಮ್ಮಶರೀರದ ಒಂದು ಅವಯವವು ಪೀಡಿತವಾಗಿರುವಾಗ ಅದರ ಉಳಿದ ಅವಯವಗಳೂ ವ್ಯಥೆಪಟ್ಟು ಆ ಅವಯವವನ್ನು ಸರಿಪಡಿಸಲು ಯತ್ನಿಸುವಂತೆ, ಶ್ರೀ ಸದಾಶಿವಾಂಶವಾದ ಈ ಜಗತ್ತಿನಲ್ಲಿ ಆ ಸದಾಶಿವನ ಯಾವದೊಂದು ಅಂಶವು ಪತಿತವಾಗಲು, ಆ ಅಂಶದ ಮಹತ್ವದ ಮಾನದಿಂದ ಮಾಯಾತೀತನಾದ ಶ್ರೀ ಸದಾಶಿವನು ವ್ಯಥೆಪಟ್ಟವನಂತೆ ನಟಿಸಿ ಮಾಯಾವೃತವಾದ ಆ ಪತಿತಾಂಶವನ್ನು ಉದ್ಧರಿಸಬೇಕಾಗುವದು! ಸಚ್ಛಿಷ್ಯರೇ, ಹೀಗೆ ಪತಿತವಾಗುವದೂ, ಉದ್ಧೃತವಾಗುವದೂ ಸದಾಶಿವನ ಮಾಯೆಯ ಪ್ರಭಾವವಾಗಿರುವದು; ಇದನ್ನೇ ಈಶ್ವರೀಲೀಲೆಯೆಂದು ಕರೆಯುವರು. ಸದಾಶಿವನ ಕೃಪೆಯಹೊರತು ಆ ಮಾಯೆಯನ್ನು ದಾಟಲು ಯಾರಿಗೂ ಶಕ್ಯವಲ್ಲವು. ಇರಲಿ, ಇನ್ನು ದಕ್ಷಯಜ್ಞಧ್ವಂಸರೂಪವಾದ ದಕ್ಷನ ಕಲ್ಯಾಣಯತ್ನದ ಶ್ರೀ ಪರಮೇಶ್ವರನ ಚರಿತ್ರವನ್ನು ಹೇಳುವೆನು ಕೇಳಿರಿ-

ಶಿಷ್ಯರೇ, ಸ್ವಾಯಂಭುವ ಮನುವಿನ ಮೂರನೆಯ ಮಗಳಾದ ಪ್ರಸೂತಿಯೆಂಬವಳನ್ನು ದಕ್ಷಪ್ರಜಾಪತಿಗೆ ಕೊಟ್ಟಿತ್ತು. ಆಕೆಗೆ ಹದಿನಾರು ಜನ ಹೆಣ್ಣುಮಕ್ಕಳಾದರು. ಅವರಲ್ಲಿ ಹದಿಮೂರು ಜನರನ್ನು ಧರ್ಮನಿಗೆ, ಒಬ್ಬಳನ್ನು ಅಗ್ನಿಗೆ, ಒಬ್ಬಳನ್ನು ಪಿತರರಿಗೆ, ಒಬ್ಬಳನ್ನು ಶ್ರೀ ಶಂಕರನಿಗೆ ಕೊಟ್ಟಿತ್ತು. ಒಮ್ಮೆ ದಕ್ಷಪ್ರಜಾಪತಿಯು ತನ್ನ ಮಗಳಾದ ದಾಕ್ಷಾಯಣಿಯನ್ನೂ, ಅಳಿಯನಾದ ಶಂಕರನನ್ನೂ ನೋಡುವದಕ್ಕಾಗಿ ಕೈಲಾಸಕ್ಕೆ ಹೋದನು. ಅಲ್ಲಿ ಅಳಿಯನ ವೈಭವವನ್ನು ನೋಡಿ ಆತನಿಗೆ ಪರಮಾನಂದವಾಯಿತು. ವಿಷ್ಣು-ಬ್ರಹ್ಮೇಂದ್ರಾದಿ ದೇವತೆಗಳ ವಾಹನಗಳು ಆ ಕೈಲಾಸಪಟ್ಟಣದ

ಹೊರಗಡೆಯಲ್ಲಿ ಕಟ್ಟಿರುವದನ್ನು ನೋಡಿ ಅವನಿಗೆ ಪರಮಾಶ್ಚರ್ಯವಾಯಿತು, ಪಟ್ಟಣದ ಕೋಟೆಯ ಬಾಗಿಲಿನಿಂದ ಬರಹೋಗುವವರಲ್ಲಿ ಎತ್ತ ನೋಡಿದರೂ ಐಮೊಗದವರು, ಹತ್ತುತೋಳಿನವರು, ಹಣೆಗಣ್ಣಿನವರು, ಸರ್ಪಾಭರಣರು, ಚಂದ್ರಶೇಖರರು ಅನಂತವಾಗಿ ಒಪ್ಪುತ್ತಿದ್ದರು. ಅವರೆಲ್ಲರನ್ನು ನೋಡಿ ಬೆರಗಾಗುತ್ತ ದಕ್ಷನು ಪೂರ್ವದ್ವಾರದಲ್ಲಿ ತನ್ನ ವಿಮಾನದಿಂದ ಇಳಿದನು. ಅಲ್ಲಿ ಎಷ್ಟೋ ಮನು-ಮುನಿಗಳು ದ್ವಾರಪ್ರವೇಶವಿಲ್ಲದೆ ಕಾದುಕೊಂಡು ನಿಂತಿದ್ದರು. ದ್ವಾರಪಾಲಕರು ದಕ್ಷಪ್ರಜಾಪತಿಯನ್ನು ನೋಡಿ, ಈತನು ಶಿವನ ಮಾವನೆಂದು ತಿಳಿದು ಒಳಗೆ ಬಿಟ್ಟರು. ಒಂದಾದಬಳಿಕೊಂದರಂತೆ ಬಾಗಿಲುಗಳನ್ನು ದಾಟುತ್ತಬರಲು, ದಕ್ಷನಿಗೆ ಇದಿರಿಗೆ ಶಿವಸಭಾಮಂಟಪವು ಕಾಣಿಸಿತು. ವೇದಾಗಮೋಪನಿಷತ್ತುಗಳ ಘೋಷವೂ, ಸ್ತುತಿಪಾಠಕರ ಗಂಭೀರಧ್ವನಿಯೂ, ಮುನಿಗಳ ಜಯಜಯಕಾರವೂ, ನೃತ್ಯ-ಗೀತ-ವಾದ್ಯಧ್ವನಿಗಳೂ ಕೂಡಿ ಸಭೆಯು ಮಹಾನಾದಮಯವಾಗಿ ಒಪ್ಪುತ್ತಿತ್ತು. ವಿಷ್ಣು-ಬ್ರಹ್ಮೇಂದ್ರಾದಿಗಳ ಮಧ್ಯದಲ್ಲಿ ಉನ್ನತಾಸನದಮೇಲೆ ಪತ್ನೀಸಮೇತನಾಗಿ ಕುಳಿತು ದೇವತೆಗಳಿಂದ ಸೇವೆಗೊಳ್ಳುತ್ತಿರುವ ಪರಮ ಶಿವನನ್ನು ದಕ್ಷಬ್ರಹ್ಮನು ನೋಡಿದನು. ಆ ಮಹಾ ಶಿವಸಭೆಯು ಲಕ್ಷಾವಧಿ ಯೋಜನ ವಿಸ್ತಾರವಾದದ್ದಿದ್ದರೂ, ಅಲ್ಲಿ ಇರುವಿನುಸಿಯಲಿಕ್ಕೆ ಸ್ಥಳವಿಲ್ಲದಷ್ಟು ಸುರ-ನರೋರಗ-ಯಕ್ಷ-ಕಿನ್ನರ-ಕಿಂಪುರುಷ-ಮನು-ಮುನಿ-ವಿದ್ಯಾಧರಾದಿಗಳು ಕುಳಿತುಕೊಂಡಿದ್ದರು. ಆ ಸಭೆಯಲ್ಲಿ ಪ್ರವೇಶಿಸಲು ಸ್ಥಳವಿಲ್ಲದೆ ದಕ್ಷನು ದೂರ ಒಂದು ಮೂಲೆಯಲ್ಲಿ ನಿಂತುಕೊಳ್ಳಬೇಕಾಯಿತು! ಜಗದೇಕಾರಾಧ್ಯನ ಆ ಮಹಾ ವೈಭವದ ಸಭೆಯನ್ನು ನೋಡಿ ದಕ್ಷನು ಬೆರಗಾಗಿದ್ದರೂ, ತನ್ನನ್ನು ಅಳಿಯನೂ,ಮಗಳೂ ಲೆಕ್ಕಿಸದಿರುವದನ್ನು ನೋಡಿ ಆ ಅಭಿಮಾನಿ ದಕ್ಷನ ಮಾನಹಾನಿಯಾಯಿತು. ಆ ದೇಹಾಭಿಮಾನಿಯು ಪರಮೇಶ್ವರನನ್ನು ಅಳಿಯನೆಂತಲೂ, ದಾಕ್ಷಾಯಣಿಯನ್ನು ಮಗಳೆಂತಲೂ ನೋಡಿದನಲ್ಲದೆ, ಅವರನ್ನು ಜಗತ್ಕಾರಣರೆಂದು ನೋಡಲಿಲ್ಲ; ಆದ್ದರಿಂದಲೇ ಆ ಅಹಂಕಾರಿಯು ಕ್ರೋಧಸಂತಪ್ತನಾಗಲು, ಈವರೆಗೆ ಇದ್ದ ಅವನ ಸದ್ಭಾವವೆಲ್ಲ ನಷ್ಟವಾಯಿತು. "ಇಷ್ಟೊಂದು ಜನರಮುಂದೆ ನನ್ನನ್ನು ಅಮರ್ಯಾದೆಗೊಳಿಸಿದ ಈ ದುರಹಂಕಾರಿಯಾದ ಶಿವನನ್ನೂ, ಇವನ ಪತ್ನಿಯನ್ನೂ, ನನ್ನ ಅಳಿಯ-ನನ್ನ ಮಗಳು ಎಂದು ಪರಿಭಾವಿಸಬಹುದೇ? ಐಶ್ವರ್ಯಮದವು ಇವರನ್ನು ಕಣ್ಕಾಣದವರನ್ನಾಗಿ ಮಾಡಿರುವದು! ಇವರ ಬಾಂಧವ್ಯವು ನನಗೆ ಸಾಕು. ಇನ್ನು ಈ ದುಷ್ಟ ಸಂಪತ್ತನ್ನು ನಾಶಗೊಳಿಸುವದೇ ನನ್ನ ಮೊದಲನೆಯ ಕೆಲಸವು. ಈ ದುರಹಂಕಾರಿ ಶಿವನ ಹಂಗಾದರೂ ನನಗೇನು? ಈ ಮಹಾಸಭೆಯ ಮುಂದೇ ಅವನ ಸ್ವರೂಪನಿರ್ಣಯ ಮಾಡುವೆನು," ಎಂದು ಮನಸ್ಸಿನಲ್ಲಿ ಅಂದುಕೊಂಡು ಕೆಂಪಡರಿದ ಕಣ್ಣುಗಳಿಂದ ಶಂಕರನನ್ನು ನೋಡುತ್ತ ಆ ಸಭಾಸದರನ್ನುದ್ದೇಶಿಸಿ—ಸಭಾಸದರೇ, ನಾನು ಅವಿಚಾರದಿಂದಾಗಲಿ, ಮಾತ್ಸರ್ಯದಿಂದಾಗಲಿ ಮಾತಾಡುತ್ತೇನೆಂದು ತಿಳಿಯಬೇಡಿರಿ-ದೊಡ್ಡವರನಡತೆಯ ಸಂಬಂಧದಿಂದ ನಾನು ಮಾತಾಡುವೆನು. ಅಹೋ, ಸಾಧುಗಳ ಆಚರಣೆಗೆ ಕಲಂಕವನ್ನುಂಟುಮಾಡುವ ಈ ನಿರ್ಲಜ್ಜ ಶಂಕರನು ನನ್ನ ಅಳಿಯನಿದ್ದು,

ಗರ್ವದಿಂದ ಮೈಮರೆತು, ಕುಳಿತ ಸ್ಥಳಬಿಟ್ಟು ಏಳದೆ ನನ್ನ ಅವಮಾನಮಾಡಿದ್ದು ಯೋಗ್ಯವೋ? ಈತನ ನೀಚಸ್ಥಿತಿಯನ್ನು ನಾನು ಮೊದಲೇ ಅರಿತಿದ್ದೆನು; ಆದ್ದರಿಂದ ನನ್ನ ಸುಂದರ ಕನ್ನಿಕೆಯಾದ ಸತಿಯನ್ನು ಈತನಿಗೆ ಕೊಡುವ ಮನಸ್ಸು ನನಗಿದ್ದಿಲ್ಲ; ಆದರೆ ಬ್ರಹ್ಮದೇವನ ಮಾತಿನಮೇಲಿಂದ ಕೊಟ್ಟೆನು. ಈತನು ಶುದ್ಧತೆಯನ್ನು ಸ್ವಪ್ನದಲ್ಲಿಯೂ ಅರಿಯನು; ಯಾವಾಗಲೂ ಭೂತಪ್ರೇತಗಳೊಡನೆ ಭಯಂಕರವಾದ ಶ್ಮಶಾನದಲ್ಲಿ ಸಂಚರಿಸುತ್ತಿರುವನು. ಈತನ ಕೂದಲುಗಳು ಹರವಿರುವವು. ಈತನು ಶ್ಮಶಾನದೊಳಗಿನ ಭಸ್ಮವನ್ನು ಮೈಗೆ ಬಡಿದು, ಕೊರಳಲ್ಲಿ ಎಲವುಗಳ ಸರವನ್ನು ಹಾಕಿಕೊಂಡಿರುವನು; ಮತ್ತು ಭಂಗಿಯ ನೀರು ಕುಡಿದು ಯಾವಾಗಲೂ ಉನ್ಮತ್ತನಾಗಿ ತಿರುಗುತ್ತಿರುವನು. ತಮೋಗುಣದ ಮೂರ್ತಿಗಳಾದ ಪ್ರಮಥ ಗಣದ ರಾಜನಿವನು. ಅಮಲಾಗುವ ಜನರೇ ಇವನಿಗೆ ಪ್ರಿಯರು! ಈತನಿಗೆ ಶಿವನೆಂಬ ಹೆಸರು ಮಾತ್ರ ಇರುತ್ತದೆ; ನಿಜವಾಗಿಯೆಂದರೆ ಈತನು ಅಶಿವದ ಮೂರ್ತಿಯೇ ಸರಿ! ಈತನ ಕಣ್ಣುಗಳನ್ನು ನೋಡಿರಿ, ಹ್ಯಾಗೆ ಮಂಗನ ಕಣ್ಣುಗಳ ಹಾಗೆ ಇರುತ್ತವೆ! ಇಂಥವನಿಗೆ ನನ್ನ ಮಗಳನ್ನು ಕೊಟ್ಟದ್ದಕ್ಕಾಗಿ ನನಗೆ ಬಹಳ ಪಶ್ಚಾತ್ತಾಪವಾಗಿದೆ-

ಈ ಮೇರೆಗೆ ದಕ್ಷಪ್ರಜಾಪತಿಯು ಕ್ರೋಧ ಸಂತಪ್ತನಾಗಿ ಮಾತಾಡುತ್ತಿರುವಾಗ ಶಂಕರನು ಒಟ್ಟೊಂದು ಮಾತಾಡಲಿಲ್ಲ, ಶಾಂತ ವೃತ್ತಿಯಿಂದ ಕುಳಿತುಬಿಟ್ಟಿದ್ದನು. ಅದನ್ನು ನೋಡಿಯಂತು ದಕ್ಷನು ಮತ್ತಷ್ಟು ಸಿಟ್ಟಿಗೆದ್ದು ಶಂಕರನಿಗೆ ಶಾಪಕೊಡುವದಕ್ಕಾಗಿ ಕೈಯಲ್ಲಿ ಉದಕವನ್ನು ತಕೊಂಡು—"ಅಹೋ, ದೇವತೆಗಳಲ್ಲಿ ಶಂಕರನು ಅಧಮನಾದದ್ದರಿಂದ ಈತನಿಗೆ ದೇವತೆಗಳೊಡನೆ ಹವಿರ್ಭಾಗವು ದೊರೆಯಲಾರದು" ಎಂದು ಶಾಪಕೊಟ್ಟು ಅಲ್ಲಿಂದ ಹೊರಟುಹೋದನು . ಇಂಥ ಅನುಚಿತ ಕರ್ಮಮಾಡಬಾರದೆಂದು ಬಹು ಜನರು ಹೇಳಿದರೂ ದಕ್ಷನು ಕೇಳಲಿಲ್ಲ. ಆ ಶಾಪವನ್ನು ಕೇಳಿ ನಂದಿಕೇಶ್ವರನು ಕ್ರೋಧ ಸಂತಪ್ತನಾಗಿ ದಕ್ಷಪ್ರಜಾಪತಿಗೂ, ಆತನ ನೀಚಕೃತ್ಯಕ್ಕೆ ಸುಮ್ಮನಿದ್ದು ಸಮ್ಮತಿಸಿದ ಬ್ರಾಹ್ಮಣರಿಗೂ ದುರ್ಧರ ಶಾಪಕೊಟ್ಟನು. ಅದಕ್ಕಾಗಿ ಭೃಗುಋಷಿಯು ಶಿವಭಕ್ತರಿಗೆ ದುರ್ಧರ ಶಾಪಕೊಟ್ಟನು. ಇದೆಲ್ಲ ಅನರ್ಥವು ಶ್ರೀ ಶಿವಸಂಕಲ್ಪದಿಂದಲೇ ಒದಗಿತು. ಅಂದಬಳಿಕ ಅವನ್ನು ನಿವಾರಿಸುವವರಾರು?

ಇತ್ತ ಶಿವ ದ್ವೇಷಿಯಾದ ದಕ್ಷನು ಯಾವಯಜ್ಞದಲ್ಲಿಯೂ ಶಿವನಿಗೆ ಹವಿರ್ಭಾಗವನ್ನು ಕೊಡಲಿಲ್ಲ. ಆತನು ಶಾಸ್ತ್ರ ನಿಯಮಕ್ಕನುಸರಿಸಿ ಮೊದಲು ವಾಜಪೇಯ ಯಜ್ಞಮಾಡಿ, ಆಮೇಲೆ ಬೃಹಸ್ಪತಿಸವ ಎಂಬ ಹೆಸರಿನ ಯಜ್ಞವನ್ನು ಆರಂಭಿಸಿದನು. ಅದಕ್ಕಾಗಿ ಎಲ್ಲ ಬ್ರಹ್ಮಋಷಿ, ದೇವಋಷಿ, ಪಿತರರು, ದೇವತೆಗಳು ಇವರನ್ನು ಸಕುಟುಂಬ ಸಪರಿವಾರವಾಗಿ ಕರೆಸಿ ಸತ್ಕರಿಸಿದನು; ಆದರೆ ಶಂಕರನನ್ನೂ, ಆತನ ಭಕ್ತರನ್ನೂ ಕರೆಸಲಿಲ್ಲ; ತನ್ನ ಮಗಳಾದ ಸತಿಯನ್ನೂ ಕರೆಸಲಿಲ್ಲ. ಆ ಯಜ್ಞ ಸಮಾರಂಭಕ್ಕೆ ಕರತರುವದಕ್ಕಾಗಿ ದಕ್ಷನು ತನ್ನ ತಂದೆಯಾದ ಬ್ರಹ್ಮನ ಬಳಿಗೆ ಹೋಗಿ ದೂರದಿಂದಲೇ ಅವನಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿ—ಜನಕನೇ, ಬೂದಿಬಡಕನಾದ ತಿರುಕ ಶಿವ

ನಿಗೆ ನನ್ನ ಮಗಳನ್ನು ನೀನು ಕೊಡಿಸಿಬಿಟ್ಟದ್ದರಿಂದ ನನಗಾದ ಅವಮಾನವನ್ನು ಕೇಳಿ ದೆಯಾ? ಮಗಳನ್ನೂ, ಅಳಿಯನನ್ನೂ ನೋಡಿಕೊಂಡು ಬರಬೇಕೆಂದು ನಾನು ಕೈಲಾ ಸಕ್ಕೆ ಹೋದರೆ, ಜಂಭದಿಂದ ಸಭೆ ನೆರೆಸಿ ಕುಳಿತುಕೊಂಡಿದ್ದ ಆ ಶಿವನು ನನ್ನನ್ನು ಎದ್ದು ಬರಮಾಡಿಕೊಳ್ಳುವದು ಹೋಗಲಿ, ಇತ್ತ ಬಾರೆಂದೂ ಕರೆಯದಿರುವದನ್ನು ನೀನು ಕಣ್ಣಾರೆ ನೋಡಿದೆಯಲ್ಲ! ಅಳಿಯನಿಂದ ಹೀಗೆ ಅಪಮಾನ ಪಡೆದದ್ದನ್ನು ಯಾರಾದರೂ ಎಂದಾದ್ದರೂ ಕೇಳಿರುವರೆ? ಎಂದು ಕಣ್ಣೀರು ಸುರಿಸುತ್ತ ಹೇಳಿಕೊಂಡು ಉಸುರ್ಗರೆದು— ಆ ಶಿವನು ನನ್ನನ್ನು ತಿರಸ್ಕರಿಸಿದಂತೆ ನಾನೂ ಆತನನ್ನು ತಿರಸ್ಕರಿಸದಿದ್ದರೆ ಈ ಬಾಳಿ ನಿಂದ ಫಲವೇನು? ನನಗೆ ಸೃಷ್ಟಿಕರ್ತೃವೆಂಬ ಹೆಸರಾದರೂ ಯಾತಕ್ಕೆ? ಕಾಡಿಗೆ ಹೋಗಿ ತಪಸ್ಸನ್ನಾಚರಿಸುವದು ಯೋಗ್ಯವಾದದ್ದರಿಂದ ನನಗೆ ಅಪ್ಪಣೆಯನ್ನು ಕೊಡು, ಎಂದು ಕೈಮುಗಿದು ಬೇಡಿಕೊಳ್ಳುತ್ತಿರಲು, ಬ್ರಹ್ಮನು—ದಕ್ಷಾ, ಶಿವನಿಗೆ ಪ್ರತಿಕಾರ ಮಾಡು ವದು ನನಗೂ ನಿನಗೂ ಸಾಧ್ಯವೇ? ಸುಲಭವಾಗಿ ಗಂಟಲಲ್ಲಿಳಿಯುವ ತುತ್ತೇ ಅದು? ಈ ಸಂಗತಿಯನ್ನೆಲ್ಲ ವಿಷ್ಣುವಿಗೆ ತಿಳಿಸಿ ಆಲೋಚನೆ ಕೇಳುವಾ ನಡೆಯೆಂದು ಹೇಳಿ ಅವನನ್ನು ವಿಷ್ಣುವಿನ ಬಳಿಗೆ ಕರಕೊಂಡು ಹೋದನು. ಇಬ್ಬರೂ ವಿಷ್ಣುವನ್ನು ನಮಸ್ಕರಿಸಿದ ಬಳಿಕ ಬ್ರಹ್ಮನು ನಡೆದ ಸಂಗತಿಯನ್ನೆಲ್ಲ ವಿಷ್ಣುವಿಗೆ ಹೇಳಿ ಶಿವನನ್ನು ಬಿಟ್ಟು ದಕ್ಷನು ಯಜ್ಞ ಮಾಡಬೇಕೆಂದಿರುವ ಪ್ರಸಕ್ತಿಯನ್ನೂ, ನಿನಗೆ ಅಗ್ರಪೂಜೆ ಮಾಡುವನೆಂಬದನ್ನೂ ವಿಷ್ಣುವಿಗೆ ತಿಳಿಸಿದನು. ಅದಕ್ಕೆ ನಾರಾಯಣನು—ಶಿವಶಿವಾ! ಸಕಲ ಯಜ್ಞಾದಿ ಕರ್ಮಗಳಿಗೆಲ್ಲ ಶಿವನೇ ಅಧಿಪತಿಯು; ಅಂಥವನನ್ನು ಬಿಟ್ಟು ನನಗೆ ಯಾಗದಲ್ಲಿ ಅಗ್ರ ಪೂಜೆಯನ್ನು ಕೊಡಬೇಕೆಂದಿರುವದು ನ್ಯಾಯವಲ್ಲ; ಶಿವನೇ ಜಗದೇಕಾರಾಧ್ಯನು. ನಮಗೂ ಆತನೇ ಒಡೆಯನು, ಎಂದು ನುಡಿಯಲು, ಬ್ರಹ್ಮನು—ಮಹಾವಿಷ್ಣುವೇ, ನೀನು ಹಾಗೆ ಹೇಳಕೂಡದು. ಮರೆಬಿದ್ದವರನ್ನು ರಕ್ಷಿಸುವದು ನಿನ್ನ ಬಿರುದು! ಆದ್ದರಿಂದ ದಕ್ಷನಿಂದ ನೀನು ಯಜ್ಞವನ್ನು ಮಾಡಿಸಲೇಬೇಕು, ಎಂದು ಪರಿಪರಿಯಾಗಿ ಹೇಳಿಕೊ ಳ್ಳಲು, ವಿಷ್ಣುವು—ಬ್ರಹ್ಮನೇ, ಶಿವಸಂಕಲ್ಪವನ್ನು ತಪ್ಪಿಸುವವರು ಯಾರು? ಅದನ್ನು ಅನುಸರಿಸುವದೇ ನಮ್ಮ ಕೆಲಸ. ಆಗಲಿ, ಯಜ್ಞಕಾರ್ಯವನ್ನು ಆರಂಭಿಸಿರಿ, ನಾನೂ ಬರುತ್ತೇನೆ, ಎಂದು ಹೇಳಲು, ದಕ್ಷನು ಯಜ್ಞದ ಯಾವತ್ತು ಸಿದ್ಧತೆಯನ್ನು ಮಾಡಿ, ಎಲ್ಲ ದೇವತೆಗಳೂ, ಬ್ರಹ್ಮಋಷಿ-ದೇವಋಷಿ-ಪಿತೃಗಳು ಮೊದಲಾದವರೂ ಸಕುಟುಂಬ ವಾಗಿ ಬರಲು ಯಜ್ಞವನ್ನು ಆರಂಭಿಸಿದನು.

ಈ ಸಮಾರಂಭದ ಸುದ್ದಿಯನ್ನು ಕೇಳಿ ಸತಿಯ ಮನಸ್ಸು ತವರ ಮನೆಗೆ ಹೋಗು ವದಕ್ಕಾಗಿ ಚಡಪಡಿಸಹತ್ತಿತು. ಆಕೆಯು ಪತಿಯನ್ನು ಕುರಿತು—"ಪ್ರಿಯಕರಾ, ನನ್ನ ತಂದೆಯ ಮನೆಯಲ್ಲಿ ಯಜ್ಞಸಮಾರಂಭವಾಗುತ್ತದೆ. ಅದಕ್ಕಾಗಿ ನನ್ನ ಅಕ್ಕತಂಗೆ ಯರು ತಮ್ಮ ತಮ್ಮ ಪತಿಗಳೊಡನೆ ಬಂದಿರುವರು. ನಾನೂ ತವರಮನೆಗೆ ಹೋಗದೆ ಬಹಳದಿವಸವಾಗಿದೆ. ಅನಾಯಾಸವಾಗಿ ಎಲ್ಲರ ದರ್ಶನವಾಗಿ ಯಜ್ಞಸಮಾರಂಭವನ್ನೂ ನೋಡಿದಹಾಗಾಗುವದು. ಇನ್ನು ಕರೆಕಳಿಸದೆ ಹೋಗುವದು ಹ್ಯಾಗೆಂದು ತಾವು ಶಂಕಿ

ಸಬಹುದು; ಆದರೆ ಮಿತ್ರರು, ಪಾಲಕರು, ಗುರುಗಳು, ತಂದೆತಾಯಿಗಳು ಇವರ ಮನೆಗೆ ಕರೆಸದೆಯಿದ್ದರೂ ಹೋಗಲಿಕ್ಕೆ ಪ್ರತಿಬಂಧವಿಲ್ಲ; ಆದ್ದರಿಂದ ದೇವಾಧಿದೇವಾ, ದಯಾಲುವಾದ ನೀನು ನನ್ನ ಈ ದೀನಳ ಇಚ್ಛೆಯನ್ನು ಪೂರ್ಣಮಾಡಲೇ ಬೇಕು. ಮಾಯಾತೀತನಾದ ನಿನಗೆ ಯಜ್ಞಯಾಗಾದಿಗಳ, ಹಾಗು ಬಂಧು ಬಾಂಧವರ ಮಹತ್ವವು ತೋರಲಿಕ್ಕಿಲ್ಲ; ಆದರೆ ಅಂಥ ಯೋಗ್ಯತೆಯು ನನ್ನಲ್ಲಿ ಎಲ್ಲಿದೆ? ಭಕ್ತೇಷ್ಟಪ್ರದಾ, ನಿನ್ನ ನೀಲಕಂಠವು ದೀನವಾತ್ಸಲ್ಯದ ಸಾಕ್ಷಿಯಾಗಿರುವದು" ಎಂದು ಪ್ರಾರ್ಥಿಸಲು, ಶಂಕರನು—ಪ್ರಿಯೇ, ನೀನು ಒಳ್ಳೆಯ ಸ್ವಭಾವದವಳಾದದ್ದರಿಂದ ನಿನಗೆ ಜಗತ್ತೆಲ್ಲವೂ ಒಳ್ಳೆಯದಾಗಿಯೇ ಕಾಣುತ್ತದೆ. ಸಜ್ಜನರು ತಮ್ಮ ಆಪ್ತರ ಮನೆಗೆ ಕರೆಸದೆಯೂ ಹೋಗುವದುಂಟು, ಆದರೆ ಯಾವಾಗ? ಆಪ್ತರಿಗೆ ತಮ್ಮ ಅಗತ್ಯವೂ, ಪ್ರೇಮವೂ ಇದ್ದಾಗ! ನಿನ್ನ ತಂದೆಯು ದೇಹಾಭಿಮಾನದಿಂದ ಅಂಧನಾಗಿರುವನು. ತಪಶ್ಚರ್ಯ, ವಿದ್ಯಾ, ಧನ, ಸುದೃಢಶರೀರ, ಕುಲ, ಸತ್ತಾ, ಇವುಗಳ ಯೋಗದಿಂದ ಆತನು ಗರ್ವಿಷ್ಠನಾಗಿರುವನು. ಇವುಗಳ ಯೋಗ್ಯ ಉಪಯೋಗವನ್ನು ಮಾಡಿಕೊಳ್ಳಲಿಕ್ಕೆ ಸಜ್ಜನರಂತೆ ನಿನ್ನ ತಂದೆಗೆ ಬರುವದಿಲ್ಲ. ನಮಸ್ಕಾರ, ಆದರಾತಿಥ್ಯ, ನಮ್ರತೆ, ಬಹುಮಾನ ಇವನ್ನು ಸತ್ಪುರುಷರು ಈಶ್ವರಬುದ್ಧಿಯಿಂದಲ್ಲದೆ ದೇಹಬುದ್ಧಿಯಿಂದ ಆಚರಿಸುವದಿಲ್ಲ; ಆದ್ದರಿಂದ ಅವರು ಮನಸ್ಸಿನಿಂದಾದರೂ ಅನ್ಯರನ್ನು ಸತ್ಕರಿಸಬಹುದು; ಅವರಂತೆ ನನ್ನ ಸಭೆಗೆ ಬಂದ ನಿನ್ನ ತಂದೆಯನ್ನು ನಾನು ಮನಸ್ಸಿನಿಂದ ಸತ್ಕರಿಸಿದೆನು; ಆದರೆ ದೇಹಾಭಿಮಾನಿಯಾದ ಆ ಮೂರ್ಖನಿಗೆ ಅದರ ವಿಚಾರವಾಗದೆ, ಆತನು ನನಗೆ ಅನನ್ವಿತ ದುರುತ್ತರಗಳನ್ನು ನುಡಿದು ಶಾಪಕೊಟ್ಟು ಹೊರಟು ಹೋದನು; ಅಂದಬಳಿಕ ಇಂಥವನ ಮನೆಗೆ ಹೋಗುವದು ಹ್ಯಾಗೆ? ಪ್ರಿಯೇ, ನಾನು ಯಾವಪುರುಷನನ್ನೂ ಶರೀರದಿಂದ ಮನ್ನಿಸುವದಿಲ್ಲ. ಸರ್ವತ್ರ ವ್ಯಾಪಿಸಿರುವ ಆತ್ಮಸ್ವರೂಪಚಿಂತನದಲ್ಲಿಯೇ ನಾನು ಇರುವೆನು! ಸಖೀ, ದಕ್ಷನು ನಿನಗೆ ಜನ್ಮಕೊಟ್ಟಿದ್ದರೂನನ್ನ ಶತ್ರುವಾಗಿರುವದರಿಂದ ನೀನು ಅವನ ಮನೆಗೆ ಹೋಗುವದಂತು ಇರಲಿ, ಅವನ ಸೇವಕರ, ಅವನ ಪಕ್ಷದ ಜನರ ಮುಖಾವಲೋಕನವನ್ನೂ ಮಾಡಬೇಡ! ಸಂಭಾವಿತರಿಗೆ ಆಪ್ತರಿಂದಾಗುವ ಅವಮಾನಕ್ಕಿಂತ ಮರಣವು ಲೇಸಾಗುವದು. ಇದರಮೇಲೆಯೂನನ್ನ ಮಾತು ಮೀರಿ ನೀನು ಹೋದರೆ ನಿನ್ನ ಕಲ್ಯಾಣವಾಗಲಾರದು.

ಈ ಮೇರೆಗೆ ನುಡಿದು ಭಗವನ್ ಶಂಕರನು ಸುಮ್ಮನೆ ಕುಳಿತುಬಿಟ್ಟನು. ಹೆಂಡತಿಯ ಇಚ್ಛೆಯಂತೆ ಆಕೆಗೆ ಅನುಮತಿಯನ್ನಿತ್ತರೆ, ತನ್ನ ತಂದೆಯ ಅಪಮಾನದಿಂದ ಆಕೆಯು ಸಿಟ್ಟಾಗಿ ಪ್ರಾಣತ್ಯಾಗ ಮಾಡುವಳೆಂತಲೂ, ಬೇಡೆಂದರೆ ಸಂತಾಪದಿಂದ ಇಲ್ಲಿಯೇ ಪ್ರಾಣಬಿಡುವಳೆಂತಲೂ ತಿಳಿದು ಆತನು ಪಿಟ್ಟೆಂದು ಮಾತಾಡದಾದನು. ಇತ್ತ ಸತಿಯು ತೊಂದರೆಗೊಳಗಾದಳು. ಆಪ್ತಜನರ, ಹಾಗು ಸಮಾರಂಭದ ದರ್ಶನಲೋಭದಿಂದ ಆಕೆಯು ಒಮ್ಮೆ ಹೋಗಬೇಕೆನ್ನುವಳು; ಆಜ್ಞಾಭಂಗದಿಂದ ಪತಿಯು ಸಿಟ್ಟಾದಾನೆಂದು ಮತ್ತೊಮ್ಮೆ ಹೋಗಬಾರದೆನ್ನುವಳು. ಈ ಸ್ಥಿತಿಯಲ್ಲಿ ಆಕೆಯು ಬಳಬಳ ಕಣ್ಣೀರು ಸುರಿ

ಸುತ್ತ ಅಳತೊಡಗಿದಳು. ಕಡೆಗೆ ಶಿವಸಂಕೇತದಂತೆ ತವರಮನೆಯ ಮೋಹದಿಂದ ಆಕೆಯು ಪತಿಯಮೇಲೆ ಸಿಟ್ಟಾಗಿ, ಥರ ಥರ ನಡಗಹತ್ತಿದಳು. ಕೆಂಪಡರಿದ ಕಣ್ಣುಗಳಿಂದ ಪತಿಯನ್ನು ನೋಡುವಾಗ ಆಕೆಯು, ಆ ಅಪ್ರತಿಮ ಪುರುಷನನ್ನು ದಹಿಸುವಂತೆ ತೋರಿತು! ಕಡೆಗೆ ಆಕೆಯು ತನ್ನನ್ನು ಅರ್ಧಾಂಗಿಯಾಗಿ ಮಾಡಿಕೊಂಡಿದ್ದ ಆ ಸರ್ವೋತ್ತಮನನ್ನು ತ್ಯಜಿಸಿ ಕ್ರೋಧಾವೇಶದಿಂದ ಮುಸುಗುಟ್ಟುತ್ತ ತನ್ನ ತಂದೆಯ ಮನೆಗೆ ಹೋಗುವದಕ್ಕಾಗಿ ಹೊರಟುಬಿಟ್ಟಳು! ಆಕೆಯು ವಾಹನದ ಇಚ್ಛೆಯನ್ನೂ ಮಾಡಲಿಲ್ಲ; ಆದರೆ ಭಗವತೀ ಸತಿಯು ನಡೆಯುತ್ತ ಹೋಗುವಳೆಂದು ತಿಳಿದು ಶಂಕರನ ಅನುಚರರು ಆಕೆಯನ್ನು ಪ್ರಾರ್ಥಿಸಿ, ನಂದಿಕೇಶ್ವರನ ಮೇಲೆ ಕುಳ್ಳಿರಿಸಿಕೊಂಡು ಆಕೆಯ ಸಮಾಗಮದಿಂದ ಹೊರಟರು. ಆ ಮೇಲೆ ಛತ್ರಚಾಮರಾದಿ ಉಪಚಾರದಿಂದಲೂ, ವಿವಿಧವಾದ್ಯಗಳಿಂದಲೂ ಮಾರ್ಗವನ್ನು ಕ್ರಮಿಸುತ್ತ ಪರಿವಾರದೊಡನೆ ಸತಿಯು ಯಜ್ಞಮಂಟಪಕ್ಕೆ ಬಂದು ಮುಟ್ಟಿದಳು. ಆ ಯಜ್ಞಮಂಟಪವು ಪಶುಹಿಂಸಾಯುಕ್ತವಾಗಿದ್ದರೂ, ಮಣ್ಣು-ಕಟ್ಟಿಗೆ-ಲೋಹ-ಸುವರ್ಣ ಮೊದಲಾದವುಗಳ ಪಾತ್ರೆಗಳಿಂದಲೂ, ಋತ್ವಿಜರ ವೇದಘೋಷದಿಂದಲೂ, ದೇವ-ಪಿತೃ-ಗಂಧರ್ವಾದಿಗಳ ಪರಿವಾರದಿಂದಲೂ ಸುಶೋಭಿತವಾಗಿತ್ತು.

ಸತಿಯು ಬಂದದ್ದರಿಂದ ಆಕೆಯ ತಾಯಿ-ಅಕ್ಕತಂಗೆಯರು ಮಾತ್ರ ಆನಂದಪಟ್ಟು ಆಕೆಯನ್ನು ಆಲಿಂಗಿಸಿ ಪ್ರೇಮಾಶ್ರುಗಳನ್ನು ಸುರಿಸಿದರು. ಉಳಿದವರಾರಿಗೂ ಆನಂದವಾಗಲಿಲ್ಲ; ಆನಂದವಾದರೂ ದಕ್ಷನೇ ಆಕೆಯ ಆದರ ಸತ್ಕಾರ ಮಾಡದ್ದರಿಂದ ಅವರು ಆನಂದವನ್ನು ವ್ಯಕ್ತಮಾಡಲಿಲ್ಲ. ತನ್ನ ತಂದೆಯು ತನ್ನನ್ನು ಆದರಿಸದ್ದರಿಂದ ಸತಿಗೆ ಸಿಟ್ಟು ಬಂದಿತು. ಆ ಯಜ್ಞದಲ್ಲಿ ತನ್ನ ತಂದೆಯು ಶಿವನಿಗೆ ಹವಿರ್ಭಾಗ ಕೊಡುವದು ಒತ್ತಟ್ಟಿಗುಳಿದು, ಶಿವನಿಂದೆ ಮಾಡುವದನ್ನು ನೋಡಿ ಆಕೆಯ ಕಣ್ಣುಗಳು ಕೆಂಡದಂತಾದವು. ಆಗ ಆಕೆಯು ಜಗತ್ಪ್ರಳಯ ಮಾಡುವ ದೇವತೆಯಂತೆ ತೋರಹತ್ತಿದಳು. ಇಷ್ಟಾದರೂ ಕರ್ಮಾಭ್ಯಾಸದ ಗರ್ವದಿಂದ ಮೈಮರೆತಿದ್ದ ದಕ್ಷನಿಗೆ ಎಚ್ಚರವೇ ಹುಟ್ಟಲಿಲ್ಲ. ಇದನ್ನು ನೋಡಿ ಶಂಕರನ ಅನುಚರರು ಕ್ರೋಧಸಂತಪ್ತರಾಗಿ ಅವನ ಪ್ರಾಣಹರಣಮಾಡ ಹೋಗಲು, ಸತಿಯು ಅವರನ್ನು ತಡೆದು, ಹಲ್ಲು ತುಟಿಗಳನ್ನು ಕಡಿಯುತ್ತ ಸರ್ವರಸಮಕ್ಷ ದಕ್ಷನನ್ನು ಕುರಿತು—ಎಲೈ ಅಧಮನೇ, ಯಾವತ್ತು ಜಗತ್ತಿನಲ್ಲಿ ಅತ್ಯಂತ ಶ್ರೇಷ್ಠನೂ, ಸರ್ವತ್ರ ಸಮದೃಷ್ಟಿಯುಳ್ಳವನೂ ಆದ ಆ ಮಹಾತ್ಮ ಶಂಕರನೊಡನೆ ಆತನ ಚರಣರಜಸ್ಸಿನ ಯೋಗ್ಯತೆಯೂ ಇಲ್ಲದ ನೀನು ದ್ವೇಷಬಳಿಸುವೆಯಾ! ಎಲಾ ಈ ಜಗತ್ತಿನಲ್ಲಿ—ಶ್ರೇಷ್ಠರು, ಸತ್ಪುರುಷರು, ಸಾಮಾನ್ಯ ಪುರುಷರು, ನೀಚರು ಎಂಬ ನಾಲ್ಕು ಪ್ರಕಾರದ ಜನರಿರುವರು. ಪರರ ಕ್ಷುದ್ರಗುಣಗಳನ್ನು ದೊಡ್ಡವೆಂದು ವರ್ಣಿಸುವವರು ಶ್ರೇಷ್ಠರು; ಇದ್ದಷ್ಟು ಗುಣಗಳನ್ನು ಸ್ವೀಕರಿಸಿ ದೋಷದ ಉಚ್ಚಾರವನ್ನೂ ಮಾಡದವರು ಸತ್ಪುರುಷರು, ಸಾರಾಸಾರ ವಿಚಾರದಿಂದ ಗುಣಕ್ಕೆ ಗುಣವೆಂದೂ, ದೋಷಕ್ಕೆ ದೋಷವೆಂದೂ ಅನ್ನುವವರು ಸಾಮಾನ್ಯಪುರುಷರು, ಗುಣಗಳನ್ನು ದೋಷ

ದೃಷ್ಟಿಯಿಂದ ನೋಡುವವರು ನಿನ್ನಂತೆ ನೀಚರು—ಅಧಮಾಧಮರು—ದುಷ್ಟಬುದ್ಧಿಯು ವರು ಆಗಿರುವರು! ದಕ್ಷಾ, ನಿನ್ನಂಥ ಮತ್ಸರಿಗಳು ಶಿವನಿಂದೆ ಮಾಡಿದರೆ ಆಗುವದೇನು? ಎಲಾ, "ಶಿವ" ಎಂಬ ಕಲ್ಯಾಣಕಾರಕವಾದ ನಾಮವನ್ನು ತಿಳಿಯದೆ ಉಚ್ಚರಿಸಿದರೂ ಸರ್ವ ಪಾಪಗಳು ಸುಟ್ಟು ಹೋಗುವದನ್ನೂ, ಶಿವಚರಿತ್ರ—ಶ್ರವಣಮಾತ್ರದಿಂದ ಚತು ರ್ವಿಧ ಪುರುಷಾರ್ಥಗಳು ಸಾಧಿಸುವದನ್ನೂ ನೀನು ಅರಿಯೆಯಾ? ಸಾಧುಗಳು ಸದಾಶಿವ ಚರಣ ಧ್ಯಾನಾಸಕ್ತರು ಯಾಕೆ ಆಗಿರುವರೆಂಬದನ್ನು ತಿಳಿದು ನೋಡು. ಎಲೈ ನರ ಪಶುವೇ, ಶಿವನು ಶ್ಮಶಾನವಾಸಿಯೆಂತಲೂ, ಚಿತಾಭಸ್ಮ—ಅಸ್ಥಿಮಾಲೆಗಳ ಧಾರಣ ದಿಂದ ಅಪವಿತ್ರನೆಂತಲೂ ಬೊಗಳಿದೆಯಲ್ಲ! ಆದರೆ ಇದೆಲ್ಲ ಗೊತ್ತಿದ್ದೂ ಬ್ರಹ್ಮನೇ ಮೊದ ಲಾದ ಮಹಾನ್ ಮಹಾನ್ ದೇವತೆಗಳು ಶಿವಚರಣದಿಂದ ಕೆಳಗೆ ಬಿದ್ದಿರುವ ನಿರ್ಮಾಲ್ಯ ವನ್ನು ಮಸ್ತಕದಲ್ಲಿ ಯಾಕೆ ಧರಿಸುವರೆಂಬದನ್ನು ನೀನೇನು ಬಲ್ಲೆ? ನಿನ್ನಂಥ ನಿಂದಕನ ನಾಲಿಗೆಯನ್ನು ತತ್ಕಾಲ ಛೇದಿಸತಕ್ಕದ್ದು ; ಅಥವಾ ಇಂಥ ಅಮಂಗಲಶಬ್ದಗಳು ಕಿವಿಗೆ ಬಿದ್ದಕೂಡಲೆ ದೇಹತ್ಯಾಗ ಮಾಡತಕ್ಕದ್ದು; ಇವೆರಡೂ ಆಗದಿದ್ದರೆ ಕೂಡಲೆ ಸ್ಥಾನತ್ಯಾಗ ಮಾಡತಕ್ಕದ್ದು! ದಕ್ಷಾ, ನೀನು ಶಿವನಿಂದಕನಾದ ಪ್ರಯುಕ್ತ ನಿನ್ನಿಂದ ಉತ್ಪನ್ನನಾಗಿದ್ದ ಈ ದೇಹವನ್ನು ತ್ಯಜಿಸುವದೇ ವಿಹಿತವು ! ಮೂಢನೇ , ಕೆಲವರು ಪ್ರವೃತ್ತಿ ಮಾರ್ಗವನ್ನು ಅನುಸರಿಸುವರು . ಕೆಲವರು ನಿವೃತ್ತಿಮಾರ್ಗವನ್ನು ಅನುಸರಿ ಸುವರು . ಇವೆರಡೂ ವೇದಪ್ರತಿಪಾದ್ಯವಾದದ್ದರಿಂದ ಎರಡೂ ಸತ್ಯವಾದವುಗಳೆ ಇರುವವು; ಆದ್ದರಿಂದ ಒಬ್ಬರು ಮತ್ತೊಬ್ಬರನ್ನು ನಿಂದಿಸುವದು ಯೋಗ್ಯವಲ್ಲ; ಯಾಕಂ ದರೆ ಈ ಎರಡೂ ಮಾರ್ಗಗಳಿಂದ ಆತ್ಮಪ್ರಾಪ್ತಿರೂಪವಾದ ಒಂದೇ ಫಲವನ್ನು ಸಾಧಿಸ ಬೇಕಾಗಿರುವದು. ಇನ್ನು ಶಿವನು ಈ ಎರಡರಲ್ಲಿ ಒಂದನ್ನೂ ಅನುಸರಿಸಿರುವದಿಲ್ಲವೆಂದು ನೀನು ಶಂಕಿಸಬಹುದು; ಆದರೆ ಯಾವದರ ಪ್ರಾಪ್ತಿಗಾಗಿ ವೇದವು ಈ ಎರಡೂ ಮಾರ್ಗ ಗಳನ್ನು ಹೇಳುವದೋ, ಆ ಆತ್ಮಸ್ವರೂಪದಲ್ಲಿಯೇ ಶಿವನು ಸದಾ ರಮಮಾಣನಾಗಿರು ವಾಗ ಆತನಿಗೆ ಈ ಎರಡೂ ಮಾರ್ಗಗಳಿಂದ ಪ್ರಯೋಜನವೇನು! ಮೇಲಾಗಿ ಸರ್ವಸಂಗ ಪರಿತ್ಯಾಗ ಮಾಡಿದವರಿಗೆ ಪ್ರಾಪ್ತವಾಗುವ ಉತ್ತಮಗತಿಯು, ಕರ್ಮತ್ಯಾಗ ಮಾಡದವ ರಿಗೆ ಎಂದೂ ಪ್ರಾಪ್ತವಾಗುವದಿಲ್ಲ; ಆದ್ದರಿಂದ ದಕ್ಷಾ, ಪ್ರೇತಕ್ಕೆ ಸಮಾನವಾದ ದೇಹ ವನ್ನೇ ಆತ್ಮವೆಂದು ತಿಳಿಯುವ ನಿನ್ನಂಥ ಕರ್ಮಠನಿಗೆ ಸದ್ಗತಿಯು ಎಂದೂ ದೊರೆಯು ವದಿಲ್ಲವು- ನೀನು ಹೀಗೆಯೇ ಸಜ್ಜನರನ್ನು ನಿಂದಿಸುತ್ತ ಇರತಕ್ಕವನು. ನನ್ನ ಪ್ರಿಯ ಪತಿಯ ನಿಂದಕನಾದ ನಿನ್ನಿಂದ ಹುಟ್ಟಿದ ಈ ಶರೀರದ ಬೇಸರವು ನನಗೆ ಆಗಿದೆ- ಭಗ ವಾನ್ ಶಂಕರನು ನಿನ್ನ ಹೆಸರಿನಿಂದ ಉತ್ಪನ್ನವಾದ "ದಾಕ್ಷಾಯಣೀ" ಎಂಬ ಹೆಸರಿನಿಂದ ನನ್ನನ್ನು ಕರೆದಾಗೆಲ್ಲ ನಾನು ನಾಚಿಕೆಯಿಂದ ತಲೆತಗ್ಗಿಸಬೇಕಾಗುವದು; ಆದ್ದರಿಂದ ಈ ಪ್ರೇತವತ್ ಶರೀರವನ್ನು ತ್ಯಜಿಸುವೆನು .

ಈ ಮೇರೆಗೆ ನುಡಿದು ಸತಿಯು ಹಳದಿಯ ವಸ್ತ್ರವನ್ನುಟ್ಟು , ಉತ್ತರದಿಕ್ಕಿಗೆ ಮೋರೆ ಮಾಡಿ ಕುಳಿತು ಆಚಮನ ಮಾಡಿ ಮೌನವಾಗಿ ಯೋಗಶಾಸ್ತ್ರದಂತೆ ಸಮಾಧಿ

ತೋರಿಸತೊಡಗಿದಳು. ಭಗವಾನ್ ಶಂಕರನ ಸಹವಾಸದಿಂದ ಆಕೆಯು ಯೋಗಶಾಸ್ತ್ರದಲ್ಲಿ ಪ್ರವೀಣಳಾಗಿದ್ದಳು. ಕೂಡಲೆ ಆಕೆಯು ಯೋಗಸಾಮರ್ಥ್ಯದಿಂದ ಅಗ್ನಿಯನ್ನು ಉತ್ಪನ್ನಮಾಡಿ ಅದನ್ನು ತನ್ನ ಶರೀರದಲ್ಲಿ ಧಾರಣ ಮಾಡಿದಳು. ಆಕೆಯು ಸಮಾಧಿಯನ್ನು ಏರಿಸಿ ಜಗದ್ಗುರುವಾದ ಶಂಕರನ ಚರಣದಲ್ಲಿ ಲಕ್ಷ್ಯವಿರಿಸಲು, ಯೋಗಾಗ್ನಿಯಿಂದ ಆಕೆಯ ದೇಹವು ಕ್ಷಣದಲ್ಲಿ ದಗ್ಧವಾಗಿಹೋಯಿತು! ಆಗ ಹಾಹಾಕಾರದಿಂದಲೂ, ಶೋಕದಿಂದಲೂ, ದಕ್ಷನನಿಂದೆಯಿಂದಲೂ ದಶದಿಕ್ಕುಗಳು ತುಂಬಿದವು. ಈ ಭಯಂಕರ ಪ್ರಕಾರವನ್ನು ನೋಡಿ ಶಂಕರನ ಪ್ರಮಥಗಣವು ಕ್ರೋಧಸಂತಪ್ತವಾಗಿ ದಕ್ಷನನ್ನು ಸಂಹರಿಸಲು ದುಮುಕಿತು; ಆದರೆ ಜ್ಞಾನಸಂಪನ್ನನಾದ ಭೃಗುಋಷಿಯು ಯಜ್ಞದ ವಿಘ್ನನಾಶ ಮಾಡುವ ಮಂತ್ರವನ್ನು ಅಂದು ದಕ್ಷಿಣಾಗ್ನಿಯಲ್ಲಿ ಆಹುತಿಯನ್ನು ಕೊಟ್ಟಕೂಡಲೆ ದೈದೀಪ್ಯಮಾನರಾಧ ಋಭುನಾಮಕ ಸಹಸ್ರಾವಧಿ ದೇವತೆಗಳು ಉತ್ಪನ್ನರಾಗಿ ಪ್ರಮಥಗಣಗಳನ್ನು ಹೊಡೆದೋಡಿಸಿದರು.

ಈ ಎಲ್ಲ ವರ್ತಮಾನವು ನಾರದನ ಮುಖದಿಂದ ಕೈಲಾಸದಲ್ಲಿ ಭಗವಾನ್ ಶಂಕರನಿಗೆ ತಿಳಿಯಲು, ಆತನು ಕ್ರೋಧ ಸಂತಪ್ತನಾಗಿ, ತನ್ನ ಜಡೆಯೊಳಗಿನ ವಿದ್ಯುಲ್ಲತೆಯಂತೆ ತೇಜಸ್ವಿಯಾದದ್ದೊಂದು ಜಡೆಯನ್ನು ತೆಗೆದು ನೆಲಕ್ಕೆ ಅಪ್ಪಳಿಸಿದನು. ಕೂಡಲೆ ಪ್ರಚಂಡ ಶರೀರದ, ಹಾಗು ಮೇಘವರ್ಣದ ಸಹಸ್ರಭುಜಗಳುಳ್ಳ ಒಬ್ಬ ಪುರುಷನು ಆ ಜಡೆಯಿಂದ ಉತ್ಪನ್ನವಾದನು. ಆತನ ಮಸ್ತಕವು ಆಕಾಶಕ್ಕೆ ಮುಟ್ಟುತ್ತಿದ್ದು, ಆತನು ಕೊರಳಲ್ಲಿ ನರರುಂಡಮಾಲೆಯನ್ನು ಧರಿಸಿದ್ದನು. ಆತನ ಕೈಗಳಲ್ಲಿ ನಾನಾಪ್ರಕಾರದ ಆಯುಧಗಳು ಭಯಂಕರವಾಗಿ ತೋರುತ್ತಿದ್ದವು. ಪ್ರಜ್ವಲಿತ ಅಗ್ನಿಯಂತೆ ಕಾಣುವ ಜಡೆಗಳುಳ್ಳ ಆಪುರುಷನು ಕೈಜೋಡಿಸಿ ಶಂಕರನನ್ನು ಕುರಿತು—“ಮಹಾದೇವಾ, ನಾನು ನಿನ್ನ ಯಾವ ಕಾರ್ಯಮಾಡಬೇಕೆಂಬದನ್ನು ಆಜ್ಞಾಪಿಸು”ಎಂದು ಕೇಳಿಕೊಳ್ಳಲು, ಶಂಕರನು—“ಹೇ ಪರಾಕ್ರಮಿಪುರುಷಾ, ವೀರಭದ್ರಾ, ನೀನು ನನ್ನ ಅಂಶದಿಂದ ಉತ್ಪನ್ನನಾಗಿರುವದರಿಂದ ನನ್ನ ಸೈನ್ಯದ ಅಧಿಪತಿಯಾಗಿ ದಕ್ಷಪ್ರಜಾಪತಿಯ ಸಂಹಾರದೊಡನೆ ಅವನ ಯಜ್ಞಧ್ವಂಸ ಮಾಡು” ಎಂದು ಆಜ್ಞಾಪಿಸಿದನು. ಕೂಡಲೆ ವೀರಭದ್ರನು ಶಂಕರನಿಗೆ ಪ್ರದಕ್ಷಿಣಮಾಡಿ ಭಯಂಕರವಾಗಿ ಗರ್ಜಿಸುತ್ತ ದಕ್ಷನ ಸಮಾಚಾರಕ್ಕಾಗಿ ಸಾಗಿದನು. ಆ ವೀರಮೂರ್ತಿಯನ್ನು ವಕ್ರದೃಷ್ಟಿಯಿಂದ ನೋಡುವ ಧೈರ್ಯವು ಪ್ರತ್ಯಕ್ಷ ಕಾಲನಿಗೂ ಆಗುವಹಾಗಿದ್ದಿಲ್ಲ. ಶಂಕರನ ಪಾರ್ಷದಗಣವು ಕೇಕುಹಾಕುತ್ತ ವೀರಭದ್ರನನ್ನು ಹಿಂಬಾಲಿಸಿತು. ಅತ್ತ ಯಜ್ಞಮಂಟಪದಲ್ಲಿ ಹಲವು ಉತ್ಪಾತಗಳಾಗಿ ದಕ್ಷನೇ ಮೊದಲಾದವರೆಲ್ಲರು ಚಿಂತಿಸುತ್ತಿರಲು, ಶಂಕರನ ನಾನಾವಿಧ ಗಣಗಳು ಯಜ್ಞಮಂಟಪಕ್ಕೆ ಮುತ್ತಿಗೆ ಹಾಕಿ ಅಗ್ನಿಯನ್ನು ನಂದಿಸಿದರು, ಮಂಟಪವನ್ನು ವಿಧ್ವಂಸಮಾಡಿದರು, ಯಜ್ಞಸಾಮಗ್ರಿಗಳನ್ನು ಕೆಡಿಸಿದರು, ಋಷಿಗಳನ್ನು ಪೀಡಿಸಿದರು, ದೇವತೆಗಳನ್ನು ಕಟ್ಟಿದರು, ಋಷಿಪತ್ನಿಯರನ್ನು ಬೆದರಿಸಿದರು. ಮಣಿಮಾನನು ಭೃಗುವನ್ನು ಕಟ್ಟಿದನು, ಚಂಡೀಶನು ಪೂಷನನ್ನು ಹಿಡಿದನು, ನಂದಿಕೇಶನು ಭಗನನ್ನು ಪೀಡಿಸಿದನು, ವೀರಭದ್ರನು ದಕ್ಷನನ್ನು ಕೆಡವಿದನು.

ಉಳಿದ ಗಣಗಳು ಬೇರೆ ಬೇರೆ ದೇವತೆಗಳನ್ನೂ, ಋಷಿಗಳನ್ನೂ ಕಲ್ಲಿನಮಳೆಸುರಿಸಿ ಪರಿಪರಿಯಾಗಿ ಪೀಡಿಸಿದರು. ಈ ಅನರ್ಥವನ್ನು ನೋಡಿ ಎಲ್ಲರೂ ದಾರಿಸಿಕತ್ತ ಓಡತೊಡಗಿದರು. ಹಿಂದಕ್ಕೆ ಸಭೆಯಲ್ಲಿ ಗಡ್ಡಮೀಸೆಗಳನ್ನು ತೋರಿಸುತ್ತ ಭೃಗುಋಷಿಯು ಶಂಕರನ ಉಪಹಾಸಮಾಡಿದ್ದರಿಂದ ವೀರಭದ್ರನು ಅವನ ಗಡ್ಡಮೀಸೆಗಳನ್ನು ಕಿತ್ತಿದನು. ದಕ್ಷನು ಶಂಕರನನ್ನು ನಿಂದಿಸುವಾಗ ಭಗನು ನೇತ್ರಸಂಕೇತಮಾಡಿದ್ದರಿಂದ ವೀರಭದ್ರನು ಅವನನ್ನು ಕೆಡವಿ ಅವನ ಕಣ್ಣುಗಳನ್ನು ಕಿತ್ತಿದನು. ದಕ್ಷನು ಭಗವಾನ್ ಶಂಕರನಿಗೆ ಶಾಪಕೊಟ್ಟಾಗ ಪೂಷಾನು ಹಲ್ಲುತೆಗೆದು ನಕ್ಕಿದ್ದರಿಂದ ವೀರಭದ್ರನು ಅವನ ಹಲ್ಲುಗಳನ್ನು ಮುರಿದನು. ಈ ಕೊಲಾಹಲವನ್ನು ನೋಡಿ ಬ್ರಹ್ಮನು ರೋಷದಿಂದ ಹೂಂಕರಿಸಿ ಹಂಸವನ್ನೇರಿ ತನ್ನ ಮುಖ್ಯ ಸೇನೆಯೊಡನೆ ತಾನೇ ವೀರಭದ್ರನ ಮೇಲೆ ಯುದ್ಧಕ್ಕೆ ಸಾಗಿದನು. ಆಗ ಓಡಿಹೋಗುತ್ತಿದ್ದ ಕಿನ್ನರ–ಯಕ್ಷ–ವಿದ್ಯಾಧರ–ಗಂಧರ್ವಾದಿಗಳೆಲ್ಲರು ಹುರಿದುಂಬಿ ಮತ್ತೆ ವೀರಭದ್ರನನ್ನು ಮುತ್ತಿದರು; ಆದರೆ ಆಗುವದೇನು? ಹಾವುಗಳ ಗುಂಪು ಗರುಡನನ್ನು ಮುತ್ತಿದರೆ ಆ ಗರುಡನು ಅಂಜುವನೇ? ತರಗೆಲೆಗಳು ಅಗ್ನಿಯನ್ನು ಮುತ್ತಿ ಆರಿಸಬಲ್ಲವೆ? ಅದರಂತೆ ಬ್ರಹ್ಮನ ಸೇನೆಯು ರುದ್ರಗಣದ ಹತಿಯಿಂದ ಲಯವಾಗುತ್ತ ಬಂದಿತು. ವೀರಭದ್ರನ ರಭಸದ ಹೊಡತಕ್ಕೆ ಅದು ನುಚ್ಚುನುರಿಯಾಗಿ ಮತ್ತೆ ದಿಕ್ಕುಪಾಲಾಗಿ ಓಡಿತು. ಇದರಿಂದ ಚತುರ್ಮುಖನು ಅತ್ಯಂತ ರುಷ್ಟನಾಗಿ ತಾನೇ ವೀರಭದ್ರನ ಸೇನೆಗೆ ಇದಿರಾದನು. ಈ ವರೆಗೆ ದೇವಸೇನೆಯನ್ನು ದೆಸೆಗೆಡಿಸಿದ ವೀರಭದ್ರನು ಈತನೆಯೆ? ಎಂದು ನುಡಿದು ವೀರಭದ್ರನ ಮೇಲೆ ಅಸಂಖ್ಯ ಬಾಣಗಳನ್ನು ಸುರಿಸಿದನು. ಆ ಬ್ರಹ್ಮನ ಶೌರ್ಯಕ್ಕೆ ಇದಿರಾಗದೆ ಗಣಸೇನೆಯು ಇಬ್ಭಾಗವಾಗಿ ಅವನಿಗೆ ಮಾರ್ಗವನ್ನು ಕೊಟ್ಟಿತು. ಇದನ್ನು ನೋಡಿ ವೀರೇಶನು ತಾನೇ ಬ್ರಹ್ಮನಿಗೆ ಇದಿರಾಗಿ—ಎಲೈ ಬ್ರಹ್ಮನೆ, ನೀನು ಮಹಾನಿಪುಣ! ಶಿವನು ನಿನ್ನನ್ನು ಪರಮ ಭಕ್ತನೆಂದು ತಿಳಿದು ಕೃಪೆಯಿಂದ ಜಗತ್ಸೃಷ್ಟಿಯ ಯಾಜಮಾನ್ಯವನ್ನು ನಿನಗೆ ಕೊಟ್ಟನು. ಇದನ್ನು ನೆನಪಿಗೆ ತಂದುಕೊಳ್ಳದೆ ನಿನ್ನ ಮಗನಾದ ದಕ್ಷನ ಅಹಂಕಾರದ ಕೃತಿಗೆ ನೀನು ಸಹಾಯಕನಾಗಿ ಲೋಕನಾಶಕಾರಣವಾದ ಈ ಯಜ್ಞವನ್ನು ಆರಂಭಿಸಬಹುದೆ? ಆದದ್ದಾಯಿತು. ಈಗಾದರೂ ವಿಚಾರಮಾಡಿ ನನಗೆ ಶರಣುಬಾ, ಅನ್ನಲು, ಬ್ರಹ್ಮನು ಗಹಗಹಿಸಿ ನಕ್ಕು—ಈ ಬುದ್ಧಿವಾದವನ್ನು ಹೇಳುವ ನೀನು ಯಾರು? ಪ್ರಕೃತಕ್ಕೆ ನನ್ನೊಡನೆ ಯುದ್ಧಮಾಡು; ಯುದ್ಧಸಮಾಪ್ತಿಯನಂತರ ಹೇಳಕೇಳತಕ್ಕ ಕೆಲಸಗಳಾಗಲಿ, ಎಂದು ಹೇಳಿ, ವೀರಭದ್ರನೊಡನೆ ಯುದ್ಧಮಾಡತೊಡಗಿದನು. ಆ ಬ್ರಹ್ಮ–ರುದ್ರರು ಲೋಕಭಯಂಕರವಾಗಿ ಕಾದತೊಡಗಿದರು. ಬ್ರಹ್ಮನು ವೀರಭದ್ರನ ಪರಾಕ್ರಮವನ್ನು ಸಹಿಸಲಾರದೆ, ಆತನ ಮೇಲೆ ಬ್ರಹ್ಮಾಸ್ತ್ರವನ್ನು ಬಿಡಲು, ವೀರೇಶನು ರುದ್ರಾಸ್ತ್ರದಿಂದ ಅದನ್ನು ಎರಡು ತುಂಡುಮಾಡಿ, ತೀಕ್ಷ್ಣಬಾಣದಿಂದ ಬ್ರಹ್ಮನ ಹಣೆಗೆ ಹೊಡೆದು ಅವನನ್ನು ಮೂರ್ಛೆಗೊಳಿಸಿ, ಇಂದ್ರನ ತೋಳುಗಳನ್ನು ಕತ್ತರಿಸಿ, ಅಗ್ನಿಯ ನಾಲಿಗೆಯನ್ನು ಏಳುಭಾಗವಾಗಿ ಸೀಳಿದನು. ಈ ಅನರ್ಥವನ್ನು ನೋಡಿ ದೇವಸೇನೆಯು ಓಡಿಹೋಗಿ ವಿಷ್ಣುವಿನ ಮೊರೆಬಿದ್ದು, ನಮ್ಮನ್ನು ರಕ್ಷಿಸು, ಈ ಹಾಳುಯಜ್ಞದ ಹವ್ಯಾಸವು ಸಾಕು, ಎಂದು ಬೇಡಿಕೊಂಡಿತು.

ದೇವತೆಗಳ ಈ ವಿಪತ್ತನ್ನು ದೂರಮಾಡಬೇಕೆಂದು ವಿಷ್ಣುವು ಗರುಡನನ್ನೇರಿ ವೀರೇಶನೊಡನೆ ಯುದ್ಧಕ್ಕೆ ಹೊರಡಲು, ಆತನ ಎಡಭುಜ–ಎಡತೊಡೆಗಳುಹಾರಿ ಅಪಶಕುನವಾಯಿತು! ಆದರೂ ಹರಿಯು ಶಿವಸಂಕಲ್ಪದಿಂದ ಅದನ್ನು ಲೆಕ್ಕಿಸದೆ, ವೀರೇಶನೊಡನೆ ಯುದ್ಧಮಾಡಹೊರಟು, ರುದ್ರಗಣವನ್ನು ಸಂಹರಿಸಹತ್ತಿದನು. ಆಗ ರುದ್ರಗಣವು ಓಡಹತ್ತಿ ವೀರಭದ್ರನಿಗೆ ಶರಣುಹೋಗಲು, ವೀರೇಶನು ವಿಷ್ಣುವಿನೊಡನೆ ಯುದ್ಧಕ್ಕೆ ಸಿದ್ಧನಾದನು. ಆತನು ಹರಿಯನ್ನು ಕುರಿತು—ದೇವಸಮೂಹದಲ್ಲಿ ನೀನೊಬ್ಬನೇ ವೀರನಾಗಿ ಕಾಣುತ್ತೀ. ನನ್ನ ಸೈನ್ಯವನ್ನು ಹಿಮ್ಮೆಟ್ಟಿಸಿದ ನಿನ್ನ ಬಾಣಪ್ರಯೋಗಶಕ್ತಿಗೆ ನಾನು ಮೆಚ್ಚಿದೆನು. ಎಂದು ಒಂಬತ್ತು ತೀಕ್ಷ್ಣಬಾಣಗಳನ್ನು ಹೊಡೆದು ವಿಷ್ಣುವಿನ ರಥವನ್ನು ಆಕಾಶಕ್ಕೆ ಹಾರಿಸಿದನು. ಆ ರಥವು ಸೂರ್ಯಮಂಡಲಕ್ಕೆ ಹೋಗಿ ಸುಟ್ಟು ಭೂಮಿಗೆ ಬೀಳುತ್ತಿರಲು, ವಿಷ್ಣುವು ಮತ್ತೊಂದು ರಥವನ್ನು ಏರಿ ವೀರಭದ್ರನಮೇಲೆ ತೀಕ್ಷ್ಣಬಾಣಗಳನ್ನು ಪ್ರಯೋಗಿಸಿದನು. ತಂದೆಯ ಅಪ್ಪಣೆಯಂತೆ ಈ ವಿಷ್ಣುವಿನ ಪ್ರಾಣಹರಣಮಾಡಬಾರದೆಂದು ನಾನು ಸೌಮ್ಯವಾಗಿ ಬಾಣಪ್ರಯೋಗಮಾಡುತ್ತಿರಲು, ಈ ವಿಷ್ಣುವು ಮಲೆತುನಿಲ್ಲುವನಲ್ಲ! ಎಂದು ಸಿಟ್ಟಿನಿಂದ ವೀರಭದ್ರನು ತೀಕ್ಷ್ಣಬಾಣದಿಂದ ವಿಷ್ಣುವಿಗೆ ಹೊಡೆಯಲು, ಅದರಿಂದ ಹರಿಯು ಆಕಾಶಕ್ಕೆ ಹಾರಿ ನೆಲಕ್ಕೆ ಬಿದ್ದು ರಕ್ತಕಾರಿ ನಿಶ್ಚೇಷ್ಟಿತನಾದನು. ಆಗ ವೀರಭದ್ರನು, ಅಹಹಾ! ತಂದೆಯ ಆಜ್ಞೆಯನ್ನು ಮೀರಿದೆನಲ್ಲ, ಎಂದು ವ್ಯಸನಪಟ್ಟು ಶೀತೋಪಚಾರದಿಂದ ವಿಷ್ಣುವನ್ನು ಎಚ್ಚರಗೊಳಿಸಿದನು. ಆಗ ವಿಷ್ಣುವು ಪುನಃ ರಥದಲ್ಲಿ ಕುಳಿತು ಯುದ್ಧಕ್ಕೆ ಸಿದ್ಧನಾಗಲು, ಜಗದ್ರಕ್ಷಕ–ಶಿಕ್ಷಕರಿಬ್ಬರೂ ಪುನಃ ಯುದ್ಧವನ್ನು ಆರಂಭಿಸಿದರು. ಆಗ ಲೋಕವು ಉಳಿಯುವಬಗೆಯೇನೆಂದು ಮನು ಮುನಿಗಳು ಯೋಚಿಸತೊಡಗಿದರು. ಇವರ ಯುದ್ಧವ್ಯಾಪಾರವನ್ನು ಪರಮೇಶ್ವರನು ಅಂತರಿಕ್ಷದಲ್ಲಿದ್ದು ನೋಡುತ್ತಿದ್ದನು. ವಿಷ್ಣುವು ತನ್ನ ನಾರಾಯಣಾಸ್ತ್ರವನ್ನು ವೀರಭದ್ರನಮೇಲೆ ಬಿಡಲು, ಅದನ್ನು ವೀರಭದ್ರನು ರುದ್ರಾಸ್ತ್ರದಿಂದ ಖಂಡಿಸಿದನು. ಆಗ ವಿಷ್ಣುವು ಚಕ್ರವನ್ನು ವೀರಭದ್ರನಮೇಲೆ ಬಿಟ್ಟನು. ಆಗ ವೀರಭದ್ರನು ತೀಕ್ಷ್ಣಬಾಣದಿಂದ ಅದನ್ನು ಖಂಡಿಸಿದಾಗ ವಿಷ್ಣುವು ಆಯುಧಹೀನನಾಗಿ ಪ್ರಾಣಭಯದಿಂದ ಚಿಗರೆಯರೂಪದಿಂದ ಓಡಿಹೋಗಹತ್ತಿನು. ಈ ಕಪಟವನ್ನು ಅರಿತ ವೀರಭದ್ರನು ಒಂದು ತೀಕ್ಷ್ಣಬಾಣದಿಂದ ಆ ಚಿಗರೆಯನ್ನು ಹೊಡೆಯಡಲು, ಅದು ನೆಲಕ್ಕುರುಳಿತು. ಆಗ ವೀರಭದ್ರನುಅದನ್ನು ಮೈದಡವಿ ಎಚ್ಚರಗೊಳಿಸಿದಾಗ, ವಿಷ್ಣುವು ಪಶ್ಚಾತ್ತಾಪದಿಂದ ವೀರಭದ್ರನನ್ನು ಪ್ರಾರ್ಥಿಸಿದನು. ಆಗವೀರಭದ್ರನು— "ಇದೆಲ್ಲ ಶಿವಕೃತ''ವೆಂದು ವಿಷ್ಣುವನ್ನು ಸಮಾಧಾನಪಡಿಸಿದನು. ಎಲೈ ವಿವೇಕಶೀಲಾದಿ ಶಿಷ್ಯರುಗಳಿರಾ, ಈ ದಕ್ಷಯಜ್ಞಧ್ವಂಸವನ್ನು ಕಲ್ಪಭೇದದಿಂದ ಬೇರೆ ಬೇರೆ ಪುರಾಣಗಳಲ್ಲಿ ಬೇರೆ ಬೇರೆ ವಿಧವಾಗಿ ವರ್ಣಿಸಿರುತ್ತದೆ. ಈ ಸಂಬಂಧದಿಂದ ಲಿಂಗಪುರಾಣದಲ್ಲಿ ವರ್ಣಿಸಿರುವದು ಹ್ಯಾಗಂದರೆ—" ಕಾಲಾಗ್ನಿಸದೃಶನಾದ ಆ ವೀರಭದ್ರನು ಯಜ್ಞಮಂಟಪಕ್ಕೆ ಹೋಗಿ ದಕ್ಷಪ್ರಜಾಪತಿಯನ್ನು ಕುರಿತು—" ನಿನ್ನನ್ನೂ, ಯಾವತ್ತು ದೇವತೆಗೆ

ಳನ್ನೂ, ಮುನಿಜನರನ್ನೂ ಭಸ್ಮಮಾಡುವದಕ್ಕಾಗಿ ಪಿನಾಕಪಾಣಿಯು ನನ್ನನ್ನು ಕಳಿಸಿರುವನು." ಎಂದು ಹೇಳಿ, ಯಜ್ಞಶಾಲೆಗೆ ಬೆಂಕಿ ಹಚ್ಚಿದನು. ಶಿವಗಣವು ಯಜ್ಞಯೂಪವನ್ನು ಕಿತ್ತು, ಯಜ್ಞಸಾಧನಗಳನ್ನು ಗಂಗೆಯಲ್ಲಿ ಚಲ್ಲಿಕೊಟ್ಟಿತು. ಇಂದ್ರನು ವೀರಭದ್ರನ ಮೇಲೆ ಕೈಯೆತ್ತಲು, ಅವು ಅಲ್ಲಿಯೇ ಸ್ತಂಭಿತವಾದವು. ಅಷ್ಟರಲ್ಲಿ ಭಗನ ಕಣ್ಣುಗಳನ್ನು ಕಿತ್ತಿದರು, ಪೂಷನ ಹಲ್ಲುಗಳನ್ನು ಕೆಡವಿದರು, ಯಮನ ತೋಳು ಮುರಿದರು, ಈ ಮೇರೆಗೆ ಯಾವತ್ತು ದೇವತೆಗಳ ಮುನಿಗಳ ದುರವಸ್ಥೆಯಾಯಿತು. ಆಗ ವಿಷ್ಣುವು ತನ್ನ ಯೋಗಬಲದಿಂದ ಸಾವಿರಾರು ಜನ ವಿಷ್ಣುಗಳನ್ನು ಉತ್ಪನ್ನಮಾಡಲು, ಅವರನ್ನೆಲ್ಲ ವೀರಭದ್ರನು ಸಂಹರಿಸಿದನು. ಸ್ವತಃ ನಾರಾಯಣನು ಮೂರ್ಛೆಯಿಂದ ನೆಲಕ್ಕೆ ಬಿದ್ದನು; ಆತನು ಮತ್ತೆ ಎದ್ದು, ತನ್ನ ದೇದೀಪ್ಯಮಾನ ಚಕ್ರವನ್ನು ಬಿಡಲುದ್ಯೋಗಿಸಲು, ಅವನ ಹಸ್ತವು ಸ್ತಂಭಿತವಾಯಿತು. ಆತನ ಶಾರ್ಙ್ಗಧನುವು ಮೂರುತುಂಡಾಯಿತು; ಅದರಿಂದ ವಿಷ್ಣುವಿನ ಶಿರಸ್ಸುತುಂಡಾಗಿ ಅದು ಗಾಳಿಗೆ ಹಾರಿ ಅಗ್ನಿಯಲ್ಲಿ ಬಿದ್ದಿತು. ಹೀಗೆ ಯಾವತ್ತು ವಿಧ್ವಸ್ತವಾದದ್ದನ್ನು ನೋಡಿ ಸ್ವತಃ ಯಜ್ಞವು ಮೃಗರೂಪವನ್ನು ಧರಿಸಿ ಆಕಾಶದಲ್ಲಿ ಹಾರಿಹೋಗತೊಡಗಿತು. ಆಗ ವೀರಭದ್ರನು ಅದರ ಬೆನ್ನು ಹತ್ತಿ ಅದರ ಶಿರಸ್ಸನ್ನು ಖಂಡಿಸಿದನು. ಧರ್ಮ–ಕಶ್ಯಪ ಮೊದಲಾದ ಮುನಿವರರಿಗೆ ಲತ್ತೆಗಳು ಬಿದ್ದವು. ಆ ಮೇಲೆ ಆ ವೀರಭದ್ರನು ದಕ್ಷನ ಕುತ್ತಿಗೆಯನ್ನು ಕೊಯ್ಯತೊಡಗಲು, ಏನುಮಾಡಿದರೂ ಆತನ ತೊಗಲು ಹರಿಯಲೊಲ್ಲದು. ಆಗ ಆ ಪರಾಕ್ರಮಿಯಾದ ವೀರಭದ್ರನು ಯಜ್ಞದೊಳಗಿನ ಪಶುವನ್ನು ಗಾಸಿಸಿ ಕೊಲ್ಲುವಂತೆ ದಕ್ಷನ ಕುತ್ತಿಗೆ ಹಿಚಿಗಿಕೊಂಡು, ಅವನ ರುಂಡವನ್ನು ದಿಂಡದಿಂದ ಬೇರೆ ಮಾಡಿ ಅದನ್ನು ದಕ್ಷಿಣಾಗ್ನಿಯಲ್ಲಿ ಪೂರ್ಣಾಹುತಿಯಾಗಿ ಕೊಟ್ಟನು! ಬಳಿಕ ಆತನು ಯಜ್ಞಮಂಟಪಕ್ಕೆ ಬೆಂಕಿಹಚ್ಚಿ ಶಿವಾಜ್ಞೆಯನ್ನು ಪೂರಯಿಸಿ ಯಾವತ್ತು ಪ್ರಮಥರೊಡನೆ ಕೈಲಾಸಕ್ಕೆ ಹೊರಟುಹೋದನು. ಇತ್ತ ಯಜ್ಞಮಂಟಪದೊಳಗೆ ಋಷಿಗಳೂ, ಬ್ರಾಹ್ಮಣರೂ, "ಶಾಂತಂಪಾಪಂ ಶಾಂತಂಪಾಪಂ" ಅನ್ನುತ್ತ ಕುಳಿತುಕೊಂಡರು. ಈ ಅನರ್ಥವನ್ನು ಮೊದಲೇ ಅರಿತಿದ್ದ ಬ್ರಹ್ಮ–ವಿಷ್ಣುಗಳು ಯಜ್ಞಕ್ಕೆ ಹೋಗಿದ್ದಿಲ್ಲವೆಂದು ಭಾಗವತದಲ್ಲಿ ಬರೆದದೆ. ವಿವೇಕಶೀಲನೇ, ಸೃಷ್ಟಿ–ಸ್ಥಿತಿ–ಲಯಗಳ ಕರ್ತೃವು ಭಗವಾನ್ ಸದಾಶಿವನೇ ಆಗಿದ್ದು, ಆತನೇ ಲಯಮಾಡಲುದ್ಯೋಗಿಸಿದರೆ ಯಾರಿದ್ದು ಏನುಮಾಡುವರು?

ಈ ಅನರ್ಥವು ಒದಗಿದ ಬಳಿಕ ಬ್ರಹ್ಮದೇವನು ದೇವತೆಗಳನ್ನು ಕುರಿತು—ದೇವತೆಗಳಿರಾ, ಬಲಿಷ್ಠರೊಡನೆ ದುರ್ಬಲರು ಕಟ್ಟಿಕೊಂಡ ವೈರವು ದುರ್ಬಲರನ್ನೇ ಬಾಧಿಸುವದು. ಬಲಿಷ್ಠರು ಅಪರಾಧಿಗಳಿದ್ದರೆ ಒಂದು ಪಕ್ಷದಲ್ಲಿ ಅವರನ್ನು ದ್ವೇಷಿಸಬಹುದು; ಆದರೆ ದುರ್ಬಲರು ಅಪರಾಧಿಗಳಾಗಿ ಬಲಿಷ್ಠರೊಡನೆ ದ್ವೇಷಿಸಿ ಜಯಸಂಪಾದಿಸುವದು ಕೇವಲ ಅಶಕ್ಯವು. ದೇವತೆಗಳಿರಾ, ನಾವು ಭಗವಾನ್ ಶಂಕರನಿಗೆ ಅಪರಾಧಿಗಳಾಗಿರುತ್ತೇವೆ. ಯಜ್ಞದಲ್ಲಿ ಆತನಿಗೆ ಹವಿರ್ಭಾಗವು ದೊರೆಯತಕ್ಕದ್ದಾಗಿದ್ದು ನಾವು ಅದನ್ನು ಆತನಿಗೆ ಕೊಡದೆಯಿದ್ದದ್ದು ಅಪರಾಧವು. ಶಂಕರನ ಸಿಟ್ಟು ಕಠಿಣವಾದದ್ದು. ಆತನು

ಕ್ರುದ್ಧನಾದರೆ ತ್ರೈಲೋಕ್ಯವನ್ನು ಸುಟ್ಟುಬಿಟ್ಟಾನು. ಈಗಂತು ದಕ್ಷನ ಮರ್ಮಭೇದಕ ಮಾತುಗಳು ಶಂಕರನ ಮನಸ್ಸಿನಲ್ಲಿ ಬಾಧಿಸುತ್ತಿದ್ದು, ಆತನ ಪ್ರಿಯ ಭಾರ್ಯೆಯ ಅಂತವು ನಮ್ಮಿಂದಲೇ ಆಗಿರುತ್ತದೆ! ಇಂಥ ಪ್ರಸಂಗದಲ್ಲಿ ನಾವು ಬದುಕಿ ಉಳಿದದ್ದೇ ನಮ್ಮ ಭಾಗ್ಯವು. ನಮಗೆ ಕಲ್ಯಾಣವಾಗಬೇಕಾಗಿದ್ದರೆ ನಾವು ಶಂಕರನಿಗೆ ಶರಣು ಹೋಗೋಣ! ಆತನು ದಯಾಲುವಿರುವದರಿಂದ ಅವನ ಕಾಲುಗಳನ್ನು ಗಟ್ಟಿಯಾಗಿ ಹಿಡಿದುಕೊಂಡು ಅಪರಾಧದ ಬಗ್ಗೆ ಕ್ಷಮೆಯನ್ನು ಯಾಚಿಸಿ, ಪುನಃ ಯಜ್ಞವನ್ನು ಆರಂಭಿಸುವ ಆಶೆಯನ್ನು ಪ್ರಕಟ ಮಾಡೋಣ. ಭಗವಾನ್ ಶಂಕರನು ಸ್ವತಂತ್ರನು- ಆತನು ಯಾರ ಅಧೀನನೂ ಅಲ್ಲ. ಆತನ ನಿಜವಾದ ಸ್ವರೂಪವೂ-ಸಾಮರ್ಥ್ಯವೂ ಪ್ರತ್ಯಕ್ಷ ಮಹಾವಿಷ್ಣುವಿಗೂ ನನಗೂ ಇನ್ನೂ ತಿಳಿದಿರುವದಿಲ್ಲ; ಅಂದಬಳಿಕ ಅನ್ಯರಪಾಡೇನು ? ಎಂದು ಹೇಳಿ ಬ್ರಹ್ಮನು ಎಲ್ಲರೊಡನೆ ಕೈಲಾಸಕ್ಕೆ ತೆರಳಿದನು.

ಆ ಮನೋಹರವಾದ ಕೈಲಾಸದಲ್ಲಿ ವಿಶಾಲವಾದ ವಟವೃಕ್ಷದ ಬುಡದಲ್ಲಿ ಭಗವಾನ್ ಶಂಕರನು ಬಲತೊಡೆಯ ಮೇಲೆ ಎಡಪಾದವನ್ನಿಟ್ಟು ವೀರಾಸನ ಹಾಕಿ ತರ್ಕಮುದ್ರೆಯಿಂದ ಕುಳಿತಿದ್ದನು. ಆತನ ಬಳಿಯಲ್ಲಿ ಸನಕ ಸನಂದನಾದಿ ಮಹಾನ್ ಮಹಾನ್ ಸಿದ್ಧರೂ, ಗುಹ್ಯಕ-ರಾಕ್ಷಸರ ಅಧಿಪತಿಯಾದ ಕುಬೇರನೂ ಕುಳಿತಿದ್ದರು. ಆ ಕಾಲದಲ್ಲಿ ಶಂಕರನ ಮುದ್ರೆಯು ಅತ್ಯಂತ ಶಾಂತವಾಗಿತ್ತು. ಆತನು ಸರ್ವಾಂಗದಲ್ಲಿ ಚಿತಾಭಸ್ಮವನ್ನು ಹಚ್ಚಿಕೊಂಡು ಕೊರಳು-ಮುಂಗೈ-ರಟ್ಟೆಗಳಲ್ಲಿ ರುದ್ರಾಕ್ಷಮಾಲೆಗಳನ್ನು ಧರಿಸಿದ್ದನು. ಮಸ್ತಕದ ಸುತ್ತಲೂ ರುದ್ರಾಕ್ಷಮಾಲೆಯಿದ್ದು, ಜಡೆಯಲ್ಲಿ ಚಂದ್ರಕಲೆಯು ಶೋಭಿಸುತ್ತಿತ್ತು- ಆತನು ಶುದ್ಧವಾದ ದರ್ಭಾಸನದ ಮೇಲೆ ಕುಳಿತುಕೊಂಡು ನಾರದನಿಗೆ ಸನಾತನ ಬ್ರಹ್ಮವನ್ನು ಕುರಿತು ಉಪದೇಶಿಸುತ್ತಿದ್ದನು- ಆ ಶಾಂತವೃತ್ತಿಯನ್ನು ನೋಡಿ, ದೇವಾದಿಕರಿಗೆ ಸ್ವಲ್ಪ ಧೈರ್ಯವಾಯಿತು- ಯಾವತ್ತು ದೇವತೆಗಳು ಬ್ರಹ್ಮದೇವನೊಡನೆ ಮುಂದಕ್ಕೆ ಹೋಗಿ ಶಂಕರನಿಗೆ ನಮಸ್ಕಾರ ಮಾಡಿದರು.

ಆಗ ಬ್ರಹ್ಮದೇವನು ಕೈಜೋಡಿಸಿ ಶಂಕರನನ್ನು ಕುರಿತು—ಶಂಕರಾ, ನಿನ್ನ ಸ್ವರೂಪವನ್ನು ಅರಿತವರಾರು? ನೀನು ಯಾವತ್ತು ಜಗತ್ತಿನ ನಿಯಾಮಕನಾಗಿದ್ದು, ನೀನು ಪ್ರಕೃತಿಪುರುಷರ ಕಾರಣನಾಗಿರುತ್ತೀ. ನೀನು ನಿರ್ಗುಣನೂ-ನಿರಾಕಾರನೂ-ನಿರುಪಮನೂ ಆದ ಸಚ್ಚಿದಾನಂದ ಸ್ವರೂಪನಿರುವೆ. ಸೃಷ್ಟಿ-ಸ್ಥಿತಿ-ಲಯಗಳು ನಿನ್ನಿಂದಲೇ ಆಗುವವು. ಧರ್ಮ-ಅರ್ಥಗಳನ್ನು ಸಾಧಿಸಿಕೊಡುವ ವೇದತ್ರಯಿಯ ರಕ್ಷಣವಾಗಬೇಕೆಂದು ದಕ್ಷನನ್ನು ನಿಮಿತ್ತಮಾಡಿ ನೀನೇ ಯಜ್ಞವನ್ನು ಉತ್ಪನ್ನ ಮಾಡಿರುವೆ. ನಾಲ್ಕು ವರ್ಣಗಳೂ, ಅವುಗಳ ಧರ್ಮಮರ್ಯಾದೆಗಳೂ ನಿನ್ನಿಂದಲೇ ಆಗಿರುವವು- ಅಧರ್ಮಾಚರಣೆಯುವರಿಗೆ ಶಾಸನ ಮಾಡುವವನೂ, ಧರ್ಮಾಚರಣೆಯುವರಿಗೆ ಮೋಕ್ಷಕೊಡುವವನೂ ನೀನೇಯೇ. ಇನ್ನು ನಿನ್ನ ಮಾಯೆಯಿಂದ ಮೋಹಿತರಾದವರು ಪರರ ಉತ್ಕರ್ಷವು ಸಹನವಾಗದೆ ಮಾತ್ಸರ್ಯದಿಂದ ಅನ್ಯರಿಗೆ ದುರ್ಭಾಷಣ ಮಾಡಿದರೆ, ಅಂಥವರ ನಾಶವು ದೈವದಿಂದಲೇ ಆಗುತ್ತಿರುವದು. ಆದ್ದರಿಂದ ನಿನ್ನಂಥ ಮಹಾ ಸಮರ್ಥ ಸಾಧುಗಳು ಅದು

ಕಾಗ್ಗಿ ಸಿಟ್ಟಾಗದೆ, ಅವರು ಅಜ್ಞಾನಿಗಳೆಂದು ತಿಳಿದು ಅವರನ್ನು ಅನುಗ್ರಹಿಸುವದೇ ಯೋಗ್ಯವು. ಮಾಯೆಯಿಂದ ಮೋಹಿತರಾಗಿ ನಿನಗೆ ಸಿಗತಕ್ಕ ಹವಿರ್ಭಾಗ ಕೊಡದಿದಿರುವ ನಮ್ಮ ಅಪರಾಧವನ್ನು ಕ್ಷಮಿಸು; ಮತ್ತು ಮರಣಹೊಂದಿದ ದಕ್ಷಪ್ರಜಾಪತಿಯನ್ನು ಬದುಕಿಸಿ ಅಪೂರ್ಣವಾಗಿರುವ ಯಜ್ಞವನ್ನು ಪುನಃ ಪೂರ್ಣಮಾಡಿಸು. ಅದರಂತೆ ಭೃಗುವಿನ ಗಡ್ಡ ಮೀಸೆಗಳೂ, ಭಗನ ಕಣ್ಣುಗಳೂ, ಪೂಷಾಖುತ್ವಿಜನ ಹಲ್ಲುಗಳೂ ತಿರುಗಿ ಬರುವಂತೆ ಮಾಡು. ದಯಾಲೊ, ಶಂಕರಾ, ನಿನ್ನ ಗಣದವರು ಶಸ್ತ್ರಾಸ್ತ್ರಗಳಿಂದಲೂ, ಕಲ್ಲುಗಳಿಂದಲೂ ಹೊಡೆದು ಋಷಿಗಳ, ಹಾಗು ದೇವತೆಗಳ ಮೈಗಳನ್ನು ಲಿಕಿಲಿಕಿ ಮಾಡಿರುತ್ತಾರೆ; ಅವನ್ನು ಮೊದಲಿನಂತೆ ಮಾಡು. ಶಂಕರಾ, ಕೈ ಜೋಡಿಸಿ ಮಾಡಿಕೊಳ್ಳುವ ನಮ್ಮ ಈ ಪ್ರಾರ್ಥನೆಯನ್ನು ನೀನು ನಡಿಸಬೇಕು. ಇನ್ನು ಮುಂದೆ ನಿನ್ನ ಯಜ್ಞಭಾಗವು ನಿನಗೆ ದೊರೆಯುತ್ತ ಹೋಗುವದು. ಈ ಯಜ್ಞದಲ್ಲಿಯೂ ಆ ಭಾಗವು ನಿನಗೆ ದೊರೆತು ಯಜ್ಞವು ಪೂರ್ಣವಾಗಲಿ. ನಮ್ಮ ಈ ಪ್ರಾರ್ಥನೆಯನ್ನು ನಡಿಸು.

ವಿವೇಕಶೀಲನೆ, ಬ್ರಹ್ಮದೇವನ ಈ ಪ್ರಾರ್ಥನೆಯಿಂದ ಶಂಕರನಿಗೆ ಸಂತೋಷವಾಯಿತು. ಆತನು ನಗುತ್ತ ನಗುತ್ತ ಬ್ರಹ್ಮದೇವನನ್ನು ಕುರಿತು—ಬ್ರಹ್ಮದೇವಾ, ಮಾಯಾವಶರಾಗಿ ಅಪರಾಧ ಮಾಡಿದವರಿಗೆ ಯೋಗ್ಯ ಶಾಸನವಾಗಿರುವದರಿಂದ ಆ ಸಂಬಂಧದಿಂದ ನಾನು ಯಾವ ಮಾತನ್ನೂ ಮನಸ್ಸಿನಲ್ಲಿ ಹಿಡಿಯುವದಿಲ್ಲ, ಮತ್ತು ಅದರ ಉಚ್ಚಾರವನ್ನೂ ಮಾಡುವದಿಲ್ಲ. ದಕ್ಷನ ತಲೆಯು ಸುಟ್ಟುಹೋಗಿರುವದರಿಂದ ಆತನಿಗೆ ಟಗರಿನ ತಲೆಯು ಹತ್ತುವದು; ಭಗನು ಯಜ್ಞದೊಳಗಿನ ತನ್ನ ಭಾಗವನ್ನು "ಮಿತ್ರ" ಎಂಬ ದೇವತೆಯ ಕಣ್ಣುಗಳಿಂದ ನೋಡುವನು; ಪೂಷಾಖುತ್ವಿಜನು ಹಿಟ್ಟು ತಿನ್ನತಕ್ಕದ್ದು; ಅದನ್ನಾದರೂ ಆತನು ಯಜಮಾನನ ಹಲ್ಲುಗಳಿಂದ ಅಗಿದು ತಿನ್ನ ಬೇಕು. ಯಜ್ಞದ ಭಾಗವನ್ನು ದೇವತೆಗಳು ನನಗೆ ಕೊಟ್ಟಿರುವದರಿಂದ ಅವರ ಅವಯವಗಳು ಮೊದಲಿನಂತೆ ಆಗುವವು. ಅಧ್ವರ್ಯು, ಹಾಗು ಖುತ್ವಿಜರೊಳಗಿನ ಯಾರ ಬಾಹುಗಳು ಕಡಿದಿರುವವೋ ಅವರ ಕಾರ್ಯಗಳು ಅಶ್ವಿನೀಕುಮಾರರ ಕೈಗಳಿಂದ ಆಗುವವು; ಭೃಗುವಿಗೆ ಹೋತಿನ ಗಡ್ಡಗಳು ಪ್ರಾಪ್ತವಾಗುವವು.

ಶಂಕರನ ಮುಖದಿಂದ ಹೊರಟ ಈ ಮಾತುಗಳನ್ನು ಕೇಳಿ ಎಲ್ಲರಿಗೂ ಆನಂದವಾಯಿತು. ಎಲ್ಲರ ಪ್ರಾರ್ಥನೆಯಂತೆ ಶಂಕರನು ಪರಿವಾರದೊಡನೆ ದಕ್ಷನಯಜ್ಞಕ್ಕೆ ಬಂದನು. ಶಂಕರನು ನುಡಿದಂತೆ ಆತನ ಕೃಪೆಯಿಂದ ಎಲ್ಲ ವ್ಯವಸ್ಥೆಯು ಯಥಾಸ್ಥಿತವಾಗಿ ಆಯಿತು. ಆತನು ಕೃಪಾದೃಷ್ಟಿಯಿಂದ ದಕ್ಷನನ್ನು ನೋಡಲು, ಅವನ ಪೂರ್ವದ ವೈರಭಾವವು ಇಲ್ಲದಂತಾಗಿ, ಸತಿಯ ಮರಣದಿಂದ ದುಃಖಿತನಾದ ಆ ದಕ್ಷನು ಶಂಕರನನ್ನು ಕುರಿತು—ಷಡ್ಗುಣೈಶ್ವರ್ಯ ಸಂಪನ್ನಾ ಶಂಕರಾ, ನಾನು ನಿನ್ನ ಅನಂತ ಅಪರಾಧಗಳನ್ನು ಮಾಡಿರುವದರಿಂದ ನೀನು ನನ್ನನ್ನು ಶಿಕ್ಷಿಸಿದ್ದು ನನ್ನಮೇಲೆ ಅನುಗ್ರಹವೇ ಆಯಿತು. ನೀನು ನನ್ನನ್ನು ಶಿಕ್ಷಿಸದಿದ್ದರೆ ನನ್ನ ಅಧರ್ಮಾಚರಣೆಗಾಗಿ ನಾನು ಅಧೋಗತಿಗೆ ಹೋಗಬೇಕಾಗಿತ್ತು. ನಿನ್ನ ಈ ಶಿಕ್ಷೆಯಿಂದ ನನ್ನ ಸರ್ವ ಪಾತಕಗಳ ಕ್ಷಯವು

ಬೇಗನೆ ಆಗಿ ನಿನ್ನ ಚರಣಕಮಲಗಳ ದರ್ಶನವಾಯಿತು. ನನ್ನ ಮೇಲೆ ನೀನುಉಪಕಾರ ಮಾಡಿರುವದರಿಂದ ನಿನ್ನ ಮನಸ್ಸು ಸಂತುಷ್ಟವಾದೀತು; ಆದರೆ ನಾನು ಏನು ಮಾಡಿ ದರೂ ನಿನ್ನ ಉಪಕಾರವು ತೀರಲಾರದು. ಎಂದು ಪ್ರಾರ್ಥಿಸಿದನು. ಬಳಿಕ ಬ್ರಹ್ಮನು ದಕ್ಷನಿಗೆ ಹೇಳಿ ಪುನಃ ಯಜ್ಞವನ್ನು ಆರಂಭಿಸಿದನು. ಆಗ ವಿಷ್ಣುವು ದಕ್ಷನ ಸಮಾಧಾ ನಕ್ಕಾಗಿ ಆತನನ್ನು ಕುರಿತು—ದಕ್ಷಾ, ಶಿವಸಂಕಲ್ಪವಿದ್ದಂತೆ ಆಗುವದು ತಪ್ಪುವದಿಲ್ಲ. ಉತ್ಪತ್ತಿ-ಸ್ಥಿತಿ-ಲಯಗಳನ್ನು ಮಾಡುವದಕ್ಕಾಗಿ ಬ್ರಹ್ಮದೇವ-ವಿಷ್ಣು-ಶಂಕರ ಎಂಬ ರೂಪಗಳನ್ನು ಸದಾಶಿವನೇ ಉತ್ಪನ್ನ ಮಾಡಿರುವದರಿಂದ ಅವರೂ ನಾನೂ ಬೇರೆಯೆಂದು ತಿಳಿಯುವದು ಯೋಗ್ಯವಲ್ಲವು. ದಕ್ಷಾ, ನೀನೂ ತಿಳಿದವನೇ ಇರುವೆ; ಆದ್ದರಿಂದ ಬ್ರಹ್ಮ-ವಿಷ್ಣು-ಮಹೇಶ್ವರರಲ್ಲಿ ಭೇದ ಬುದ್ಧಿಯನ್ನಿಡಬೇಡ. ಅಂದರೆ ನಿನಗೆ ಶಾಂತಿಯು ದೊರೆತು ನಿನ್ನ ಸರ್ವಾರ್ಥಗಳು ಸಾಧ್ಯವಾಗುವವು.

ಸಿದ್ಧಮುನಿಗಳು ಈ ಮೇರೆಗೆ ಹೇಳಿ ವಿವೇಕಶೀಲನನ್ನು ಕುರಿತು—ಶಿಷ್ಯೋತ್ತಮನೆ, ಸದಾಶಿವನ ಲೀಲೆಯು ಇಷ್ಟು ಅಗಾಧವಾದದ್ದು. ಇದೇ ಚರಿತ್ರವನ್ನು ಕುರಿತು ಭಗ ವಾನ್ ವೇದವ್ಯಾಸರು ಮಹಾ ಭಾರತದಲ್ಲಿ ವರ್ಣಿಸಿರುವದನ್ನು ಹೇಳುವೆನು ಕೇಳಿರಿ, ಯಾಕಂದರೆ ಅಲ್ಲಿ ದಕ್ಷಪ್ರಜಾಪತಿಯು ಅಷ್ಟೋತ್ತರ ಸಹಸ್ರ ನಾಮಗಳಿಂದ ರುದ್ರನನ್ನು ಸ್ತುತಿಸಿರುವನು. ಮುಮುಕ್ಷುಗಳ ಉದ್ಧಾರ ಸಾಧನವಾದ ಆ ಸರ್ವೋತ್ತಮ ಸ್ತೋತ್ರದ ಶ್ರವಣವು ಅತ್ಯಂತ ಕಲ್ಯಾಣಕಾರಕವಾಗಿರುವದು! ಷಡ್ಗುಣೈಶ್ವರ್ಯ ಸಂಪನ್ನ ನಾದ ಸದಾಶಿವನ ಲೀಲೆಯನ್ನು ಎಷ್ಟುವಿಧದಿಂದ ವರ್ಣಿಸಿದರೆ ಜ್ಞಾನಿಗಳಿಗೆ ತೃಪ್ತಿಯಾ ದೀತು? ಅಂತೇ ಭಗವಾನ್ ವ್ಯಾಸರು ಬೇರೆಬೇರೆ ಪುರಾಣಗಳಲ್ಲಿ ಬೇರೆಬೇರೆ ವಿಧದಿಂದ ಆ ಸರ್ವೋತ್ತಮನಾದ ಶಿವನ ಚರಿತ್ರವನ್ನು ವರ್ಣಿಸಿರುವರು. ಅವರು ಮಹಾ ಭಾರತ ದಲ್ಲಿ ವರ್ಣಿಸಿದ್ದು ಹ್ಯಾಗಂದರೆ—

ವಿವೇಕಶೀಲನೇ, ಜನಮೇಜಯನು ವೈಶಂಪಾಯನನನ್ನು ಕುರಿತು—ಬ್ರಹ್ಮನ್, ಪ್ರಾಚೇತಸನ ಪುತ್ರನಾದ ದಕ್ಷಪ್ರಜಾಪತಿಯು ವೈವಸ್ವತ ಮನ್ವಂತರದಲ್ಲಿ ಅಶ್ವಮೇಧ ಯಜ್ಞವನ್ನು ಮಾಡತೊಡಗಿರಲು, ಆತನ ಯಜ್ಞದ ವಿಧ್ವಂಸವು ಹ್ಯಾಗಾಯಿತೆಂಬುದನ್ನು ನನಗೆ ಹೇಳಿರಿ. ಪಾರ್ವತಿಗೆ ಸಿಟ್ಟು ಬಂದದ್ದನ್ನು ನೋಡಿ ಸರ್ವ ವಿಶ್ವದ ಆತ್ಮನಾದ ಪ್ರಭು ಶಂಕರನಿಗೂ ಸಿಟ್ಟುಬರಲು, ದಕ್ಷನು ಆತನನ್ನು ಸಮಾಧಾನಪಡಿಸಿ ಆತನಪ್ರಸಾದದಿಂದ ತನ್ನ ಯಜ್ಞವನ್ನು ಹ್ಯಾಗೆ ಸಾಂಗಗೊಳಿಸಿದನೆಂಬದನ್ನು ತಿಳಿದುಕೊಳ್ಳುವ ಇಚ್ಛೆಯು ನನಗೆ ಆಗಿದೆ; ಆದ್ದರಿಂದ ಈ ವೃತ್ತಾಂತವು ವರ್ತಿಸಿದಂತೆ ನನಗೆ ಹೇಳಬೇಕು, ಎಂದು ಕೇಳಲು, ವೈಶಂಪಾಯನರು—ಪ್ರಾಚೀನ ಕಾಲದಲ್ಲಿ ಯೋಗಿಗಳು, ಋಷಿಗಳು, ಸಿದ್ಧರು ವಾಸಿಸು ತ್ತಿರುವ ಹಿಮಾಲಯ ಪರ್ವತದ ಪವಿತ್ರಸ್ಥಳದಲ್ಲಿ ಗಂಗೋತ್ರಿಯ ಹತ್ತರ ದಕ್ಷನು ಅಶ್ವಮೇಧ ಯಜ್ಞವನ್ನು ಮಾಡಲಾರಂಭಿಸಿದನು. ಸದಾಚರಣ ಶೀಲರಲ್ಲಿ ಶ್ರೇಷ್ಠನಾದ ಆ ದಕ್ಷ ಪ್ರಜಾಪತಿಯು ಸುತ್ತಲು ಋಷಿಗಳು ಕುಳಿತಿದ್ದು, ಪೃಥ್ವಿಯೊಳಗಿನ ಜನರೂ, ಅಂತರಿಕ್ಷ ದೊಳಗಿನ ಹಾಗು ಸ್ವರ್ಗದೊಳಗಿನ ದೇವತೆಗಳೂ ಕೈ ಜೋಡಿಸಿಕೊಂಡು ಅವನ ಹತ್ತರ

ವಿನಯದಿಂದ ನಿಂತುಕೊಂಡಿದ್ದರು. ದೇವೇಂದ್ರನು ಸರ್ವ ದೇವ-ಪರಿವಾರದೊಡನೆ ಆ ಯಜ್ಞದಲ್ಲಿ ಹವಿರ್ಭಾಗವನ್ನು ಸ್ವೀಕರಿಸುವದಕ್ಕಾಗಿ ಬಂದಿದ್ದನು. ಪಂಚಾಗ್ನಿಯು ಸಾಧನ ಮಾಡುವವರೂ, ಸೋಮಯಜ್ಞ ಮಾಡುವವರೂ, ಧೂಮ್ರಪಾನ ಮಾಡುವವರೂ, ಘೃತಪಾನ ಮಾಡುವವರೂ, ಬ್ರಹ್ಮದೇವನೊಡನೆ ಋಷಿಗಳೂ, ಪಿತರರೂ ಆ ಸಮಾರಂಭಕ್ಕೆ ಬಂದಿದ್ದರು. ಅದರಂತೆ ಸ್ವೇದಜ, ಜಾರಜ, ಅಂಡಜ, ಉದ್ಭಿಜ ಎಂಬ ನಾಲ್ಕು ಕೋಟಿಯ ಪ್ರಾಣಿಗಳೂ ಅಲ್ಲಿಗೆ ಬಂದಿದ್ದವು. ಯಾವತ್ತು ದೇವತೆಗಳಿಗೂ, ದೇವ ಪತ್ನಿಯರಿಗೂ ಅಗತ್ಯದ ಅಮಂತ್ರಣವಿದ್ದದ್ದರಿಂದ ಅವರೆಲ್ಲರೂ ಜಾಜ್ವಲ್ಯವಾದ ತಮ್ಮ ತಮ್ಮ ವಿಮಾನಗಳಲ್ಲಿ ವಿರಾಜಮಾನರಾಗಿದ್ದರು.

ಹೀಗೆ ಯಾವತ್ತು ದೇವಮಂಡಲಿಯು ಅಲ್ಲಿಗೆ ಬಂದಿದ್ದು ಭಗವಾನ್ ಶಂಕರನೊಬ್ಬನು ಬಾರದ್ದರಿಂದ ದಧೀಚಿಋಷಿಯು ಸಿಟ್ಟಾಗಿ ಎದ್ದುನಿಂತು ಗಟ್ಟಿಸಿ—"ಶಂಕರನಿಗೆ ಹವಿರ್ಭಾಗವು ದೊರೆಯದಿರುವ ಸದ್ಯದ ಪ್ರಕರಣವು ಯಜ್ಞವೂ ಅಲ್ಲ, ಧರ್ಮಕಾರ್ಯವೂ ಅಲ್ಲ. ಅಹೋ, ನೀವು ಮೃತ್ಯುವಿನ ಬಲೆಯಲ್ಲಿ ಸಿಕ್ಕಿರುವಿರಿ. ಎಲಎಲಾ! ಎಂಥ ವಿಪರೀತಕಾಲವಿದು! ಪ್ರತ್ಯಕ್ಷ ಮೃತ್ಯುವು ರುದ್ರನ ಕೋಪರೂಪದಿಂದ ಎದುರಿಗೆ ನಿಂತಿರಲು, ಭ್ರಾಂತಿಯ ಮೂಲಕ ಅದು ಇವರಿಗೆ ಹ್ಯಾಗೆ ಕಾಣುತ್ತಿರಲಿಕ್ಕಿಲ್ಲ! ಪ್ರಸ್ತುತದ ಈ ಯಜ್ಞವು ಮಹತ್ವದ್ದಾಗಿದ್ದರೂ, ಅದರಲ್ಲಿ ಒದಗಿಬಂದಿರುವ ದೊಡ್ಡ ಅರಿಷ್ಟವು ಇವರಿಗೆ ಕಾಣಲೊಲ್ಲದು." ಎಂದು ನುಡಿದು, ಆ ಮಹಾ ಯೋಗಿಯಾದ ಋಷಿಯು ಅಂತರ್ದೃಷ್ಟಿಯಿಂದ ನೋಡಲು, ಮಹಾದೇವನೂ, ವರಪ್ರದಾನ ಮಾಡುವ ಪವಿತ್ರ ಪಾರ್ವತಿಯೂ, ಆಕೆಯ ಬಳಿಯಲ್ಲಿ ನಿಂತಿರುವ ಭಗವಾನ್ ನಾರದನೂ ಆತನಿಗೆ ಕಂಡರು. ಅವರನ್ನು ನೋಡಿ ಆ ಋಷಿಗೆ ಅತ್ಯಾನಂದವಾಯಿತು. ಶಂಕರನನ್ನು ಇಲ್ಲಿಗೆ ಕರಿಸಬಾರದೆಂದು ಇವರೆಲ್ಲರು ಆಲೋಚಿಸಿರುವರೆಂದು ತಿಳಿದು ದಧೀಚಿ ಋಷಿಯು ಯಜ್ಞಮಂಟಪವನ್ನು ಬಿಟ್ಟು ಹೋಗುವಾಗ ಎಲ್ಲರನ್ನು ಕುರಿತು——ಸನ್ಮಾನನೀಯರನ್ನು ಸನ್ಮಾನಿಸದವರಿಗೂ, ಅಪೂಜ್ಯರ ಆದರ ಸತ್ಕಾರಮಾಡುವವರಿಗೂ ಕೊಲೆಗಡಕರಿಗೆ ಪ್ರಾಪ್ತವಾಗತಕ್ಕ ದೋಷವು ನಿರಂತರವಾಗಿ ಒದಗುವದು. ನಾನು ಈವರೆಗೆ ಸುಳ್ಳು ಮಾತಾಡಿರುವದಿಲ್ಲ, ಇನ್ನುಮೇಲೆ ಮಾತಾಡುವವನೂ ಅಲ್ಲ. ಇಲ್ಲಿ ಕೂಡಿರುವ ಋಷಿಗಳ ಹಾಗು ದೇವತೆಗಳ ಸಮಕ್ಷ ಸತ್ಯವಚನವನ್ನು ನುಡಿಯುವೆನೇನಂದರೆ——ವಿಶ್ವಂಭರನೂ, ವಿಶ್ವನಾಥನೂ, ಸಕಲಸೃಷ್ಟಿಯ ಉತ್ಪನ್ನಕರ್ತೃವೂ, ಸಕಲಯಜ್ಞಗಳಲ್ಲಿ ಅಗ್ರ ಭೋಕ್ತಾರನೂ ಆದ ಪಶುಪತಿ ಪ್ರಭು ಶಂಕರನು ಈಗ ಇಲ್ಲಿ ಬರುವದನ್ನು ನೀವೆಲ್ಲರೂ ನೋಡಬಹುದು. ಎಂದು ನುಡಿದನು. ಆಗ ದಕ್ಷನು ದಧೀಚಿಯನ್ನು ಕುರಿತು——

ದಕ್ಷ——ಕೈಯಲ್ಲಿ ಶೂಲವನ್ನು ಧರಿಸಿದವರೂ, ತಲೆಯಲ್ಲಿ ಜಟಾಭಾರವುಳ್ಳವರೂ ಆದ ರುದ್ರರು ಒಬ್ಬರನ್ನು ಬಿಟ್ಟು ಹನ್ನೊಂದುಜನರು ಇಲ್ಲಿ ಬಂದಿರುವರು. ಅಂದಬಳಿಕ ಇವರಿಂದ ಹೊರತಾದ ನಿಮ್ಮ ಮಹೇಶ್ವರನು ಯಾರೆಂಬದು ನಮಗೆ ಗೊತ್ತಿಲ್ಲ.

ದಧೀಚಿ——ನೀವೆಲ್ಲರೂ ಒಳಸಂಚುಮಾಡಿರುವದರಿಂದಲೇ ಶಂಕರನನ್ನು ಯಜ್ಞಕ್ಕೆ

ಕರೆದಿರುವದಿಲ್ಲ. ನನಗಂತು ಶಂಕರನಹೊರತು ಶ್ರೇಷ್ಠನಾದ ದೇವನಿದ್ದದ್ದು ಕಂಡುಬರುವದಿಲ್ಲ; ಆದ್ದರಿಂದ ದಕ್ಷನ ಈ ಯಜ್ಞವು ಕೊನೆಗಾಣುವದಿಲ್ಲವೆಂದು ನಂಬಿಗೆಯಿಂದ ನಾನು ಹೇಳುವೆನು.

ದಕ್ಷನು (ಮನಸ್ಸಿಗೆ ನಡುವಂತೆ)—ಈ ಸುವರ್ಣಪಾತ್ರದಲ್ಲಿ ಯಜ್ಞ ನಾರಾಯಣನಿಗಾಗಿ ವಿಧ್ಯುಕ್ತವಾಗಿ ಅಭಿಮಂತ್ರಿಸಿರುವ ಎಲ್ಲ ಹವಿರ್ಭಾಗವನ್ನು ಯಜ್ಞಾಧಿಪತಿಯಾದ ಜಗನ್ನಿಯಾಮಕ ಸರ್ವವ್ಯಾಪಕ-ಪ್ರಭು ವಿಷ್ಣುವಿಗೇ ಅರ್ಪಿಸುವೆನು! ಯಾಕಂದರೆ ಯಾವತ್ತು ಯಜ್ಞಗಳಲ್ಲಿ ಆತನಿಗೇ ಆಮಂತ್ರಣವಿರುವದು.

ದಕ್ಷನ ಈ ಮಾತುಗಳನ್ನು ಕೇಳಿ ಇತ್ತ ಪಾರ್ವತಿಯು ಅಪಮಾನದ ದುಃಖದಿಂದ ಕ್ಷುಬ್ಧಳಾಗಿ—"ನನ್ನ ಪತಿಯಾದ ಭಗವಾನ್ ಅಚಿಂತ್ಯ ಶಂಕರನಿಗೆ ಯಜ್ಞದಲ್ಲಿಯ ಅರ್ಧ ಭಾಗವಲ್ಲದಿದ್ದರೂ ಮೂರರಲ್ಲಿ ಒಂದು ಭಾಗವಾದರೂ ಸಿಗುವದಕ್ಕಾಗಿ ನಾನು ಯಾವದಾನ ಮಾಡಲಿ, ಯಾವವ್ರತವನ್ನು ಕೈಕೊಳ್ಳಲಿ, ಯಾವತಪಸ್ಸನ್ನು ಆಚರಿಸಲಿ" ಎಂದು ನುಡಿದಾಗ ಭಗವಾನ್ ಶಂಕರನು ಪ್ರಸನ್ನಮುದ್ರೆಯಿಂದ ಆಕೆಯನ್ನು ಕುರಿತು—" ಎಲೈ ದೇವಿಯೇ, ನೀನು ನನ್ನನ್ನು ಯಥಾರ್ಥವಾಗಿ ತಿಳಿಯುವದಿಲ್ಲವೆನ್ನುವಹಾಗೆ ತೋರುತ್ತದೆ; ಯಾಕಂದರೆ, ಎಲೈ ಕೃಶಾಂಗಿಯೇ, ನನ್ನಂಥ ಯಜ್ಞಾಧೀಶನ ವಿಷಯವಾಗಿ ಮಾತಾಡುವಾಗ ಹ್ಯಾಗೆ ಮಾತಾಡಬೇಕೆಂಬದೂ ನಿನಗೆ ತಿಳಿದಿರುವದಿಲ್ಲ! ಎಲೈ ವಿಶಾಲಾಕ್ಷಿಯೇ, ಏಕಾಗ್ರ ಚಿತ್ತದಿಂದ ಧ್ಯಾನಮಾಡಲಾರದವರೂ, ಪಾಪಿಷ್ಠರೂ ನನ್ನನ್ನು ತಿಳಿಯುವದಿಲ್ಲವೆಂಬದು ನನಗೆ ಗೊತ್ತಿರುವದು. ನೀನು ಅಂಥ ಜನರೊಳಗಿನವಳಲ್ಲದಿದ್ದರೂ ನನ್ನ ಸಾಮರ್ಥ್ಯವನ್ನು ಅರಿಯದ ಜನರಂತೆ ನನಗೆ ಯಜ್ಞಭಾಗವು ಹ್ಯಾಗೆ ದೊರೆತೀತೆಂಬ ಯೋಚನೆಗೆ ಒಳಗಾಗಿರುವೆಯಲ್ಲ! ನಿನ್ನ ಮಾಯೆಯಿಂದ ಸರ್ವತ್ರಿಭುವನವೂ, ಇಂದ್ರಾದಿ ದೇವತೆಗಳೂ ಸಂಪೂರ್ಣಮೋಹಿತರಾಗುತ್ತಿರಲು, ಇಂದು ನೀನೇ ಹ್ಯಾಗೆ ಮೋಹವಶಳಾದೆ! ಪ್ರಿಯೇ, ಯಜ್ಞದಲ್ಲಿ ಮಾಡುವ ಸ್ತೋತ್ರವು ನನ್ನ ಸ್ತೋತ್ರವೇ ಆಗಿರುವದು; ಅದರಂತೆ ಸಾಮಗಾಯನಮಾಡುವರು ಅನ್ನುವ ರಥಂತರವು ನನ್ನನ್ನು ಉದ್ದೇಶಿಸಿಯೇ ಇರುವದು. ವೇದ ಪಾರಗರು ಅಥವಾ ಬ್ರಹ್ಮಜ್ಞ ಬ್ರಾಹ್ಮಣರು ನನ್ನ ಪ್ರೀತ್ಯರ್ಥವಾಗಿಯೇ ಯಜ್ಞವನ್ನು ಮಾಡುವರು; ಋತ್ವಿಜರಾದರೂ ನನಗೇ ಹವಿರ್ಭಾಗವನ್ನು ಅರ್ಪಿಸುವರು" ಎಂದು ಹೇಳಿದನು; ಅದರಿಂದ ಪಾರ್ವತಿಗೆ ಸಮಾಧಾನವಾಗಲಿಲ್ಲ. ಆಕೆಯು ಉಪರೋಧಿಕವಾಗಿ ಪತಿಯನ್ನು ಕುರಿತು—ತೀರ ಸಾಮಾನ್ಯ ಜನರಾದರೂ ಹೆಂಡಿರಮುಂದೆ ತಮ್ಮ ಸ್ತೋತ್ರ ಮಾಡಿಕೊಳ್ಳುವರು; ಮತ್ತು ತಮ್ಮ ಪೌರುಷವನ್ನೇ ಹೇಳಿಕೊಳ್ಳುವರು ಅನ್ನಲು, ಶಂಕರನು—ಎಲೈ ದೇವಿಯೇ, ನಾನು ವ್ಯರ್ಥವಾದ ಪೌರುಷವನ್ನು ಹೇಳಿಕೊಳ್ಳುವದಿಲ್ಲ. ಕೃಶಕಟಿಯೇ, ಈಗ ನಾನು ಯಜ್ಞದ ಸಮಾಚಾರವನ್ನು ತಕ್ಕೊಳ್ಳುವದಕ್ಕಾಗಿ ಏನೇನು ಮಾಡುವೆನೆಂಬದನ್ನು ಸುಮ್ಮನೆ ನೋಡುತ್ತಾದರೂ ಕುಳಿತುಕೊಳ್ಳುವೆಯುಷ್ಟೆ?

ಈ ಮೇರೆಗೆ ಪ್ರಾಣಕ್ಕಿಂತಲೂ ಪ್ರಿಯಳಾದ ಲಾವಣ್ಯವತೀ ಪತ್ನಿಯನ್ನು ಕುರಿತು

ನುಡಿದು ಶಂಕರನು, ವಿಕ್ರಾಳವೂ ಲೋಕವನ್ನು ಗದಗುಟ್ಟಿ ನಡುಗಿಸುವಂತಹದೂ ಆದ ದ್ದೊಂದು ಭೂತವನ್ನು ತನ್ನ ಮುಖದಿಂದ ಉತ್ಪನ್ನ ಮಾಡಿ ಅದನ್ನು ಕುರಿತು—"ನೀನು ದಕ್ಷನ ಯಜ್ಞವನ್ನು ವಿಧ್ವಂಸಮಾಡಿಬಿಡು" ಎಂದು ಆಜ್ಞಾಪಿಸಿದನು. ಆಗ ಮಹಾದೇವನ ಮುಖದಿಂದ ಉತ್ಪನ್ನವಾಗಿದ್ದ, ಹಾಗು ಸಿಂಹದಂತೆ ಪರಾಕ್ರಮವುಳ್ಳ ಆ ಭೂತವು ಪಾರ್ವತಿಯ ಸಿಟ್ಟನ್ನು ಶಾಂತ ಮಾಡುವದಕ್ಕಾಗಿ ದಕ್ಷನ ಯಜ್ಞವನ್ನು ನಾಶಗೊಳಿಸಲು ಹೊರಟಿತು. ತನ್ನ ಕೃತಿಯ ಪರಿಣಾಮವನ್ನು ನೋಡುವದಕ್ಕಾಗಿ ಸಿಟ್ಟಿನಿಂದ ಕೆಂಪೇರಿದ ಪಾರ್ವತಿಯೂ ಮಹಾಕಾಲಿಯ ರೂಪದಿಂದ, ತನ್ನ ಕಾರ್ಯಕ್ಕೆ ಪರಮೇಶ್ವರನ ಸಮ್ಮತಿಯಿರುವದೆಂದು ತಿಳಿದು ಆತನಿಗೆ ನಮಸ್ಕರಿಸಿ ಆ ಭೂತದೊಡನೆ ಹೊರಟಳು. ಆ ಉತ್ಪನ್ನ ಮಾಡಿದ ಭೂತದ ಮೈಯಲ್ಲಿ ಪ್ರಚಂಡ ಸಾಮರ್ಥ್ಯವಿದ್ದು, ಶೌರ್ಯದಲ್ಲಿಯೂ, ಸ್ವರೂಪದಲ್ಲಿಯೂ ಆ ಭೂತನು ಶಂಕರನಿಗೆ ಸರಿಯಾದವನಿದ್ದನು. ಅಪಾರವಾದ ಸಾಮರ್ಥ್ಯವುಳ್ಳ ಆತನ ತೇಜಸ್ಸು, ಶೌರ್ಯ, ಪರಾಕ್ರಮಗಳೂ ಅಪಾರವಾಗಿಯೇ ಇದ್ದವು. ಪಾರ್ವತಿಯ ಕ್ರೋಧವನ್ನು ಶಾಂತಮಾಡಿದ ಆತನ ಹೆಸರು ವೀರಭದ್ರನು. ಈ ವೀರಭದ್ರನು ತನ್ನ ಅಂಗದೊಳಗಿನ ರೋಮರಂಧ್ರಗಳಿಂದ ರುದ್ರನಂತೆಯೇ ಪರಾಕ್ರಮಿಗಳೂ, ಭಯಂಕರರೂ ಆದ ಭೂತಗಳ ಹಿಂಡಿಗೆ ಹಿಂಡು ನಿರ್ಮಾಣ ಮಾಡಿದನು. ಈ ಪ್ರಚಂಡ ಹಿಂಡಿನೊಳಗಿನ ಗಣಗಳಿಗೆ "ರೌಮ್ಯ" ಎಂಬ ಹೆಸರು ಇತ್ತು. ಆ ವಿಕ್ರಾಳ ಸ್ವರೂಪದ ವಿಶಾಲದೇಹದ ಸಾವಿರಾರು ಗಣಗಳು ದಕ್ಷಯಜ್ಞದ ಉಚ್ಛೇದ ಮಾಡುವದಕ್ಕಾಗಿ ವೇಗದಿಂದ ಯಜ್ಞಮಂಟಪಕ್ಕೆ ಮುಗಿಬಿದ್ದರು. ಅವರು ತಮ್ಮ ಕರ್ಕಶವಾದ ಕೂಗುಗಳಿಂದ ಆಕಾಶವನ್ನು ತುಂಬಿಬಿಟ್ಟರು. ಆ ಭಯಂಕರ ಧ್ವನಿಯಿಂದ ಸ್ವರ್ಗದೊಳಗಿನ ದೇವತೆಗಳೂ ಅಂಜಿದರು; ದೊಡ್ಡ ದೊಡ್ಡ ಪರ್ವತಶಿಲೆಗಳು ಸೀಳಿದವು; ಭೂಕಂಪಗಳಾದವು; ಭಯಂಕರವಾದ ಝುಂಝಾವಾತವು ಬೀಸತೊಡಗಿತು; ಸಮುದ್ರವು ಕ್ಷೋಭಿಸಿತು; ಅಲ್ಲಲ್ಲಿ ಹೊತ್ತಿಸಿದ ಅಗ್ನಿಗಳು ನಂದಿಹೋದವು; ಸೂರ್ಯನು ಪ್ರಕಾಶಹೀನನಾದನು; ಗ್ರಹನಕ್ಷತ್ರಗಳ ತೇಜವು ಅಡಗಿಹೋಯಿತು; ದೇವತೆಗಳು—ಮನುಷ್ಯರು—ಋಷಿಗಳು ಇವರ ಮುಖಗಳು ಕಾಂತಿಗುಂದಿ ಕಪ್ಪಿಟ್ಟವು!

ಈ ಮೇರೆಗೆ ಪೃಥ್ವಿಯಲ್ಲಿ ಅಂಧಕಾರ ಮುಸುಗಿರಲು, ಅಪಮಾನ ಹೊಂದಿದ ಆ ರುದ್ರಗಣದವರು ಯಜ್ಞಮಂಟಪಾದಿಗಳನ್ನು ಸುಟ್ಟುಸೂರೆಗೊಳ್ಳಹತ್ತಿದರು; ಕೆಲವರು ಯಜ್ಞಮಂಟಪದೊಳಗಿನ ಯೂಪವನ್ನು ಕಿತ್ತು ಅದರಿಂದಲೇ ಸಿಕ್ಕವರನ್ನು ಹಣಿಯಹತ್ತಿದರು; ಕೆಲವರು ಕೈಗೆ ಸಿಕ್ಕವರನ್ನು ತುಂಡರಿಸಿ ಚಲ್ಲಹತ್ತಿದರು. ವಾಯುವಿನಂತೆ ವೇಗಶಾಲಿಗಳೂ, ಮನಸ್ಸಿನಂತೆ ಚಂಚಲರೂ ಆದ ಆ ರೌಮ್ಯಗಣಗಳು ಇತ್ತಿಂದತ್ತ ಅತ್ತಿಂದಿತ್ತ ಸಂಚರಿಸುತ್ತ ಯಜ್ಞಪಾತ್ರಗಳನ್ನು ಒಡೆದು ಚೂರು ಮಾಡಹತ್ತಿದರು. ಅಲ್ಲಿ ನಾನಾ ಪ್ರಕಾರದ ಷಡ್ರಸಪಕ್ವಾನ್ನಗಳು, ರುಚಿಕರವಾದ ಪೇಯಗಳು ರಾಶಿಗೆರಾಶಿಯಾಗಿ ಒಟ್ಟಿದ್ದವು; ಅವನ್ನೆಲ್ಲ ರುದ್ರಗಣವು ಕೆಡಿಸಿ ಹಾಳುಮಾಡಿಬಿಟ್ಟಿತು! ಚಲ್ಲಿದ ಹಾಲು ಸರುವುಗಟ್ಟಿ ಹರಿಯಹತ್ತಿತು. ಇವಲ್ಲದೆ ಅಲ್ಲಿ ಮಾಂಸದ ರುಚಿಕರವಾದ ನಾನಾತರದ ಪಕ್ವಾ

ನ್ನಗಳಿದ್ದವು- ಅವುಗಳಲ್ಲಿ ರುಚಿಕರವಾದವುಗಳ, ಹಾಗು ಸುರಿಯಲಿಕ್ಕೆ ಬರುವವುಗಳ ಸಮಾಚಾರವನ್ನು ರುದ್ರಗಣವು ಚೆನ್ನಾಗಿ ತೆಗೆದುಕೊಂಡಿತು. ಉಳಿದ ಅನ್ನವನ್ನು ಅದು ನಾಲ್ಕೂ ಕಡೆಗೆ ಬಿಸುಟಬಿಟ್ಟಿತು. ಶಂಕರನ ಕ್ರೋಧಸಾಮರ್ಥ್ಯದಿಂದ ಆ ಗಣಗಳ ಪರ್ವತಪ್ರಾಯಶರೀರಗಳು ಪ್ರಳಯಕಾಲದ ನಿಗಿನಿಗಿ ಕೆಂಡದಂತೆ ತೀವ್ರತರವಾಗಿದ್ದವು! ಅವರು ದೇವಾದಿಕರ ಸೈನ್ಯದದೊಳಹಾರಿಸಿ ಅವರ ಕೈಕಾಲುಗೆಡಿಸಿಬಿಟ್ಟರು! ಅವರು ಹಲವು ಬಗೆಯ ವಿಚಿತ್ರರೂಪಗಳನ್ನು ಧರಿಸಿ ಕುಣಿಯಹತ್ತಿದರು; ಜಿಗಿದಾಡಹತ್ತಿದರು- ಈ ಸಂಭ್ರಮದಲ್ಲಿ ಅವರು ದೇವತೆಗಳ ಹೆಂಡಿರನ್ನು ಅತ್ತಿತ್ತ ಒಗೆದಾಡಹತ್ತಿದರು. ಯಾವತ್ತು ದೇವತೆಗಳು ದಕ್ಷನ ಯಜ್ಞವನ್ನು ಉತ್ತಮರೀತಿಂದ ರಕ್ಷಿಸಿದ್ದರೂ, ಆ ಯಜ್ಞವನ್ನು ಈ ವಿಕ್ರಾಳರುದ್ರಗಣವು ಶಂಕರನ ಕೋಪಬಲದಿಂದ ನಿಶ್ಶೇಷವಾಗಿ ಸುಟ್ಟುಬಿಟ್ಟಿತು; ಮತ್ತು ವೀರಭದ್ರನು ಪ್ರಾಣಿಮಾತ್ರಗಳ ಅಂತಃಕರಣದಲ್ಲಿ ನಡುಗುಹುಟ್ಟುವಂತೆ ಪ್ರಚಂಡವಾಗಿ ಗರ್ಜಿಸಿ ಯಜ್ಞದ ಶಿರಸ್ಸನ್ನು ಧಡದಿಂದ ಬೇರೆ ಮಾಡಿದನು! ಆಗ ಆ ವೀರೇಶನು ಆನಂದದಿಂದ ಗಟ್ಟಿಗಟ್ಟಿಸಿ ಒದರುತ್ತ ಕುಣಿಯಹತ್ತಲು, ಬ್ರಹ್ಮನೇ ಮೊದಲಾದ ಯಾವತ್ತು ದೇವತೆಗಳೂ, ದಕ್ಷಪ್ರಜಾಪತಿಯೂ ಆ ವೀರಭದ್ರನ ಮುಂದೆ ಕೈಜೋಡಿಸಿ ನಿಂತುಕೊಂಡು ಆತನನ್ನು ಕುರಿತು—"ತಾವು ಯಾರು?" ಎಂದು ಪ್ರಶ್ನ ಮಾಡಿದರು. ಆಗ ವೀರಭದ್ರನು—ನಾನು ರುದ್ರನಲ್ಲ, ಪಾರ್ವತಿಯೂ ಅಲ್ಲ, ಅಥವಾ ಯಜ್ಞದಲ್ಲಿ ಹವಿರ್ಭಾಗವನ್ನು ತಕ್ಕೊಳ್ಳುವವನೂ ಅಲ್ಲ; ಆದರೆ ಪಾರ್ವತಿಗೆ ಸಿಟ್ಟು ಬಂದದ್ದನ್ನು ನೋಡಿ ವಿಶ್ವಾತ್ಮನಾದ ಪ್ರಭುಶಂಕರನಿಗೆ ಸಿಟ್ಟು ಬರಲು, ಆ ಶಂಕರನ ಕ್ರೋಧದಿಂದ ನಾನು ಹುಟ್ಟಿರುವೆನು. ನನಗೆ ವೀರಭದ್ರನೆನ್ನುವರು. ನಿನ್ನ ಯಜ್ಞದ ಸಂಹಾರ ಮಾಡುವದಕ್ಕಾಗಿ ನಾನು ಬಂದಿರುವೆನೆಂದು ತಿಳಿದುಕೋ. ನಾನು ದೊಡ್ಡ ದೊಡ್ಡ ಶ್ರೇಷ್ಠ ಬ್ರಾಹ್ಮಣರನ್ನು ನೋಡುವದಕ್ಕಾಗಿ ಇಲ್ಲಿಗೆ ಬಂದಿರುವದಿಲ್ಲ; ಅಥವಾ ಯಜ್ಞ ಕೌತುಕ. ವನ್ನೂ ನೋಡುವದಕ್ಕಾಗಿ ಬಂದಿರುವದಿಲ್ಲ. ಈ ಸ್ತ್ರೀಯ ಹೆಸರು ಭದ್ರಕಾಳಿಯು ಈಕೆಯು ಪಾರ್ವತಿಯ ಕ್ರೋಧದಿಂದ ಉತ್ಪನ್ನವಾಗಿರುವಳು. ಯಾವತ್ತು ದೇವತೆಗಳ ಪ್ರಭುವಾದ ಶಂಕರನು ಕಳಿಸಿದ್ದರಿಂದ ನಾವು ಇಲ್ಲಿಗೆ ಬಂದಿರುವೆವು- ಆದರೆ ಎಲೈ ವಿಪ್ರೇಂದ್ರನೇ, ನೀನು ಉಮಾಪತಿಯಾದ ಶಂಕರನಿಗೆ ಶರಣುಹೋಗು; ಯಾಕಂದರೆ ಶಂಕರನ ಸಿಟ್ಟು ಕೆಲಸಕ್ಕೆ ಬಂದೀತು; ಆದರೆ ಇತರ ದೇವತೆಗಳ ವರಪ್ರದಾನವನ್ನು ಸಂಪಾದಿಸುವದರಲ್ಲಿ ಅರ್ಥವಿಲ್ಲ!

ವೀರಭದ್ರನ ಈ ಭಾಷಣವನ್ನು ಕೇಳಿ ಸದಾಚರಣಸಂಪನ್ನರಲ್ಲಿ ಶ್ರೇಷ್ಠನಾದ ದಕ್ಷನು ಶಂಕರನಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ಸ್ತುತಿಸಿದನೆಂತೆಂದರೆ—ಶಾಶ್ವತನೂ, ಧ್ರುವನೂ, ಅವ್ಯಯನೂ, ಯಾವತ್ತು ವಿಶ್ವದ ಪತಿಯೂ ಆದ ಮಹಾತ್ಮಶಂಕರನನ್ನು ನಾನು ಶರಣು ಹೊಕ್ಕಿದ್ದೇನೆ- ಹೇ ದೇವದೇವೇಶಾ, ದೇವಶತ್ರುಗಳ ಸೈನ್ಯವನ್ನು ಸಂಹರಿಸುವವನೇ, ಇಂದ್ರನ ಸೈನ್ಯಕ್ಕೆ ಆಧಾರಭೂತನಾದವನೇ, ದೇವದಾನವ ಪೂಜಿತನೇ, ನಿನಗೆ ನಮಸ್ಕಾರವು. ಹೇ ದೇವಾಧಿದೇವಾ, ಗಾಯತ್ರಿಯೂ ನೀನೇ; ಸೂರ್ಯನೂ ನೀನೇ;

ಚತುರ್ಮುಖ ಬ್ರಹ್ಮನೂ ನೀನೇ, ದೇವೇಂದ್ರನೂ ನೀನೇ. ಹೇ ಮಹಾಮೂರ್ತೇ, ಹಕ್ಕಿಯಲ್ಲಿ ಯಾವತ್ತು ಆಕಳುಗಳು ಇರುವಂತೆ ನಿನ್ನ ಮೂರ್ತಿಯಲ್ಲಿ ಯಾವತ್ತುದೇವತೆಗಳು ಇರುವರು. ನಿನ್ನ ಶರೀರದಲ್ಲಿ ನನಗೆ ಸೋಮ, ಅಗ್ನಿ, ವರುಣ, ಆದಿತ್ಯ, ಅದರಂತೆಯೇ ವಿಷ್ಣು, ಬ್ರಹ್ಮದೇವ, ಬೃಹಸ್ಪತಿ ಇವರೆಲ್ಲರೂ ಕಾಣಿಸುವರು. ಭಗವನ್, ಯಾವತ್ತು ಸತ್ಯ–ಮಿಥ್ಯಾ ಸಂಗತಿಗಳ ಕಾರ್ಯ, ಕಾರಣ, ಕ್ರಿಯಾ, ಕರಣ(ಕ್ರಿಯೆಯ ಸಾಧನ)ಗಳು ನೀನೇ ಆಗಿರುತ್ತೀ-ಎಲ್ಲದರ ಉಗಮವೂ–ನಾಶವೂ ನೀನೇ ಆಗಿರುತ್ತೀ. ನೀನೇ ಭವನು, ಅಂದರೆ ಸರ್ವರ ಆದಿಕಾರಣನೂ, ಶರ್ಮನು, ಅಂದರೆ ಸಂಹಾರಕರ್ತೃವೂ, ರುದ್ರನು, ಅಂದರೆ ಪಾಪಹರ್ತೃವೂ–ವರದಾತೃವೂ ಆಗಿರುತ್ತೀ. ಇಂಥ ನಿನಗೆ ನನ್ನ ನಮಸ್ಕಾರಗಳು. ಎಲೈ ಯಜ್ಞದೊಳಗಿನ ಹೋತೃರೂಪನೇ, ಮಂತ್ರರೂಪನೇ, ಶುಕ್ಲಧ್ವಜನೇ, ನಿನಗೆ ನನ್ನ ನಮಸ್ಕಾರವು. ಎಲೈ ವಯೋಜ್ಯೇಷ್ಠನೇ, ಎಲೈ ಗುಣಶ್ರೇಷ್ಠನೇ, ಎಲೈ ಇಂದ್ರಪ್ರಮನನೇ, ಎಲೈ ಕಾಲನಿಯಂತೃವೇ, ಎಲೈ ಸಮರ್ಥನೇ ನಿನಗೆ ನಮಸ್ಕಾರವು. ಎಲೈ ಧರ್ಮವೃದ್ಧಿಕರಾ, ನಂದಿರೂಪಾ, ಧರ್ಮಮೂರ್ತೇ ನಿನಗೆ ನಮಸ್ಕಾರವು. ಎಲೈ ಶಾಂತರೂಪನೇ, ಉಗ್ರರೂಪನೇ, ಅತಿ ಘೋರರೂಪನೇ ನಿನಗೆ ನಮಸ್ಕಾರವು. ಎಲೈ ಶಿವನೇ, ಶಾಂತನೇ, ಶಾಂತತಮನೇ ನಿನಗೆ ನನ್ನ ನಮಸ್ಕಾರವು. ಎಲೈ ತಾರಕಾ, ಯಜ್ಞೋಪಕಾರಕಾ, ಯಜ್ಞರೂಪಾ, ಯಜಮಾನರೂಪಾ, ಬ್ರಾಹ್ಮಣಮುಖತೃಪ್ತಾ, ಅಗ್ನಿಮುಖಾ ನಿನಗೆ ನನ್ನ ನಮಸ್ಕಾರವು. ಶಂಕರಾ, ಚತುರ್ವಿಧಪುರುಷಾರ್ಥಗಳನ್ನು ವರ್ಣಿಸುವವನು ನೀನೇ ಇರುತ್ತೀ. ಸಾಂಖ್ಯಪ್ರಣೇತೃವಾದ ಕಪಿಲನು ನೀನೇ ಇರುತ್ತೀ. ಹಾಗು ವೇದಾಂತ, ಧ್ಯಾನ ಇವುಗಳ ದರ್ಶಕನೂ ನೀನೇ ಇರುತ್ತೀ. ನೀನೇ ಅನ್ನವು, ನೀನೇ ಅನ್ನ ಉಣ್ಣುವವನು, ನೀನೇ ಭೋಕ್ತೃವು, ನೀನೇ ಅನ್ನದಾತೃವು, ನೀನೇ ಅನ್ನವನ್ನು ಭಕ್ಷಿಸುವವನು, ನೀನೇ ಅನ್ನ ನಿರ್ಮಾಣಕರ್ತೃವು, ನೀನೇ ಅನ್ನ ಪಾಕಕರ್ತೃವು, ನೀನೇ ಪಕ್ವಾನ್ನಗಳನ್ನು ಉಣ್ಣುವವನು, ನೀನೇ ಪ್ರಾಣವಾಯುವು, ನೀನೇ ಜಠರಾನಲನು ಇಂಥ ನಿನಗೆ ನನ್ನ ನಮಸ್ಕಾರಗಳು. ದೇವದೇವೇಶಾ, ಜರಾಯುಜ, ಸ್ವೇದಜ, ಅಂಡಜ, ಉದ್ಭಿಜ ಎಂಬ ಚತುರ್ವಿಧ ಪ್ರಾಣಿಗಳೂ ನೀನೇ ಇರುವೆ. ಬ್ರಹ್ಮಜ್ಞರಲ್ಲಿ ಶ್ರೇಷ್ಠನೇ, ಬ್ರಹ್ಮಜ್ಞರು ನಿನ್ನನ್ನು ಬ್ರಹ್ಮವೆಂತಲೇ ಕರೆಯುವರು. ಚತುರ್ವೇದಗಳೂ ನೀನೇ ಇರುತ್ತೀ. ವೇದಗಳೂ, ಉಪನಿಷತ್ಸಮೂಹಗಳೂ ನಿನ್ನ ಸ್ತೋತ್ರವನ್ನೇ ಮಾಡುವವು. ದೇವಾ, ಬ್ರಾಹ್ಮಣ–ಕ್ಷತ್ರಿಯ–ವೈಶ್ಯ–ಶೂದ್ರವರ್ಣಗಳೂ, ಈ ನಾಲ್ಕು ವರ್ಣಗಳಿಂದ ಅಧಮವಾದ, ಅಂದರೆ ವರ್ಣಸಂಕರದಿಂದಾದ ಅಧಮವರ್ಣವೂ ನೀನೇ ಆಗಿರುತ್ತೀ. ತ್ರಿಸುಪರ್ಣದೊಳಗಿನ ಪ್ರಸಿದ್ಧನು ನೀನೇ. ಯಜುರ್ವೇದಿಗಳ ಶತರುದ್ರೀಯದೊಳಗಿನ ಉಪಾಸ್ಯಬ್ರಹ್ಮವು ನೀನೇ. ಶುದ್ಧರೂಪದಿಂದ ಜೀವನೂ ನೀನೇ, ಕೀವಿನಂತೆ ಕೊಳೆಯುವ ದೇಹವೂ ನೀನೇ. ಈ ಸಂಸಾರರೂಪನದಿಯಲ್ಲಿ ತಿರುಗಾಡುವ ಜೀವರೂಪ ಮತ್ಸ್ಯವು ನೀನೇ; ವಾಸನಾಜಾಲದಲ್ಲಿ ತೊಡಗಿರುವ ಜೀವನೂ ನೀನೇ; ಹೀಗಿದ್ದರೂ ಯಾರಿಗೂ ಆಕಲನಮಾಡಲುಬಾರದವನು ನೀನೇ; ದೇವಾ, ಈ ಬಂಧವನ್ನು ಲೀಲಾಮಾ

ತ್ರುದಿಂದ ಸ್ವೀಕರಿಸಿರುತ್ತೀ; ಅಂತೇ ನಿನಗೆ "ಕೇಲಿಕಲ"ನೆನ್ನುವರು. ಸ್ವಾಹಾ ನೀನೇ; ಸ್ವಧಾ ನೀನೇ; ವಷಟ್ಕಾರವೂ ನೀನೇ; ನಮಸ್ಕಾರವೂ ನೀನೇ; ನಮೋನಮಃ ಎಂಬ ಲೌಕಿಕದ್ವಿರುಕ್ತಿ ನಮಸ್ಕಾರವೂ ನೀನೇ, ಧಾತಾ ಅಂದರೆ ಆದಿಕರ್ತೃವಿಷ್ಣುವು ನೀನೇ; ವಿಧಾತಾ, ಅಂದರೆ ಬ್ರಹ್ಮನೂ ನೀನೇ. ದೀಕ್ಷಿತನು ನೀನೇ; ಅದೀಕ್ಷಿತನೂ ನೀನೇ. ನೀನು ನಂದಿಮುಖನೂ, ಭೀಮಮುಖನೂ, ಸುಮುಖನೂ, ದುರ್ಮುಖನೂ, ಅಮುಖನೂ, ಬಹುಮುಖನೂ ಆಗಿರುತ್ತೀ. ನೀನು ತ್ರೈಲೋಕ್ಯ ರಕ್ಷಕನಿರುತ್ತೀ. ನಿನಗೆ ಗೋವಿಂದ ನೆಂತಲೂ ಅನ್ನುವರು. ಮೃಗರೂಪದಿಂದ ಓಡಿಹೋಗುವ ನನ್ನ ಯಜ್ಞಕ್ಕೆ ವ್ಯಾಧರೂ ಪನಾಗಿರುತ್ತೀ. ಸ್ತ್ರೀಯೂ, ಪುರುಷನೂ, ನಪುಂಸಕನೂ ನೀನೇ ಇರುತ್ತೀ. ಹೇ ಶಿವಾ, ನಿನ್ನ ನಿಜವಾದ ದೊಡ್ಡಿಸ್ತನವನ್ನು ಅರಿತುಕೊಳ್ಳಲು, ಬ್ರಹ್ಮ-ವಿಷ್ಣುಗಳೂ, ಒಳ್ಳೇ ಪುರಾತನ ಪುರಾತನ ಋಷಿಗಳೂ ಸಮರ್ಥರಲ್ಲವು! ಹೇ ಶಂಕರಾ, ನಿನ್ನ ಅತ್ಯಂತ ಸೂಕ್ಷ್ಮ ರೂಪಗಳಂತು ನನ್ನ ದೃಷ್ಟಿಗೋಚರವೇ ಆಗುವದಿಲ್ಲ; ಆದ್ದರಿಂದ ನನ್ನ ಪ್ರಾರ್ಥನೆ ಯಿಷ್ಟೇ, ನನ್ನನ್ನು ಸಂಕಟದಿಂದ ಮುಕ್ತಮಾಡು. ತಂದೆಯು ಹೊಟ್ಟೆಯ ಮಗನನ್ನು ರಕ್ಷಿಸುವಂತೆ, ನನ್ನನ್ನು ರಕ್ಷಿಸು. ಎಲೈ ನಿಷ್ಪಾಪನೇ, ನಿನಗೆ ನನ್ನ ನಮಸ್ಕಾರಗಳು; ನನ್ನನ್ನು ರಕ್ಷಿಸು. ಭಗವಂತಾ, ನೀನು ಭಕ್ತವತ್ಸಲನಾಗಿದ್ದು, ನಾನು ನಿನ್ನ ಅಖಂಡ ಭಕ್ತ ನಿರುವೆನು. ಸಹಸ್ರಾವಧಿ ಪುರುಷರನ್ನು ಅಜ್ಞಾನದ ಆವರಣದಲ್ಲಿ ಸಿಲುಕಿಸಿ ತಾನೊಬ್ಬನೇ ಅಜ್ಞೇಯನಾಗಿರುವವನೂ, ಅನೇಕ ವಿಧ ಕಾಮರೂಪ ಸಮುದ್ರವನ್ನು ದಾಟಿ ಆಚೆಯ ದಂಡೆಗೆ ಮುಟ್ಟಿದವರಿಗೇ ದೃಷ್ಟಿಗೆ ಬೀಳುವವನೂ ಆದ ಸದಾಶಿವನು ನನ್ನನ್ನು ಯಾವಾ ಗಲೂ ರಕ್ಷಿಸಲಿ. ನಿದ್ರಾರಹಿತರೂ, ಪ್ರಾಣವಾಯುವಿನ ವ್ಯಾಪಾರವನ್ನು ಸ್ವಾಧೀನ ಪಡಿಸಿಕೊಂಡವರೂ, ಸತ್ವಪೂರ್ಣರಿದ್ದು ಜಿತೇಂದ್ರಿಯರೂ ಆದ ಯೋಗಿಗಳು ಸಮಾಧಿ ಕಾಲದಲ್ಲಿ ಕೇವಲ ಜ್ಯೋತಿರೂಪದಿಂದ ನೋಡುವ ಆ ಯೋಗಾತ್ಮನಿಗೆ ನನ್ನ ನಮಸ್ಕಾ ರಗಳು. ಯಾವ ರುದ್ರಗಣಗಳು ಸರ್ವದಾ ಪ್ರಾಣಿಗಳ ದೇಹದಲ್ಲಿ ಸೇರಿ ಸ್ವತಃ ತಾವು ಅಳದೆ ಜೀವರನ್ನು ಅಳಿಸುವವೋ, ಸ್ವತಃ ತಾವು ನಗದೆ ಜೀವರನ್ನು ನಗಿಸುವವೋ ಆ ರುದ್ರಗಣಗಳನ್ನು ನಾನು ನಿತ್ಯದಲ್ಲಿ ನಮಸ್ಕರಿಸುವೆನು. ಗಣತಿಯೂ, ಪ್ರಮಾಣವೂ, ರೂಪವೂ ಇಲ್ಲದ ಅಸಂಖ್ಯೇಯ ಗುಣಗಳ ರುದ್ರರಿಗೆ ನಿತ್ಯದಲ್ಲಿ ನನ್ನ ನಮಸ್ಕಾರಗಳು. ಹೇ ಶಂಕರಾ, ನಿನ್ನನ್ನು ನನ್ನ ಯಜ್ಞಕ್ಕಾಗಿ ಕರೆಯದಿರುವ ಕಾರಣವೇನಂದರೆ, ನೀನೇ ಸರ್ವಭೂತಗಳ ಉತ್ಪತ್ತಿಗೆ ಉಪಾದಾನಕಾರಣವಾಗಿದ್ದು, ಯಾವತ್ತು ಭೂತಗಳ ಅಧಿಪ ತಿಯೂ, ಅಂತರ್ಯಾಮಿಯೂ ನೀನೇ ಆಗಿರುತ್ತೀ. ಆದ್ದರಿಂದ ನನ್ನಿಂದಾಗಲಿ, ಬೇರೆ ಯವರಿಂದಾಗಲಿ ನೀನು ಬೇರೆಯಾಗಿ ಇಲ್ಲವೇ ಇಲ್ಲವು! ಅಂದಬಳಿಕ ನಿನ್ನನ್ನು ಕರೆಯುವ ದಾದರೂ ಹ್ಯಾಗೆ? ಅಥವಾ ದೇವಾ, ನನಗೆ ತೋರುವದೇನಂದರೆ ನಿನ್ನ ಮಾಯೆಯು ಅತ್ಯಂತ ಸೂಕ್ಷ್ಮವು, ಅಥವಾ ಅತರ್ಕ್ಯವು ಆಗಿದ್ದು, ಅದು ಬಹಳಮಾಡಿ ನನ್ನನ್ನು ಮುಸುಕಿದ್ದರಿಂದ ನಿನ್ನನ್ನು ಕರೆಯಲು ನನ್ನ ಬುದ್ಧಿಯು ಸ್ಫುರಿಸಲಿಲ್ಲವು! ಎಲೈ ಭವನೇ, ನಿನಗೆ ಕಲ್ಯಾಣವಿರಲಿ. ನಾನು ಪ್ರಜಾಪತಿತ್ವದ ಯೋಗದಿಂದ ರಜೋಗುಣದ ಹೊಯ್ತು

ದಲ್ಲಿ ಸಿಕ್ಕು ನಿನ್ನನ್ನು ತಿಳಿಯಲು ಸಮರ್ಥನಾಗಲಿಲ್ಲ. ಈ ಸತ್ಯವಾದ ಸಂಗತಿಯು ನಿನ್ನ ಮುಂದೆ ಮುಚ್ಚಿರುವದಿಲ್ಲ; ಯಾಕಂದರೆ, ದೇವಾ, ನನ್ನ ಹೃದಯವೂ, ನನ್ನ ಬುದ್ಧಿಯೂ, ನನ್ನ ಮನಸ್ಸೂ ನಿನ್ನಲ್ಲಿಯೇ ಇರುವವು. ಅಂದಬಳಿಕ ನಿಜವಾದ ಸಂಗತಿಯು ನಿನಗೆ ಗೊತ್ತೇ ಆಗುವದು. ಆದ್ದರಿಂದ ಇದನ್ನೆಲ್ಲ ಧ್ಯಾನದಲ್ಲಿ ತಂದು ನನ್ನಮೇಲೆ ಕೃಪೆಮಾಡು. ಹೇ, ಭಗವಂತಾ, ನಾನಾಪ್ರಕಾರದ ದಕ್ಷಿಣೆಗಳು ಕೊಡಲ್ಪಡುವ ಹಲವು ಯಜ್ಞಗಳಿಂದ, ನಿನ್ನ ಯಜನವೇ ಮಾಡಲ್ಪಡುವದರಿಂದ, ನೀನೇ ಎಲ್ಲರ ಕರ್ತಾರನೆಂಬದು ಮೇಲೆಯೇ ಕಾಣುತ್ತದೆ; ಆದ್ದರಿಂದಲೇ ನಿನ್ನನ್ನು ನಾನು ಬೇರೆಯಾಗಿ ಕರೆದಿಲ್ಲವು!

ಈ ಮೇರೆಗೆ ದಕ್ಷಪ್ರಜಾಪತಿಯು ಮಹಾದೇವನನ್ನು ಸ್ತುತಿಸಿ ಸುಮ್ಮನಾದನು. ಆಗ ಭಗವಾನ್ ಶಂಕರನು ಅತ್ಯಂತ ಪ್ರಸನ್ನನಾಗಿ ಪುನಃ ದಕ್ಷನನ್ನು ಕುರಿತು—ಎಲೈ ಸುವ್ರತಾ, ದಕ್ಷಾ, ನೀನು ಮಾಡಿದ ಸ್ತೋತ್ರದಿಂದ ನಾನು ಅತ್ಯಂತ ಸಂತುಷ್ಟನಾಗಿರುವೆನು. ನಿನ್ನ ಮೇಲೆ ಎಂಥ ಕೃಪೆಮಾಡುವೆನೆಂಬದನ್ನು ಬೆಳಸಿ ಹೇಳುವದರಲ್ಲಿ ಸವಿಯಿಲ್ಲ. ಸ್ವಲ್ಪದರಲ್ಲಿ ಹೇಳುವದೆಂದರೆ, ಯಾವಾಗಲೂ ನಿನಗೆ ನನ್ನ ಸಾಮೀಪ್ಯವು ಪ್ರಾಪ್ತವಾಗುವದು. ಎಲೈ ಪ್ರಜಾಪತಿಯೇ, ನಿನ್ನ ಯಜ್ಞದ ಧ್ವಂಸವಾಯಿತೆಂದು ನೀನು ಖಿನ್ನನಾಗಿರಬಹುದು; ಆದರೆ ನನ್ನ ಕೃಪೆಯಿಂದ ನಿನಗೆ ಸಹಸ್ರ ಅಶ್ವಮೇಧಗಳನ್ನು, ಹಾಗು ನೂರು ವಾಜಪೇಯ ಯಜ್ಞಗಳನ್ನು ಮಾಡಿದ ಶ್ರೇಯಸ್ಸು ಪ್ರಾಪ್ತವಾಗುವದು. ದಕ್ಷಾ, ನಾನು ನಿನ್ನ ಯಜ್ಞಕ್ಕೆ ವಿಘ್ನವನ್ನುಂಟು ಮಾಡಿದೆನೆಂದು ಖೇದಪಡಬೇಡ; ಯಾಕಂದರೆ ನಿನ್ನ ಯಜ್ಞವನ್ನು ನಾನು ನಾಶಮಾಡಬೇಕೆಂದು ಮೊದಲೇ ಗೊತ್ತಾಗಿತ್ತು. ಎಲೈ ಸುವ್ರತನೇ, ನಿನಗೆ ಇನ್ನೂ ವರಗಳನ್ನು ಕೊಡುವೆನು ತೆಗೆದುಕೊಂಡು ಖಿನ್ನತೆಯನ್ನು ಬಿಟ್ಟು ಆನಂದದಿಂದ ಪ್ರಫುಲ್ಲಿತ ಮುಖವುಳ್ಳವನಾಗು. ದೇವದಾನವರು ತಮ್ಮ ಯುಕ್ತಿಬಲದಿಂದ ಷಡಂಗವೇದಗಳ, ಹಾಗು ಸಾಂಖ್ಯಶಾಸ್ತ್ರ—ಯೋಗಶಾಸ್ತ್ರಾದಿಗಳ ನಿಷ್ಕರ್ಷಮಾಡಿ ಅದರಂತೆ ದುಸ್ತರ ತಪಸ್ಸನ್ನು ಮಾಡಿದರು; ಆದರೆ ದಕ್ಷಾ, ಈಗ ನಾನು ನಿನಗೆ ಹೇಳುವ ವ್ರತವು ಈ ತಪಶ್ಚರ್ಯಕ್ಕಿಂತಲೂ ಶ್ರೇಷ್ಠವಾದದ್ದು. ಅದು ಅತ್ಯಂತ ಗೂಢವಾದದ್ದೂ, ಯಾರಿಗೂ ತಿಳಿಯದೆ ಇದ್ದದ್ದರಿಂದ ಅಪೂರ್ವವಾದದ್ದೂ ಇರುತ್ತದೆ; ಇನ್ನು ಮೂರ್ಖಜನರು ಅದನ್ನು ನಿಂದಿಸುವರೆಂಬ ಮಾತು ಬೇರೆಯಾಗಿರುವದು; ಆದರೆ ಅದು ಫಲಕಾಲದಲ್ಲಿಯೂ, ಸಾಧನಕಾಲದಲ್ಲಿಯೂ ಸರಿಯಾಗಿಯೇ ಶ್ರೇಯಸ್ಕರವಾಗಿರುವದಲ್ಲದೆ, ಸರ್ವತೋಮುಖವಾಗಿರುವದು; ಅಂದರೆ ಅದನ್ನು ಮಾಡಲಿಕ್ಕೆ ಸರ್ವವರ್ಣದವರಿಗೂ, ಸರ್ವ ಆಶ್ರಮದವರಿಗೂ ಪ್ರತಿಬಂಧವಿಲ್ಲವು. ಇಷ್ಟೇ ಅಲ್ಲದೆ, ಅದು ಮೋಕ್ಷಪ್ರಾಪ್ತಿಗೂ ಸಾಧನವಾಗಿರುವದು; ಆದರೆ ಯಮ—ನಿಯಮಾದಿಗಳಿಂದ ಯುಕ್ತರಾದವರಿಗೂ ದೀರ್ಘಕಾಲದಮೇಲೆ ಅದು ಸಾಧ್ಯವಾಗತಕ್ಕದ್ದಾಗಿರುವದು. ವರ್ಣಾಶ್ರಮಗಳಿಗೆ ವಿಹಿತವೆನಿಸುವ ಧರ್ಮಗಳಿಗೆ ನನ್ನ ಆ ವ್ರತವು ಕೆಲಸಂಗತಿಗಳಲ್ಲಿ ಹೊಂದುವದು, ಕೆಲಸಂಗತಿಗಳಲ್ಲಿ ಭಿನ್ನವಾಗಿರುವದು. ನ್ಯಾಯ ಅಥವಾ ನಿಗಮನ ಮಾಡುವಲ್ಲಿ ಪ್ರವೀಣರಾದವರಿಗೆ ಅದು ತಿಳಿಯುತಕ್ಕದ್ದಾಗಿದ್ದು, ನಾಲ್ಕು ಆಶ್ರಮಗಳನ್ನು ಮೀರಿ

ಹೋದವರಿಗೆ ಅದು ಯೋಗ್ಯವಾಗಿರುವದು. ಅಂಥ ಆ ವ್ರತವು ಯಾವದೆಂದರೆ "ಪಾಶು ಪತ"ವ್ರತವು. ದಕ್ಷಾ, ಈ ವ್ರತವನ್ನು ನಾನು ಸ್ವತಃ ಪೂರ್ವದಲ್ಲಿ ಉತ್ಪನ್ನ ಮಾಡಿದೆನು. ಇದು ಬಹು ಕಲ್ಯಾಣಕರವಾದದ್ದು. ಈ ವ್ರತವನ್ನು ಆಚರಿಸಿದ್ದರ ಫಲವು ನನ್ನ ಕೃಪೆ ಯಿಂದ ನಿನಗೆ ಆಯುತವಾಗಿ ಪ್ರಾಪ್ತವಾಗಲಿ. ಇನ್ನು ನೀನು ಮನಸ್ಸಿನ ಸಂತಾಪವನ್ನು ಬಿಟ್ಟುಬಿಡು, ಎಂದು ನುಡಿದು ಆ ಮಹೇಶ್ವರನು ತನ್ನ ಪತ್ನಿಯಾದ ದೇವೀಉಮೆಯೊ ಡನೆ ತನ್ನ ಅನುಚರಗಣಸಹಿತವಾಗಿ ದಕ್ಷನಿಗೆ ಕಾಣದಂತಾದನು.

ದಕ್ಷಪ್ರಜಾಪತಿಯು ಮಾಡಿದ ಈ ಸ್ತೋತ್ರದ ಶ್ರವಣವನ್ನಾಗಲಿ, ಕೀರ್ತನವನ್ನಾ ಗಲಿ ಮಾಡುವವರಿಗೆ ಯಾವಪ್ರಕಾರದ ಅಶುಭವೂ ಪ್ರಾಪ್ತವಾಗದೆ, ಅವರು ದೀರ್ಘಾ ಯುಷಿಗಳಾಗುವರು. ದೇವತೆಗಳಲ್ಲಿ ಭಗವಾನ್ ಶಿವನು ಶ್ರೇಷ್ಠನಿರುವಂತೆ, ದಕ್ಷನುಮಾಡಿ ರುವ ಈ ಸ್ತೋತ್ರವು ಎಲ್ಲ ಸ್ತೋತ್ರಗಳಲ್ಲಿ ಶ್ರೇಷ್ಠವಾಗಿರುವದು. ಈ ಸ್ತವದ ಯೋ ಗ್ಯತೆಯು ವೇದಕ್ಕೆ ಸಮಾನವಾಗಿರುವದು. ಯಶಸ್ಸು, ರಾಜ್ಯ, ಸುಖ, ಐಶ್ವರ್ಯ, ಕಾಮ, ಅರ್ಥ, ಧನ, ವಿದ್ಯಾ ಇವು ತನಗೆ ಪ್ರಾಪ್ತವಾಗಬೇಕೆಂದು ಇಚ್ಛಿಸುವವನು ಈ ಸ್ತೋತ್ರವನ್ನು ಭಕ್ತಿಪೂರ್ವಕ ಶ್ರವಣ ಮಾಡಬೇಕು. ವ್ಯಾಧಿಗ್ರಸ್ತನಾದವನು, ದುಃಖಿತ ನಾದವನು, ದೀನನಾದವನು, ಚೋರಭಯವುಳ್ಳವನು, ಬೇರೆ ಮಹಾಭಯವುಳ್ಳವನು, ರಾಜಕೀಯ ಕಾರಣದಲ್ಲಿ ಸಿಲುಕಿದವನು ಈ ಸ್ತೋತ್ರದ ಶ್ರವಣದಿಂದ ಮುಕ್ತರಾಗಿ, ಅದೇ ದೇಹದಿಂದ ಶಿವಗಣದ ಯೋಗ್ಯತೆಗೆ ಏರುವರು. ಎಲೈ ವಿವೇಕಶೀಲಾದಿ ಶಿಷ್ಯರೇ, ಹೀಗೆ ಈ ಶಿವಾಷ್ಟೋತ್ತರ ಸಹಸ್ರನಾಮುಗಳ ಶ್ರವಣ-ಕೀರ್ತನಗಳ ಫಲವು ಅನಂತ ವಾಗಿ ವರ್ಣಿಸಲ್ಪಟ್ಟಿರುವದು. ಆ ಸ್ತೋತ್ರವನ್ನು ಈಗ ನಿಮಗೆ ಸಂಕ್ಷೇಪವಾಗಿ ಹೇಳಿ ದ್ದರೂ, ಅದು ತಾರಕವಾಗಿರುವದೆಂಬದನ್ನು ಲಕ್ಷದಲ್ಲಿಡಿರಿ. ಆ ಸ್ತೋತ್ರದಲ್ಲಿ ಹೇಳಿದಂತೆ ಭಗವಾನ್ ಸದಾಶಿವನು ಸರ್ವಸ್ವರೂಪನಾಗಿರುವದರಿಂದ, ಎಲ್ಲವೂ ಸದಾಶಿವನೇ ಎಂದು ತಿಳಿದು, ನೀವು ದ್ವೇಷಾಸೂಯಗಳಿಗೆ ಇಂಬುಗೊಡದೆ ಸದಾಶಿವನ ಅನುಗ್ರಹಕ್ಕೆ ಪಾತ್ರರಾಗಿರಿ.

---

## ೩ನೇ ಸುಧಾತರಂಗ !

## ಶ್ರೀ ಗಿರಿಜಾಕಲ್ಯಾಣ.

(ಹರಿಹರಕವಿಕೃತ ಗಿರಿಜಾಕಲ್ಯಾಣ.)

ಈ ಮೇರೆಗೆ ಸಿದ್ಧ ಮುನೀಶ್ವರರು ಹೇಳಿದ್ದನ್ನು ಕೇಳಿ ವಿವೇಕಶೀಲಾದಿ ಶಿಷ್ಯರು ಪರಮಾನಂದಬಟ್ಟು ಮತ್ತೆ ಗುರುಗಳನ್ನು ಕುರಿತು—ಗುರುವರರೇ, ಅಜ್ಞಾನನಿವಾರಕ ವಾದ ನಿಮ್ಮ ನಿರೂಪಣವನ್ನು ಕೇಳಿ ನಮಗೆ ಪರಮಾನಂದವಾಯಿತು. ದಕ್ಷಕುಮಾರಿ ಯಾದ ಸತಿ ದಾಕ್ಷಾಯಣಿಯು ಯೋಗದಿಂದ ದೇಹತ್ಯಾಗಮಾಡಿದ್ದರಿಂದಾದ ದಕ್ಷಯಜ್ಞ

ಧ್ವಂಸದ ರಹಸ್ಯಪೂರ್ಣಚರಿತ್ರವನ್ನು ಕೇಳಿ ನಮ್ಮಲ್ಲಿ ಶಿವಭಕ್ತಿಯು ಅಭಿವೃದ್ಧವಾಯಿತು. ಸರ್ವವೂ ಶಿವಮಯವಾದದ್ದರಿಂದ ದ್ವೇಷಾಸೂಯಾದಿಗಳನ್ನು ತ್ಯಜಿಸಿ ಶಿವಾನುಗ್ರಹಕ್ಕೆ ಪಾತ್ರನಾಗಬೇಕೆಂಬ ನಿಮ್ಮ ಉಪದೇಶಾಮೃತದಿಂದ ನಮ್ಮ ವಿವೇಕವು ಅನುರವಾಯಿತು. ಗುರುದೇವನೇ, ದೇಹಾಭಿಮಾನಿಗಳಾದ ನಮ್ಮ ಅಹಂಕಾರವನ್ನು ನಿನ್ನಂಥ ಸಮಬುದ್ಧಿಯ ಮಹಾತ್ಮನಲ್ಲದೆ ಬೇರೆಯಾರು ದೂರಮಾಡಲು ಸಮರ್ಥರು? ಆದರೆ ದಕ್ಷಯಜ್ಞದಲ್ಲಿ ದೇಹತ್ಯಾಗಮಾಡಿದ ದಾಕ್ಷಾಯಣಿಯು ಪುನಃ ಯಾವರೂಪದಿಂದ ಶಿವನ ಪಾಣಿಗ್ರಹಣಮಾಡಿದಳು? ಅದರಂತೆ ದಾಕ್ಷಾಯಣಿಯು ದೇಹತ್ಯಾಗವಾದಬಳಿಕ ಭಗವಾನ್ ಸದಾಶಿವನು ಹ್ಯಾಗೆ ಕಾಲಕ್ರಮಣಮಾಡಿದನು? ವೈರಾಗ್ಯವೇ ಪರಮಸುಖವೆಂಬದನ್ನು ಜಗತ್ತಿಗೆ ತೋರಿಸುವದಕ್ಕಾಗಿ ಆ ಷಡ್ಗುಣೈಶ್ವರ್ಯಸಂಪನ್ನನಾದ ಭಗವಾನ್ ಸದಾಶಿವನು ಚಿತಾಭಸ್ಮಲೇಪಿಯೂ, ಚರ್ಮಾಂಬರನೂ ಆಗಿ ಶ್ಮಶಾನದಲ್ಲಿ ವಾಸಿಸಿದನು! ಭಕ್ತರಿಗೆ ಚತುರ್ವಿಧಪುರುಷಾರ್ಥಗಳನ್ನು ಕೊಡಲು ಸಮರ್ಥನಾದ ಭಗವಾನ್ ಶಂಕರನು, ಸರ್ವೈಶ್ವರ್ಯಗಳನ್ನು ಜಗತ್ತಿಗೆ ಕೊಟ್ಟು ಬಿಟ್ಟು, ವೈರಾಗ್ಯಶೀಲನಾಗಿ ಪ್ರಸಂಗವಶಾತ್ ಜಗತ್ಕಲ್ಯಾಣಕ್ಕಾಗಿ ಕಾಲಕೂಟ ವಿಷಪಾನದಂಥ ಉಗ್ರತರಕಾರ್ಯಗಳನ್ನು ಮಾಡಿ ತನ್ನ ದೀನವಾತ್ಸಲ್ಯವನ್ನೂ, ಸರ್ವೋತ್ತಮತ್ವವನ್ನೂ ಪ್ರಕಟಿಸಿರುವನು- ಇಂಥ ದೇವದೇವೇಶನು ಪುನಃ ದಾಂಪತ್ಯವನ್ನು ಯಾಕೆ ಪಡೆದನು? ಸದ್ಗುರೋ, ಈ ರಹಸ್ಯವನ್ನು ನಮಗೋಸ್ಕರ ನಿರೂಪಿಸು, ಎಂದು ಕೇಳಲು, ಸಿದ್ಧಮುನಿಯು:—ಶಿಷ್ಯೋತ್ತಮನೇ, ಬಹಳ ಯೋಗ್ಯಪ್ರಶ್ನಮಾಡಿದೆ. ನಿನ್ನ ಪ್ರಶ್ನದಿಂದ ಸದಾಶಿವನ ಭಕ್ತವಾತ್ಸಲ್ಯವನ್ನು ವ್ಯಕ್ತಮಾಡಲು ಆಸ್ಪದವು ದೊರೆಯುವದರಿಂದ ಉತ್ತರಹೇಳಲಿಕ್ಕೆ ನನಗೆ ಪರಮಾನಂದವಾಗುತ್ತದೆ- ಆತ್ಮಚಿಂತನಮಗ್ನನಾದ ಭಗವಾನ್ ಶಂಕರನು, ದಾಕ್ಷಾಯಣಿಯ ಅಪರಾವತಾರವಾದ ಗಿರಿಜೆಯ ಪಾಣಿಗ್ರಹಣವನ್ನು ಹ್ಯಾಗೆಮಾಡಿದನೆಂಬದನ್ನು ಹೇಳುವೆನು ಕೇಳಿರಿ; ಮಹೇಶ್ವರನು ವೈರಾಗ್ಯಶೀಲನಾದ್ದರಿಂದ ಆತನು ಸ್ವತಂತ್ರನೆಂಬದೇನೋನಿಜ; ಆದರೆ ಭಕ್ತವಾತ್ಸಲ್ಯದ ಮೂಲಕ ಆ ದಯಾಘನನು ಬಹುಬೇಗನೆ ಭಕ್ತಪರಾಧೀನನಾಗುವಷ್ಟು ಬೇರೆ ಯಾವದೇವತೆಗಳೂ ಆಗಲಾರರು. ಈ ಮಾತನ್ನು ಗಿರಿಜೆಯ ತಪಸ್ಸಿಗೆ ಮೆಚ್ಚಿ ಆಕೆಯ ಪಾಣಿಗ್ರಹಣಮಾಡಿದ ಸದಾಶಿವನ ಚರಿತ್ರವನ್ನು ಕೇಳಿ ನೀವು ಮನಗಾಣಬಹುದು; ಇನ್ನು ನಾನು ಹೇಳುವ ಗಿರಿಜಾಕಲ್ಯಾಣವೆಂಬ ಕಲ್ಯಾಣಕಾರಕ ಶಿವಚರಿತ್ರವನ್ನು ಏಕಾಗ್ರಚಿತ್ತದಿಂದ ಶ್ರವಣಮಾಡಿರಿ.

ಮೇನಾದೇವಿಯ ತಪಸ್ಸಿದ್ಧಿ:—ಒಳ್ಳೇ ಶುಭ್ರಕಾಂತಿಯಿಂದ ಮನೋಹರವಾದ ಹಿಮಾಲಯ ಪರ್ವತದ ಉತ್ತರದಲ್ಲಿ ತೋಟಗಳ ಸಮೂಹದಿಂದಲೂ, ಕೆರೆ-ಹೊಳೆಗಳ ಸಂಕುಲದಿಂದಲೂ, ಬೆಳೆಯುಳ್ಳ ಭೂಪ್ರದೇಶಗಳಿಂದಲೂ, ಉತ್ಸಾಹವುಳ್ಳ ಜನರಿಂದಲೂ ಗಿರಿರಾಜನ ರಾಜ್ಯವು ಒಪ್ಪುತ್ತಿರುವದು. ಆ ರಾಜ್ಯದಲ್ಲಿ ಹೂವಿಲ್ಲದ ಸರೋವರಗಳೂ, ಫಲಗಳಿಲ್ಲದ ಗಿಡಗಳೂ, ವನಗಳಿಲ್ಲದ ಪ್ರದೇಶಗಳೂ ದೊರೆಯಲಾ

ಶವು ಕಲಂಕವು ಚಂದ್ರನಲ್ಲಿ, ಭಂಗವು ನದಿಯಲ್ಲಿ, ಕುಟಿಲತೆಯು ಬಳ್ಳಿಗಳಲ್ಲಿ, ಬಂಧನವು ಹೂವ ಮಾಲೆಯಲ್ಲಿ ಇದ್ದವಲ್ಲದೆ, ಆ ಶೈಲಪತಿಯ ರಾಜ್ಯದ ಜನರಲ್ಲಿದ್ದಿಲ್ಲ. ಶ್ರುತಿಯಲ್ಲಿಯೇ ಆ ದೇಶದ ಜನರ ವ್ಯಸನವು, ಶಾಸ್ತ್ರವಿಚಾರದಲ್ಲಿಯೇ ಅವರ ಕೌತುಕವು, ಉಮಾಧವನಲ್ಲಿಯೇ ಅವರ ವಿಶ್ವಾಸವು ಇರುವವು. ಅಲ್ಲಿಯ ಕಲ್ಲೆಲ್ಲ ಪರಷುಕಲ್ಲುಗಳೂ, ತರುಗಳೆಲ್ಲ ಕಲ್ಪತರುಗಳೂ, ಗುಲ್ಮಗಳೆಲ್ಲ ಓಷಧಿಗಳೂ, ಆಕಳುಗಳೆಲ್ಲ ಸುರಭಿಕುಲವೂ ಆಗಿದ್ದವು.

ಈ ಮೇರೆಗೆ ಪರಮ ಸುಖದ ಸ್ಥಾನವಾದ ಆ ಪರ್ವತರಾಜ್ಯದ ರಾಜಧಾನಿಯು ಓಷಧಿಪ್ರಸ್ಥಪುರವು. ಆ ಪುರದ ಸಂವರ್ತಕವೆಂಬ ಉಪವನದ ಶೋಭೆಯು ವರ್ಣಿಸತಕ್ಕಂಥಾದ್ದು. ಅಲ್ಲಿ ತೆಂಗು, ಬಾಳೆ, ಅಡಿಕೆ, ಹಲಸು, ಮಾವು, ಅಶೋಕ, ಬಕುಳ ಮೊದಲಾದ ವೃಕ್ಷಗಳು ಸಾಲ್ಗೊಂಡು ಕಂಗೊಳಿಸುವವು. ಹೂವಿನೊಳಗಿನ ಮಕರಂದ ಸೇದ ಭ್ರಾಂತಿಯಿಂದ ಭ್ರಮರಗಳೂ, ಚಿಗುರುಗಳ ಆಶೆಯಿಂದ ಕೋಗಿಲೆಗಳೂ, ಫಲಗಳನ್ನೆಳಿಸಿ ಗಿಳಿಗಳೂ ತಂಡತಂಡದಿಂದ ಅಲ್ಲಿ ಅಂಡಲೆಯುವವು. ಆ ವನವು ನೆಳಲಿನ ತಂಪಿನಿಂದಲೂ, ಅಂಕುರಗಳ ಸೊಂಪಿನಿಂದಲೂ, ಕುಸುಮಾವಳಿಯ ಕಂಪಿನಿಂದಲೂ, ಗಿಳಿಗಳ ಧ್ವನಿಯಿಂದಲೂ, ಅಳಿಕುಲದ ಗಾನದಿಂದಲೂ, ಚಕ್ರವಾಕದ ಕೂರ್ಮೆಯಿಂದಲೂ, ಮಂದಾನಿಲನ ಪೇರ್ಮೆಯಿಂದಲೂ ಅತ್ಯಧಿಕ ಸೌಂದರ್ಯವನ್ನೊಳಗೊಂಡು ಒಪ್ಪುತ್ತಿರುವದು.

ಈ ಸಂವರ್ತಕೋದ್ಯಾನಕ್ಕೂ ಓಷಧಿಪ್ರಸ್ಥಪುರಕ್ಕೂ ನಡುವೆ ಹಯಶಿಕ್ಷಕ-ಗಜಶಿಕ್ಷಕರಿಂದ ಒಪ್ಪುತ್ತಿರುವ ಒಯ್ಯಾಳಿಯ ಬಯಲಿರುವದು. ಆ ಬಯಲಿನಿಂದೊಳಗೆ ಗಂಭೀರವಾದ ಅಗಳತವೂ, ಆ ಅಗಳತದ ಒಳಮೈಯಲ್ಲಿ ಭದ್ರವೂ, ವಿಸ್ತಾರವೂ ಆದ ಕೋಟೆಯೂ ಶೋಭಿಸುವವು. ಓಷಧಿಪ್ರಸ್ಥಪುರವು ಚಂದ್ರ-ಸೂರ್ಯರ ಬೀದಿಗಳಿಂದಲೂ, ಕಾಳುಮಾರುವವರ ಅಂಗಡಿಗಳಿಂದಲೂ, ಹೂವಡಿಗರ ಸಾಲಿನಿಂದಲೂ, ಮುತ್ತು-ರತ್ನಗಳ ಅಂಗಡಿಗಳಿಂದಲೂ, ಕಂಚುಗಾರರ ಪಸರದಿಂದಲೂ ಅಮರಾವತಿಗೆ ದ್ವಿಗುಣವಾಗಿ, ಮಿಥಿಲೆಗೆ ತ್ರಿಗುಣವಾಗಿ, ಉದಯನಗರಿಗೆ ಚತುರ್ಗುಣವಾಗಿ, ಉಜ್ಜಯಿನಿಗೆ ಪಂಚಗುಣವಾಗಿ ಒಪ್ಪುತ್ತಿರುವದು.

ಇಂತು ಒಪ್ಪುವ ಪುರದ ನಾಥನು, ಉಮಾಧವಪೂಜಕನೂ, ದಿಗ್ಭರಿತವಾದ ಕೀರ್ತಿಯುಳ್ಳವನೂ, ನಮಿಸಲ್ಪಟ್ಟ ಭೂಭುಜರುಳ್ಳವನೂ, ಅತ್ಯುದಾರನೂ, ಅತಿಧೀರನೂ ಆದ ಪರ್ವತರಾಜನೆಂಬವನು ಪತಿವ್ರತಾಶಿರೋಮಣಿಯಾದ ಮೇನಾದೇವಿಯೆಂಬ ಪುಣ್ಯವಲ್ಲಭೆಯಿಂದೊಡಗೂಡಿ, ನಿಶ್ಚಿಂತೆಯಿಂದ ರಾಜ್ಯವಾಳುತ್ತಿದ್ದನು. ಈ ಉದಾತ್ತಗುಣಸಂಪನ್ನನಾದ ಗಿರಿರಾಜನಿಗೆ ಎರಗದ ಭೂಪರಿಲ್ಲ, ಅಪ್ಪಣೆಯನ್ನು ಪಾಲಿಸದ ರಾಜಕುಮಾರರಿಲ್ಲ, ಪ್ರೀತಿಸದ ಹೆಂಗಸರಿಲ್ಲ, ತಲೆವಾಗದ ಚಾಗಿಗಳಿಲ್ಲ, ನಮಸ್ಕರಿಸದ ಬಲ್ಲಿದರಿಲ್ಲ. ಅಹಹಾ! ಆ ಮಹಾಪ್ರತಾಪಿಯ ಹೆಚ್ಚಳವನ್ನೇನು ವರ್ಣಿಸುವದದೆ? ಆತನ ಓಲಗದಲ್ಲಿ ಪ್ರತಿಹಾರರು—“ ಆಂಧ್ರನೇ, ನುಡಿಯಬೇಡ; ಕಳಿಂಗನೇ, ಕೈಮುಗಿ;

ವಂಗನೇ, ಬಾಗು; ಚೋಳನೇ, ಕೇರಳನಿಗೆ ಸ್ಥಳವನ್ನು ಕೊಡು; ಲಾಳನೇ, ಹಿಂದಕ್ಕೆ ಸರಿ; ಮಗಧೇಶನೇ, ಹೋಗಬೇಡ; ಪಾಂಡ್ಯನೇ, ಕಾಣಿಕೆಯನ್ನು ಹಿಡಿದಿರು" ಎಂದು ಮಾಂಡಲಿಕರನ್ನು ಗರ್ಜಿಸುವರು. ಗಿರಿರಾಜನು ಈ ಪ್ರಕಾರ ಅಖಂಡ ಪ್ರತಾಪವುಳ್ಳವನಾಗಿ ಮೇನಾದೇವಿಯಿಂದೊಡಗೂಡಿ ಪರಮಸುಖಕ್ಕೆ ಇಂಬುಗೊಟ್ಟು, ಕೆಲವು ದಿವಸ ವಿದ್ದು, ಮೈನಾಕನೆಂಬ ಮಗನನ್ನು ಪಡೆದು ಕೃತಾರ್ಥನಾದನು.

ಒಂದು ದಿನ ಪರ್ವತರಾಜನು ಸ್ನಾನ ಮಾಡಿ ವಿಭೂತಿ-ರುದ್ರಾಕ್ಷಗಳನ್ನು ಧರಿಸಿ, ನಿರ್ಮಲಚಿತ್ತನಾಗಿ, ಭಕ್ತಿಯಿಂದ ಸದಾಶಿವಪೂಜೆಯನ್ನು ಮಾಡಿ, ಪ್ರಸಾದದಿಂದ ತೃಪ್ತನಾಗಿ ಮಹೋತ್ಸವದಿಂದಿರಲು, ಬಹು ಸಂತಾನಕ್ಕಾಗಿ ಆತುರಪಡುತ್ತಿರುವ ಸುಶೀಲೆಯಾದ ಮೇನಾದೇವಿಯು, ಪತಿಯ ಚರಣಕ್ಕೆರಗಿ ಲೀನತೆಯಿಂದ—"ಪ್ರಾಣಪತಿಯೇ, ನನ್ನ ಮನಸ್ಸು ಪುತ್ರಿಯನ್ನು ಬಯಸುತ್ತಿರುವದು. ಶಿವನ ವಧುವೆನಿಸುವ ಮಗಳನ್ನು ನಾನು ಉಗ್ರತಪಸ್ಸಿನಿಂದ ಪಡೆಯುವೆನು. ತಪಸ್ಸನ್ನಾಚರಿಸಲಿಕ್ಕೆ ಅನುಮತಿಸಬೇಕು" ಎನ್ನಲು, ಗಿರಿರಾಜನು ಒಡಂಬಟ್ಟು, ಸಂತೋಷದಿಂದ ಪುಳುಕಿಸುತ್ತ ಸಭ್ಯರಾದ ಪರಿಚರ್ಯದ ತರುಣಿಯರೊಂದಿಗೆ ಮೇನಾದೇವಿಯನ್ನು ತಪಸ್ಸನ್ನಾಚರಿಸುವದಕ್ಕೆ ಕಳುಹಿದನು.

ಪತಿಯ ಅಪ್ಪಣೆಯಿಂದ ಮೇನಾದೇವಿಯು ರಮ್ಯವಾದ ಸ್ಥಳಕ್ಕೆ ಬಂದು ಕಠಿಣ ತಪಸ್ಸನ್ನಾಚರಿಸತೊಡಗಿ, ಭವಾನಿಯ ನಿರ್ಮಲರೂಪವನ್ನು ಹೃದಯಕಮಲದಲ್ಲಿ ಧಾರಣ ಮಾಡಿದಳು. ಮೇನಾದೇವಿಯ ಮನಸ್ಸಿನಲ್ಲಿ ಧ್ಯಾನವೆಂಬ ಚಂದ್ರೋದಯನಾಗಲು, ಆಕೆಯ ಕಣ್ಣುಗಳೆಂಬ ಕಮಲಗಳು ಮುಚ್ಚಿದವು. ಚಿತ್ತವೆಂಬ ಕರಿಯಕಮಲವು ಅರಳಿತು. ಗಂಭೀರವಾದ ತಪೋವಾರಿಧಿಯು ಉಕ್ಕೇರಿತು. ಈ ಮೇರೆಗೆ ತಪೋಬೀಜವು ಮೇನಾದೇವಿಯ ಚಿತ್ತಭೂಮಿಯಲ್ಲಿ ಬೇರುಗೊಂಡು, ಅಹಂಕಾರದಲ್ಲಿ ಮೊಳಕೆಯೊಡೆದು, ಬುದ್ಧಿಯಲ್ಲಿ ಎಲೆಯಾಗಿ, ಮನಸ್ಸಿನಲ್ಲಿ ಎತ್ತರವಾಗಿ, ನಿಷ್ಠೆಯಲ್ಲಿ ಕುಡಿಬಿಟ್ಟು ಹರಿದು ಹಬ್ಬಿ, ಶಿವನ ಅರಸಿಯಾದ ದಾಕ್ಷಾಯಣಿಯ ಚರಣಸನ್ನಿಧಿಗೆ ಧೀಂಕಿಟ್ಟಿತು. ಇತ್ತ ದಾಕ್ಷಾಯಣಿಯು ಯೋಗದಿಂದ ದೇಹವನ್ನು ಬಿಟ್ಟು, ಮೇನಾದೇವಿಯ ತಪಸ್ಸಿಗೆ ಪ್ರಸನ್ನಳಾಗಿ ಆಕೆಯಿದ್ದೆಡೆಗೆ ಹೋಗಿ—"ದೇವಿಯೇ, ನಿನ್ನ ಉಗ್ರತಪಸ್ಸಿಗೆ ಮೆಚ್ಚಿ ನಾನು ನಿನ್ನ ಬಸುರಿನಲ್ಲಿ ಬರುವೆನು" ಎಂದು ಹೇಳಿ ಆ ಮೇನಾದೇವಿಯ ಹೃದಯಕಮಲದಲ್ಲಿ ಪ್ರಕಾಶಿಸಹತ್ತಿದಳು. ತನ್ನ ತಪಸ್ಸಿದ್ಧಿಯಾದ್ದರಿಂದ ಮೇನಾದೇವಿಯು ಪ್ರಸನ್ನಚಿತ್ತಳಾಗಿ ಪತಿಯ ಸನ್ನಿಧಿಯನ್ನು ಹೊಂದಿದಳು.

ಗಿರಿಜೆಯ ಜನ್ಮವೂ, ಬಾಲಲೀಲೆಯೂ:—ವಿವೇಕಶೀಲರಾದ ಶಿಷ್ಯರೇ, ತನ್ನ ರಾಣಿಯು ದಾಕ್ಷಾಯಣಿಯಿಂದ ವರವನ್ನು ಪಡೆದುಬಂದದ್ದರಿಂದ ಗಿರಿರಾಜನ ಆನಂದ ಸಾಗರಕ್ಕೆ ಮೇರೆಯಿಲ್ಲದಾಯಿತು. ಮುಂದೆ ಮೇನಾದೇವಿಯು ಭವಾನಿಯ ಪ್ರಸಾದದಿಂದ ಗರ್ಭವನ್ನು ಧರಿಸಿದಳು. ಆಗ ಆಕೆಯ ಹೊಟ್ಟೆಯಮೇಲಿನ ನಿರಿಗೆಗಳು ಮುಚ್ಚಿದವು, ಹೊಕ್ಕಳವುಉಬ್ಬಿತು, ಮೊಲೆಗಳ ತುದಿಗಳು ಕಪ್ಪಾದವು, ನೋಟವು ಬೇಸರದೊಂದಿಗೆ ಕೂಡಿತು, ನಡಿಗೆಯು ಮಂದವಾಯಿತು, ಟೊಂಕವು ವಿಸ್ತಾರವಾಯಿತು, ಹೊಸಹೊಸ

ಬಯಕೆಗಳು ಹುಟ್ಟಿದವು. ಈ ಪ್ರಕಾರ ಗರ್ಭಸುಲಕ್ಷಣಗಳಿಂದೊಪ್ಪುವ ಮೇನಾದೇವಿಯು ಕಾಲೋಚಿತವಾದ ಶಿಭವಗಳನ್ನು ಅನುಭವಿಸುತ್ತ, ನವಮಾಸಗಳನ್ನು ಕಳೆದಳು. ಆಗ ಅರಳಿದ ಕಮಲದಿಂದ ಹೊರ ಹೊರಡುವ ಹಂಸಪಕ್ಷಿಯ ಮರಿಯಂತೆ ಮೇನಾದೇವಿಯ ಪುಣ್ಯಗರ್ಭದಿಂದ ಗೌರಿಯು ಹೊರಹೊರಟಳು. ಭೂಮಿಯಲ್ಲಿ ಪಾರ್ವತಿಯು ಹುಟ್ಟಿದ್ದರಿಂದ ಚಂದ್ರನು ಕಳೆಯೇರಿದನು, ಬೆಳದಿಂಗಳು ಹೆಚ್ಚಾಯಿತು, ಕಾಮನು ಭುಜಬಲವನ್ನು ಧರಿಸಿದನು, ಶಿವನ ವಾಮಾಂಗವು ಪುಳುಕಿತವಾಯಿತು. ಶಿವಲಿಂಗವನ್ನು ನೋಡುವದರಲ್ಲಿ ಪೂರ್ಣ ಆಸ್ಥೆಯುಳ್ಳ, ಹಾಗೂ ಶಿವಪ್ರಸಾದದಲ್ಲಿ ತೊಡಗಿದ ಮನಸ್ಸುಳ್ಳವಳಾದ ಶಿವಭಕ್ತೆ ಪಾರ್ವತಿಯು ಶಿವನನ್ನು ನಂಬಿಕೊಂಡು ಕಣ್ಣು ಮುಚ್ಚಿದಳು. ಬಹಳ ಹೊತ್ತಾದರೂ ಶಿಶುವು ಕಣ್ಣು ತೆರೆಯದ್ದನ್ನು ಕಂಡು ಮೇನಾದೇವಿಯೂ, ಗಿರಿರಾಜನೂ ಅಂಜಿ ಶಿವಾಚಾರ್ಯರನ್ನು ಕೇಳಿದರು. ಆಗ ಅವರು ಜ್ಞಾನದೃಷ್ಟಿಯಿಂದ ತಿಳಿದು ಹೇಳಿದ್ದೇನಂದರೆ—"ರಾಜದಂಪತಿಗಳೇ, ಪೂರ್ವದಲ್ಲಿ ಬಾಣಾಸುರನೆಂಬುವನು ಭೂಮಿಯಲ್ಲಿ ಹುಟ್ಟಿ ಇದೇಪ್ರಕಾರ ಕಣ್ಣು ತೆರೆಯದಿರಲು, ಅವನಿಗೆ ಶಿವಲಿಂಗವನ್ನು ತೋರಿಸಿದರು. ಆಗ ಅವನು ಕಣ್ಣು ತೆರೆದು ಮೊಲೆಯುಂಡನು. ಅದರಂತೆಯೇ ಈ ಗಿರಿಜೆಯಾದರೂ ಶಿವಲಿಂಗ ದರ್ಶನದಿಂದ ಕಣ್ಣು ತೆರೆಯುವಳು."

ಶಿವಾಚಾರ್ಯರ ಮಾತುಗಳನ್ನು ಕೇಳಿ ಗಿರಿರಾಜನು ಲಗಬಗೆಯಿಂದ ದೇವರ ಮನೆಗೆ ಹೋಗಿ, ಶಿವಲಿಂಗವನ್ನು ತಂದು ಶಿಶುವಿಗೆ ತೋರಿಸಿದನು. ಆಗ ಕ್ಷೀರಸಮುದ್ರಕ್ಕೆ ಚಂದ್ರನನ್ನೂ, ಪುಣ್ಯಕ್ಕೆ ಮುಕ್ತಿಯನ್ನೂ ತೋರಿಸಿದಂತಾಗಿ ಆ ಶಿಶುವು ಪಕ್ಕನೆ ಎರಡೂ ಕಣ್ಣುಗಳನ್ನು ತೆರೆದು, ಎರಡೂ ಕೈಗಳನ್ನು ಹಣೆಯಲ್ಲಿಟ್ಟು ಲಿಂಗಕ್ಕೆ ನಮಸ್ಕರಿಸಿ, ಕೂಡಲೆ ತಾಯಿಯ ಮೊಲೆಯುಂಡಿತು! ಈ ಅದ್ಭುತವನ್ನೂ, ಶಿಶುವಿನ ಅಂಗೈ ಅಂಗಾಲುಗಳಲ್ಲಿ ಪದ್ಮಗಳಿರುವದನ್ನೂ ನೋಡಿ ಗಿರಿರಾಜನು ಆನಂದಭರಿತನಾಗಿ ಜನನ ಕರ್ಮವನ್ನು ಮಾಡಿಸಿದನು. ಈ ಪರಮೋತ್ಸವದ ಮೂಲಕ ದಿಕ್ಕು ದಿಕ್ಕಿಗೆ ಆನಂದಸಾಗರವು ಉಕ್ಕೇರಲು, ಅದರಸಂಗಡ ನಗಾರಿ, ಶಂಖ, ಕಹಳೆ ಮುಂತಾದವುಗಳ ಧ್ವನಿಗಳು ಹಬ್ಬಿದವು. ದೇವತೆಗಳು ಸಂತೋಷದಿಂದ ಹೂಮಳೆಗರೆದರು. ಗೋದಾನ, ಭೂದಾನ, ವಸ್ತ್ರದಾನ ಮೊದಲಾದ ದಾನಗಳಿಂದ ಯಾಚಕವೃಂದವು ದಣಿಯಿತು. ರಾಜಪುತ್ರಿಯ ಜನನದಿಂದ ಉಂಟಾದ ಆನಂದದ ಪ್ರದರ್ಶನಕ್ಕಾಗಿ ಪುರಜನರು ಉತ್ಸಾಹದರ್ಶಕವಾದ ಗುಡಿತೋರಣಗಳನ್ನು ಕಟ್ಟಿದರು. ಈ ಪ್ರಕಾರ ಗಿರಿರಾಜನೂ, ಮೇನಾದೇವಿಯೂ, ಪುರಜನರೂ, ಪರಿಜನರೂ, ಭೂಮಂಡಲವೂ ಪರಮ ಸುಖದಿಂದಿರುತ್ತಿರಲು, ಲೀಲಾರ್ಥವಾಗಿ ಭೂಮಿಯಲ್ಲಿ ಜನಿಸಿರುವ ಲೋಕಮಾತೆಗೆ ಗಿರಿಜೆಯೆಂದು ನಾಮಕರಣವ ಮಾಡಿದರು. ಆಗ ಸುವಾಸಿನಿಯರು ಶಿಶುವನ್ನು ತೊಟ್ಟಿಲಲ್ಲಿ ಹಾಕಿ, ಸಕಲ ತತ್ವಮಯಿಯೇ ಜೋಜೋ, ಸತ್ವಾದಿಗುಣರಹಿತೆಯೇ ಜೋಜೋ, ತೇಜೋಸಂಪದೆಯೇ ಜೋಜೋ ಎನ್ನುತ್ತ ಜೋಗುಳವನ್ನು ಹಾಡಿದರು. ಈ ಪ್ರಕಾರ ತೂಗುವವರ ಜೋಗುಳದ ರಾಗದಲ್ಲಿಯೂ, ಮೊಲೆಯುಣಿಸುವ ಮೇನಾದೇವಿಯ ಮಗ್ಗಲಲ್ಲಿಯೂ, ಅಪ್ಪುವ

ಅರುಂಧತಿಯ ಉದರದಲ್ಲಿಯೂ, ಎತ್ತಿಕೊಳ್ಳುವ ಗಾಯತ್ರಿಯ ಸೊಗಸಿನಲ್ಲಿಯೂ, ಮುಟ್ಟುವ ಲಕ್ಷ್ಮಿಯ ಐಶ್ವರ್ಯದಲ್ಲಿಯೂ, ಮುದ್ದುಕೊಡುವ ಸರಸ್ವತಿಯ ಮಧುರ ವಾಣಿಯಲ್ಲಿಯೂ, ಮುಕ್ತಿಯ ಮುಖದಂತೆ, ಕಾಂತಿಯ ಲತೆಯಂತೆ, ನಿರುಪಾಧಿಕಜ್ಯೋತಿಯಂತೆ ಸಕಲ ಜಗನ್ಮಾತೆಯಾದ ಗಿರಿಜಾತೆಯು ಬಾಲಲೀಲೆಯನ್ನು ಬೆಳಕೊಂಡು ಬೆಳೆಯುತ್ತಿದ್ದಳು.

ಗಿರಿಜೆಯು ಬೆಳೆಯುತ್ತ ಹೋದಂತೆ, ಶಿವನಲ್ಲಿ ಆಕೆಯ ಭಕ್ತಿಯು ಹೆಚ್ಚಾಗುತ್ತ ಹೋಯಿತು. ಗೆಜ್ಜೆಗಳು ಗಿಲ್ ಗಿಲ್' ಎಂದು ಸಪ್ಪಳಮಾಡಲು, ಮಾಗಾಯಿ ಅಗಳಾಡಲು, ಮುಗುಳು ನಗೆಯು ಹುಟ್ಟಲು ಆಕೆಯು ಹರುಷದಿಂದ ಓಡಿಹೋಗಿ ಶಿವಾಲಯದಲ್ಲಿ ನೆಲೆಯಾಗಿರುವಳು; ಮತ್ತು ಮೇನಾದೇವಿಯ ಮೊಲೆಯನ್ನು ಸಹ ಮರೆತು ಶಿವನನ್ನು ನೋಡಿ ಸಂತೋಷಪಡುವಳು. ಆಕೆಯು ನಗುವಳು, ಪ್ರೀತಿಮಾಡುವಳು, ಅಪ್ಪಿಕೊಳ್ಳುವಳು, ಮಾತಾಡುವಳು, ಮುದ್ದುಕೊಡುವಳು. ಈ ಪ್ರಕಾರ ಗಿರಿಜೆಯು ಯಾರನ್ನೂ ಇಚ್ಛಿಸದೆ, ಸಹಾಯವನ್ನು ಬಯಸದೆ ಶಿವಾಲಯಕ್ಕೆ ಹೋಗಿ, ಪರಮ ಪ್ರೀತಿಯಿಂದ ಇರುವದನ್ನು ಪರ್ವತರಾಜನು ನೋಡಿ ಸಂತೋಷಬಟ್ಟು, ಆಕೆಗೆ ಅಂಗರಕ್ಷಕರನ್ನು ನಿಯಮಿಸಿದನು. ಆಗ ಪಾರ್ವತಿಯು ತನ್ನ ಸಹವಾಸಿಗರಾದ ಹದಿನಾರುಸಹಸ್ರ ವಿಳಾಸಿನಿಯರಿಂದ ಕೂಡಿಕೊಂಡು ಕ್ರೀಡಾವನವನ್ನು ಹೊಕ್ಕು, ನಿರ್ಮಲವಾದ ಸರೋವರತೀರದಲ್ಲಿ, ಲತಾಮಂಟಪದಲ್ಲಿ, ತಣ್ಣೆಳಲಲ್ಲಿ, ಕಮಲಗಳಿದ್ದಲ್ಲಿ, ಪುಳಿನಸ್ಥಳದಲ್ಲಿ ಲಿಂಗವನ್ನು ರಚಿಸಿ, ಸಂಪಗೆ, ಬಕುಳ ಮೊದಲಾದ ಹೂಗಳಿಂದ ಭಕ್ತಿಪೂರ್ವಕವಾಗಿ ಅದನ್ನು ಪೂಜಿಸುವಳು.

ಈ ಪ್ರಕಾರ ಪಾರ್ವತಿಯ ಬಾಲಲೀಲೆಯು ಶಿವಲೀಲೆಯಾಗಲು, ಎಡವರಿಯದೆ, ಬಲವರಿಯದೆ, ಹಗಲೆನ್ನದೆ, ಇರುಳೆನ್ನದೆ, ಪರಿಜನವನ್ನು ಲೆಕ್ಕಿಸದೆ, ಹಸಿವೆ—ನೀರಡಿಕೆಗಳನ್ನು ಮರೆತು ಆಕೆಯು ಶಿವನಲ್ಲಿ ಮರುಳಾಗಿದ್ದಳು. ಇದನ್ನು ಪರಿಜನವು ನೋಡಿ ಕೌತುಕಪಟ್ಟು ಹೆದರಿ ತಮ್ಮೊಳಗಿನವಳೋರ್ವ ತರುಣಿಯನ್ನು ಗಿರಿರಾಜನಲ್ಲಿಗೆ ಕಳುಹಲು, ಅವಳು ಭರದಿಂದ ಓಲಗಕ್ಕೆ ಬಂದು, ಭಯಭಕ್ತಿಯಿಂದ ಕೈ ಮುಗಿದು, ಗಿರಿರಾಜನನ್ನು ಕುರಿತು—"ದೇವನೇ, ಕುಮಾರಿಯಾದ ಗಿರಿಜೆಯು ಯಾವದನ್ನೂ ಬಯಸದೆ ರಮ್ಯಸ್ಥಳಗಳನ್ನು ಕಂಡಕೂಡಲೆ ಅಲ್ಲಿ ದೇವರ ದೇವನಾದ ಶಿವನನ್ನು ಸ್ವತಂತ್ರದಿಂದ ಪೂಜಿಸುತ್ತಿರುವಳು. ಆ ಮಹಾಮಹಿಮೆಯು ಶಿವಪೂಜಾಸಕ್ತಳಾಗಿ ದೇವಿಯುವರ ಮೊಲೆಹಾಲನ್ನು ಇಚ್ಛಿಸದೆ, ಆನಂದದಿಂದಿರುವಳು. ಎನ್ನಲು ಪರ್ವತರಾಜನು ಕೌತುಕಪಟ್ಟು ಪುತ್ರಿಯನ್ನು ನೋಡುವ ಇಚ್ಛೆಯಿಂದ ಆಕೆಯಿದ್ದೆಡೆಗೆ ಬಂದನು. ಸರೋವರತೀರದಲ್ಲಿ ಪರಾಗಪೀಠದ ಮೇಲಿರುವ ಮಳಲಲಿಂಗವನ್ನು ಅಗಣಿತಪ್ರೇಮದಿಂದ ಪೂಜಿಸುವ ತನುಜೆಯನ್ನು ನೋಡಿ ಆತನ ಮೈಯಲ್ಲಿ ಪುಳಕಗಳು ಎದ್ದವು, ಆನಂದಾಶ್ರುಗಳು ಉದುರಿದವು. ಆಗ ಅತನು—"ಎನ್ನ ಆಯುಷ್ಯವೇ, ಎನ್ನ ತತ್ವಸುಖವೇ, ಎನ್ನ ಒಡತಿಯೇ, ಬಾ" ಎಂದು ಮಗಳನ್ನು ಕರೆದನು. ಪಾರ್ವತಿಯು ತಂದೆಯ ಪ್ರೇಮಯುಕ್ತಸಾತ್ವಿಕಸ್ವರ

ವನ್ನು ಕೇಳಿ, ಶಿವಲಿಂಗವನ್ನು ನಮಸ್ಕರಿಸಿ, ಪುತ್ರಿಯ ಭಾವವನ್ನು ನಟಿಸುವದಕ್ಕಾಗಿ ಎದ್ದುನಿಂತು, ನಗುತ್ತ ಮಂದಗಮನದಿಂದ ನಡೆದುಬಂದು, ತಂದೆಯನ್ನು ಅಪ್ಪಿಕೊಂಡಳು. ಆಗ ಪರ್ವತರಾಜನು—"ರತ್ನವೇ, ಮುಕ್ತಾಫಲವೇ, ನನ್ನ ಪ್ರಾಣವೇ, ಪರುಷವೇ, ಮುಕ್ತಿಯ ನಿರ್ಮಾಣವೇ" ಎನ್ನುತ್ತ ಪುತ್ರಿಯ ನೆತ್ತಿಯನ್ನು ಮೂಸಿನೋಡಿ ಅಪ್ಪಿಕೊಂಡು ಅವಳೊಡನೆ ಆನೆಯನ್ನೇರಿ ಪಟ್ಟಣವನ್ನು ಪ್ರವೇಶಿಸಿದನು. ಮೇನಾದೇವಿಯು ಮಗಳು ಬಂದ ಸುದ್ದಿಯನ್ನು ಕೇಳಿ ಆನಂದದಿಂದ ಆಕೆಯಿದ್ದೆಡೆಗೆ ಬಂದು ಮೊಲೆಯ ಸಂಗಡ ಕಣ್ಣುಗಳು ತೊರೆಯಲು, ಪುಳಕಗಳ ಸಂಗಡ ಗದ್ಗದವು ಉಂಟಾಗಲು, ಬೆವರಿನ ಕೂಡ ಕಂಪನವು ಹುಟ್ಟಲು ಸಿಂಗರದ ಶಿಶುವನ್ನು ತೆಗೆದಪ್ಪಿಕೊಂಡು ಮೂರ್ಧಾಘ್ರಾಣವನ್ನು ಮಾಡಿ ಮೊಲೆಯುಣಿಸಿದಳು. ಈ ಪ್ರಕಾರ ಮೇನಾದೇವಿಯೂ, ಗಿರಿರಾಜನೂ ಮಗಳನ್ನು ಕಂಣ್ತುಂಬ ನೋಡಿ, ಮೆಯ್ಯುಬ್ಬಿ ಅಪ್ಪಿಕೊಂಡು, ಮನಸ್ಸು ದಣಿಯುವಂತೆ ನೆನಿಸಿ, ಮುಕ್ತಿಯನ್ನು ಮೂರ್ತಿಗೊಳಿಸುವಂತೆ ಆಕೆಯನ್ನು ಸರ್ವಸುಖದಿಂದ ಸಲಹುತ್ತಿದ್ದರು.

ಈ ಪ್ರಕಾರ ಬಾಲ್ಯದಲ್ಲಿ ಬೆಳೆಯುತ್ತಿರುವ ಪಾರ್ವತಿಗೆ ಸೌಂದರ್ಯದೊಡನೆ ಹತ್ತು ವರ್ಷಗಳು ಪ್ರಾಪ್ತವಾಗಲು, ಗಿರಿರಾಜನೂ—ಮೇನಾದೇವಿಯೂ ಆಕೆಯನ್ನು ಕಕ್ಕುಲತೆಯಿಂದ ನೋಡಿ ಆನಂದಪಡುವರು. ಬಾಲ್ಯವಿಮೋಚನೆಯಲ್ಲಿ ಅಥವಾ ಯೌವನೋದಯದಲ್ಲಿ ಗಿರಿಜೆಯ ನಗೆಯು ಲಜ್ಜೆಯನ್ನೂ, ತ್ವರಿತಗತಿಯು ಮಂದತ್ವವನ್ನೂ, ನೋಟವು ಅಭಿಲಾಷೆಯನ್ನೂ, ಸ್ತನಕುಚಗಳು ತಮ್ಮ ಸೀಮೆಯ ಮರ್ಯಾದೆಯನ್ನೂ ಹೊಂದುತ್ತಿರುವವು. ಇದಲ್ಲದೆ ಆ ಲೋಕಮಾತೆಯ ನಾಭಿಮಂಡಲವು ಗಂಭೀರತೆಯು ಹೊಂದಿತು, ಅಲಕಗಳು ವಿರಲವಾದವು, ಕಟಿಯು ಸೂಕ್ಷ್ಮವಾಗಹತ್ತಿತು, ಮಾತು ಮೌನದಿಂದ ಕೂಡಿತು, ಕಾಂತಿಯು ಶರೀರವನ್ನು ಆವರಿಸಿತು. ಈ ಪ್ರಕಾರ ಅಗಜೆಗೆ ಮನೋಹರವಾದ ಯೌವನೋದಯವಾಗಿ ಕೆಲವು ದಿನಗಳು ಕ್ರಮಿಸುತ್ತಿರಲು, ವನವನ್ನು ಮಾವಿನ ಮರವೂ, ಮಾವಿನಮರವನ್ನು ವಸಂತನೂ, ವಸಂತನನ್ನು ಕಾಮನೂ, ಕಾಮನನ್ನು ಇಕ್ಷುಚಾಪವೂ, ಇಕ್ಷುಚಾಪವನ್ನು ಹೂಬಾಣವೂ ಆಶ್ರಯಿಸುವಂತೆ ನವಯೌವನವು ಆಕೆಯನ್ನು ಆಶ್ರಯಿಸಿತು. ಆಗ ಗಿರಿಜೆಯು ತನ್ನ ನವಕುಚಗಳೆಂಬ ಕಲಶಗಳಿಂದಲೂ, ಮುಖವೆಂಬ ಕನ್ನಡಿಯಿಂದಲೂ, ಉಂಗರಗೂದಲುಗಳೆಂಬ ತೋರಣಗಳಿಂದಲೂ, ಮುಡಿಯೆಂಬ ಗುಡಿಯಿಂದಲೂ, ಉಳಿದ ಅವಯವಗಳೆಂಬ ಜನರಿಂದಲೂ ಆ ಯೌವನವನ್ನು ಎದುರುಗೊಂಡಳು. ಪಾರ್ವತಿಯ ಸುಮನೋಹರವಾದ ಯೌವನವನ್ನು ವರ್ಣಿಸುವದು ಆದಿಶೇಷನಿಗಾದರೂ ಅಸಾಧ್ಯವಾಗಿರಲು, ಮನುಷ್ಯರ ಪಾಡೇನು? ಯೌವನದಲ್ಲಿ ಆಕೆಯ ಮನದಾಸೆಯು ಮುಖದಲ್ಲಿ, ಮಾತು ನೋಟದಲ್ಲಿ, ನಗೆಯು ಗಲ್ಲದಲ್ಲಿ, ಸಿಟ್ಟು ಹುಬ್ಬಿನಲ್ಲಿ ವ್ಯಕ್ತವಾದವು.

ಈ ಪ್ರಕಾರ ಶೋಭಿಸುವ ನವಯೌವನದಲ್ಲಿ ಸಕಲಲೀಲಾವಿಲಾಸೆಯಾದ ಪಾರ್ವತಿಯು ಜಲಕ್ರೀಡೆಗಾಗಿ ವಿಲಾಸಿನಿಯರನ್ನು ಕೂಡಿಕೊಂಡು, ಕೇಳೀವನವನ್ನು ಹೊಕ್ಕಳು. ಅಲ್ಲಿ ಅರಳಿದ ಕಮಲಗಳ ಸುಗಂಧಕ್ಕೆರಗುವ ಗುಂಗೀಹುಳಗಳ ಸಮೂಹದಿಂದ ಒಂದು

ಸರೋವರವು ಒಪ್ಪುತ್ತಿರುವದು. ವಿಳಾಸಿನಿಯರು ಆ ರಮ್ಯವಾದ ಕೊಳವನ್ನು ಕಂಡು ಅದರಲ್ಲಿ ಕುಂಕುಮ–ಕಸ್ತೂರಿ–ಚಂದನ–ಪುಷ್ಪಗಳನ್ನು ಬೆರಿಸಿ, ಪಾರ್ವತಿಯೊಂದಿಗೆ ಅದನ್ನು ಹೊಕ್ಕರು. ಚಂದ್ರವದನೆಯಾದ ಪಾರ್ವತಿಯು ಕೊಳವನ್ನು ಹೊಕ್ಕದ್ದರಿಂದ ಹಗಲಲ್ಲಿಯೇ ನೈದಿಲೆಗಳು ಅರಳಿದವು, ಕಮಲಗಳು ಬಾಡಿದವು, ಚಕ್ರವಾಕಗಳು ವಿರಹ ದುಃಖವನ್ನು ಹೊಂದಿದವು. ಆಗ ವಿಳಾಸಿನಿಯರು ಪಾರ್ವತಿಯ ಚರಣಕ್ಕೆರಗಿ, ಜಲಕ್ರೀಡೆಗೆ ಸಿದ್ಧರಾಗಿ, ತಮ್ಮ ಮೃದುಕರಗಳಿಂದ ಒಬ್ಬರ ಮೇಲೊಬ್ಬರು ನೀರು ಉಗ್ಗುತ್ತಿರಲು, ಅವರು ಆರಂಭದಲ್ಲಿ ಕಾಮನಿಗೆ ರತ್ನದ ಅರ್ಘ್ಯಗಳನ್ನು ಕೊಡುವಂತೆ ಶೋಭಿಸಿತು. ಒಬ್ಬ ತರುಣಿಯು ನೀರಲ್ಲಿಯ ಪ್ರತಿಬಿಂಬವನ್ನು ನೋಡಿ "ಎಲೆ ತರುಣಿಯೇ, ಹೋಗಬೇಡೆಂ"ದು ಒದರುತ್ತ ಅದನ್ನು ಹಿಡಿಯ ಹೋಗಿ ಕಾಣದೆ ಎಡಬಲದ ಗೆಳತಿಯರನ್ನು ಒಳಿತಾಗಿ ನಗಿಸಿದಳು.

**ಗಿರಿಜೆಗೆ ಶಿವನದರ್ಶನ:**—ಹೀಗೆ ಪಾರ್ವತಿಯು ವಿಳಾಸಿನಿಯರೊಂದಿಗೆ ಯಥೇಚ್ಛವಾಗಿ ಜಲಕ್ರೀಡೆಯನ್ನು ಆಡಿ, ಸರೋವರದಿಂದ ಹೊರಹೊರಟು, ಉತ್ತಮವಾದ ವಸ್ತ್ರವನ್ನುಟ್ಟು, ದಿವ್ಯಾಭರಣಗಳನ್ನು ತೊಟ್ಟು, ಕಸ್ತೂರಿಯ ತಿಲಕವನ್ನಿಟ್ಟು, ಸಮಾಧಾನವನ್ನು ಮುಂದಿಟ್ಟು, ಪರಿವಾರದೊಡನೆ ಪಟ್ಟಣದಕಡೆಗೆ ನಡೆದಳು. ಇತ್ತ ಜೋಲುವಜಡೆಯೂ, ವೀಣೆಯ ಮಧುರಧ್ವನಿಯೂ, ವಿಭೂತಿಯಿಂದೊಪ್ಪುವ ಶರೀರವೂ, ಉಜ್ವಲವಾದತೇಜಸ್ಸೂ ಒಪ್ಪುತ್ತಿರಲು, ನಾರದ ಮಹಾಮುನಿಯು ಹರಧ್ಯಾನಾಸಕ್ತನಾಗಿ ಗಿರಿರಾಜನೆಡೆಗೆ ಬಂದನು. ಆಗ ಗಿರಿರಾಜನು ಸತಿಯೊಡನೆ ಆ ಮಹಾಮಹಿಮನನ್ನು ನಮಸ್ಕರಿಸಿ, ವಿಧ್ಯುಕ್ತ ಪೂಜಿಸಿ—"ಶೈವನಿಧಿಯಾದ ಗುರುಮೂರ್ತಿಗಳೇ, ನಿಮ್ಮ ಬರುವಿಕೆಯಿಂದ ನಾವು ಕೃತಾರ್ಥರಾದೆವು. ತಾವು ಇಂದು ಸ್ವರ್ಗವನ್ನು ಬಿಟ್ಟು ನಮ್ಮೆಡೆಗೆ ಬಂದದ್ದರಿಂದ ನಮ್ಮಮೇಲೆ ಪರಮಾನುಗ್ರಹವಾಯಿತು. ಇಂದಿಗೆ ನಮ್ಮ ಜನ್ಮವು ಸಫಲವಾಯಿತು" ಎಂದು ಸ್ತುತಿಸಿದರು. ಅಷ್ಟರಲ್ಲಿ ನಕ್ಷತ್ರಗಳನಡುವಿನ ಚಂದ್ರನಂತೆಯೂ, ಲತೆಗಳನಡುವಿನ ಕಲ್ಪಲತೆಯಂತೆಯೂ, ಮಣಿಗಳನಡುವಿನ ಚಿಂತಾಮಣಿಯಂತೆಯೂ ವಿಳಾಸಿನಿಯರ ಮಧ್ಯದಲ್ಲಿರುವ ಗಿರಿಜೆಯು ತಂದೆಯ ಬಳಿಗೆ ಬಂದು ಆತನ ತೊಡೆಯಮೇಲೆ ಕುಳಿತಳು. ಜಗನ್ಮಾತೆಯಾದ ಪಾರ್ವತಿಯನ್ನು ನೋಡಿ ನಾರದಮಹಾಮುನಿಯು ಹರುಷಗೊಂಡು ನಯ ಭಯಗಳಿಂದ ಸಾಷ್ಟಾಂಗಪ್ರಣಾಮವನ್ನು ಮಾಡಿ, ಎದ್ದುನಿಂತು ಅಂಜಲಿಬದ್ಧನಾಗಿ ಪುಳುಕಿಸುತ್ತ—"ಶೈವಜ್ಞಾನಿಯೇ ಶರಣು, ಮಹಾಜ್ಞಾನಿಯೇ ನನ್ನನ್ನು ರಕ್ಷಿಸು" ಎಂದು ಬಣ್ಣಿಸುತ್ತ ಆ ಅಗಸುತೆಯನ್ನು ಉಚ್ಚಾಸನದಲ್ಲಿ ಕುಳ್ಳಿರಿಸಿದನು.

ನಾರದನ ಈ ಕೃತಿಯನ್ನು ನೋಡಿ ಮೇನಾದೇವಿಯೂ ಗಿರಿರಾಜನೂ ಆಶ್ಚರ್ಯಪಟ್ಟು ಆ ಮುನೀಂದ್ರನನ್ನು ಕುರಿತು—"ಪೂಜ್ಯರೇ, ನಾವು ನಿಮ್ಮನ್ನು ಉಚ್ಚಾಸನದಲ್ಲಿ ಕುಳ್ಳಿರಿಸಿ, ಪಾದೋದಕವನ್ನು ಆದರದಿಂದ ಸ್ವೀಕರಿಸಿ ಅತಿ ಹರುಷದಿಂದ ಕೃತಾರ್ಥರಾಗಿರಲು, ನಮ್ಮ ಮಗಳನ್ನು ನೀವು ನಮಸ್ಕರಿಸಿದ್ದು ಆಶ್ಚರ್ಯವಲ್ಲವೆ?" ಎಂದು

ಅಜ್ಞಾನದಿಂದ ನುಡಿದರು. ಆಗ ದಿವ್ಯಜ್ಞಾನಿಯಾದ ನಾರದನು ನಸುನ ಗುತ್ತ—"ರಾಜನೇ, ಆಗಜೆಯ ಮಹಾಮಹಿಮೆಯನ್ನು ಹರಿ ಬ್ರಹ್ಮೇಂದ್ರಾದಿ ದೇವ ತೆಗಳೂ, ಮನುಮುನಿಗಳೂ ಅರಿಯದಿರಲು, ಈಕೆಯ ಚರಣಕ್ಕೆರಗಲಿಕ್ಕೆ ನಾನೆಷ್ಟ ರವನು? ಒಂದು ಕಾರಣದಿಂದ ನಿಮ್ಮ ಪುಣ್ಯೋದರದಲ್ಲಿ ಹುಟ್ಟಿದರೆ, ಈ ಬಾಲೆಯನ್ನು ಅವಿಚಾರದಿಂದ ಪುತ್ರಿಯೆಂದು ಭಾವಿಸುವಿರಾ? ನವರತ್ನಕ್ಕೆ ಸಮುದ್ರವು, ಚಿಂತಾಮಣಿಗೆ ಗುಡ್ಡವು, ಮುತ್ತಿಗೆ ಚಿಪ್ಪು, ಸೂರ್ಯ-ಚಂದ್ರರಿಗೆ ಮೂಡಣಗಿರಿಯು, ಲಿಂಗಕ್ಕೆ ಭೂಮಿಯು, ಅಮೃತಕ್ಕೆ ಕ್ಷೀರಸಮುದ್ರವು, ಪದ್ಮಕ್ಕೆ ಕೆಸರು ತಾಯಿಯೇ? ಅಲ್ಲವು ಅಲ್ಲವು! ಅದರಂತೆಯೇ ಈ ಹಸುಳೆಗೆ ನೀವು ತಾಯಿತಂದೆಗಳಲ್ಲ. ಮೇನಾದೇವಿಯೇ, ನಿನ್ನ ತಪಸ್ಸಿಗೆ ದಯಹುಟ್ಟಿ, ಈ ಮಹಾಮಹಿಮೆಯು ನಿನ್ನ ಹೊಟ್ಟೆಯಲ್ಲಿ ಹುಟ್ಟಿದರೆ ಆ ದಿವ್ಯಜ್ಞಾನಿಯನ್ನು ಪುತ್ರಿಯೆಂದು ಭಾವಿಸುವರೇ? ಗಿರಿರಾಜನೇ, ಶಿವನ ಸುಧೆಯೂ, ಶಿವನ ಜೀವವೂ, ಶಿವನ ಆನಂದವೂ, ಸದಾಶಿವನ ಘನಪುಣ್ಯವೂ, ಶಿವನ ಆಯುಷ್ಯವೂ ಆದ ಗಿರಿಜೆಯನ್ನು ಮಗಳೆನ್ನುವೆಯಲ್ಲ! ದಕ್ಷನು ಮಾಡಿದ ಶಿವನಿಂದೆಗೆ ಕೋಪಿಸಿ ದಾಕ್ಷಾ ಯಣಿಯು ಯೋಗದಿಂದ ಮೇನಾದೇವಿಯ ಬಸುರಿನಲ್ಲಿ ಬಂದದ್ದನ್ನು ತಿಳಿದು ನೋಡಿರಿ. ಈ ಕಾರಣದಿಂದ, ಶಿವನ ಅರಸಿಯಾದ ಈಕೆಯನ್ನು ಶಿವನೆಡೆಗೆ ತಡಮಾಡದೆ ಕಳುಹಿರಿ. ಗಿರಿಜೆಯು ದೊಡ್ಡವಳಾಗುವವರೆಗೆ ಶಿವನು ಹೇಮಕೂಟದಲ್ಲಿ ಯೋಗದಲ್ಲಿರುವನು. ಮೋಹಪಾಶದಿಂದ ಬದ್ಧರಾದ ನಿಮಗೆ ಈ ನಿಜಸ್ಥಿತಿಯನ್ನು ತಿಳಿಸುವದಕ್ಕಾಗಿಯೇ ನಾನು ಇಲ್ಲಿಗೆ ಬಂದೆನು." ಅನ್ನಲು, ಗಿರಿರಾಜ-ಮೇನಾದೇವಿಯರು ಅಚ್ಚರಿಗೊಂಡು ಪಾರ್ವತಿಗೆ ಭಯಭಕ್ತಿಯಿಂದ ನಮಸ್ಕರಿಸಿ, ನಾರದಮಹಾಮುನಿಯನ್ನು ಕೃತಜ್ಞತೆ ಯಿಂದ ಕೊಂಡಾಡಿ ಆತನನ್ನು ಸತ್ಕರಿಸಿದರು. ಆಗ ಆ ಮಹಾಮುನಿಯು ಆ ದಂಪತಿ ಗಳ ಅನುಮತಿಯಿಂದ ಸ್ವರ್ಗಲೋಕಕ್ಕೆ ತೆರಳಿದನು.

ಪರ್ವತರಾಜನು ನಾರದನಿಂದ ಕೇಳಿದ ರಹಸ್ಯವನ್ನು ನೆನೆದು, ಪಾರ್ವತಿಯನ್ನು ಹೇಮಕೂಟದಲ್ಲಿರುವ ಪರಂಜ್ಯೋತಿಸ್ವರೂಪನಾದ ವಿರೂಪಾಕ್ಷನ ಸನ್ನಿಧಿಗೆ ಕಳಿಸಬೇ ಕೆಂದು ನಿಶ್ಚಯಿಸಿ, ಜಯಾವಿಜಯೆಯರೆಂಬ ಇಬ್ಬರು ಸ್ತ್ರೀಯರನ್ನು ಕೂಡಿಕೊಂಡು, ಪಾರ್ವತಿಯಿದ್ದೆಡೆಗೆ ಬಂದನು. ಅಷ್ಟರಲ್ಲಿ ಆತನ ಅಪ್ಪಣೆಯಂತೆ ಮೂರು ಪುಷ್ಪಕವಿ ಮಾನಗಳು ಅಲ್ಲಿ ಸಿದ್ಧವಾಗಿ ಬರಲು, ಪತಿಯ ಸನ್ನಿಧಿಯ ಪ್ರಯಾಣವನ್ನು ನೆನೆದು ಪಾರ್ವತಿಯು ಸಂತೋಷದಿಂದ ಪುಳುಕಿಸಹತ್ತಿದಳು. ಆಗ ಮೇನಾದೇವಿಯು ಮಗಳೆ ಡೆಗೆ ಬಂದು ಸ್ನೇಹದಿಂದ ಮುಂಡಾಡಿ—"ಮಹಾಮಹಿಮೆಯೇ, ಘೋರಾರಣ್ಯದಲ್ಲಿ ಹುಲಿ-ಕರಡಿ-ಹಾವು-ಸಿಂಹ ಮುಂತಾದ ಕ್ರೂರಪ್ರಾಣಿಗಳ ಉಪದ್ರವವು ವಿಶೇಷವಾಗಿ ರುವದು. ಕಾರಣ ಬಹು ಜೋಕೆಯಿಂದ ಇರು" ಎಂದು ಭಯರಸದಿಂದ ಬುದ್ಧಿಯನ್ನು ಹೇಳಹತ್ತಿದಳು. ಗಿರಿಜೆಯು ತಾಯಿಯ ಉಪದೇಶವನ್ನು ಕೇಳಿ ಮನಸ್ಸಿನಲ್ಲಿ ನಸುನ ಗುತ್ತ ಆಕೆಯ ಮಾತಿಗೆ ಒಡಂಬಟ್ಟು, ಚರಣಕ್ಕೆರಗಿದಳು. ಆಗ ಅತಿಸ್ನೇಹದಿಂದ ಮೇನಾದೇವಿಯ ಕಣ್ಣೀರುಗಳು ಉದುರುತ್ತಿರಲು, ಪರ್ವತರಾಜನು ಪುತ್ರಿಯೊಡನೆ ವಿಮಾನವನ್ನೇರಿದನು.

ಆ ವೇಗಶಾಲಿಯಾದ ವಿಮಾನವು ತನ್ನ ಹಿಂಬದಿಯಲ್ಲಿ ಜಯಾವಿಜಯೆಯರ ಎರಡೂ ವಿಮಾನಗಳು ಬರುತ್ತಿರಲು, ಅಲ್ಪವೇಳೆಯಲ್ಲಿ ತುಂಗಭದ್ರಾನದಿಯನ್ನು ದಾಟಿ, ಅನೇಕ ಮುನಿಸಮೂಹದಿಂದೊಪ್ಪುವ ಹೇಮಕೂಟಪರ್ವತವನ್ನು ಸೇರಿತು. ಆ ಹೇಮಕೂಟ ಪರ್ವತದಲ್ಲಿ ಶಿವನ ಯೋಗಸಮಾಧಿಯ ಭಯದಿಂದ ಕೋಗಿಲೆಗಳು ಕೂಗವು, ಭ್ರಮರ ಗಳು ಧ್ವನಿಮಾಡವು, ಗಿಳಿಗಳು ಉಲಿಯವು, ಮಂದಾನಿಲನು ಅಲ್ಲಾಡನು. ಈ ಅದ್ಭು ತವನ್ನು ಮಗಳಿಗೆ ತೋರುತ್ತ ಪರ್ವತರಾಜನು ಅವಳೊಡನೆ ಮುಂದಕ್ಕೆ ಬರಲು, ಸೂರ್ಯನಂತೆ ಪ್ರಕಾಶಮಾನನೂ, ಶಿವಧ್ಯಾನಾರೂಢನೂ ಆದ ನಂದಿಕೇಶನು ಪರ್ವ ತದ ಮಹಾದ್ವಾರವನ್ನು ಕಾಯುತ್ತ ನಿಂತಿದ್ದನು. ನಂದಿಕೇಶನು ಲೋಕಮಾತೆಯಾದ ಪಾರ್ವತಿಯನ್ನು ನೋಡಿ ಸಾಷ್ಟಾಂಗವೆರಗಿ ಹಿಂದಕ್ಕೆ ಸರಿದುನಿಂತು—"ಅನಂತಗುಣಾ ಭರಣೆಯೇ, ಶಾಂತೆಯೇ, ಕೃಪಾನಿಧಿಯೇ, ಶರಣು" ಅನ್ನುತ್ತ ಸ್ತುತಿಸಿದನು. ಆಗ ಪಾರ್ವತಿಯು ತಂದೆಯೊಡನೆ ವಿಮಾನದಿಂದ ಕೆಳಗಿಳಿಯಲು, ಕೂಡಲೆ ಜಯಾವಿಜಯೆಯರು ಇಳಿದರು. ತಂದೆಯು ಕೈಬೆರಳನ್ನು ಹಿಡಿದು ಪತಿಯನ್ನು ನೋಡುವ ಉಬ್ಬಿನಿಂದ ಪಾರ್ವ ತಿಯು ತ್ರೀವ್ರವಾಗಿ ಮುಂದಕ್ಕೆ ಸಾಗಿದಳು.

ಈ ಪ್ರಕಾರ ಅವರೆಲ್ಲರೂ ಚಂದ್ರಧರನಲ್ಲಿ ಮನಸ್ಸುಳ್ಳವರಾಗಿ ಸಾಗುತ್ತಿರಲು, ವಿದ್ಯುತ್ಪ್ರಕಾಶವೋ, ಬೆಳದಿಂಗಳೋ, ಕೋಟಿಸೂರ್ಯಕಾಂತಿಯೋ, ಸರ್ವೇಶ್ವರನ ನಿಜಪ್ರಕಾಶದ ನಿಧಿಯೋ ಅನ್ನುವಂತೆ ಎದುರಿನಲ್ಲಿ ವಿರೂಪಾಕ್ಷನ ಪ್ರಭಾಮಂಡಲವು ದಿಕ್ಕುದಿಕ್ಕಿಗೆ ಹಬ್ಬಿ ಶೋಭಿಸುತ್ತಿತ್ತು. ಆ ಪ್ರಭಾಮಂಡಲದ ಮಧ್ಯದಲ್ಲಿ ಪದ್ಮಾಸ ನವೂ, ವಿಭೂತಿಯಿಂದೊಪ್ಪುವ ಮನೋಹರವಾದ ಶರೀರವೂ, ಧ್ಯಾನಮುದ್ರಾಂಗು ಲಿಯೂ, ರುದ್ರಾಕ್ಷಮಾಲೆಯೂ, ಶುಭ್ರವಾದ ಯಜ್ಞೋಪವೀತವೂ, ಮನೋಹರವಾದ ಮುಖವೂ, ಪ್ರಕಾಶಮಾನವಾದ ಗಲ್ಲಗಳೂ, ಮುಚ್ಚಿದ ಕಣ್ಣುಗಳೂ, ಏಕಾಗ್ರಚಿ ತ್ತವೂ, ಪಿಂಗಳವರ್ಣದ ಜಡೆಯೂ ಶೋಭಿಸುತ್ತಿರಲು, ತಪೋವೇಷದಿಂದ ಶಿವನು ಒಪ್ಪು ತ್ತಿರುವನು. ಆ ಮಹಾಮಹಿಮನ ಮನಸ್ಸು ಬುದ್ಧಿಯಲ್ಲಿಯೂ, ಬುದ್ಧಿಯು ಅಹಂಕಾ ರದಲ್ಲಿಯೂ, ಅಹಂಕಾರವು ಚಿತ್ತದಲ್ಲಿಯೂ, ಚಿತ್ತದ ನೆಲೆಯು ಪ್ರಾಣದಲ್ಲಿಯೂ, ಪ್ರಾಣವು ಜೀವನಲ್ಲಿಯೂ ಇರಲು, ಜೀವನೇ ಪರಮಾತ್ಮಸ್ವರೂಪನೆನಿಸಿ, ನಿರ್ಮಾಯ—ನಿಷ್ಕಾಮ—ನಿಷ್ಕಂಪ—ನಿವಾತಜ್ಯೋತಿರೂಪದಿಂದ ವಿರೂಪಾಕ್ಷನು ತನ್ನನ್ನು ತಾನೇ ಧ್ಯಾನಿಸುತ್ತ ಸಮಾಧಿಯಲ್ಲಿರುತ್ತಿದ್ದನು. ಮುನಿಗಳ ಮನಸ್ಸಿಗೆ ನಿಲುಕದ, ಮನುಗಳ ವಿಚಾರಕ್ಕೆ ಹೊರಗಾದ, ಶಾಸ್ತ್ರವು ಅರಿಯದ, ವೇದಘೋಷಕ್ಕೆ ಸಿಗದ ಸದಾಶಿವನ ಸಮಾಧಿಯ ನೆಲೆಯು ಪಾಮರರಾದ ಮನುಷ್ಯರ ವರ್ಣನೆಗೆ ಸಾಧ್ಯವೇ?

ಈ ಪ್ರಕಾರ ಸಮಾಧಿಯಿಂದೊಪ್ಪುವ ಶಿವನಚರಣಕ್ಕೆ ಪರ್ವತರಾಜನು ಸಾಷ್ಟಾಂ ಗವೆರಗಿ ಪಾರ್ವತಿಯನ್ನು ಕರೆದು—"ಅನುಪಮನಾದ ನಿನ್ನ ಅಧಿಪಹಂಪೆಯ ವಿರೂಪಾ ಕ್ಷನು ಇಗೋ ಇರುತ್ತಾನೆ ನೋಡು. ಈ ಮಹಾಮಹಿಮನನ್ನು ಭಕ್ತಿಯಿಂದ ಪೂಜಿಸು" ಎಂದು ಹೇಳಿದನು. ತಂದೆಯು ಈ ಮೇರೆಗೆ ಹರನ ತತ್ವಮಯ ಸೌಂದರ್ಯರೂಪ

ವನ್ನು ವರ್ಣಿಸಿ, ಆತನನ್ನು ನಮಸ್ಕರಿಸುವದಕ್ಕೆ ಆಗ್ರಹಮಾಡಲು, ಗಿರಿಜೆಯು, ಕೌತುಕರಸದಲ್ಲಿ ಆನಂದವು ಹುಟ್ಟಿ, ಭಯರಸದಲ್ಲಿ ಭಕ್ತಿಯು ಉತ್ಪನ್ನವಾಗಿ, ಸ್ನೇಹರಸದಲ್ಲಿ ತಾತ್ಪರ್ಯವು ತೋರಿ, ಶೃಂಗಾರರಸದಲ್ಲಿ ಲಜ್ಜೆವೆರಸಿ, ಮಂದಾನಿಲನ ಸೋಂಕಿನಿಂದ ಪುಷ್ಪಮಾಲೆ ಬಳುಕುವಂತೆ, ಮುಂದೆ ನಿನ್ನ ವಾಮಾಂಗವನ್ನು ಸೂರೆಗೊಳ್ಳುವದಕ್ಕೆ ಇದೇ ಕುರುಹೆಂದು ತೋರಿರುವಹಾಗೆ ಬಿಂಕದಿಂದ ಬಾಗಿನಿಂತು ವಿಲಾಸದಿಂದ ಶಿವನ ಎಡ ಮುಂಗುಟವನ್ನು ಮುಟ್ಟಿ ನಮಸ್ಕರಿಸಿ ಎದ್ದುನಿಂತು ಕಾರ್ಪಣ್ಯದಿಂದ ಆತನನ್ನು ನೋಡಿದಳು.

ಗಿರಿಜೆಯ ಶಿವಾರಾಧನ:—ಈ ಮೇರೆಗೆ ಪಾರ್ವತಿಯು ಶಿವನನ್ನು ನಮಿಸಿ ಎದ್ದುನಿಂತು ಆತನನ್ನು ನೋಡಿದಳು. ಆಗ ಆಕೆಯ ಮನಸ್ಸಿನಲ್ಲಿ ಬೇರೆ ಬೇರೆ ವಿಕಾರಗಳು ಉತ್ಪನ್ನವಾದವು. ಆಕೆಯು ಶಿವನನ್ನು ಕುರಿತು—ಭಗವಂತನೇ, ನಾನು ಇದ್ದಹಾಗೆ ನೀನು ಇರದೆ ನೀನು ತಪಸ್ಸು ಯಾಕೆ ಮಾಡುತ್ತೀ, ಎಂದು ನುಡಿಯುವಾಗ ಆಕೆಯ ಮನಸ್ಸಿನಲ್ಲಿ ಅಂಹಕಾರವು ಉತ್ಪನವಾಯಿತು; ದೇವ ದೇವನೇ, ನನಗೆ ನೀನೇ ಗತಿಯಲ್ಲವೆ? ಕರುಣಿಸು, ಎಂದು ಬೇಡಿಕೊಳ್ಳುವಾಗ ಆಕೆಯ ಮನಸ್ಸು ಕಾರ್ಪಣ್ಯಕ್ಕೆ ಈಡಾಯಿತು; ಆನಂದಸ್ವರೂಪನಾದ ನೀನು ನನ್ನನ್ನು ಯಾಕೆ ನೋಡಿ? ನನ್ನಿಂದ ನಿನಗೇನು ಆನಂದವಾಗಬೇಕಾಗಿದೆ, ಎಂದು ಬಗೆಯುವಾಗ ಆಕೆಯ ಮನಸ್ಸನ್ನು ಚಿಂತೆಯು ಆವರಿಸಿತು; ಮಹಾಮಹಿಮನಾದ ನಿನ್ನನ್ನು ಭೋಗಗಳಿಂದ ನಾನು ಎಂದು ಕೂಡೇನು? ಎಂದು ಕಲ್ಪಿಸುವಾಗ ಆಕೆಯ ಮನಸ್ಸಿನಲ್ಲಿ ಆಶೆಯು ಉತ್ಪನ್ನವಾಯಿತು. ಹೀಗೆ ಅಹಂಕಾರ, ಕಾರ್ಪಣ್ಯ, ಚಿಂತೆ, ಆಶೆ ಇವುಗಳಿಗೊಳಗಾದ ಪಾರ್ವತಿಯು ತಂದೆಯನ್ನು ಕುರಿತು—ಪಿತನೇ, ಈತನು ಶಿವನು; ನನ್ನ ಪತಿಯು; ನನ್ನ ಗುರುವು; ಪ್ರಖ್ಯಾತನು; ಶ್ರೇಷ್ಠತಮನು ಎಂಬದನ್ನು ನಾನುತಿಳಿದೆನು. ಇನ್ನು ನೀನು ಹೋಗು. ನಾನು ಯಾವಾಗಲೂ ಈತನನ್ನು ಪೂಜಿಸುತ್ತ ಆನಂದದಿಂದ ಇರುವೆನು ಎಂದು ಹೇಳಿದಳು. ಅದಕ್ಕೆ ಪರ್ವತರಾಜನು ಪ್ರೀತಿಯಿಂದ ಪಾರ್ವತಿಯನ್ನು ನೋಡಿ—ಮಗಳೇ, ಜೋಕೆಕಂಡೆಯಾ! ಗುಡ್ಡಗಳು, ಅರಣ್ಯಗಳು, ಗವಿಗಳು, ಮಡುಗಳು; ಜೋಕೆಯಿಂದ ಶಿವನನ್ನು ಪೂಜಿಸು, ಎಂದು ಹೇಳಿ ಹತ್ತು ಹೆಜ್ಜೆ ಹೋಗಿ, ಮೋಹವು ಚಿತ್ತವನ್ನು ಆವರಿಸಲು, ಮತ್ತೆ ಹಿಂದಿರುಗಿ ಬಂದು—ಲೋಕೋತ್ತಮೆಯೇ, ಹೋಗಿಬರುತ್ತೇನೆ, ಎಂದು ತಿರುಗಿರುಗಿ ಮಗಳನ್ನು ಅಪ್ಪಿಕೊಂಡು ಗಿರಿರಾಜನು ಹೋದನು. ಇತ್ತ ಗಿರಿಜೆಯು ಚಿಂತೆಯು ಹೆಚ್ಚಿತು. ತಪೋಮಯನೂ, ವಿಲಾಸನಿಧಿಯೂ, ವೈರಾಗ್ಯಯುಕ್ತನೂ ಆದ ಶಿವನನ್ನು ನೋಡಿ ಆಕೆಯು ಉಸುರ್ಗರೆದು ಗೆಳತಿಯನ್ನು ಕುರಿತು—ಸಖಿಯೇ, ವೇದಗಳೂ, ಹರಿಬ್ರಹ್ಮರೂ ಅರಿಯದ ಶಿವನ ತಪಸ್ಸನ್ನು ಅರಿಯುವದು ನನ್ನ ಯೋಗ್ಯತೆಯೇ? ವಿಚಾರಿಸಿ ನೋಡಿದರೆ, ಸಾತ್ವಿಕಭಕ್ತಿಗಲ್ಲದೆ ಶಿವನು ಪ್ರಾಪ್ತನಾಗಲಾರನು; ಆದ್ದರಿಂದ ಭಕ್ತಪ್ರದನಾದ ವಿರೂಪಾಕ್ಷನ ಅಂಘ್ರಿಗಳನ್ನು ಚೆನ್ನಾಗಿ ಅರ್ಚಿಸಿ ಆ ಮೇಲೆ ಆತನ ತನುವನ್ನು ಅಪ್ಪಿ ಸುಖಸಂಪದವನ್ನು ಪಡೆಯುವೆನು, ಎಂದು ನುಡಿಯುತ್ತಿರಲು, ಭಕ್ತಿಯು ದಟ್ಟಡಿಯನ್ನಿಡುತ್ತ

ಗಿರಿಜೆಯ ಮನಸ್ಸನ್ನು ಆವರಿಸಿತು. ಆಗ ಪಾರ್ವತಿಯು ಶಿವಪೂಜೆಗಾಗಿ ಹೂಗಳನ್ನು ಹರಿದು ತರುವದಕ್ಕೆ ಹೂದೋಟವನ್ನು ಹೊಕ್ಕಳು.

ಭಕ್ತಿಪರವಶೆಯೂದ ಪಾರ್ವತಿಯು ಜಾಜಿಮಲ್ಲಿಗೆ, ಸಂಪಗೆ, ಸೇವಂತಿಗೆ, ಪಾಟಳ, ಕಮಲ, ಕೇತಕಿ ಮೊದಲಾದ ಹೂಗಳನ್ನೂ, ಮರಗ, ಬಿಲ್ವ ಮೊದಲಾದ ಪತ್ರಗಳನ್ನೂ ಆರಿಸಿ ಶಿವನ ಸುಂದರಾವಯುವಗಳಿಗೆ ಒಪ್ಪಿಗೆ ಯಾಗುವಂತೆ ತರತರದ ಪೂದೊಡವೆಗಳನ್ನು ರಚಿಸಿದಳು. ಆಗ ಸಹಚರಿಯರು ಬಂದು ಬಳಲಿದ ಪಾರ್ವತಿಗೆ ಸೇವಂತಿಗೆಯ ವಾಸನೆಯ ನೀರಿನಿಂದ ಮಜ್ಜನವನ್ನು ಮಾಡಿಸಿ, ಪರಾಗದ ಅಂಗರಾಗವನ್ನು ಹಚ್ಚಿ, ತಾವರೆನೂಲದುಕೂಲವನ್ನುಡಿಸಿ, ಕದಂಬಪುಷ್ಪಗಳನ್ನು ಮುಡಿಸಿ, ಸುಂದರವಾದ ಪುಷ್ಪಾಭರಣಗಳನ್ನು ತಕ್ಕಂತೆ ಇಡಿಸಿ, ಮಕರಂದತಿಲಕವನ್ನಿಟ್ಟು ನವಲತೆಯನ್ನು ಅಂಕುರಗಳಿಂದ ಅಲಂಕರಿಸುವಂತೆ ಶರ್ವಾಣಿಯನ್ನು ಶೃಂಗರಿಸಿ ಕಯ್ಗೊಟ್ಟರು. ಆಗ ಅಗಜಾತೆಯು ಪ್ರೀತಿಯಿಂದ ಕೈಗೊಟ್ಟ ಸಖಿಯರ ಕೈಮೇಲೆ ಮೈಭಾರವನ್ನು ಹಾಕಿ, ಪಾದನಖಗಳು ಮಿನುಗುತ್ತಿರಲು, ಕಾಲುಂಗುರದ ಧ್ವನಿಯು ಹಬ್ಬುತ್ತಿರಲು, ಬಡನಡು ಬಳುಕುತ್ತಿರಲು, ಉಭಯ ವಕ್ಷಸ್ಥಳವನ್ನು ವ್ಯಾಪಿಸಿ ತುಂಬಿಬೆಳೆದ ಪೇರ್ಮೋತಿಗಳು ಸೆರಗನ್ನು ಒತ್ತುತ್ತಿರಲು, ಶಿವನ ಮನೋರಥವು ಮೂರ್ತಿಗೊಂಡಂತೆ ನಡೆದುಬಂದು ಚಂದ್ರಧರನ ಮುಂದೆ ನಿಂತಳು. ಆಗ ಪಾರ್ವತಿಯ ಆನಂದಾಶ್ರುಗಳಿಂದ ಶಿವನ ಚರಣಗಳು ತೊಳೆಯಲ್ಪಟ್ಟವು; ನಮಸ್ಕರಿಸುವಾಗ್ಗೆ ಶಿವಚರಣಕ್ಕೆ ಹತ್ತಿದ ಪಾರ್ವತಿಯ ಮಕರಂದತಿಲಕಾಂಶವು ಶಿವಪೂಜೆಯಲ್ಲಿ ಚಂದನವಾಯಿತು; ತರತರದ ಪುಷ್ಪಗಳನ್ನು ಶಿವಚರಣಕ್ಕರ್ಪಿಸಿ ಪೂದೊಡವೆಗಳನ್ನು ಒಪ್ಪಿಗೆಯಾಗಿ ಇಟ್ಟದ್ದರಿಂದ ಹರನ ಸೌಂದರ್ಯವು ಹೆಚ್ಚಿತು; ಗಿರಿಜೆಯ ಸುಗಂಧಯುಕ್ತವಾದ ಸುಯ್ಯಲರು ಧೂಪವಾಯಿತು; ನಗೆಮೊಗದ ಕಾಂತಿಯು ಆರತಿಯಾಯಿತು; ಭಕ್ತಿಯೇ ಆರೋಗಣೆಯಾಯಿತು.

ಈ ಪ್ರಕಾರ ಪಾರ್ವತಿಯು ಹಲವು ಭೋಗಗಳನ್ನು ರಾಗದಿಂದ ರಾಜವೆಸೌಳಿಗೆ ಪೂಜೆಯ ನೆವದಿಂದ ಸಮರ್ಪಿಸಿ, ಮನ್ಮಥನ ಮನೋರಥಕ್ಕೆ ದುರ್ಲಭನಾದ ಆ ಸದಾಶಿವನ ಸರ್ವಾಂಗವನ್ನು ಸಾಭಿಲಾಷೆಯಿಂದ ನೋಡಹತ್ತಿದಳು. ಆಗ ಭವಾನಿಯ ದೈನ್ಯದೃಷ್ಟಿಗಳು ಶಿವನ ಜಡೆಯಲ್ಲಿ ತೊಡಕಿ, ಹಣೆಯಲ್ಲಿ ಚನ್ನಾಗಿ ಆಡಿ, ಗಲ್ಲಗಳಲ್ಲಿ ಹಬ್ಬಿ, ಕಣ್ಣುಗಳಲ್ಲಿ ಹೊಂದಿ, ಮುಖದಲ್ಲಿ ಕೂಡಿ ಕಂಠದಲ್ಲಿ, ಮುಸುಕಿ, ಭುಜಾಗ್ರಗಳಲ್ಲಿ ಪ್ರಕಾಶಿಸಿ, ವಕ್ಷಸ್ಥಳದಲ್ಲಿ ಮುಳುಗಿ, ಕೈಗಳಲ್ಲಿ ಒಪ್ಪಿ, ಪಾದಗಳಲ್ಲಿ ಬಿದ್ದವು. ಈ ಪ್ರಕಾರ ಶಿವನನ್ನು ನೋಡಿ ಗಿರಿಜೆಯು ಬೆವರುವಳು, ಬೆರಗಾಗುವಳು, ಉಬ್ಬುವಳು, ಅಂಜಿ ಹಿಂದಕ್ಕೆ ಸರಿಯುವಳು, ಮುಟ್ಟುವದಕ್ಕಾಗಿ ನಿಗರುವಳು, ವಿಚಾರ ಮಾಡುವಳು, ಸಿಟ್ಟಾಗುವಳು, ಮನೋಹರ ಕಾಂತಿಯಿಂದೊಪ್ಪುವ ಶಿವನ ಸುಕುಮಾರಾವಯವಗಳನ್ನು ನೋಡಿ ಸಂತೋಷಪಡುವಳು, ಶಿವನ ಘನವೈರಾಗ್ಯಕ್ಕೆ ಅಂಜಿ ನಡುಗಿ ಚಿಂತಿಸುವಳು, ನಗುವಳು, ನಗೆಯಲ್ಲಿ ಕೌತುಕವು ಉತ್ಪನ್ನವಾಗಲು ನೋಡುವಳು, ನೋಟದಲ್ಲಿ ದೈನ್ಯವು ಹೆಚ್ಚಾಗಲು ವಿಚಾರ ಮಾಡುವಳು, ವಿಚಾರದಲ್ಲಿ ದೇವನ ಚಲುವು ನಿಲ್ಲಲು

ಆನಂದಪಡುವಳು. ಈ ಪ್ರಕಾರ ರುದ್ರನ ಮನೋಹರ ಮೂರ್ತಿಯನ್ನು ನೋಡಿನೋಡಿ ದಣಿಯದೆ, ಸೋಂಕಿ ಸೋಂಕಿ ಸವಿಯದೆ, ಹೊಗಳಿ ಹೊಗಳಿ ತೀರದೆ, ನೆನೆದು ನೆನೆದು ಕೊಡದೆ ಆತನನ್ನು ತರತರದ ಹೂಗಳಿಂದ ದಿನಾಲು ಅರ್ಚಿಸುತ್ತಿದ್ದಳು. ವಿವೇಕಶೀಲನೇ, ಶಿವಪದಪ್ರಾಪ್ತಿಗಾಗಿ ಪ್ರತ್ಯಕ್ಷ ಪಾರ್ವತಿಯು ಕೂಡ ತನ್ನ ರಾಜವೈಭವಗಳನ್ನು ಬದಿಗಿಟ್ಟು ಅರಣ್ಯವನ್ನು ಸೇರಿ, ಭಕ್ತಿಯಿಂದ ಆ ಮಹಿಮನನ್ನು ಆರಾಧಿಸಬೇಕಾಯಿತು. ಪಾಮರ ರಾದ ನಾವು ವಿಷಯ–ಸುಖಾಸಕ್ತರಾಗಿ ಎಂದಾದರೊಂದುದಿನ ಆಶೆಬುರುಕತನದಿಂದ ಶಿವ ನನ್ನು ಸ್ಮರಿಸಿದರೆ, ಅತ್ಯಂತ ದುರ್ಲಭವಾದ ಶಿವಪದವು ಪ್ರಾಪ್ತವಾಗಬಹುದೇ? ಹೆಚ್ಚಿನ ಸುಖವು ಹೆಚ್ಚು ಶ್ರಮಮಾಡಿದಹೊರತು ದೊರೆಯಲಾರದೆಂಬ ನಿಯಮದಂತೆ, ಅತ್ಯು ಚ್ಚತರವಾದ ಶಿವಪದಪ್ರಾಪ್ತಿರೂಪಸುಖಕ್ಕೆ ಅನುಗುಣವಾಗಿ ಶ್ರಮಪಡಬೇಕಾಗುವದು ಸಹಜವು. ಕಾರಣ ನಾವು ನಿಷ್ಕಾಮವಾಗಿ ಪರಮೇಶ್ವರನನ್ನು ಆರಾಧಿಸತಕ್ಕದ್ದು.

ತಾರಕಬಾಧೆ:—ಇಂತು ಗಿರಿತನುಜೆಯು ಭಕ್ತಿಪುರಸ್ಸರವಾಗಿ ಹರನನ್ನು ಪೂಜಿಸುತ್ತಿರಲು, ಇತ್ತ ಭೂತಳದಲ್ಲಿ ಸಕಲ ನಾಗ–ಸುರ–ನರರಮಸ್ತಕಕ್ಕೆ ಶೂಲದಂತೆ ಇದ್ದ, ಯಾವತ್ತು ಲೋಕಗಳಿಗೆ ಕಾಲಸ್ವರೂಪನಾದ, ಪ್ರಕಟತರವಾದ ಯಶಸ್ಸುಳ್ಳ ತಾರಕನೆಂಬ ದೈತ್ಯನಕೊಬ್ಬು ಹಬ್ಬಿತು. ತೀವ್ರ–ಕೋಪಾಕರರೂಪನಾದ ತಾರಕನು ಉರುಗಾನೀಕವೆಂಬ ಸಮುದ್ರಕ್ಕೆ ವಡವಾನಲನೂ, ಮನುಷ್ಯವ್ರಜವೆಂಬ ಘೋರಾರಣ್ಯಕ್ಕೆ ಅಗ್ನಿಯೂ, ಸುರಸ್ತೋಮವೆಂಬ ಮೋಡಕ್ಕೆ ಚಂಡಮಾರುತನೂ ಆಗಿ ಕ್ರಮವಾಗಿ ಅವನ್ನು ಶೋಷಿಸುತ್ತಾ, ಸುಡುತ್ತಾ, ಓಡಿಸುತ್ತಾ ಎಲ್ಲರನ್ನು ಮೀರಿದನು. ಈ ಗಂಭೀರ ಪ್ರತಾಪಿಯು ಧರಣಿಯನ್ನು ಹಾಳುಮಾಡಿ, ದಿಕ್ಪಾಲಕರ ಗಂಟಲು ಹಿಚಿಕಿ, ನಾಗಲೋಕ ವನ್ನು ಹಿಂಡಿ, ದೇವತೆಗಳನ್ನು ಸ್ವರ್ಗದಿಂದೋಡಿಸಿ, ಯುದ್ಧದಲ್ಲಿ ಎದುರಾದವರನ್ನು ತರಿದು, ಚಂಡಪರಾಕ್ರಮದಿಂದ ತ್ರಿಲೋಕಗಳನ್ನು ಜಯಿಸಿದನು. ತಾರಕನ ದರ್ಶನ ದಿಂದ ಮನುಷ್ಯರ ಪ್ರಾಣವು ನೆತ್ತಿಯಿಂದ ಹೋಗುವದು, ನಾಗಸಂಕುಲವು ಹೊದರು ಸೇರುವದು, ದೇವತೆಗಳು ಗಡಗಡನೆ ನಡುಗುವರು. ಈ ಪ್ರಕಾರ ನರ–ನಾಗಾಮರರ ಶೋಕವನ್ನು ಹೆಚ್ಚಿಸುವ ತಾರಕನ ಉರವಣಿಯನ್ನು ಸೈರಿಸಲಾರದೆ ನಾಗರೂ, ನರರೂ, ನಿರ್ಜರರೂ, ಕಿನ್ನರ ಸ್ತೋಮವೂ, ಕಿಂಪುರುಷವ್ರಜವೂ ಕೂಡಿ ಓಡಿಬಂದು ಮೇರುವಿನ ತಪ್ಪಲಲ್ಲಿರುವ ಹರಿಬ್ರಹ್ಮೇಂದ್ರರ ಓಲಗದ ಬಾಗಿಲಲ್ಲಿ ನಿಂತು—"ನಮ್ಮನ್ನು ರಕ್ಷಿಸಬೇ ಕೆಂ"ದು ದೈನ್ಯದಿಂದ ಮೊರೆಯಿಟ್ಟರು. ಹರಿಬ್ರಹ್ಮೇಂದ್ರರು ಆ ದೀನೋಕ್ತಿಗಳನ್ನು ಕೇಳಿ ಕನಿಕರಪಟ್ಟು—"ಈ ಘೋರಶೋಕವು ಎಲ್ಲಿಯದು? ಇಂಥ ಕಠಿಣಪ್ರಸಂಗವು ಯಾರಿಂದ ತರಲ್ಪಟ್ಟಿತು? ಕೇಳುವಾ ಕರೆ" ಎಂದು ನುಡಿದರು. ಆಗ ಸುರಿಯುವ ಕಣ್ಣೀರಿಂದಲೂ, ನೆಗಹಿತೋರುವ ಕರಾಗ್ರದ ಹುಲ್ಲುಕಡ್ಡಿಯಿಂದಲೂ, ಮುಖದಲ್ಲಿ ಕ್ರಮವಾಗಿ ಹುಟ್ಟುವ ಮೊರೆಯಿಂದಲೂ ಒಪ್ಪುವ ಸುರ–ನರೋರಗಸ್ತೋಮವು ದುಃಖದಿಂದ ಒದರುತ್ತ— "ವಿಷ್ಣುವೇ, ನಮ್ಮನ್ನು ರಕ್ಷಿಸುವದು, ಬ್ರಹ್ಮನೇ, ನಮ್ಮ ದೈನ್ಯವನ್ನು ಪರಿಹರಿಸು, ಇಂದ್ರನೇ, ನಮ್ಮನ್ನು ಕರುಣದಿಂದ ನೋಡು. ತಾರಕನಿಂದ ಪೀಡಿತರಾದ ನಮ್ಮನ್ನು

ನೀವು ಕಾಯದಿದ್ದರೆ ನಮಗೆ ಜೀವನವು ಯಾವದು? ನಿಲ್ಲುವದಕ್ಕೆ ಸ್ಥಳವು ಯಾವದು? ಗತಿಯುಯಾವದು? ನಾವು ಯಾರನ್ನು ಆಶ್ರಯಿಸಬೇಕು? ಶರಣಾಗತರಕ್ಷಕರೇ, ಹೆಚ್ಚಿಗೆ ಹೇಳುವನೇನು? ತಾರಕನ ದುರಾಚರಣವು ಹಬ್ಬಿತು, ತಾರಕನ ಏಳ್ಗೆಯು ಅಬಾಧಿತವಾಯಿತು, ತಾರಕನ ವೈಭವಕ್ಕೆ ಎಣೆಯಿಲ್ಲದಾಯಿತು, ತಾರಕನ ಮತ್ತತೆಗೆ ಭಂಗವಿಲ್ಲದೆ ಹೋಯಿತು, ತಾರಕನ ಮೂರ್ಖತನವು ಬೆಳೆಯಿತು, ತಾರಕನ ಅಪ್ಪಣೆಯು ನಿರಂಕುಶವಾಯಿತು. ಭೂಭಾರಕನೂ, ಸಕಲದುರಿತ ಪೂರಕನೂ, ಪಾಪ ಪ್ರೇರಕನೂ, ದುರ್ಗುಣ ವಿಸ್ತಾರಕನೂ ಆದ ತಾರಕನನ್ನು ತಡೆಯುವವರು ಭೂಮಂಡಲದಲ್ಲಿ ಯಾರೂ ಉಳಿಯಲಿಲ್ಲವು."

ಇಂತು ಭಯಭ್ರಾಂತಿಯಿಂದ ಬಿನ್ನಯಿಸುವ ನರನಾಗಾಮರರನ್ನು ಹರಿಬ್ರಹ್ಮೇಂದ್ರರು ಹಾಗೂ ಹೀಗೂ ಸಮಾಧಾನಗೊಳಿಸಿ, ಮಂತ್ರಾಲೋಚನೆಯ ನಿಮಿತ್ತ ಒಂದುಗೂಡಿ ಆಲೋಚಿಸಿದ್ದೇನಂದರೆ—"ಶಿವನಂತೂ ನಿರುಪಮಾನವಾದ ತಪಸ್ಸನ್ನಾಚರಿಸುತ್ತಿರುವನು; ಲೋಕವೆಲ್ಲ ದೈನ್ಯದಿಂದ ಮೊರೆಯಿಡುತ್ತಿರುವದನ್ನು ಅಲಕ್ಷಿಸಲಾಗದು; ಧುರದಲ್ಲಿ ಧೀರರಾದ ಪರಾಕ್ರಮಿಗಳೂ ಇಲ್ಲವು; ತಾರಕದೈತ್ಯನು ಅತುಳಪ್ರತಾಪನಿಧಿಯು; ಈ ಪ್ರಸಂಗದಲ್ಲಿ ಕಾಳಗವಂತೂ ಸರಿಯಾಗಲಾರದು. ಅಂದಬಳಿಕ ಮಾರ್ಗವೇನು? ಈಗ ಸುರಗುರುವಾದ ಬ್ರಹಸ್ಪತಿಯನ್ನು ಸಂಧಾನಾರ್ಥವಾಗಿ ತಾರಕನಲ್ಲಿಗೆ ಕಳುಹಬೇಕು. ಆ ಮದಾಂಧನು ಸಂಧಾನವನ್ನು ಒಡಂಬಡದಿದ್ದರೆ, ಅವನೊಡನೆ ಯುದ್ಧ ಮಾಡತಕ್ಕದ್ದು. ಇದು, ಒಮ್ಮೆಲೆ ಶೌರ್ಯವನ್ನು ತೋರಿಸುವ ಹೊತ್ತಲ್ಲ. ವೀರ್ಯಾಧಿಪನೆನಿಸುವ ತಾರಕನೊಡನೆ ಸಂಧಾನಮಾಡುವದೇ ಈಗಿನ ಕರ್ತವ್ಯವು."

ಈ ಪ್ರಕಾರ ಹರಿಬ್ರಹ್ಮೇಂದ್ರರು ಏಕಚಿತ್ತರಾಗಿ ಆಲೋಚಿಸುತ್ತ ಸುರಗುರುವಾದ ಬ್ರಹಸ್ಪತ್ಯಾಚಾರ್ಯರ ಮುಖವನ್ನು ನೋಡಿ—"ಸಕಲಕಲಾಪೂರಿತನೂ, ಅಕಲಂಕಚರಿತ್ರನೂ ಆದ ಸುರಗುರುವೇ, ನೀನು ಪರಮಸಾತ್ವಿಕನಾದ್ದರಿಂದ ತಾರಕನಲ್ಲಿಗೆ ಹೋಗಿ ಸಂಧಾನ ಮಾಡಲಿಕ್ಕೆ ಯೋಗ್ಯನು. ನೀನು ತಾರಕನಸಂಗಡ ಮೊದಲು ವಿನಯವನ್ನು ಆಚರಿಸಿ, ಅವನಿಗೆ ಅನುಕೂಲನಂತೆ ತೋರಿಸಿ, ಮನಸ್ಸಿನಲ್ಲಿ ವಿಚಾರಿಸಿ ದೋಷರಹಿತವಾದ ಸಾಮದಿಂದ ದೈತ್ಯನ ಮನಸ್ಸನ್ನು ಒಲಿಸತಕ್ಕದ್ದು. ಅವನು ಅದಕ್ಕೆ ಸಮ್ಮತಿಸದಿದ್ದರೆ ಭೇದವನ್ನು ಕಲ್ಪಿಸಬೇಕು; ಅಂದರೆ ಆ ದೈತ್ಯನ ಪ್ರೀತಿಯ ರಾಜಪುತ್ರರು, ಮಂತ್ರಿಗಳು, ಮಿತ್ರರು, ಸೇನಾಪತಿಗಳು ಇವರ ಸಮೂಹಕ್ಕೆ ಏನಾದರೂ ಕೊಡುವದಕ್ಕೆ ಒಡಂಬಟ್ಟು ಅವರ ಮನಸ್ಸು ತಾರಕನನ್ನು ನಿರಾಕರಿಸುವಂತೆ ಮಾಡತಕ್ಕದ್ದು. ಈ ಭೇದೋಪಾಯವೂ ಸಾಧಿಸದಿದ್ದರೆ, ಬಲ್ಪುಗುಂದದೆ ತಾರಕನ ಸಂಗಡ ವಿನಯದಿಂದ ಮಾತಾಡಿ, ಅವನು ಬಯಸಿದ್ದನ್ನು ಕೊಡುವದಕ್ಕೆ ಒಡಂಬಟ್ಟು, ದಾನದಿಂದಾದರೂ ಅವನನ್ನು ಒಲಿಸಿಕೊಳ್ಳಬೇಕು. ಅವನು ಮದಾಂಧನಾಗಿ ಈ ಮೂರನೆಯ ಉಪಾಯವನ್ನೂ ನಿರಾಕರಿಸಿದರೆ, ಆ ಖಲನು ಸಮರದಲ್ಲಿ ದಂಡವೆಂಬ ನಾಲ್ಕನೆಯ ಉಪಾಯವನ್ನು ನೋಡುವನು."

ಹೀಗೆ ಸುರಗುರುವಿಗೆ ರಾಜೀವಭವಾದಿಗಳು ರಾಜನೀತಿಯನ್ನು ಕಲಿಸಿಕಳುಹಲು, ಆತನು ವಿಮಾನಾರೂಢನಾಗಿ ಉತ್ಸಾಹದಿಂದ ತಾರಕನ ಪಟ್ಟಣವನ್ನು ಹೊಕ್ಕನು. ತಾರಕನ ರಾಜಧಾನಿಯಲ್ಲಿರುವ ಮನೆಗಳ ಶೋಭೆಯು ಸುರಗುರುವನ್ನಾದರೂ ಅಚ್ಚರಿಗೊಳಿಸದಿರಲಿಲ್ಲ. ಬ್ರಹಸ್ಪತಿಯು ವಿಮಾನದಿಂದಿಳಿದು, ಪ್ರತಿಹಾರರ ಸಮ್ಮತಿಯಿಂದ ಸಭೆಯನ್ನು ಪ್ರವೇಶಿಸಲು, ಅನೇಕ ವೀರರಿಂದ ನಮಿಸಲ್ಪಟ್ಟ ಪಾದಪದ್ಮಗಳುಳ್ಳ ತಾರಕನು ಪ್ರತಾಪಮಯನಾಗಿ ಅವನಿಗೆ ತೋರಿದನು. ಆಗ ಬ್ರಹಸ್ಪತಿಯು ತಾರಕನನ್ನು ನೋಡಿ ಉಪಚರಿಸಲು, ತಾರಕನು ಬ್ರಹಸ್ಪತಿಯನ್ನು ಕೊಂಡಾಡಿ ಆತನನ್ನು ಉನ್ನತಾಸನದ ಮೇಲೆ ಕುಳ್ಳಿರಿಸಿ—"ಸುರಗುರುಗಳೇ, ಇಂದ್ರನಿಗೆ ಕುಶಲವೇ? ಬ್ರಹ್ಮನಿಗೆ ಕ್ಷೇಮವೇ? ಹರಿಯು ಸ್ಥಿರವಾಗಿರುವನೇ? ನೀವು ಇಲ್ಲಿಗೆ ಬಂದಕಾರಣವೇನು? ನಮಗೆ ಹೇಳುವ ಕೆಲಸವಾವುದು? " ಎನ್ನಲು ಸುರಗುರುವು—"ದೈತ್ಯರಾಜನೇ, ಹರಿಬ್ರಹ್ಮೇಂದ್ರಾದಿ ದೇವತೆಗಳೆಲ್ಲರೂ ಕ್ಷೇಮದಲ್ಲಿರುವರು. ಅವರು ಮೂರು ಲೋಕಗಳಿಗೆ ನಿಮ್ಮಿಂದಾಗುವ ಉಪದ್ರವವನ್ನು ಕೇಳಿ, ಆ ಲೋಕಗಳ ಶೋಕಕ್ಕಾಗಿ ದಯಹುಟ್ಟಿ, ತಮ್ಮೆಡೆಗೆ ಹೋಗುವದಕ್ಕಾಗಿ ಅಪ್ಪಣೆಕೊಟ್ಟು ನನ್ನನ್ನು ಕಳುಹಿದ್ದರಿಂದ ಬಂದೆನು. ಮುಂದಿನ ಕಾರ್ಯಭಾಗವು ನಿಮ್ಮದು. ದೈತ್ಯಶ್ರೇಷ್ಠನೇ, ಯುದ್ಧದಲ್ಲಿ ನಿನಗೆ ಸರಿಯಾದವರು ಯಾರು ಇರುವರು ಹೇಳು? ಗಂಭೀರನೂ, ಧೀರನೂ, ಪರಸೈನ್ಯಾರಣ್ಯದಾವಾನಲನೂ ಆದ ನಿನಗೆ ಅರಿದಾದದ್ದಾವದಿರುವದು? " ಎಂದು ಹೊಗಳಲು, ತಾರಕನು ನಸುನಗುತ್ತ—"ಸುರಗುರುವೇ, ತಾರಕನೊಡನೆ ಇಷ್ಟೊಂದು ವಿನಯವೇಕೆ? ಅಸಾಧ್ಯವಾದ ಶೌರ್ಯಪ್ರಸಂಗವಿದ್ದರೆ ಮಾತ್ರ ಹೇಳು." ಎಂದು ಸಾಮೋಪಾಯವನ್ನು ನಿರಾಕರಿಸಿ ನುಡಿದನು. ಆಗ ಸುರಗುರುವು—"ತಾರಕನೇ, ವಿನಯವನ್ನು ನೀನು ನಿರಾಕರಿಸುವೆ, ಬುದ್ಧಿವಂತರಾದ ಸಚಿವರನ್ನೂ ನೋಡಲೊಲ್ಲೆ; ನಿಸ್ಸಂಶಯದಿಂದ ಮಂತ್ರಿಗಳು ಹೇಳುವ ಹಿತವಚನವನ್ನೂ ಲೆಕ್ಕಿಸದಾದೆ, ಸಂದೇಹದಿಂದ ಎರಡನೆಯವರನ್ನೂ ನಂಬಲಾರೆ, ನಂಬಿರುವ ಹಿತಜನರಲ್ಲಿ ವಿಶ್ವಾಸವಿಟ್ಟು ಮಾತಾಡಲೊಲ್ಲೆ. ಇದು ನಿನಗೆ ಹಿತವಲ್ಲ." ಎಂದು ಭೇದೋಪಾಯವನ್ನು ಪ್ರಯೋಗಿಸಿದನು. ತಾರಕನು ವಾಚಸ್ಪತಿಯ ಭೇದೋಪಾಯದ ಬಗೆಯನ್ನು ತಿಳಿದು ನಸುನಗುತ್ತ—"ಗುರುವೇ, ಹ್ಯಾಗೆ ಹ್ಯಾಗೆ? ಇನ್ನೊಮ್ಮೆ ಹೇಳು. ನನ್ನ ನೆಲೆಯನ್ನು ತಿಳಿಯದೆ ನೀನು ಹೀಗೆ ನುಡಿಯುವರೇ? ಸಮಗಪ್ರಾಂತವಲ್ಲಿ ನನಗೆ ವಿಚಾರವೇ? ಸುಮ್ಮನಿರು; ತಾರಕನೊಡನೆ ಹೆಚ್ಚಿನ ಮಾತುಗಳೇಕೆ? ಅಹಹ ವಾಚಸ್ಪತಿಯೇ, ನಿನ್ನ ಭೇದೋಪಾಯದಿಂದ ನನ್ನ ಸಹಾಯಕರೆಲ್ಲರೂ ನನ್ನನ್ನು ತೊಲಗಿದರೆ, ಭಯಂಕರವಾದ ಕಾಳಗದಲ್ಲಿ ನನ್ನ ಈ ನಿಡಿದೋಳೂ, ಈ ತೀಕ್ಷ್ಣವಾದ ಖಡ್ಗವೂ ನನ್ನ ಹಿತಕರ್ತರೆಂಬದನ್ನು ಚನ್ನಾಗಿ ನೆನಪಿನಲ್ಲಿಡು. ಹೆಚ್ಚಿನ ಮಾತುಗಳು ಹಿತಕರವಾಗವು," ಎಂದು ಭೇದವನ್ನು ನಿರಾಕರಿಸಲು, ಸುರಗುರುವು ದಾನೋಪಾಯದಿಂದ ಅವನ ಮನಸ್ಸನ್ನೊಲಿಸಲು ಯತ್ನಿಸಿ ನುಡಿದನೇನಂದರೆ—"ಎಲೈ ತಾರಕನೇ, ಹರಿಬ್ರಹ್ಮೇಂದ್ರರು ಯುದ್ಧರಂಗದಲ್ಲಿ ನನಗೆ ಸರಿಯಲ್ಲೆಂಬ ನಿನ್ನ ಈ ಯುದ್ಧಲೀಲೆಯು ಅದೊತ್ತಟ್ಟಿಗಿರಲಿ.

ನಿನಗೆ ಏನಾದರೂ ಬೇಕಾಗಿದ್ದರೆ ಬೇಡು; ಅವರು ಅದನ್ನು ಕೊಡುವರು; ಬಡವರಲ್ಲ. ಕನಕಾದ್ರಿಗೆ ಒಡೆಯರು; ಯುದ್ಧಪ್ರಸಂಗವನ್ನು ಬಿಟ್ಟು, ಸಮುದ್ರ ಮುದ್ರಿತಾವನಿಯಲ್ಲಿ ಬೇಕಾದಷ್ಟು ದೇಶವನ್ನು ಬೇಡಿದರೂ ಅವರು ಕೊಡಲಿಕ್ಕೆ ಸಮರ್ಥರು-

ಸುರಗುರುವು ಈ ಪ್ರಕಾರ ದಾನೋಪಾಯವನ್ನು ಮುಂದಿಟ್ಟು ಬಲ್ಪುಗುಂಪದೆ ನುಡಿದನು. ಆಗ ತಾರಕನ ಸಿಟ್ಟು ಮನಸ್ಸಿನಲ್ಲಿ ಪುಟಿದೆದ್ದು, ಮುಖದಲ್ಲಿ ಆವರಿಸಿ, ಕಣ್ಣುಗಳಲ್ಲಿ ಹಬ್ಬಿ, ಹುಬ್ಬಿನ ಕೊನೆಯಲ್ಲಿ ಕುಡಿಗೊಂಡು ಹೆಚ್ಚಳವನ್ನು ಹೊಂದಲು, ನಡನಡುಗುತ್ತ ನುಡಿದನೇನಂದರೆ—"ತಿರಸ್ಕರಣೀಯನಾದ ಸುರೇಂದ್ರಮಂತ್ರಿಯೇ, ನನ್ನ ಮುಂದೆ ಈ ಬೆಡಗು ಯಾತಕ್ಕೆ? ನೆನಿಸುವದಕ್ಕಿಂತ ಮೊದಲೇ ಈ ಭೂಮಂಡಲವು ನನ್ನ ಕೈವಶವಾಗಿರಲು, ಅದನ್ನು ನನಗೆ ಕೊಡುವೆನೆನ್ನುವದು ಆಶ್ಚರ್ಯವಲ್ಲವೇ? ನಿನ್ನಬುದ್ಧಿ, ನಿನ್ನ ಮದೋನ್ನತೆ, ನಿನ್ನ ಮತ್ಸರ, ನಿನ್ನ ದಯೋಕ್ತಿ, ನಿನ್ನ ಕೆಟ್ಟ ಮನಸ್ಸು, ನಿನ್ನ ಸಂಪನ್ನತೆ, ನಿನ್ನ ಮಂತ್ರಸಾಮರ್ಥ್ಯ, ನಿನ್ನ ಕುಟಿಲತ್ವ, ನಿನ್ನ ನೀತಿ, ನಿನ್ನ ತಿರಸ್ಕರಣವು ನನ್ನ ಸಂಗಡವೇಕೆ? ಧರೆಯಲ್ಲಿ ಅರಿಮೇಘಬಲಾಹಕನಾದ ತಾರಕನಿಗೆ ಸಮರದಲ್ಲಿ ಹರಿಗಿರಿ, ರವಿಗಿವಿ, ಅಜಗಿಜ, ಶಿಖಿಗಿಖಿ, ಸುರಪತಿಗಿರಪತಿ ಸಮಾನರೆ? ಹರಿಬ್ರಹ್ಮೇಂದ್ರರು ಮಾಡುವ ಕೆಲಸಕ್ಕೆ ನೀನು ಸಹಾಯಕನಾಗಿರುವೆಯೋ? ಬೃಹಸ್ಪತೀ, ಒಳಿತಾಯಿತು ಹೋಗು. ಕಂಡಕಾರ್ಯದ ರೀತಿಯನ್ನು ಯಥಾರ್ಥವಾಗಿ ಹೇಳು. ನಾನಂತು ನೆಟ್ಟಗೆ ಕಾಳಗವನ್ನು ಒಡಂಬಟ್ಟಿರುತ್ತೇನೆ- ನೀವು ಅಮರಾವತಿಯನ್ನು ಬಿಟ್ಟು, ನಿಮ್ಮ ಬೆಳ್ಳಿಯಗುಡ್ಡ(ರಜತಗಿರಿ)ದ ಗವಿಗಳಲ್ಲಿ ಸ್ಥಳವನ್ನು ಮಾಡಿಕೊಳ್ಳತಕ್ಕದ್ದು.

ಇಂತು ನುಡಿದ ತಾರಕನ ವೀರಾಲಾಪವನ್ನು ವಾಚಸ್ಪತಿಯು ಕೇಳಿ, ಕೌತುಕಪಟ್ಟು, ಮುಂದುಗಾಣದೆ, ಭಯಗ್ರಸ್ತನಾಗಿ, ಧೈರ್ಯದಿಂದ ಎದ್ದು, ಹಾಗೂ ಹೀಗೂ ಸಮಾಧಾನಮಾಡಿಕೊಂಡು, ಸಾಮ–ಭೇದ–ದಾನಗಳನ್ನು ಉಲ್ಲಂಘಿಸಿದ ಕರ್ಕಶನಾದ ರಕ್ಕಸನಲ್ಲಿ ದಂಡವೆಂಬ ನಾಲ್ಕನೆಯ ಉಪಾಯವು ಹಸನಾಗದೆಂದು ಮನಸ್ಸಿನಲ್ಲಿ ಬೆದರುತ್ತ, ಮಾತಿನಲ್ಲಿ ಬಲ್ಪುಗುಂದದೆ, ತಾರಕನ ಅಪ್ಪಣೆಪಡೆದು, ಭಗ್ನಮನೋರಥನಾಗಿ, ಮುಖವು ಬಾಡಿರಲು, ಸುಮ್ಮನೆ ಹರಿಬ್ರಹ್ಮೇಂದ್ರರೆಡೆಗೆ ಬಂದನು. ಬ್ರಹ್ಮನೂ, ಹರಿಯೂ, ಇಂದ್ರನೂ, ಮಿಕ್ಕ ದೇವತೆಗಳೂ ನೆರೆದು ಗುರುವಿನ ಮ್ಲಾನವದನವನ್ನು ನೋಡಿ, ಹೋದಕಾರ್ಯವು ಜರಗಲಿಲ್ಲೆಂದು ತಿಳಿದು, ಶಂಕಿಸುತ್ತ ಆತನನ್ನು ನಮಸ್ಕರಿಸಿದರು. ಆಗ ಸುರಗುರುವು ಸುಖಾಸನದಲ್ಲಿ ಕುಳಿತು ನುಡಿದನೇನಂದರೆ—"ನಾನು ಹಲವು ಬಗೆಯಿಂದ ಹೇಳಿದರೂ ತಾರಕನು ಯಾವ ಮಂತ್ರಕ್ಕೂ ಒಳಗಾಗಲಿಲ್ಲ. ಅವನು ಯೋಗ್ಯ ಮಾರ್ಗವನ್ನು ಅವಲಂಬಿಸನು. ಸಂಧಾನವನ್ನೂ ಒಲ್ಲನು. ಸಂಗರಾನುಸಂಧಾನದಲ್ಲಿಯೇ ಅವನ ಮನಸ್ಸು. ಅಂದಬಳಿಕ ಈ ಸ್ಥಿತಿಯಲ್ಲಿ ಅತ್ಯಂತ ಶ್ರಮದೊಡನೆ ಆ ಖಳನ ಕೂಡ ಕಾದುವದೇ ಮಂತ್ರವು- ತಾರಕನು ಅತಿ ನಿಷ್ಠುರನು, ಅತಿ ನಿಷ್ಕರುಣಿಯು, ಅತಿ ದುಶ್ಶೀಲನು; ಅವನು ಯಾರ ನೆರವನ್ನೂ ಬಯಸನು, ಯಾರ ಮಂತ್ರವನ್ನೂ ಲೆಕ್ಕಿಸನು. ಆ ಮದಾಂಧನು ಅಪರಿಮಿತವಾದ ಅಶ್ವಬಲದಿಂದ ಅಶ್ವಪತಿಯಾದ ಕುಬೇರನ

ನನ್ನೂ, ಅಪರಿಮಿತ ಗಜಸ್ತೋಮದಿಂದ ಗಜಪತಿಯಾದ ಇಂದ್ರನನ್ನೂ, ಗಣನೆಯಿಲ್ಲದ ಕಾಲಾಳಿನಿಂದ ನರಪತಿಯಾದ ವರುಣನನ್ನೂ ಮೀರಿರುವನು. ತಾರಕನು ರಭಸದಲ್ಲಿ ಸಿಡಿಲಿನ ಇಮ್ಮಡಿ, ಹಟದಲ್ಲಿ ಕಾಡುಗಿಚ್ಚಿನ ಮೂವಡಿ, ಉಷ್ಣತೆಯಲ್ಲಿ ವಡವಾನಲನ ನಾಲ್ವಡಿ, ತೀವ್ರತೆಯಲ್ಲಿ ಲಯಾಗ್ನಿಯ ಅಯ್ವಡಿಯಾಗಿರುವನು."

ಈ ಪ್ರಕಾರ ವಾಚಸ್ಪತಿಯು ತಾರಕಾಸುರನ ಪಟುತರ ಪ್ರತಾಪವನ್ನು ಹೊಗಳುತ್ತಿರಲು, ಒಬ್ಬ ಗಂಧರ್ವನಾಯಕನು ಓಡಿಬಂದು—"ಇನ್ನು ಯಾತರಮಾತು, ಯಾತರ ವಿಚಾರವು, ಯಾತರ ಮಂತ್ರಶಕ್ತಿಯು, ಯಾತರ ವೀರವೃತ್ತಿಯು! ಪ್ರಖ್ಯಾತನಾದ ತಾರಕಾಸುರನ ಸೈನ್ಯವು ನೋಡಲದ್ಭುತವಾಗಿ ಬೀಡುಬಿಡುತ್ತಿರುವದು. ಪ್ರತಾಪಿಯಾದ ಆ ಅಸುರನ ಚತುರಂಗಬಲದ ತುಳತದಿಂದ ಭೂಮಿಯು ಹುಡಿಯಾಯಿತು. ಸಮುದ್ರವು ಕೆಸರಾಯಿತು, ಪರ್ವತಗಳು ಶಿಥಿಲವಾದವು, ದಿಕ್ಕುಗಳು ದೆಸೆಗೆಟ್ಟವು. ಇನ್ನು ಪರಿಣಾಮವಾಗುವದು ದುಸ್ತರವು." ಅನ್ನಲು, ನಾರಾಯಣನು ಖತಿಗೊಂಡು—"ಸುರಪತಿಯೇ ನಡೆ, ಅಂತಕನೇ ದಂಡವನ್ನು ಹಿಡಿ, ಪಾವಕನೇ ಏಳು, ವರುಣನೇ ತಡವೇಕೆ, ವಾಯುವೇ ನಿಲ್ಲಬೇಡ, ಕುಬೇರನೇ ಅಶ್ವವನ್ನೇರು, ಈಶಾನನೇ ನಂದಿಯು ಸಿದ್ಧವಾಗಲಿ. ನಿಮ್ಮೆಲ್ಲರ ಗಾಢತರ ವಿಕ್ರಮದಿಂದ ತಾರಕನ ಕೊಬ್ಬು ಇಳಿಯಲಿ. ಬ್ರಹಸ್ಪತಿಯೇ, ಸುರರೂ, ಕಿನ್ನರರೂ, ಖೇಚರರೂ, ಗರುಡರೂ, ಗಂಧರ್ವರೂ, ವಿದ್ಯಾಧರರೂ, ರಾಕ್ಷಸರೂ, ಯಕ್ಷರೂ ರಣದಲ್ಲಿ ಒಂದೊಂದು ದಿಕ್ಕಿಗೆ ಜೊತೆಗೊಳ್ಳಲಿ." ಎಂದು ಆಜ್ಞಾಪಿಸಿದನು. ನಾರಾಯಣನ ಈ ಮಾತುಗಳಿಂದ ವೀರರ ಆವೇಶವು ಸ್ಫೂರ್ತಿಗೊಂಡು, ಅವರು ಮಾಡುವ ವೀರಾಲಾಪಗಳನ್ನು ಕೇಳಿ ಇಂದ್ರನು ಸಮರೋತ್ಸಾಹದಿಂದ ಸನ್ನಾಹಭೇರಿಯನ್ನು ಹೊಡಿಸಿದನು.

**ದೇವತೆಗಳ ಪರಾಭವ:**—ಆಗ ಆ ಭೇರಿಯು "ಧಳಂ ಧಳಂ ಧಳಂ" ಎಂಬ ರವದಿಂದ ಭೂಮಿಯು ಅಲ್ಲಾಡಿತು, ಸಮುದ್ರವು ಉಕ್ಕೇರಿತು, ದಿಕ್ಪಾಲಕರು ಬೆರಗಾದರು, ದಿಗ್ಗಜಗಳು ಬೆದರಿದವು, ಕುಲಶೈಲಗಳು ಸೀಳಿದವು, ಆದಿಶೇಷನು ಬಳುಕಿದನು, ಕೂರ್ಮನ ಮೋರೆಯು ಭಯದಿಂದ ಬೆವರೊಡೆಯಿತು, ನಕ್ಷತ್ರಗಳು ಉದರಿದವು. ಇಂತಹ ನಿಸ್ಸಾಳದ ಭಯಂಕರ ಧ್ವನಿಯನ್ನು ಕೇಳಿ ದೇವತೆಗಳ ಚತುರಂಗಬಲವು ಅವಸರದಿಂದ ಸಿದ್ಧವಾಯಿತು. ಆಗ ದೇವ ಸೈನ್ಯಕ್ಕೆ ತಾರಕನ ಸೈನ್ಯವು ಲಯಾಗ್ನಿ—ಮಾಲೆಯಂತೆ, ಮಾರಿಯ ಬಳಗದಂತೆ, ಅಂತಕನ ಸಂತತಿಯಂತೆ ಒಪ್ಪುತ್ತಿರುವದು. ತನ್ನ ಸೈನ್ಯದ ಮಧ್ಯದಲ್ಲಿ ನಿಂತಿರುವ ತಾರಕನು ತನ್ನ ಗುರುವಾದ ಶುಕ್ರಾಚಾರ್ಯರನ್ನು ನೋಡಿ—"ಗುರುವೇ, ನಮ್ಮ ಒಲಕ್ಕೆ ಎದುರಾಗಿ ನಿಂತ ಸುರರ ಬಲದಲ್ಲಿ ಮುಖ್ಯರು ಯಾರು ಯಾರೆಂಬದನ್ನು ನನಗೆ ಹೇಳು" ಅನ್ನಲು, ಭಾರ್ಗವನು ದಿಟ್ಟತನದಿಂದ ನುಡಿವನೇನಂದರೆ—"ಅಸುರಶ್ರೇಷ್ಠಾ, ವಿಶಾಲಮುಖವುಳ್ಳವನಾಗಿ, ಸುರಯಕ್ಷಗಂಧರ್ವರ ರತ್ನಾಭರಣಗಳೂ, ಧನಸ್ಸು ಖಡ್ಗಗಳ ತುದಿಗಳೂ ಇಮ್ಮಡಿ ಪ್ರಕಾಶವನ್ನು ಈಯಲು, ಬಿಳಿಯ ಕೊಡೆಯ ವೀರಛಾಯೆಯಲ್ಲಿ ವಜ್ರವನ್ನು ಹಿಡಿದು, ಐರಾವತವನ್ನು ಏರಿನಿಂತ

ವನೇ ದೇವೇಂದ್ರನು. ಆತನ ಬದಿಯಲ್ಲಿ, ಬಹುಸಿಟ್ಟಿನವನಾದ ಮತ್ತು ಸಿಡಿಲಿನ ಹೆಚ್ಚಳ ವನ್ನು ಧಿಕ್ಕರಿಸುವ ಮೇಘವಾಹನನು ಜಗದ್ವಿಖ್ಯಾತನಾದ ಅಗ್ನಿಯು. ಕೈಯಿಂದ ಕಾಲದಂಡವನ್ನು ತಿರುವುತ್ತ, ಭಯಂಕರ ಮುಖವುಳ್ಳವನಾಗಿ, ಕೋಣವನ್ನೇರಿ ನಿಂತ ವನೇ ಯಮನು. ಅಸಮಾನಬಲವುಳ್ಳವನೂ, ಅತುಳವಿಕ್ರಮನೂ, ಅಸುರಕುಲಶ್ರೇಷ್ಠನೂ, ಯುದ್ಧದಲ್ಲಿ ಹಸನ್ಮುಖನೂ ಆಗಿ, ಮನುಷ್ಯನನ್ನು ಏರಿರುವ ಕರ್ಕಶನಾದ ರಾಕ್ಷಸನು ನಿರ್ಋತಿಯು. ಮೊಸಳೆಯನ್ನೇರಿ, ವಿಶಾಲಪಾಶವನ್ನು ಹಿಡಿದು, ಅತ್ಯುತ್ಸವ ದಿಂದ ನಿಂತವನು ವರುಣನು. ದಟ್ಟವಾದ ಕುರುಳುಳ್ಳವನಾಗಿ, ಭಾಲೆಯನ್ನು ಹಿಡಿದು ಮುಂದಿನ ಸಾಮಂತರಾಜಪುತ್ರರ ಸಮೂಹವಲ್ಲಿ ಎರಳೆಯೇರಿ ರಣದಲ್ಲಿ ನಿಂತವನು ವಾ- ಯುವು. ಕಿರಣಗಳಿಂದ ಸುತ್ತಲ್ಪಟ್ಟಬಿಳಿಗೊಡೆಯು ಮೆರೆಯುತ್ತಿರಲು, ತುರಗವನ್ನೇರಿ ಗರುಡ ಗಂಧರ್ವ ಯಕ್ಷರ ನಡುವೆ ಬರುವವನು ಭೀಕರನಾದ ಕುಬೇರನು. ನಂದಿಯನ್ನೇರಿ ಗಣಂಗಳಮುಂದೆ ವೃಷಧ್ವಜವನ್ನು ಎತ್ತಿಸಿ, ಸಮರೋತ್ಸಾಹಾನಂದದಿಂದ ಬಂದು ವಾಂ ಭಾಗದಲ್ಲಿ ನಿಂತವನು ಈಶಾನನೆಂಬ ಒಬ್ಬ ಗಣೇಶನು. ಚಕ್ರವೂ, ಶಾರ್ಙಧನುವೂ, ಗದೆಯೂ ಬಹಳ ಭಯವನ್ನುಂಟು ಮಾಡುತ್ತಿರಲು, ಗರುಡಧ್ವಜವನ್ನು ಎತ್ತಿಸಿ, ಯುದ್ಧ ರಂಗಕ್ಕೆ ಸಿಟ್ಟಿನಿಂದ ಬರುವವನು ಅಸುರಮರ್ದನನಾದ ಹರಿಯು. ಛತ್ರಗಳಿಂದ ಸುತ್ತುಗಟ್ಟಿದವನಾಗಿ, ದೇವತೆಗಳ, ಹಾಗೂ ಗಂಧರ್ವರ ನಡುವೆ ಹಂಸವನ್ನೇರಿ ಅತಿ ಸಂಭ್ರಮದಿಂದ ಬರುತ್ತಿರುವವನು ಬ್ರಹ್ಮನು."

ಈ ಪ್ರಕಾರ ಭಾರ್ಗವನು ತಾರಕಾಸುರನಿಗೆ ಎದುರಾಗಿ ನಿಂತ ಗೀರ್ವಾಣಮುಖ್ಯ ರನ್ನು ಬೇರೆ ಬೇರೆ ತೋರಿಸುತ್ತಿರಲು, ಸುರಪತಿಯು ಸಮರಕ್ಕೆ ಸಿದ್ಧವಾಗಿದ್ದ ತನ್ನಪಡೆಗೆ ಸನ್ನೆದೋರಿದನು. ಕೂಡಲೆ ನಿಸ್ಸಾಳ, ಭೇರಿ, ಪಟಹ, ಢಕ್ಕೆ, ಶಂಖ, ಕಹಳೆ ಮೊದ ಲಾದವುಗಳ ಘೋರಧ್ವನಿಯು ದಿಗಂತವನ್ನುವ್ಯಾಪಿಸಿತು. ಇಂತು ಸಮರ ವಿಜೃಂಭಣೆ ಯಿಂದ ಸುರರ ಬಲವು ಒತ್ತರಿಸಿ ತನ್ನ ಪಡೆಯಮೇಲೆ ಸಾಗಿ ಬರುವದನ್ನು ನೋಡಿ ತಾರ ಕನು ಗರ್ಜಿಸಿ, ಭುಜವನಪ್ಪಳಿಸಿ, ಗದ್ದುಗೆಯನೊದೆದು, ಎದ್ದುನಿಂತು ಮೀರಿದ ತನ್ನ ರಕ್ಕಸಪಡೆಗೆ ಸಿಟ್ಟಿನಿಂದ ಕಯ್ ಬೀಸಿದನು. ಆಗ ಆತನ ಸೇನಾಚರಣಧೂಳಿಯು ಆಕಾಶಗಂಗೆಗೆ ಹೊದಿಕೆಯಾಯಿತು; ಅಶ್ವಹೇಷಿತವು ದಿಗ್ಗಜಗಳನ್ನು ಓಡಿಸಿತು; ಗಜ ಬೃಂಹಿತವು ಬ್ರಹ್ಮಾಂಡವನ್ನು ತುಂಬಿತು; ರಥಚೀತ್ಕಾರವು ಪರ್ವತಗಳನ್ನು ನಡುಗಿಸಿತು; ಆಗ ಕಾಲಾಳು ಕಾಲಾಳ ಸಂಗಡ, ರಾವುತರು ರಾವುತರ ಸಂಗಡ, ಜೋಧರು ಜೋಧರ ಸಂಗಡ, ರಥಿಕರು ರಥಿಕರ ಸಂಗಡ, ಧರೆಗೆ ಅದ್ಭುತವಾಗುವಂತೆ ಯುದ್ಧವನ್ನು ಎಸ ಗಿದರು. ಪರ್ವತವು ಪರ್ವತದ ಮೇಲೆ ಬೀಳುವಂತೆ ರಥವು ರಥದ ಮೇಲೆ ಬೀಳಲು, ಶೂರರ ಹೂಂಕೃತಿಯೂ, ರಥಚಕ್ರಗಳ ಚೀತ್ಕೃತಿಯುವೂ, ಬಿಲ್ಲುಗಳ ಠಂಕೃತಿಯೂ, ಬಿಡಲ್ಪಟ್ಟ ಬಾಣಗಳ ಭೀಂಕೃತಿಯೂ ಯುದ್ಧರಂಗದಲ್ಲಿ ಚಮತ್ಕೃತಿಯಾಯಿತು. ಈ ಪ್ರಕಾರ ರಥಿಕರು ಮಾಡುವ ಕಾಳಗವನ್ನು ಕಂಡು ರಾವುತರು ರಾವುತರ ಮೇಲೆ ಬಿದ್ದರು. ಆಗ ಖಡ್ಗಗಳ ಖಣಿಖಟಲೆಂಬ ಸಪ್ಪಳವೂ, ರಾವುತರ ಸಿಂಹನಾದವೂ,

ಕೋರಡೆಯ ಸಪ್ಪಳವೂ ನಭಸ್ಥಳವನ್ನು ವ್ಯಾಪಿಸಿದವು. ರಾವುತರು ಎದುರಾದ ರಾವು ತರ ತಲೆಗಳನ್ನು ಖತಿಯೊಡನೆ ತೀಕ್ಷ್ಣಬಾಣಗಳಿಂದ ಸರಿಬೆಸವಾಡುವಂತೆ ಕತ್ತರಿಸಲು, ತಲೆಯು ಎದುರಾದ ತಲೆಯ ಸಂಗಡ, ದಿಂಬವು ದಿಂಬದ ಸಂಗಡ, ಕುದುರೆಯು ಕುದು ರೆಯ ಸಂಗಡ ಯುದ್ಧಮಾಡಿದವು. ರಾವುತರ ಯುದ್ಧದ ಈ ಕಡುಪನ್ನು ಗಜಾರೋ ಹಕರು ಕಂಡು, ತಮ್ಮ ಗಜಗಳನ್ನು ಚಪ್ಪರಿಸಿ, ಗರ್ಜಿಸಿ, ಅಂಗುಷ್ಠದಿಂದ ಒದೆದು, ತೀಕ್ಷ್ಣವಾದ ಅಂಕುಶದಿಂದ ಹೊಡೆದು, ಭಾಪು ಭಳರೇ ಎಂದು ಶೌರ್ಯದೊಡನೆ ನೂಕಲು, ಅವು ನಿಶ್ಶಂಕೆಯಿಂದ ಸೈನ್ಯವನ್ನು ತುಳಿಯುತ್ತಾ ಮೇಲ್ವಾದು ಹೋದವು. ಆಗ ಕೋರೆಗಳಲ್ಲಿ ಘರ್ಷಣದಿಂದ ಕಿಡಿಗಳು ಹುಟ್ಟಲು, ಸೊಂಡಿಲೆಯು ಸೊಂಡಿಲೆಯ ಸಂಗಡ, ಕೋರೆಗಳು ಕೋರೆಗಳ ಸಂಗಡ, ಮುಖಗಳು ಮುಖಗಳ ಸಂಗಡ, ಮಾವು ತರು ಮಾವುತರ ಸಂಗಡ, ಆರೋಹಕರು ಆರೋಹಕರ ಸಂಗಡ ಹೊಡೆದಾಡಿದರು. ಆಗ ದಂತಾದಂತಿ ನಖಾನಖಿ ಎನಿಸುವ ಕಾಳಗವು ಅದ್ಭುತವಾಗಿ ಉತ್ಪನ್ನವಾಯಿತು. ಈ ಪ್ರಕಾರ ಹಿಂಜರಿಯದೆ, ವೀರನಿಂತು ರಕ್ಕಸಪಡೆಯ ಸಂಗಡ ದೇವಸೈನ್ಯವು ತೆಕ್ಕೆ ಮುಕ್ಕೆ ಬಿದ್ದು ಕಾದುವದನ್ನು ತಾರಕಾಸುರನು ನೋಡಿ, ಸಿಟ್ಟಾಗಿ ಆನೆಯನ್ನೇರಿ, ಎಡ ಬಲದ ಹಿಂದು ಮುಂದಿನ ಚತುರಂಗ ಬಲವನ್ನು ಕೂಡಿಕೊಂಡು ಭರದಿಂದ ದೇವಸೈನ್ಯದ ಮೇಲೆ ಬಿದ್ದನು. ಅಹಹ! ಚತುರ್ಬಲದೊಡನೆ ಯುದ್ಧಕ್ಕೆ ಸಿದ್ಧನಾದ ವೀರ ತಾರಕಾ ಸುರನೆದುರಿಗೆ ಅದಾವನು ನಿಲ್ಲುವನು? ಯಾವನು ಮತ್ಸರಿಸುವನು? ಯಾವನ ಸಿಟ್ಟು ನಡೆ ಯುವದು? ಯಾವನ ಶೌರ್ಯವು ಹಾಳಾಗದಿರದು? ವಡವಾನಲನ ತೀವ್ರತೆಯೋ, ಸಿಡಿ ಲಿನ ಹೆಚ್ಚಳವೋ, ಕಾಡುಗಿಚ್ಚಿನ ವೈಭವವೋ, ಭೈರವನ ಮುತ್ತಿಗೆಯೋ, ಮೃತ್ಯುವಿನ ಉಗ್ರತೆಯೋ, ಲಯಾಗ್ನಿಯ ದಾಳಿಯೋ ಅನ್ನುವಂತೆ ನೂಕಿದ ಉಗ್ರಪ್ರತಾಪಿ ತಾರಕನ ಚತುರಂಗಬಲದ ಉಪಟಳವನ್ನು ತಾಳಲಾರದೆ ದೇವತೆಗಳ ಪದಾತಿಬಲವು ಪರಿಭವಪ ಟ್ಟಿತು, ರಥಾನೀಕವು ವಿರಥವಾಯಿತು, ತುರಗಕುಲವು ತರಹರಿಸದಾಯಿತು, ಗಜದಗುಂಪು ಗಂಡುಗೆಟ್ಟಿತು. ಈ ಪ್ರಕಾರ ದೇವಸೈನ್ಯವು ಗತಿಗೆಟ್ಟು ದಿಕ್ಕು ದಿಕ್ಕಿಗೆ ಓಡಹತ್ತಿ ದ್ದನ್ನು ಗಂಭೀರ ವಿಕ್ರಮನಾದ ತಾರಕನು ನೋಡಿ ಅಟ್ಟಹಾಸದಿಂದ ಗಹಗಹಿಸಿ ನಕ್ಕು, ನಿಶ್ಶಬ್ದವಾದ ರಣಭೂಮಿಯನ್ನು ನೋಡುತ್ತ ಸಿಬಿರಕ್ಕೆ ನಡೆದನು. ಇತ್ತ ದೇವತೆಗಳು ಭಯಗ್ರಸ್ತರಾಗಿ ಓಡಿ ಹೋಗಿ ರಜತ ಮೇರುಪರ್ವತಗಳ ಗುಹೆ ಗಂಹರಗಳಲ್ಲಿ ಅಡಗಿ ಕೊಂಡರು.

ಈ ಪ್ರಕಾರ ಭಯಾಕುಲರಾಗಿ ಮೇರುಗಿರಿ ರಜತಾದ್ರಿಗಳ ಗುಹೆಗಂಹರಗಳಲ್ಲಿ ಅಡಗಿದ ದೇವತೆಗಳನ್ನು ಬ್ರಹ್ಮೇಂದ್ರರು ಕರೆದು ಒಟ್ಟುಗೂಡಿಸಿ, ಅವರೊಡನೆ ವಿಷ್ಣು ವಿದ್ದೆಡೆಗೆ ಬಂದರು. ಆಗ ಇಂದ್ರನು ನಾರಾಯಣನನ್ನು ಕುರಿತು—"ಇಂದಿನ ಕಾಳಗ ದಲ್ಲಿ ಕಾಲವಶದಿಂದ ನಮಗೆ ಅಪಜಯವಾದರೂ ಇನ್ನೊಮ್ಮೆ ಒಮ್ಮನಸಿನಿಂದ ಜೀವದ ಹಂಗುದೊರೆದು ತಾರಕನೊಡನೆ ಕಾದತಕ್ಕದ್ದು. ನಾನಿರುವೆನು, ನೀವಿರುವಿರಿ, ಬ್ರಹ್ಮ ನಿರುವನು; ಹೆದರುವದೇಕೆ? ಅನ್ನಲು, ಶಕ್ರನ ಈ ವೀರಾಲಾಪಗಳನ್ನು ಕೇಳಿ ವಿಜ್ಞಾನ

ಮಾಡಿ, ನಿಶ್ಚಲಮನನೂ, ಅತುಳೋಪಾಯ ಕೋವಿದನೂ, ಸ್ಥಿತಿಕರ್ತನೂ, ಘನನಿರ್ಮಲನೂ; ಅನಾಗತಜ್ಞಾನಿಯೂ ಆದ ನಾರಾಯಣನು ನುಡಿದನೇನಂದರೆ— "ಶಕ್ರನೇ, ಅಖಿಳಭುವನವಿಧ್ವಂಸಕನಾದ ನಿಷ್ಠುರತಾರಕಾಸುರನೆದುರಿಗೆ ನಾನಿದ್ದು—ನೀನಿದ್ದು—ಬ್ರಹ್ಮನಿದ್ದು, ನಾವು ಮೂವರೂ ಇದ್ದು ಮಾಡುವದೇನು? ಪಂಚಾನನನೂ, ದಶಭುಜಾಂಕಿತನೂ ಆದ ಪರಮೇಶ್ವರನಿಂದ ಷಣ್ಮುಖನು ಹುಟ್ಟಿ ಆತನು ಏಳನೆಯ ದಿವಸ ಯುದ್ಧಕ್ಕೆ ನಿಂತರೆ, ತಾರಕಾಸುರನಳಿವನೆಂದು ಬ್ರಹ್ಮನ ವರವಿರುವದು. ಆದ್ದರಿಂದ ಈಗ ಶಿವನ ತಪಸ್ಸನ್ನು ಕೆಡಿಸುವ ಆಲೋಚನೆಯನ್ನು ಮಾತ್ರ ಮಾಡಿರಿ. ಕಾಳಗದ ಮಾತುಬಿಡಿರಿ. ಅಸುರನು ಅತಿಬಲನು."

ಮನ್ಮಥನ ದಂಡಯಾತ್ರೆ:—ಇಂತು ಚಕ್ರಧರನು ಶಕ್ರನಿಗೆ ಹೇಳಲು, ಎಲ್ಲರೂ ಕೂಡಿ ಆಲೋಚಿಸಿ ಪಂಚಬಾಣಗಳಿಂದಲ್ಲದೆ ಪಂಚಮುಖನ ತಪಸ್ಸು ಸಂಚಲಿಸದೆಂದು ನಿಶ್ಚಯಿಸಿ, ಕಾಮನನ್ನು ಕರಿಸುವದಕ್ಕೋಸ್ಕರ ವಿಷ್ಣುವು ಇಂದ್ರನ ಮುಖವನ್ನು ನೋಡಿದನು. ಆಗ ಇಂದ್ರನು ಮಂತ್ರಿಯಾದ ವಾಚಸ್ಪತಿಯನ್ನು ಕರೆದು—"ಸುರಗುರುವೇ, ಈಗ ಇದ್ದ ರೀತಿಯಂತೂ ನಿನಗೆ ಗೊತ್ತಿರುವದು. ಮುಂದಿನ ಕಾರ್ಯವನ್ನು ನಿನಗೆ ಹೇಳಬೇಕೆನ್ನುವಂತೆ ಇಲ್ಲ. ತೀವ್ರದಿಂದ ಹೋಗಿ, ಶೂರ್ಪಕಮರ್ದನನಾದ ಮದನನನ್ನು ಯಾವ ಉಪಾಯದಿಂದಲಾದರೂ ಕರತರುವವನಾಗು." ಎಂದು ಹೇಳಿದನು. ಆಗ ಬ್ರಹಸ್ಪತಿಯು ಪುಷ್ಪಕವನ್ನೇರಿ, ಆಕಾಶಗಮನದಿಂದ ಮದನನ ರಾಜಧಾನಿಗೆ ಬಂದನು. ಅಲ್ಲಿ ಮನ್ಮಥನ ಅರಮನೆಗೆ ಎಡತಾಕುವ ನಿರತಿಶಯ ಸ್ವಭಾವಸುಂದರಿಯರಾದ ಪ್ರಮದೆಯರನ್ನು ನೋಡಿ, ಗುರುವು ಮನಸ್ಸಿನಲ್ಲಿ ಅಳುಕುತ್ತ, ಬುದ್ಧಿಯಲ್ಲಿ ಬೆದರುತ್ತ, ಚಿತ್ತದಲ್ಲಿ ಕೌತುಕಪಡುತ್ತ ಅರಮನೆಯ ಎದುರಿಗೆ ಪುಷ್ಪಕವನ್ನಿಳಿದು, ಆ ಸ್ಥಾನವನ್ನು ಪ್ರವೇಶಿಸಿದನು. ಸಭಾಮಧ್ಯದಲ್ಲಿ ವಸಂತಮಂದಾನಿಲಾದಿಗಳು ಪರಿಮಿತ ಸ್ಥಾನದಲ್ಲಿ ಕುಳಿತಿರಲು, ಸುಂದರಸ್ತ್ರೀಯರು ಪರಿಸೇವಿಸುತ್ತಿರಲು, ಇಕ್ಷುಚಾಪ—ಪೂಗಣೆಗಳು ಸುವ್ಯವಸ್ಥೆಯಿಂದ ಒಪ್ಪುತ್ತಿರಲು ರತ್ನಖಚಿತವಾದ ಸಿಂಹಾಸನದಮೇಲೆ ಆನಂದದಿಂದ ಕುಳಿತಿರುವ ಕಂದರ್ಪನ ಕಮನೀಯರೂಪವು ಒಪ್ಪಿತು. ಆಗ ಬ್ರಹಸ್ಪತಿಯು ಹೌಹಾರಿ, ಬಂದ ಕಾರ್ಯವನ್ನು ಮರೆತು, ಹಿಂದುಮುಂದುಗಾಣದೆ ಕಾಮರಸದ ತೆರೆಯಲ್ಲಿ ತೇಲಾಡಹತ್ತಿದನು. ಇಂತು ಕಾಮಪರವಶನಾದ ಬ್ರಹಸ್ಪತಿಯು ಹಾಗೂ ಹೀಗೂ ಎಚ್ಚತ್ತು, ಮನ್ಮಥನಿಗೆ ಹೂಗೊಂಚಲವನ್ನು ಕಾಣಿಕೆಯಾಗಿ ಕೊಟ್ಟು ಕುಳಿತುಕೊಳ್ಳಲು, ಆಗ ರತೀನಾಥನು ಬ್ರಹಸ್ಪತಿಯ ಮುಖವನ್ನು ನೋಡಿ—"ಸುರಗುರುವೇ, ಹರಿಬ್ರಹ್ಮೇಂದ್ರರು ಸುಖದಲ್ಲಿರುವರೇ? ತಾರಕನ ಯುದ್ಧದ ಪರಿಣಾಮವು ಏನಾಯಿತು! ನೀವು ಬಂದ ಕಾರ್ಯವೇನು" ಅನ್ನಲು, ಬ್ರಹಸ್ಪತಿಯು—"ಕಂತುಮರ್ದನನೇ, ತಾರಕನೊಡನೆ ಯುದ್ಧಮಾಡುವದನ್ನು ಬಿಟ್ಟು, ಮೇರುವಿನ ತಪ್ಪಲಲ್ಲಿ ಹರಿಬ್ರಹ್ಮೇಂದ್ರರು ಏಕಾಂತದಲ್ಲಿರುವರು. ಅವರು ಬಹುಗುಪ್ತವಾದ ಕಾರ್ಯವನ್ನು ಆಲೋಚಿಸುವ ಉದ್ದಿಶ್ಯ ನಿನ್ನನ್ನು ಕರತರುವದಕ್ಕೆ ನನಗೆ ಹೇಳಿದ್ದರಿಂದ ನಾನು ನಿನ್ನೆಡೆಗೆ ಬಂದೆನು. ಕಾರ್ಯವು ಬಹುಗೌರವದ್ದಿರುವದರಿಂದ ವಿಲಂಬವು ಹಿತಕರವಲ್ಲ."

ವಾಚಸ್ಪತಿಯ ಮಾತುಗಳನ್ನು ಕೇಳಿ ಕಾಮನು ಸುಖಾಸನದಿಂದ ಎದ್ದು. ಶಶಿ ವಸಂತಾದಿಗಳನ್ನು ಬನದಲ್ಲಿ ಹಿಂದೆಬಿಟ್ಟು ರತಿಯೊಡನೆ ಲಗಬಗೆಯಿಂದ ಪುಷ್ಪಕವನ್ನೇರಿದನು. ಬ್ರಹಸ್ಪತಿಯೂ, ಮನ್ಮಥನೂ ಮಾರ್ಗಲ್ಲಿ ಹಲವು ಸುಖಸಲ್ಲಾಪಗಳನ್ನಾಡುತ್ತ ಆನಂದಹೃದಯರಾಗಿ ಹರಿಬ್ರಹ್ಮರ ಸಭಾದ್ವಾರಕ್ಕೆ ಬಂದು ಇಳಿದರು. ಕಾಮನು ಸಭೆಯನ್ನು ಹೊಕ್ಕು, ಚಕ್ರಿಗೆ, ವಿರಂಚಿಗೆ, ವಜ್ರಧರನಿಗೆ ನಮಸ್ಕರಿಸಿ, ರತಿಯೊಡನೆ ಯೋಗ್ಯಸ್ಥಾನದಲ್ಲಿ ವಿಶ್ರಮಿಸಿದನು. ಆಗ ವಿಷ್ಣುವು ಕಾಮನ ಮುಖವನ್ನು ನೋಡಿ ನುಡಿದನೇನಂದರೆ—"ಕಂದರ್ಪನೇ, ತಾರಕಾಸುರನ ಬಾಧೆಯಿಂದ ತ್ರಿಲೋಕಗಳು ಗತಿಗೆಟ್ಟವು. ಅಸುರನು ಅಧಿಕಬಲನಾದ್ದರಿಂದ ಯುದ್ಧೋಪಾಯವು ಈಗ ನಡೆಯದು. ತ್ರಿಪುರಾರಿಯಾದ ಪರಮೇಶ್ವರನಿಂದ ಹುಟ್ಟಿದ ಕುಮಾರನಿಂದಲ್ಲದೆ ತಾರಕನಿಗೆ ಯಾರಿಂದಲೂ ಸಾವು ಬರಲಾರದು. ಆದ್ದರಿಂದ ಘೋರವಾದ ತಪಸ್ಸನ್ನಾಚರಿಸುವ ಶಿವನ ತಪಸ್ಸನ್ನು ಕೆಡಿಸಿ, ಆತನು ಮಾಡುವ ಜಪದ ಅಕ್ಷರಗಳಲ್ಲಿ ನಿನ್ನ ಹೂಬಾಣಗಳನ್ನು ನಡಿಸಿ. ಆತನು ಗಿರಿಜೆಯೊಡನೆ ಕೂಡುವಂತೆ ಮಾಡತಕ್ಕದ್ದು. ಈ ಕಾರ್ಯವು ನಿನ್ನಿಂದಲ್ಲದೆ ಮತ್ತಾರಿಂದ ಸಾಧ್ಯವಾಗುವದು? ನೀನೇ ಸಮರ್ಥನು. ನಿನ್ನಿಂದಲೇ ಈ ಕಾರ್ಯವು ಜರಗತಕ್ಕದ್ದು. ಜಗನ್ಮೋಹಕನಾದ ಪ್ರದ್ಯುಮ್ನನೇ, ಜಗತ್ತಿನಲ್ಲಿ ಪುರುಷರಿಗೆ ಸ್ತ್ರೀಯರು, ಸ್ತ್ರೀಯರಿಗೆ ಪುರುಷರು ಸೋಲುವದು ವಾಡಿಕೆಯಾಗಿರುವದು. ಆದರೆ ಸ್ತ್ರೀಪುರುಷರಿಬ್ಬರೂ ನಿನಗೆ ಸೋಲುವದು ಅಚ್ಚರಿಯಲ್ಲವೆ? ಇಂಥ ಘನಯೋಗ್ಯತೆಯುಳ್ಳ ನಿನ್ನೆದುರಿಗೆ ನಿಲ್ಲುವವರು ಅದಾರು? ಯಾವನ ತಪಸ್ಸು ಈಡಾಗುವದು? ಆದ್ದರಿಂದ ಶಶಿಚೂಡನ ಶಾಂತಿಯನ್ನು ಕಳೆದು, ಆತನನ್ನು ಗಿರಿಜಾಕಾಂತೆಯ ಸಮಸುಖಸಮುದ್ರಮಧ್ಯದಲ್ಲಿ ಇರಿಸುವವನಾಗು."

ಹರಿಯಾಡಿದ ಮಾತುಗಳನ್ನು ಕೇಳಿ ಮನ್ಮಥನು ಭಯದಿಂದ ನುಡಿದನೇನಂದರೆ—"ಜನಕನೇ, ಆಯಿತಾಯಿತು, ನೀನು ಹೇಳಿದ ಕೆಲಸವು ಆಗುವದಾಗುವದು! ಸರ್ವೇಶ್ವರನೂ, ಅನವಧಿಗುಣನೂ ಆದ ಶರ್ವನನ್ನು ಪಂಚಬಾಣಗಳಿಂದ ಹೊಡೆಯ ಹೇಳುವದು ನಿನಗೆ ಸಹಜವಾಯಿತೇ? ಶ್ರುತಿಗಳು ಕಾಣದ, ಮನುಗಳ ಮತಿಯು ಹೊಂದದ, ಮುನಿಗಳ ಜ್ಞಾನಕ್ಕೆ ನಿಲುಕದ, ಶಾಸ್ತ್ರಗಳ ಸಮೂಹವು ತಿಳಿಯದ ಅಪ್ರತಿಹತ ರೂಪವನ್ನು ನಾನೆಂತು ನೋಡುವೆನು!! ಎಂತು ಹೊಡೆಯುವೆನು!! ಅಹಹಾ! ಜಲಧಿಶಯನನೇ, ಶಿವನ ತಪಸ್ಸನ್ನು ಕೆಡಿಸುವದಕ್ಕೆ ನನಗೆ ಪ್ರೇರಿಸುತ್ತಿರುವೆಯಲ್ಲ! ಅಖಿಳ ಲೋಕಗಳ ಗುರುವೂ, ಅಸಮಾಕ್ಷನೂ ಆದ ಶರ್ವನನ್ನು ಭರದಿಂದ ಎಸೆಯುವ ಅಸಮಾಸ್ತ್ರತೆಯು ವಸುಧಿಯಲ್ಲಿ ಇರುವದೇ? ವಿಚಾರಮಾಡದೆ ಶೂಲಿಯನ್ನು ತಡವುವದಕ್ಕೆ ಹೇಳುವದು ನಿನಗೆ ಹಿತಕರವಲ್ಲ. ಹೆರವರ ಮಕ್ಕಳನ್ನು ಕೊಟ್ಟು ನೆಲೆಯನ್ನು ತಿಳಕೊಳ್ಳುವ ವಿಚಾರವನ್ನು ನೀನು ನನ್ನಲ್ಲಿ ಮಾಡುವರೇ? ಸೂರ್ಯನಲ್ಲಿಗೆ ಕತ್ತಲೆಯನ್ನು, ಸಿಂಗದೆದುರಿಗೆ ಆನೆಯನ್ನು, ನವಿಲೆಡೆಗೆ ಹಾವನ್ನು ಕಳಿಸುವಂತೆ ಹರನಲ್ಲಿಗೆ ನನ್ನನ್ನು ಕಳಿಸುವದು ತಂದೆಯಾದ ನಿನಗೆ ವಿಹಿತವಲ್ಲ."

ಈ ಪ್ರಕಾರ ಕಾಮನು ಭಯಾಕುಳನಾಗಿ ನುಡಿಯಲು ಮುಕುಂದನು—"ಎಲೈ ಕಂದರ್ಪನೇ, ಬಹಳ ಹೇಳುವದರಿಂದೇನು? ನಿನ್ನೊಬ್ಬನಿಂದ ಲೋಕವೆಲ್ಲವು ಸುಖದಿಂದಿರಲು; ನೀನು ಜೀವದ ಹುರಳು ಎಣಿಸುವರೇ? ಪರೋಪಕಾರಕ್ಕಿಂತಲೂ ಹೆಚ್ಚಿನ ಪುಣ್ಯವು ಅದಾವದಿರುವದು?" ಎನ್ನಲು, ಕಂದರ್ಪನು ಅಭಿಮಾನದಿಂದ—"ನನ್ನೊಬ್ಬನಿಂದ ಸಕಲ ಭುವನವು ಪರಮಸುಖದಲ್ಲಿರುತ್ತದೆಂದಬಳಿಕ ನಾನೆಷ್ಟರವನು? ನನ್ನ ಪ್ರಾಣವೆಷ್ಟರದು? ತೆಗೆ, ಈವೊತ್ತೇ ನೂರು ವರ್ಷ ತುಂಬಲೊಲ್ಲವೇಕೆ! ಈ ಕಾರ್ಯವನ್ನು ಪ್ರಯತ್ನಪೂರ್ವಕವಾಗಿ ಸಾಧಿಸುವೆನು, ಇಲ್ಲದಿದ್ದರೆ ಪ್ರಾಣಕೊಡುವೆನು. ಎಂದು ನುಡಿದು, ಪುಷ್ಪಧನ್ವನು ತಂದೆಯು ಅಪ್ಪಣೆ ಪಡೆದು, ಹೊರಗಿಟ್ಟ ಸಿಂಹಾಸನವನ್ನೇರಿ, ಉನ್ನತಚಿತ್ತನಾಗಿ ಮತ್ತೆ ತನ್ನಲ್ಲಿ ಕೊಬ್ಬಿನಿಂದ ನುಡಿದನೇನಂದರೆ—"ಜಗತ್ತಿನಲ್ಲಿರುವ ಯಾವತ್ತು ಮನುಗಳೂ, ಮುನಿಗಳೂ, ಜಿತೇಂದ್ರಿಯರೂ ನನ್ನ ಧನುಷ್ಟಂಕಾರಮಾತ್ರದಿಂದ ಬೆದರಿ, ಉರುಳಿ, ಪ್ರೇಮದಿಂದ ಸ್ತೋತ್ರಮಾಡುತ್ತ ನನ್ನ ಚರಣಕ್ಕೆರಗುವರು. ಇಂತಹ ಪ್ರತಾಪಶಾಲಿಯಾದ ರತೀಶನಿಗೆ ಶೂಲಿಯ ತಪಗಿಪವು ಅಡ್ಡಿಯಾಗುವದೇ? ಎಂದು ನುಡಿದನು. ವಿವೇಕಶೀಲನೇ, ಮನ್ಮಥನು ಲೋಕಗುರುವಾದ ಶಿವನ ತಪಸ್ಸನ್ನು ಕೆಡಿಸುವದಕ್ಕೆ ಹೆದರಿದಾಗ್ಯೂ, ಜಗತ್ಕಲ್ಯಾಣವನ್ನು ನೆನೆದು ಕಡೆಗೆ ತನ್ನ ಪ್ರಾಣಕೊಡುವದಕ್ಕೆ ಸಿದ್ಧನಾದನು. ಶ್ರೀ ಹರಿಯು ತನ್ನ ಹೊಟ್ಟೆಯ ಮಗನನ್ನಾದರೂ ಪರೋಪಕಾರಕ್ಕಾಗಿ ಘೋರ ಸಂಕಟದಲ್ಲಿ ಹಾಕುವದಕ್ಕೆ ಹಿಂದು ಮುಂದು ನೋಡಲಿಲ್ಲ. ಆದ್ದರಿಂದ ಮಹಾತ್ಮರು ಪರೋಪಕಾರದಲ್ಲಿ ತಮ್ಮ ಹಾನಿಯನ್ನು ನೋಡರು. ಇಂಥವರೇ ಜಗದ್ವಂದ್ಯರೆಂಬದಕ್ಕೆ ಸಂದೇಹವಿಲ್ಲ.

ಇಂತು ದರ್ಪಕನು ತನ್ನಲ್ಲಿ ತಾನೇ ಗರ್ಜಿಸಿ ಮಧುದೂತಿಯನ್ನು ಕರೆದು ವಸಂತಾದಿ ಚತುರಂಗಬಲವನ್ನು ಬರಮಾಡೆಂದು ಆಜ್ಞಾಪಿಸಲು, ಕೂಡಲೆ ವಸಂತೋದಯವಾಗಿ ಚಳಿಯು ನಾಶಹೊಂದಿತು, ಕೋಗಿಲೆಗಳು ಕೂಗಿದವು, ಆಮ್ರವು ಪಲ್ಲವಿಸಿತ್ತು, ಹಾದಿಕಾರರು ತಳಮಳಿಸಹತ್ತಿದರು, ಲಲನಾಜನರು ಪ್ರಿಯರಲ್ಲಿ ನವಭೋಗದ ಉಜ್ಜುಗವನ್ನು ಮಾಡತೊಡಗಿದರು, ಬನವು ಹಸುರು ಕೆಂಪು ಕಪ್ಪಿನ ಶೋಭೆಯನ್ನು ಹೊಂದಿತು, ಜನರು ಪ್ರೀತಿಹೆಚ್ಚಾಗಿ ತಮ್ಮ ತಮ್ಮ ಸ್ತ್ರೀಜನರನ್ನು ಅಪ್ಪಿಕೊಂಡರು, ಮುನಿನಿಕರವು ಜಪತಪಗಳನ್ನು ಬಿಟ್ಟು, ದೈನ್ಯದಿಂದ ವಧೂಸ್ತನತಟವಕ್ಷವಾಯಿತು, ಮೃಗವೀಥಿಯು ಮೃಗೀಕುಲವನ್ನು ಹಿಂಬಾಲಿಸಿತು, ಯೋಗಿಗಳು ಅಂಜಿ ಕಾಮನಿಗೆ ಪ್ರಾಣವನ್ನು ಒಪ್ಪಿಸಿದರು. ಈ ಪ್ರಕಾರ ಸ್ಥಿತ್ಯಂತರವನ್ನು ಮಾಡುತ್ತ, ವಸಂತರಾಜನು ಕಾಮನೆಡೆಗೆ ಬಂದು, ನಮಿಸಿ, ನವಕುಸುಮಪಲ್ಲವಗಳನ್ನು ಕಾಣಿಕೆಯಾಗಿಕೊಟ್ಟು, ಮಾವುರವೆಂಬ ಆನೆಗಳ, ಗಿಳಿಗಳೆಂಬ ಕುದುರೆಗಳ, ಚಕ್ರವಾಕಗಳೆಂಬ ರಥಗಳ, ಸುಂದರಸ್ತ್ರೀಯರೆಂಬ ಕಾಲಾಳಿನ ಚತುರಂಗಬಲವನ್ನು ತೋರಿಸುತ್ತಿದ್ದನು. ಅಷ್ಟರಲ್ಲಿ ಚಂದ್ರನೂ, ಮಂದಾನಿಲನೂ ಅಲ್ಲಿಗೆ ಬಂದರು. ಮನ್ಮಥನು ಚತುರಂಗಬಲದ ಶೋಭೆಯನ್ನು ನೋಡಿ ತೃಪ್ತನಾಗುತ್ತ, ಸ್ತ್ರೀ ಕದಂಬವು ನುಡಿಯುವ ವೀರಾಲಾಪದಿಂದ ಮದವೇರುತ್ತ

ನಿಜಭುಜಗಳನ್ನು ನೋಡಿ ಮದೋನ್ಮತ್ತನಾಗಿ ಮತ್ತೆ ನುಡಿದನೇನಂದರೆ—" ಅಹಹಾ! ಇನ್ನು ಮೇಲೆ ಭವನು ತಪಸ್ಸಿನಲ್ಲಿರುವನಿರುವನು! ತನ್ನ ಅಗ್ಗದ ವೈರಾಗ್ಯದ ಬಿನ್ನಾಣವನ್ನೂ, ನನ್ನ ಪಂಚಬಾಣದ ಸಾಮರ್ಥ್ಯವನ್ನೂ ನೋಡುವನು ನೋಡುವನು!! ಇಕ್ಷುಕೋದಂಡವೂ, ಕುಸುಮಬಾಣಗಳೂ ನನ್ನ ಕೈಸೇರಿದ ಬಳಿಕ ಯಾವ ಕಡೆಯು ತಪಸ್ಸು? ಯಾವ ಕಡೆಯ ಶಾಂತಿ ಭೂಷರು? ಯಾವ ಕಡೆಯು ಜಿತೇಂದ್ರಿಯರು? ಯಾವ ಕಡೆಯು ದಿಗಂಬರರು? ಯಾವ ಕಡೆಯು ಕರ್ಷುನಿಷ್ಠರು? ಯಾವ ಕಡೆಯು ಆತ್ಮಜ್ಞಾನಿಗಳು? ಯಾವ ಕಡೆಯು ನಿಸ್ಪೃಹರು? ಮೀನಕೇತನನು ಅವರನ್ನು ಲೆಕ್ಕಿಸುವನೇ ? ಪಾರ್ವತಿಯು ವಿರಹವೆಂಬ ಆತಪವು ಉತ್ಪನ್ನವಾಗಲು, ಪರಿಮಳವನ್ನು ಎಣ್ದೆಸೆಗೆ ಬೀರುವ ಹೂಬಾಣಗಳಿಂದ ಶಂಕರನ ತಪಸ್ಸೆಂಬ ಚಕ್ರವಾಕಪಕ್ಷಿಯ ಅಂಡವನ್ನು ಒಡೆಯುವೆನು. ಅತಿ ಭೀಮರೂ, ಜಿತಕಾಮರೂ ಈ ಮದನನೆದುರಿಗೆ ನಿಲ್ಲಲಾರರು . ಅಂದಬಳಿಕ ಸ್ತ್ರೀಯ ಅಭಿಲಾಷೆಯಿಂದ ಪಾರ್ವತಿಯು ಬೆಳೆಯುವವರೆಗೆ ತಪಸ್ಸಿನಲ್ಲಿರುವ ಶಿವನ ತಪಸ್ಸು ನನಗೆ ಎದುರಾಗುವದೇ !

ಈ ಪ್ರಕಾರ ಮಾರನೃಪನು ನಿಜಭುಜಪ್ರತಾಪಾಲಂಕೃತ ವೀರಾಲಾಪಗಳನ್ನು ನುಡಿಯುತ್ತ , ನಳಿನಗುಣವಿರಚಿತವಾದ ದುಕೂಲವನ್ನು ಬಿಗಿದುಟ್ಟು, ಪರಾಗತಿಲಕವನ್ನಿಟ್ಟು, ಕೇತಕೀದಳದ ತೀಕ್ಷ್ಣವಾದ ಶಸ್ತ್ರವನ್ನು ಕಿಗ್ಗಟ್ಟಿನಲ್ಲಿ ನಟ್ಟು, ವಸಂತನು ಹೊಸಮಲ್ಲಿಗೆಯ ಮುಗ್ಗೆಗಳ ವೀರಸೇಸೆಗಳನ್ನಿಡಲು, ವನಲಕ್ಷ್ಮಿಯು ರತ್ನದ ಹರಿವಾಣದಲ್ಲಿ ಬಂದುಗೆಯ ಹೂವಿನ ವಿಜಯದಾರತಿಯನ್ನು ಎತ್ತಲು, ನನ್ನೊಡೆಯನೇ, ಶಾಬಾಸ್ ಎಂದು ವಿಷ್ಣುವು ಹೊಗಳಲು, ಲಕ್ಷ್ಮೀದೇವಿಯೇ ಮೊದಲಾದ ಸ್ತ್ರೀಯರು—ವೀರವಿಭ್ರಮನೇ, ವಿಜಯಿಯಾಗೆಂದು ಹರಿಸಲು, ಬ್ರಹ್ಮೇಂದ್ರಾದಿದೇವತೆಗಳು ಕಾಣಿಕೆಯನ್ನು ಕೊಟ್ಟು ಸ್ತೋತ್ರಮಾಡಲು, ಸಿಂಹವು ಪರ್ವತವನ್ನೇರುವಂತೆ ಕಾಮನು ಮುಂದೆ ನಿಂತಿರುವ ಮಾಮರವೆಂಬ ಮತ್ತಗಜವನ್ನೇರಿ ಹಿಂಬದಿಯಲ್ಲಿ ರತಿಯನ್ನು ಕುಳ್ಳಿರಿಸಿಕೊಂಡನು. ಇಂತು ಪ್ರಯಾಣಸನ್ನದ್ಧನಾದ ಮದೋನ್ಮತ್ತ ಮನ್ಮಥನಿಗೆ ಚಂದ್ರನು ಬೆಳ್ಗೊಡೆಯನ್ನು ಹಿಡಿದನು, ಮಂದಾನಿಲನು ಚಾಮರವನ್ನು ಬೀಸಹತ್ತಿದನು. ಕಬ್ಬಿನಬಿಲ್ಲನ್ನೂ, ಹೂಬಾಣಗಳನ್ನೂ ರೋಹಿಣೀದೇವಿಯು ಹಿಡಿದಳು; ಎಡಬಲದಲ್ಲಿ ಶುಕಾವಳಿಯೆಂಬ ತುರಗಗಳು ದಟ್ಟವಾದವು, ಚೂತವೆಂಬ ಗಜಗಳು ಸಾಲುಗೊಂಡವು, ಚಕ್ರವಾಕವೆಂಬ ರಥಗಳು ಸಂದಣಿಗೊಂಡವು, ಮುಂದೆ ಸುದತೀಜನವು ಎತ್ತಿದ ಮಕರಧ್ವಜವು ಆಕಾಶವನ್ನು ಚುಂಬಿಸಿತು. ಆಗ ಆ ಶಂಬರಾರಿಯಾದ ಕಾಮದೇವನು ಹೇಮಕೂಟಾಭಿಮುಖನಾಗಿ ನಡೆದನು.

ಕಾಮದಹನ:—ಇಂತು ಮಾರಭೂಪನ ಚತುರಂಗಬಲವು ಮುಂದಕ್ಕೆ ಸಾಗಲು, ಧರಣಿಯು ಶುಕಾಶ್ವಮಯವಾಯಿತು . ದಿಕ್ಕುಗಳು ಕುಸುಮಾಸ್ತ್ರಸುಗಂಧಮಯವಾದವು. ಆಕಾಶವು ಮಕರಂದರಜೋಮಯವಾಯಿತು- ಆಗ ಸೈನ್ಯದಮುಂಭಾಗದಲ್ಲಿ ಕೋಕಿಳನಿಸ್ಸಾಳಗಳು "ಧಳಂ ಧಳಂ ಧಳಂ" ಎಂದು ಧ್ವನಿಮಾಡಲು, ಭೃಂಗೀ-

ಕಹಳಾರವಗಳು ಉತ್ಪನ್ನವಾಗಲು. ಮುನಿಗಳ ಕರತಳದ ಅಕ್ಷಮಾಲೆಗಳು ಕಂಪನವನ್ನು ಹೊಂದಿಬಿದ್ದವು. ಈ ಪ್ರಕಾರ ಮುನಿಗಳ ಧೈರ್ಯಭೂಮಿಯು ಹುಡಿಯಾಗುವಹಾಗೆ, ಮನುಚೇತಸಾದ್ರಿಯು ಪುಡಿಯಾಗುವ ಹಾಗೆ ಯತಿಚರಿತ್ರತರಂಗಿಣಿಯು ರಾಡಿಯಾಗುವ ಹಾಗೆ, ನಿರ್ಮಲವ್ರತೀಂದ್ರರ ತಪೋವಿಪಿನವು ಬೈಲಾಗುವಹಾಗೆ, ಭೂಮಿಗೆ ಆಶ್ಚರ್ಯವನ್ನುಂಟುಮಾಡುತ್ತ ರತೀಶನ ಚತುರಂಗಸೇನೆಯು ಮುಂದಕ್ಕೆ ಸಾಗಹತ್ತಿತು. ಸಕಲ ಭುವನವನ್ನು ಭಂಗಿಸುವ ಚತುರಂಗ ಸೇನೆಯ ನಡುವೆ ಶಂಬರಾರಿಯು ವೈಭವದಿಂದ ನಡೆದುಬಂದು, ಪರಮೇಶ್ವರನಿರುವ ಹೇಮಕೂಟಪ್ರಾಂತದಲ್ಲಿ ನಿಂತು ಪರ್ವತಾಗ್ರವನ್ನು ನೋಡಿ, ಸಿಟ್ಟಿನಿಂದ ತನ್ನ ಸೈನ್ಯಕ್ಕೆ ಲಗ್ಗೆಹತ್ತುವದಕ್ಕೆ ಅಪ್ಪಣೆಕೊಟ್ಟನು. ಅಗ ಗಿಳಿಗಳು ಚಪ್ಪರಿಸಿದವು, ಕೋಗಿಲೆಗಳು ಕರೆದವು, ತುಂಬಿಗಳು ಮೊರೆದವು, ಮಂದಾನಿಲನು ಮೇಲ್ವಾಯ್ದನು, ಚಂದ್ರನು ಬೆಳದಿಂಗಳನ್ನು ಬೀರಿದನು, ಪುಷ್ಪಸಂಕುಲವು ಸುವಾಸನೆಯನ್ನು ಹರಡಿತು, ಕಾಮಿನಿಯರು ಜಡಿದರು, ಮಕರಧ್ವಜವು ಗಗನದಲ್ಲಿ ಕುಣಿಯಿತು. ಇಂತು ಯಾವತ್ತು ಬಲವು ಒಂದುಗೂಡಿ, ಬೊಬ್ಬಿಟ್ಟು, ಅಬ್ಬರಿಸಿ ಶಿವನ ಸಮಾಧಿಯ ಪರ್ವತವನ್ನು ಮುತ್ತುತ್ತಿರಲು, ಪರ್ವತದ ಬಾಗಿಲವನ್ನು ಕಾಯುತ್ತ ನಿಂತಿರುವ ನಂದಿಕೇಶನು, ಈ ಸಮ್ಮೋಹನಬಲದ ಸುನಾದವನ್ನು ಕೇಳಿ ಕಂಪಿಸಿ, ಕರಣಗಳು ಕಲಿಕಿ, ಕಿಂಚಿತ್ಸಂಚಲಮನನಾಗಿ, ಹರಿಬಿದ್ದ ಮನಸ್ಸನ್ನು ಮೆಲ್ಲನೆಮೆಲ್ಲನೆ ಸಮಾಧಾನಗೊಳಿಸಿಕೊಂಡು ಶಿವಜ್ಞಾನದಿಂದ ಎಚ್ಚತ್ತು ಕಣ್ದೆರೆದು ಮುಂದಿನ ಸೈನ್ಯವನ್ನು ನೋಡಿ—"ಹರನ ಸಮಾಧಿಗೆ ಇದು ಅನುಕೂಲವಾದದ್ದಲ್ಲ. ಈ ವಿರೋಧವೃತ್ತಿಯನ್ನು ಮಾಡುವವರು ಇವರಾರು? ಇದು ಯಾರಬಲವು? ಯಾರ ಮದೋನ್ನತಿಯು? ಯಾರ ಸಂಭ್ರಮವು? ಯಾರ ಮರುಳತನವು?" ಎಂದು ನಂದೀಶನು ನಸುಗೋಪದಿಂದ ಮದನನ ಸೇನೆಯನ್ನು ನೋಡಿದನು. ಕೂಡಲೆ ಅಳಿಗಳು ಬಳಲಿದವು. ಕೋಗಿಲೆಗಳು ವ್ಯಾಕುಳಗೊಂಡವು. ಚಂದ್ರನು ಕಳೆಗುಂದಿದನು. ಕೋಮಳೆಯರು ನೊಂದುಮನನಿನ್ನನವರಾದರು. ಕೀರತುರಗಗಳು ಓಡಿದವು. ಚೂತಗಜಾವಳಿಯು ಘೀಳಿಡುತ್ತ ಅರಣ್ಯವನ್ನು ಹೊಕ್ಕಿತು. ಮಾರುತನು ಅಡಗಿದನು. ವಸಂತನು ವನಗಳಲ್ಲಿ ಹೊಕ್ಕನು. ವಿವೇಕಶೀಲನೇ, ವಿಷಯಸುಖಾನುಭವಿಗಳಲ್ಲಿ ಅಗ್ರೇಸರನೂ, ವಿಷಯಸುಖಾಪೇಕ್ಷೆಯ ಉತ್ಪತ್ತಿಗೆ ಮೂಲಕಾರಣನೂ ಆದ ಮನ್ಮಥನ ಸೈನ್ಯದ ಪೌರುಷವು ನಂದಿಕೇಶ್ವರನ ನಸುಗೋಪದ ನೋಟದಿಂದ ನಾಶವಾಯಿತೆಂದ ಮೇಲೆ, ವಿಷಯಸುಖಪರಾಙ್ಮುಖರಾದ ಮಹಾತ್ಮರ ಮಹತ್ವವನ್ನೇನು ವರ್ಣಿಸುವದದೆ! ಉರವಲದಿಂದ ಅಗ್ನಿಯು ಹೆಚ್ಚಾಗುವಂತೆ ವಿಷಯಸುಖವನ್ನನುಭವಿಸುತ್ತ ಹೋದಹಾಗೆ ಅದನ್ನು ಅನುಭವಿಸುವ ಇಚ್ಛೆಯು ಹೆಚ್ಚಾಗುತ್ತ ಹೋಗುತ್ತದೆ. ವಿಷಯಗಳು ಅಶಾಶ್ವತಗಳಾದ್ದರಿಂದ ಅವುಗಳಿಂದುಂಟಾಗುವ ಆನಂದವೂ ಅಶಾಶ್ವತವೇ. ಕಾರಣ, ಮನುಷ್ಯನು ವಿಷಯಸುಖದಲ್ಲಿ ತೀರಾಮಗ್ನನಾಗದೆ, ಪ್ರಾಚೀನಕರ್ಮಾನುಸಾರ ಒದಗುವ ಸುಖ-ದುಃಖಗಳನ್ನು ಸಮಬುದ್ಧಿಯಿಂದ ಅನುಭವಿಸುತ್ತ, ಸನ್ಮಾರ್ಗನಿರತನಾಗಿ ಪರಲೋಕಸಾಧನವನ್ನು ಮಾಡಿಕೊಳ್ಳತಕ್ಕದ್ದು. ಇರಲಿ.

ಈ ಪ್ರಕಾರ ಚತುರಂಗಬಲವು ಸೂರ್ಯನ ಮುಂದಿನ ಕತ್ತಲೆಯಂತೆ ನಂದೀಶ್ವರನ ನಸುಗೋಪದ ಪ್ರತಾಪದಿಂದ ಮಾಯವಾಗಲು, ಮದನನು ತನ್ನ ಮನಸ್ಸಿನಲ್ಲಿ—"ಇದೇನಾಶ್ಚರ್ಯವು! ಒಬ್ಬ ಗಣೇಶನಿಂದಲೇ ಇಷ್ಟು ಅನರ್ಥವಾದ ಬಳಿಕ ಮೃಡನನ್ನು ಹೊಡೆಯುವ ಬಗೆಯೇನು ? ಆ ಮಹಾಮಹಿಮನನ್ನು ತಡವುವ ಸಾಮರ್ಥ್ಯವಾವದು? ಅಂಗೆ ಶಕ್ಯವು? ಸಂಪೂರ್ಣ ಅಶಕ್ಯವಾಗಿರುವದು." ಎಂದು ಚಿಂತಿಸುತ್ತಿರುವಷ್ಟರಲ್ಲಿ ವಿಮಾನಾರೂಢೆಯಾದ ಜಗದ್ವಂದ್ಯೆ ಪಾರ್ವತಿಯು ಶಿವಪೂಜೆಯ ನಿಮಿತ್ತವಾಗಿ ಬಂದಳು. ಆಗ ಮನ್ಮಥನಿಗೆ ಜೀವ ಬಂದಂತಾಗಿ ಗಿರಿಜೆಯೆಡೆಗೆ ಹೋಗಿ ಸಾಷ್ಟಾಂಗವೆರಗಿ ಸ್ತುತಿಸುತ್ತ—"ಮಾತೆಯೇ, ಗಿರೀಶನ ತಪಸ್ಸನ್ನು ಕೆಡಿಸುವದಕ್ಕಾಗಿ ಮುರರಿಪುವು ನನ್ನನ್ನು ಕಳುಹಿದ್ದರಿಂದ ನಾನು ಸೇನೆಯೊಂದಿಗೆ ಪರ್ವತವನ್ನು ಮುತ್ತಲು, ನಂದೀಶ್ವರನಿಂದ ಸಕಲ ಸೇನೆಯು ನಾಶವಾಗಿ ನಾನೊಬ್ಬನೇ ಉಳಿದೆನು. ಅನಾಥನಾದ ನನ್ನನ್ನು ರಕ್ಷಿಸಲು ನೀನೇ ಸಮರ್ಥಳು." ಎಂದು ನುಡಿದನು. ಆಗ ಪಾರ್ವತಿಯು ವಿನಯದಿಂದ ನುಡಿದಳೇನಂದರೆ—"ಲಕ್ಷ್ಮೀಪುತ್ರನೇ, ನೀನು ಬಂದ ಕಾರಣವನ್ನು ಅರಿತಿದ್ದೇನೆ. ಶಿವನ ತಪಸ್ಸನ್ನು ಕೆಡಿಸುವದು ನಿನಗೆ ಅವಶ್ಯವಿದ್ದಂತೆ ನನಗೂ ಇರುತ್ತದೆ. ಶಿವನ ತಪೋಭಂಗವೇ ನನ್ನ ಲಾಭವೂ, ಲೋಭವೂ ಆಗಿರುವದು. ಹಲವು ಉಪಾಯಗಳಿಂದ ನೀನು ಶಿವನ ತಪಸ್ಸನ್ನು ಕೆಡಿಸು. ಈ ಕೆಲಸದ ಸಹಾಯಕ್ಕೋಸ್ಕರ ನಾನಿರುವೆನು; ಹೆದರಬೇಡ.

ಪಾರ್ವತಿಯು ನುಡಿಕೇಳಿ ಮನ್ಮಥನು ಮೊದಲಿನ ಸೋಲನ್ನು ಮರೆತು, ಆಕೆಯ ವಿಮಾನದ ಮರೆಯಲ್ಲಿ ಮೆಲ್ಲನೆ ಹೋಗುತ್ತ ನಂದೀಶ್ವರನ ಕಾವಲಿನ ಪ್ರದೇಶಕ್ಕೆ ಬಂದನು. ಶಾಂತಮನನೂ, ಮುಗಿದ ಕೈಗಳುಳ್ಳವನೂ, ಮುಚ್ಚಿದ ಕಣ್ಣುಗಳುಳ್ಳವನೂ, ಪರಮ ಶಿವಭಕ್ತನೂ ಆದ ನಂದಿಕೇಶ್ವರನನ್ನು ಗಿರಿತನುಜೆಯು ಕೃಪಾದೃಷ್ಟಿಯಿಂದ ನೋಡುತ್ತ, ಶಿವಾರ್ಚನೆಗೋಸುಗ ಹೂಗಳನ್ನು ತರುವದಕ್ಕೆ ಹೋದಳು. ಮನ್ಮಥನು ಗಿರಿಜೆಯ ವಿಮಾನದ ಮರೆಯಿಂದ ಮೆಲ್ಲನೆ ನಂದಿಕೇಶ್ವರನ ಕಾವಲಪ್ರದೇಶವನ್ನು ದಾಟಿ, ಶಿವನೆಡೆಗೆ ಹೋಗಿ, ಆತನ ವಾಮಾಂಗದಲ್ಲಿ ನಿಂತು, ರತಿಯನ್ನು ಒತ್ತಟ್ಟಿಗೆ ನಿಲ್ಲಿಸಿ, ದೇವತೆಗಳು ಅಂತರಿಕ್ಷದಲ್ಲಿ ಭಾಪು ಭಾಪೆನ್ನಲು, ಇಕ್ಷುಚಾಪವನ್ನು ಜೇವಡೆದನು. ಮತ್ತು ನೀಡಡಿಯೂ, ಕುಸಿದ ಅಂಗವೂ, ಚಾಚಿದ ಕುತ್ತಿಗೆಯೂ, ಎತ್ತಿದ ಭುಜಾಗ್ರವೂ ಮೆರೆಯುತ್ತಿರಲು, ರತೀಶನು ಆವೇಶದಿಂದ ಕುಸುಮ ಶರಗಳನ್ನು ಹರನ ಮೇಲೆ ಪ್ರಯೋಗಿಸಿದನು. ಆಗ ಕಾಮನ ಉನ್ಮಾದನವೆಂಬ ಬಾಣವು ಶಿವನ ತಪೋಮರೀಚಿಯನ್ನು ದಾಟದೆ ಹಿಂದಿರುಗಿತು; ಮದನವೆಂಬ ಬಾಣವು ಶಿವನ ಹತ್ತರ ಹೋಗಿ ಬಿದ್ದು ತಿರುಗಿ ಕಾಮನೆಡೆಗೆ ಬಂದಿತು. ಮೋಹನನೆಂಬ ಬಾಣವು ಶಿವನ ಬಹಿರಂಗವನ್ನು ಹಾಗೂ ಹಿಗೂ ಸ್ಪರ್ಶಮಾಡಿ ವಿಮುಖವಾಯಿತು. ಸಂತಾಪನವು ಶಿವನ ಮನಸ್ಸನ್ನು ಮೆಲ್ಲನೆ ಮುಟ್ಟಿ ಮುಟ್ಟಲಾರದೆ ತಿರುಗಿತು. ವಶೀಕರಣವು ಶಿವನ ನೆಲೆಯನ್ನು ಸಂಪೂರ್ಣವಾಗಿ ತಿಳಿಯದೆ ಹಿಂದಿರುಗಿತು. ಈ ಪ್ರಕಾರ ಉನ್ಮಾದನ, ಮದನ, ಮೋಹನ, ಸಂತಾಪನ, ವಶೀಕರಣಗಳು ವ್ಯರ್ಥವಾದದ್ದನ್ನು ನೋಡಿ, ಕಾಮನು ಬೆರಗಾಗಿ ಶಿವನ ದೃಢತಪಸ್ಸಿಗೆ

ತಲೆದೂಗುತ್ತ—"ನನ್ನ ಧನುಷ್ಟಂಕಾರ ಮಾತ್ರದಿಂದ ಮುನಿಗಳು ಮುಂದುಗಾಣದೆ ಹೋಗುವರು. ನನ್ನ ಶರೌಘಕ್ಕೆ ಚಲಿಸದ ಧೀರನನ್ನು ಶಿವನೊರ್ವನನ್ನು ಮಾತ್ರ ಕಂಡೆನು. ಇದು ಪರಮಾಶ್ಚರ್ಯವು. ವಿರೂಪಾಕ್ಷನು ನನ್ನ ಅಮೋಘ ಬಾಣಗಳಿಗೆ ಸ್ಥಳ ಕೊಡನು, ಚಲಿಸನು, ಅನ್ಯವಾದವನ್ನೂ ಅರಿಯನು, ನಿರುಪಮ ಸಮಾಧಿಯನ್ನು ಬಿಡನು. ಆದ್ದರಿಂದ ಈ ಮಹಾಮಹಿಮನು ಅಭೇದ್ಯನು." ಎಂದು ಆವೇಶಗುಂದಿ, ಶಿವನ ಮೇಲೆ ಬಾಣಗಳನ್ನು ಪ್ರಯೋಗಿಸಲಾರದೆ ಸುಮ್ಮನೆ ನಿಂತುಕೊಂಡನು. ಆಗ ಕಲಹಲಂಪಟನಾದ ನಾರದನು ಕಾಮನ ಇರುವನ್ನು ನೋಡಿ ಅಂತರಿಕ್ಷದಲ್ಲಿ ಹರಿಬ್ರಹ್ಮರನ್ನು ಕುರಿತು—"ಎಲೈ ದೇವತೆಗಳಿರಾ, ತಿಲದೊಳಗಿನ ತೈಲದಂತೆಯೂ, ಕಾಷ್ಠದ ನಡುವೆ ಉಜ್ವಲಿಸುವ ಅಗ್ನಿಯಂತೆಯೂ ಒಪ್ಪುವ ಅಚಲನಾದ ಶಿವನನ್ನು ಕಾಮನ ಬಾಣಗಳು ಸಾಧಿಸಿಕೊಳ್ಳುವವೆ? ತ್ರಿನೇತ್ರನೂ, ನಿರ್ಗುಣನೂ ಆದ ಶಿವನನ್ನು ರತೀಶನು ಹೊಡೆಯುವನೇ? ಇಂಥ ಕೀಳಮಾತುಗಳು ಬೇಡ. ಯಾವಕಡೆಯ ಮಹಾತ್ಮನಾದ ಶಿವನು, ಯಾವಕಡೆಯ ಪಾಮರನಾದ ಮದನನು?"

ಹರಿಬ್ರಹ್ಮರಿಗೆ ಈಪ್ರಕಾರ ನಾರದನು ಹೇಳುತ್ತಿರಲು, ಇತ್ತ ಪಾರ್ವತಿಯು ಹೂಗಳನ್ನು ತಂದು ಶಿವನೆಡೆಗೆ ಬಂದು, ತರತರದ ಪುಷ್ಪಗಳಿಂದ ಆತನನ್ನು ಭಕ್ತಿಪೂರ್ವಕವಾಗಿ ಅರಾಧಿಸಿ, ಪುಷ್ಪಾಂಜಲಿಯನ್ನು ಪಿಡಿದು, ಕೋಟ್ಯವಧಿ ಮನ್ಮಥರು ಉತ್ಪನ್ನವಾಗುತ್ತಿರಲು, ತನ್ನ ಸುಂದರ ಕಟಾಕ್ಷಗಳಿಂದ ನೋಡುತ್ತ ಹರನ ತಪೋಭರವನ್ನು ಬಿಡಿಸುತ್ತಿದ್ದಳು. ಆಗ ಕಾಮನು ಪಾರ್ವತಿಯ ಈ ಇರವನ್ನು ಕಂಡು—"ಓಹೋ! ಇನ್ನು ಅಂಜೆನು ಅಂಜೆನು, ನನಗೆ ದೊಡ್ಡ ಬಲವಾಯಿತು." ಎನ್ನುತ್ತ ಇಕ್ಷುಚಾಪಕ್ಕೆ ಪಂಚಬಾಣವನ್ನು ಹೂಡಿ, ಹೆದೆಯನ್ನು ಕಿವಿಯವರೆಗೆ ಜಗ್ಗಿ ಶಿವನ ಮೇಲೆ ಪ್ರಯೋಗಿಸಿದನು. ಈ ಪ್ರಕಾರದ ಕಂದರ್ಪನ ಪಂಚಬಾಣಾನುಸಂಧಾನವೂ, ಜಗದ್ಧಿತಾರ್ಥವಾದ ಹರಿವಿರಿಂಚಿಗಳ ಬಯಕೆಯೂ, ಪಾರ್ವತಿಯ ಮನೋರಥವೂ ಮುಪ್ಪುರಿಗೊಂಡು, ನಿರುಪಾಧಿಕಜ್ಯೋತಿಯೂ, ನಿರಾವರಣನೂ, ಸ್ವಾನುಭವಸ್ವಯಂವೇದ್ಯನೂ, ಸ್ವಯಂಪ್ರಕಾಶನೂ ಆದ ಶಿವನನ್ನು ಬಿಡದೆ ಮುತ್ತಿದವು. ಆಗ ನಿರ್ವಿಕಾರಸ್ವರೂಪನಾದ ಪರಮೇಶ್ವರನಿಗೆ ಸ್ವಪ್ನೋಪಮಾನವಾದ ಮಮತೆಯೇರಿ ಆತನು ಜೀವನಾಗಲು, ಜೀವನಿಂದ ಪ್ರಾಣಾನಿಲನೂ, ಪ್ರಾಣಾನಿಲನಿಂದ ಚಿತ್ತವೂ, ಚಿತ್ತದಿಂದ ಅಹಂಕಾರವೂ, ಅಹಂಕಾರದಿಂದ ಬದ್ಧಿಯೂ, ಬುದ್ಧಿಯಿಂದ ಮನಸ್ಸೂ ಹುಟ್ಟುತ್ತ, ಅಂತರಂಗ ಬಹಿರಂಗಭಾವವು ನೆಲಿಸುವದಕ್ಕೆ ಮೊದಲೇ ಮದನನ ಪಂಚಬಾಣವು ಹರಿದುಬಂದು ಮನಸ್ಸನ್ನು ಸಹಸ್ರಮುಖವಾಗಿ ಸಂಚಲಿಸಿತು. ಆಗ ಶಿವನ ತಪೋಭರದ ಬೆಸಿಗೆ ನಿಲ್ಲಲಾರದೆ ಬಿಚ್ಚುತ್ತದೋ ಅನ್ನುವಂತೆ ಆತನ ಅವಯವಗಳು ಚಲನೆ ಹೊಂದಿದವು. ಇಂತು ಜಾಗರೂಕನಾದ ಶಿವನನ್ನು ನೋಡಿ, ಪಾರ್ವತಿಯು ನೋಡಲಾರದೆ ಪುಷ್ಪಾಂಜಲಿಯನ್ನು ಅರ್ಪಿಸಿ, ನಡುಗುತ್ತ ನಮಸ್ಕರಿಸಿ ನಿಂತಳು. ಆಕೆಯನ್ನು ಭೂತೇಶನು ನೋಡಿ—"ಈ ತಪಸ್ಸಿನಲ್ಲಿ ನಾನೇಕೆ? ಈ ಮಾನಿನಿಯೇಕೆ? ಈ ಪ್ರಸಂಗವು ಎತ್ತಣಿಂದ ಬಂದುದು? ಯಾರಿಂದಾ

ಬೆದು!" ಎಂದು ಕಾಮನಿರುವ ವಾಮಭಾಗವನ್ನು, ಆ ನಿಟಿಲಾಕ್ಷನು ನಸುಗೋಪದಿಂದ ನೋಡಿದನು. ಆಗ ಅಂತರಿಕ್ಷದಲ್ಲಿ ಹರಿಬ್ರಹ್ಮೇಂದ್ರರು—"ದೇವದೇವನೇ, ಈ ಕಾರ್ಯವು ಜಗದ್ಧಿತಾರ್ಥವಿರುವದು ; ಕರುಣಿಸಬೇಕೆ"ಂದು ಪ್ರಾರ್ಥಿಸುತ್ತಿರುವಷ್ಟರಲ್ಲಿಯೇ , ಅಗ್ನಿನೇತ್ರದಿಂದ ಭುಗಿಭುಗಿಲೆಂದು ಉತ್ಪನ್ನವಾದ ಜ್ವಾಲೆಗೆ ಕಾಮನು ತುತ್ತಾದನು. ಆಗ ಸುಟ್ಟನುಲಿಯಂತೆ ನಿಂತಿರುವ ಮದನನನ್ನು ವಿರೂಪಾಕ್ಷನು ಕೋಪಾಟೋಪದಿಂದ ಒದೆದು, ಕಾಮಭಸ್ಮೋದ್ಧೂಲಿತಗಾತ್ರನಾಗಿ ಮುಂದಿರುವ ಗಿರಿಜೆಯನ್ನು ನೋಡದೆ, ಮಾತಾಡಿಸದೆ, ಸ್ಪರ್ಶಮಾಡದೆ, ನಿಶ್ಚಿಂತನಾಗಿ ಅಲ್ಲಿಂದ ಅಂತರ್ಧಾನವನ್ನು ಹೊಂದಿದನು. ವಿವೇಕಶೀಲನೇ, ಆತ್ಮಾನಂದಕ್ಕಿಂತ ಹೆಚ್ಚಿನ ಆನಂದವಿಲ್ಲವು. ಈ ಆತ್ಮಾನಂದವನ್ನು ನಾಶಗೊಳಿಸಿದ್ದಕ್ಕಾಗಿ ಶಿವನು ಕಾಮನನ್ನು ನಾಶಗೊಳಿಸಿದನು. ಮತ್ತು ತ್ರಿಲೋಕ ಸುಂದರಿಯೂ, ಮಹಾಮಹಿಮೆಯೂ ಆದ ಗಿರಿಜಾಮಾತೆಯನ್ನು ಕೂಡ ಮಾತಾಡಿಸದೆ ಅಂತರ್ಧಾನ ಹೊಂದಿದನು. ಆತ್ಮಜ್ಞಾನಿಗಳಿಗೆ ಆತ್ಮಧ್ಯಾನಾನಂದಕ್ಕಿಂತ ಹೆಚ್ಚಿನ ಆನಂದವು ಯಾತರಲ್ಲಿಯೂ ಇರುವದಿಲ್ಲವು. ಅವರು ನಶ್ವರವಾದ ವಿಷಯಸುಖಕ್ಕೆ ಎಂದೂ ಮರುಳಾಗರು.

ರತಿಯ **ಪ್ರಲಾಪ:**—ಇಂತು ಹರನ ಅಗ್ನಿನೇತ್ರದ ಯೋಗದಿಂದ ಕಾಮನು ಭಸ್ಮವಾಗಲು, ರತಿಯಮನಸ್ಸು ಅಳ್ಕಿ, ತನುವು ಬಳ್ಕಿ, ಬುದ್ಧಿಗೆಟ್ಟು, ಇಂದ್ರಿಯ ಗಳು ಬಾಡಿ, ಧೈರ್ಯವು ಕುಂದಿ, ಸಹಿಸಲಾರದ ದುಃಖವು ಪ್ರಾಪ್ತವಾಗಲು, ಆಕೆಯು ಕಣ್ಣೀರುದರಿಸುತ್ತ ನಿಲ್ಲಲಾರದೆ ಓಡಿಬಂದು—"ಅಯ್ಯೋ, ಎತ್ತಣಹರನು, ಎತ್ತಣತ ಪವು, ಎತ್ತಣ ತಾರಕನ ಬಾಧೆಯು, ಎತ್ತಣ ಬಿಸುಗಣ್ಣು, ಎತ್ತಣ ಉರಿಯು , ಎತ್ತಣ ಈ ಇರವು! ಮದನನೇ, ನನಗೆ ಎತ್ತಣ ಕಷ್ಟವನ್ನುಂಟುಮಾಡಿದೆ? ಘೋರತ ಪಸ್ವಿಗಳನ್ನೂ, ಅಪಾರ ಮಹಿಮರನ್ನೂ ಗೆದ್ದವೀರನು ನೀನು, ಹರನ ಲಲಾಟಾಗ್ನಿಗೆ ಸವಿದುತತ್ತಾದೆಯಾ? ಕಂತುವೇ, ನೀನು ಮರಣಹೊಂದಿದ್ದರಿಂದ ನಾನೆತ್ತಹೋಗಲಿ, ಎಂತು ಜೀವಿಸಲಿ, ಎಂತು ನುಡಿಯಲಿ, ಹೇಗೆನಿಲ್ಲಲಿ? ಹಾ! ಪುಷ್ಪಧನ್ವನೇ, ನೀನು ವಿಚಾರದಿಂದ ಹೂಬಾಣಗಳೆಸೆದು, ಶಿವನನ್ನು ಗೆಲ್ಲುವೆಯೆಂದು ತಿಳಿದಿದ್ದೆನು. ಅಯ್ಯೋ! ಲಲಾಟಾಗ್ನಿಯಿಂದ ಬೇಯುವದನ್ನು ನಾನೇನು ಬಲ್ಲೆನು? ಪ್ರಾಣೇಶನೇ, ನೀನಿಲ್ಲದ್ದರಿಂದ ನನ್ನ ಲಾವಣ್ಯವು ಲಯವಾಯಿತು, ವಿಭ್ರಮವಿಲಾಸವು ಮಾಯವಾಯಿತು, ಜೀವವು ಬೆಂದಿತು, ಚೆಲ್ವು ಕೆಟ್ಟಿತು, ಸುಖವು ಹಾಳಾಯಿತು, ಉತ್ಸಾಹವು ಕುಂದಿತು. ಆಕ ಟಕಟಾ! ಇನ್ನು ಭೂಮಿಯಲ್ಲಿ ನಾನೆಂತು ಜೀವಿಸಲಿ! ಪ್ರಾಣೇಶನೇ, ಈಗಿನ ಕಾಲಕ್ಕೆ ನಿನ್ನ ಚಂದ್ರನ ಬೆಳ್ಗೊಡೆಯೂ, ಪೂತ–ಚೂತ–ಗಜವೂ ಎತ್ತ ಅಡಗಿದವು! ಪಂಚಬಾ ಣವು ಎತ್ತ ಮಾಯವಾಯಿತು? ಎಲೈ ಸುರತ ಕಾಮಧೇನುವೇ, ಮದನನೇ, ಲಕ್ಷ್ಮೀಪು ತ್ರನಾಗಿ, ಸಕಲ ಭೂಪತಿಯೆನಿಸಿ, ಪುರಹರನ ಲಲಾಟಾಗ್ನಿಗೆ ಕಣ್ಣೆವೆಇಕ್ಕುವಷ್ಟರಲ್ಲಿ ತುತ್ತಾದೆಯಲ್ಲ! ಹಂಸತೂಲದ ತಲ್ಪವು ಬಹಳ ಕಠಿಣವೆಂದು ತಿಳಿದು, ಫಾಲನೇತ್ರವೆಂಬ ಅರಮನೆಯಲ್ಲಿ ದಳ್ಳುರಿಮಂಚದಮೇಲೆ ಮಲಗಿದೆಯಾ? ಹಾ ಮದನನೇ, ಹಾ ಮಕರ–

ಪತಾಕನೇ, ಹಾ ಮತ್ಪ್ರಾಣೇಶನೇ, ನಿದ್ರಾಹಾರಗಳನ್ನು ಮರೆತು ಹಗಲಿರುಳೆನ್ನದೆ ಪುಷ್ಪದಿಂದ ಲಿಂಗಪೂಜೆಯನ್ನು ಮಾಡಿದ ಫಲವು ಕಿಚ್ಚಿನಲ್ಲಿ ಬೇಯುವಂತಾಯಿತೆ!! ನಾನು ಸುರತಶ್ರಾಂತಿಯಲ್ಲಿ ಅಲ್ಪವೇಳೆ ನಿದ್ರಾಪರವಶೆಯಾಗಿ ಸುಖದಲ್ಲಿರುತ್ತಿರಲು, ನೀನು ಅಡಗಿಕೊಂಡು ನನ್ನನ್ನು ಅಂದು ನೋಯಿಸಿದ ಕ್ರಮವು ಈ ಪೊತ್ತು ನಿಜವಾಯಿತು. ಹಾ! ಮದನನೇ, ಬೆಳಗಾಯಿತೇಳು, ಸ್ವಚ್ಛವಾದ ಮಣಿ ಮುಕುರವನ್ನು ನೋಡು, ಹಂಸಗಳನ್ನು ಹಾಡಿಸು, ಕೋಗಿಲೆಗಳ ಧ್ವನಿಯನ್ನು ಆಲಿಸು, ಹೀಗೆ ಮಾತಾಡದೆ ಸುಮ್ಮನಿರುವರೇ! ಮದನನೃಪಾಲನೇ, ನೀನು ಎಂದೂ ವಿಚಾರಬಿಟ್ಟು ಸಿಟ್ಟಾದವನಲ್ಲ. ಅಯ್ಯೋ! ಇಂದಿನಸಿಟ್ಟು ದಿನದ ಸಿಟ್ಟಿನಂತಹದಲ್ಲ, ಹೊಸತರದ್ದು. ವಿಷಕಂಠನ ನಿಷ್ಠುರಗುಣಗಳು ನಿನ್ನನ್ನುರುಪಿದ್ದು ಸಹಜವು. ಆದರೆ ನಿನ್ನ ಸದ್ಗುಣಗಳು ನನ್ನನ್ನು ಎಂತು ಉರುಪುವವು! (ದಿಕ್ಕುದಿಕ್ಕುಗಳನ್ನು ನೋಡಿ) ಅಕಟಕಟಾ! ಕರಿಗೊರಲನ ಕಣ್ಣುರಿಯು ಕುಸುಮಾಯುಧನನ್ನು ಸುಟ್ಟಿತು. ಅಯ್ಯೋ! ಯಾರೂ ನನ್ನ ಮೊರೆಯನ್ನು ಕೇಳುವದಿಲ್ಲವೇ? ಭೂಮಿಯೇ, ಆಕಾಶವೇ, ಅಗ್ನಿಯೇ, ಮಾರುತನೇ, ಚಂದ್ರನೇ, ಅಬಲೆಯೂ, ಅನಾಥೆಯೂ, ಪಾಪಿಷ್ಠಳೂ ಆದ ನನ್ನನ್ನು ನೋಡಿರಿ."

ಈ ಪ್ರಕಾರ ರತಿಯು ದಿಕ್ಕು ದಿಕ್ಕಿಗೆ ಮೊರೆಯಿಟ್ಟು, ಬಾಯಾರಿ, ಬಲ್ಪುಗುಂದಿ, ನಿಂದಿರಲಾರದೆ ಕಾಲುಕುಸಿದು ದೊಪ್ಪನೆ ನೆಲಕ್ಕೆ ಬಿದ್ದು, ಹೊಟ್ಟೆಯನ್ನು ಹೊಸೆಯುತ್ತ ಹಣೆಯನ್ನು ನೆಲಕ್ಕೆ ಘಟ್ಟಿಸಿ, ಭೋರೆಂದು ಕಣ್ಣೀರುದುರಲು, ಕಲ್ಮರಗಳು ಕರಗುವಂತೆ ಪ್ರಳಾಪಿಸಿದಳು. ಅಹಹಾ! ದುಃಖಾಗ್ನಿಯ ಹೆಚ್ಚಳದಿಂದ ರತಿಯು ಕಣ್ಣುಗಳು ಕೆಂಪೇರಿದವು; ಅಕ್ಷರಗಳು ಬೆಂದು ಶಿಥಿಲವಾಗಿ ಹೊರಡಹತ್ತಿದವು; ಕಣ್ಣೀರುಗಳು ಬತ್ತಿದವು, ಮುಖವು ಬಾಡಿತು. ಶರೀರವು ಬೆಂದಿತು. ಇಂತು ಅನಾಥೆಯಾದ ರತಿಯು ಕೆಚ್ಚುಗಟ್ಟಿದ ದುಃಖವನ್ನು ತರಹರಿಸಲಾರದೆ ಮೆಯ್ಮರೆದು ಕೊರಳಲ್ಲಿ ಪ್ರಾಣವನ್ನೂ, ಕಣ್ಣುಗಳಲ್ಲಿ ಕಾರ್ಪಣ್ಯವನ್ನೂ, ಪಡಿಮೊಗದಲ್ಲಿ ನಿಡುಸುಯ್ಯನ್ನೂ, ನಾಲಿಗೆಯಲ್ಲಿ ವಿಕಲತ್ವವನ್ನೂ, ತನುವಿನಲ್ಲಿ ಚೇತನವನ್ನೂ, ಮನಸ್ಸಿನಲ್ಲಿ ಪರವಶತೆಯನ್ನೂ ಹೊಂದಿ ಭೂಮಿಯಲ್ಲಿ ಬಿದ್ದಳು.

ಗಿರಿಜೆಯು ರತಿಯ ಈ ಇರುವಿಕೆಯನ್ನು ನೋಡಿ ಕನಿಕರಪಟ್ಟು, ಕರುಣಾಕರಚಿತ್ತೆಯಾಗಿ, ರತಿಯು ಹತ್ತಿರ ಹೋಗಿ, ಮೆಯ್ದಡವಿ, ಮೋರೆಯ ಮೇಲೆ ಕಯ್ಯಾಡಿಸಿದಳು. ಆಗ ಜಗಜ್ಜನನಿಯು ಸೋಂಕಿನಿಂದ ರತಿಯು ಎಚ್ಚತ್ತು, ಪಾರ್ವತಿಯಕಾಲುಗಳ ಮೇಲೆ ಬಿದ್ದು—"ಮಾತೆಯೇ, ನನ್ನನ್ನು ನೋಡು, ನೋವನ್ನು ಅಡಗಿಸು, ದುಃಖವನ್ನು ಪರಿಹರಿಸು; ನೀನು ಅನಾಥರಿಗೆ ನಾಥೆಯಲ್ಲವೇ?

**ಗಿರಿಜೆಯ ತಪಸ್ಸು:**—ರತಿಯು ನುಡಿಕೇಳಿ ಗಿರಿಜೆಯು ಕನಿಕರಪಟ್ಟು—"ಮಗಳೇ, ಬಿಡು, ಅಳಬೇಡ. ತಡಮಾಡದೆ ಪರಮೇಶ್ವರನಿಂದ ನಿನ್ನ ಪತಿಯನ್ನು ಪಡೆದು, ನಿನಗೆ ಪರಮಹರ್ಷವನ್ನುಂಟುಮಾಡುವೆನು." ಎಂದು ಹೇಳಲು, ರತಿಯು ಪಾರ್ವತಿಯು ಮಾತಿನಲ್ಲಿ ನಂಬಿಗೆಯಿಟ್ಟು ತನ್ನ ಶೋಕವನ್ನು ಮರೆತಳು. ಇಂತು ಗಿರಿಜೆಯು

ರತಿಗೆ ಅಭಯವನ್ನು ಕೊಟ್ಟು, ಅಂತಕಹರನು ಇರದೆ ಹೋದ ರೀತಿಯನ್ನು ಮನಸ್ಸಿನಲ್ಲಿ ತಂದು, ಖತಿಗೊಂಡು ಜಯಾವಿಜಯೆಯರೊಡನೆ ನುಡಿದಳೇನಂದರೆ—"ಸಖಿಯರೇ, ಮಾತಾಪಿತೃಗಳನ್ನು ತೊಲಗಿ, ಗತಿಯೂ, ಮತಿಯೂ, ಪತಿಯೂ, ಆತ್ಮವೂ ನೀನೇ ಎಂದು ಭಕ್ತಿ-ವಿಶ್ವಾಸಗಳಿಂದ ಅರ್ಚಿಸುತ್ತಿರಲು, ಉಗ್ರನಾದ ಭವನು ರಜತಗಿರಿಗೆ ಹೋಗಿ ದುರಾತ್ಮನಾದನಲ್ಲ! ತಾನಿದ್ದೆಡೆಗೆ ನಾನು ಬಂದು ಅರ್ಚಿಸುತ್ತಿರಲು; ಮಾರರಿಪುವು ಮಾತಾಡಿಸದೆ ಹೋದನು !! ಆದ್ದರಿಂದ ನಾನು ಶೀತೋಷ್ಣಾದಿ ದ್ವಂದ್ವವಿಕಾರಗಳಿಗೆ ಒಳಗಾಗದೆ, ಬಿಸಿಲು, ಮಳೆ, ಶೀತಗಳಲ್ಲಿ ಗಿರಿಗಂಹರ-ಸರಸಿಕುಲಗಳಲ್ಲಿ ನಿಂತು ಜಗವು ಬೆರಗಾಗುವಂತೆ ಉಗ್ರತಪಸ್ಸನ್ನಾಚರಿಸಿ, ಅತ್ಯುಗ್ರನಾದ ಶಿವನನ್ನು ಛಲದಿಂದ ನಾನಿದ್ದೆಡೆಗೆ ಬರಮಾಡುವೆನು.

ವಿವೇಕಶೀಲನೇ, ಲೋಕಮಾತೆಯಾದ ಗಿರಿಜೆಯ ದೃಢನಿಶ್ಚಯವು ವರ್ಣಿಸತಕ್ಕಂಥಾದ್ದಿರುವದು. ಆ ಮಹಾಮಹಿಮೆಯು ಶಿವನನ್ನು ಒಲಿಸಲು ಸಂಕಲ್ಪಮಾಡಿ, ಅದಕ್ಕಾಗಿ ತನ್ನ ರಾಜವೈಭವಗಳನ್ನು ಧಿಕ್ಕರಿಸಿದಳು. ಶಿವಪೂಜಾರ್ಥವಾಗಿ ಅರಣ್ಯವಾಸದ ಕಷ್ಟಗಳನ್ನು ಸಹಿಸಿದಳು. ಕಾಮನನ್ನು ದಹಿಸಿದ ಶಿವನ ಉಗ್ರಸ್ವರೂಪಕ್ಕಾಗಿ ಮನಸ್ಸು ಚಲಿಸದಂತೆ ಅದನ್ನು ಬಿಗಿಹಿಡಿದಳು. ಈ ಪ್ರಕಾರ ವಿಘ್ನಗಳು ಒದಗುತ್ತ ಹೋದರೂ ಆ ಮಹಾಮಹಿಮೆಯು ಎದೆಗುಂದದೆ ಶಿವನನ್ನು ಒಲಿಸಿಕೊಳ್ಳಲು ಈರ್ಷೆಯಿಂದ ಪ್ರತಿಜ್ಞೆ ಮಾಡಿದಳು. ವಿಘ್ನಗಳಿಗೆ ಹೆದರಿ, ಆರಂಭಿಸಿದ ಕಾರ್ಯವನ್ನು ಸಾಧಿಸದೆ ಬಿಡುವ ಅಳ್ಳೆದೆಯವರು ಇದನ್ನು ಲಕ್ಷದಲ್ಲಿಟ್ಟರೆ ಹಿತವಾಗದಿರದು- ಮೊದಲೇ ಹಿತಾಹಿತಗಳನ್ನರಿತು ಕೆಲಸವನ್ನು ಆರಂಭಿಸಬೇಕು. ತರುವಾಯ ಎಷ್ಟು ವಿಘ್ನಗಳೊದಗಿದರೂ ಹೆದರದೆ ದೃಢನಿಶ್ಚಯದಿಂದ ಅದನ್ನು ಸಾಧಿಸಬೇಕು. ಇದೇ ಧೀರರ ಕೆಲಸವು.

ಈ ಪ್ರಕಾರ ಪಾರ್ವತಿಯು ಸಖಿಯರೊಡನೆ ತನ್ನ ಸಾಮರ್ಥ್ಯದ ಉನ್ನತಿಯನ್ನು ನುಡಿಯುತ್ತ, ಬೇಸಿಗೆಯಲ್ಲಿ ಪರ್ವತಾಗ್ರದೊಳು ತಪಸ್ಸನ್ನಾಚರಿಸುವದು ಯುಕ್ತವೆಂದು ತಿಳಿದು ಆ ಜಯಾವಿಜಯೆಯರ ಮುಖವನ್ನು ನೋಡಿದಳು. ಆಗ ಅವರು ಶಂಕರನರಸಿಯಾದ ಗಿರಿಜೆಗೆ ಜಡೆಗಳನ್ನು ರಚಿಸಿ, ಕರ್ಪೂರ ರಜವನ್ನು ಪುಷ್ಪಮಾಲೆಗೆ ಲೇಪಿಸುವಂತೆ, ಆಕೆಯ ಸುಂದರಾಂಗಕ್ಕೆ ವಿಭೂತಿಯನ್ನು ಹಚ್ಚಿದರು. ವಿಸ್ತಾರವಾದ ವಲ್ಕಲವು ಪಾರ್ವತಿಯ ಅಂಗಸ್ಪರ್ಶದಿಂದ ಸುಶೋಭಿತವಾಯಿತು. ಸಖಿಯರು ಆಕೆಗೆ ನಿರ್ಮಲವಾದ ರುದ್ರಾಕ್ಷಿಗಳ ಮಾಲೆಗಳನ್ನು ಒಪ್ಪುವಂತೆ ಹಾಕಿದರು. ಈ ಪ್ರಕಾರ ಭಕ್ತಿ-ಜ್ಞಾನ-ವೈರಾಗ್ಯಯುಕ್ತವಾದ ತಪೋಮಂಡನಗಳನ್ನು ಸಂಗಡ ಇದ್ದ ಸಖಿಯರು ಶೃಂಗರಿಸಲು, ಪಾರ್ವತಿಯು ಉಬ್ಬಿ ಸಂತೋಷಪಟ್ಟು ದಟ್ಟವಾದ ಜಡೆಯು ಬೆನ್ನನ್ನು ಮುಚ್ಚುತ್ತ ನೆಲಕ್ಕಿಳಿಯಲು, ನೀಲಮೇಘವನ್ನು ಹಿಂದಿಟ್ಟು ಮುಂದೆ ಹೊಳೆಯುವ ಎಳೆಮಿಂಚಿನಂತೆ ಶೋಭಿಸಿದಳು. ಪೂರ್ವದಲ್ಲಿ ಹತ್ತಿದ ಕಲಂಕವು ಹತ್ತಬಾರದೆಂದು ಚಂದ್ರಕಲೆಯು ಭೂಮಿಯಲ್ಲಿ ಶಿವನನ್ನು ಕುರಿತು ತಪಸ್ಸು ಮಾಡುವಳೋ ಅನ್ನುವಂತೆ ಪಾರ್ವತಿಯು ತಪಸ್ಸಿನಲ್ಲಿ ನಿಂತಳು. ಆಗ ಚೆನ್ನಾಗಿ ಸುತ್ತುಗೊಂಡಿದ್ದ ದಾವಾಗ್ನಿಯು,

ಸೂರ್ಯಕಾಂತದ ಉನ್ನತವಾದ ಅಗ್ನಿಯು, ಉಷ್ಣವನ್ನು ಹೆಚ್ಚಿಸುತ್ತಿರುವ ಪರ್ವತದ ಅಗ್ನಿಯು, ಮೇಲೆ ಕವಿಯುವ ಸೂರ್ಯನ ತೀವ್ರವಾದ ಅಗ್ನಿಯು, ಬಂದು ಮುತ್ತುವ ಬೇಸಿಗೆಯ ಅಗ್ನಿಯು ಎಂಬ ಪಂಚಾಗ್ನಿಯ ಮಧ್ಯದಲ್ಲಿ ಲಗ್ನವ್ರತೆಯೂ, ಧೈರ್ಯನಿಧಿಯೂ ಆದ ಪಾರ್ವತಿಯು ನಿಂತು, ನಿಶ್ಚಲನೂ, ನಿರ್ಮಲನೂ ಆದ ಪರಮೇಶ್ವರನನ್ನು ಛಲದಿಂದ ಹೃದಯಾಬ್ಜದಲ್ಲಿರಿಸಿ, ಲೋಕಕ್ಕೆ ಆಶ್ಚರ್ಯವಾಗುವಂತೆ ತಪಸ್ಸನ್ನಾಚರಿಸಹತ್ತಿದಳು. ಗಿರಿಜೆಯು ಅತುಳತಪಸ್ಸೆಂಬ ಆತಪದಲ್ಲಿ ಮೃಗಗಳು ಸುಳಿಯುವು, ಪಕ್ಷಿಗಳು ಸಂಚರಿಸವು, ವಾಯುವು ಅಲ್ಲಾಡನು, ಖೇಚರಿಯರು ಆ ಮಾರ್ಗವನ್ನು ಹೊಂದರು, ತಪಕ್ಕಂಜಿ ಸೂರ್ಯನು ದೂರದಿಂದಲೇ ಹೋಗುವನು. ಅಂದ್ಮಬಳಿಕ ಆ ತಪಸ್ಸಿನ ಉಗ್ರತೆಯನ್ನು ಹೆಚ್ಚಿಗೇನು ವರ್ಣಿಸುವದದೆ? ಅಂಬಿಕೆಯ ತಪವು ಅಸಮಾನವೂ, ಅಚಲವೂ, ಅದ್ಭುತವೂ, ಶುಭಕರವೂ, ವಿಭವಯುಕ್ತವೂ ಆಗಿರುವದು. ಅದಕ್ಕೆ ಹೆಸರಿಡುವವರಾರು? ಅದನ್ನು ಹೆಚ್ಚಿಗೆ ನಿಟ್ಟಿಸುವವರಾರು?

ಈ ಪ್ರಕಾರ ಸಾಮರ್ಥ್ಯವನ್ನೊಳಕೊಂಡು ಜಡೆಗಳ ಬೆಡಂಗಿ, ಭಸಿತದ ಫಾಲಲೋಚನೆ, ರುದ್ರಾಕ್ಷಿಯ ಭದ್ರಾಂಗಿ, ನಾರಸೀರೆಯ ಧೀರೆ, ಉಗ್ರತಪದ ವ್ಯಗ್ರೆ, ಗಿರಿಶಿಖರದ ಗರುವೆ ಎನಿಸುವ ಪಾರ್ವತೀದೇವಿಯು ಪ್ರಚಂಡತರ–ಪ್ರತಾಪಮಯ–ತಪೋವೇಷದಿಂದಿರುತ್ತಿರಲು, ದಿಕ್ಕುಗಳನ್ನು ಕಾಹೇರಿಸುತ್ತ, ಭೂಮಿಯನ್ನು ಸಂತಾಪಗೊಳಿಸುತ್ತ, ಜಲಾಶಯಗಳನ್ನು ಶೋಷಿಸುತ್ತ, ಸಸಿಗಳನ್ನೂ ವೃಕ್ಷಗಳನ್ನೂ ಸುಟ್ಟುರುಪುತ್ತ, ಮೃಗಗಳನ್ನು ಬೇಯಿಸುತ್ತ ಭಯಂಕರವಾದ ಬೇಸಿಗೆಯು ಕಾಡುಗಿಚ್ಚಿನಂತೆ ಹಬ್ಬಿತು. ಆಗ ಅಲ್ಲಲ್ಲಿ ಹಬ್ಬಿರುವ ಮೃಗಜಲವನ್ನು ಜಲವೆಂದು ತಿಳಿದು ಕುಡಿಯಹೋಗಿ ಮೃಗಗಳು ಬಳಲುವವು. ಮರದಡಿಯಲ್ಲಿ ಕರಿಯಬಿಸಿಲೂ, ಕಾನನದಲ್ಲಿ ಉರಿಯ ಬಿಸಿಲೂ, ಆಕಾಶದಲ್ಲಿ ಅಖಂಡವಾದ ಬಿಸಿಲೂ ಒಪ್ಪುತ್ತಿರುವವಲ್ಲದೆ, ತಂಪಿನ ವಾರ್ತೆಯೇ ಇದ್ದಿಲ್ಲ. ಹಾದಿಕಾರರು ನೀರಿಲ್ಲದೆ ಬಳಲಿದರು. ಪಕ್ಷಿಕುಲವು ಬಿಸಿಲಿನ ತಾಪಕ್ಕಂಜಿ ಶಬ್ದಮಾಡದೆ ಗೂಡಸೇರಿತು. ಇಂಥ ಕ್ರೂರಬೇಸಿಗೆಯಲ್ಲಿ ಸೂರ್ಯಕಾಂತದ ಕಲ್ಲಿನಿಂದ ಕಿಡಿಗಳು ಹೊರಟು ಪಾದಗಳಲ್ಲಿ ಸೇರುತ್ತಿರಲು, ಶರೀರವನ್ನು ಕಾಡುಬೇಗೆಯ ಉರಿಯೂ, ಜಠರಾಗ್ನಿಯೂ, ಸೂರ್ಯಪ್ರಕಾಶವೂ, ಮಧ್ಯಾಹ್ನದ ಬೇಸಿಗೆಯೂ ಮುತ್ತುತ್ತಿರಲು, ಹೆದರದೆ ದಶಭುಜನ ಮನೋವಲ್ಲಭೆಯಾದ ಪಾರ್ವತಿಯು ಗಂಗಾಧರನನ್ನು ನೆನಿಸುತ್ತ ಆ ಬೇಸಿಗೆಯನ್ನು ಕಳೆದಳು.

ಸಕಲಕಲಾವಿದೆಯರಾದ ಜಯಾವಿಜಯೆಯರು ಪಾರ್ವತಿಯನ್ನು ನಮಸ್ಕರಿಸಿ—"ಜಗನ್ಮಾತೆಯೇ, ಬೇಸಿಗೆಯ ಮದವು ಕಡಿಮೆಯಾಯಿತು, ಕಮಲಸಮೂಹಗಳು ಅಲ್ಲಲ್ಲಿ ಕಾಣಹತ್ತಿದವು, ಮಿಂಚು ತಲೆದೋರಿತು, ಅಂಚೆಗಳು ಬೆದರಿದವು, ನವಿಲುಗಳು ಉತ್ಸಾಹಗೊಂಡವು, ಪಶ್ಚಿಮದ ಗಾಳಿಯು ಮೋಡವನ್ನು ಎಬ್ಬಿಸುತ್ತಿರುವದು. ಈಗ್ಗೆ ಬೇಸಿಗೆ ಹೋಗಿ, ಮಳೆಗಾಲವು ಪ್ರಾಪ್ತವಾಗುತ್ತಿರಲು, ಗಿಡದ ನೆರಳಲ್ಲಿ ಕುಳಿತು, ನಿಷ್ಕಪಟವಾದ ತಪಸ್ಸನ್ನಾಚರಿಸುವದು ತಕ್ಕದ್ದು" ಅನ್ನಲು, ಶೈವಪ್ರತಾಪತೇಜೋನಿಧಿ

ಯಾದ ಪಾರ್ವತಿಯು ಒಡಂಬಟ್ಟು, ಥೋಂಕನೆ ಎದ್ದು, ವಿನಯಾನ್ವಿತೆಯಾಗಿ, ವಿಲಾಸಿ ನೀವಿಭ್ರಮದಿಂದ ನಡೆತಂದು, ದಟ್ಟವಾದ ನೆರಳುಳ್ಳ ದೊಡ್ಡ ಆಲದಮರವನ್ನು ಹೊಂದಿ, ತಪಸ್ಸನ್ನು ಮಾಡಹತ್ತಿದಳು. ಆಗ ದಿಕ್ಕುದಿಕ್ಕಿಗೆ ಮೋಡಗಳು ಎದ್ದವು, ಮಿಂಚು ಮನಸ್ಸನ್ನು ಸಂಚಲಿಸಿತು, ಗುಡುಗು ಸಿಡಿಲುಗಳು ಭಯವನ್ನುಂಟುಮಾಡಿದವು, ಭೋರ್ಗರೆಯುತ್ತ ಮಳೆಯು ಸುರಿಯಹತ್ತಿತು. ಕಟ್ಟಕರೆಯುವ ಈ ಮಳೆಗಾಲದಲ್ಲಿ ಆಕಾಶವು ಕೆಟ್ಟಿತು, ಚಂದ್ರ-ಸೂರ್ಯರು ಅಳಿದರು, ಮಾರ್ಗಗಳು ಅಸ್ಪಷ್ಟವಾದವು, ಭೂಮಂಡಲವು ಜಲದಲ್ಲಿ ಮುಳುಗಿತು, ಪಕ್ಷಿಗಳು ಸಂಚರಿಸದಾದವು, ಜಗತ್ತು ನಿರು ದ್ಯೋಗಕ್ಕೆ ಸ್ಥಳವಾಯಿತು. ಈ ಪ್ರಕಾರ ಶೋಭಿಸುವ ಮಳೆಗಾಲದಲ್ಲಿ ಮಳೆ ಬಿಟ್ಟರೂ ಮರದ ಹನಿಬಿಡದ ಆಲದಮರದ ತಣ್ಣೆಳಲಲ್ಲಿ ಕುಳಿತು, ಹಿಂಜರಿಯದೆ ಅಂಬಿಕೆಯು ತಪ ಸ್ಸನ್ನಾಚರಿಸಿದಳು.

ಇಂತು ಗಿರಿಜೆಯು ಹುಟ್ಟಿದ ಮೋಡಗಳ ಭೀಕರಾಕಾರಕ್ಕೂ, ಮಿಂಚಿನ ಸಂಚಲ ತೆಗೂ, ಗುಡುಗಿನ ಮಹಾಧ್ವನಿಗೂ, ಸಿಡಿಲಿನ ಸಡಗರಕ್ಕೂ, ಬಿರು ಮಳೆಯ ಹೊ ಯ್ಲಿಗೂ, ಆಣೇಕಲ್ಲಿನ ಕರ್ಕಶತೆಗೂ, ಬಿರುಗಾಳಿಯ ಘಾಸೆಗೂ, ಕಾರಿರುಳ ಭಯಂಕ ರತೆಗೂ, ಕ್ರೂರಮೃಗಗಳ ರೌದ್ರತೆಗೂ ಬೆದರದೆ, ಬಲಗುಂದದೆ, ಸಹಾಯವನ್ನು ಇಚ್ಛಿ ಸದೆ, ವಟವೃಕ್ಷದ ಬುಡದಲ್ಲಿ ತಪಸ್ಸನ್ನು ಮಾಡುತ್ತಿದ್ದಳು. ಅಷ್ಟರಲ್ಲಿ ಜಯಾವಿಜಯೆ ಯರು ಬಂದು, ನಮಸ್ಕರಿಸಿ—"ಜಗನ್ಮಾತೆಯೇ, ಅವಧರಿಸು. ಒಕ್ಕಲಿಗರು ಪ್ರೇಮ ದಿಂದ ಒಕ್ಕಲತನದ ಕೆಲಸಗಳನ್ನು ಮಾಡುತ್ತಿರಲು, ಪಕ್ಷಿಗಳು ಗೂಡುಗಳಿಂದೆದ್ದು ಮರದ ತಳಿಗೊಂಬೆಯಲ್ಲಿ ಕುಳಿತು ಬಿಸಿಲನ್ನು ಕಾಸುತ್ತಿರಲು, ಮೋಡಗಳು ಹಿಂಡಿ ಹರಹಿದಂತಿ ರಲು, ಮೃಗಗಳು ಗವಿಯಿಂದ ಹೊರಟು ಹುಲ್ಲುಮೇಯುತ್ತಿರಲು, ರಾಜಹಂಸಗಳು ಕೂಡುತ್ತಿರಲು, ಆಕಾಶವು ಶುಭ್ರತ್ವವನ್ನು ಹೊಂದುತ್ತಿರಲು, ಮಳೆಗಾಲವು ಹೋಗಿ ಚಳಿಗಾಲವು ಪ್ರಾಪ್ತವಾಯಿತು. ಆದ್ದರಿಂದ "ಕೆರೆತೊರೆಗಳಲ್ಲಿಯೂ, ಪರ್ವತದ ತಪ್ಪ ಲಿನ ಹಿಮದಲ್ಲಿಯೂ ತಪಸ್ಸನ್ನು ಮಾಡತಕ್ಕದ್ದು" ಎಂದು ಸಖಿಯರು ಹೇಳಿದರು. ಜಯಾವಿಜಯೆಯರ ಈ ಉಚಿತವಚನಗಳನ್ನು ಕೇಳಿ, ಲೋಕೈಕ ಬಂಧುವಾದ ಮಹಾ ದೇವೀ ಪಾರ್ವತಿಯು ಮಳೆಗಾಲ ಹೋದದ್ದನ್ನು ಮನಸ್ಸಿನಲ್ಲಿ ತಂದು, ಸೊರಗಿದ ಶರೀರ ವನ್ನು ಬಿಡದೆ ಸುತ್ತಿಕೊಂಡಿರುವ ನಾರಸೀರೆಯು ಚಂದಕಾಣುತ್ತಿರಲು, ಮಳೆಯಿಂದ ತೊಯ್ದು ಆರದಮೈಯ್ಯ ನಿರ್ವಿಣ್ಯವನ್ನು ತಣ್ಣೆಳಲಲ್ಲಿ ಆರಿಸುತ್ತ, ಧ್ಯಾನಾನಂದರಸ ದಿಂದ ತೊಯ್ದು ಒಳಗಿನ ಇಂದ್ರಿಯಗಳನ್ನು ಉಸುರಿನಿಂದ ಆರಿಸುತ್ತ, ತಪೋಭಾನುವಿನ ಉದಯಕ್ಕೆ ಮುಖಕಮಲವು ಅರಳುವಂತೆ ಮೆಯ್ಯಸಂಪುಟವು ಬಿಚ್ಚಲು, ಕಣ್ದೆರೆದು ಮುಂದಿದ್ದ ಸಹಚರಿಯರನ್ನು ನೋಡಿ, ಮೋದದಿಂದ ಚಂದ್ರಕಳೆಯು ಹೊರಬೀಳುವಂತೆ, ಆಲದಮರದಿಂದ ಹೊರಹೊರಟು, ತಣ್ಣೆಳಲಲ್ಲಿ ಲತಾಮಂಟಪಗಳ ನಡುವೆ ಇರುವ ಸರೋವರತೀರದಲ್ಲಿ ತಪಸ್ಸನ್ನಾಚರಿಸಹತ್ತಿದಳು.

ಇತ್ತ ಭೂತಳದಲ್ಲಿ ಚಳಿಯು ಹಬ್ಬಲು, ಗೃಗಗಳು ಗುಡ್ಡಗಳನ್ನು ಸೇರಿದವು;

ಹಕ್ಕಿಗಳು ಗೂಡುಗಳನ್ನು ಹೊಕ್ಕವು; ಹಬ್ಬಿದ ಚಳಿಯಲ್ಲಿ ಕಿಡಿಗಳು ಕೆಂಪು ಆಣೆಕಲ್ಲುಗಳಾದವು; ಉರಿಯು ಕೆಂದಳಿರಾಯಿತು; ಕೆಂಡವು ಮಾಣಿಕವಾಯಿತು; ಪ್ರಜ್ವಲಿಸುವ ಸೂರ್ಯನು ಚಂದ್ರನಾದನು; ಬಿಸಿಲು ಬೆಳದಿಂಗಳಾಯಿತು. ಚಳಿಗೆ ಜೀವವು ಬೆದರಿ, ಜಠರಾಗ್ನಿಯನ್ನು ಎಚ್ಚರಗೊಳಿಸಿದ್ದರಿಂದ ಹೊಗೆಹಾಯುವದೋ ಅನ್ನುವಂತೆ ಜನರ ಮುಖದಿಂದ ಹೊಗೆ ಹೊರಡಹತ್ತಿತು. ಈ ಪ್ರಕಾರ ಹಬ್ಬಿದ ಚಳಿಯಲ್ಲಿ ಗಿರಿಜೆಯು, ಸರೋವರದಲ್ಲಿಯೂ , ಪರ್ವತದ ತಪ್ಪಲಲ್ಲಿಯೂ ತಪಸ್ಸನ್ನಾಚರಿಸಿದಳು.

ಶಿವನ ದರ್ಶನ:—ಇಂತು ಪಾರ್ವತಿಯು ಬೇಸಿಗೆಯ ತಾಪದಲ್ಲಿಯೂ, ಮಳೆಗಾಲದ ಪ್ರಳಯ ಜಲದಲ್ಲಿಯೂ, ಚಳಿಗಾಲದ ಹೆಚ್ಚಿನ ಚಳಿಯಲ್ಲಿಯೂ ಸ್ಥಿರವಾಗಿ ನಿಂತು ತಪಸ್ಸು ಮಾಡುತ್ತಿರಲು, ಆಕೆಯ ತಪಃಪ್ರಭಾವವು ವಿರೂಪಾಕ್ಷನ ಕರಣಗಳಲ್ಲಿ ಬೆರೆತು ಬೆಳೆಯಿತು. ಆಗ ಪುರಹರನಿಗೆ ಎಚ್ಚರಾಗಲು, ಆತನ ಕೆಚ್ಚುಗಟ್ಟಿದ ಧೈರ್ಯವನ್ನು ಒಡೆದು ಆತನಲ್ಲಿ ಮೂಡಿದ ಕಾರುಣ್ಯವು ಆತನನ್ನು ಹಿಡಿದೆಳೆಯಹತ್ತಿತು. ಆಗ ಮಾರರಿಪುವು ಇನ್ನು ಗಿರಿಜೆಯನ್ನು ಕಾಣದಿರಬಾರದೆಂದು ಯೋಚಿಸಿ, ಆಕೆಯ ಮನಸ್ಸನ್ನು ಪರೀಕ್ಷಿಸುವ ಇಚ್ಛೆಯಿಂದ ದಶಭುಜಗಳನ್ನೂ, ಪಂಚಾನನಗಳನ್ನೂ, ಮೂವತ್ತು ಭಯಂಕರಾವಯವಗಳನ್ನೂ ತನ್ನ ತನುವಿನಲ್ಲಿ ಅಡಗಿಸಿ, ವಟುವೇಷವನ್ನು ಧರಿಸಿದನು. ಹೀಗೆ ಗಿರಿಜೆಯನ್ನು ನೋಡುವವರೆಗೆ ಬ್ರಹ್ಮಚರ್ಯದಿಂದ ಇದ್ದು, ಆ ಮೇಲೆ ತನ್ನ ನಿಜರೂಪವನ್ನು ತೋರಿಸುವ ಇಚ್ಛೆಯಿಂದ ವಟುವೇಷಧರಿಸಿದ ಶಿವನು, ಪ್ರಾಣಾನಿಲನು ದೇಹದಲ್ಲಿಗೆ, ಮೇಘವು ಶಿಖಿಯಲ್ಲಿಗೆ, ಹಂಸವು ಕಾಸಾರದಲ್ಲಿಗೆ ಬರುವಂತೆ ಪಾರ್ವತಿಯಿದ್ದೆಡೆಗೆ ಪ್ರೀತಿಯಿಂದ ಬಂದನು.

ಶಿವನು ಭೂಲೋಕಕ್ಕಿಳಿದು ಹೇಮಕೂಟದಲ್ಲಿ ಹೈಮವತಿಯು ಇರುವ ತಪೋವನವನ್ನು ಹೊಗುತ್ತಿರಲು, ವಸಂತಋತುವಲ್ಲದಿದ್ದರೂ ಆತನ ಮಹಿಮೆಯಿಂದ ಮಾಮರವು ಅಂಕುರಿಸಿತು, ಅಶೋಕವು ಪಲ್ಲವಿಸಿತು, ವಸಂತದೂತಿಯು ಹೂವಾಯಿತು, ಕೋಗಿಲೆಯು ಉಚ್ಚಸ್ವರದಿಂದ ಕೂಗಿತು, ಮಲ್ಲಿಗೆಯು ಪರಿಮಳದ ಭಾರದಿಂದ ಕುಸಿದು ದಕ್ಷಿಣಾನಿಲನು ಮೆಲ್ಲಮೆಲ್ಲನೆ ಸುಳಿದನು. ಈ ಪ್ರಕಾರ ಶಿಶಿರಋತುವಿನಲ್ಲಿ ವಸಂತೋದಯ ಶೋಭೆಯಾದದ್ದನ್ನು ನೋಡಿ, ಆಶ್ಚರ್ಯಪಡುತ್ತ ಜಯಾವಿಜಯೆರು ಪಾರ್ವತಿಯನ್ನು ಕುರಿತು— "ಲೋಕಮಾತೆಯೇ, ಪುಣ್ಯತಪಃಪ್ರಭಾವದಿಂದ ವಸಂತೋದಯವಾದದ್ದನ್ನು ನೋಡಿದೆಯಾ? ಇದು ಹೊಸದು, ಇದು ಅತ್ಯಂತಾಶ್ಚರ್ಯವು" ಎಂದು ನುಡಿದರು. ಅಷ್ಟರಲ್ಲಿ ಶಶಿಮೌಳಿಯು ತಪೋವನವನ್ನು ಹೊಕ್ಕು, ಪಥಶ್ರಮದಿಂದ ಬೇಸತ್ತವನ ಹಾಗಾಗಿ ಮೆಲ್ಲನೆ ಬರುತ್ತ, ತೇಕುತ್ತ, ಎಡಬಲದಸ್ಥಳಗಳನ್ನು ನೋಡುತ್ತ, ಮನಸ್ಸಿನಲ್ಲಿ ಪರಮಾನಂದಪಡುತ್ತ ಪಾರ್ವತಿಯ ತಪಸ್ಸೀಮೆಯಲ್ಲಿದ್ದ ಒಂದು ಹೊಸಮಾವಿನಮರವನ್ನು ಹೊಂದಿದನು. ಇಂತು ವಟುವೇಷದಿಂದ ವಿರೂಪಾಕ್ಷನು ದೊಡ್ಡ ಮಾವಿನಮರದ ತಂಪಾದ ನೆಳಲಲ್ಲಿ ಕುಳಿತಿರುವದನ್ನು ಸಹಚರಿಯರಾದ ಜಯಾವಿಜಯೆರು ಕಂಡು—"ಈ ಹುಡುಗನು ಅಪರೂಪದವನು, ಅತಿಥಿಸ್ವರೂಪನು, ಮಸಮಸಕು ವಿಭೂತಿಯಿಂದೊಪ್ಪುವ

ಹಣೆಯುಳ್ಳವನು, ಮೇಲಾಗಿ ಶ್ರೇಷ್ಠಬ್ರಾಹ್ಮಣನು-„ ಎನ್ನುತ್ತ, ಪ್ರೀತಿಯಿಂದ ಆತನ ಕಾಲುಗಳನ್ನು ತೊಳೆದರು. ತರುವಾಯ ಅವರು ಎಳೆಬಾಳೆಯ ಕುಡಿ ಎಲೆಯಲ್ಲಿ ರಸ ದ ಎಕ್ತ್ವಾದ ಕಂದ್ದಮೂಲಗಳನ್ನೂ, ಮಾವಿನಹಣ್ಣು-ಬಾಳೆಯುಹಣ್ಣು-ನೀರಲಹಣ್ಣು ಗಳನ್ನೂ ತಂದು ಮುಂದೆ ಇಟ್ಟು ವಿನಯದಿಂದ—“ಎಲೈ ಅತಿಥಿಗಳೇ, ನೀವು ಮಾರ್ಗ ನಡೆದು ಬಳಲಿರುವಿರಿ. ಇನ್ನು ಈ ಹಣ್ಣುಗಳಿಂದ ನಿಮ್ಮ ಹಸಿವೆಯನ್ನು ಕಳಕೊಳ್ಳಿರಿ” ಅನ್ನಲು, ಬ್ರಾಹ್ಮಣನು —“ಯಾಕಾಗಲೊಲ್ಲದು, ಹಣ್ಣುಗಳನ್ನು ಅವಶ್ಯವಾಗಿ ತಕ್ಕೊಳ್ಳುವೆವು; ಆದರೆ ತಪಸ್ಸನ್ನಾಚರಿಸುವ ಈ ಲಲನಾಮಣಿಯು ಯಾರು? ಈಕೆಯು ತಪಸ್ಸನ್ನೆಸಗುವದು ಯಾವನಪುಣ್ಯವು?„ ಎಂದು ನುಡಿದನು. ವಿಪ್ರನ ನುಡಿಕೇಳಿ ಜಯಾವಿಜಯೆಯರು—“ಇವರು ಯಾರಿದ್ದರೇನು ನಿಮಗೇನು? ಇವರ ಇರವನ್ನು ತಕ್ಕೊಂಡು ನೀವೇನು ಮಾಡುವಿರಿ? ನಿಮ್ಮ ಹಸಿವನ್ನೂ, ದಾರಿಯ ಕಷ್ಟವನ್ನೂ ಕಳಕೊಂಡರಾಯಿತು„ ಎಂದರು. ಆಗ ವಿಪ್ರನು ನಸುನಗುತ್ತ ಅವರನ್ನು ಕುರಿತು—“ಓಹೋ! ಕೇಳಿದರೆ ತಪ್ಪೇನಾಯಿತು? ಈ ಹೊಸಕನ್ಯೆಯು ತಪಸ್ಸಿನಬಂಧನವನ್ನು ತಡೆಯಬಹುದೇ? ತಪಸ್ಸನ್ನು ಬಿಡಿಸುವ ಕರುಣಾಳುಗಳು ಯಾರೂ ಇಲ್ಲವೆ? ಸಹಾಯಸಂಪತ್ತು ಈ ಲಲನಾಮಣಿಗೆ ಇಲ್ಲೇಇಲ್ಲವೇನು?

ಇಂತು ವಿಪ್ರನಾಡುವ ಮಾತುಗಳನ್ನು ಕೇಳಿ ಗಿರಿಜೆಯು ಮನಸ್ಸಿನಲ್ಲಿ ಮುನಿಯುತ್ತ, ಜಪವನ್ನು ಬಿಟ್ಟು ಜಪಮಾಲೆಯನ್ನು ಮೆಲ್ಲನೆ ಕಯ್ಯಲ್ಲಿ ತೊಡಕುಹಾಕಿ, ಮೆಲ್ಲನೆ ಕಣ್ಣು ತೆರೆಯುತ್ತ ಆ ಶ್ರೇಷ್ಠನಾದ ಹುಡುಗನನ್ನು ನೋಡಿದಳು. ಆಗ ಆ ವಟುದರ್ಶನದಿಂದ ಪಾರ್ವತಿಗೆ ಅತಿ ಹರ್ಷವಾಯಿತು. ಚಂದ್ರನಿಗೆ ಮೋಡವು ಮುತ್ತಿದರೂ ಆದಿನ ಲೋಕಕ್ಕೆ ತಂಪುದೊರೆಯುವಂತೆ, ವಟುವೇಷಧಾರಿಯಾದ ವಿರೂಪಾಕ್ಷನಿಂದ ಗಿರಿಜೆಗೆ ಹರ್ಷವಾದದ್ದು ಅಚ್ಚರಿಯಲ್ಲ. ಈ ಪ್ರಕಾರ ಅನಿಮಿತ್ತವಾಗಿ ಉತ್ಪನ್ನವಾದ ಹರುಷಕ್ಕೆ ನಿಮಿತ್ತವೇನಿರಬಹುದೆಂದು ತಿಳಿಯುವದಕ್ಕಾಗಿ ಪಾರ್ವತಿಯು ಆ ವಟುವನ್ನು ತನ್ನ ಮನೋಹರವಾದ ಕಟಾಕ್ಷಗಳಿಂದ ನೋಡಹತ್ತಿದಳು. ಆಗ ಗಿರಿಸುತೆಯ ಮಧುರ ದೃಷ್ಟಿಗಳು ಉರುವಣೆಯಿಂದ ತನ್ನನ್ನು ಹಾಯಲು, ಆ ಬ್ರಾಹ್ಮಣನು ಮರುಳಾಗಿ, ನಿಲ್ಲದೆ ಏಳುವ ರೋಮಾಂಚಗಳನ್ನು ಸಮಾಧಾನಗೊಳಿಸುತ್ತ, ಹಾರುವ ಜಡೆಗಳನ್ನು ಒತ್ತುತ್ತ, ಹೊರಬೀಳುವ ಭುಜಾವಳಿಯನ್ನು ಅಡಗಿಸುತ್ತ, ಮೀರುವ ವೃಷಭೇಂದ್ರನನ್ನು ತೊಡೆಗಳಿಂದ ಗಟ್ಟಿಯಾಗಿ ಒತ್ತುತ್ತ, ನಿಜಮೂರ್ತಿಯೊಡನೆ ಗಜಿಬಜಿಯಾಗುತ್ತ ಹಾಗೂ ಹೀಗೂ ತನ್ನ ನಿಜರೂಪವನ್ನು ಮರೆಮಾಡಿ, ದಿಟ್ಟತನವನ್ನು ತಂದಿಟ್ಟು, ಗಿರಿಜೆಯೊಡನೆ ಸುಳ್ಳುಮಾತುಗಳನ್ನಾಡಿದನೇನಂದರೆ—“ಮುಗ್ಧೇ, ಈ ಸುಕುಮಾರತೆಯು, ಈ ಆನಂದವೃತ್ತಿಯು, ಈ ದೈವಶಾಲಿತನವು, ಈ ಹೊಸಪ್ರಾಯದ ಸೊಕ್ಕು, ಈ ಮನೋಹರತ್ವವು, ಈ ಅಮೃತಮಯವು ಇಂಥಾ ಸುಖದಲ್ಲಿ ನಿನಗೆ ಈ ತಪಸ್ಸು ಎಲ್ಲಿಂದ ಬಂತು? ಸೌಕುಮಾರ್ಯವರಣೆಯೇ, ಈ ತಾರುಣ್ಯದಲ್ಲಿ ನೀನೇಕೆ ಈ ಘೋರತಪಸ್ಸನ್ನಾಚರಿಸುತ್ತಿರುವೆ? ಅಕಟಕಟಾ! ಎಳೆಬಳ್ಳಿಯಂತೆ ಇದ್ದ ನಿನ್ನನ್ನು ಸೂರ್ಯನ ಬಿಸಿಲಿ

ನಿಂದ ಬಣಗಿಸುವ ದುಷ್ಟನನ್ನು ನನಗೆ ತಿಳಿಸು. ಬಾಲಹಂಸೀಯಾನೆಯೇ, ನೆಸುಗೆಂಪಿನಿಂದೊಪ್ಪುವ ನಿನ್ನೀ ಮೃದುಚರಣಗಳು ಅತಿ ಕಠಿಣವಾದ ಈ ಕಲ್ಲು ಮುಳ್ಳುಗಳಿಗೆ ಹ್ಯಾಗೆ ತಡೆಯುವವು? ಎಳೇ ಬೆಳದಿಂಗಳ ಸೋಂಕನ್ನು ತಡೆಯದೆ ಬಾಡುವ ನಿನ್ನೀ ಶಿರೀಷ ಸುಕುಮಾರಾಂಗವು ಅತಿ ಕರ್ಕಶದಿಂದ ಸುತ್ತಿಕೊಂಡಿರುವ ಈ ನಾರಸೀರೆಯ ಉಪಟಳವನ್ನು ಹೇಗೆ ತಡೆಯುವದು? ಅಯ್ಯೋ! ಎಳೆಬಳ್ಳಿಯನ್ನು ತಿರಸ್ಕರಿಸುವ ನಿನ್ನ ನಳಿತೋಳ್ಗಳೂ, ಚಕ್ರವಾಕಗಳನ್ನು ನಾಚಿಸುವ ಕುಚಮಂಡಲವೂ, ಅತಿ ಕ್ಷೀಣವಾದ ಟೊಂಕವೂ ತಪಸ್ಸಿನ ಕೋಟಲೆಗೆ ಗುರಿಯಾಗುವವೆ? ಅಹಹಾ! ಈ ಘನಯೌವನದಲ್ಲಿ ಹೊಳೆಯುವ ಮುಖಚಂದ್ರವು ಬಿಸಿಲಿನಿಂದ ಬಾಡಿತು, ಹೂಮಾಲೆಯಿಂದೊಪ್ಪುತ್ತಿದ್ದ ಮುಡಿಯು ಜಡೆಯ ರೂಪವನ್ನು ಹೊಂದಿತು. ಮುಗ್ಧೇ, ಈ ಪ್ರಾಯದ ಮದದಲ್ಲಿ ಬಿಸಿಲೆನ್ನದೆ, ಮಳೆಯನ್ನದೆ, ಚಳಿಯನ್ನದೆ, ಹಸಿವೆ–ನೀರಡಿಕೆ–ನಿದ್ದೆಗಳನ್ನು ಗೆದ್ದು, ಭೂತಳವು ಬೆರಗಾಗುವಂತೆ ತಪಸ್ಸನ್ನಾಚರಿಸುವವರು ನಿನ್ನ ಹೊರತು ಮತ್ತಾರಾದರೂ ಇರುವರೆ? ಕಮಲಮುಖಿಯೇ, ಈ ಏರುವ ಪ್ರಾಯದಲ್ಲಿ ಈ ಪ್ರಕಾರದ ಬಂಧನದಿಂದ ಯಾರನ್ನು ಕುರಿತು ತಪಸ್ಸನ್ನು ಮಾಡುವೆಯೆಂಬದನ್ನು ನನಗೆ ಹೇಳಿದರೆ ಏನು ತಪ್ಪಾಗುವದು?"

ಈ ಪ್ರಕಾರ ಪ್ರಣಯಕಲಹವೆಂಬ ಲೀಲೆಯಲ್ಲಿ ಮುಳುಗಿದ ವಿರೂಪಾಕ್ಷನು ಆಡಿದ ಮಾತುಗಳನ್ನು ಕೇಳಿ ಗಿರಿಜೆಯು ಚಿಂತೆಯನ್ನು ತಾಳಿ ವಿಚಾರ ಮಾಡಿದಳೇನಂದರೆ— "ನಿರ್ಮಲನಾದ ಬ್ರಾಹ್ಮಣನು ಕೇಳುವನು, ಆತನ ಕ್ಷೋಭಭಯವನ್ನು ಮನಸ್ಸಿನಲ್ಲಿ ತಂದರೆ, ತಪಸ್ಸಿನ ಕಾರಣವನ್ನು ಹೇಳದೆ ಇರಬಾರದು. ನನ್ನ ಲಜ್ಜೆಯ ಮೂಲಕ ಕಾರಣವಿಲ್ಲದೆ, ಅದನ್ನು ಹೇಳಲಿಕ್ಕೂ ಬಾರದು. ಇಂಥ ಇಕ್ಕಟ್ಟಿನ ಪ್ರಸಂಗದಲ್ಲಿ ಲಜ್ಜೆಗಿಂತ ವಿಪ್ರಕ್ಷೋಭವು ಭಯಂಕರವು. ಕಾರಣ ತಪಸ್ಸಿನ ಉದ್ದೇಶವನ್ನು ವಿಪ್ರನಿಗೆ ತಿಳುಪುವದು ಯೋಗ್ಯವು" ಎಂದು ಯೋಚಿಸಿ, ಗಿರಿಜೆಯು ಮನಸ್ಸಿನ ಕಷ್ಟದಿಂದ ಅಸಾಧ್ಯವಾದ ತನ್ನ ತಪಸ್ಸಿನ ಕಾರಣವನ್ನು ಹೇಳತೊಡಗಿದಳು—"ಎಲೈ ಧೂರ್ತನಾದ ಬ್ರಾಹ್ಮಣನೇ, ಬಹು ಆಸ್ಥೆಯಿಂದ ನನ್ನ ತಪಸ್ಸಿನ ಕಾರಣವನ್ನು ಕೇಳುವೆ, ಹೇಳುತ್ತೇನೆ ಕೇಳು- ಶೂಲಧರನೂ, ಕರುಣಾಸಾಗರನೂ ಆದ ಶಂಭುವಿಗೆ ಕರುಣವು ಹುಟ್ಟುವದಕ್ಕಾಗಿ ತಪಸ್ಸನ್ನು ಮಾಡುವೆನು"

ಈ ಪ್ರಕಾರ ತ್ರಿಪುರಾರಿಯ ಶಂಭುವೆಂಬ ನಾಮವನ್ನು ಉಚ್ಚರಿಸುವ ಗಿರಿಜೆಯ ಕಂಠವು ಗದ್ಗದವನ್ನು ಹೊಂದಿತು, ಶರೀರವು ಪುಳಕಯುಕ್ತವಾಯಿತು, ನೇತ್ರಗಳು ಅಶ್ರುಪೂರಿತವಾದವು, ಮನಸ್ಸು ಹರುಷಗೊಂಡಿತು. ಇಂತು ಶಿವನನ್ನು ಕುರಿತು ತಪಸ್ಸನ್ನಾಚರಿಸುವೆನೆಂಬದನ್ನು ಹೇಳುವ ಗಿರಿಜೆಯ ನುಡಿ ಕೇಳಿ, ದುಷ್ಟಧರಾಮರನು ಅಟ್ಟಹಾಸದಿಂದ ನುಡಿದನೇನಂದರೆ—"ಲತಾಂಗಿಯೇ, ಆಯಿತಾಯಿತು, ನೀಚನಾದ ಶಿವನಲ್ಲಿ ನೀನು ಮನಸ್ಸನ್ನಿಟ್ಟದ್ದರಿಂದ ನಿನ್ನ ಹಿತವು ನಿಶ್ಚಯವಾಗಿ ಹಾಳಾಯಿತು. ಮೂಢಳೇ, ವಧುಗಳು ಸ್ತ್ರೀಯ ಅಭಿಲಾಷೆ, ಸುಂದರರೂಪ, ಆಚಾರಶೀಲತ್ವ, ಐಶ್ವರ್ಯ ಇವುಗಳಿಲ್ಲದ ವರನನ್ನು ಬಯಸಲಾರರು. ಶಂಕರನು ಕಾಮಹರನಾದ್ದರಿಂದ ಸ್ತ್ರೀಯಲ್ಲಿ

ಅಭಿಲಾಷೆಯು ಅವನಿಗಿರದು, ಮುಕ್ಕಣ್ಣನಾದ್ದರಿಂದ ಆತನು ಕುರೂಪಿಯು, ವೇದ ಶಾಸ್ತ್ರಗಳ ಕ್ರಮವನ್ನು ಬಿಟ್ಟವನಾದ್ದರಿಂದ ಆಚಾರ ಹೀನನು, ಸುಡುಗಾಡಿನಲ್ಲಿರುವವನಾದ್ದರಿಂದ ಆತನು ಐಶ್ವರ್ಯರಹಿತನು. ಕಾರಣ ಉತ್ಸಾಹಗೇಡಿಯೂ, ಚಂದಗೇಡಿಯೂ, ಆಚಾರಗೇಡಿಯೂ, ಸಿರಿಗೇಡಿಯೂ ಆದ ಶೂಲಿಯನ್ನು ಬಯಸುವ ನಿನ್ನ ವಿಚಾರವು ಎತ್ತ ಹಾಳಾಯಿತು? ಅಂತೂ ಭೀಕರನಾದ ಶೂಲಿಯ ಅಭಿಲಾಷೆಯಿಂದ ನಿನ್ನ ತಪಸ್ಸು!!! ಬಹಳ ಒಳಿತಾಯಿತು. ಹುಚ್ಚಿಯೇ, ಅವನೆತ್ತ ನೀನೆತ್ತ? ನಿನ್ನ ವಿಚಾರವು–ಲತೆಯು ಖಡ್ಗವನ್ನೂ, ಬಾಳೆಯು ಗಿಡವು ಮದಕರಿಯನ್ನೂ, ಹೊಸಹೂಮಾಲೆಯು ಅಗ್ನಿಯನ್ನೂ, ಕುಮುದಗಳು ಸೂರ್ಯನನ್ನೂ, ಹಂಸವು ಸಿಡಿಲನ್ನೂ ಬಯಸುವಂತಾಯಿತು. ಮೋಹನಾಂಗಿಯೇ, ಚಿತ್ತಗೊಟ್ಟು ಕೇಳು- ನೀನು ಮಾಧುರ್ಯವುಳ್ಳವಳು, ಶಿವನು ವಿಷಧರನು; ನೀನು ಬಹಳ ಕೋಮಲೆಯು, ಶಿವನು ಕಠಿಣ ಗುಣಗಳಿಗೆ ಆಧಾರನು; ನೀನು ಅಬಲೆಯು, ಶಿವನು ಉಗ್ರನು; ನೀನು ಬಹಳ ಪುಕ್ಕಿಯು, ಶಿವನು ಸರ್ಪಭೂಷಣನು. ಅಂದಬಳಿಕ ನಿಮ್ಮಿಬ್ಬರಲ್ಲಿ ಪ್ರೇಮದ ಬಳಿಕೆಯಾಗುವ ಬಗೆಹೇಗೆ? ಮುಗ್ಧೇ, ಹುಲಿದೊಗಲನ್ನು ಉಟ್ಟುಕೊಂಡ, ಹಾವಿನ ಬಲವಾದ ಆಭರಣಗಳುಳ್ಳ, ಹಣೆಯಲ್ಲಿ ಕಣ್ಣಿರುವ, ಹಸಿತಲೆಗಳ ಮಾಲೆ ಹಾಕಿರುವ, ಶೂಲವನ್ನು ಹಿಡಿದ ಪಾಪಿಶಿವನಿಗೆ ಹೆದರದೆ ಮನಸ್ಸು ಹೇಗೆ ಮಾಡಿದೆ?

ಎಂದು ವಿಪ್ರನು ನುಡಿದ ಶಿವನಿಂದೆಯನ್ನು ಕೇಳಿ ಪಾರ್ವತಿಯು ಸಿಟ್ಟಿನ ಸಂತಾಪದಿಂದ ವ್ಯಗ್ರಚಿತ್ತಳಾಗಿ—"ತಪವು ಅದು ಹಾಗಿರಲಿ, ಮಾಡುವ ಜಪವೂ ಇರಲಿ, ಶಿವಧ್ಯಾನವೂ ಹೋಗಲಿ ಶಿವನಿಂದೆಯನ್ನು ಕೇಳಿದ ಹೊಸದೊಂದು ಪಾಪವು ಇಂದು ನನಗೆ ಸಂಭವಿಸಿತಲ್ಲ! ಪ್ರಾರಬ್ಧವೇ, ಘೋರತಪಸ್ಸಿನಲ್ಲಿ ಸಿಟ್ಟಾಗುವದು ತಪಸ್ಸಿಗೆ ಹಾನಿಕರವು, ಪತಿನಿಂದೆಯನ್ನು ಸೈರಿಸುವದೂ ಸತಿಯ ಧರ್ಮವಲ್ಲ. ಅಂದಬಳಿಕ ಈಗಿನ ಕಠಿಣ ಪ್ರಸಂಗದಲ್ಲಿ ನಾನು ಅವಲಂಬಿಸುವ ಮಾರ್ಗವಾವುದು? ಪತಿಗಿಂತ ತಪವು ಹೆಚ್ಚಿನದಲ್ಲ" ಎಂದು ಯೋಚಿಸಿ, ಶಿವನಿಂದೆಯನ್ನು ತಡೆಯದೆ ಸಂತಾಪದೊಡನೆ ಪಾರ್ವತಿಯು ವಿಭೂತಿಯಿಂದ ಆ ಬ್ರಾಹ್ಮಣವಟುವನ್ನು ಹೊಡೆಯಲು, ವಟುವೇಷವು ಮಾಯವಾಯಿತು. ಶಿವನಾದರೇನಾಯಿತು? ಜಗತ್ತಿನಲ್ಲಿ ಸಟೆಯು ದಿಟಕ್ಕೆ ನಿಲ್ಲುವದೇ? ಮೋಡದ ಪಡದೆಯು ತೊಲಗಿದಚಂದ್ರನಂತೆ, ಕತ್ತಲೆಹೋದ ಬಾಲಸೂರ್ಯನಹಾಗೆ, ಹೊಗೆಅಡಗಿದ ಅಗ್ನಿಯಂತೆ, ವಟುವೇಷಹೋಗಿ ಶಿವನು ಆಗ ಪ್ರಕಾಶಿಸಹತ್ತಿದನು- ಜಟಾಮಂಡಲವೂ, ಪಂಚಮುಖಗಳೂ, ಚಂದ್ರಕಲೆಯೂ, ದಶಭುಜಗಳೂ, ತ್ರಿನೇತ್ರಗಳೂ, ಭಸ್ಮೋದ್ಧೂಲಿತ ಗಾತ್ರವೂ, ಪುಲಿದೊಗಲುಡಿಗೆಯೂ ಚನ್ನಾಗಿ ಶೋಭಿಸುತ್ತಿರಲು, ಶಂಕರನು ನಿಜಸ್ವರೂಪದಿಂದ ವ್ಯಕ್ತನಾದನು. ವಿವೇಕಶೀಲನೇ, ಹಲವು ಸ್ತ್ರೀಯರು ತಮ್ಮ ಮುಖ್ಯವ್ರತವಾದ ಪತಿಸೇವೆಯನ್ನು ಬಿಟ್ಟು, ಪತಿಯಸಮ್ಮತಿಯಿರದಿದ್ದರೂ ವ್ರತೋಪೋಷಣಗಳನ್ನು ಮಾಡತೊಡಗುವರು. ಅಂಥವರು ಈ ಲೋಕಮಾತೆಯ ಅನುಕರಣಮಾಡತಕ್ಕದ್ದು. ಪಾರ್ವತಿಯು ಪತಿನಿಂದೆಯಿಂದ ಹುಟ್ಟಿದ ಪಾಪವನ್ನು ಸಹನಮಾಡಲಾರದೆ,

ಘೋರತಪಸ್ಸಿನಿಂದ ಪ್ರಾಪ್ತವಾದ ಪುಣ್ಯವು ನಾಶಹೊಂದುವದೆಂದು ತಿಳಿದರೂ ಲೆಕ್ಕಿಸದೆ ಬ್ರಾಹ್ಮಣನನ್ನು ಹೊಡೆದಳು. ಅಂದಬಳಿಕ ಸತಿಗೆ ಪತಿಗಿಂತ ಅಧಿಕವಾದ ವಸ್ತುವು ಯಾವದಿರುವದು?

ಅಗಜಾತೆಯು ಶಿವನು ಪ್ರತ್ಯಕ್ಷವಾದ್ದನ್ನು ಕಂಡು, ಆಶ್ಚರ್ಯಪಡುತ್ತ, ನಾರ ಸೀರೆಯ ಸೆರಗನ್ನು ಸಾವರಿಸಿಕೊಳ್ಳುತ್ತ ಲಜ್ಜೆಯಿಂದ ತಲೆಯನ್ನು ಬಾಗಿಸಿದಳು. ಆಗ ಚಂದ್ರಬಿಂಬವನ್ನು ಹಳಿಯುವ ಆಕೆಯ ಮುಖವನ್ನೂ, ದಿಕ್ಕುಗೆಟ್ಟು ಧೀಂಕಿಡುವ ಕಟಾಕ್ಷಗಳನ್ನೂ, ಉನ್ನತವೂ ಪುಷ್ಟವೂ ಆದ ಸ್ತನಗಳನ್ನೂ ನೋಡಿ, ಶಿವನು ನಿಲ್ಲಲಾರದೆ ಆ ಅಪರ್ಣೆಯ ಪುಣ್ಯಹಸ್ತವನ್ನು ಹಿಡಿದು—"ಗಿರಿಸುತೆಯೇ, ಅತಿ ಹರುಷದಿಂದಲೂ, ಲೀಲೆಯಿಂದಲೂ ರಜತಗಿರಿಗೆ ಹೋಗುವಾ ನಡೆ." ಅನ್ನಲು, ಪಾರ್ವತಿಯು ನುಡಿದಳೇನೆಂದರೆ—"ದೇವನೇ, ನನ್ನ ತಂದೆಯಾದ ಪರ್ವತರಾಜನಲ್ಲಿಗೆ ನೀನು ಆದರದಿಂದ ನನ್ನನ್ನು ಬೇಡುವದಕ್ಕಾಗಿ ಬಂದು, ಊರ್ಜಿತವಾದ ವಿವಾಹವನ್ನು ಅಚ್ಚರಿಯಾಗುವಂತೆ ಮಾಡಿಕೊಳ್ಳಬೇಕೆಂದು ನನ್ನ ಪ್ರಾರ್ಥನೆಯು. ನನ್ನ ಈ ವಿಜ್ಞಾಪನೆಯನ್ನು ಕರುಣಾಳುವಾದ ನೀನು ನೆರವೇರಿಸಬೇಕು" ಎಂದಳು.

ವಿವಾಹ ಮಹೋತ್ಸವ:—ಈ ಪ್ರಕಾರ ಪಾರ್ವತಿಯು ನುಡಿಯಲು, ಒಡಂಬಟ್ಟು ಸುಖದಿಂದಿರುವಷ್ಟರಲ್ಲಿ ಬಾಡಿದ ಮೋರೆಯುಳ್ಳ ರತಿಯು ಚಿಂತೆಯಿಂದ ಮುಂದೆ ಬಂದು ನಿಂತು ಶಿವನಿಗೆ ನಮಸ್ಕರಿಸಿದಳು. ಆಗ ಪಾರ್ವತಿಯು ಶಿವನನ್ನು ಕುರಿತು—"ದೇವನೇ, ಈ ಲಲನಾಮಣಿಯ ಪತಿಯಾದ ಕಾಮನನ್ನು ನಿಮ್ಮಿಂದ ಪಡೆದು ಕೊಡುವೆನೆಂದು ವಚನಕೊಟ್ಟಿರುವೆನು." ಅನ್ನಲು, ಶಂಕರನು ಗಿರಿಜೆಯ ಮಧುರಾಸ್ಯವನ್ನು ನೋಡಿ ನಗುತ್ತ—"ನೆನಿಸಿದಾಗ ಕಾಮನು ಅನಂಗನಾಗಿ ರತಿಗೆ ಸುಖಸಂಪತ್ತನ್ನು ಕೊಡುವನು." ಎಂದು ರತಿಗೆ ವರವನ್ನಿತ್ತು, ಗಿರಿಜೆಗೆ ಗಿರಿರಾಜನಲ್ಲಿಗೆ ಹೋಗ ಹೇಳಿ, ತಾನು ಕೈಲಾಸಕ್ಕೆ ತೆರಳಿದನು. ವಿವೇಕಶೀಲನೇ, ಸ್ತ್ರೀಯರು ನಿಂದ್ಯರೆಂದು ತಿಳಿದು, ಅವರ ಮಾತು ಯೋಗ್ಯವಿದ್ದರೂ ನಡೆಯಗೊಡಲಿಕ್ಕಿಲ್ಲೆಂದು ಹಟಹಿಡಿಯುವ ಹಟಮಾರಿ ಗಂಡಸರು ಜಗತ್ಕಾರಣನಾದ ವಿರೂಪಾಕ್ಷನ ಅನುಕರಣಮಾಡತಕ್ಕದ್ದು-ತನುಮನೋಧನಗಳನ್ನರ್ಪಿಸಿ ತನ್ನನ್ನೇ ನಂಬಿ ಉಗ್ರತಪವನ್ನಾಚರಿಸಿದ ಅಂಬಿಕೆಯ ಪ್ರತಿಜ್ಞೆಯನ್ನು ಪೂರ್ಣಮಾಡಲು, ಈ ಮಹಾಮಹಿಮನು ಆಕೆಯಿದ್ದೆಡೆಗೆ ಹೋದದ್ದಲ್ಲದೆ, ಮುಂದೆ ಆಕೆಗೆ ತನ್ನ ಅರ್ಧಶರೀರವನ್ನು ಕೊಟ್ಟು ಅರ್ಧನಾರೀಶನೆಂಬ ಬಿರುದು ಧರಿಸಿದನು. ಕಾರಣ, ಸುಶೀಲೆಯೂ, ಪತಿಭಕ್ತಿ-ಪರಾಯಣಳೂ ಆದ ಹೆಂಡತಿಯನ್ನು, ಆಕೆಯ ಪತಿಯು ಸನ್ಮಾನಿಸದಿರುವದು ಅನ್ಯಾಯವಲ್ಲವೇ?

ಇತ್ತ ಗಿರಿಸುತೆಯು ಜಯಾವಿಜಯೆಯರನ್ನು ಕೂಡಿಕೊಂಡು ಪುಷ್ಪಕವನ್ನೇರಿ ಶಿವಧ್ಯಾನಾಸಕ್ತಳಾಗಿ, ಹೇಮಕೂಟಪರ್ವತವನ್ನು ಬಿಟ್ಟು, ಓಷಧಿಪ್ರಸ್ಥಪುರಕ್ಕೆ ಸಾಗಿದಳು. ಪುತ್ರಿಯು ವರವನ್ನು ಪಡೆದು ತಪಸ್ಸುಬಿಟ್ಟು ಬರುವಳೆಂಬ ಸುದ್ದಿಯನ್ನು ಕರ್ಣಪರಂಪರೆಯಿಂದ ಗಿರಿರಾಜನು ಕೇಳಿ, ಸಂತೋಷವನ್ನು ಹೊಂದಿ, ಪುಳಕಗಳೇಳು

ತ್ತಿರಲು, ಸಕಲಪರಿವಾರವನ್ನೂ, ಚತುರಂಗಬಲವನ್ನೂ ಕೂಡಿಕೊಂಡು ಆಕೆಯನ್ನು ಎದುರುಗೊಳ್ಳುವದಕ್ಕಾಗಿ ಹೊರಟನು. ಆಗ ಗೀತ ವಾದ್ಯನೃತ್ಯಗಳಮಂಜುಳಧ್ವನಿಯು ದಿಕ್ಕು ದಿಕ್ಕಿಗೆ ಹಬ್ಬಿತು. ತಪಃಕಾಂತಿಯಿಂದಲೂ, ನಸುಗೆಂಪು ಜಡೆಯಿಂದಲೂ, ವಲ್ಕಲ ವಸನದಿಂದಲೂ ಒಪ್ಪುವ ಗಿರಿಜಾತೆಯನ್ನು ಗಿರಿಪತಿಯು ಎದುರ್ಗೊಂಡು ಅವಳೊಡನೆ ರಾಜಗೃಹಕ್ಕೆ ಹೋಗಿ ಪ್ರಕಾಶಮಾನವಾದ ಸಿಂಹಾಸನದಮೇಲೆ ಪುತ್ರಿಯೊಡನೆ ಅತಿಸ್ನೇಹದಿಂದ ಕುಳಿತುಕೊಂಡನು. ಅಷ್ಟರಲ್ಲಿ ಮೇನಾದೇವಿಯು ಅಲ್ಲಿಗೆ ಬಂದು ಬಹು ಕಕ್ಕುಲತೆಯಿಂದ ಮಗಳ ಮೈಮೇಲೆ ಕಯ್ಯಾಡಿಸಿ—"ತಾಯೇ, ತಪಸ್ಸಿನ ಪ್ರತಿಬಂಧದಿಂದ ನಿನ್ನ ಶರೀರವು ಒಣಗಿತು, ಕಣ್ಣುಗಳು ಕಾಂತಿಗೆಟ್ಟವು, ಮುಖಕಮಲವು ಬಾಡಿತು, ಕುಚದ್ವಯುವು ಕೊರಗಿತು, ಹೆಳಲು ಜಡೆಗಟ್ಟಿತು. ಇದು ಬಹಳ ಅನ್ಯಾಯುವು. ನೀನೇಕೆ ಅರಣ್ಯಕ್ಕೆ ಹೋದೆ? ನಿನಗೆ ಅರಣ್ಯವಾಸವು ಎಂತು ಸಹನವಾಯಿತು!

ಈ ಪ್ರಕಾರ ಮೇನಾದೇವಿಯು ಪಾರ್ವತಿಯನ್ನು ನೋಡಿ, ಬೆದರಿ–ಬಾಡಿ–ಬಸವಳಿದು ನುಡಿಯುತ್ತಿರಲು, ಸುಂದರಿಯರು ಗಿರಿರಾಜನ ಅಪ್ಪಣೆಯಿಂದ ಪಾರ್ವತಿಯ ಜಡೆಗಳನ್ನು ಬಿಡಿಸತೊಡಗಿದರು. ಇತ್ತ ಕೈಲಾಸದಲ್ಲಿ ಶಿವನು ವಿವಾಹಾತುರನಾಗಿ, ಪುಣ್ಯಶ್ಲೋಕರಾದ ಸಪ್ತಋಷಿಗಳನ್ನು ನೆನಿಸಿದನು. ಆಗ ಕಶ್ಯಪಾದಿ ಸಪ್ತಋಷಿಗಳು ಅರುಂಧತೀ ಸಹಿತರಾಗಿ ಶಿವನೆಡೆಗೆಬಂದು ನಮಸ್ಕರಿಸಿ, ಕೃತಕೃತ್ಯತೆಯನ್ನು ತೋರಿಸಿ ಕರೆಸಿದ ಕಾರಣವನ್ನು ಕೇಳಿದರು. ಶಿವನು ಋಷಿಗಳನ್ನು ಕುರಿತು—"ನೀವು ಪರ್ವತರಾಜನಲ್ಲಿಗೆ ಹೋಗಿ ಪಾರ್ವತಿಯನ್ನು ನನಗಾಗಿ ಆದರದಿಂದ ಬೇಡಬೇಕೆಂ"ದು ಹೇಳಿದನು. ಆಗ ಋಷಿಗಳು ಮಹಾಪ್ರಸಾದವೆಂದು ಅಲ್ಲಿಂದ ಹೊರಟು ಓಷಧಿಪ್ರಸ್ಥಪುರಕ್ಕೆ ಬರಲು, ಗಿರಿರಾಜನು ಆದರದಿಂದ ಅವರನ್ನು ಎದುರ್ಗೊಂಡು ಕರೆತಂದು ಭದ್ರಾಸನದಲ್ಲಿ ಕುಳ್ಳಿರಿಸಿ, ಭಕ್ತಿಯಿಂದ ಪೂಜಿಸಿ ಕೃತಕೃತ್ಯನಾಗಿ—"ಮುನಿಶ್ರೇಷ್ಠರೇ, ಸುರಲೋಕದಲ್ಲಿ ಸುಖದಿಂದಿರುತ್ತಿರುವ ನೀವು ಇಂದು ನನ್ನೆಡೆಗೆ ಬಂದದ್ದರಿಂದ ನನ್ನ ಭಾಗ್ಯೋದಯುವಾಯಿತು." ಎಂದನು. ಆಗ ಋಷಿಗಳು ಆತನನ್ನು ಕುರಿತು ಆದರದಿಂದ—"ಗಿರಿರಾಜನೇ, ಶಶಿಧರನು ಗಿರಿಜೆಯನ್ನು ಬೇಡುವದಕ್ಕಾಗಿ ನಮ್ಮನ್ನು ನಿನ್ನೆಡೆಗೆ ಕಳುಹಿದ್ದರಿಂದ ನಾವು ಬಂದೆವು. ನಿತ್ಯನೂ, ನಿರಾಮಯನೂ, ಅಜಾತನೂ ಆದ ಶಂಕರನಿಗೆ ಭುವನೈಕಭಾಗ್ಯವತಿಯಾದ ಪಾರ್ವತಿಯನ್ನು ಕೊಡೆಂದು ಬೇಡಲು, ಗಿರಿರಾಜನು ಕೇಳಿ ಸಂತೋಷಬಟ್ಟು ನುಡಿದ ನೇನಂದರೆ—"ಮಹಾತ್ಮರೇ, ಮೇಘದ ಬರುವಿಕೆಯು ಮಯೂರನಿಗೆ ಅಸಹ್ಯವೇ? ಚಂದ್ರೋದಯುವು ಚಕೋರಿಗೆ ಉಪದ್ರವವೇ? ಶಿವಕರುಣವು ನನಗಿರುವವರೆಗೆ ವಿಚಾರವೇ? ನಿಮ್ಮ ನುಡಿಗಳಿಂದ ನಾನು ಕೃತಾರ್ಥನಾದೆನು. ನನ್ನ ಭಾಗ್ಯದ ಬೆಳೆಯು ಕೈಸೇರಿತು, ಪುಣ್ಯಲತೆಯು ಕುಡಿಬಿಟ್ಟಿತು, ಕುಲವೃಕ್ಷವು ಫಲಿಸಿತು. ಪೂಜ್ಯರೇ, ರತ್ನಕ್ಕೆ ಕಾಂತಿಯು ಎರವೇ? ಕುಸುಮಕ್ಕೆ ಪರಿಮಳವು ಪರೀಕ್ಷೆಯೇ? ಅಮೃತಕ್ಕೆ ಸ್ವಾದವು ಸಂಕಲ್ಪವೇ? ಅಲ್ಲವು. ಅದರಂತೆ ಗಿರಿಜೆಯು ಶಿವನನ್ನು ಹೊಂದು

ವದು ಸ್ವಾಭಾವಿಕವಾಗಿರಲು, ಆ ದಯಾಘನನು ನನ್ನನ್ನು ಬೇಡುವದಕ್ಕೆ ಕಳುಹುವರೇ? ಸುರುಚಿಯಿಂದಲೂ, ಸಾಂಗೀಕಾರದಿಂದಲೂ, ಪ್ರೇಮದಿಂದಲೂ, ನಿಷ್ಠೆಯಿಂದಲೂ ನೆಟ್ಟಗೆ ಕೊಟ್ಟೆನು, ನಿಶ್ಚಯವಾಗಿ ಕೊಟ್ಟೆನು. ಇದಕ್ಕೆ ಎರಡನೆಯ ಮಾತಿಲ್ಲ.

ಈ ಪ್ರಕಾರ ಗಿರಿರಾಜನು ಅತ್ಯಾನಂದದಿಂದ ಸಪ್ತಋಷಿಗಳಿಗೆ ವಚನಕೊಟ್ಟು ಅವರನ್ನು ಕಳುಹಿ, ದೇವಲೋಕದಿಂದ ವಿಶ್ವಕರ್ಮನನ್ನು ಕರಿಸಲು, ಆತನು ಶೋಭಾಯಮಾನವಾದ ವಿವಾಹಮಂಟಪವನ್ನು ರಚಿಸಿದನು. ಸುವಾಸಿನಿಯರು ಗಿರಿಜೆಗೆ ಮಂಗಲಸ್ನಾನಮಾಡಿಸಿ, ನವ್ಯದುಕೂಲವನ್ನುಡಿಸಿ, ನವಮಣಿ ಕನಕಾಭರಣಗಳನ್ನು ಇಡಿಸಿದರು. ಸ್ವಭಾವಸುಂದರಿಯಾದ ಗಿರಿಜಾಮಾತೆಯು ಸೌಂದರ್ಯಕ್ಕೆ ದೃಷ್ಟಿತಾಕಬಾರದೆಂದು ತೆಗೆದ ನಿವಾಳಿಗಳಂತೆ ಆಭರಣಗಳು ತೋರಿದವು. ಇತ್ತ ಕೈಲಾಸದಲ್ಲಿ ನಂದೀಶಾದಿ ಗಣನಾಯಕರು ಶಿವನನ್ನು ಅಲಂಕರಿಸತೊಡಗಿ, ಆತನ ಅಸುರರುಂಡಮಾಲೆಯನ್ನು ತೆಗೆದು, ರತ್ನಕಿರೀಟವನ್ನು ಹಾಕಿದರು. ಅಗ್ನಿನೇತ್ರವನ್ನು ವಿಭೂತಿಯಿಂದ ಬಾಸಣಿಸಿ, ಬಾಸಿಂಗವನ್ನು ಕಟ್ಟಿದರು. ಸರ್ಪಕುಂಡಲಗಳನ್ನು ತೆಗೆದು ರತ್ನಕುಂಡಲಗಳನ್ನು ಇಟ್ಟರು. ಸರ್ಪೋಪವೀತವನ್ನು ತೆಗೆದು ಯಜ್ಞೋಪವೀತವನ್ನು ಹಾಕಿದರು. ಬ್ರಹ್ಮಕಪಾಲವನ್ನು ತೆಗೆದು ಪುಣ್ಯಪವಿತ್ರವನ್ನು ಇಟ್ಟರು. ಗಜಚರ್ಮವನ್ನು ತೆಗೆಸಿ ನಿರ್ಮಲೋತ್ತರೀಯವನ್ನು ಹೊದಿಸಿದರು. ವ್ಯಾಘ್ರಚರ್ಮವನ್ನು ಬಿಡಿಸಿ ದಿವ್ಯದುಕೂಲವನ್ನು ಉಡಿಸಿದರು. ಇಂತು ಮುಕ್ತಿಗೆ ಶಿವಯೋಗವನ್ನೂ, ಶಿವಯೋಗಕ್ಕೆ ವೈರಾಗ್ಯವನ್ನೂ, ವೈರಾಗ್ಯಕ್ಕೆ ಶಿವಜ್ಞಾನವನ್ನೂ, ಶಿವಜ್ಞಾನಕ್ಕೆ ಭಕ್ತಿಯನ್ನೂ, ಭಕ್ತಿಗೆ ಪುಣ್ಯವನ್ನೂ, ಪುಣ್ಯಕ್ಕೆ ಸತ್ಕ್ರಿಯೆಗಳನ್ನೂ, ಸತ್ಕ್ರಿಯೆಗಳಿಗೆ ಪಾವನ ಜನ್ಮವನ್ನೂ ಅಲಂಕರಿಸುವಂತೆ ಪರಬ್ರಹ್ಮ-ಬ್ರಹ್ಮಚರ್ಯಾಲಂಕೃತನೂ, ಬ್ರಾಹ್ಮಣೋತ್ತಮನೂ ಆದ ಶಿವನನ್ನು ನಂದಿಕೇಶಾದಿ ಗಣಗಳು ಅಲಂಕರಿಸಿದರು.

ಇಂತು ಅಲಂಕೃತನಾದ ಶಿವನು ವೃಷಭಾರೂಢನಾಗಿ, ಹರಿಬ್ರಹ್ಮೇಂದ್ರಾದಿ ದೇವತೆಗಳು ತಮ್ಮತಮ್ಮ ವಾಹನಗಳನ್ನೇರಿ ಸುತ್ತುಗಟ್ಟಲು, ಸುರ-ಗರುಡ-ಗಂಧರ್ವ-ಯಕ್ಷ-ಸಿದ್ಧ-ಖೇಚರರ ಬಲಗಳು ಮೇರೆದಪ್ಪಲು, ದೂರ್ವಾಸ-ವಸಿಷ್ಠ-ಯಾಜ್ಞವಲ್ಕ್ಯಾದಿ ಋಷಿಮಂಡಲವು ಮೆರೆಯಲು ವಿಭವದೊಡನೆ ಸಂಭ್ರಮದಿಂದ ಓಷಧಿಪ್ರಸ್ಥಪುರಕ್ಕೆ ನಡೆತಂದನು. ಆಗ ಎದುರುಗೊಳ್ಳುವ ಸುವಾಸಿನಿಯರು ನಿವಾಳಿಯನ್ನು ತೆಗೆಯಲು, ಶಂಕರನು ನಂದಿಯಿಂದಿಳಿದು, ವಿವಾಹಮಂಟಪವನ್ನು ಹೊಗುವಾಗ್ಗೆ ಹರುಷದಿಂದ ಮೆಯ್ಯುಕ್ಕಿ ನಿಂತಿದ್ದ ಮಾವನಾದ ಗಿರಿರಾಜನನ್ನೂ, ಅತ್ತೆಯಾದ ಮೇನಾದೇವಿಯನ್ನೂ ನೋಡಿ ಕರುಣಿಸುತ್ತ, ಸಿಂಹಾಸನವನ್ನೇರಿ, ಸಮಯೋಚಿತ ರಸಾಮೃತವನ್ನುಂಡು, ಮಹಾ ವಿಭವದಿಂದ ಮಧುಪರ್ಕವನ್ನು ಕೈಕೊಂಡನು. ಆಗ ಬ್ರಹ್ಮನು—"ದೇವನೇ, ಮುಹೂರ್ತವು ಸಮೀಪಿಸಿತೆಂ"ದು ಹೇಳಲು, ಶಂಕರನು ವಿವಾಹಪೀಠವನ್ನು ಅಲಂಕರಿಸಿದನು. ಸುಮುಹೂರ್ತದಲ್ಲಿ ಪಾರ್ವತೀ-ಪರಮೇಶ್ವರರ ವಿವಾಹಕಾರ್ಯವು ಯಥಾಸಾಂಗವಾಯಿತು. ಇಂತು ವಿವಾಹ ವಿಭ್ರಮವನ್ನು ಕೈಕೊಂಡು ಶಶಿಶೇಖರನು ಗಿರಿ

ಜೆಯ ಕರಕಮಲವನ್ನು ಹಿಡಿದು ಹೋಮಸ್ಥಳಕ್ಕೆ ಬಂದು ಅಲ್ಲಿ ಹಾಕಿದ ಮಣೆಯಮೇಲೆ ಕುಳಿತನು- ಆಗ ಮಂತ್ರ ತಂತ್ರ ಸಿದ್ಧನಾದ ಬ್ರಹ್ಮನು ಶಿವಾಜ್ಞೆಯಿಂದ ಸ್ಥಂಡಿಲವನ್ನಲಂಕರಿಸಿ , ಮೆಲ್ಲಮೆಲ್ಲನೆ ಉಲ್ಲೇಖನವನ್ನು ಮಾಡಿ ಅಗ್ನಿಪ್ರತಿಷ್ಠೆಗೆಯುದ್ಧ , ಬ್ರಹ್ಮಋಷಿ ದೇವಋಷಿ ವಿಪ್ರೋತ್ತಮರ ಅನುಮತಿಯಿಂದ ಪ್ರಾಣಾಯಾಮ, ಮಂತ್ರ, ಸಮಿತ್ಪರಿಸ್ತರಣ, ಪಾತ್ರಾಸಾಧನ , ಆಜ್ಯಸಂಸ್ಕಾರ, ಸ್ರುಕ್ ಸ್ರುವಾರ್ಚನ, ದುರ್ವಾವಳಯ ಹಸ್ತಬಂಧನ ಮೊದಲಾದ ಸತ್ಕ್ರಿಯೆಗಳಿಂದ ಹೋಮಮಾಡತೊಡಗಿ , ಲಾಜಾಹೋಮದ ಅನಂತರ ಪೂರ್ಣಾಹುತಿಯನ್ನು ಕೊಟ್ಟು, ಹೋಮಸಮಾಪ್ತಿಯನ್ನು ಮಾಡಿದನು. ತರುವಾಯ ಉಮಾಧವನು ಹರಿ ಬ್ರಹ್ಮೇಂದ್ರಾದಿ ದೇವತೆಗಳ ಪಙ್ತ್ತಿಯೊಡನೆ ಗಿರಿಜೆಯೊಡಗೂಡಿ ಅಮೃತಾನ್ನವನ್ನುಂಡು, ತಾಂಬೂಲವನ್ನು ಕೈಕೊಂಡನು. ಈ ಪ್ರಕಾರ ಗಿರಿಜಾ ರಮಣನು ನಾಲ್ಕುದಿವಸಗಳನ್ನು ಕಳೆದು, ಐದನೆಯ ದಿನ ಓಕಳಿಯಾಡಿ, ಅತ್ತೆ-ಮಾವಂದಿರನ್ನು ಕರುಣಿಸಿ, ಅವರೊಡನೆ ಕೈಲಾಸದ ಅರಮನೆಯನ್ನು ಹೊಕ್ಕನು. ಗಿರಿರಾಜನೂ, ಮೇನಾದೇವಿಯೂ ಮಗಳಿಗೆ ಹಿತೋಪದೇಶಮಾಡಿ, ಆಕೆಯನ್ನು ಶಿವನಿಗೆ ಒಪ್ಪಿಸಿ, ಓಷಧಿಪ್ರಸ್ಥಪುರಕ್ಕೆ ಬಂದರು.

---

## ೨ನೇ ಸುಧಾತರಂಗ !

## ಅಸುರವಧಲೀಲೆ.

### ತಾರಕನ ಸಂಹಾರ !

( ಮಹಾಭಾರತ. )

ಈ ಮೇರೆಗೆ ಸಿದ್ಧಮುನಿಗಳು ಹೇಳಿದ ಗಿರಿಜಾ ಕಲ್ಯಾಣವನ್ನು ಕೇಳಿ ವಿವೇಕಶೀಲಾದಿ ಶಿಷ್ಯರು ಪರಮಾನಂದಪಟ್ಟು ತಮ್ಮ ಗುರುವನ್ನು ಕುರಿತು—ಸದ್ಗುರೊ, ದಯಾಘನನಾದ ಮಹೇಶ್ವರನ ಕಲ್ಯಾಣಕಾರಕ ವಿವಾಹವರ್ಣನವನ್ನು ಕೇಳಿ ನಾವು ಧನ್ಯರಾದೆವು; ಆದರೆ ಆ ಸದಾಶಿವನು ಷಣ್ಮುಖನನ್ನು ಪಡೆದು ತಾರಕಾಸುರನನ್ನು ಹ್ಯಾಗೆ ಸಂಹರಿಸಿದನು? ಅದರಂತೆಯೇ ತಾರಕಾಸುರನ ಮಕ್ಕಳು ಬ್ರಹ್ಮನಿಂದ ವರವನ್ನು ಪಡೆದು ತ್ರಿಪುರಗಳನ್ನು ರಚಿಸಿ, ತ್ರೈಲೋಕ್ಯಕ್ಕೆ ಅಜಿಂಕ್ಯರಾಗಿರಲು, ಅವರನ್ನು ಭಗವಾನ್ ಶಂಕರನು ಸಂಹರಿಸಿ ತ್ರಿಪುರಾರಿಯೆಂಬ ಹೆಸರನ್ನು ಹ್ಯಾಗೆ ಪಡೆದನು? ಭಗವಾನ್ ಶಂಕರನ ಈ ಲೋಕಕಲ್ಯಾಣಕಾರಕ ಚರಿತ್ರಗಳನ್ನು ಹೇಳಿ ನಮ್ಮನ್ನು ಕೃತಾರ್ಥರಾಗಮಾಡು. ತ್ರಿಮೂರ್ತಿಗಳಲ್ಲಿ ಒಬ್ಬರ ವರದಿಂದ ಉನ್ಮತ್ತರಾದ ದೈತ್ಯರನ್ನು ಇನ್ನೊಬ್ಬರು ಸಂಹರಿಸುವ ಕಾರಣವೇನು? ಸದ್ಗುರೋ, ಹೀಗೆ ಮಾಡುವದು ನಿರರ್ಥಕವಾದ ಆಯಾಸವ

ಲ್ಲವೆ? ಅನ್ನಲು, ಸಿದ್ಧಮುನೀಶ್ವರನು—ವಿವೇಕಶೀಲನೇ, ನೀನು ಕೇಳುವ ಪ್ರಶ್ನವು ಯು ಕ್ತಾಯುಕ್ತವಾದದ್ದೇನೋ ಸರಿ; ಆದರೆ ಕರ್ತುಮಕರ್ತುಮನ್ಯಥಾಕರ್ತುಂ ಸಮರ್ಥ ನಾದ ಭಗವಾನ್ ಸದಾಶಿವನ ಲೀಲೆಗೆ ಹೀಗೆಂದು ಯಾರು ಹೆಸರಿಡಬೇಕು! ಹುಡುಗರ ಆಟ ದಲ್ಲಿ ಮನೆಕಟ್ಟುವವರೂ ಹುಡುಗರೇ, ಅದನ್ನು ಸಂರಕ್ಷಿಸುವವರೂ ಹುಡುಗರೇ, ಕಡೆಗೆ ಅದನ್ನು ಕೆಡಿಸಿ ಆಟಮುಗಿಸುವವರೂ ಹುಡುಗರೇ. ಅದರಂತೆಯೇ ಲೀಲೆಮಾಡಲಿಕ್ಕೂ, ಬಿಡಲಿಕ್ಕೂ ಸ್ವತಂತ್ರನಾದ ಆನಂದಘನ ಸದಾಶಿವನು ಈ ಜಗದ್ರೂಪಲೀಲೆಯು ವಿಸ್ತಾರ ಕ್ಕಾಗಿ ತನ್ನ ಪ್ರಕೃತಿಯು ಸತ್ವ-ರಜಸ್ತಮೋಗುಣಗಳಿಗೆ ಆಶ್ರಯನಾಗಿ ಬ್ರಹ್ಮ-ವಿಷ್ಣು - ಮಹೇಶ್ವರ ಎಂಬ ಮೂರು ರೂಪಗಳನ್ನು ಧರಿಸುವನಲ್ಲದೆ, ತಾನೇ ನಿರ್ಮಿಸಿದ ಜಗ ತ್ತಿನ ಚರಾಚರ ವಸ್ತುಗಳಲ್ಲಿ ತಾನೇ ಪ್ರವೇಶಮಾಡಿ, ತಪಸ್ಸುಮಾಡುವವನೂ, ವರಕೊಡು ವವನೂ, ವರಸುಳ್ಳುಮಾಡುವವನೂ, ಅಳುವವನೂ, ನಗುವವನೂ, ಹೊಡೆಯುವವನೂ, ಹೊಡೆಸಿಕೊಳ್ಳುವವನೂ, ಶ್ರೇಷ್ಠನೂ, ಕನಿಷ್ಠನೂ ತಾನೇ ಆಗಿ ತನ್ನ ಲೀಲೆಯನ್ನು ವಿಸ್ತರಿಸುತ್ತಿರುವನು; ಆದ್ದರಿಂದಲೇ ಭಗವಂತನ ಈ ಲೀಲೆಯು ಸ್ವರೂಪವನ್ನು ಅರಿತು ಕೊಂಡ ಜ್ಞಾನಿಗಳಾದ ಭಗವದ್ಭಕ್ತರು ಮೋಕ್ಷವನ್ನೂ ಅಪೇಕ್ಷಿಸದೆ ಯಾವಾಗಲೂ ಭಗ ವಲ್ಲೀಲೆಗಳ ಶ್ರವಣಮಾಡುತ್ತ ಆನಂದಪರವಶರಾಗುತ್ತಿರುವರು! ಆದ್ದರಿಂದ ವಿವೇಕಶೀಲಾ ಈ ಜಗತ್ತಿನಲ್ಲಿ ಭಗವಾನ್ ಸದಾಶಿವನ ಹೊರತು ಏನೂ ಇಲ್ಲೆಂಬದನ್ನೂ, ಆತನ ಇಚ್ಛೆ ಯಿಲ್ಲದೆ ಕಡ್ಡಿಯೂ ಕದಲುವದಿಲ್ಲೆಂಬದನ್ನೂ ಲಕ್ಷದಲ್ಲಿಟ್ಟು, ನಾನು ಇನ್ನು ಹೇಳುವ ಚರಿತ್ರಗಳನ್ನು ವಿವೇಕದಿಂದ ಶ್ರವಣಮಾಡು.

ತಾರಕನ ಉತ್ಪತ್ತಿ:—ವಿವೇಕಶೀಲನೇ, ಈ ಮೇರೆಗೆ ಪಾರ್ವತೀ-ಪರಮೇಶ್ವ ರರ ವಿವಾಹ ವಾಗಲು, ಅವರ ಸಮಾಗಮಯೋಗವು ಪ್ರಾಪ್ತವಾಯಿತು. ಆಗ ಯಾವತ್ತು ದೇವತೆಗಳು ಭಯಭೀತರಾಗಿ ಭಗವಾನ್ ಶಂಕರನ ಸನ್ನಿಧಿಗೆ ಬಂದರು- ಮಹಾದೇವನಾದ ಶಂಕರನೂ, ವರಪ್ರದಾನಮಾಡುವ ಭಗವತೀ ಉಮೆಯೂ ಒತ್ತಟ್ಟಿಗೆ ಕುಳಿತಿರುವಾಗ ದೇವತೆಗಳು ಅವರನ್ನು ನಮಸ್ಕರಿಸಿ ಪ್ರಸನ್ನೀಕರಿಸಿಕೊಂಡರು. ಬಳಿಕ ದೇವತೆಗಳು ಶಂಕ ರನನ್ನು ಕುರಿತು—ಭಗವನ್, ನಿನ್ನ, ಹಾಗು ಭಗವತೀದೇವಿಯು ಸಮಾಗಮವು ಒದಗಿದರೆ ಮಹಾ ಅನರ್ಥವುಂಟಾದೀತು. ಎಲೈ ಅನಘನೇ, ನೀವಿಬ್ಬರೂ ಮಹಾತಪಸ್ವಿಗಳೂ, ತೇಜ ಸ್ವಿಗಳೂ ಇದ್ದು, ನಿಮ್ಮಿಬ್ಬರಲ್ಲಿ ಅಮೋಘವೀರ್ಯವು ವಾಸಿಸುತ್ತಿರುವದು; ಆದ್ದರಿಂದ ನಿಮ್ಮ ಸಮಾಗಮದಿಂದ ಸಂತತಿಯಾದರೆ ಆ ಬಲಿಷ್ಠಸಂತತಿಯಿಂದ ಜಗತ್ತಿನ ನಾಶವಾಗದೆ ಇರದು, ಜಗತ್ತಿನಲ್ಲಿ ಏನೂ ಉಳಿಯಲಿಕ್ಕಿಲ್ಲ ; ಆದ್ದರಿಂದ ಎಲೈ ವಿಶಾಲನೇತ್ರನೇ, ನಮ್ರ ರಾಗಿರುವ ನಮ್ಮನ್ನು ಅನುಗ್ರಹಿಸಿ ತ್ರೈಲೋಕ್ಯದ ಹಿತಕ್ಕಾಗಿ ನೀನು , ಅಪತ್ಯೋತ್ಪಾ ದಕವಾದ ನಿನ್ನ ದಿವ್ಯವೀರ್ಯವನ್ನು ಬಿಗಿಹಿಡಿ. ನೀನು ಹೀಗೆ ಮಾಡದಿದ್ದರೆ ತ್ರಿಭುವನ ದೊಳಗಿನ ವೀರ್ಯವೆಲ್ಲ ನಿಮ್ಮಿಬ್ಬರಲ್ಲಿರುವದರಿಂದ ನೀವು ಯಾವತ್ತು ಜಗತ್ತಿಗೆ ತಾಪವ ನ್ನುಂಟುಮಾಡಿಬಿಟ್ಟೀರಿ! ವಿಭುವೇ, ಸ್ವರ್ಗ, ಪೃಥ್ವಿ, ಅಂತರಿಕ್ಷ ಇವೆಲ್ಲವೂ ನಿನ್ನ ತೇಜವನ್ನು ಧರಿಸಲು ಅಸಮರ್ಥವಾಗಿರುವವು. ನಿನ್ನ ತೇಜಸ್ಸಿನ ಪ್ರಭಾವದಿಂದ ಜಗ

ತ್ತೆಲ್ಲ ಸುಟ್ಟು ಭಸ್ಮವಾದೀತು; ಆದ್ದರಿಂದ ದೇವಾಧಿದೇವಾ, ನೀನು ನಮ್ಮಮೇಲೆ ಕೃಪೆಮಾಡಿ ದೇವಿಯಲ್ಲಿ ಪುತ್ರಸಂಭವವಾಗದಂತೆ ನಿನ್ನ ವೀರ್ಯವನ್ನು ಬಿಗಿಹಿಡಿಯಬೇಕು, ಎಂದು ಪ್ರಾರ್ಥಿಸಿದರು. ಆಗ ಕರುಣಾಳುವಾದ ಶಂಕರನು "ಹಾಗೇ ಆಗಲೆಂದು" ಹೇಳಿ ತನ್ನ ರೇತಸ್ಸನ್ನು ಊರ್ಧ್ವಭಾಗಕ್ಕೆ ಒಯ್ದನು; ಆದ್ದರಿಂದ ಆತನಿಗೆ ಅಂದಿನಿಂದ "ಊರ್ಧ್ವ ರೇತಾ" ಎಂಬ ಹೆಸರು ಪ್ರಾಪ್ತವಾಯಿತು; ಆದರೆ ಭಗವಾನ್ ಶಂಕರನು ಈ ಮೇರೆಗೆ ನುಡಿದದ್ದನ್ನು ಕೇಳಿ ಭಗವತೀ ಪಾರ್ವತಿಯು, ತನ್ನ ಸಂತತಿಯು ಉಚ್ಛೇದವಾಯಿತೆಂದು ತಿಳಿದು ಸ್ತ್ರೀಸ್ವಭಾವಕ್ಕನುಸರಿಸಿ ದೇವತೆಗಳಮೇಲೆ ಸಿಟ್ಟಾಗಿ ಅವರನ್ನು ಕುರಿತು— ಎಲೈ ದೇವತೆಗಳಿರಾ, ನನ್ನ ಭರ್ತೃವು ಅಪತ್ಯದ ಇಚ್ಛೆಯಿಂದ ನನ್ನ ಸಂಭೋಗಕ್ಕಾಗಿ ಪ್ರವರ್ತನಾಗಿರುವಾಗ ಆತನನ್ನು ನಿವಾರಿಸಿದ್ದರಿಂದ ನಿಮ್ಮ ಅಪರಾಧಕ್ಕಾಗಿ ನೀವೆಲ್ಲರೂ ಅಪತ್ಯಹೀನರಾಗಿರಿ! ನನ್ನ ಪ್ರಜೋಚ್ಛೇದವನ್ನು ನೀವು ಮಾಡಿರುವದರಿಂದ ನಿಮ್ಮ ಪ್ರಜೋಚ್ಛೇದವೂ ಆಗಲಿ ಎಂದು ಶಪಿಸಿದಳು! ಭಗವತಿಯು ಹೀಗೆ ಶಾಪಕೊಡುವಾಗ ಅಗ್ನಿ ಒಬ್ಬನು ಅಲ್ಲಿ ಇಲ್ಲದ್ದರಿಂದ, ಆತನ ಹೊರತು ಉಳಿದ ದೇವತೆಗಳೆಲ್ಲ ಪಾರ್ವತಿಯ ಶಾಪದಿಂದ ಅಪತ್ಯಹೀನರಾದರು. ವಿವೇಕಶೀಲಾ, ಹೀಗೆ ಭಗವಾನ್ ಶಂಕರನು ದೇವತೆಗಳ ಪ್ರಾರ್ಥನೆಯಂತೆ ತನ್ನ ಲೋಕೋತ್ತರ ವೀರ್ಯವನ್ನು ಬಿಗಿಹಿಡಿದರೂ, ಹಾಗೆ ಮಾಡುವಾಗ ಅದರ ಕಿಂಚಿದಂಶವು ಕಾಮನಪ್ರೇರಣೆಯಿಂದ ಭೂತಳದಲ್ಲಿ ಅಗ್ನಿಯೊಳಗೆ ಬಿದ್ದಿತು!

ಇತ್ತ ಭೂತಳದಲ್ಲಿ ತಾರಕನ ಬಾಧೆಯಂತು ಮಿತಿಮೀರಿತ್ತು. ಆತನು ಯಾವತ್ತು ದೇವತೆಗಳ ಸ್ಥಾನಗಳನ್ನೂ, ಋಷಿಗಳ ಆಶ್ರಮಗಳನ್ನೂ ಅಪಹರಿಸಿ ಲೋಕಕಂಟಕನಾಗಿದ್ದನು. ಆಗ ದೇವತೆಗಳೂ, ಋಷಿಗಳೂ ಅತ್ಯಂತ ದೀನರಾಗಿ ಬ್ರಹ್ಮದೇವನಿಗೆ ಶರಣು ಹೋಗಿ ಆತನನ್ನು ಕುರಿತು:—

ದೇವತೆಗಳು—ಪ್ರಭೋ, ಬ್ರಹ್ಮದೇವಾ, ನಿನ್ನ ವರದಿಂದ ತಾರಕಾಸುರನು ಉನ್ಮತ್ತನಾಗಿ ದೇವತೆಗಳನ್ನೂ, ಋಷಿಗಳನ್ನೂ ಪೀಡಿಸುತ್ತಿರುವನು; ಆದ್ದರಿಂದ ಆತನನ್ನು ವಧಿಸು. ಪಿತಾಮಹಾ, ಆತನಿಂದ ನಮಗೆ ಬಹಳ ತ್ರಾಸವಾಗಿರುವದರಿಂದ ನಿನ್ನಹೊರತು ನಮಗೆ ಬೇರೆ ರಕ್ಷಕರು ಯಾರೂ ಇಲ್ಲವು.

ಬ್ರಹ್ಮದೇವ—ದೇವತೆಗಳಿರಾ, ನಾನು ಯಾವತ್ತು ಭೂತಗಳಿಗೆ ಸಮಾನನು. ನನಗೆ ಅಧರ್ಮವು ಸರ್ವಥಾ ಸೇರುವದಿಲ್ಲವು; ಆದ್ದರಿಂದ ದೇವತೆಗಳಿಗೂ, ಋಷಿಗಳಿಗೂ ಕ್ಲೇಶವನ್ನುಂಟುಮಾಡುವ ಆ ಅಸುರನನ್ನು ನೀವು ಸಂಹರಿಸಿರಿ. ಸುರಶ್ರೇಷ್ಠರೇ, ವೇದ, ಹಾಗು ಧರ್ಮ ಇವುಗಳ ಉಚ್ಛೇದವಾಗಬಾರದೆಂದು ನಾನು ತಾರಕಾಸುರನ ವಧದ ಉಪಾಯವನ್ನು ಯೋಜಿಸಿರುವೆನು; ಆದ್ದರಿಂದ ನೀವು ನಿಶ್ಚಿಂತರಾಗಿರಿ.

ದೇವತೆಗಳು—ಬ್ರಹ್ಮದೇವಾ, ಆ ದೈತ್ಯನನ್ನು ಸಂಹರಿಸಿರೆಂದು ನೀನೆಲ್ಲ ಹೇಳಿದ್ದೆ, ಆದರೆ ಆತನನ್ನು ಸಂಹರಿಸುವ ಸಾಮರ್ಥ್ಯವು ನಮ್ಮಲ್ಲಿದ್ದರಷ್ಟೇ ನಾವು ಸಂಹರಿಸುವದು! ಪಿತಾಮಹನೇ, ನಿನ್ನ ವರದಿಂದ ಆತನು ದೇವತೆಗಳಿಂದಲೂ, ಅಸುರರಿಂದಲೂ, ರಾಕ್ಷಸ

ರಿಂದಲೂ ನಾಶಹೊಂದುವಹಾಗಿಲ್ಲವು. ಇತ್ತ ನಮಗಂತು ಪಾರ್ವತಿಯು ಶಾಪದಿಂದ ಸಂತತಿಯಾಗುವಹಾಗಿಲ್ಲ. ಮುಂದೆ ಗತಿಯೇನು ?

ಬ್ರಹ್ಮದೇವ—ದೇವತೆಗಳಿರಾ, ಪಾರ್ವತಿಯು ಶಾಪಕೊಟ್ಟಾಗ ಅಗ್ನಿಯು ಅಲ್ಲಿ ಇದ್ದಿಲ್ಲವಾದ್ದರಿಂದ ತಾರಕನ ಸಂಹಾರಮಾಡತಕ್ಕ ಮಗನು ಅಗ್ನಿಯಲ್ಲಿ ಉತ್ಪನ್ನವಾಗುವನು. ಕಾಮನ ಪ್ರೇರಣೆಯಿಂದ ರುದ್ರನ ರೇತಸ್ಖಲನವಾಗಿ ಅದು ಅಗ್ನಿಯಲ್ಲಿ ಬಿದ್ದಿತೆಂದು ನಾನು ಕೇಳಿದ್ದೇನೆ. ಇದು ನನ್ನ ಪುರಾತನ ಸಂಕಲ್ಪದಂತೆಯೇ ಆಗಿರುವದೆಂಬದನ್ನು ಲಕ್ಷದಲ್ಲಿಡಿರಿ. ಅಗ್ನಿಯು ದೇವಶತ್ರುವಾದ ತಾರಕನ ಸಂಹಾರಕ್ಕಾಗಿ ತನ್ನಲ್ಲಿಯ ಆ ರುದ್ರ ವೀರ್ಯವನ್ನು ತನ್ನ ತೇಜಸ್ಸಿನೊಡನೆ ಗಂಗೆಯಲ್ಲಿ ಉತ್ಪನ್ನಮಾಡುವನು. ಆ ಅಗ್ನಿ ಪುತ್ರನೇ ನಿಮ್ಮ ಭಯವನ್ನು ದೂರಮಾಡುವನು. ನೀವು ಅಗ್ನಿಯ ಶೋಧಮಾಡಿರಿ.

ವಿವೇಕಶೀಲನೇ, ಬ್ರಹ್ಮದೇವನ ಈ ಮಾತುಗಳನ್ನು ಕೇಳಿ ಮಹಾತ್ಮರಾದ ಆ ದೇವತೆಗಳು ತಮ್ಮ ಸಂಕಲ್ಪವು ಸಿದ್ಧಿಸಿತೆಂಬ ಸಂತೋಷದಿಂದ ಅಗ್ನಿಯನ್ನು ಹುಡುಕಹತ್ತಿದರು. ಅಗ್ನಿಯು ರಸಾತಲದಲ್ಲಿರುವನೆಂಬದನ್ನು ಕೇಳಿ ದೇವತೆಗಳು ಅಲ್ಲಿಗೆ ಹೋಗುವಷ್ಟರಲ್ಲಿ, ಅಗ್ನಿಯು ಅಶ್ವತ್ಥ ವೃಕ್ಷದಲ್ಲಿ ಅಡಗಿಕೊಂಡನು. ಅದರ ಗೊತ್ತು ಹಚ್ಚಿಕೊಂಡು ದೇವತೆಗಳು ಆ ಅಶ್ವತ್ಥವೃಕ್ಷಕ್ಕೆ ಹೋಗುತ್ತಿರಲು, ಅಗ್ನಿಯು ಶಮೀವೃಕ್ಷದಲ್ಲಿ ಅಡಗಿಕೊಂಡನು. ಕಡೆಗೆ ದೇವತೆಗಳು ಆಕಾಶವಾಣಿಯಿಂದ ಅದನ್ನು ಅರಿತು ಶಮೀವೃಕ್ಷಕ್ಕೆ ಹೋಗಲು, ಅಲ್ಲಿ ಅಗ್ನಿಯು ದೇವತೆಗಳಿಗೆ ಕಾಣಿಸಿಕೊಂಡನು. ಅಂದಿನಿಂದ ಧಾರ್ಮಿಕಕಾರ್ಯಕ್ಕಾಗಿ ಪವಿತ್ರವಾದ ಶಮೀಲತೆಯಿಂದ ಅಗ್ನಿಯನ್ನು ಉತ್ಪನ್ನ ಮಾಡಹತ್ತಿದರು. ಇರಲಿ. ದೇವತೆಗಳನ್ನು ನೋಡಿ ಅಗ್ನಿಗೆ ಬಹಳ ಅಸಮಾಧಾನವಾಯಿತು. ಆತನು— "ನೀವು ಯಾವ ಉದ್ದೇಶದಿಂದ ನನ್ನ ಬಳಿಗೆ ಬಂದಿರಿ"ದು ದೇವತೆಗಳನ್ನು ಕೇಳಿದನು. ಆಗ ದೇವತೆಗಳೂ, ಮಹಾನ್ ಮಹಾನ್ ಋಷಿಗಳೂ ಅಗ್ನಿಯನ್ನು ಕುರಿತು—ನಾವು ನಿನ್ನನ್ನು ಒಂದು ಕಾರ್ಯಕ್ಕಾಗಿ ನಿಯಮಿಸುವೆವು, ಅದನ್ನು ನೀನು ಅವಶ್ಯವಾಗಿ ಮಾಡತಕ್ಕದ್ದು; ಅದರಿಂದ ನಿನಗೆ ಗೌರವವುಂಟಾಗುವದು, ಅನ್ನಲು, ಅಗ್ನಿಯು—ದೇವತೆಗಳೇ, ನಿಮ್ಮ ಕೆಲಸವೇನಿದ್ದರೂ ಹೇಳಿರಿ, ಅದನ್ನು ನಾನು ಮಾಡುವೆನು. ನಾನು ನಿಮ್ಮ ಸೇವಕನು. ಅಂದಬಳಿಕ ನನಗೆ ಕೆಲಸಹೇಳಲಿಕ್ಕೆ ಸಂಕೋಚವೇಕೆ? ಎಂದು ಕೇಳಿದನು. ಅದಕ್ಕೆ ದೇವತೆಗಳು—ಅಪ್ಪಾ ಅಗ್ನೀ, ತಾರಕಾಸುರನು ಬ್ರಹ್ಮವರದಿಂದ ಉನ್ಮತ್ತನಾಗಿ ನಮ್ಮನ್ನು ಬಹಳವಾಗಿ ಪೀಡಿಸುವದರಿಂದ ಆತನನ್ನು ನೀನು ಸಂಹರಿಸು. ಎಲೈ ಮಹಾಭಾಗನೇ, ಮಹಾಪರಾಕ್ರಮಿಯೂ, ಅತ್ಯಂತ ತೇಜಸ್ವಿಯೂ ಆದ ಮಗನನ್ನು ಉತ್ಪನ್ನ ಮಾಡಿ, ಅಸುರನಿಂದ ಉತ್ಪನ್ನವಾದ ನಮ್ಮ ಅಂಜಿಕೆಯನ್ನು ದೂರಮಾಡಿಬಿಡು. ಹವ್ಯವಾಹನಾ, ಪಾರ್ವತಿಯು ನಮಗೆ ಶಾಪಕೊಟ್ಟಿರುವದರಿಂದ ನಿನ್ನಹೊರತು ನಮಗೆ ಅನ್ಯ ಮಾರ್ಗವಿಲ್ಲ.

ಈ ಮೇರೆಗೆ ದೇವತೆಗಳು ಆಡಿದ ಮಾತುಗಳನ್ನು ಕೇಳಿ, ಅಗ್ನಿಯು "ಯಾಕಾಗಬೊಲ್ಲದೆಂ"ದು ಹೇಳಿ ಭಾಗೀರಥಿಯ ಬಳಿಗೆ ಹೋಗಿ ಆಕೆಯುಸಂಗಮಾಡುವವನಾಗಿ

ಆಕೆಯಲ್ಲಿ ಗರ್ಭವನ್ನು ಸ್ಥಾಪಿಸಿದನು. ಆ ಮೇಲೆ ತೃಣರಾಶಿಯಲ್ಲಿ ಅಗ್ನಿಯು ಅಭಿವೃದ್ಧವಾಗುವಂತೆ, ಭಾಗೀರಥಿಯ ಉದರದಲ್ಲಿ ಆ ಗರ್ಭವು ಅಭಿವೃದ್ಧವಾಗಹತ್ತಿತು. ಆಗ ಭಾಗೀರಥಿಯು ಆ ರುದ್ರತೇಜದಿಂದ ತಳಮಳಿಸುತ್ತ ಗರ್ಭವನ್ನು ಸಹಿಸದಾದಳು. ಹೀಗಿರುವಾಗ ಯಾವನೋ ಒಬ್ಬ ಅಸುರನು ಭಾಗೀರಥಿಯಲ್ಲಿ ಭಯಂಕರವಾಗಿ ಗರ್ಜಿಸಲು, ಅಕಸ್ಮಾತ್ತಾಗಿ ಆದ ಆ ಭಯಂಕರ ಗರ್ಜನೆಯನ್ನು ಕೇಳಿ ಭಾಗೀರಥಿಯು ಬಹಳವಾಗಿ ಅಂಜಿದಳು. ಆಕೆಯ ಕಣ್ಣುಗಳು ಕತ್ತಲುಗೂಡಿಸಿ ಆಕೆಯು ಮೂರ್ಛಿತಳಾದಳು. ಆಕೆಗೆ ತನ್ನ ದೇಹದ ಹಾಗು ಗರ್ಭದ ಭಾರವು ಸಹನವಾಗದಾಯಿತು. ಗರ್ಭತೇಜದಿಂದ ಆಕೆಯ ದೇಹವು ನಖಶಿಖಾಂತವಾಗಿ ಉರಿಯತೊಡಗಿತು; ಆಕೆಯು ಥರಗುಟ್ಟಿ ನಡಗಹತ್ತಿದಳು! ಹೀಗೆ ಗರ್ಭದ ಶಕ್ತಿಯಿಂದ ಕಳವಳಗೊಂಡಿದ್ದ ಆ ಭಾಗೀರಥಿಯು ಅಗ್ನಿಯನ್ನು ಕುರಿತು—"ಭಗವಂತಾ, ನೀನು ನನ್ನಲ್ಲಿ ಸ್ಥಾಪಿಸಿದ ತೇಜವನ್ನು ಸಹಿಸುವಸಾಮರ್ಥ್ಯವು ನನ್ನಲ್ಲಿ ಇಲ್ಲವು. ಆ ತೇಜದ ಪ್ರಖರತೆಯ ಯೋಗದಿಂದ ನಾನು ಗಾಬರಿಯಾಗಿ ಹೋಗಿರುವದರಿಂದ, ಮೊದಲಿನಂತೆ ನನಗೆ ಸ್ವಾಸ್ಥ್ಯವಿಲ್ಲವು. ಭಗವಂತಾ, ನಾನು ಅತ್ಯಂತ ವಿಹ್ವಲಳಾಗಿದ್ದು, ನನ್ನಬುದ್ಧಿಯು ಅಸ್ತಂಗತವಾಗಿರುವದರಿಂದ ಆ ಗರ್ಭಧಾರಣವು ನನ್ನಿಂದ ಆಗುವದು ಕಠಿಣವೇಸರಿ. ಆದ್ದರಿಂದ 'ಎಲೈ ಪ್ರತಾಪವಂತನೇ, ಈ ಗರ್ಭಪಾತಮಾಡುವದು ನನ್ನ ಮನಸ್ಸಿನಲ್ಲಿ ಇಲ್ಲದಿದ್ದರೂ, ಅತ್ಯಂತವಾದ ದುಃಖದಿಂದ ಈ ಗರ್ಭವನ್ನು ತ್ಯಜಿಸುವೆನು! ವಿಭಾವಸುವೇ, ನಿನ್ನ ತೇಜಸ್ಸಿಗೆ ನನ್ನ ಸ್ಪರ್ಶವಾಗಿರುವದಿಲ್ಲವು. ಇದು ಆಪತ್ಕಾಲದ ಸಂಬಂಧವಾದದ್ದರಿಂದ ಇದು ಅತ್ಯಂತ ಸೂಕ್ಷ್ಮವಾಗಿರುವದು. ನಾನು ಗರ್ಭತ್ಯಾಗಮಾಡುವಲ್ಲಿ ಏನಾದರೂ ಒಳಿತು-ಕೇಡು ಆಗುತ್ತಿದ್ದರೆ, ಶುದ್ಧ ಧರ್ಮಾಧರ್ಮವೇನಾದರೂ ಘಟಿಸುತ್ತಿದ್ದರೆ ಅದರ ಕಾರಣವು ನೀನೇ ಆಗಿರುತ್ತೀ. ಅದಕ್ಕೆ ನಾನು ಹೊಣೆಯಲ್ಲ" ಎಂಬು ಹೇಳಲು, ಅಗ್ನಿಯು—"ಗರ್ಭವನ್ನು ಧರಿಸು, ಗರ್ಭವನ್ನು ಧರಿಸು; ನನ್ನ ತೇಜಸ್ಸಿನಿಂದ ಯುಕ್ತವಾದ ಗರ್ಭವಿರುವದರಿಂದ ಅದರ ಧಾರಣದಿಂದ ಮಹತ್ತರವಾದ ಗುಣವೂ, ಫಲವೂ ಉಂಟಾಗುವವು. ಭಾಗೀರಥೀ, ನಿನ್ನ ಸಾಮರ್ಥ್ಯವು ಸಾಮಾನ್ಯವಾದದ್ದಲ್ಲ. ಯಾವತ್ತು ಪೃಥ್ವಿಯನ್ನು ಎತ್ತಿಹಿಡಿದು ಸಂರಕ್ಷಿಸುವ ಸಾಮರ್ಥ್ಯವು ನಿನ್ನಲ್ಲಿರುತ್ತದೆ; ಆದ್ದರಿಂದ ನೀನು ಗರ್ಭವನ್ನು ಧರಿಸು; ಗರ್ಭತ್ಯಾಗಮಾಡುವದರಿಂದ ನಿನಗೇನು ಲಾಭವಾಗುವಹಾಗೆ ತೋರುವದಿಲ್ಲ! ವಿವೇಕಶೀಲನೇ, ಈ ಮೇರೆಗೆ ಶ್ರೇಷ್ಠಳಾದ ಆ ಭಾಗೀರಥಿಗೆ ಅಗ್ನಿಯೂ, ದೇವತೆಗಳೂ ಗರ್ಭಧಾರಣ ಮಾಡೆಂದು ತಿರು ತಿರುಗಿ ಹೇಳಿದರೂ, ಆಕೆಯು ತನ್ನ ಹಟವನ್ನು ಬಿಡಲಿಲ್ಲ. ಬಳಿಕ ಆಕೆಯು ಮಹಾಪರ್ವತವಾದ ಮೇರುವಿನ ಮೇಲೆ ಆ ಗರ್ಭದ ತ್ಯಾಗಮಾಡಿದಳು! ವಿವೇಕಶೀಲಾ, ಭಾಗೀರಥಿಯಲ್ಲಿ ಆ ಗರ್ಭವನ್ನು ಧರಿಸುವ ಸಾಮರ್ಥ್ಯವು ಇದ್ದಿಲ್ಲವೆಂತಲ್ಲ; ಆದರೆ ಆಕೆಗೆ ಅಗ್ನಿಯ, ಅಥವಾ ರುದ್ರನ ಉಗ್ರತೇಜಸ್ಸಿನ ಸಹನವಾಗಲಿಲ್ಲವು; ಆದ್ದರಿಂದ ಪ್ರಜ್ವಲಿಸುವ ಅಗ್ನಿಯಂತೆ ದೇದೀಪ್ಯಮಾನವೂ, ದುಸ್ಸಹವೂ ಆದ ಆ ಗರ್ಭವನ್ನು ಬಹು ಕಷ್ಟದಿಂದ ಆಕೆಯು ಚಲ್ಲಿಕೊಡಬೇಕಾಯಿತು!

ಈ ಮೇರೆಗೆ ಭಾಗೀರಥಿಯು ಗರ್ಭವನ್ನು ಪರಿತ್ಯಜಿಸಿದಬಳಿಕ, ಅಗ್ನಿಯು ಭಾಗೀರಥಿಯನ್ನು ಕಂಡು ಆ ಮಹಾನ್ ನದಿಯನ್ನು ಕುರಿತು—ನಿನ್ನ ಹೊಟ್ಟೆಯಿಂದ ಗರ್ಭದ ನಿಷ್ಕ್ರಮಣವು ಸುಖದಿಂದ ಆಯಿತಷ್ಟೆ? ದೇವೀ, ಆ ಗರ್ಭದ ರೂಪವೂ, ವರ್ಣವೂ ಹ್ಯಾಗಿರುವವು? ಅದರಲ್ಲಿ ತೇಜಸ್ಸು ಯಾವದಿರುವದು? ಕಥನಮಾಡು, ಎಂದು ಕೇಳಲು, ಭಾಗೀರಥಿಯು—ಅನಘಾ—ಅಗ್ನೀ, ಆ ಗರ್ಭವು ಅತ್ಯಂತ ಸುಂದರವಾಗಿದ್ದು, ತೇಜಸ್ಸಿನಿಂದ ಅದು ನಿನ್ನನ್ನು ಹೋಲುತ್ತಿರುವದು. ಅದರ ವರ್ಣವು ಉತ್ತಮವಾದದ್ದಿದ್ದು, ಅದು ಮಲಹೀನವೂ, ಕಾಂತಿಯುತವೂ ಆಗಿರುವದು. ಅದರ ಯೋಗದಿಂದ ಮೇರುಪರ್ವತದ ಮೇಲೆ ಒಳ್ಳೇಪ್ರಕಾಶವು ಬಿದ್ದಿರುವದು. ಉತ್ಪಲ—ಕಮಲಗಳುಳ್ಳ ಸರೋವರದಂತೆ ಅದು ಶೀತಲವಾಗಿರುವದು. ಕದಂಬದ ಹೂಗಳಂತೆ ಅದಕ್ಕೆ ಸುವಾಸನೆ ಬರುತ್ತಿರುವದು. ಸೂರ್ಯಕಿರಣಗಳಂತೆ ಅದರ ತೇಜಸ್ಸಿನ ಸಂಪರ್ಕವು ಪೃಥ್ವಿಯಮೇಲಿನ, ಹಾಗು ಪರ್ವತದಮೇಲಿನ ದ್ರವ್ಯಗಳಿಗೆ ಆದಕೂಡಲೆ, ಆ ದ್ರವ್ಯಗಳೆಲ್ಲ ಕಾಂಚನರೂಪವನ್ನು ಹೊಂದಿದವು. ಆ ಗರ್ಭದ ತೇಜವು ಪರ್ವತ, ನದಿ, ಜಲಪ್ರವಾಹಗಳು ಇವುಗಳಲ್ಲೆಲ್ಲ ಪಸರಿಸಿರುವದಲ್ಲದೆ, ಸ್ಥಾವರ ಜಂಗಮ ವಿಶ್ವವನ್ನು ಪ್ರದೀಪ್ತಮಾಡಿಬಿಟ್ಟಿರುವದು. ಒಟ್ಟಿಗೆ ನಿನ್ನ ಆ ಗರ್ಭದ ತೇಜವು ಸೂರ್ಯನಂತೆ, ಅಥವಾ ಅಗ್ನಿಯಂತೆ ದೇದೀಪ್ಯಮಾನವಾಗಿದ್ದು, ಚಂದ್ರನಂತೆ ಸೌಮ್ಯವಾಗಿರುವದು. ವಿವೇಕಶೀಲಾ, ಈ ಮೇರೆಗೆ ಭಾಷಣಮಾಡಿ ಭಾಗೀರಥಿಯು ಅಲ್ಲಿಯೇ ಅದೃಶ್ಯಳಾದಳು. ಇತ್ತ ಅಗ್ನಿಯೂ ದೇವತೆಗಳ ಕಾರ್ಯವನ್ನು ಮಾಡಿ ತನಗೆ ಇಷ್ಟವಾದ ಸ್ಥಳಕ್ಕೆ ಹೊರಟುಹೋದನು. ಈ ಮೇರೆಗೆ ಭಾಗೀರಥಿಯು ಗರ್ಭಪಾತಮಾಡಿದ್ದರಿಂದ ತಮ್ಮ ಕಾರ್ಯಹಾನಿಯಾಯಿತೆಂದು ದೇವತೆಗಳೂ, ಋಷಿಗಳೂ ಖಿನ್ನರಾದರು. ಅವರು ಕೃತ್ತಿಕೆಯರಿಗೆ—"ನೀವು ಆ ಗರ್ಭದ ಪೋಷಣಮಾಡಿರಿ"ಎಂದು ಹೇಳಿದರು. ಅಗ್ನಿಯ ಆ ವೀರ್ಯವನ್ನು ಧರಿಸಲಿಕ್ಕೆ ಯಾವ ದೇವಪತ್ನಿಯಹೂ ಸಮರ್ಥರಿದ್ದಿಲ್ಲ; ಆದರೆ ಈ ಕೃತ್ತಿಕೆಯರು ಮಾತ್ರ ತಮ್ಮ ಅಂಗದ ತೇಜಸ್ಸಿನಿಂದ ಅದನ್ನು ಧರಿಸಲು ಸಮರ್ಥರಿದ್ದರು. ದೇವತೆಗಳ ಹಾಗು ಋಷಿಗಳ ಈ ಪ್ರಾರ್ಥನೆಯಂತೆ ಆ ಕೃತ್ತಿಕೆಯರು ಗಂಗೆಯು ಚೆಲ್ಲಿಕೊಟ್ಟಿದ್ದ ಆ ಗರ್ಭವನ್ನು ಸ್ವೀಕರಿಸಲು, ಆ ಆರು ಮಂದಿ ಕೃತ್ತಿಕೆಯರ ಗರ್ಭದಲ್ಲಿ ಆರು ಗರ್ಭಗಳು ಬೇರೆ ಬೇರೆಯಾಗಿ ನಿಂತವು. ಈ ಮೇರೆಗೆ ತನ್ನ ಉತ್ತಮ ವೀರ್ಯಶಾಲಿಯಾದ ತೇಜವು ಆ ಆರುಮಂದಿ ಕೃತ್ತಿಕೆಯರಲ್ಲಿ ಜನ್ಮಹೊಂದಿದ್ದನ್ನು ನೋಡಿ ಅಗ್ನಿಗೆ ಬಹಳ ಆನಂದವಾಯಿತು. ಆ ಕೃತ್ತಿಕೆಯರು ಅಗ್ನಿಯ ಆ ಪೂರ್ಣಗರ್ಭವನ್ನು ಆರು ಗರ್ಭಾಶಯಗಳಲ್ಲಿ ಪೋಷಿಸಿದರು. ಮುಂದೆ ಆ ಮಹಾಗರ್ಭವು ವೃದ್ಧಿಂಗತವಾಗುತ್ತಹೋದಂತೆ ಅದರ ದುಸ್ಸಹ ತೇಜವು ಕೃತ್ತಿಕೆಯರಿಗೂ ಅಸಹ್ಯವಾಗಹತ್ತಿ, ಅವರು ತಳಮಳಿಸಹತ್ತಿದರು! ವಿವೇಕಶೀಲಾ, ಈ ಮೇರೆಗೆ ಗರ್ಭವು ಪೂರ್ಣ ಬೆಳೆದಬಳಿಕ ಗರ್ಭದತೇಜದಿಂದ ದೀನರಾಗಿಹೋಗಿದ್ದ ಆ ಎಲ್ಲ ಕೃತ್ತಿಕೆಯರು ಯಥಾಕಾಲದಲ್ಲಿ ಒಮ್ಮೆಲೆ ಹಡೆದರು. ಆಗ ಭೂದೇವಿಯು ಸುವರ್ಣರಾಶಿಯೊಳಗಿಂದ ಆ ಆರು ಗರ್ಭಗಳನ್ನು ತೆಗೆದು ಕುಶಸಮುದಾಯದಮೇಲೆ ಒಟ್ಟುಗೂಡಿಸಲು, ಅವುಗ

ಳಿಂದ ಒಬ್ಬ ಬಾಲಕನಾದನು! ವಿವೇಕಶೀಲಾ, ಆ ಬಾಲಕನ ಆಕೃತಿಯು ಒಳ್ಳೇ ದಿವ್ಯ ವಾದದ್ದಿದ್ದು, ಅಗ್ನಿಯಂತೆ ಆತನ ದಿವ್ಯಕಾಂತಿಯು ಪ್ರಕಾಶಿಸುತ್ತಲಿತ್ತು. ಆ ಸುಂದರ ಅಗ್ನಿಪುತ್ರನು ಬೆಳೆಯಹತ್ತಿದಂತೆ ಕೃತ್ತಿಕೆಯರಿಗೆ ಆತನು ಬಾಲಸೂರ್ಯನಂತೆ ತೋರ ಹತ್ತಿದನು. ಅವರು ಒಳ್ಳೇ ಮಮತೆಯಿಂದಲೂ, ಪ್ರೇಮದಿಂದಲೂ ಮೊಲೆ ಉಣಿಸಿ ಆತನ ಸಂಗೋಪನ ಮಾಡಿದರು. ವಿವೇಕಶೀಲನೇ, ಈ ಮೇರೆಗೆ ಆ ಅಗ್ನಿಪುತ್ರನು ಕೃತ್ತಿಕೆಯರ ಉದರದಲ್ಲಿ ಬೆಳೆದದ್ದರಿಂದಲೂ, ಕೃತ್ತಿಕೆಯರು ಆತನ ಸಂಗೋಪನ ಮಾಡಿದ್ದರಿಂದಲೂ ಯಾವತ್ತು ಸ್ಥಾವರ ಜಂಗಮ ತ್ರೈಲೋಕ್ಯದಲ್ಲಿ ಆತನಿಗೆ ಕಾರ್ತಿಕೇಯನೆಂಬ ಹೆಸರು ಪ್ರಾಪ್ತವಾಯಿತು; ಆತನ ಮೂಲಜನ್ಮವು ಭಗವಾನ್ ಶಂಕರನ ವೀರ್ಯದ ಸ್ಖಲನತ್ವದಿಂದ (ಪತನದಿಂದ) ಒದಗಿದ್ದರಿಂದ ಆತನನ್ನು ಸ್ಕಂದನೆಂದು ಕರೆಯುವರು; ಗಂಗೆಯು ಆತನನ್ನು ಗುಹೆಯಲ್ಲಿ ಚಲ್ಲಿಕೊಡಲು, ಗುಹೆಯಲ್ಲುಂಟಾದ ಆತನ ವಾಸದ ಮೂಲಕವಾಗಿ ಆತನಿಗೆ ಗುಹನೆಂಬ ಹೆಸರೂ ಪ್ರಾಪ್ತವಾಯಿತು. ಆ ಮೇಲೆ ಆ ಕಾರ್ತಿಕೇಯನು ಜನ್ಮ ಹೊಂದಿದಲ್ಲಿಗೆ ಮೂವತ್ತುಮೂರು ದೇವತೆಗಳು, ದಿಕ್ಕುಗಳು, ದಿಕ್ಪಾಲಕರು, ರುದ್ರ, ಬ್ರಹ್ಮ, ವಿಷ್ಣು, ಯಮ, ಪೂಷಾ, ಅರ್ಯಮಾ, ಭಗ, ಅಂಶ, ಮಿತ್ರ, ಸಾಧ್ಯ, ಇಂದ್ರ, ವಸು, ಅಶ್ವಿನೀಕುಮಾರ, ಉದಕ, ವಾಯು, ಆಕಾಶ, ಚಂದ್ರ, ನಕ್ಷತ್ರ, ಗ್ರಹ, ರವಿ, ಅದರಂತೆ ಋಕ್, ಯಜುಸ್, ಸಾಮವೇದಗಳೊಳಗಿನ ಬೇರೆ ಬೇರೆ ಋಚೆಗಳು ಮೊದಲಾದವರೆಲ್ಲರೂ ಅಗ್ನಿಯ ಅದ್ಭುತಪುತ್ರನನ್ನು ನೋಡುವದಕ್ಕಾಗಿ ಬಂದರು. ಆಗ ಋಷಿಗಳು ಆ ಕಾರ್ತಿಕೇಯನ ಸ್ತೋತ್ರಮಾಡಿದರು; ಗಂಧರ್ವರು ಅವನ ಮುಂದೆ ನರ್ತನ ಮಾಡಿದರು. ವಿವೇಕಶೀಲನೇ, ಆ ಕುಮಾರನಿಗೆ ಆರು ಮುಖಗಳು, ಹನ್ನೆರಡು ಕಣ್ಣುಗಳು, ಹನ್ನೆರಡು ಭುಜಗಳು ಇದ್ದು, ಆತನಿಗೆ ಬಲಿಷ್ಠವಾದ ಸ್ಕಂದವು ಇತ್ತು. ಬ್ರಾಹ್ಮಣರಲ್ಲಿ ಆತನ ಪ್ರೇಮವು ಅತಿಶಯವಾಗಿದ್ದು, ಅಗ್ನಿಯಂತೆ ಅಥವಾ ಸೂರ್ಯನಂತೆ ಆತನು ಕಾಂತಿಯುತನಾಗಿದ್ದನು. ಇಂಥ ಬಾಲಕನು ಕುಶಸ್ತೋಮದ ಮೇಲೆ ಮಲಗಿರುವದನ್ನು ನೋಡಿ ಋಷಿಗಳಿಗೂ, ದೇವತೆಗಳಿಗೂ ಆನಂದವಾಗಿ, ಇನ್ನು ತಾರಕಾಸುರನು ಮಡಿದನೆಂದು ಅವರು ನಿಶ್ಚಯಿಸಿದರು!

ವಿವೇಕಶೀಲಾ, ಮಹಾನ್ ಯೋಗಬಲಯುಕ್ತನೂ, ಶಮ–ತಪ–ವೀರ್ಯ ಇವುಗಳಿಂದ ಕೂಡಿದವನೂ ಆದ ಆ ಸುಮನೋಹರ ಕುಮಾರನು ಚಂದ್ರನಂತೆ ಬೆಳೆಯಹತ್ತಿದನು. ಪ್ರತ್ಯಕ್ಷ ಬೃಹಸ್ಪತಿಯು ಆತನ ಜಾತಕರ್ಮಾದಿ ಕ್ರಿಯೆಗಳನ್ನು ಮಾಡಿದನು. ಭಗವಾನ್ ಶಂಕರನೇ ಮೊದಲಾದವರು ಕುಮಾರನಕಡೆಗೆ ಬರತೊಡಗಲು, ಆ ಮಹಾಯೋಗ ಬಲಾನ್ವಿತನಾದ ಬಲಿಷ್ಠಬಾಲನೂ ಶೂಲಪಾಣಿಯಾದ ದೇವಾಧಿದೇವಶಂಕರನ ಎದುರಿಗೆ ಹೋಗಹತ್ತಿದನು. ಆತನು ಬರುವದನ್ನು ನೋಡಿ ಶಂಕರ, ಪಾರ್ವತಿ, ಗಂಗಾ, ಅಗ್ನಿ ಈ ನಾಲ್ವರು ಒಮ್ಮೆಲೆ ಮನಸ್ಸಿನಲ್ಲಿ—"ಈ ಕುಮಾರನು ಗೌರವಾರ್ಥವಾಗಿ ಮೊದಲು ಯಾರಕಡೆಗೆ ಬರಬಹುದು? ನನ್ನ ಕಡೆಗೇ ಬರುವನು" ಎಂದು ವಿಚಾರಿಸುತ್ತಿರಲು, ಆ ನಾಲ್ವರ ವಿಚಾರವನ್ನು ತಿಳಿದು ಸ್ಕಂದನು ಕೂಡಲೆ ಯೋಗಸಾಮರ್ಥ್ಯ

ದಿಂದ ನಾಲ್ಕು ಬೇರೆ ಬೇರೆ ದೇಹಗಳನ್ನು ಉತ್ಪನ್ನಮಾಡಿದನು. ಕ್ಷಣದಲ್ಲಿ ಆ ಭಗವಾನ್ ಪ್ರಭುವು ತನ್ನ ನಾಲ್ಕು ಮೂರ್ತಿಗಳನ್ನು ನಿರ್ಮಾಣಮಾಡಿದನು! ಈ ನಾಲ್ಕೂರೂಪಗಳು ಅತ್ಯಂತ ತೇಜಸ್ವಿಗಳಾಗಿದ್ದು, ಒಂದನ್ನೊಂದು ಅಚ್ಚಳಿಯದೆ ಹೋಲುತ್ತಿದ್ದವು. ಸ್ಕಂದ ಎಂಬ ಮುಖ್ಯಮೂರ್ತಿಯ ಹಿಂದೆ "ಶಾಖ'' "ವಿಶಾಖ'' "ನೈಗಮೇಯ" ಎಂಬ ಮೂರು ಮೂರ್ತಿಗಳಿದ್ದು, ಅವುಗಳಲ್ಲಿ ಅದ್ಭುತವಾಗಿ ತೋರುವ ಸ್ಕಂದನು ರುದ್ರನಕಡೆಗೆ ಹೋದನು; ಪಾರ್ವತಿಯು ಬರುತ್ತಿರುವ ದಿಕ್ಕಿಗೆ ವಿಶಾಖನು ಹೊರಳಿದನು; ವಾಯು ಮೂರ್ತಿ ಭಗವಾನ್ ಶಾಖನು ಅಗ್ನಿಯಕಡೆಗೆ ಹೋದನು; ಅಗ್ನಿಯಂತೆ ತೇಜಸ್ವಿಯಾದ ಕುಮಾರ ನೈಗಮೇಯನು ಗಂಗೆಯಕಡೆಗೆ ಹೋದನು. ಹೀಗೆ ನಾಲ್ಕೂಜನರಕಡೆಗೆ ಒಮ್ಮೆಲೆ ಆ ನಾಲ್ಕೂ ರೂಪಗಳು ಹೋಗತೊಡಗಿದ್ದು ಅದ್ಭುತವಾಗಿ ತೋರಿತು. ರೋಮಾಂಚಗಳೇಳುವ ಆ ಅದೃಷ್ಟಪೂರ್ವ ಮಹದಾಶ್ಚರ್ಯವನ್ನು ನೋಡಿ ದೇವ-ದಾನವ-ರಾಕ್ಷಸರಲ್ಲಿ ಒಳ್ಳೇ ಗಲಿಬಿಲಿಯುಂಟಾಯಿತು. ಇಂಥ ಅದ್ವಿತೀಯ ಪ್ರತಾಪಿಗೆ ಯಾವ ಅಧಿಕಾರವನ್ನು ಕೊಡಬೇಕೆಂದು ಬ್ರಹ್ಮಾದಿ ದೇವತೆಗಳೂ, ಋಷಿಗಳೂ ಆಲೋಚಿಸತೊಡಗಿದರು. ಆಗ ಮಹಾತ್ಮರಾದ ಬ್ರಾಹ್ಮಣರು ಸ್ಕಂದನನ್ನು ಪೂಜಿಸಿ ಆತನನ್ನು ಕುರಿತು—"ಎಲೈ ಅಗ್ನಿಪುತ್ರನೇ, ನಿನ್ನ ಕಲ್ಯಾಣವಾಗಲಿ! ಲೋಕಗಳಿಗೆ ನೀನು ಸುಖದಾಯಕನಾಗು. ಹುಟ್ಟಿದ ಆರುದಿವಸಗಳಲ್ಲಿ ಎಲ್ಲ ಲೋಕಗಳನ್ನು ವಶಮಾಡಿಕೊಂಡು ಅವುಗಳಿಗೆ ಅಭಯವನ್ನೂ ಕೊಟ್ಟೆ. ದೇವಶ್ರೇಷ್ಠನೇ, ನೀನು ತ್ರೈಲೋಕ್ಯದ ಭೀತಿಯನ್ನು ನಾಶಮಾಡುವವನಿರುವದರಿಂದ ನೀನು ಇಂದ್ರನಾಗು!" ಎಂದು ಹೇಳಿದರು. ಅದಕ್ಕೆ ಸ್ಕಂದನು—

ಸ್ಕಂದ—ಎಲೈ ತಪೋಧನರೇ, ಇಂದ್ರನು ಜನರ ಕಲ್ಯಾಣವನ್ನು ಯಾವ ಯಾವ ಬಗೆಯಿಂದ ಮಾಡುತ್ತಿರುವನು? ಮತ್ತು ಆ ದೇವಾಧಿಪತಿಯು ಪ್ರತಿದಿನ ದೇವಸಮುದಾಯವನ್ನು ಹ್ಯಾಗೆ ಪಾಲಿಸುತ್ತಿರುವನು?

ಋಷಿಗಳು—ಇಂದ್ರನು ಪ್ರಾಣಿಗಳ ಬಲ-ಇಂದ್ರಿಯ-ತೇಜ-ಸಂತತಿ-ಸುಖ ಇವುಗಳ ಅಭಿವೃದ್ಧಿಯನ್ನು ಮಾಡುತ್ತಿರುವನು. ಆತನು ಪ್ರಸನ್ನನಾದರೆ ಯಾವತ್ತು ಮನೋರಥಗಳನ್ನು ಪೂರ್ಣಮಾಡುವನು. ಆ ಬಲಾರಿಯಾದ ಇಂದ್ರನು ದುರಾಚಾರಿಗಳನ್ನು ಸಂಹರಿಸಿ, ಸದಾಚಾರಿಗಳು ಬೇಡಿದ್ದನ್ನು ಕೊಡುವನಲ್ಲದೆ, ಯಾವತ್ತು ಪ್ರಾಣಿಗಳನ್ನು ತನ್ನ ಅಪ್ಪಣೆಯಿಂದ ಆಯಾ ಕಾರ್ಯಗಳಲ್ಲಿ ತೊಡಗಿಸುವನು. ಸೂರ್ಯನಿಲ್ಲದಾಗ ಆತನು ಸೂರ್ಯನಾಗುವನು; ಚಂದ್ರನಿಲ್ಲದಾಗ ಚಂದ್ರನಾಗುವನು; ಅದರಂತೆ ಕೆಲಸ ಬಿದ್ದಾಗ ಆತನು ಅಗ್ನಿ-ವಾಯು-ಪೃಥ್ವಿಯೂ ಆಗುವನು. ಇಂದ್ರನು ಮಾಡತಕ್ಕ ಕೆಲಸಗಳು ಇವೇ. ಇಂದ್ರನಲ್ಲಿ ವಿಪುಲ ಸಾಮರ್ಥ್ಯವಿದ್ದು, ನೀನೂ ಸಮರ್ಥನಿರುವದರಿಂದ ಎಲೈ ವೀರನೇ, ನೀನು ನಮ್ಮ ಇಂದ್ರನಾಗು.

ಇಂದ್ರ—ಎಲೈ ಮಹಾಬಾಹೋ, ನೀನೇ ನಮ್ಮೆಲ್ಲರಿಗೆ ಸುಖವನ್ನುಂಟುಮಾಡುವ

ಇಂದ್ರನಾಗು. ಎಲೈ ಸಜ್ಜನಶ್ರೇಷ್ಠನೇ, ನೀನು ಜ್ಞಾನಿಯೂ ಇರುವೆ; ಆದ್ದರಿಂದೆ ಇಂದು ಸ್ವತಃ ನೀನು ಇಂದ್ರಪದದಲ್ಲಿ ರಾಜ್ಯಾಭಿಷೇಕಮಾಡಿಸಿಕೊಳ್ಳು,

ಸ್ಕಂದ—ಇಂದ್ರನೇ, ನೀನೇ ವಿಜಯಸಂಪಾದನದಲ್ಲಿ ಆಸಕ್ತನಾಗಿ ಅವ್ಯಗ್ರತೆಯಿಂದ ತ್ರೈಲೋಕ್ಯಗಳ ಪಾಲನಮಾಡು. ನಾನು ನಿನ್ನ ಸೇವಕನಿರುವೆನು. ನನಗೆ ಇಂದ್ರಪದಪ್ರಾಪ್ತಿಯ ಇಚ್ಛೆಯಿಲ್ಲವು.

ಇಂದ್ರ—ಎಲೈ ವೀರನೇ, ನಿನ್ನ ಸಾಮರ್ಥ್ಯವು ಅದ್ಭುತವಾಗಿರುವದು; ಆದ್ದರಿಂದ ನೀನೇ ಇಂದ್ರನಾಗಿ ದೇವಶತ್ರುಗಳ ಸಂಹಾರಮಾಡು. ಬಲಹೀನನೂ, ಪರಾಜಯ ಹೊಂದಿದವನೂ ಆದ ನಾನು ಇಂದ್ರನಾದರೆ, ನಿನ್ನ ಶೌರ್ಯದಿಂದ ಆಶ್ಚರ್ಯಚಕಿತರಾಗಿ ಹೋದಜನರು ನನ್ನನ್ನು ತುಚ್ಛೀಕರಿಸಿದಾಗ, ನಮ್ಮಿಬ್ಬರಲ್ಲಿ ಒಡಕು ಹುಟ್ಟಿಸುವದಕ್ಕಾಗಿ ಆಲಸ್ಯರಹಿತರಾಗಿ ಅವರು ಯತ್ನಮಾಡಬಹುದು. ಹೇ ಪ್ರಭೋ, ನಮ್ಮಲ್ಲಿ ಒಡಕು ಹುಟ್ಟಿದಕೂಡಲೆ ಎರಡು ಪಂಗಡಗಳಾಗಿ, ಅವುಗಳ ಯೋಗದಿಂದ ನಮ್ಮಿಬ್ಬರಲ್ಲಿ ಯುದ್ಧಪ್ರಸಂಗವು ಉಂಟಾದೀತು. ಅಪ್ಪಾ, ಬಲಿಷ್ಠನಾದ ಸ್ಕಂದನೇ, ಆ ಯುದ್ಧದಲ್ಲಿ ನೀನು ನನ್ನನ್ನು ನಿಶ್ಚಯವಾಗಿ ಸೋಲಿಸುವೆ! ಆದ್ದರಿಂದ ನೀನು ಇಂದ್ರನಾಗು. ಇನ್ನು ಆ ಮಾತಿನವಿಷಯವಾಗಿ ವಿಚಾರಮಾಡಬೇಡ.

ಸ್ಕಂದ—ಇಂದ್ರಾ, ನಿನ್ನ ಕಲ್ಯಾಣವಾಗಲಿ! ನೀನು ತ್ರೈಲೋಕ್ಯದ, ಹಾಗು ನನ್ನರಾಜನಾಗಿರುತ್ತೀ; ಆದ್ದರಿಂದ ನಾನು ನಿನ್ನ ಯಾವ ಅಪ್ಪಣೆಯನ್ನು ಪಾಲಿಸಲಿ ಹೇಳು.

ಇಂದ್ರ—ಎಲೈ ಮಹಾಬಲಾಢ್ಯನೇ, ನಾನು ನಿನ್ನ ಹೇಳಿಕೆಯಂತೆ ಇಂದ್ರನಾಗುವೆನು; ಆದರೆ ಈಗ ನೀನು ನಿಶ್ಚಯಪೂರ್ವಕವಾಗಿ ಮಾಡಿದ ಭಾಷಣವು ನಿಜವಿದ್ದರೆ, ಹಾಗು ನನ್ನ ಅಪ್ಪಣೆಯನ್ನು ಪಾಲಿಸಲು ನೀನು ಇಚ್ಛಿಸುತ್ತಿದ್ದರೆ ನೀನು ದೇವತೆಗಳ ಸೇನಾಪತಿಯ ಪದದಲ್ಲಿ ಸ್ವತಃ ಅಭಿಷೇಕಮಾಡಿಸಿಕೋ.

ಸ್ಕಂದ—ದೈತ್ಯರವಿನಾಶಕ್ಕಾಗಿ, ದೇವತೆಗಳ ಕಾರ್ಯಸಿದ್ಧಿಗಾಗಿ, ಗೋಬ್ರಾಹ್ಮಣರ ಹಿತಕ್ಕಾಗಿ ನೀನೇ ನನಗೆ ಸೇನಾಪತಿ ಪದದಲ್ಲಿ ಅಭಿಷೇಕಮಾಡು.

**ಸ್ಕಂದನ ದೇವಸೇನಾಪತ್ಯಭಿಷೇಕವು:**—ಆಮೇಲೆ ಯಾವತ್ತು ದೇವಸಮುದಾಯದೊಡನೆ ಇಂದ್ರನು ಆತನಿಗೆ ಅಭಿಷೇಕಮಾಡಿದನು. ಆಗ ಮಹರ್ಷಿಗಳು ಸ್ಕಂದನನ್ನು ಪೂಜಿಸುತ್ತಿರಲು, ಆತನು ಅತ್ಯಂತ ಶೋಭಾಯಮಾನನಾದನು. ಬೃಹಸ್ಪತಿಯು ಯಾವತ್ತು ಸಾಹಿತ್ಯಗಳನ್ನು ಸಿದ್ಧಮಾಡಿಕೊಂಡು ಪ್ರದೀಪ್ತ ಅಗ್ನಿಯಲ್ಲಿ ಯಥಾವಿಧಿ ಹವನಮಾಡಿದನು. ಆ ಮೇಲೆ ಹಿಮಾಲಯನು ಕೊಟ್ಟಿದ್ದ ರತ್ನಖಚಿತವಾದ ಸಿಂಹಾಸನದಮೇಲೆ ಆ ಕುಮಾರನು ಕುಳಿತುಕೊಳ್ಳಲು, ಅಭಿಷೇಕದ್ರವ್ಯಗಳನ್ನು ತಕ್ಕೊಂಡು ದೇವತೆಗಳ ಸಮುದಾಯವು ಆತನ ಸುತ್ತುಮುತ್ತು ನಿಂತುಕೊಂಡಿತು. ಮಹಾವೀರ್ಯಶಾಲಿಯಾದ ಇಂದ್ರನು, ವಿಷ್ಣುವು, ಸೂರ್ಯಚಂದ್ರರು, ದೇವಪರಿವಾರದೊಡನೆ ಭಗವಾನ್ ರುದ್ರನು, ಉಳಿದ ಸಮಸ್ತಪರಿವಾರವು ನಿಂತುಕೊಂಡಿತ್ತು. ಋಷಿಪರಿವಾರದೊಡನೆ ಬ್ರಹ್ಮದೇವನು ಒಂದು ಬದಿಯಲ್ಲಿ ನಿಂತುಕೊಂಡಿದ್ದನು. ಇವರೆಲ್ಲರೂ

ಸ್ಕಂದನಿಗೆ ಅಭಿಷೇಕಮಾಡಿದರು. ಆಗ ಅವನ ತಲೆಯಮೇಲೆ ಹಿಡಿದಿದ್ದ ಸುವರ್ಣಛತ್ರವು, ಪ್ರದೀಪ್ತವಾದ ಅಗ್ನಿಯ ಮೇಲಿನ ಪ್ರಭಾಮಂಡಲದಂತೆ ಶೋಭಿಸುತ್ತಿತ್ತು. ಕೀರ್ತಿಸಂಪನ್ನನಾದ ಭಗವಾನ್ ಶಂಕರನು ದೇವೀ ಪಾರ್ವತಿಯೊಡನೆ ಅಲ್ಲಿಗೆ ಬಂದು, ವಿಶ್ವಕರ್ಮನು ಮಾಡಿದ್ದ ಸುವರ್ಣಮಯವಾದ ದಿವ್ಯಮಾಲೆಯನ್ನು ಕುಮಾರನ ಕೊರಳಿಗೆ ಹಾಕಿ ಗೌರವಿಸಿದನು. ಅಗ್ನಿಯು ಆತನಿಗೆ ಕುಕ್ಕುಟಯುಕ್ತವಾದ ಶೃಂಗರಿಸಿದ ಒಂದು ಧ್ವಜವನ್ನು ಕೊಟ್ಟನು. ರಕ್ತವರ್ಣದ ಆ ಧ್ವಜವನ್ನು ಸ್ಕಂದನ ರಥಕ್ಕೆ ಏರಿಸಲು, ಆ ವೀರಶ್ರೇಷ್ಠನು ಪ್ರಲಯಕಾಲದ ಅಗ್ನಿಯಂತೆ ತೋರುತ್ತಿದ್ದನು. ಪ್ರಾಣಿಮಾತ್ರಗಳಲ್ಲಿ ಚಲನವಲನಾದಿ ಕ್ರಿಯೆ, ಕಾಂತಿ, ಶಾಂತಿ, ಬಲ ಇವುಗಳ ಸ್ವರೂಪದಿಂದ ವಾಸಿಸುತ್ತಿರುವಂಥ, ಹಾಗು ದೇವತೆಗಳ ವಿಜಯದ ಅಭಿವೃದ್ಧಿಯನ್ನು ಮಾಡುವಂಥ ಶಕ್ತಿಯು ಸ್ಕಂದನ ಅಗ್ರಭಾಗದಲ್ಲಿರುತ್ತಿರುವದು. ಆತನ ಶರೀರದಲ್ಲಿ ನೈಸರ್ಗಿಕವಾದದ್ದೊಂದು ಕವಚವಿರುತ್ತಿದ್ದು, ಯುದ್ಧಮಾಡತೊಡಗಿದಕೂಡಲೆ ಅದು ಪ್ರಕಟವಾಗುತ್ತಿರುವದು. ಎಲೈ ವಿವೇಕಶೀಲನೇ, ಶಕ್ತಿ-ಧರ್ಮ-ಬಲ-ತೇಜ-ಸೌಂದರ್ಯ, ಸತ್ಯ, ಉನ್ನತಿ, ಬ್ರಾಹ್ಮಣಹಿತಕರ್ತೃತ್ವ, ಮೋಹಶೂನ್ಯತೆ, ಭಕ್ತಸಂರಕ್ಷಣ, ಲೋಕಪಾಲನ, ಶತ್ರುನಾಶನ ಈ ಗುಣಗಳು ಸ್ಕಂದನಲ್ಲಿ ಜನ್ಮತಃ ಸಿದ್ಧವಾಗಿದ್ದವು.

ದೇವದಾನವ ಸಂಗ್ರಾಮ:—ಈ ಮೇರಿಗೆ ಸ್ಕಂದನಿಗೆ ಸೇನಾಪತ್ಯದ ಅಭಿಷೇಕವಾದ ಬಳಿಕ ಭಗವಾನ್ ಶಂಕರನು ಪಾರ್ವತಿಯೊಡನೆ ಪ್ರಕಾಶಮಾನವಾದ ರಥದಲ್ಲಿ ಕುಳಿತು ಆನಂದದಿಂದ ಭದ್ರವಟದಕಡೆಗೆ ಸಾಗಿದನು. ಆಗ ಆತನ ಉತ್ಕೃಷ್ಟ ರಥಕ್ಕೆ ಸಾವಿರ ಸಿಂಹಗಳನ್ನು ಹೂಡಿದ್ದು, ಕಾಲಪ್ರೇರಿತಗಳಾದ ಆ ಶುಭ್ರವರ್ಣದ ಸಿಂಹಗಳು ಆಕಾಶದಲ್ಲಿ ಉಡ್ಡಾಣಮಾಡುತ್ತಿದ್ದವು. ಆ ಭಗವಂತನ ಮುಂದುಗಡೆಯಲ್ಲಿ ಕುಬೇರನು ತನ್ನ ಸುಂದರ ಪುಷ್ಪಕವಿಮಾನದಲ್ಲಿ ಕುಳಿತು ಗುಹ್ಯಕರೊಡನೆ ಸಾಗಿದ್ದನು. ಆ ಭಗವಾನ್ ರುದ್ರನ ಹಿಂದುಗಡೆಯಲ್ಲಿ ಐರಾವತವನ್ನೇರಿ ಇಂದ್ರನು ಸಾಗಿದ್ದನು. ಅನೇಕ ರೋಗಗಳಿಂದ ಸುತ್ತುಗಟ್ಟಿದ ಯಮನು ಮೃತ್ಯುವಿನೊಡನೆ ಭಗವಾನ್ ಶಂಕರನನ್ನು ಅನುಸರಿಸಿ ಸಾಗಿದ್ದನು. ಇದರಂತೆ ಉಳಿದ ಯಾವತ್ತೂ ದೇವತೆಗಳೂ, ಋಷಿಗಳೂ ಶಂಕರನನ್ನು ಸ್ತುತಿಸುತ್ತ ಸಾಗಿದ್ದರು. ಇವರೆಲ್ಲರ ಹಿಂದುಗಡೆಯಲ್ಲಿ ದೇವಸೇನಾಪತಿಯಾದ ಸ್ಕಂದನು ಸಾಗಿದ್ದನು. ವಿವೇಕಶೀಲನೇ, ರುದ್ರನ ಹಿಂದುಗಡೆಯಲ್ಲಿ ಅಥವಾ ಮುಂದುಗಡೆಯಲ್ಲಿ ಸಾಗುವ ಯೋಗವು ಎಲ್ಲರಿಗೂ ಪ್ರಾಪ್ತವಾಗಲಾರದು. ಅದು ಪ್ರಾಪ್ತವಾಗುವದಕ್ಕಾಗಿ ಭಗವಾನ್ ಶಂಕರನನ್ನು ಬಹುಕಾಲ ಪೂಜಿಸಿ ಪುಣ್ಯಬಲವನ್ನು ಸಂಪಾದಿಸಿರಬೇಕಾಗುವದು. ಹೀಗೆ ಸರ್ವಪರಿವಾರದೊಡನೆ ಶಂಕರನು ಸಾಗಿರಲು, ಆ ಭಗವಂತನು ತನ್ನ ಪುತ್ರನಾದ ಸ್ಕಂದನನ್ನು ಕುರಿತು:—"ನೀನು ಆಲಸ್ಯರಹಿತನಾಗಿ ಯಾವಾಗಲೂ ಏಳನೆಯ ವಾಯು ಸ್ಕಂಧವನ್ನು ಸಂರಕ್ಷಿಸುತ್ತಿರು" ಎಂದು ವರಪ್ರದಾನ ಮಾಡಲು, ಸ್ಕಂದನು—ಪ್ರಭೋ, ಅಪ್ಪಣೆಯಂತೆ ನಾನು ಸಪ್ತಮ ವಾಯುಸ್ಕಂಧದ ಸಂರಕ್ಷಣವನ್ನು ಮಾಡುವೆನು; ಆದರೆ ಇನ್ನೂ ಬೇರೆ ಕೆಲಸಗಳನ್ನೇನಾದರೂ ಮಾಡಬೇ

ಕಾ ದ್ದರೆ ಆಜ್ಞಾಪಿಸಬೇಕು, ಎಂದು ಪ್ರಾರ್ಥಿಸಿದನು. ಅದಕ್ಕೆ ಶಂಕರನು—ಎಲೈ ಪುತ್ರಾ ಆಯಾ ಕಾರ್ಯಗಳನ್ನು ಮಾಡಬೇಕಾಗಿದ್ದಾಗೆಲ್ಲ ನನ್ನ ದರ್ಶನಮಾಡಿಕೊಳ್ಳುತ್ತಿರು; ಯಾಕಂದರೆ, ನನ್ನ ದರ್ಶನದಿಂದಲೂ, ಭಕ್ತಿಯಿಂದಲೂ ನಿನ್ನ ಅತಿಶಯವಾದ ಕಲ್ಯಾಣ ವಾಗುವದು, ಎಂದು ಹೇಳಿ ಸ್ಕಂದನನ್ನು ಆಲಿಂಗಿಸಿ ಕಳುಹಿದನು.

ಈ ಮೇರೆಗೆ ಭಗವಾನ್ ಶಂಕರನು ಸ್ಕಂದನನ್ನು ಕಳುಹಲು, ಭಯಂಕರವಾದ ಉತ್ಪಾತಗಳು ಆಗತೊಡಗಿದವು. ವಿವೇಕಶೀಲನೇ, ಆಗ ನಕ್ಷತ್ರಸಹಿತವಾಗಿ ಆಕಾಶವು ಒಮ್ಮೆಲೆ ಪ್ರಜ್ವಲಿತವಾಯಿತು. ಅದರಿಂದ ಯಾವತ್ತು ದೇವತೆಗಳು ಮೋಹಿತರಾಗಿ ಹೋದರು. ಯಾವತ್ತು ವಿಶ್ವವು ಅತ್ಯಂತ ಮೂರ್ಛಿತವಾಯಿತು. ಪೃಥ್ವಿಯು ಕಂಪಿಸಹತ್ತಿ ನಾದಮಾಡತೊಡಗಿತು. ಯಾವತ್ತು ಜಗತ್ತು ಅಂಧಕಾರಮಯವಾಗಿ ಹೋಯಿತು. ಈ ಭಯಂಕರಸ್ಥಿತಿಯನ್ನು ನೋಡಿದಕೂಡಲೆ ಭಗವಾನ್ ಶಂಕರನೂ, ಮಹಾಭಾಗ್ಯಶಾಲಿಯಾದ ಪಾರ್ವತಿಯೂ ಮಹರ್ಷಿಗಳಿಂದಸಹಿತರಾದ ಯಾವತ್ತು ದೇವತೆಗಳೂ ಕ್ಷುಬ್ಧರಾಗಿಹೋದರು. ಅವರಿಗೆ ಏನೂ ತೋಚದಾಯಿತು. ಅಷ್ಟರಲ್ಲಿ ಪರ್ವತಗಳಂತೆ ಅಥವಾ ಮೇಘಗಳಂತೆ ಭಯಂಕರದೇಹಗಳುಳ್ಳ, ಹಾಗು ನಾನಾಪ್ರಕಾರದ ಆಯುಧಗಳನ್ನು ಧರಿಸಿದ ಪ್ರಚಂಡವಾದ ದೈತ್ಯಸೈನ್ಯವು ಕಾಣಿಸತೊಡಗಿತು. ಅಸಂಖ್ಯಾತವಾದ ಆ ದೈತ್ಯಸೈನ್ಯವು ನಾನಾಪ್ರಕಾರದ ಧ್ವನಿಮಾಡುತ್ತ ಯುದ್ಧಕ್ಕಾಗಿ ಭಗವಾನ್ ಶಂಕರನನ್ನೂ, ದೇವಸಮುದಾಯವನ್ನೂ ಮುತ್ತಿತು. ಆ ಪ್ರಚಂಡ ದೈತ್ಯಸೈನ್ಯದ ಶಸ್ತ್ರಾಸ್ತ್ರಪ್ರಹಾರದ ಏರಾಟಗಳಿಂದ ದೇವಸೈನ್ಯವು ಕ್ಷಣದಲ್ಲಿ ಸೋತು ದಿಕ್ಕು ದಿಕ್ಕಿಗೆ ಓಡತೊಡಗಿತು; ಆದರೂ ದೈತ್ಯರು ಅವರನ್ನು ಬೆನ್ನಟ್ಟಿ ಕೊಲ್ಲತೊಡಗಿದರು. ಆಗ ರಕ್ತದ ಕಾಲಿವೆಯು ಹರಿಯಹತ್ತಿ ದೇವಸೈನ್ಯವು ಛಿನ್ನವಿಚ್ಛಿನ್ನವಾಗಿ ಅದಕ್ಕೆ ರಕ್ಷಕರು ಯಾರೂ ಇಲ್ಲದಾಯಿತು. ಆಗ ದೇವೇಂದ್ರನು ಓಡಿಹೋಗುತ್ತಿರುವ ದೇವಸೈನ್ಯವನ್ನು ಕುರಿತು—"ವೀರರೇ, ನಿಮಗೆ ಕಲ್ಯಾಣವಾಗಲಿ! ನೀವು ಭೀತಿಯನ್ನು ಬಿಟ್ಟು ಶಸ್ತ್ರಧಾರಣಮಾಡಿ ಯುದ್ಧಮಾಡಿರಿ; ಪರಾಕ್ರಮವನ್ನು ತೋರಿಸಲು ಉತ್ಸಾಹಪಡಿರಿ. ಅತ್ಯಂತ ದುರಾಚಾರಿಗಳಾದ ಈ ಭಯಂಕರ ದೈತ್ಯರನ್ನು ಗೆಲ್ಲಿರಿ! ನಿಮ್ಮ ಅಂತಃಕರಣಕ್ಕೆ ಯಾವ ಪ್ರಕಾರದ ವ್ಯಥೆಯನ್ನೂ ಮಾಡಿಕೊಳ್ಳಬೇಡಿರಿ. ವೀರರೇ, ನಾನು ನಿಮ್ಮ ಸಂಗಡ ಇರುವೆನು; ಹಿಂದಿರುಗಿ ಬೀಳಿರಿ ದೈತ್ಯಸೈನ್ಯದಮೇಲೆ; ಅಂದರೆ ನಿಮ್ಮ ಕಲ್ಯಾಣವಾಗುವದು; ಎಂದು ಹೇಳಲು, ಇಂದ್ರನ ಈ ಮಾತುಗಳಿಂದ ದೇವತೆಗಳು ಧೈರ್ಯಗೊಂಡು ಅವರು ಇಂದ್ರನನ್ನು ಆಶ್ರಯಿಸಿ ದೈತ್ಯರೊಡನೆ ಯುದ್ಧಮಾಡತೊಡಗಿದರು. ದೇವತೆಗಳ ಆವೇಶದ ಈ ಯುದ್ಧದಿಂದ ದೈತ್ಯರು ಪಟಪಟನೆ ಭೂಮಿಗೆ ಬಿದ್ದು ಪ್ರಾಣಬಿಡಹತ್ತಿದರು. ಮುಂದೆ ಸ್ವಲ್ಪ ಹೊತ್ತಿನಲ್ಲಿ ದೈತ್ಯರು ಪರಾಜಿತರಾಗಲು, ದೇವತೆಗಳು ಗರ್ಜಿಸಿ ಆನಂದದಿಂದ ವಾದ್ಯಘೋಷ ಮಾಡತೊಡಗಿದರು. ರಣಭೂಮಿಯು ಮಾಂಸರಕ್ತಗಳಿಂದ ಕೆಸರಾಗಿ ಹೋಯಿತು! ಅಷ್ಟರಲ್ಲಿ ದೇವಸೈನ್ಯದಮೇಲೆ ಪುನಃ ಸಂಕಟವು ಪ್ರಾಪ್ತವಾಯಿತು; ಯಾಕಂದರೆ ದೈತ್ಯರು ಪುನಃ ಏರಿಬಂದು ದೇವತೆಗಳನ್ನು ಸಂಹರಿಸತೊಡಗಿದರು. ದೈತ್ಯರ

ವಾದ್ಯಧ್ವನಿಗಳೂ, ತಾರಕಾಸುರ, ಮಹಿಷಾಸುರ ಮೊದಲಾದ ದೈತ್ಯಾಧಿಪತಿಗಳ ಸಿಂಹ ನಾದಗಳೂ, ದುಂದುಭಿಗಳಧ್ವನಿಯೂ ದಶದಿಕ್ಕುಗಳನ್ನು ತುಂಬಿಬಿಟ್ಟವು.

ಕಾರ್ತಿಕೇಯ ಕೃತ ತಾರಕಾಸುರವಧ:—ವಿವೇಕಶೀಲನೇ, ಹೀಗಿರ್ಲು ಆಗ ತಾರಕದೈತ್ಯನ ಭಯಂಕರವಾದ ಸೈನ್ಯದೊಳಗಿಂದ ಮಹಾಬಲಾಢ್ಯನೂ, ಬ್ರಹ್ಮ ವರದಿಂದ ದೇವತೆಗಳಿಗೆ ಅಜಿಂಕ್ಯನೂ ಆದ ಮಹಿಷಾಸುರನೆಂಬವನು ಪ್ರಚಂಡವಾದ ಪರ್ವತವನ್ನು ತಕ್ಕೊಂಡು ಹೊರಬಿದ್ದು ಬಂದನು. ಇಂಥ ಭಯಂಕರ ದೈತ್ಯನು ಪರಿವಾರದೊಡನೆ ಯುದ್ಧಕ್ಕೆ ಬರುವದನ್ನು ನೋಡಿ ದೇವತೆಗಳು ಓಡತೊಡಗಿದರು; ಆದರೆ ಮಹಿಷಾಸುರನು ಅವರನ್ನು ಬೆನ್ನಟ್ಟಹೋಗಿ ಅವರ ಮೇಲೆ ಪ್ರಚಂಡವಾದ ಪರ್ವತವನ್ನು ಒಗೆದನು. ಆ ಪ್ರಚಂಡವಾದ ಪರ್ವತವು ಬಿದ್ದದ್ದರಿಂದ ದೇವತೆಗಳ ಹತ್ತು ಸಾವಿರ ಸೈನಿಕರು ಮರಣಹೊಂದಿದರು! ಮಹಿಷಾಸುರನು ಪರಿವಾರದೊಡನೆ ಆವೇಶದಿಂದ ದೇವಸೈನ್ಯದ ಮೇಲೆ ಸಾಗಿಬರಲು, ಇಂದ್ರನೇ ಮೊದಲಾದ ದೇವತೆಗಳು ಆಯುಧಗಳನ್ನೂ, ಧ್ವಜಗಳನ್ನೂ ಚಲ್ಲಿಕೊಟ್ಟು ಓಡತೊಡಗಿದರು. ಆಗ ಆ ದೈತ್ಯನು ಕೋಪಾವಿಷ್ಟನಾಗಿ ರುದ್ರನ ರಥದ ಕಡೆಗೆ ಸಾಗಿಹೋಗಿ ಆತನ ರಥದ ನಗವನ್ನು ಹಿಡಿದನು. ಈ ಮೇರೆಗೆ ಮಹಿಷಾಸುರನು ಕ್ರುದ್ಧನಾಗಿ ರುದ್ರನ ರಥದ ಸಮೀಪಕ್ಕೆ ಬರಲು, ಪೃಥ್ವೀ-ಆಕಾಶಗಳಲ್ಲಿ ಒಂದೇ ಸವನೆ ಶಬ್ದವಾಗತೊಡಗಿತು. ಮಹರ್ಷಿಗಳಿಗೆ ಏನೂ ತೋಚದಾಯಿತು. ದೈತ್ಯರು ತಮಗೆ ನಿಶ್ಚಯವಾಗಿ ಜಯಪ್ರಾಪ್ತಿಯಾಗುವದೆಂದು ಭಯಂಕರವಾಗಿ ಗರ್ಜಿಸತೊಡಗಿದರು. ಆಗ ಭಗವಾನ್ ರುದ್ರನು ಆ ದೈತ್ಯರನ್ನು ಸಂಹರಿಸಹತ್ತಿ, ಮಹಿಷಾಸುರನ ವಧಮಾಡತಕ್ಕ ತನ್ನ ಪುತ್ರನಾದ ಷಣ್ಮುಖನ ಸ್ಮರಣ ಮಾಡಿದನು. ಕೂಡಲೆ ಷಣ್ಮುಖನು ತನ್ನ ಪಾರ್ಷದಗಣ, ಮಾತೃಗಣದೊಡನೆ ಶ್ರೀ ರುದ್ರನ ಸನ್ನಿಧಿಯಲ್ಲಿ ಪ್ರಕಟವಾದನು! ಆಗ ಎಲ್ಲ ದೇವತೆಗಳು ಆ ಪ್ರಭುಸ್ಕಂದನನ್ನು ಹಿಂಬಾಲಿಸಿದರು. ಇತ್ತ ಭಯಂಕರ ಮಹಿಷಾಸುರಾದಿ ದೈತ್ಯರೂ ರುದ್ರನ ರಥವನ್ನು ನೋಡಿ ದೇವತೆಗಳಿಗೆ ತ್ರಾಸವಾಗುವಂತೆಯೂ, ದೈತ್ಯರಿಗೆ ಆನಂದವಾಗುವಂತೆಯೂ ಗರ್ಜಿಸಿದರು. ಆಗ ಕ್ರುದ್ಧನಾದ ತೇಜಸ್ವಿ ಕಾರ್ತಿಕೇಯನು ತನ್ನ ರಥವನ್ನು ದೈತ್ಯರ ಮೇಲೆ ನೂಕಿದನು. ಆತನು ರಕ್ತವರ್ಣದ ವಸ್ತ್ರಗಳನ್ನು ಧರಿಸಿ, ರಕ್ತವರ್ಣದ ಮಾಲೆಗಳಿಂದ ಅಲಂಕೃತನಾಗಿದ್ದನು. ಆತನ ರಥದ ಕುದುರೆಗಳೂ ರಕ್ತವರ್ಣದವೇ ಇದ್ದವು. ಆ ಮಹಾಬಾಹು ಪ್ರಭು ಕಾರ್ತಿಕೇಯನು ಸುವರ್ಣದ ಕವಚವನ್ನು ಧರಿಸಿ, ಸುವರ್ಣ ತುಲ್ಯಕಾಂತಿಯ ರಥದಲ್ಲಿ ಕುಳಿತುಕೊಂಡಿದ್ದನು. ಆತನನ್ನು ನೋಡಿದ ಕೂಡಲೆ ದೈತ್ಯರ ಸೈನ್ಯವು ಭಯದಿಂದ ಓಡಿಹೋಗತೊಡಗಿತು. ವಿವೇಕಶೀಲನೇ, ಆಗ ಮಹಾಬಲಾಢ್ಯನಾದ ಕಾರ್ತಿಕೇಯನು ಮಹಿಷಾಸುರನನ್ನು ಸೀಳಿಬಿಡುವ ತನ್ನ ಶಕ್ತಿಯನ್ನು ಆತನ ಮೇಲೆ ಬಿಟ್ಟನು. ಕೂಡಲೆ ಮಹಿಷಾಸುರನ ಮಸ್ತಕವು ತುಂಡರಿಸಿ ಹೋಗಿ ಆ ಮಹಾದೈತ್ಯನು ಗತಪ್ರಾಣನಾದನು! ಆತನ ಪರ್ವತಪ್ರಾಯವಾದ ಮಸ್ತಕವು ಬೀಳತೊಡಗಲು, ಉತ್ತರಕುರುದೇಶದಲ್ಲಿ ಹೋಗುವ ಹದಿನಾರು ಯೋಜನ ವಿಸ್ತಾರವಾದಮಾರ್ಗವು

ಕಟ್ಟಾಗಿ ಹೋಯಿತು. ಈಗಲೂ ಉತ್ತರಕುರುದೇಶಕ್ಕೆ ಅನಾಯಾಸವಾಗಿ ಹೋಗಲಿಕ್ಕೆ ಬಾರದಾಗಿರುವದು. ಈ ಮೇರೆಗೆ ಮಹಿಷಾಸುರನ ಸಂಹಾರವಾದ ಬಳಿಕ ಆತನ ಎಂಟು ಪದ್ಮ ದೈತ್ಯರ ಸಂಹಾರವನ್ನು ಸ್ಕಂದನೂ, ಅವನ ಪಾರ್ಷದರೂ ಮಾಡಿದರು. ಸ್ಕಂದನ ಶಕ್ತಿಯ ಪ್ರಯೋಗದಿಂದ ಕೋಟ್ಯವಧಿ ಶಕ್ತಿಗಳು ಉತ್ಪನ್ನವಾಗಿ ಅವು ದೈತ್ಯಸೈನ್ಯದ ಸಂಹಾರಮಾಡತೊಡಗಿದವು. ಬಳಿಕ ಮಹಾಪರಾಕ್ರಮಿಯಾದ ತಾರಕನನ್ನೂ, ಆತನ ಬಲಾಢ್ಯವೂ, ವೀರ್ಯಶಾಲಿಯೂ ಆದ ಹತ್ತು ಅಯುತ ಸೈನ್ಯವನ್ನೂ ಸ್ಕಂದನು ಸಂಹರಿಸಿದನು. ಇದರಂತೆ ಮಹಾ ಬಲಾಢ್ಯರಾದ ತ್ರಿಪಾದಾಸುರ, ಹೃದೋದರಾಸುರ ಮೊದಲಾದ ಕ್ರೂರದೈತ್ಯರನ್ನು ಪ್ರಭುಸ್ಕಂದನು ಸಂಹರಿಸಿದನು; ಆಗ ಕುಮಾರನ ಅನುಚರರು ಹರ್ಷನಾದಮಾಡುತ್ತ ಕುಣಿಯತೊಡಗಿದರು. ವಿವೇಕಶೀಲನೇ, ಭಗವಾನ್ ಸ್ಕಂದನ ಆ ಶಕ್ತ್ಯಸ್ತ್ರದ ತೇಜದಿಂದ ಯಾವತ್ತು ತ್ರೈಲೋಕ್ಯವು ತ್ರಸ್ತವಾಯಿತು! ಎಷ್ಟೋ ಸಾವಿರಾರು ದೈತ್ಯರು ಸ್ಕಂದನ ಶಬ್ದದಿಂದಲೇ ದಗ್ಧರಾಗಿ ಹೋದರು! ಎಷ್ಟೋ ಸುರದ್ವೇಷ್ಟಾರರು ಸ್ಕಂದನ ಪತಾಕೆಯ ಗಾಳಿಯಿಂದ ಹಾರಿಹೋಗಿ ಮೃತರಾದರು! ಎಷ್ಟೋ ಜನರು ಸ್ಕಂದನ ಘಂಟಾನಾದದಿಂದ ತ್ರಸ್ತರಾಗಿ ಭೂತಲದಲ್ಲಿ ಬಿದ್ದರು! ಎಷ್ಟೋಜನರು ಶಸ್ತ್ರಗಳಿಂದ ಛಿನ್ನಭಿನ್ನರಾಗಿ ಗತಪ್ರಾಣರಾದರು! ಈ ಮೇರೆಗೆ ಮಹಾಬಲಶಾಲಿಯಾದ ಆ ಕಾರ್ತಿಕೇಯನು ದೇವಶತ್ರುಗಳನ್ನು ಸಮರಾಂಗಣದಲ್ಲಿ ಸಂಹರಿಸಿದನು.

ಈ ಮೇರೆಗೆ ಭಗವಾನ್ ಸ್ಕಂದನು ದೇವಶತ್ರುಗಳನ್ನು ಸಂಹರಿಸಲು, ದೇವತೆಗಳು ಆತನ ಭಜನಮಾಡತೊಡಗಿದರು. ಪ್ರಭು ಸ್ಕಂದನ ಕೃತಿಯಿಂದ ಆ ದೇವತೆಗಳಿಗೆ ಪರಮಹರ್ಷವಾಯಿತು. ಎಲೈ ವಿವೇಕಶೀಲನೇ, ಆ ಮೇಲೆ ದುಂದುಭಿಗಳು, ಶಂಖಗಳು ಧ್ವನಿಮಾಡತೊಡಗಿದವು. ನೂರಾರು ಸಾವಿರಾರು ದೇವಸ್ತ್ರೀಯರು ಆ ಯೋಗಿರಾಜನ ಮೇಲೆ ಪುಷ್ಪವೃಷ್ಟಿಯನ್ನು ಮಾಡತೊಡಗಿದರು. ಆಗ ಸುಗಂಧಯುಕ್ತವಾದ ಪುಣ್ಯವಾಯುವು ಸುಳಿದಾಡಹತ್ತಿತು. ಗಂಧರ್ವರೂ, ಯಜನಮಾಡುವ ಋಷಿಗಳೂ ಆ ಶಿವಪುತ್ರನನ್ನು ಸ್ತುತಿಸತೊಡಗಿದರು. ಯಾರು ಆತನನ್ನು "ಪಿತಾಮಹಪುತ್ರ"ನೆಂತಲೂ, ಯಾರು "ಬ್ರಹ್ಮಯೋನಿ"ಯೆಂತಲೂ, ಯಾರು "ಸರ್ವರ ಅಗ್ರಜ"ನೆಂತಲೂ, ಯಾರು "ಸನತ್ಕುಮಾರ"ನೆಂತಲೂ, ಯಾರು "ಮಹಾದೇವಪುತ್ರ"ನೆಂತಲೂ, ಯಾರು "ಉಮಾಪುತ್ರ"ನೆಂತಲೂ, ಯಾರು "ಅಗ್ನಿಪುತ್ರ"ನೆಂತಲೂ, ಹೀಗೆಯೇ "ಗಂಗಾಪುತ್ರ" "ಕೃತ್ತಿಕಾಪುತ್ರ" ಇತ್ಯಾದಿ ನೂರಾರು ಸಾವಿರಾರು ಹೆಸರುಗಳಿಂದ ಭಗವಾನ್ ಸ್ಕಂದಪ್ರಭುವನ್ನು ಕರೆದರು! ಈ ಮೇರೆಗೆ ದೇವತೆಗಳಿಂದಲೂ, ಮಹರ್ಷಿಗಳಿಂದಲೂ ಸನ್ಮಾನಿತನಾದ ಭಗವಾನ್ ಸ್ಕಂದನು ಶ್ರೀ ಶಂಕರನ ಸನ್ನಿಧಿಗೆ ಹೋಗುತ್ತಿರಲು, ಇಂದ್ರನು ಆತನನ್ನು ಆಲಿಂಗಿಸಿ— ಪ್ರಭು ಸ್ಕಂದನೇ, ನಿನ್ನಿಂದ ಸಂಹರಿಸಲ್ಪಟ್ಟಿದ್ದ ತಾರಕ, ಮಹಿಷ ಮೊದಲಾದ ದೈತ್ಯರು ಬ್ರಹ್ಮನ ವರದಿಂದ ನಮಗೆ ಅಜಿಂಕ್ಯರಾಗಿ ನಮ್ಮನ್ನು ಪರಿಪರಿಯಿಂದ ಕಾಡುತ್ತಿದ್ದರು; ಆದರೆ ಎಲೈ ಮಹಾಬಾಹೋ, ವಿಜಯಿಶ್ರೇಷ್ಠಾ, ದೇವತೆಗಳಾದ ನಮ್ಮನ್ನು ತೃಣಕ್ಕೆ ಸಮಾನವಾಗಿ ಬಗೆಯುತ್ತಿದ್ದ ಆ ದುಷ್ಟರನ್ನು ನೀನು ಸಂಹರಿಸಿ ನಮ್ಮ ತಾಪವನ್ನು ದೂರ

ಮಾಡಿದೆ! ನಿಜವಾಗಿ ನೀನು ಪ್ರಭು ಶ್ರೀ ಶಂಕರನಂತೆ ಸಂಗ್ರಾಮದಲ್ಲಿ ಶತ್ರುಗಳಿಗೆ ಅಜಿಂಕ್ಯನಾಗಿರುವೆ. ಎಲೈ ದೇವನೇ, ನಿನ್ನ ಈ ಕೃತ್ಯವು ಮೊದಲನೆಯದೆಂದು ಪ್ರಸಿದ್ಧವಾಗುವದು. ಇದರಿಂದ ತ್ರೈಲೋಕ್ಯದಲ್ಲಿ ನಿನ್ನ ಕೀರ್ತಿಯಾಗುವದು; ಅದರಂತೆ ದೇವತೆಗಳೂ ನಿನಗೆ ಅಧೀನರಾಗಿ ಇರುವರು, ಎಂದು ನುಡಿದನು. ಬಳಿಕ ಕಾರ್ತಿಕೇಯನು ಭಗವಾನ್ ಶಂಕರನ ಬಳಿಗೆ ಹೋಗಿ ನಮಸ್ಕರಿಸಿ ನಿಂತುಕೊಳ್ಳಲು, ಕಿರಣಗಳನ್ನು ಹರಹಿದ ಸೂರ್ಯನಂತೆ ಆ ಕುಮಾರನು ತೋರಹತ್ತಿದನು. ಆಗ ಭಗವಾನ್ ಶಂಕರನು ಯಾವತ್ತು ದೇವತೆಗಳನ್ನು ಕುರಿತು—"ನೀವು ಸ್ಕಂದನನ್ನು ನನ್ನಂತೆ ತಿಳಿಯುತ್ತ ಹೋಗಿರಿ" ಎಂದು ಹೇಳಿ ಎಲ್ಲರನ್ನು ಅವರವರ ಸ್ಥಾನಗಳಿಗೆ ಕಳಿಸಿ, ತಾನು ಭದ್ರವಟದ ಕಡೆಗೆ ಹೋದನು. ಎಲೈ ವಿವೇಕಶೀಲನೇ, ಮಹರ್ಷಿಗಳು ಬಹುಮಾನಿಸುತ್ತಿರಲು, ಈ ಮೇರೆಗೆ ಭಗವಾನ್ ಸ್ಕಂದನು ಒಂದೇ ದಿವಸದಲ್ಲಿ ಯಾವತ್ತು ದೈತ್ಯಗಣವನ್ನು ಸಂಹರಿಸಿ ತ್ರೈಲೋಕ್ಯಗಳನ್ನು ಹಸ್ತಗತ ಮಾಡಿಕೊಂಡನು. ಶ್ರೀ ಕಾರ್ತಿಕೇಯನ ಈ ಚರಿತ್ರವನ್ನು ಪಠಿಸುವವರಿಗೆ ಇಹದಲ್ಲಿ ಪುಷ್ಟಿಯು ಪ್ರಾಪ್ತವಾಗಿ, ಪರದಲ್ಲಿ ಸ್ಕಂದಲೋಕವು ದೊರೆಯುವದು.

## ೨ ತ್ರಿಪುರ ಸಂಹಾರ.

ಈಮೇರೆಗೆ ಸಿದ್ಧಮುನೀಶ್ವರನು ಹೇಳಿದ ಸ್ಕಂದಚರಿತ್ರವನ್ನು ಕೇಳಿ ಶಿಷ್ಯರು ಆನಂದಪಡುತ್ತಿರಲು, ಮುನೀಶ್ವರನು ಅವರನ್ನು ಕುರಿತು—ಎಲೈ ವಿವೇಕಶೀಲರಾದ ಶಿಷ್ಯರೇ, ಪುರುಷನು ತನ್ನ ಹೆಂಡತಿಯ ಹೊಟ್ಟೆಯಲ್ಲಿ ಮಗನ ರೂಪದಿಂದ ತಾನೇ ಹುಟ್ಟುವನೆಂದು ಶ್ರುತಿಯು ಹೇಳುವದು; ಆದ್ದರಿಂದ ಮಹಾತ್ಮರಾದ ಧರ್ಮಶೀಲರು ಒಂದು ಸಂತತಿಯಾದಬಳಿಕ ಹೆಂಡತಿಯನ್ನು ತಾಯಿಯಂತೆ ನಡೆಸಿಕೊಳ್ಳುವದುಂಟು. ಒಟ್ಟಿಗೆ ತಂದೆಯೇ ಮಗನರೂಪದಿಂದ ಹುಟ್ಟುವದರಿಂದ, ತಂದೆಯ ಗುಣಗಳೇ ಮಕ್ಕಳಲ್ಲಿ ಬರುವ ಸಂಭವವು ವಿಶೇಷವಾಗಿರುವದು; ಯಾಕಂದರೆ ಭೂಮಿಗಿಂತ ಬೀಜದ ಯೋಗ್ಯತೆಯು ಹೆಚ್ಚಿನದಿರುವದು. ಅದರಂತೆ ದುಷ್ಟ ತಾರಕನ ಮಕ್ಕಳಾದರೂ ದುಷ್ಟರೇ ಆದದ್ದರಲ್ಲಿ ಆಶ್ಚರ್ಯವೇನು? ಭಗವಾನ್ ಷಣ್ಮುಖನಿಂದ ತಮ್ಮ ತಂದೆಯು ಸಂಹಾರವಾದದ್ದಕ್ಕಾಗಿ ತಾರಕನ ಮಕ್ಕಳು ದೇವತೆಗಳ ಮೇಲೆ ಬಹಳ ಸಿಟ್ಟಾದರು. ತಂದೆಯ ಮರಣದ ಸೇಡು ತೀರಿಸಿಕೊಳ್ಳುವ ಬುದ್ಧಿಯು ಅವರಲ್ಲಿ ಪ್ರಬಲವಾಯಿತು. ಆ ತಾರಕನ ಮಕ್ಕಳು ಮೂವರಿದ್ದರು. ಒಬ್ಬನ ಹೆಸರು ತಾರಾಕ್ಷನು, ಇನ್ನೊಬ್ಬನ ಹೆಸರು ಕಮಲಾಕ್ಷನು, ಮತ್ತೊಬ್ಬನ ಹೆಸರು ವಿದ್ಯುನ್ಮಾಲಿಯು. ಈ ಮೂವರು ಮಕ್ಕಳೂ ತಂದೆಯಂತೆ ಘೋರ ತಪಶ್ಚರ್ಯಮಾಡಿ ತಮ್ಮ ದೇಹಗಳನ್ನು ಕ್ಷೀಣಮಾಡಿಕೊಂಡರು. ವಿವೇಕಶೀಲಾ, ಆ ದೈತ್ಯರು ತಪೋನುಷ್ಠಾನದಲ್ಲಿ ಮಾಡಿದ ಬಾಹ್ಯೇಂದ್ರಿಯ ಜಯಕ್ಕೂ, ಚಿತ್ತದ ಏಕಾಗ್ರತೆಗೂ, ಅಂತರ್ಬಾಹ್ಯಶುದ್ಧಿಗೂ, ಸಮಾಧಿಯೋಗಕ್ಕೂ ಮೆಚ್ಚಿ ಪಿತಾಮಹ ಬ್ರಹ್ಮದೇವನು ಅವರಿಗೆ ವರಕೊಡಲು ಉದ್ಯುಕ್ತನಾದನು. ಆಗ ತಾರಕಾದಿ

ಮೂವರು ಅಸುರಪುತ್ರರೂ ಬ್ರಹ್ಮದೇವನನ್ನು ಕುರಿತು—"ದೇವೋತ್ತಮನೇ, ನಮಗೆ ಯಾವ ಪ್ರಾಣಿಗಳಿಂದಲೂ ಎಂದೂ ಮರಣವುಂಟಾಗದಂತೆ ವರಪ್ರದಾನಮಾಡು" ಎಂದು ಕೇಳಿಕೊಳ್ಳಲು, ಲೋಕನಾಯಕನಾದ ಪ್ರಭು ಬ್ರಹ್ಮದೇವನು ಕೂಡಲೆ ಅವರಿಗೆ—ಅಸುರಪುತ್ರರೇ, ಯಾವ ಪ್ರಾಣಿಗಳಿಂದಲೂ ಮರಣವು ಒದಗಬಾರದೆಂದು ಕೇಳಿಕೊಳ್ಳುವದು ಅನುಚಿತವಾಗಿರುವದು. ಯಾಕಂದರೆ ಜಗತ್ತಿನಲ್ಲಿ ಸರ್ವಾಮರತ್ವವು ಯಾರಿಗೂ ಇರುವದಿಲ್ಲವು; ಆದ್ದರಿಂದ ನೀವು ಇಲ್ಲಿಂದ ಹೊರಟು ಹೋಗಿರಿ-ಅಥವಾ ನಿಮಗೆ ಸೇರಿಕೆಯಾದ ಬೇರೆ ವರಗಳನ್ನೇನಾದರೂ ಬೇಡಿಕೊಳ್ಳುವದಿದ್ದರೆ ಬೇಡಿಕೊಳ್ಳಿರಿ, ಎಂದು ಸ್ಪಷ್ಟವಾಗಿ ಹೇಳಿದನು. ಆಗ ಆ ಮೂವರು ಅಸುರಪುತ್ರರು ತಮ್ಮೊಳಗೆ ಬಹಳಹೊತ್ತು ಆಲೋಚಿಸಿ ಮನಸ್ಸಿನ ನಿಶ್ಚಯಮಾಡಿಕೊಂಡು ಪುನಃ ಬ್ರಹ್ಮದೇವನ ಬಳಿಗೆ ಹೋಗಿ ಒಳ್ಳೇ ವಿನಯದಿಂದ ಆತನನ್ನು ಕುರಿತು—ಎಲೈ ಪಿತಾಮಹನೇ, ಮೂರು ಪುರಗಳ ಆಶ್ರಯಮಾಡಿ ನಿನ್ನ ಕೃಪೆಯಿಂದ ಈ ಲೋಕದಲ್ಲಿ ಯಾವತ್ತು ಭೂಮಂಡಲದ ಆಕ್ರಮಣಮಾಡಲಿಕ್ಕೆ ನಮಗೆ ಬರುವಂತೆಯೂ, ಒಂದು ಸಹಸ್ರ ವರ್ಷಗಳವರೆಗೆ ನಾವು ಇದರಂತೆ ಈಭೂಮಂಡಲದ ಆಕ್ರಮಣಮಾಡಿದಬಳಿಕ ನಮ್ಮ ಈ ಮೂರೂ ಪುರಗಳು ಒಟ್ಟುಗೂಡಿದಾಗ, ಆ ಒಟ್ಟುಗೂಡಿದ ಪುರಗಳನ್ನು ಒಂದು ಬಾಣದಿಂದ ಭಗ್ನಮಾಡುವ ದೇವಾಧಿದೇವನಿಂದ ಮಾತ್ರ ನಮಗೆ ಮೃತ್ಯುವು ಒದಗುವಂತೆಯೂ ನಮಗೆ ವರಪ್ರದಾನ ಮಾಡು, ಎಂದು ಬೇಡಿಕೊಂಡರು.

ವಿವೇಕಶೀಲನೇ, ಅಸುರಪುತ್ರರ ಈ ಪ್ರಾರ್ಥನೆಯನ್ನು ಬ್ರಹ್ಮದೇವನು ಕೂಡಲೆ ಮನ್ನಿಸಿ "ನಿಮ್ಮ ಇಚ್ಛೆಯು ಪೂರ್ಣವಾಗುವದು" ಎಂದು ವರಪ್ರದಾನ ಮಾಡಿ, ಆತನು ಸ್ವರ್ಗಕ್ಕೆ ಹೊರಟುಹೋದನು. ಇತ್ತ ತಾರಾಕ್ಷಾದಿ ದೈತ್ಯಸುತರಿಗೆ ಪರಮಾನಂದವಾಯಿತು. ಅವರು ಮುಂದಿನ ಕಾರ್ಯಕ್ಕಾಗಿ ಪರಸ್ಪರರಲ್ಲಿ ಚರ್ಚಿಸಿ ಮಹಾ ಅಸುರನಾದ ಮಯನಿಗೆ ಮೂರು ಪುರಗಳನ್ನು ನಿರ್ಮಾಣ ಮಾಡುವ ಕೆಲಸವನ್ನು ಒಪ್ಪಿಸಿದರು. ಮಹಾಬುದ್ಧಿಶಾಲಿಯಾದ ಆ ಮಯಾಸುರನೆಂದರೆ ಕೇವಲ ವಿಶ್ವಕರ್ಮನೂ, ದೈತ್ಯದಾನವರಿಗೆ ಅತ್ಯಂತ ವಂದನೀಯನೂ, ಆರಂಭಿಸಿದ ಕಾರ್ಯದಲ್ಲಿ ಸದಾ ಅವಿಶ್ರಾಂತನಾಗಿ ಶ್ರಮಪಡುವವನೂ ಇದ್ದದ್ದರಿಂದ, ಉದ್ದಿಷ್ಟಹೇತುವಿನ ಸಿದ್ಧಿಗಾಗಿ ಘೋರ ತಪಶ್ಚರ್ಯವನ್ನು ಮಾಡಿ ಅದರ ಬಲದಿಂದ ಅವನು ಮೂರು ಪುರಗಳನ್ನು ರಚಿಸಿದನು. ಆ ಮೂರರಲ್ಲಿ ಒಂದು ಪುರವು ಬಂಗಾರದ್ದು, ಮತ್ತೊಂದು ಬೆಳ್ಳಿಯದು, ಇನ್ನೊಂದು ಕಬ್ಬಿಣದ್ದು ಇದ್ದವು. ಬಂಗಾರದ ಪುರವು ಸ್ವರ್ಗದಲ್ಲಿರುತ್ತಿದ್ದು, ಅದರ ಅಧಿಪತಿಯು ಮಹಾತ್ಮನಾದ ತಾರಾಕ್ಷನಾಗಿದ್ದನು. ಬೆಳ್ಳಿಯಪುರವು ಅಂತರಿಕ್ಷದಲ್ಲಿರುತ್ತಿದ್ದು, ಅದರ ಅಧಿಪತಿಯು ಕಮಲಾಕ್ಷನಾಗಿದ್ದನು. ಕಬ್ಬಿಣದ ಪುರವು ಪೃಥ್ವಿಯಲ್ಲಿರುತ್ತಿದ್ದು, ಅದರ ಅಧಿಪತಿಯು ವಿದ್ಯುನ್ಮಾಲಿಯಾಗಿದ್ದನು. ಈ ಮೂರೂ ಪುರಗಳ ರಚನೆಯು ಅಪೂರ್ವವಾದದ್ದಿದ್ದು, ಪ್ರತಿಒಂದು ಪುರವು ಚಕ್ರದ ಮೇಲೆಯೇ ಕೂಡಿಸಿದ್ದರಿಂದ ಆ ಪುರಗಳು ಯಥೇಚ್ಛವಾಗಿ ಸಂಚರಿಸುತ್ತಿದ್ದವು! ವಿವೇಕಶೀಲನೇ, ಆ ಪ್ರತಿ ಒಂದು ಪುರದ ಉದ್ದಳತೆಯೂ, ಅಗಲಳೆ

ತೆಯೂ ನೂರು ನೂರು ಯೋಜನವಿದ್ದು, ಆ ಪುರಗಳಲ್ಲಿ ಮನೆಗಳೂ, ವಾಡೆಗಳೂ, ಪ್ರಾಕಾರಗಳೂ, ತೋರಣಗಳೂ ಹಲವು ಇದ್ದವು. ಹೀಗೆ ಮಂದಿರಗಳು ಅಲ್ಲಿ ಬಹಳ ದಟ್ಟವಾಗಿದ್ದರೂ, ವಿಸ್ತೃತ ಮಾರ್ಗಗಳ ಮೂಲಕ ಬೈಲುಪ್ರದೇಶಗಳೂ ಅಲ್ಲಿ ವಿಪುಲ ವಾಗಿದ್ದವು. ಅವುಗಳಲ್ಲಿ ಬಹುವಿಧವಾದ ಪ್ರಾಸಾದಗಳೂ, ಅಗಸೆಗಳೂ ಹಲವು ಇದ್ದದ್ದ ರಿಂದ ಆ ಪುರಗಳು ಬಹು ರಮ್ಯವಾಗಿ ಶೋಭಿಸುತ್ತಿದ್ದವು. ವಿವೇಕಶೀಲನೇ, ಈ ಮೇರೆಗೆ ಪುರಪ್ರಾಪ್ತಿಯಿಂದ ಆ ಮೂವರು ದೈತ್ಯರೂ ಪ್ರಬಲರಾಗಿ ಅಸ್ತ್ರವೀರ್ಯದಿಂದ ಸರ್ವ ತ್ರೈಲೋಕ್ಯಗಳನ್ನು ಆಕ್ರಮಿಸಿ ಉಬ್ಬಿ ಮದಾಂಧರಾಗಿ—"ಪ್ರಜಾಪತಿ ಬ್ರಹ್ಮದೇವನು ಯಾವನವನು?" ಎಂದು ಅನ್ನ ಹತ್ತಿದರು! ಹೀಗೆ ಆ ದೈತ್ಯರ ಪ್ರತಾಪವು ನಾಲ್ಕೂ ಕಡೆಗೆ ಹಬ್ಬಲು ಈ ಮೊದಲೆ ದೇವತೆಗಳಿಂದ ಪರಾಜಿತರಾಗಿದ್ದ ಕೋಟ್ಯವಧಿ ದೈತ್ಯ-ದಾನವರು ಪುನಃ ಮದೋನ್ಮತ್ತರಾಗಿ ನಾಲ್ಕೂ ಕಡೆಯಿಂದ ಇವರನ್ನು ಬಂದು ಕೂಡಿ ಕೊಂಡು ಮಹದೈಶ್ವರ್ಯದ ಇಚ್ಛೆಯಿಂದ ದುರ್ಗಮವಾದ ತ್ರಿಪುರಗಳಲ್ಲಿ ವಾಸಮಾಡಿ ದರು. ಈ ಮೇರೆಗೆ ಮಯನಿರ್ಮಿತವಾದ ತ್ರಿಪುರಗಳಲ್ಲಿ ಎಲ್ಲ ಕಡೆಗೆ ದೈತ್ಯದಾನವರ ದಟ್ಟಣೆಯಾಗಲು, ಅವರೆಲ್ಲರ ಯಥಾಸ್ಥಿತ ವ್ಯವಸ್ಥೆಯನ್ನೂ, ದಿನಚರ್ಯವನ್ನೂ ಮಯಾಸುರನು ಸಾಗಿಸುತ್ತಿದ್ದನು. ಆ ಎಲ್ಲ ಅಸುರರು ಮಯಾಸುರನ ಆಶ್ರಯದಿಂದಲೂ, ಆಲೋಚನೆಯಿಂದಲೂ ನಿರ್ಭಯವಾಗಿ ತಮ್ಮ ವ್ಯವಸಾಯಗಳನ್ನು ಮಾಡುತ್ತಿದ್ದರು. ತ್ರಿಪುರಗಳೊಳಗಿರುವ ಅಸುರರು ಇಚ್ಛಿಸಿದ್ದನ್ನೆಲ್ಲ ಮಯಾಸುರನು ತನ್ನ ಮಾಯೆಯಿಂದ ಒದಗಿಸಿಕೊಡುತ್ತಿದ್ದನು.

ವಿವೇಕಶೀಲನೇ, ತಾರಾಕ್ಷನಿಗೆ ಹರಿಯೆಂಬ ಒಬ್ಬ ಬಲಿಷ್ಠ ಪುತ್ರನಿದ್ದನು. ಆತನು ಘೋರತಪಶ್ಚರ್ಯ ಮಾಡಿ ಬ್ರಹ್ಮನನ್ನು ಒಲಿಸಿಕೊಂಡು, ತನ್ನ ಸುವರ್ಣಪುರದಲ್ಲಿ ಒಂದು ಅಮೃತದ ಹೊಂಡವು ನಿರ್ಮಾಣವಾಗಬೇಕೆಂದು ಬೇಡಿಕೊಂಡು ಅದನ್ನು ಸಂಪಾದಿಸಿದನು. ಶಸ್ತ್ರಾಸ್ತ್ರಗಳಿಂದ ಹತರಾದ ದೈತ್ಯ-ದಾನವರನ್ನು ಆ ಅಮೃತದ ಹೊಂಡದಲ್ಲಿ ಚಲ್ಲಿಕೊಟ್ಟರೆ, ಅವರ ಸಂಜೀವನವಾಗಿ ಅವರು ಮೊದಲಿನಂತೆ ಆಗಬೇಕೆಂದು ಬ್ರಹ್ಮನ ವರವು ಆಗಿತ್ತು. ಇದರಿಂದ ಯುದ್ಧದಲ್ಲಿ ಎಷ್ಟು ಜನ ದೈತ್ಯ-ದಾನವರು ಮರಣ ಹೊಂದಿದರೂ ಅವರನ್ನು ಆ ಹೊಂಡದಲ್ಲಿ ಚಲ್ಲಿಕೊಟ್ಟಕೂಡಲೆ ಅವರು ಮೃತ್ಯುಸಮಯದಲ್ಲಿ ಇದ್ದಹಾಗೆಯೇ ಆಗಿ ಪುನಃ ಯುದ್ಧಕ್ಕೆ ಸಿದ್ಧವಾಗುತ್ತಿದ್ದರು. ಹೀಗಾಗಿ ದೈತ್ಯ-ದಾನವರ ಬಲವು ವಿಲಕ್ಷಣವಾಗಿ ಹೆಚ್ಚಿ, ಅವರು ಜಗತ್ತನ್ನು ಪೀಡಿಸತೊಡಗಿದರು. ಈ ಮೇರೆಗೆ ದೈತ್ಯರು ತಪಸ್ಸಿದ್ಧಿಯಿಂದ ಸಂಪನ್ನರಾಗಲು, ಅವರ ಕ್ಷಯವಾಗದೆ ಹೋದದ್ದರಿಂದ ಇಂದ್ರಾದಿ ದೇವತೆಗಳ ಭಯವು ಹೆಚ್ಚಾಗಹತ್ತಿತು. ಅವರು ದೈತ್ಯರ ಐಶ್ವರ್ಯವೃದ್ಧಿಯನ್ನು ನೋಡಿ ಸಂತಾಪಗೊಳ್ಳಹತ್ತಿದರು. ತ್ರಿಪುರಗಳ ಮೇಲೆ ಮಾಡಿದ ತನ್ನ ವಜ್ರಾಯುಧದ ಪ್ರಯೋಗವು ವ್ಯರ್ಥವಾಗಲು, ಇಂದ್ರನು ನಿರಾಶೆಪಟ್ಟು ಮಹಾವಿಷ್ಣುವಿಗೆ ಶರಣುಗೋಗಲು, ಆತನು ಇದಕ್ಕೆ ಏನು ಉಪಾಯಮಾಡಬೇಕೆಂದು ವಿಚಾರಿಸಹತ್ತಿದನು ವಿಚಾರಾಂತ್ಯದಲ್ಲಿ ವಿಷ್ಣುವಿಗೆ—"ಶಂಕರ ಭಕ್ತರು ದುರಾಚಾರಿಗಳ

ದ್ದರೂ, ಶಿವಭಕ್ತಿಯು ಮೂಲಕ ಅವರು ಪವಿತ್ರರಾಗುವರು. ಅದರಲ್ಲಿ ತ್ರಿಪುರದೊಳಗಿನ ದೈತ್ಯರಂತು ಶಿವಭಕ್ತರಿರುವರಲ್ಲದೆ ಧರ್ಮಿಷ್ಠರಿರುವರು; ಆದ್ದರಿಂದ ಶಂಕರನ ಪ್ರಸಾದದಹೊರತು ಅವರ ನಾಶವಾಗಲಾರದು. ಭಗವಾನ್ ಶಂಕರನ ಒಂದು ಅಂಶದ ಪೂಜೆಯಿಂದ ದೇವತೆಗಳಿಗೆ ದೇವತ್ವವು ಪ್ರಾಪ್ತವಾಗಿರುವದು. ಆ ಶಂಕರನ ಕೃಪೆಯು ಹೊರತು ನನ್ನ, ಅಥವಾ ಬ್ರಹ್ಮದೇವನ ಆಟವು ಏನೂ ನಡೆಯುಲಾರದು." ಎಂಬ ಮಾತು ಗೊತ್ತಾಗಿ, ಆತನು ಶಿವನನ್ನು ಕುರಿತು ಯಜ್ಞಮಾಡಿದನು. ಆಗ ಭೂತಗಣಗಳ ಹಿಂಡಿಗೆ ಹಿಂಡು ವಿಷ್ಣುವಿನಮುಂದೆ ಬಂದು ನಿಂತುಕೊಂಡಿತು. ಅವುಗಳ ವೇಷವು ವಿಚಿತ್ರತರವಾಗಿದ್ದು, ನಾನಾಪ್ರಕಾರದ ಶಸ್ತ್ರಗಳನ್ನು ಧರಿಸಿದ ಅವರು ಕಾಲಾಗ್ನಿಯಂತೆ ಉಗ್ರವಾಗಿ ತೋರುತ್ತಿದ್ದರು. ಆಗ ಭಗವಾನ್ ವಿಷ್ಣುವು ಆ ಭೂತಗಣವನ್ನು ಕುರಿತು—"ನೀವು ತ್ರಿಪುರಗಳಿಗೆ ಹೋಗಿ ಅವುಗಳ ನಾಶಮಾಡಿ ಸುಟ್ಟುಬಿಟ್ಟು, ಹೋದ ಹಾಗೆ ತಿರುಗಿ ಬರುವವರಾಗಿರಿ" ಎಂದು ಅಜ್ಞಾಪಿಸಲು, ಆಜ್ಞೆಯಂತೆ ಭೂತಗಣವು ತ್ರಿಪುರವನ್ನುಪ್ರವೇಶಿಸಿತು; ಆದರೆ ದೀಪದಮೇಲೆ ಬೀಳುವ ಪತಂಗಹುಳದಂತೆ ಅವುಗಳ ಪರಿಣಾಮವಾಗಲು, ದೈತ್ಯ—ದಾನವರು ಆನಂದದಿಂದ ಕುಣಿದಾಡಹತ್ತಿದರು. ಹೀಗೆ ತಮ್ಮ ಪರಾಜಯವಾದದ್ದರಿಂದ ಪುನಃ ದೇವತೆಗಳು ವಿಷ್ಣುವಿಗೆ ಶರಣುಬಂದರು. ಆಗ ದೇವತೆಗಳ ಈ ಕಾರ್ಯವನ್ನು ಹ್ಯಾಗೆ ಸಿದ್ಧಿಗೊಯ್ಯಬೇಕೆಂದು ಆ ಪುರುಷೋತ್ತಮನು ಚಿಂತಿಸತೊಡಗಿದನು. ವಿಚಾರಾಂತ್ಯದಲ್ಲಿ ಆತನು—"ಅಧರ್ಮದ ಹೊರತು ಪಾಪವಾಗುವದಿಲ್ಲ; ಪಾಪದ ಹೊರತು ಯಾರ ನಾಶವೂ ಆಗುವದಿಲ್ಲ; ಆದ್ದರಿಂದ ತ್ರಿಪುರದೊಳಗಿನ ದೈತ್ಯರನ್ನು ಅಧರ್ಮಿಷ್ಠರನ್ನಾಗಿ ಮಾಡಬೇಕು." ಎಂದು ಯೋಚಿಸಿ ತನ್ನ ಮಾಯೆಯಿಂದ ಒಬ್ಬ ಮಾಯಾವೀ ಪುರುಷನನ್ನು ಉತ್ಪನ್ನಮಾಡಿ, ಯಾವತ್ತು ಧರ್ಮಗಳಿಗೆ ವಿಘ್ನವನ್ನುಂಟುಮಾಡುವಂಥ ಸಮ್ಮೋಹನ ಶಾಸ್ತ್ರವನ್ನು ಆತನಿಗೆ ಕಲಿಸಿದನು. ವಿಷ್ಣುವಿನ ಆಜ್ಞೆಯಂತೆ ನಾರದನು ಆ ಮಾಯಾವೀ ಪುರುಷನ ಶಿಷ್ಯನಾದನು. ಆ ಇಬ್ಬರು ಗುರುಶಿಷ್ಯರು ವಿಷ್ಣುವಿನ ಆಜ್ಞೆಯಂತೆ ತ್ರಿಪುರಗಳಿಗೆ ಹೋಗಿ ನಾಸ್ತಿಕಧರ್ಮವನ್ನು ಉಪದೇಶಿಸಹತ್ತಿದರು. "ಈ ಜಗತ್ತಿನಲ್ಲಿ ಕಣ್ಣಿಗೆ ಕಾಣಿಸುವದಷ್ಟೇ ಸತ್ಯವು; ಮೋಕ್ಷವೂ, ನರಕವೂ ಇಲ್ಲಿಯೇ ಇರುವವು. ಇವುಗಳ ಆಚೆಗೆ ಏನೂ ಇಲ್ಲವು." ಇತ್ಯಾದಿ ಸಿದ್ಧಾಂತಗಳು ಈ ನಾಸ್ತಿಕಮತದ ತತ್ವಗಳಾಗಿದ್ದವು. ಆ ಮಾಯಾವಿಪುರುಷನು ತನ್ನ ಶಿಷ್ಯನ ಸಹಾಯದಿಂದ ತ್ರಿಪುರಗಳಲ್ಲಿ ಪಾಖಂಡಮತದ ಪ್ರಸಾರಮಾಡತೊಡಗಿದನು. ಮೊದಲು ಅವರ ಹೆಂಗಸರ ಮನಸ್ಸನ್ನು ಒಲಿಸಿಕೊಂಡು ಅವರಲ್ಲಿ ತಮ್ಮ ಧರ್ಮಪ್ರಸಾರಮಾಡಿದನು. ಬರಬರುತ್ತ ಆತನ ಧರ್ಮಪ್ರಸಾರವಾಗುತ್ತ ಶಿಷ್ಯಪರಿವಾರವು ಹೆಚ್ಚಿತು. ಶ್ರೌತ—ಸ್ಮಾರ್ತಕರ್ಮಗಳು ನಿಂತುಹೋಗಿ, ದೈತ್ಯರು ಪರಮೇಶ್ವರ—ಶಂಕರನ ಭಕ್ತಿಯನ್ನು ಬಿಟ್ಟುಬಿಟ್ಟರು. ಸ್ತ್ರೀಯರ ಪಾತಿವ್ರತ್ಯದ ಭಂಗವಾಗತೊಡಗಿತು. ಈ ಮೇರೆಗೆ ತ್ರಿಪುರಗಳಲ್ಲಿಸ್ತ್ರಿಪುರುಷರು ಧರ್ಮಭ್ರಷ್ಟರಾಗಿ ಅವರಲ್ಲಿ ಪಾಖಂಡ ಧರ್ಮದ ಸ್ಥಾಪನೆಯಾದಬಳಿಕ ಭಗವಾನ್ ವಿಷ್ಣುವು ತಪಸ್ಸಿನಿಂದಲೂ, ರುದ್ರಜಪದಿಂದಲೂ

ಶಂಕರನನ್ನು ಸಂತುಷ್ಟನನ್ನಾಗಿ ಮಾಡಿಕೊಂಡನು. ಇದರಂತೆ ಯಾವತ್ತೂ ದೇವತೆಗಳೂ ಶಂಕರನ ಸ್ತೋತ್ರಮಾಡಿದರು. ಈ ಮಧ್ಯದಲ್ಲಿ ತ್ರಿಪುರದೊಳಗಿನ ದೈತ್ಯ-ದಾನವರು ಧರ್ಮಭ್ರಷ್ಟರಾಗಿರುವಾಗ ಮಾಯೆಯಿಂಧ ವಿಷ್ಣು-ಬ್ರಹ್ಮರು ಆಕಳ ಹಾಗು ಕರದರೂಪವನ್ನು ಹೊಂದಿ ಸುವರ್ಣಪುರಕ್ಕೆ ಹೋಗಿ ಅಲ್ಲಿಯ ಅಮೃತದ ಹೊಂಡದೊಳಗಿನ ಅಮೃತವನ್ನೆಲ್ಲ ಕುಡಿದುಬಿಟ್ಟರು! ಹೀಗೆ ದೇವತೆಗಳು ತ್ರಿಪುರದ ದೈತ್ಯ-ದಾನವರನ್ನು ಧರ್ಮಭ್ರಷ್ಟರನ್ನಾಗಿಮಾಡಿ, ಅಮೃತದ ಹೊಂಡದೊಳಗಿನ ಅಮೃತವನ್ನು ಕುಡಿದು, ತಪಸ್ಸಿನಿಂದ ಭಗವಾನ್ ಶಂಕರನನ್ನು ಒಲಿಸಿಕೊಳ್ಳಲು, ಆ ಭಕ್ತಪರಾಧೀನನಾದ ಉಮಾಧವನು ಅವರಿಗೆ ಪ್ರತ್ಯಕ್ಷನಾದನು. ಆಗ ದೇವತೆಗಳೂ, ಬ್ರಹ್ಮಋಷಿಗಳೂ ಸಾಷ್ಟಾಂಗವೆರಗಿ ಕೈಜೋಡಿಸಿ ಆ ಭಗವಂತನನ್ನು ಕುರಿತು—ಹೇ ಪ್ರಭೋ, ದೇವಾಧಿದೇವಾ ಶಂಭೋ, ನಿನ್ನ ಮಂಗಲಕಾರಕ ಲೋಕೋತ್ತರರೂಪವನ್ನು ನೋಡಿ ನಮ್ಮ ಚಿತ್ತವೃತ್ತಿಗಳು ಸ್ತಬ್ಧವಾಗಿರುವವು. ಸರ್ವವಿಶ್ವವು ಪರಮಾತ್ಮನಾದ ನಿನ್ನೊಬ್ಬನ ನಾನಾವಿಧವಾದ ಭಾಸಮಾನ ರೂಪವೆಂದು ನಾವು ಮನಗಂಡೆವು. ನಾವು ನಮ್ಮನಮ್ಮ ಮನಸ್ಸಿನಲ್ಲಿ ಕಲ್ಪಿಸಿಕೊಂಡಿರುವ ಭಗವತ್ಸ್ವರೂಪಗಳೆಲ್ಲ ನಿನ್ನಲ್ಲಿಯೇ ಅಡಕವಾಗಿರುವವೆಂಬದರ ಅನುಭವವು ಇಂದು ನಮಗೆ ಆಯಿತು- ಪ್ರಭೋ, ಜಗತ್ಪತಿಯಾದ ಶಂಕರನು ನೀನು, ಸರ್ವಭೂತಮಯನಿರುವೆಯೆಂಬಮಾತು ನಮಗೆ ಮನದಟ್ಟಾಗಿ ಗೊತ್ತಾಯಿತು. ನೀನು ಧನುಷ್ಯವನ್ನೂ, ವನಮಾಲೆಯನ್ನೂ ಧರಿಸಿರುವೆ. ದಕ್ಷಪ್ರಜಾಪತಿಯ ಯಜ್ಞವನ್ನು ನೀನೇ ವಿಧ್ವಂಸಮಾಡಿದೆ. ಯಾವತ್ತು ಪ್ರಜಾಪತಿಗಳು ನಿನ್ನ ಸ್ತೋತ್ರಮಾಡುವರು. ನೀನು ಸ್ತುತ್ಯನಾಗಿದ್ದು, ಈ ವರೆಗೆ ಬಹುಜನರು ನಿನ್ನ ಸ್ತೋತ್ರಮಾಡಿರುವರು, ಈಗ ಸ್ತೋತ್ರ ಮಾಡುತ್ತಿರುವರು. ನಿನ್ನ ವರ್ಣವು ಪಿಂಗಟವೂ, ಆರಕ್ತವೂ ಆಗಿದ್ದು, ನೀನು ಬಹು ಉಗ್ರನಾಗಿರುವೆ. ನಿನ್ನ ಕಂಠವು ನೀಲವರ್ಣದಾಗಿದ್ದು, ನೀನು ತ್ರಿಶೂಲವನ್ನು ಧರಿಸಿರುತ್ತೀ. ನಿನ್ನಲ್ಲಿ ಅಮೋಘವಾದ ಪರಾಕ್ರಮವಿರುವದು. ನಿನ್ನ ನೇತ್ರಗಳು ಮೃಗಗಳ ನೇತ್ರಗಳಂತೆ ಕಾಂತಿಮಯವಾಗಿರುವವು. ನೀನು ಮಹಾನ್ ಮಹಾನ್ ಆಯುಧಗಳಿಂದ ಯುದ್ಧಮಾಡುವೆ. ನೀನು ಒಳ್ಳೇ ಪವಿತ್ರನೂ, ಶುದ್ಧನೂ ಇರುತ್ತೀ. ನೀನು ವಿಧ್ವಂಸಮಾಡುವವನೂ, ಕ್ಷಯಮಾಡುವವನೂ ಆಗಿರುತ್ತೀ. ನಿನ್ನನ್ನು ನಿಗ್ರಹಿಸಲು ಯಾವನೂ ಸಮರ್ಥನಲ್ಲವು. ನೀನು ಜಗತ್ತಿನ ಸಂಹಾರಕರ್ತೃವಾಗಿರುವೆ. ನೀನು ಬ್ರಹ್ಮನಿಷ್ಠನಿದ್ದು, ಬ್ರಹ್ಮಸ್ವರೂಪನೂ ಆಗಿರುತ್ತೀ. ನಿನ್ನ ಅಧಿಕಾರವು ಎಲ್ಲ ಕಡೆಗೆ ನಡೆಯುವದು. ನೀನು ಅಪರಿಚ್ಛಿನ್ನನಾಗಿರುವದರಿಂದ ನಿನ್ನನ್ನು ನಾಮರೂಪಾದಿಗಳಿಂದ ವರ್ಣಿಸುವದು ಅಶಕ್ಯವಾಗಿರುವದು. ನೀನು ಯಾವತ್ತು ವಿಶ್ವದ ನಿಯಂತ್ರಣಮಾಡುವೆ. ನೀನು ಚರ್ಮಾಂಬರನಾಗಿದ್ದು, ಯಾವಾಗಲೂ ತಪಸ್ಸಿನಲ್ಲಿನಿರತನಾಗಿರುತ್ತೀ. ನೀನು ಯಾವಾಗಲೂ ವ್ರತಾಸಕ್ತನಾಗಿರುತ್ತೀ. ಕಾರ್ತಿಕೇಯನು ನಿನ್ನ ಮಗನು. ನಿನಗೆ ಮೂರುಕಣ್ಣುಗಳಿರುವವು. ಇಂದ್ರಿಯಗಳ ಹಾಗು ಯಜ್ಞದ ಸ್ವಾಮಿಯೂ ನೀನೇ ಆಗಿರುತ್ತೀ. ಎಲೈ ದೇವಾಧಿದೇವನಾದ ತ್ರ್ಯಂಬಕನೇ, ಮನಸ್ಸು-ವಾಣಿ-ಕರ್ಮ ಇವನ್ನೆಲ್ಲ ನಾವು ತ್ವತ್ಪರವಾಗಿ ಮಾಡು

ವೆವು. ದೀನರಾದ ನಮಗೆ ಅಭಯಪ್ರದಾನಮಾಡಿ ನಮ್ಮ ಮನೋರಥವನ್ನು ಪೂರ್ಣಮಾಡು.

ಈ ಮೇರೆಗೆ ಬ್ರಹ್ಮಾದಿದೇವತೆಗಳೂ ಋಷಿಗಳೂ, ಭಗವಂತನನ್ನು ಪ್ರಾರ್ಥಿಸಲು, ಆ ಮಹಾದೇವನು ಪ್ರಸನ್ನನಾಗಿ ಅವರೆಲ್ಲರನ್ನು ಅಭಿನಂದಿಸಿ ಅವರನ್ನುಕುರಿತು— "ನಿಮ್ಮ ಭೀತಿಯು ನಷ್ಟವಾಗುವದು" ಎಂದು ವರಪ್ರದಾನ ಮಾಡಿ, ಇನ್ನೇನು ಮಾಡಬೇಕು ಹೇಳಿರೆಂದು ಕೇಳಿದನು. ಆಗ ಬ್ರಹ್ಮದೇವನು ಭಗವಾನ್ ಶಂಕರನನ್ನು ಸತ್ಕರಿಸಿ ಲೋಕಹಿತಕ್ಕಾಗಿ ಆತನನ್ನು ಕುರಿತು—ಎಲೈ ದೇವೇಶ್ವರಾ ಶಂಕರಾ, ನಿನ್ನ ಅನುಗ್ರಹದಿಂದಲೇ ನಾನು ಈ ಪ್ರಜಾಪತಿತ್ವದ ಅಧಿಕಾರವನ್ನು ನಡೆಸುತ್ತಿರುವೆನು; ಮತ್ತು ಆ ಅಧಿಕಾರದ ಬಲದಿಂದಲೇ ನಾನು ದಾನವರಿಗೆ ದೊಡ್ಡ ವರವನ್ನು ಕೊಟ್ಟಿರುವೆನು; ಆದರೆ ಸದ್ಯಕ್ಕೆ ದಾನವರು ಮರ್ಯಾದೆಯ ಉಲ್ಲಂಘನಮಾಡಿ ನಡೆಯಹತ್ತಿರುವದರಿಂದ, ಎಲೈ ಶಂಕರನೇ, ಹಿಂದೆ ಆಗಿರುವ ಮತ್ತು ಮುಂದೆ ಆಗಬೇಕಾಗಿರುವ ಸಂಗತಿಗಳ ಮೇಲೆ ಅಧಿಕಾರ ನಡೆಸುವ ನಿನ್ನ ಹೊರತು ಆ ದುಷ್ಟ ದೈತ್ಯರ ಸಂಹಾರ ಮಾಡಲು ಸಮರ್ಥರಾದವರು ಬೇರೆ ಯಾರೂ ಇದ್ದಂತೆ ನನಗೆ ತೋರುವದಿಲ್ಲ; ಆದ್ದರಿಂದ ದೇವಾಧಿದೇವಾ, ಶರಣು ಬಂದಿರುವ ಈ ದೇವ-ಬ್ರಾಹ್ಮಣರ ಮೇಲೆ ಕೃಪೆಮಾಡಿ ದಾನವರನ್ನು ಸಂಹರಿಸು. ಎಲೈ ಮಾನದನೇ, ನಿನ್ನ ಪ್ರಸಾದದಿಂದಲೇ ಈ ಯಾವತ್ತು ಜಗತ್ತಿಗೆ ಸುಖವುಂಟಾಗುತ್ತದೆ; ನೀನೇ ಎಲ್ಲರಿಗೂ ಆಶ್ರಯಸ್ಥಾನವಾಗಿರುತ್ತೀ; ಆದ್ದರಿಂದಲೇ ನಾವೆಲ್ಲರೂ ನಿನಗೆ ಶರಣು ಬಂದಿದ್ದೇವೆ, ಎನ್ನಲು ಭಗವಾನ್ ಶಂಕರನು—

ಭಗವಾನ್ ಶಂಕರ—ಬ್ರಹ್ಮಪ್ರಭೃತಿಗಳಾದ ದೇವತೆಗಳಿರಾ, ಋಷಿಗಳಿರಾ, ನಿಮ್ಮ ಯಾವತ್ತುಶತ್ರುಗಳ ಸಂಹಾರ ಮಾಡಬೇಕೆಂದು ನನ್ನ ಮನಸ್ಸಿನಲ್ಲಿ ಬರುತ್ತದೆ; ಆದರೆ ಹಾಗೆ ಮಾಡಲಿಕ್ಕೆ ನನಗೆ ಒಬ್ಬನಿಗೆ ಉತ್ಸಾಹವಿಲ್ಲ; ಯಾಕಂದರೆ ಸುರದ್ವೇಷ್ಟ್ಯಗಳಾದ ದೈತ್ಯ-ದಾನವರು ಮಹಾಬಲಾಢ್ಯರಿರುವರು; ಆದ್ದರಿಂದ ನೀವೆಲ್ಲರೂ ಒಟ್ಟುಗೂಡಿ ನನ್ನ ಅರ್ಧಬಲದ ಸಹಾಯವನ್ನು ತಕ್ಕೊಂಡು ಶತ್ರುಗಳೊಡನೆ ಯುದ್ಧಮಾಡಿ ಅವರನ್ನು ಸಂಹರಿಸಿರಿ. ನೀವೆಲ್ಲರೂ ಒಟ್ಟುಗೂಡಿದರೆ ನಿಮ್ಮ ಸಾಮರ್ಥ್ಯವು ಅದ್ಭುತವಾಗುವದು; ಯಾಕಂದರೆ ಸಂಘಶಕ್ತಿಯು ಒಳ್ಳೆ ಅನಿವಾರ್ಯವಾಗುವದು.

ದೇವತೆಗಳು—ಭಗವನ್ ಶಂಕರಾ, ನಮ್ಮಲ್ಲಿರುವ ಬಲ-ತೇಜಗಳ ಇಮ್ಮಡಿ ಬಲ-ತೇಜಗಳು ಆ ಅಸುರರಲ್ಲಿರುವವೆಂಬಹಾಗೆ ನಮಗೆ ತೋರುತ್ತದೆ; ಯಾಕಂದರೆ ನಾವು ಅವರ ಬಲವನ್ನೂ, ತೇಜವನ್ನೂ ನೋಡಿರುವೆವು.

ಭಗವಾನ್‌ಶಂಕರ—ದೇವಾದಿಕರೇ, ನಿಮ್ಮನ್ನು ಪೀಡಿಸುವ ಆ ಪಾತಕಿಗಳಾದ ದೈತ್ಯ-ದಾನವರು ಧರ್ಮಹೀನರಾಗಿ ಸರ್ವತೋಪರಿ ವಧ್ಯರಾಗಿರುವರು; ಆದ್ದರಿಂದ ನನ್ನ ಅರ್ಧ ಬಲದ, ಹಾಗು ಅರ್ಧ ತೇಜಸ್ಸಿನ ಸಹಾಯದಿಂದ ಅವರ ಸಂಹಾರ ಮಾಡಿರಿ.

ದೇವತೆಗಳು—ಎಲೈ ಮಹೇಶ್ವರನೇ, ನಿನ್ನ ಅರ್ಧ ಬಲವನ್ನೂ, ಅರ್ಧ ತೇಜಸ್ಸನ್ನೂ ಧರಿಸಲು, ನಾವು ಸಮರ್ಥರಲ್ಲವು; ಆದ್ದರಿಂದ ನಮ್ಮೆಲ್ಲರ ಅರ್ಧ ಬಲ-ಅರ್ಧ ತೇಜಸ್ಸುಗಳನ್ನು ನೀನೇ ವಹಿಸಿ ಶತ್ರುಗಳನ್ನು ಸಂಹರಿಸಿ ಬಿಡು.

ಭಗವಾನ್ ಶಂಕರ—ದೇವಾದಿಕರೇ, ನಿಮಗೆ ನನ್ನ ಬಲವನ್ನು ಧರಿಸುವ ಸಾಮರ್ಥ್ಯವು ಎಷ್ಟು ಮಾತ್ರವೂ ಇಲ್ಲದಿದ್ದರೆ, ನಿಮ್ಮೆಲ್ಲರ ಬಲದ ಸಹಾಯದಿಂದ ನನ್ನ ಬಲವನ್ನು ವೃದ್ಧಿಂಗತ ಮಾಡಿಕೊಂಡು ಅವರ ಸಂಹಾರ ಮಾಡುವದಕ್ಕೆ ನಾನು ಸಿದ್ಧನಿರುವೆನು.

ವಿವೇಕಶೀಲನೇ, ಈ ಮೇರೆಗೆ ಭಗವಂತನು ಮಾಡಿದ ಭಾಷಣವನ್ನು ಕೇಳಿ ದೇವಾದಿಕರು "ಯಾಕಾಗಲೊಲ್ಲದು" ಎಂದು ಹೇಳಲು, ಭಗವಾನ್ ಶಂಕರನು ಅವರೆಲ್ಲರ ಅರ್ಧಬಲದಿಂದ ತನ್ನ ಬಲವನ್ನು ಅಭಿವೃದ್ಧಮಾಡಿಕೊಂಡದ್ದರಿಂದ ಆತನ ಬಲವು ಎಲ್ಲರ ಬಲಕ್ಕಿಂತಲೂ ಅಧಿಕವಾಯಿತು; ಆದ್ದರಿಂದಲೇ ಆತನಿಗೆ "ಮಹಾದೇವ"ನೆಂಬ ಹೆಸರು ಪ್ರಾಪ್ತವಾಯಿತು. ಬಳಿಕ ಆ ಮಹಾದೇವನು ದೇವತೆಗಳಿಗೆ—ಎಲೈ ದೇವತೆಗಳಿರಾ, ತ್ರಿಪುರದೊಳಗಿನ ದೈತ್ಯರು ಈಗ ಅಧರ್ಮರತರಾಗಿರುವರು ನಾನು ಧನುಷ್ಯಬಾಣಗಳನ್ನು ಧರಿಸಿ ರಥದಲ್ಲಿ ಕುಳಿತು ನಿಮ್ಮ ಆ ದೈತ್ಯದಾನವ-ಶತ್ರುಗಳನ್ನು ಸಮರಾಂಗಣದಲ್ಲಿ ಸಂಹರಿಸುವೆನು; ಆದ್ದರಿಂದ ನನ್ನ ಸಲುವಾಗಿ ರಥವನ್ನೂ, ಧನುಷ್ಯಬಾಣಗಳನ್ನೂ ಸಿದ್ಧಮಾಡಿರಿ, ಎಂದು ಹೇಳಿದನು. ಅದಕ್ಕೆ ದೇವತೆಗಳು—ಎಲೈ ದೇವೇಶ್ವರಾ ಶಂಕರಾ, ಯಾವತ್ತು ತ್ರೈಲೋಕ್ಯದಲ್ಲಿರುವ ಸಕಲ ಮೂರ್ತಿಗಳ ತೇಜಸ್ಸನ್ನು ಒಟ್ಟುಗೂಡಿಸಿ ಅದರಿಂದ ಮಹಾಬಲಿಷ್ಠವಾದ ಒಂದು ಉತ್ಕೃಷ್ಟ ರಥವನ್ನು ವಿಶ್ವಕರ್ಮನಿಂದ ಸಿದ್ಧಮಾಡಿಸುವೆವು, ಎಂದು ಹೇಳಿ, ಮಹಾನ್ ಮಹಾನ್ ದೇವತೆಗಳು ರಥವನ್ನು ಸಿದ್ಧಮಾಡಿಸಿದರು. ಅವರು ವಿಷ್ಣು–ಸೋಮ–ಅಗ್ನಿ ಇವರನ್ನು ಶಂಕರನ ಬಾಣದ ಸ್ಥಾನದಲ್ಲಿ ಯೋಜಿಸಿದರು. ಅಗ್ನಿಯು ಬಾಣದ ಹಿಡಿಕೆಯಾದನು, ಸೋಮನು ಬಾಣದ ಎಲೆಯಾದನು, ವಿಷ್ಣುವು ಬಾಣದ ತೀಕ್ಷ್ಣಧಾರೆ (ಅಗ್ರಭಾಗ)ಯಾದನು. ಭೂಮಿಯು ರಥವಾಯಿತು. ಆಕಾಶವು ರಥದ ಹೊದಿಕೆಯಾಯಿತು. ಮಂದರಪರ್ವತವು ಆ ರಥದ ಅಚ್ಚು ಆಯಿತು. ಸೂರ್ಯ–ಚಂದ್ರರು ರಥದ ಗಾಲಿಗಳಾದರು. ಧೃತರಾಷ್ಟ್ರ ಪ್ರಮುಖರಾದ ಹತ್ತುಜನ ನಾಗಪತಿಗಳು ರಥದ ಹಗ್ಗಗಳಾದರು. ನಾಲ್ಕುವೇದಗಳು ರಥದ ಕುದುರೆಗಳಾದವು. ಇದರಂತೆಯೇ ವಿಶ್ವಕರ್ಮನು ಸರ್ವಭೂತಗಳನ್ನೂ, ಸರ್ವಲೋಕಗಳನ್ನೂ, ಯಾವತ್ತು ದೇವತೆಗಳನ್ನೂ ಒಟ್ಟುಗೂಡಿಸಿ ರಥದ ಬೇರೆ ಬೇರೆ ಅವಯವಗಳನ್ನು ಮಾಡಿ ರಥವನ್ನು ಸಿದ್ಧಮಾಡಿದ್ದನು. ಈ ಮೇರೆಗೆ ದಿವ್ಯ ರಥವನ್ನು ದೇವತೆಗಳು ಸಿದ್ಧಮಾಡಿದ್ದನ್ನು ನೋಡಿ ಭಗವಾನ್ ಶಂಕರನು ಅದರಲ್ಲಿ ತನ್ನ ದೊಡ್ಡ ದೊಡ್ಡ ಆಯುಧಗಳನ್ನು ಇಟ್ಟನು. ಆತನು ಆಕಾಶವನ್ನು ಧ್ವಜಯಷ್ಟಿಯಾಗಿ ಯೋಜಿಸಿ, ಅದರ ಅಗ್ರ ಭಾಗದಲ್ಲಿ ನಂದಿಕೇಶ್ವರನನ್ನು ಕುಳ್ಳಿರಿಸಿದನು. ಆ ಮೇಲೆ ಬ್ರಹ್ಮದಂಡ, ಕಾಲದಂಡ, ರುದ್ರದಂಡ, ಜ್ವರ ಎಂಬವರು ರಥವನ್ನು ಹತ್ತಿ, ರಥದ ಯಾವತ್ತು ಮಗ್ಗಲುಗಳನ್ನು ರಕ್ಷಿಸತೊಡಗಿದರು ರಥದ ಚಕ್ರಗಳನ್ನು ಅಥರ್ವಣ–ಅಂಗಿರಸರು ರಕ್ಷಿಸತೊಡಗಿದರು. ಸಂವತ್ಸರವು ಆತನ ಧನುಸ್ಸು, ಕಾಲರಾತ್ರಿಯು ಆ ರುದ್ರ–ಧನುಷ್ಯದ ಅಭಂಗವಾದ ಹೆದೆ (ಜ್ಯಾ)ಯು ಆದವು. ಅಗ್ನಿ–ಸೋಮ–ವಿಷ್ಣುಗಳು ಬಾಣವಾದದ್ದನ್ನು ಈ ಮೊದಲೆ ಹೇಳಿರುವದು. ವಿವೇಕಶೀಲನೇ, ಈ ಯಾವತ್ತು ಜಗತ್ತು ಅಗ್ನಿ–ಸೋಮ–ವಿಷ್ಣುಗಳದೇ ವಿಶಿಷ್ಟರೂಪವಿರುವದು. ಭಗವಾನ್ ಅಮಿತ ತೇಜಸ್ವಿ ರುದ್ರನ

ಆತ್ಮವೆಂದರೆ ವಿಷ್ಣುವೇ ಆಗಿರುವನು. ಆದ್ದರಿಂದ ರುದ್ರನ ಆ ಅಪೂರ್ವಧನುಷ್ಯದ ಹೆದೆಯ ಬರಿಯ ಠಣತ್ಕಾರವೂ ಅಸುರರಿಗೆ ಸಹನವಾಗಲಿಲ್ಲವು. ಇದಲ್ಲದೆ ಶಂಕರನು ಆ ಸೋಮವಿಷ್ಣ್ವಗ್ನಿ ಮಯಬಾಣದಲ್ಲಿ ಭೃಗು-ಅಂಗಿರಸ ಋಷಿಗಳ ಸಂತಾಪದಿಂದ ತನಗುಂಟಾದ ಕ್ರೋಧವನ್ನು ಸ್ಥಾಪಿಸಿದ್ದನು; ಅಂದಬಳಿಕ ಅದರ ಉಗ್ರತೆಯನ್ನೇನು ಹೇಳಬೇಕು! ಭಗವಾನ್ ಶಂಕರನು ಸರ್ವದೇವಪರಿವಾರವು ತನ್ನನ್ನು ಸುತ್ತಿರಲು, ತನ್ನ ಪ್ರಮಥಗಣದೊಡನೆಸಾಗಿ ಬಂದು ಆ ದಿವ್ಯ ರಥವನ್ನು ಹತ್ತಿದನು. ಆಗ ದೇವತೆಗಳಿಗೂ ಭಯವು ಉತ್ಪನ್ನವಾಯಿತು. ಆಗ ಋಷಿಗಳೂ, ದೇವಗಂಧರ್ವರೂ ಸ್ತುತಿಸುತ್ತಿರಲು, ಅಪ್ಸರೆಯರು ನೃತ್ಯ ಮಾಡುತ್ತಿರಲು, ಭಗವಾನ್ ಶಂಕರನು ಪ್ರಸನ್ನಮುಖದಿಂದ ನಾಲ್ಕೂಕಡೆಗೆ ನೋಡಿ ನಗುತ್ತ ದೇವತೆಗಳನ್ನು ಕುರಿತು—"ದೇವತೆಗಳೇ, ನನ್ನ ಸಾರಥ್ಯಮಾಡುವವರು ಯಾರು?" ಎಂದು ಕೇಳಿದನು.

ಶಂಕರನ ಈ ಮಾತುಗಳನ್ನು ಕೇಳಿ ದೇವತೆಗಳು—ಭಗವನ್, ನೀನು ಯಾರನ್ನು ಆಜ್ಞಾಪಿಸುವೆಯೋ ಅವರು ನಿನ್ನ ಸಾರಥ್ಯಮಾಡುವೆವು, ಅದರಲ್ಲಿ ಸ್ವಲ್ಪವೂ ಸಂದೇಹವಿಲ್ಲ, ಎಂದು ಹೇಳಿದರು. ಅದಕ್ಕೆ ಶಂಕರನು—"ದೇವತೆಗಳಿರಾ, ನಿಮ್ಮಲ್ಲಿ ಬಲಿಷ್ಠರು ಯಾರೆಂಬದನ್ನು ನಿಮ್ಮೊಳಗೆ ಮೊದಲು ಗೊತ್ತುಮಾಡಿಕೊಂಡು ಆತನಿಗೆ ನನ್ನ ಸಾರಥ್ಯಮಾಡಹೇಳಿರಿ. ಇನ್ನು ಅವಕಾಶವಾಗಕೂಡದು, ತ್ವರೆಮಾಡಿರಿ" ಎಂದು ಹೇಳಿದನು. ಆಗ ದೇವತೆಗಳು ಬ್ರಹ್ಮದೇವನನ್ನು ಸಾರಥಿಯಾಗಮಾಡಿದರು. ಈ ಮೇರೆಗೆ ಎಲ್ಲ ಸಿದ್ಧತೆಯಾದಬಳಿಕ ರಣಭೂಷಣಗಳಿಂದ ಅಲಂಕೃತನಾದ ಶಿವನು ಪ್ರಯಾಣೋನ್ಮುಖನಾಗಲು, ಶೇಷನು ರಥವನ್ನು ಎತ್ತಿಹಿಡಿದನು. ಬ್ರಹ್ಮದೇವನು ಕುದುರೆಯ ಕಡಿವಾಣವನ್ನು ಜಗ್ಗಿಹಿಡಿದು ರಥವನ್ನು ಸಾಗಿಸಿದನು. ಪ್ರಯಾಣವನ್ನು ಬೆಳೆಸುವಮೊದಲು ದೇವತೆಗಳು ಗಣಪತಿಯನ್ನು ಪೂಜಿಸಿದ್ದರು. ಶಂಕರನೂ ತನ್ನ ಆ ಮಗನನ್ನು ಆಲಿಂಗಿಸಿ ಪೂಜೆಯಿಂದ ಆತನನ್ನು ಸಂತೋಷಪಡಿಸಿದ್ದನು. ಬಳಿಕ ದೇವತೆಗಳೇ ಮೊದಲಾದ ಯಾವತ್ತು ಪ್ರಾಣಿಗಳೂ ಪಶುಗಳು, ಶಿವನು ಪಶುಪತಿಯೂ ಎಂಬ ಭಾವವನ್ನು ಯಾವತ್ತು ದೇವತೆಗಳಲ್ಲಿ ಉತ್ಪನ್ನಮಾಡಿ, ಭವನ ಸವಾರಿಯು ಯುದ್ಧಕ್ಕೆ ಹೊರಟಿತು. ದೇವತೆಗಳು, ಮುನಿಗಳು, ಋಷಿಗಳು, ಗಂಧರ್ವರು, ಸರ್ವಶಿವಗಣವು ಭಗವಾನ್ ಸದಾಶಿವನನ್ನು ಅನುಸರಿಸಿ ಸಾಗಹತ್ತಿದರು. ವಿಷ್ಣುವು ಎಡಮಗ್ಗಲು, ಇಂದ್ರನು ಬಲಮಗ್ಗಲು ಸಾಗಿದ್ದರು. ವೀರಭದ್ರ, ಸ್ಕಂದ, ಗಣಪತಿಗಳೂ, ಅವರಮುಂದೆ ದೇವೀ ಜಗದಂಬೆಯೂ ತಮ್ಮತಮ್ಮ ಸೇನೆಯೊಡನೆ ನಾಲ್ಕೂಕಡೆಗೆ ಸಾಗಿದರು. ರಥದ ಮುಂದುಗಡೆಯಲ್ಲಿ ಶಿವಗಣವು ಸಾಗಿದ್ದು, ಅಗ್ರಭಾಗದಲ್ಲಿ ನಂದಿಕೇಶ್ವರನು ನಡೆದಿದ್ದನು ಈ ಚಂದದಿಂದ ಭಗವಾನ್ ರುದ್ರನ ರಥವು ತ್ರಿಪುರಗಳ ರಣಾಂಗಣಕ್ಕೆ ಬಂದಿತು. ವಿವೇಕಶೀಲನೇ, ಭಗವಾನ್ ತ್ರಿಶೂಲಿಯು ಕೇವಲ ಮನಸ್ಸು ಮಾಡಿದರೆ ಒಂದು ಕ್ಷಣದಲ್ಲಿ ಸರ್ವತ್ರಿಭುವನಗಳ ನಾಶಮಾಡಲು ಸಮರ್ಥನಾಗಿರಲು, ಈ ಖಟಾಟೋಪವೂ, ಆಡಂಬರವೂ ಯಾತಕ್ಕೆಂದು ನೀನು ಕೇಳಬಹುದು; ಆದರೆ ತನ್ನ ಲೀಲೆಯನ್ನು ವಿಸ್ತರಿಸಿ ತೋರುವದರಹೊರತು

ಬೇರೆ ಕಾರಣವಿಲ್ಲೆಂದು ಋಷಿಗಳ ಮತವಿರುವದು. ಇರಲಿ, ಸಮರಾಂಗಣಕ್ಕೆ ಬಂದಕೂಡಲೆ ನಂದಿಕೇಶ್ವರನು ಭಯಂಕರ ಶಬ್ದ ಮಾಡಿದನು. ಅದರಿಂದ ದಶದಿಕ್ಕುಗಳು ದಿಮಿಗುಟ್ಟಹೋಗಿ, ತಾರಕನ ವಂಶದ ಹಲವು ದೈತ್ಯ-ದಾನವರು ಪಟಪಟಬಿದ್ದು ಸತ್ತರು! ಬಳಿಕ ಆ ತ್ರಿಪುರದೊಳಗಿನ ಉಳಿದ ದೈತ್ಯರು ಯುದ್ಧಕ್ಕಾಗಿ ಮುಂದವರಿದರು. ಅವರನ್ನು ನೋಡಿ ತ್ರಿಶೂಲಧರನಾದ ಭಗವಾನ್ ಶಂಕರನು ಕ್ರೋಧಸಂತಪ್ತನಾಗಲು, ಸರ್ವಭೂಗತಳು ಚದರಿಹೋದವು; ಸರ್ವತ್ರೈಲೋಕ್ಯವು ಗದಗುಟ್ಟಿ ನಡುಗತೊಡಗಿತು. ಆಗ ಭಗವಾನ್ ಶಂಕರನು ಧನುಸ್ಸಿಗೆ ಬಾಣವನ್ನು ಹೂಡಲು, ಉಂಟಾದ ಅವಸ್ಥೆಯನ್ನು ಏನೆಂದು ವರ್ಣಿಸಬೇಕು? ಆಗ ಘೋರಚಿನ್ಹಗಳು ತೋರಹತ್ತಿದವು. ಭಗವಾನ್ ಶಂಕರನ ಆ ಅದ್ವಿತೀಯ ರಥದಮೇಲೆ ಸೋಮ-ಅಗ್ನಿ-ವಿಷ್ಣುಗಳು ಬಾಣಸ್ಥಿತರಾಗಿದ್ದು, ಶಂಕರ-ಬ್ರಹ್ಮದೇವರು ಯೋದ್ಧಾ-ಸಾರಥಿಗಳರೂಪದಿಂದ ಕುಳಿತುಕೊಂಡಿದ್ದರು. ದೈತ್ಯ-ದಾನವರ ಅವಲೋಕನದಿಂದ ಈ ಐವರೂ ಮಹಾತ್ಮರು ಅತ್ಯಂತ ಕ್ಷುಬ್ಧರಾಗಲು, ಶಂಕರನು ಧನುಸ್ಸಿನ ಹೆದೆಯನ್ನು ಜಗ್ಗಿ ಠಣತ್ಕಾರಮಾಡುವಾಗ ಆ ರಥವು ಅಂತರಿಕ್ಷದಿಂದ ಒಮ್ಮೆಲೆ ಕೆಳಗೆ ಬಂದಿತು! ವಿವೇಕಶೀಲಾ, ಈ ಮೇರೆಗೆ ಆ ರಥವು ಕೆಳಗೆಬಂದದ್ದನ್ನು ನೋಡಿ ಭಗವಾನ್ ಶಂಕರನ ಬಾಣಾಗ್ರದಲ್ಲಿದ್ದ ವಿಷ್ಣುವು ವೃಷಭರೂಪವನ್ನು ಧರಿಸಿ ಆ ಮಹಾರಥವನ್ನು ಎತ್ತಿಹಿಡಿದನು. ಈ ಪ್ರಸಂಗದಲ್ಲಿ ಅಸುರರು ಭಯಂಕರವಾಗಿ ಗರ್ಜಿಸುತ್ತಿರಲು, ಭಗವಾನ್ ಶಂಕರನು ಅಶ್ವಗಳ ಬೆನ್ನಮೇಲೆ ಹಾಗು ನಂದಿಕೇಶ್ವರನ ತಲೆಯಮೇಲೆ ನಿಂತು ಒಳ್ಳೇ ಆವೇಶದಿಂದ ಗರ್ಜಿಸಿ, ದಾನವರ ಪುರಗಳನ್ನು ದಿಟ್ಟಿಸಿನೋಡುವಾಗ ಆ ಭಗವಂತನು ವೃಷಭದ ಖುರಗಳನ್ನು ಎರಡುಭಾಗವಾಗಿ ಸೀಳಿ, ಕುದುರೆಯ ಮೊಲೆಗಳನ್ನು ಕತ್ತರಿಸಿದನು. ಹೀಗೆ ಅದ್ಭುತಕಾರ್ಯಮಾಡುವ ಭಗವಾನ್ ಶಂಕರನು ಅವನ್ನು ಪೀಡಿಸಿದ್ದರಿಂದ, ಅಂದಿನಿಂದ ಎತ್ತಿನಕೊಳಗಗಳು ಸೀಳಿದವು; ಕುದುರೆಗಳ ಮೊಲೆಗಳು ಪೂರಾ ಹೋಗಿಬಿಟ್ಟವು.

ವಿವೇಕಶೀಲನೇ, ಇಷ್ಟಾದ ಬಳಿಕ ಮಹಾದೇವನು ತನ್ನ ಧನುಸ್ಸು ಸಜ್ಜಮಾಡಿ ಅದಕ್ಕೆ ಬಾಣಹೂಡಿ, ಆ ಬಾಣಕ್ಕೆ ಪಾಶುಪತಾಸ್ತ್ರದ ಜೋಡುಮಾಡಿ ತ್ರಿಪುರಗಳ ಚಿಂತನಮಾಡುತ್ತ ಸ್ವಸ್ಥವಾಗಿ ಕುಳಿತುಕೊಂಡನು. ಹೀಗಿರುವಾಗ ಕೆಲಕಾಲದಮೇಲೆ ಆ ಮೂರೂಪುರಗಳು ಒಂದಾದವು. ಅದನ್ನು ನೋಡಿ ಮಹಾತ್ಮರಾದ ದೇವತೆಗಳಿಗೆ ಪರಮಾನಂದವಾಯಿತು. ಯಾವತ್ತೂ ದೇವತೆಗಳೂ, ಸಿದ್ಧರೂ, ಮಹಾನ್ ಮಹಾನ್ ಋಷಿಗಳೂ ಶಂಕರನ ಜಯಜಯಕಾರಮಾಡಿ ಆತನನ್ನು ಬಹಳವಾಗಿ ಸ್ತುತಿಸಹತ್ತಿದರು. ಅಷ್ಟರಲ್ಲಿ ಅಸುರಸಂಹಾರಕ್ಕಾಗಿ ಉದ್ಯುಕ್ತನಾಗಿ, ಭಯಂಕರ ಶರೀರಧಾರಣಮಾಡಿದ ದುರ್ಧರಪ್ರತಾಪಿಯಾದ ಭಗವಾನ್ ಶಂಕರನ ಅಗ್ರಭಾಗದಲ್ಲಿ ಆ ಒಟ್ಟುಗೂಡಿದ ತ್ರಿಪುರಗಳು ತೋರಲು, ಬ್ರಹ್ಮದೇವನು ಆ ಪ್ರಭುವನ್ನು ಕುರಿತು—ಜಗನ್ನಾಥಾ, ಈ ಸಮಯದಲ್ಲಿ ಬಾಣಪ್ರಯೋಗಮಾಡಿ ತ್ರೈಲೋಕ್ಯವನ್ನು ರಕ್ಷಿಸಬೇಕು, ಎಂದು ಪ್ರಾರ್ಥಿಸಿದನು. ಕೂಡಲೆ ಶಂಕರನು ತ್ರಿಪುರಗಳನ್ನು ಸುಟ್ಟು ಬೂದಿಮಾಡುವದಕ್ಕಾಗಿ ಅವನ್ನು

ವಕ್ರದೃಷ್ಟಿಯಿಂದ ನೋಡಲು, ಅವು ಸುಟ್ಟು ಕರಕಾದವು. ಆಗ ಬಾಣದಲ್ಲಿ ಪ್ರವಿಷ್ಟರಾಗಿದ್ದ ವಿಷ್ಣು-ಸೋಮ-ಅಗ್ನಿಗಳು ಆ ದೇವ-ದೇವನನ್ನು ಕುರಿತು-ಶಂಭೋ, ನಿನ್ನ ದೃಷ್ಟಿಪಾತದಿಂದಲೇ ತ್ರಿಪುರಗಳು ಸುಟ್ಟುಹೋದವು; ಆದರೂ ನಮ್ಮ ಹಿತಕ್ಕಾಗಿ ನಮ್ಮ ರೂಪವಾದ ಬಾಣವನ್ನು ಬಿಡಬೇಕು, ಎಂದು ಪ್ರಾರ್ಥಿಸಲು, ಶಂಕರನು ಧನುಷ್ಯವನ್ನು ಜಗ್ಗಿ ಬಾಣವನ್ನು ಬಿಟ್ಟನು. ಆ ಭಾಣವು ಮೊದಲೇ ಸುಟ್ಟಂತೆ ಆಗಿದ್ದ ತ್ರಿಪುರಕ್ಕೆ ತಗಲಿ ಅಗ್ನಿಪ್ರಲಯವನ್ನುಂಟುಮಾಡಿ ಪುನಃ ಶಂಕರನಬಳಿಗೆ ಬಂದು ನಮಸ್ಕರಿಸಿ ಸ್ವಸ್ಥವಾಗಿ ಕುಳಿತುಕೊಂಡಿತು! ಸಾಕ್ಷಾತ್ ಎರಡನೆಯ ತ್ರಿಭುವನವೇ ಅಗ್ನಿಮುಖಕ್ಕೆ ಬಿದ್ದಿರುವಂತೆ ಆ ತ್ರಿಪುರಗಳ ದಹನ ಕ್ರಿಯೆಯು ತೋರಿತು! ತ್ರಿಪುರದೊಳಗಿನ ಶಂಕರಭಕ್ತರಾದ ರಾಕ್ಷಸರೆಲ್ಲರೂ ಭಕ್ತಿಯಬಲದಿಂದ ಗಾಣಪತ್ಯವನ್ನು ಹೊಂದಿದರು. ಆಗಿನ ಶಂಕರ-ಪಾರ್ವತಿಯರ ರೂಪವನ್ನು ನೋಡಿ ಯಾವತ್ತು ದೇವತೆಗಳಿಗೆ ಭೀತಿಯು ಉತ್ಪನ್ನವಾಯಿತು. ಶಂಕರ, ಪಾರ್ವತಿ, ಸ್ಕಂದ, ನಂದಿ ಇವರನ್ನು ಎಲ್ಲರೂ ನಮಸ್ಕರಿಸಿದರು. ಭಗವಾನ್‌ಶಂಕರನಲ್ಲಿ ಪ್ರದೀಪ್ತವಾದ ಕ್ರೋಧಾಗ್ನಿಯಿಂದ ಆತನು ತ್ರೈಲೋಕ್ಯಗಳನ್ನಾದರೂ ಸುಟ್ಟುಬಿಡಬಹುದಾಗಿತ್ತು; ಆದರೆ ಶಂಕರಪ್ರಭುವು ತಾನಾಗಿಯೇ ಕರುಣಿಸಿ ತ್ರೈಲೋಕ್ಯವನ್ನು ಉಳಿಸಿದನು. ತರುವಾಯ ಭಗವಾನ್ ಶಂಕರನು ದೇವತೆಗಳಿಗೆ ಅಭೀಷ್ಟವರಗಳನಿತ್ತು ಅವರನ್ನು ಅವರವರ ಸ್ಥಾನಗಳಿಗೆ ಕಳುಹಿದನು. ವಿವೇಕಶೀಲನೇ, ಈ ಮೇರೆಗೆ ಭಕ್ತವತ್ಸಲನಾದ ಶಂಕರನು ತ್ರಿಪುರಗಳನ್ನು ಸುಟ್ಟು ಲೋಕವನ್ನು ರಕ್ಷಿಸಿ ತ್ರಿಪುರಾರಿಯೆಂಬ ನಾಮವನ್ನು ಧರಿಸಿದನು.

ಹೀಗೆ ಸಿದ್ಧಮುನೀಶ್ವರರು ನಿರೂಪಿಸಿದ್ದನ್ನು ಕೇಳಿ ವಿವೇಕಶೀಲನು—ಸದ್ಗುರೋ, ಅಸುರರು ಬಹುತರ ಶಿವಭಕ್ತರೇ ಇದ್ದು, ಅವರು ವಿಷ್ಣುವಿನಿಂದಾಗಲಿ, ಸ್ವತಃ ಭಗವಾನ್ ಶಂಕರನಿಂದಾಗಲಿ ಸಂಹರಿಸಲ್ಪಟ್ಟಿರುವರಲ್ಲ; ಇದರಿಂದ ತಾಮಸರೇ ಶಿವಭಕ್ತರಾಗುವರೆಂತಲೂ ಶಿವಭಕ್ತರಿಗೆ ಕಡೆಗೆ ನಾಶವೇ ಕಟ್ಟಿಯಿಟ್ಟದ್ದೆಂತಲೂ ಸಿದ್ಧವಾಗುತ್ತದಲ್ಲವೆ? ಈ ಅಸುರ ಸಂಹಾರಕ್ಕಾಗಿಯೇ ವಿಷ್ಣುವು ಮೇಲೆ ಮೇಲೆ ಅವತರಿಸಿ ಅಸುರಮರ್ದನನೆಂಬ ಹೆಸರು ಪಡೆದಿರುವನು. ಇನ್ನು ವಿಷ್ಣುವು ಸಂಹರಿಸಿದರೂ ಸಂಹರಿಸಲಿ, ಭಕ್ತವತ್ಸಲನಾದ ಶಂಕರನಾದರೂ ತನ್ನ ಭಕ್ತರ ಸಂಹಾರಕ್ಕೆ ಉದ್ಯುಕ್ತನಾಗುವದಿಲ್ಲವೆನ್ನಬೇಕೆಂದರೆ, ವಿಷ್ಣುವೇ ಮೊದಲಾದ ಯಾವತ್ತು ದೇವತೆಗಳನ್ನು ಮೀರಿನಿಂತ ಮಹಾಸಮರ್ಥರಾದ ತ್ರಿಪುರನಂಥ ಅಸುರರನ್ನು ತನ್ನ ಭಕ್ತರೆಂದು ನೋಡದೆ ಭಗವಾನ್ ಶಂಕರನೇ ಸಂಹರಿಸಿದನಲ್ಲ! ಇದರ ರಹಸ್ಯವೇನು? ಇದರಿಂದ ನಮ್ಮಂಥ ಅಜ್ಞಾನಿಗಳಿಗೆ ಶಿವಭಕ್ತಿಯು ತಾರಕವಿರಬಹುದೇ ಎಂಬ ಸಂಶಯವು ಬಾಧಿಸುವ ಸಂಭವವಿರುತ್ತದೆ! ಆದ್ದರಿಂದ ಸದ್ಗುರೋ, ನಮ್ಮ ಈ ಸಂಶಯವನ್ನು ದೂರಮಾಡು, ಎಂದು ಪ್ರಾರ್ಥಿಸಿದನು. ಆಗ ಸಿದ್ಧಮುನಿಗಳು ನಕ್ಕು ವಾತ್ಸಲ್ಯದಿಂದ ವಿವೇಕಶೀಲಾದಿ ಶಿಷ್ಯರನ್ನು ಕುರಿತು—ಶಿಷ್ಯೋತ್ತಮರೇ, ನೀವು ಕೇಳಿದ ಪ್ರಶ್ನವು ಅಜ್ಞಾನಮೂಲವಾದದ್ದಿದ್ದರೂ, ಉತ್ತರ ಹೇಳಲು ತಕ್ಕದ್ದಾಗಿರುತ್ತದೆ; ಯಾಕಂದರೆ, ಅದರ

ಉತ್ತರ ಹೇಳುವದರಿಂದ ನಿಮ್ಮ ಅಜ್ಞಾನ ನಿವಾರಣವಾಗಿ ಭಗವಾನ್ ಸದಾಶಿವನ ಸರ್ವೋತ್ತಮತ್ವವು ಸಿದ್ಧವಾಗುವದು. ಶಿಷ್ಯರೇ, ಈ ಜಗತ್ತಿನಲ್ಲಿ ಶ್ರೇಷ್ಠರೆಂದು ಯಾರಿಗೆ ಅನ್ನುವರು? ಯಾರ ಅನುಗ್ರಹವೂ ನಿಗ್ರಹವೂ, ಎರಡೂ ತಾರಕವಾಗಿರುವವೋ ಅವರೇ ಶ್ರೇಷ್ಠರು; ಇಂಥ ಘನತರವಾದ ಯೋಗ್ಯತೆಯು ಭಗವಾನ್‌ಶಂಕರನಲ್ಲಿಯಲ್ಲದೆ ಆತನ ಅನುಗ್ರಹವಿಲ್ಲದ ಅನ್ಯದೇವತೆಗಳಲ್ಲಿ ಇರುವದಿಲ್ಲ; ಆದ್ದರಿಂದಲೇ ಭಗವಾನ್‌ಸದಾಶಿವನು ಸರ್ವೋತ್ತಮನಾಗಿರುವನು. ಶಂಕರನು ಸರ್ವಸಂಗಪರಿತ್ಯಾಗ ಮಾಡಿ ತನ್ನನ್ನೇ ಶರಣು ಹೋಗುವವರನ್ನು ಅವರಭಕ್ತಿಗಾಗಿ ಅನುಗ್ರಹಿಸುವಂತೆ, ಕಾಮನಾಪರರಾದ ವಿಷಯಾಸಕ್ತ-ದೇಹಾಭಿಮಾನಿಗಳನ್ನೂ, ಅವರ ಏಕೋಭಾವದ ಪೂಜೆಗೆ ಸಂತುಷ್ಟನಾಗಿ ಶೀಘ್ರವಾಗಿಯೇ ಅವರಿಗೆ ಬೇಕಾದದ್ದನ್ನು ಕೊಟ್ಟು ಅನುಗ್ರಹಿಸುವನು; ಯಾಕಂದರೆ, ಪ್ರಸಂಗವಶಾತ್ ಆದೇಹಾಭಿಮಾನಿಗಳು ಅಹಂಕಾರದಿಂದ ಪರಹಿಂಸಕರಾದರೆ ಅವರ ಉದ್ಧಾರದ ಸಾ-ಧನವಾದ ರುದ್ರದಂಡವು ಸಿದ್ಧವಾಗಿಯೇ ಇರುವದು; ಆದ್ದರಿಂದ ನಿಗ್ರಹಾನುಗ್ರಹಗಳೆರಡರಿಂದಲೂ ಉದ್ಧರಿಸಲು ಸಮರ್ಥನಾದ ಪ್ರಭು-ಶಂಕರನು ಭಕ್ತರ ಅಧಿಕಾರಾನಧಿಕಾರಗಳನ್ನು ಲಕ್ಷಿಸದೆ, ಅವರಿಗೆ ಬೇಕಾದ ವರಗಳನ್ನು ಕೊಟ್ಟುಬಿಡುವನು; ಆದ್ದರಿಂದ ನಮ್ಮ ಭಗವಾನ್‌ಸದಾಶಿವನು ಭೋಲಾನಾಥನೆಂತಲೂ, ಶೀಘ್ರಫಲದಾತೃವೆಂತಲೂ ಪ್ರಸಿದ್ಧನಾಗಿರುವನು. ಆತನಿಗೆ ನಿಗ್ರಹಾನುಗ್ರಹಗಳೆರಡೂ ಉದ್ಧಾರದ ಲೀಲಾಮಾತ್ರಸಾಧನಗಳಾಗಿರುವವು; ಆದರೆ ವಿವೇಕಶೀಲಾ, ಭಕ್ತಿವಶನಾದ ಶಂಕರನಿಗೆ ಮುಖ್ಯವಾಗಿ ಬೇಕಾದದ್ದು ಭಕ್ತಿಯು. ಭಕ್ತಿಯೆಂಬ ಶಿವವಶೀಕರಣದ ಬಲಿಷ್ಠಸಾಧನವುಳ್ಳ ಭಕ್ತನು ಮೂಢನಿರಲಿ-ಪ್ರಬುದ್ಧನಿರಲಿ, ಸಾತ್ವಿಕನಿರಲಿ-ತಾಮಸನಿರಲಿ, ಸರ್ವಸಂಗಪರಿತ್ಯಾಗಿಯಿರಲಿ-ವಿಷಯಾಸಕ್ತನಿರಲಿ, ಪತಿತನಿರಲಿ-ಪಾವನನಿರಲಿ; ಶಿವನು ಅವರ ಭಕ್ತಿಗಾಗಿ ಅವರ ಅಭೀಷ್ಟನನ್ನೀಯುವನು! ಈ ಅಭೀಷ್ಟಪ್ರದರೂಪ ಅನುಗ್ರಹದಿಂದ ಅವರ ಉದ್ಧಾರವಾಗದಿದ್ದರೆ, ಆ ಭಗವಂತನ ನಿಗ್ರಹರೂಪವಾದ ಉದ್ಧಾರಸಾಧನವು ಸಿದ್ಧವಾಗಿಯೇ ಇರುತ್ತದೆ. ವಿವೇಕಶೀಲಾ, ತ್ರಿಪುರದೊಳಗಿನ ದೈತ್ಯರ ಉದಾಹರಣೆಯನ್ನೇ ತೆಗೆದುಕೋ. ಅವರು ಶಿವಭಕ್ತರಿದ್ದು ಧರ್ಮರತರಾಗಿರುವವರೆಗೆ ಶಿವಭಕ್ತಿಯ ಮೂಲಕ ಅವರು ಬ್ರಹ್ಮಾದಿದೇವತೆಗಳಿಗೆ ಅವಧ್ಯರಾಗಿದ್ದರು. ಮುಂದೆ ಅವರನ್ನು ಭಗವಾನ್ ವಿಷ್ಣುವು ಲೋಕಹಿತಕ್ಕಾಗಿ ಧರ್ಮಭ್ರಷ್ಟರಾಗಿ ಮಾಡಿದಾಗ, ಅವರು ಶಿವನಿಂದ ಮಾತ್ರ ವಧ್ಯರಾಗಲು, ಅವರನ್ನು ಸಾಕ್ಷಾತ್ ಶಂಕರನು ಸಂಹರಿಸಿದಾಗ ಅವರಿಗೆ ಶಿವಭಕ್ತಿಯಮೂಲಕ ಗಣಪದವಿಯು ದೊರೆಯಿತು. ಅಂದಬಳಿಕ ಶಿವನ ಅನುಗ್ರಹ-ನಿಗ್ರಹಗಳಲ್ಲಿ ಭೇದವೇನಿರುವದು? ವಿವೇಕಶೀಲಾ, ದೈತ್ಯರ ಮಾತಂತು ಹೋಗಲಿ, ಸತ್ವಮೂರ್ತಿಯೆನಿಸುವ ಭಗವಾನ್ ವಿಷ್ಣುವೂ, ರಜೋಮೂರ್ತಿಯೆನಿಸುವ ಲೋಕಪಿತಾಮಹ ಬ್ರಹ್ಮನೂ ಶಿವಭಕ್ತರೇ ಇದ್ದು, ಶಿವಾನುಗ್ರಹದಿಂದಲೇ ಅವರು ತಮ್ಮ ಸ್ಥಿತಿ-ಸೃಷ್ಟಿಕಾರ್ಯಗಳನ್ನು ನಡಿಸುತ್ತಿರುವರಲ್ಲವೆ? ಅದರಲ್ಲಿಯೂ ಭಗವಾನ್ ವಿಷ್ಣುವಂತು ಶಿವಭಕ್ತರಲ್ಲಿ ಶ್ರೇಷ್ಠನೂ, ಶಿವನ ಆತ್ಮಸ್ವರೂಪನೂ ಆಗಿರುವನೆಂದು ಲಿಂಗಪುರಾಣಾದಿಗಳಲ್ಲಿ ಹೇಳಿರುವದು.

ಅಂಥ ಸಾತ್ವಿಕ ಶಿವಭಕ್ತ ವಿಷ್ಣುವೂ ಕೂಡ ಭೃಗುಋಷಿಯ ಶಾಪದಿಂದ ದಶಾವತಾರ ತಾಳಿದಾಗ ಮತ್ಸ್ಯ, ವರಾಹ, ನೃಸಿಂಹ, ವಾಮನ ಅವತಾರಗಳಲ್ಲಿ ಅವುಗಳ ಜಗತ್ಕಲ್ಯಾಣದ ಕಾರ್ಯವಾದಬಳಿಕ ಆ ಅವತಾರಗಳು ಋಷಿಶಾಪಪಾಲನಕ್ಕಾಗಿ ಲೋಕಕಂಟಕವಾಗಲು, ಅವುಗಳ ಉಪಸಂಹಾರವನ್ನು ಭಗವಾನ್ ಶಂಕರನೇ ಮಾಡಲಿಲ್ಲವೆ? ಅದರಂತೆ, ಲೋಕಪಿತಾಮಹನಾದ ಬ್ರಹ್ಮನು ತನಗಿರುವ ಪಂಚಮುಖಗಳಯೋಗದಿಂದ ತಾನೇ ಪರಮೇಶ್ವರನೆಂದು ಅಹಂಕಾರತಾಳಲು, ಆಗ ಆತನದೊಂದು ಮುಖವನ್ನು ಚಿವುಟಿ ನಿಗ್ರಹಿಸಿ ಆತನನ್ನು ಚತುರ್ಮುಖನನ್ನು ಮಾಡಿದವರು ಯಾರು! ಹೀಗೆ ಸರ್ವನಿಗ್ರಹಾನುಗ್ರಹ ಸಾಮರ್ಥ್ಯವು ಒಬ್ಬ ಭಗವಾನ್ ಶಂಕರಪರಮಾತ್ಮನಿಗೆ ಮಾತ್ರ ಇರುತ್ತದೆ! ಇದಲ್ಲದೆ, ಸತ್ವಮೂರ್ತಿಯಾದ ಭಗವಾನ್ ವಿಷ್ಣುವು ಸೃಷ್ಟಿಯರಕ್ಷಣಕ್ಕಾಗಿ ಸುರಪಕ್ಷಪಾತಿಯೂ, ಅಸುರಮರ್ದನನೂ ಆಗಿ ಸೃಷ್ಟಿಪಾಲಕನೆನಿಸಿಕೊಂಡನು; ಆದರೆ ಭಗವಾನ್ ಶಂಕರನು ಸುರರಂತೆ ಅಸುರರಿಗೂ ಪೂಜ್ಯನಾಗಿ, ಸುರಾಸುರರಲ್ಲಿಯ ಸುಷ್ಟ-ದುಷ್ಟಗುಣಗಳೆರಡೂ ಮೋಕ್ಷರೂಪ ಪರಮಪುರುಷಾರ್ಥಕ್ಕೆ ಬಾಧಕಗಳೆಂದು ತಿಳಿದು ಅವುಗಳಿಗೆ ಮಹತ್ವಕೊಡದೆ ಅವರಲ್ಲಿಯ ದೃಢಭಕ್ತಿಯೊಂದನ್ನು ನೋಡಿ ಅನುಗ್ರಹದಿಂದಾಗಲಿ-ನಿಗ್ರಹದಿಂದಾಗಲಿ ಅಧಿಕಾರದಂತೆ ಸರ್ವರಿಗೂ ಮೋಕ್ಷಾದಿ ಪುರುಷಾರ್ಥಗಳನ್ನು ಕೊಡುತ್ತಿರುವನು. ವಿವೇಕಶೀಲಾ, ಇಂಥ ಘನತರವಾದ ಯೋಗ್ಯತೆಯು ನಮ್ಮ ಭಗವಾನ್ ಸದಾಶಿವನಲ್ಲಿಯಲ್ಲದೆ, ಅವನ ಅನುಗ್ರಹವಿಲ್ಲದ ಅನ್ಯರಲ್ಲಿ ಇರಬಹುದೇ ? ಭಕ್ತಿಪರವಶನಾದ ನಮ್ಮ ಪ್ರಭುವಿನ ಅತ್ಯಂತ ನಿಸ್ಪೃಹವೃತ್ತಿಯು, ಹಾಗು ಅನ್ಯರಿಗೆ ಸಾಧ್ಯವಿಲ್ಲದ ಕೊಡಗೈಯ್ಯಮಹಿಮೆಯನ್ನು ತೋರಿಸುವದಕ್ಕಾಗಿ ಶಿವಭಕ್ತಾಗ್ರೇಸರನಾದ ರಾವಣನಿಗೆ ಭಗವಾನ್ ಶಂಕರನು ತನ್ನ ಆತ್ಮಲಿಂಗ ಕೊಟ್ಟು ಭೂಕೈಲಾಸವನ್ನುಂಟುಮಾಡಿದ ಕಲ್ಯಾಣಕಾರಕ ಚರಿತ್ರವನ್ನು ಹೇಳುವೆನು ಕೇಳು.

---

## ೫ನೇ ಸುಧಾತರಂಗ !

## ಭೂ ಕೈಲಾಸವು !

(ಗೋಕರ್ಣಮಾಹಾತ್ಮ್ಯದ ಆಧಾರದಿಂದ)

ವಿವೇಕಶೀಲ, ನಾನು ಹೇಳುವ ಶಿವಚರಿತ್ರದಲ್ಲಿ ಲಕ್ಷ್ಯವಿರಲಿ. ಲಂಕಾಧಿಪತಿಯಾದ ರಾವಣನು ಒಂದಾನೊಂದುದಿನ ತನ್ನ ಆಸ್ಥಾನದಲ್ಲಿ ಕುಳಿತಾಗ ಉನ್ಮತ್ತನಾಗಿ ತನ್ನ ಬಂಧು-ಮಂತ್ರಿ-ಸೇನಾಪತಿ ಮೊದಲಾದವರನ್ನು ಕುರಿತು—ವೀರರೇ, ನಮ್ಮ ಶತ್ರುವಾದ ಸಾಪತ್ನಬಂಧು ಕುಬೇರನನ್ನು ದೇಶಾಂತರಕ್ಕಟ್ಟಿ ಈ ಭೂಲೋಕದ ಸಾಮ್ರಾಜ್ಯವನ್ನಂತು ನಾವು ಸಂಪಾದಿಸಿದೆವು. ಇದಕ್ಕೆಲ್ಲ ನನ್ನ ಅತುಲಪರಾಕ್ರಮವೂ, ಅದ್ವಿತೀಯ ಶಕ್ತಿಯೂ, ನಿಸ್ಸೀಮ ಶಿವಭಕ್ತಿಯೂ ಕಾರಣವಾಗಿರುವವು! ಭೂಲೋಕದ ರಾಜರೆಲ್ಲ ನಮಗೆ ಅಂಕಿತ

ವಾಗಿ ಕಪ್ಪಕಾಣಿಕೆಗಳನ್ನು ಕೊಡುತ್ತಿರುವರು; ಆದರೆ ಇಷ್ಟರಿಂದ ನಮಗೆ ತೃಪ್ತಿಯಿಲ್ಲವು. ಭೂಲೋಕಕ್ಕಿಂತ ಶ್ರೇಷ್ಠವಾದ ಸರ್ವೈಶ್ವರ್ಯಯುಕ್ತ ಸ್ವರ್ಗಲೋಕವನ್ನು ಗೆಲ್ಲಬೇಕೆಂಬ ಇಚ್ಛೆಯು ನನಗೆ ಆಗಿದೆ! ಈ ಮೊದಲು ಎಷ್ಟೋ ದೈತ್ಯರು ಈ ಸ್ವರ್ಗಪದದ ಪ್ರಾಪ್ತಿಗಾಗಿ ಯತ್ನಿಸಿ ಆ ಪದವನ್ನು ಪಡೆದು ಬಹುದಿವಸ ಭೋಗಿಸಿದರು; ಆದರೆ ಇಂದ್ರಾದಿದೇವತೆಗಳ ಪಕ್ಷಪಾತಿಯಾದ ಮಾಯಾವೀ ವಿಷ್ಣುವಿನ ತಂತ್ರದಿಂದ ಆ ಸ್ವರ್ಗಪದವು ದೈತ್ಯರಿಗೆ ಶಾಶ್ವತವಾಗಿ ದಕ್ಕಿರುವದಿಲ್ಲ; ಆದರೆ ನಾನು ಶಂಕರನ ಕೃಪೆಯಿಂದ ಪ್ರಾಪ್ತವಾದ ನನ್ನ ಬಾಹುಬಲದಿಂದ ಆ ಇಂದ್ರಾದಿ ದೇವತೆಗಳನ್ನು ಜಯಿಸುವೆನು. ಸ್ವರ್ಗಸುಖಗಳು ಅಲಭ್ಯವಾದವುಗಳು. ಇಂದ್ರನ ಹೆಂಡತಿಯಾದ ಶಚಿಯ ಸೌಂದರ್ಯವನ್ನು ವಿಷ್ಣುವಿನಂಥವರೂ ವರ್ಣಿಸುವರು; ಅಂದಬಳಿಕ ಅಂಥ ಸ್ತ್ರೀರತ್ನವು ನಮ್ಮ ಅರ್ಧಾಂಗವಾಗುವದು ಯೋಗ್ಯವು ! ವೀರರೇ , ಈ ಕಾರ್ಯದಲ್ಲಿ ನೀವೆಲ್ಲರೂ ಸಹಾಯುಮಾಡತಕ್ಕದ್ದು ಎನ್ನಲು , ಮಂತ್ರಿಮೊದಲಾದವರು ಸ್ವರ್ಗಭೋಗದ ಆಶೆಯಿಂದ ರಾವಣನಮಾತಿಗೆ ಸಂತೋಷದಿಂದ ಒಪ್ಪಿಕೊಂಡರು. ಆಗ ಕುಂಭಕರ್ಣನು ಅಣ್ಣನನ್ನು ಕುರಿತು—ಅಣ್ಣಾ, ಸ್ವರ್ಗಪ್ರಾಪ್ತಿಯು ನಿಮ್ಮ ವಿಚಾರವು ಸ್ತುತ್ಯವಾದದ್ದು; ಆದರೆ ಯುದ್ಧದಂಥ ಹಿಂಸಾಕಾರ್ಯದಿಂದ ಲಕ್ಷಾವಧಿ ಪ್ರಾಣಿಹಿಂಸೆಮಾಡುವದಕ್ಕಿಂತ ತಪೋಬಲದಿಂದ ಕೈಲಾಸನಾಥನಲ್ಲಿ ಇಂದ್ರಪದವನ್ನು ಬೇಡಿಕೊಳ್ಳುವದು ಹೆಚ್ಚು ಹಿತಕರವಾಗಿ ತೋರುತ್ತದೆ. ತಮ್ಮ ಅಪ್ಪಣೆಯಾದರೆ ನಾನು ಹಾಗೆ ಮಾಡುವೆನು, ಅನ್ನುತ್ತಿರಲು, ವಿಭೀಷಣನು ತನ್ನ ಅಣ್ಣನಾದ ರಾವಣೇಶ್ವರನನ್ನು ಕುರಿತು—“ಅಣ್ಣಾ, ಮನುಷ್ಯನು ವರಿಷ್ಟಪದವನ್ನು ಬಯಸುವದು ಅನ್ಯಾಯುವಲ್ಲದಿದ್ದರೂ, ಸಾರಾಸಾರವಿಚಾರಕ್ಕೂ, ಸದಸದ್ವಿವೇಕಬುದ್ಧಿಗೂ ಆಸ್ಪದಕೊಡದಿರುವದು ಯೋಗ್ಯವಲ್ಲ. ಈ ಮೇರೆಗೆ ಸ್ವರ್ಗಪ್ರಾಪ್ತಿಗಾಗಿ ಪಾತಾಲಾಧಿಪತಿಗಳಾದ ಎಷ್ಟೋ ದೈತ್ಯರು ಪ್ರಯತ್ನಮಾಡಿ ಕೆಲವರು ಕೈಯೂರಿರುವರು; ಕೆಲವರು ಮಣ್ಣುಮುಕ್ಕುತ್ತ ಬಿದ್ದಿರುವರು; ಕೆಲವರು ಸರ್ವಸ್ವವನ್ನು ಕಳೆದುಕೊಂಡು ಮೃತ್ಯುವಶವಾಗಿರುವರು. ಅಂಥ ಅಸಾಧ್ಯಕಾರ್ಯಕ್ಕೆ ನಾವು ಯಾಕೆ ಉದ್ಯುಕ್ತರಾಗಬೇಕು? ಆ ದೇವತೆಗಳಿಗೆ ಮಹಾವಿಷ್ಣುವಿನ ಬೆಂಬಲವಿರುವದು. ಮೇಲಾಗಿ ಅವರು ದೇವತೆಗಳಿರುವರು , ನಾವು ಮನುಷ್ಯರಿರುವೆವು, ಅನ್ನಲು, ರಾವಣನು ಇಬ್ಬರು ಬಂಧುಗಳಮಾತನ್ನೂ ತಿರಸ್ಕರಿಸಿ—ಸಾಕು, ನಿಮ್ಮ ಈ ವ್ಯರ್ಥವಾದ ಅಂಜುಬುರುಕ ಆಲೋಚನೆಯು ನನಗೆ ಸಾಕು. ಭುಜಬಲದಿಂದ ಫಲಪ್ರಾಪ್ತಿಮಾಡಿಕೊಳ್ಳದೆ ತಪಸ್ಸುಮಾಡಬೇಕೆನ್ನುವದು ಆಲಸ್ಯದ ಲಕ್ಷಣವು. ಸಾರಾಸಾರವಿಚಾರಕ್ಕೂ , ಸದಸದ್ವಿವೇಕಬುದ್ಧಿಗೂ ಸಲ್ಲದ್ದರಿಂದ ಇದು ನಮ್ಮ ಕೆಲಸವಲ್ಲವೆಂದು ಹೇಳುವದು ಹೇಡಿತನವು. ನನಗೆ ನಿಮ್ಮಿಬ್ಬರ ವಿಚಾರವೂ ಸಮ್ಮತವಿಲ್ಲ. ಬಾಹುಬಲದಿಂದಲೇ ಇಂದ್ರಪದವನ್ನು ಸಂಪಾದಿಸಬೇಕೆಂದು ನಾನು ನಿಶ್ಚಯಿಸಿರುವೆನು; ಆದರೆ ತಾಯಿಯಾದ ಕೈಕಸಿಯ ಆಶೀರ್ವಾದವನ್ನು ಪಡೆದು ಆಮೇಲೆ ನನ್ನ ಕಾರ್ಯಕ್ಕೆ ತೊಡಗುವೆನು.

ಈ ಮೇರೆಗೆ ನುಡಿದು ರಾವಣನು ಸಮುದ್ರತೀರದಲ್ಲಿ ಲಿಂಗಪೂಜೆಮಾಡುತ್ತಿರುವ ಕೈಕಸಿಯುಬಳಿಗೆ ಹೋದನು. ಆಗ ಕೈಕಸಿಯು ತನ್ನ ಮೃತ್ತಿಕಾಲಿಂಗವು ಪೂಜಾಸಮಾಪ್ತಿಯ ಮೊದಲೇ ಸಮುದ್ರದ ತೆರೆಯಿಂದ ನಾಶವಾಗಿಹೋದದ್ದರಿಂದ ದುಃಖಿತಳಾಗಿ ಭಗವಾನ್ ಶಂಕರನನ್ನು ಕುರಿತು—ದೇವಾ, ಚಾಂಡಾಲಿಯಾದ ನಾನು ಅಂಥಪಾಪವನ್ನೇನು ಮಾಡಿದ್ದೆನು? ಪೂಜಾಸಮಾಪ್ತಿಯ ಮೊದಲೇ ಹೀಗೆ ಸಮುದ್ರದ ತೆರೆಯಿಂದ ಲಿಂಗವು ನಾಶವಾಗಬೇಕೇ? ಆಗಲಿ, ನನ್ನಂಥ ಪಾಪಿಗೆ ನಾಳಿನ ಇಷ್ಟುಹೊತ್ತಿನತನಕ ಊಪೋಷಣ ದಂಡವನ್ನು ಭೋಗಿಸುವದು ಯೋಗ್ಯವಾಗಿರುವದು, ಎಂದು ನುಡಿಯುತ್ತಿರಲು, ರಾವಣನು ತಾಯಿಯನ್ನು ನಮಸ್ಕರಿಸಿ ಆಕೆಯನ್ನು ಕುರಿತು—

ರಾವಣ—ಅವ್ವಾ, ದಂಡವು ಯಾರಿಗೆ ? ರಾವಣೇಶ್ವರನು ಜೀವದಿಂದಿರುವಾಗ ನಿನ್ನನ್ನು ದಂಡಿಸುವ ಸಾಮರ್ಥ್ಯವು ಯಾರಿಗಿರುವದು ?

ಕೈಕಸಿ—ಬಾಲಕಾ, ರಾವಣಾ, ನಾನು ನಿಜವಾಗಿಯೇ ದಂಡಕ್ಕೆ ಪಾತ್ರಳಿರುವೆನು; ಯಾಕಂದರೆ ಇಂದು ಲಿಂಗಪೂಜೆಯು ಸಾಂಗವಾಗಲಿಲ್ಲ. ನಿತ್ಯ-ನಿಯಮದಂತೆ ತೀರ್ಥಪ್ರಸಾದಗಳು ದೊರೆಯಲಿಲ್ಲ; ಅಂದಬಳಿಕ ನಾಳೆ ಬೆಳಗಿನಲ್ಲಿ ಪೂಜೆಯು ಸಾಂಗವಾಗುವವರೆಗೆ ಉಪವಾಸವಿರುವದೇ ನನಗೆ ದಂಡವಾಗಿರುವದು.

ರಾವಣ—ಏನು ? ನಿನ್ನ ಶಿವಪೂಜೆ ಗೆಭಂಗವೆ? ಯಾರು ಮಾಡಿದರು? ಯಾವನು ಇಷ್ಟು ಉನ್ಮತ್ತನಾದನು ? ಯಾವನ ಸಾಹಸವಿದು ? ಛೀ ಛೀ ! ರಾಜಮಾತೆಯ ಅಪಮಾನವು-ಲಿಂಗಪೂಜೆಯ ನಾಶವು-ಶಂಭುಮಹಾದೇವನ ಅವಹೇಲನೆಯು! ಇಂಥ ಯಾವನಾಧಮನು ಈ ಲಂಕೆಯಲ್ಲಿರುವನು ? ತಾಯಿ, ದುಃಖವನ್ನು ಸಹಿಸು ! ಆ ದುಷ್ಟನನ್ನು ತುಂಡುತುಂಡಾಗಿ ತುಂಡರಿಸುವೆನು, ಅವನ ಹೆಸರುಮಾತ್ರ ಹೇಳು-

ಕೈಕಸಿ—ರಾವಣಾ, ಸುಮ್ಮನೆ ಯಾಕೆ ಸಂತಾಪಗೊಳ್ಳುವೆ ? ಈ ಕೈಕಸಿಯ ಅಪಮಾನವು, ಅದರಲ್ಲಿಯೂ ವ್ರತಭಂಗವು ಒಬ್ಬ ಮನುಷ್ಯನಿಂದ ಎಂದಾದರೂ ಆಗಬಹುದೇ ?

ರಾವಣ—ಮಾನವನಿಂದಾಗದಿದ್ದರೆ, ಯಾವನೊಬ್ಬ ದೈತ್ಯನಿಂದಾಯಿತೇ ?

ಕೈಕಸಿ—ಛೆ ಛೆ! ನಿನ್ನ ಪರಾಕ್ರಮವನ್ನು ನೋಡಿ ಭೂಲೋಕದೊಳಗಿನ ಮಾನವರೂ, ಪಾತಾಳದೊಳಗಿನ ದೈತ್ಯರೂ ಮೇಲಕ್ಕೆ ತಲೆಯೆತ್ತಲಾರರೆಂಬ ನಂಬಿಗೆಯು ನನಗಿದೆ.

ರಾವಣ—ಹಾ ಹಾ ! ತಿಳಿಯಿತು. ಇದೆಲ್ಲ ಚೇಷ್ಟೆಯು ಆ ಸ್ವರ್ಗದೊಳಗಿನ ದೇವತೆಗಳದು- ಇಂದ್ರನ, ಹಾಗು ಅವನ ಪಕ್ಷಪಾತಿಯಾದ ಮಹಾವಿಷ್ಣುವಿನ ಆಟವಿದು. ಅವರು ನನ್ನ ಐಶ್ವರ್ಯಕ್ಕಾಗಿ ಹೊಟ್ಟೆಕಿಚ್ಚುಬಡುತ್ತಿರುವರೋ ?

ಕೈಕಸಿ—ಅಲ್ಲ, ಇದು ಇಂದ್ರಾದಿಕರ ಕಾರ್ಯವೂ ಅಲ್ಲ- ಆ ದೇವತೆಗಳು ಈಶ್ವರ ಪೂಜೆಗೆ ಎಂದೂ ವಿಘ್ನಮಾಡತಕ್ಕವರಲ್ಲ. ಸಮುದ್ರದ ಒಂದು ತೆರೆಯಿಂದ ಪೂಜೆಯಾಗುವ ಮೊದಲೇ ಲಿಂಗವು ತೇಲಿಹೋಯಿತು- ಸಾಗರನು ಇಂದು ಯಾಕೆ ತನ್ನ ಮರ್ಯಾದೆಯ ಉಲ್ಲಂಘನ ಮಾಡಿದನೆಂಬ ಚಿಂತೆಯಲ್ಲಿ ನಾನಿರುವೆನು. ಆ ಇಂದ್ರಾದಿದೇವತೆಗಳ,

ಹಾಗು ಆ ವೈಕುಂಠನಾಯಕನ ವಿಷಯವಾಗಿ ನೀನು ಎಂದೂ ಅಸೂಯಪಡಬೇಡ; ಅವರು ಯಾವಾಗಾದರೂ ನಮಗೆ ಪೂಜ್ಯರಾಗಿರುವರು.

ರಾವಣ—ಅವರು ಸರ್ವಥಾ ನಮಗೆ ಪೂಜ್ಯರಲ್ಲ. ಆ ಇಂದ್ರಾದಿ ದೇವತೆಗಳ ಸಮಾಚಾರವನ್ನು ನಾನು ಪೂರಾ ತಕ್ಕೊಳ್ಳಬೇಕಾಗಿದೆ. ಅವ್ವಾ, ನಾನು ಈಗ ಒಮ್ಮೆಲೆ ಸ್ವರ್ಗವನ್ನು ಮುತ್ತಿ ಇಂದ್ರಾದಿ ದೇವತೆಗಳನ್ನೂ, ಆ ಕಪಟಿಯಾದ ಮಹಾವಿಷ್ಣುವನ್ನೂ ಜೀವದಿಂದ ಹಿಡಿದುಕೊಂಡು ಬರುವೆನು.

ಕೈಕಸಿ—ಹ, ಸಾಕುಮಾಡು ನಿನ್ನ ಈ ಬಡಬಡಿಕೆಯನ್ನು. ಎಲಾ, ನೀನು ಆ ಮಹೇಂದ್ರನನ್ನೂ, ಮಹಾವಿಷ್ಣುವನ್ನೂ ಸರಿಗಟ್ಟುವೆಯಾ! ಎಂಥ ಗರ್ವವಿದು!

ರಾವಣ—ತ್ರಿಲೋಕಗಳಲ್ಲಿ ಈ ಲಂಕಾಧೀಶ್ವರನಾದ ರಾವಣನ ವಿಜಯಧ್ವಜವು ಮೆರೆಯಬೇಕಾಗಿದೆ! ಪಾತಾಳದೊಳಗಿನ ದೈತ್ಯರೂ, ಸ್ವರ್ಗದೊಳಗಿನ ಇಂದ್ರಾದಿದೇವತೆಗಳೂ ನನಗೆ ಅಂಕಿತರಾಗಲೇಬೇಕು. ನನ್ನ ಈ ಮಹತ್ವಾಕಾಂಕ್ಷೆಯನ್ನು ಸಾಧಿಸಿಯೇ ಬಿಡುವೆನು. ಒಬ್ಬ ಶಂಭುಮಹಾದೇವನ ಹೊರತು ಬೇರೆ ಯಾರಿಗೂ ನಾನು ಶಿರವನ್ನು ಬಾಗಿಸಲಾರೆನು. ನನ್ನ ಮುಂದೆ ಆ ಇಂದ್ರಾದಿ ದೇವತೆಗಳ, ಹಾಗು ವಿಷ್ಣುವಿನ ದೊಡ್ಡಿಸ್ತನವು ಇಷ್ಟು ಏಕೆ ಇರಬೇಕು?

ಕೈಕಸಿ—ರಾವಣಾ, ನಿನ್ನ ಬುದ್ಧಿ ಭ್ರಂಶವಾಗಿರುವದು. ಯಶೋಮದದಿಂದ ನೀನು ಅಂಧನಾಗಿರುವೆ. ಎಲಾ, ನಿನ್ನಿಂದ ಆ ದೇವತೆಗಳ ಕೂದಲವೂ ಕೊಂಕಲಾರದು; ಆದರೆ ನಿನ್ನ ಉದ್ಧಾಮತನದಿಂದ ಮಹಾ ಅನರ್ಥವು ಒದಗಿ, ನಾನು ಮಾತ್ರ ಇನ್ನು ಮುಂದೆ ದುಃಖದಿಂದ ಕಾಲಹರಣ ಮಾಡಬೇಕಾಗುವದು.

ರಾವಣ—ಅವ್ವಾ, ನಿನಗೆ ದುಃಖವಾಗುತ್ತಿದ್ದರೆ ಆ ದೇವತೆಗಳ ಸಮಾಚಾರವನ್ನು ಹಿಂದಿನಿಂದ ತೆಗೆದುಕೊಳ್ಳುವೆನು. ಇನ್ನು ಮುಂದೆ ನಿನಗೆ ಮೃತ್ತಿಕೆಯ ಲಿಂಗವನ್ನು ಪೂಜಿಸುವ ಪ್ರಸಂಗವು ಬರಬಾರದೆಂದು, ಈಗ ಭಗವಾನ್ ಶಂಭುವಿನ ಆತ್ಮಲಿಂಗವನ್ನು ಸಂಪಾದಿಸಿಕೊಂಡು ಬರುತ್ತೇನೆ. ನಾನು ನಿಜವಾಗಿಯೇ ಬ್ರಾಹ್ಮಣಪುತ್ರನಾಗಿದ್ದರೆ, ತಪೋಬಲದಿಂದ ಆ ಮಹಾದೇವನನ್ನು ಒಲಿಸಿಕೊಂಡು ಈ ಮಹಾಕಾರ್ಯವನ್ನು ಸಾಧಿಸುವೆನು. ಅವ್ವಾ, ಆತ್ಮಲಿಂಗವನ್ನು ಸಂಪಾದಿಸದೆ ಬಂದರೆ ನಿನ್ನ ಹೊಟ್ಟೆಯಲ್ಲಿಹುಟ್ಟಿ ಈ ಭೂತಲದಲ್ಲಿ ಪಶುವಿನಂತೆ ಭಾರಭೂತವಾದೆನೆಂದು ತಿಳಿಯುವೆನು. ನಾನಿರುತ್ತಿರಲು, ನಿನಗೆ ದುಃಖವೇ? ನನ್ನ ಈ ಪ್ರತಿಜ್ಞೆಯು ಪೂರ್ಣವಾಗುವವರೆಗೆ ನಾನು ಲಂಕೆಯಲ್ಲಿ ಕಾಲು ಹಾಕಲಿಕ್ಕಿಲ್ಲ. ನಿನ್ನ ಆಶೀರ್ವಾದದ ಬಲದಿಂದ ನಾನು ತ್ರಿಭುವನಗಳನ್ನು ಜಯಿಸೇನು.

ಕೈಕಸಿ—ಹೋಗು, ಈ ಕಾರ್ಯದಲ್ಲಿ ಯಶಸ್ಸು ಪ್ರಾಪ್ತವಾಗಬೇಕೆಂದು ನಾನು ನಿನ್ನನ್ನು ಆಶೀರ್ವದಿಸುವೆನು.

ವಿವೇಕಶೀಲಾ, ಈ ಮೇರೆಗೆ ತಾಯಿಯ ಆಶೀರ್ವಾದಪಡೆದು ರಾವಣನು ಕೈಲಾಸಕ್ಕೆ ಹೊರಟನು. ರಾವಣನು ಅತ್ಯಂತ ಮಾತೃಭಕ್ತನು; ಮೇಲಾಗಿ ಬ್ರಹ್ಮನಿಷ್ಠ

ಶಿವಭಕ್ತನು; ಆದರೆ ದೈವಸಂಕಲ್ಪದಿಂದ ಮಹಾ ಗರ್ವಿಷ್ಠನಾದದ್ದರಿಂದ ತಾನು ಮನುಷ್ಯನಿದ್ದರೂ, ದೈತ್ಯರಂತೆ ಆಚರಿಸಿ ಸ್ವರ್ಗವನ್ನು ಗೆಲ್ಲುವ ಅಭಿಲಾಷೆತಾಳಿದನು. ಆತನ ಈ ದುರ್ವಿಚಾರವನ್ನು ನಾರದನು ಭಗವಾನ್ ಶಂಕರನಿಗೆ ತಿಳಿಸಲು. ಮಾತೃಭಕ್ತನಾದ ಆ ರಾವಣನನ್ನು ಧರ್ಮಿಷ್ಠಳಾದ ಆತನ ತಾಯಿಯ ಮುಖಾಂತರವಾಗಿ ಹಾದಿಗೆ ತರಬೇಕೆಂದು ತಿಳಿದು ಆ ಭಗವಂತನು ತನ್ನ ಅಷ್ಟಮೂರ್ತಿಗಳಲ್ಲಿ ಒಂದಾದ ಜಲತತ್ವವನ್ನು ಪ್ರೇರಿಸಿದ್ದರಿಂದ, ಸಮುದ್ರದ ಒಂದು ತೆರೆಯು ಪ್ರತಾಪಿಯಾದ ರಾವಣನ ತಾಯಿಯ ಶಿವಪೂಜೆಗೆ ವಿಘ್ನವನ್ನುಂಟುಮಾಡಲು ಸಮರ್ಥವಾಯಿತು; ಇಲ್ಲದಿದ್ದರೆ ಮಹಾ ಸಮರ್ಥ ರಾವಣನ ಧರ್ಮನಿಷ್ಠ ತಾಯಿಯ ವ್ರತಭಂಗಮಾಡುವ ಧೈರ್ಯವು ಸಮುದ್ರನಿಗಾಗಬಹುದೆ? ರಾವಣನಾದರೂ ಭಗವದಿಚ್ಛೆಯಂತೆ ತಾಯಿಯ ಇಚ್ಛಾನುವರ್ತಿಯಾಗಿ ಸ್ವರ್ಗಕ್ಕೆ ದಾಳಿ ಇಡುವದನ್ನು ಬಿಟ್ಟು, ಶಂಭುವಿನ ಆತ್ಮಲಿಂಗವನ್ನು ಸಂಪಾದಿಸಲು ತಪಸ್ಸಿಗೆ ಹೊರಟನು. ಆ ಭಗವಂತನ ಆತ್ಮಲಿಂಗದ ಯೋಗ್ಯತೆಯು ಸಾಮಾನ್ಯವಾದದ್ದಲ್ಲ. ಸತ್ವಗುಣರೂಪವಾದ ಮೃಗಶೃಂಗಾಕಾರದ ಆ ಆತ್ಮಲಿಂಗದ ಪೂಜೆಯನ್ನು ಸಾಕ್ಷಾತ್ ಈಶ್ವರನು ನಿತ್ಯದಲ್ಲಿ ಮಾಡಿ, ಅದರ ತೀರ್ಥಪ್ರಸಾದಗಳನ್ನು ಗ್ರಹಿಸುತ್ತಿದ್ದನು. ಆ ಲಿಂಗದ ಯೋಗ್ಯತೆಯು ಇಷ್ಟುಘನವಾದದ್ದು- ಅದರಲ್ಲಿ ಜಗತ್ತಿನ ಸತ್ವವೆಲ್ಲ ಒಟ್ಟುಗೂಡಿರುವದು. ಇದೊಂದು ರಾವಣನ ಕೈಸೇರಿದರೆ ಜಗತ್ತಿನ ಸತ್ವವೇ ಅವನ ಕೈಸೇರಿದಹಾಗಾಗುತ್ತಿತ್ತು. ಇಂಥ ಲಿಂಗಪ್ರಾಪ್ತಿಗಾಗಿ ಮಹಾ ಶಿವಭಕ್ತನಾದ ರಾವಣನು ಘೋರತಪಶ್ಚರ್ಯಮಾಡತೊಡಗಿದನು. ರಾವಣೇಶ್ವರನ ಶಿವಭಕ್ತಿಯು ಅತ್ಯಂತ ದೃಢವಾದದ್ದು. ಭಗವಾನ್ ಶಂಕರನಂತು ಭಕ್ತಿಪ್ರಿಯನು. ಆ ಭಕ್ತವತ್ಸಲನು ರಾವಣನ ಭಕ್ತಿಯುಕ್ತ ತಪಸ್ಸಿಗೆ ಪ್ರಸನ್ನನಾಗಿ ಇಚ್ಛಿತವರವನ್ನು ಬೇಡಿಕೊಳ್ಳೆಂದು ಹೇಳಲು, ತಮೋವ್ಯಾಪ್ತನಾದ ರಾವಣನು ಜಗನ್ಮಾತೆಯಾದ ಪಾರ್ವತಿಯರೂಪಕ್ಕೆ ಮೋಹಿತನಾಗಿ ತನ್ನ ಆತ್ಮಲಿಂಗದ ಇಚ್ಛೆಯನ್ನು ಮರೆತು ಭಗವಾನ್ ಶಂಕರನನ್ನು ಕುರಿತು—ದೇವಾಧಿದೇವನೇ, ಈ ಪಾರ್ವತಿಯ ಸೌಂದರ್ಯವು ಎಷ್ಟು ಅಪ್ರತಿಮವಾದದ್ದು! ಈಕೆಯ ತೇಜವನ್ನು ನೋಡಿ ಯಾವನ ಆತ್ಮವು ವಿಲೀನವಾಗಲಿಕ್ಕಿಲ್ಲ! ಕೈಲಾಸನಾಥಾ, ನಿನ್ನ ಭಾಗ್ಯವು ಧನ್ಯವಾದದ್ದು; ಆದರೆ ವೈರಾಗ್ಯಶೀಲನೂ, ಶ್ಮಶಾನವಾಸಿಯೂ, ನಿರ್ವಿಕಾರನೂ ಆದ ನೀನು ಕಾಮಿಜನರಂತೆ ಈ ಪಾರ್ವತಿಯೊಡನೆ ಇರುವದು ಒಪ್ಪುವದಿಲ್ಲವು. ಈ ಲಾವಣ್ಯವತಿಯು ರಾಜೈಶ್ವರ್ಯಸಂಪನ್ನನಾದ ನನ್ನಲ್ಲಿರುವದು ಯೋಗ್ಯವು! ಆದ್ದರಿಂದ ನನ್ನ ತಪಸ್ಸಿನ ಶ್ರೇಯಸ್ಸೆಂದು ತಿಳಿದು ಈಕೆಯನ್ನು ನನಗೆ ಕೊಡು. ಈ ಸುಂದರಿಯ ಹೊರತು ನನಗೆ ಯಾತರ ಇಚ್ಛೆಯೂ ಇಲ್ಲ, ಎಂದು ಕೇಳಲು, ತ್ರಿಲೋಕಗಳು ಕಂಪಿಸುವಂತಹ ರಾವಣನ ಈ ಬೇಡಿಕೆಯನ್ನು ಕೇಳಿ, ಅತ್ಯಂತ ಸಮರ್ಥನೂ, ಭಕ್ತವತ್ಸಲನೂ ಆದ ಪರಮೇಶ್ವರನು ರಾವಣನನ್ನು ಕುರಿತು—"ರಾವಣಾ, ನಿನ್ನ ಎಷ್ಟು ಅಯೋಗ್ಯಬೇಡಿಕೆಯಿದು! ಇದರಿಂದ ನಿನ್ನ ತಮೋವೃತ್ತಿಯು, ಚನ್ನಾಗಿ ವ್ಯಕ್ತವಾಗುವದು. ಅಲ್ಲೋ, ಯಾವತ್ತೂ ವಿಶ್ವದಜನನಿಯೂ,

ಆದಿಮಾಯೆಯೂ, ಈ ಶಂಕರನ ಅರ್ಧಾಂಗಿಯೂ ಆದವಳಲ್ಲಿ ನಿನ್ನ ಅಭಿಲಾಷೆಯೆ? ದೇವತೆಗಳು ವರಕೊಡುವಾಗ ಭಕ್ತರ ಸತ್ವಪರೀಕ್ಷೆಮಾಡುವದುಂಟು; ಆದರೆ ಈಗ ಭಕ್ತರೇ ದೇವರ ಸತ್ವಪರೀಕ್ಷೆ ಮಾಡಿದಹಾಗಾಯಿತಲ್ಲ! ಆದರೆ ಭಕ್ತಶ್ರೇಷ್ಠ ರಾವಣಾ, ವಿಚಾರಮಾಡಿ ಇನ್ನೊಮ್ಮೆ ವರವನ್ನು ಬೇಡು," ಎಂದು ಹೇಳಲು, ರಾವಣನು—ಪ್ರಭೋ, ನನ್ನ ದೇಹವೂ, ಮನಸ್ಸೂ ಪಾರ್ವತೀಮಯವಾಗಿರುವದರಿಂದ, ನನಗೆ ವೈಕುಂಠಪದವಿಯು ಬೇಡ, ಇಂದ್ರಪದವಿಯು ಬೇಡ ; ನನಗೆ ಈ ಶೈಲನಂದಿನಿಯ ಹೊರತು ಬೇರೆ ಯೇನೂ ಬೇಡ!

ಈ ಮೇರೆಗೆ ನುಡಿದದ್ದನ್ನು ಕೇಳಿ ಭಕ್ತವತ್ಸಲನಾದ ಸರ್ವೋತ್ತಮ ಶಂಕರನು ರಾವಣನಿಗೆ—"ಭಕ್ತಶ್ರೇಷ್ಠ ರಾವಣಾ, ಹಾಗೇಆಗಲಿ"- ಎಂದು ಹೇಳಿ ಭಗವತೀ ಪಾರ್ವತಿಯನ್ನು ಕುರಿತು—ದೇವೀ, ನನ್ನ ಭಕ್ತನ ಇಚ್ಛೆಯನ್ನು ಪೂರ್ಣಮಾಡುವದು ನನ್ನ ಕರ್ತವ್ಯವು; ಆದ್ದರಿಂದ ನೀನು ರಾವಣನ ಅರ್ಧಾಂಗಿಯಾಗಿ ಆತನೊಡನೆ ಲಂಕೆಗೆ ಹೋಗಬೇಕೆಂದು ನಾನು ನಿನ್ನನ್ನು ಆಜ್ಞಾಪಿಸುವೆನು. ದೇವೀ, ನೀನು ಸರ್ವಸಾಕ್ಷಿಯಾಗಿರುವೆ. ನಿನ್ನ ಅಭಿಲಾಷೆಯಿಂದ ರಾವಣನು ಅಧೋಗತಿಯನ್ನು ಹೊಂದುತ್ತಲಿದ್ದಾನೆ! ಆದಿಮಾಯೆಯಾದ ನೀನೆತ್ತ, ಪಾಮರ ಮಾನವನಾದ ರಾವಣನೆತ್ತ, ತನ್ನ ಅನುಚಿತ ಕರ್ಮಕ್ಕಾಗಿ ಮುಂದೆ ರಾವಣನಿಗೆ ಪಶ್ಚಾತ್ತಾಪವಾಗುವದು; ಆದರೆ ನಮ್ಮ ಭಕ್ತವಾತ್ಸಲ್ಯಕ್ಕೆ ಕುಂದುಬಾರದಂತೆ ನಾವು ಈ ಭಕ್ತಶ್ರೇಷ್ಠನೊಡನೆ ನಡೆದುಕೊಳ್ಳತಕ್ಕದ್ದು, ಅನ್ನಲು, ಜಗದಂಬೆಯು—ನಾಥ, ಪತಿಯ ಆಜ್ಞೆಯು ಸತಿಗೆ ಹ್ಯಾಗೆ ಅಮಾನ್ಯವಾದೀತು? ರಾವಣೇಶ್ವರನೊಡನೆ ಹೋಗಲು ನಾನು ಸಿದ್ಧಳಿರುವೆನು, ಎಂದು ಹೇಳಿದಳು. ವಿವೇಕಶೀಲಾ, ಈ ದೇವಭಕ್ತರ ಆಟದಿಂದ ನಮ್ಮಂಥ ಪಾಮರರ ಮತಿಯು ಗುಂಗಾಗಿ ಹೃದಯವು ಕಂಪಿಸಿದರೆ ಆಶ್ಚರ್ಯವಲ್ಲ! ರಾವಣನು ಜಗನ್ಮಾತೆಯನ್ನು ಹೆಗಲಮೇಲೆ ಕುಳ್ಳಿರಿಸಿಕೊಂಡು ಲಂಕೆಗೆ ಹೊರಟನು- ಹೀಗೆ ಶಿವ, ಹಾಗು ಶಿವಶಕ್ತಿಯ ವಿಯೋಗವಾದದ್ದಕ್ಕಾಗಿ , ಅಥವಾ ಕಾರ್ಯ-ಕಾರಣಸಂಬಂಧವು ಕಡಿದದ್ದಕ್ಕಾಗಿ ಬ್ರಹ್ಮಾದಿದೇವತೆಗಳು, ಇನ್ನು ಸೃಷ್ಟಿಯ ಸುರಕ್ಷಿತತೆಯು ಹ್ಯಾಗೆ ಉಳಿಯುವದು? ಎಂದು ಚಿಂತಿಸತೊಡಗಿ , ಮಹಾವಿಷ್ಣುವಿಗೆ ಶರಣುಹೋದರು. ಆಗ ವಿಷ್ಣುವು ನಾರದನನ್ನು ಕುರಿತು:— "ನಾರದಾ, ನೀನು ಈಗಲೇ ರಾವಣನಬಳಿಗೆ ಹೋಗಿ ನಾನು ಹೇಳಿದಂತೆ ಮಾಡು; ನನ್ನ ಮಾಯೆಯಿಂದ ಭಗವತೀ ಪಾರ್ವತಿಯು ರಾವಣನಿಗೆ ಅತ್ಯಂತ ವಿದ್ರೂಪವಾಗಿ ತೋರುವಳು. ಆಗ ನೀನು ಆತನಿಗೆ—ಈಕೆಯು ಪಾರ್ವತಿಯಲ್ಲವೆಂತಲೂ, ನಿನ್ನನ್ನು ಮೋಸಗೊಳಿಸುವದಕ್ಕಾಗಿ ಪರಮೇಶ್ವರನು ನಿಜವಾದ ಪಾರ್ವತಿಯನ್ನು ಪಾತಾಳಲೋಕಕ್ಕೆ ಮಯನ ಬಳಿಗೆ ಕಳಿಸಿ ಈಕೆಯನ್ನು ನಿನ್ನ ಕೊರಳಿಗೆ ಕಟ್ಟಿರುವನೆಂತಲೂ ಹೇಳಿ, ಮಯನಮಗಳಾದ ನನ್ನ ಅಂಶವೆನಿಸುವ ಅಯೋನಿಜೆ ಮಂದೋದರಿಯನ್ನು ಪಾರ್ವತಿಯೆಂದು ಹೇಳಿ ಅವಳೊಡನೆ ರಾವಣನ ವಿವಾಹಮಾಡಿಸು- ಮಂದೋದರಿಯ ಹಿತೋಪದೇಶದಿಂದ ರಾವಣನ ಸದ್ಗತಿಗೆ ಸಹಾಯವಾಗಬೇಕೆಂದು ನಾನು ಹಾಗೆ ಯೋಜಿಸಿರುವೆನು, ಎಂದು

ಕೇಳಲು, ನಾರದನು, ಲಂಕೆಗೆ ಸಾಗಿರುವ ರಾವಣನಬಳಿಗೆ ಹೋದನು. ನಾರದನನ್ನು ನೋಡಿ ರಾವಣನು ಸತ್ಕರಿಸಿ ಯೋಗಕ್ಷೇಮವ ವಿಚಾರಿಸುತ್ತಿರಲು, ನಾರದನು—ರಾವಣಾ, ಈ ಕುರೂಪಿಣಿಯಾದ ಸ್ತ್ರೀಯನ್ನು ಕತ್ತೆಯಹಾಗೆ ಹೊತ್ತುಕೊಂಡು ಎತ್ತಕಡೆಗೆ ಹೊರಟೆ? ನೀನೆತ್ತ, ಈ ಪಿಶಾಚಸ್ತ್ರೀಯೆತ್ತ ಅನ್ನಲು, ರಾವಣನು—ನಾರದಾ, ನಿನ್ನ ಕಣ್ಣುಗಳು ತಿರುಗಿದಂತೆ ತೋರುತ್ತವೆ; ಹಾಗಿಲ್ಲದಿದ್ದರೆ ತ್ರಿಲೋಕಸುಂದರಿಯಾದ ಪಾರ್ವತಿಯನ್ನು ಪಿಶಾಚಸ್ತ್ರೀಯೆಂದು ಕರೆಯುತ್ತಿದ್ದಿಲ್ಲ, ಎಂದು ನುಡಿಯುತ್ತ ಪಾರ್ವತಿಯನ್ನು ಕೆಳಗಿಳಿಸಲು, ವಿಷ್ಣುಮಾಯೆಯಿಂದ ನಿಜವಾಗಿಯೇ ಪಾರ್ವತಿಯು ಭದ್ರಕಾಲಿಯಾಗಿ ಉಗ್ರವೂ, ಅಸಹ್ಯವೂ ಆದ ರೂಪವನ್ನು ಧರಿಸಿದ್ದಳು. ಆಗ ರಾವಣನು, ಭಕ್ತನಾದ ನನ್ನನ್ನು ಭಗವಾನ್ ಶಂಕರನು ಮೋಸಗೊಳಿಸಿದನೆಂಬ ಸಿಟ್ಟಿನಿಂದ ನಾರದನನ್ನು ಕುರಿತು—ನಾರದಾ, ನಿನ್ನ ಮಾತು ಸತ್ಯವು; ಪರಮೇಶ್ವರನು ನಿಜವಾಗಿಯೇ ನನ್ನನ್ನು ಮೋಸಗೊಳಿಸಿದನು. ಶಂಕರನ ಭಕ್ತವಾತ್ಸಲ್ಯದ ಪರೀಕ್ಷೆಯು ಇಂದು ಆದಂತಾಯಿತು, ಇರಲಿ, ಅದರ ವಿಚಾರವನ್ನು ಈಗಲೇ ಪ್ರಭುವಿನ ಬಳಿಗೆ ಹೋಗಿ ಮಾಡುವೆನು; ಆದರೆ ನಾರದಾ, ಲೋಕಸುಂದರಿಯಾದ ಪಾರ್ವತಿಯು ಎಲ್ಲಿರುವಳು ಮೊದಲು ಹೇಳು, ಅನ್ನಲು, ನಾರದನು—ರಾವಣಾ, ಭಗವಾನ್ ಶಂಕರನು ಎಂಥ ಉದಾರನಾದರೂ ಭಕ್ತರಿಗೆ ತನ್ನ ಹೆಂಡತಿಯನ್ನು ಕೊಡುವದುಂಟೆ? ಆತನು ನಿನಗೆ ಇಲ್ಲೆಂದುಹೇಳಲಾರದೆ ನಿಜವಾದಪಾರ್ವತಿಯನ್ನುಪಾತಾಳದಲ್ಲಿರುವ ವಿಷ್ಣುಭಕ್ತನಾದ ಮಯನಬಳಿಗೆ ಕಳಿಸಿ, ಈ ಕುರೂಪದ ಸ್ತ್ರೀಯನ್ನು ನಿನಗೆ ಕೊಟ್ಟಿರುವನು, ಎಂದು ಹೇಳಿದನು. ಅದಕ್ಕೆ ರಾವಣನು—ಮೊದಲು ನಾವು ಹೀಗೆಯೇ ಪರಮೇಶ್ವರನ ಬಳಿಗೆ ಹೋಗಿ ಅವನ ಸ್ವರೂಪನಿರ್ಣಯಮಾಡಿ , ಆ ಮೇಲೆ ಪಾತಾಳಕ್ಕೆ ಹೋಗಿ ಪಾರ್ವತಿಯ ಹರಣಮಾಡೋಣ! ನೀನೂ ನನ್ನ ಸಂಗಡ ಕೈಲಾಸಕ್ಕೆ ನಡೆ! ಎಂದನು. ವಿವೇಕಶೀಲಾ, ಲೋಕಕಲ್ಯಾಣೇಚ್ಛುವಾದ ನಾರದನಿಗೂ ಅಷ್ಟೇ ಬೇಕಾಗಿತ್ತು. ಆತನು ರಾವಣನೊಡನೆ ಕೈಲಾಸಕ್ಕೆ ಹೊಗಲು, ರಾವಣನು ಭದ್ರಕಾಲೀರೂಪದ ಪಾರ್ವತಿಯನ್ನು ಶಂಕರನಮುಂದೆ ಇಳಿಸಿ ಆತನನ್ನು ಕುರಿತು:—

ರಾವಣ(ಸಿಟ್ಟಿನಿಂದ):—ಅಹೋ! ಶ್ಮಶಾನವಾಸಿಯಾದ ದೇವನೇ, ನಿನ್ನಲ್ಲಿಟ್ಟಿರುವ ಭಕ್ತಿಗೆ ಯೋಗ್ಯಫಲ ಕೊಟ್ಟೆ. ನನ್ನಂಥ ಏಕನಿಷ್ಠ ಭಕ್ತನಿಗೆ ಹೀಗೆ ಅವಿಶ್ವಾಸ ಮಾಡಬೇಕೆ?

ಶಂಕರ—ಪ್ರಿಯಭಕ್ತ-ಲಂಕಾಧಿಪತೇ, ಇಷ್ಟೇಕೆ ಸಿಟ್ಟಾಗಿರುತ್ತಿ? ಪಾರ್ವತಿಯು ನಿನ್ನ ಅವಮಾನಗೊಳಿಸಿದಳೋ ಏನು? ಸಂಕೋಚವಿಲ್ಲದೆ ಹೇಳು. ನನ್ನ ಆಜ್ಞಾಭಂಗವು ಪ್ರತ್ಯಕ್ಷ ಪಾರ್ವತಿಯಿಂದಾಗಬೇಕೆ? ಹಾಗಿದ್ದಪಕ್ಷದಲ್ಲಿ ಆಕೆಯನ್ನು ಶಾಪದಿಂದ ದಗ್ಧಮಾಡಿಬಿಟ್ಟೇನು?

ರಾವಣ:—ಇಂಥ ಮಾಯಾವಿಭಾಷಣವು ನನಗೆ ಬೇಕಾಗಿಲ್ಲವು; ಪಾರ್ವತಿಯನ್ನು ಕೊಡುವ ಮನಸ್ಸಿಲ್ಲದಿದ್ದರೆ ಹಾಗೆ ಹೇಳಿಬಿಡಬೇಕಾಗಿತ್ತು ; ಆದರೆ ಪಾರ್ವತಿಯಹೆಸರಿನಿಂದ ಈ ಭದ್ರಕಾಲಿಯನ್ನು ಕೊರಳಲ್ಲಿ ಕಟ್ಟುವದೆಂದರೆ, ಮೋಸದ ಪರಮಾವಧಿಯೇ ಸರಿ!

ಶಂಕರ—ಏನು? ಮೋಸವೇ? ಭಕ್ತರಿಗೆ ನಾನು ಮೋಸಮಾಡುವೆನೇ? ನನ್ನ ಭಕ್ತಿಯಿಂದ ಯಾವ ಭಕ್ತನ ಹಾನಿಯೂ ಆಗಿರುವದಿಲ್ಲ. ಪ್ರತ್ಯಕ್ಷ ಪಾರ್ವತಿಯು ನಿನ್ನ ಎದುರಿನಲ್ಲಿ ನಿಂತಿರಲು, ಆಕೆಯನ್ನು ಭದ್ರಕಾಲಿಯೆಂದು ಹೇಳುವೆಯಲ್ಲ?

ರಾವಣ—ಕಣ್ಣಿಗೆ ಕಾಣುವದಕ್ಕೆ ಕನ್ನಡಿಯೇ? ಈಕೆ ಕುರೂಪಿಯಾದ ಭದ್ರಕಾಲಿಯಲ್ಲೆಂದು ನಾರದನು ಹೇಳಲಿ, ನಂದಿಕೇಶ್ವರನು ಹೇಳಲಿ!

ಶಂಕರ—ರಾವಣಾ, ಅತಿಭಾಷಣದಿಂದ ನನ್ನನ್ನು ಸಿಟ್ಟಿಗೆಬ್ಬಿಸಬೇಡ. ಭಕ್ತರಿಗೆ ಕೊಡತಕ್ಕ ಮರ್ಯಾದೆಗಿಂತ ಹೆಚ್ಚಿನಮರ್ಯಾದೆಯನ್ನು ನಿನಗೆ ನಾನು ಕೊಟ್ಟಿರುತ್ತೇನೆ; ಇನ್ನು ಇಲ್ಲಿ ನೀನು ಒಂದು ಕ್ಷಣವಾದರೂ ನಿಲ್ಲಬೇಡ, ಹೊರಟುಹೋಗು. ನಿಂತರೆ, ನನ್ನ ದುಸ್ತರಶಾಪದಿಂದ ದಗ್ಧವಾಗಿಹೋದೀ !

ರಾವಣ—ದೇವಾ, ನಿನ್ನಶಾಪದ ಬೆಲೆಯನ್ನು ಈ ರಾವಣನು ತನ್ನ ಭಕ್ತಿಯ ಬಲದಿಂದ ಕವಡಿಗೆ ಸಮಾನವಾಗಿ ಎಣಿಸುವನು! ಹೀಗೆ ಭಕ್ತರ ಉಪಮರ್ದವಾಗುವ ಸ್ಥಳದಲ್ಲಿ ಯಾವನು ನಿಲ್ಲುವನು? ಪಾತಾಳಕ್ಕೆ ಹೋಗಿ ನಿನ್ನ ಆ ಪಾರ್ವತಿಯನ್ನು ಬಲಾತ್ಕಾರದಿಂದ ಹರಣಮಾಡಿ ಲಂಕೆಗೆ ಕರೆದೊಯ್ದು ಸುಖದಿಂದಿರುವೆನು. ಇಂದಿನಿಂದ ನೀನು ನನ್ನ ದೇವರಲ್ಲ! ನಾನು ನಿನ್ನ ಭಕ್ತನಲ್ಲ !

ಈ ಮೇರೆಗೆ ನುಡಿದು ರಾವಣನು ಸಿಟ್ಟಿನಿಂದ ಪಾತಾಲಕ್ಕೆ ಹೊರಟುಹೋದನು. ಲೋಕಕಲ್ಯಾಣಕ್ಕಾಗಿ ವಿಷ್ಣುವು ಮಾಡಿದ ಈ ತಂತ್ರವನ್ನು ಯಥಾಯೋಗ್ಯವೆಂದು ಭಾವಿಸಿ, ಭಗವಾನ್ ಶಂಕರನು, ತನ್ನನ್ನು ಸಾಷ್ಟಾಂಗವೆರಗಿ ಕ್ಷಮಿಸಲು ಪ್ರಾರ್ಥಿಸುವ ನಾರದನನ್ನು ಸಮಾಧಾನಪಡಿಸಿ ಪಾರ್ವತಿಗೆ—ದೇವೀ, ಭಕ್ತರ ವಿಷಯದ ನನ್ನ ಅಂಧವಾತ್ಸಲ್ಯದಿಂದ ನೀನು ಹೀಗೆ ಮಾನಹಾನಿಯನ್ನು ಸಹಿಸಬೇಕಾಯಿತು, ಅನ್ನಲು, ಪಾರ್ವತಿಯು—ಪ್ರಭೋ, ಇದರಲ್ಲಿ ನನ್ನ ಮಾನಹಾನಿಯೇನು? ಕುಲಸ್ತ್ರೀಗೆ ಯೋಗ್ಯವಾದ ವರ್ತನವು ನನ್ನಲ್ಲಿ ಇರುವದೋ ಇಲ್ಲವೋ ಎಂಬದರ ಪರೀಕ್ಷೆಯಾಯಿತು! ಎಂದು ಹೇಳುತ್ತಿರಲು, ಪಾರ್ವತೀಪರಮೇಶ್ವರರ ಅಪ್ಪಣೆಪಡೆದು ನಾರದನು ರಾವಣನನ್ನು ಹಿಂಬಾಲಿಸಿ ಪಾತಾಳಕ್ಕೆ ಹೋದನು. ಬಳಿಕ ಆ ದೇವರ್ಷಿಯು ಶ್ರೀ ವಿಷ್ಣುವಿನ ಆಜ್ಞೆಯನ್ನು ಮಯಾಸುರನಿಗೆ ತಿಳಿಸಲು, ಆ ವಿಷ್ಣುಭಕ್ತನು ಮಂದೋದರಿಯನ್ನು ಪಾರ್ವತಿಯೆಂದು ಹೇಳಿ, ರಾವಣನಿಗೆ ಲಗ್ನ ಮಾಡಿಕೊಟ್ಟನು. ಅಯೋನಿಜಳಾದ, ಹಾಗು ವಿಷ್ಣುವಿನ ಅಂಶದ ಆ ಮಂದೋದರಿಯು ಸೌಂದರ್ಯದಲ್ಲಿ ಅಪ್ರತಿಮಳಾಗಿದ್ದಳು. ಆಕೆಯನ್ನು ಪಾರ್ವತಿಯೆಂದು ತಿಳಿದು ರಾವಣನು ಸಂತೋಷದಿಂದ ಲಂಕೆಗೆ ಕರೆದೊಯ್ದು, ತಾಯಿಯಾದ ಕೈಕಸಿಯನ್ನು ನಮಸ್ಕರಿಸಿದನು. ಪ್ರತಿಜ್ಞೆಯಂತೆ ಆತ್ಮಲಿಂಗವನ್ನು ತಾರದೆ ಒಬ್ಬ ಸುಂದರಸ್ತ್ರೀಯನ್ನು ಅಪಹರಿಸಿ ತಂದದ್ದನ್ನು ನೋಡಿ ಕೈಕಸಿಯು ಸಿಟ್ಟಿನಿಂದ ರಾವಣನಿಗೆ—ಎಲೈ ಕಾಮಾಂಧನೇ, ನಿನ್ನ ಬಾಳಿಗೆಧಿಕ್ಕಾರವು! ಪ್ರತಿಜ್ಞೆಯಂತೆ ಆತ್ಮಲಿಂಗವನ್ನು ತರದೆ, ಒಬ್ಬಾನೊಬ್ಬ ನರಾಧಮನಿಗೆ ಯೋಗ್ಯವಾಗುವಂತೆ ವರ್ತಿಸಿ, ಒಬ್ಬ ತರುಣ ಸ್ತ್ರೀಯನ್ನು ನನ್ನ ಮುಂದೆ ತಂದು ನಿಲ್ಲಿಸುವೆಯಾ? ರಾಜವೈಭವದ ಮದವು ನಿನ್ನ ದೇಹದಲ್ಲಿ ಸೇರಿರುವದರಿಂದ ಅನ್ಯರ ಹೆಂಡಿರನ್ನೂ, ಅನ್ಯರ

ಹೆಣ್ಣುಮಕ್ಕಳನ್ನೂ ನೀನು ಅಪಹರಿಸತೊಡಗಿರುತ್ತೀಯೇನು ? ಪ್ರತಿಜ್ಞಾಭಂಗಮಾಡಿ ನಿನ್ನ ತಾಯಿಯನ್ನು ಹೀಗೆ ನಿರಾಶಗೊಳಿಸಬಹುದೇ? ಅನ್ನಲು, ರಾವಣನು—ಅವ್ವಾ, ನೀನು ವ್ಯರ್ಥವಾಗಿ ನನ್ನ ಮೇಲೆಸಿಟ್ಟಾಗಬೇಡ. ಯಾವತ್ತು ಜಗತ್ತನ್ನು ಗೆಲ್ಲುವ ಸಾಕ್ಷಾತ್ ಆದಿಶಕ್ತಿಯನ್ನು, ಪ್ರತ್ಯಕ್ಷ ಶಂಕರನ ಪತ್ನಿಯನ್ನು ತಂದಿದ್ದೇನೆ. ಪ್ರತ್ಯಕ್ಷ ಈಶ್ವರನ ಹೆಂಡತಿಯು ತನ್ನ ಸೊಸೆಯಾದದ್ದನ್ನು ನೋಡಿ ಯಾವ ತಾಯಿಗೆ ಆನಂದವಾಗಲಿಕ್ಕಿಲ್ಲ, ಎಂದು ನುಡಿಯುತ್ತಿರುವಾಗ ಕೈಕಸಿಯು ಸಂತಾಪದಿಂದ—ಥೂ, ನರಾಧಮಾ, ಬಾಯಿಮುಚ್ಚು, ಅಭದ್ರ ಮಾತುಗಳನ್ನು ಆಡಬೇಡ. ನೀನು ಭ್ರಮಿಷ್ಟನಾದಂತೆ ತೋರುತ್ತದೆ. ಅಲ್ಲೋ, ಪ್ರತ್ಯಕ್ಷ ಜಗತ್ತಿನ ಮಾತಾಪಿತೃಗಳಾದ ಪಾರ್ವತೀಪರಮೇಶ್ವರರ ವಿಷಯವಾಗಿ ನೀನುಹೀಗೆ ಅಮಂಗಲ ಭಾಷಣಮಾಡಬಹುದೇ? ಇದರಿಂದ ನಮ್ಮ ವಂಶದ ಗ್ರಹದಶೆಯು ಬದಲಾಗಿರುವದು ನಿಶ್ಚಯನೆಂದು ತಿಳಿಯುಬೇಕಾಗುವದು! ಇಂಥ ನೀಚಕೃತ್ಯಮಾಡುವದಕ್ಕಿಂತ ನೀನು ನನ್ನ ಹೊಟ್ಟೆಯಲ್ಲಿ ಹುಟ್ಟದಿದ್ದರೆ ಬಹಳ ನೆಟ್ಟಗಾಗುತ್ತಿತ್ತು! ಎಲೈ ಕುಲಾಧಮನೇ, ನೀನು ಪ್ರತಿಜ್ಞೆಮಾಡಿ ನನ್ನ ಅಪ್ಪಣೆಪಡೆದು ಆತ್ಮಲಿಂಗವನ್ನು ತರಲಿಕ್ಕೆ ಹೋಗಿದ್ದಿಲ್ಲವೇ?

ಈಮೇರೆಗೆ ತಾಯಿಯು ತಿರಸ್ಕರಿಸಿದ್ದರಿಂದ ರಾವಣನು ಎಚ್ಚತ್ತನು. ಅಷ್ಟರಲ್ಲಿ ತಾನು ಅಪಹರಿಸಿ ತಂದ ಸ್ತ್ರೀಯು ಪಾರ್ವತಿಯಲ್ಲ, ಮಂದೋದರಿಯೆಂಬ ಸಂಗತಿಯೂ ಅವನಿಗೆ ಗೊತ್ತಾಯಿತು; ಆದ್ದರಿಂದ ಅವನು ತನ್ನ ತಾಯಿಯ ಕಾರ್ಯಮಾಡದೆ ಅಡ್ಡಹಾದಿಗೆ ಬಿದ್ದದ್ದಕ್ಕಾಗಿ ಪಶ್ಚಾತ್ತಾಪಪಟ್ಟು, ಪುನಃ ತಾಯಿಯನ್ನು ನಮಸ್ಕರಿಸಿ ಅತ್ಯಂತ ನಮ್ರವೃತ್ತಿಯಿಂದ–ಅವ್ವಾ, ನನ್ನ ಸರ್ವಾಪರಾಧಗಳನ್ನು ಕ್ಷಮಿಸು; ನಾನು ಪುನಃ ಕೈಲಾಸಕ್ಕೆಹೋಗಿ ಉಮಾಧವನನ್ನು ಮೆಚ್ಚಿಸಿ ಆತ್ಮಲಿಂಗವನ್ನು ತರುವೆನು, ಎಂದು ಹೇಳಲು, ಕೈಕಸಿಯು—ಇನ್ನು ಆ ಮಾತು ಸರ್ವಥಾ ಅಶಕ್ಯವೆಂದು ತಿಳಿ. ಇನ್ನು ನಿನಗೆ ಕೈಲಾಸವು ಕಾಣಬಹುದೇ? ಇನ್ನು ನಿನಗೆ ಭಗವಾನ್ ಶಂಕರನ ದರ್ಶನವಾಗಬಹುದೇ? ಈವರೆಗೆ ಯಾರೂ ಮಾಡದೆಯಿದ್ದಂಥ ಶಿವದ್ರೋಹವನ್ನು ನೀನು ಮಾಡಿರುತ್ತೀ. ಅನ್ನಲು, ರಾವಣನು—ತಾಯಿಯೇ, ಕ್ಷಮಿಸು. ನಾನು ನನ್ನ ಋಷಿಬೀಜವನ್ನು ಸ್ಮರಿಸಿ ಪ್ರತಿಜ್ಞೆಮಾಡಿ ಹೇಳುವೆನು, ಆತ್ಮಲಿಂಗವನ್ನು ತಂದಹೊರತು ಈ ಕೆಟ್ಟಮೋರೆಯನ್ನು ನಿನಗೆ ತೋರಿಸಲಿಕ್ಕಿಲ್ಲ. ಇದು ನಿನ್ನ ಚರಣಸನ್ನಿಧಿಯಲ್ಲಿ ಮಾಡುವ ಪ್ರತಿಜ್ಞೆಯು! ಎಂದು ಪ್ರತಿಜ್ಞಾಪೂರ್ವಕವಾಗಿ ಮಾತಾಡಿದನು. ಅದನ್ನು ಕೇಳಿ ಕೈಕಸಿಯು ಸಂತೋಷಪಟ್ಟು ಮಗನನ್ನು ಕುರಿತು—ಭಾಪು! ನೀನೇ ನಿಜವಾದ ಪುತ್ರನು! ಹೋಗು, ಆತ್ಮಲಿಂಗಪ್ರಾಪ್ತಿಯಲ್ಲಿ ಯಶಸ್ವಿಯಾಗು, ಎಂದು ಆಶೀರ್ವದಿಸಿ ಮಗನನ್ನು ಕಳುಹಿದಳು.

ಶಿವಭಕ್ತಶಿಖಾಮಣಿಯಾದ ರಾವಣನು ಕೈಲಾಸಕ್ಕೆ ಹೋಗಿ ಉಗ್ರತರ ತಪಸ್ಸನ್ನಾಚರಿಸಿದನು. ಆತನು ಭಗವಾನ್ ಶಂಭುವನ್ನು ಕುರಿತು—ಎಲೈ ಆದಿಪುರುಷಾ, ದೀನಭಕ್ತನಾದ ನನ್ನ ಅಪರಾಧಗಳನ್ನು ಕ್ಷಮಿಸಿ ಪ್ರಸನ್ನನಾಗು. ತಾಯಿಯು ಸಿಟ್ಟಾದರೆ ಮಕ್ಕಳು ತಂದೆಯಬಳಿಗೆ ಹೋಗಬಹುದು, ತಂದೆಯು ಸಿಟ್ಟಾದರೆ ತಾಯಿಯಬಳಿಗೆ ಹೋಗಬ

ಹುದು; ಆದರೆ ನನ್ನ ಮಾತಾಪಿತೃಸ್ವರೂಪನಾದ ನೀನು ಸಿಟ್ಟಾದರೆ ನಾನು ಯಾರಬಳಿಗೆ ಹೋಗಲಿ! ನನ್ನನ್ನು ಯಾರು ಎತ್ತಿಕೊಳ್ಳುವರು? ದೇವಾ, ನೀನು ಲಲಿತಕಲಾಪ್ರಿಯನು; ಸಾಮಗಾನವು ನಿನಗೆ ಅತ್ಯಂತ ಪ್ರಿಯವಾಗಿರುವದು; ಆದ್ದರಿಂದ ನಾನು ಸಾಮಗಾನದಿಂದ ನಿನ್ನ ಸ್ತೋತ್ರಮಾಡುವೆನು. ಭಕ್ತವತ್ಸಲಾ, ಈ ಮೊದಲೆ ನಾನುಮಾಡಿದ ನಿನ್ನ ದ್ರೋಹಕ್ಕೆ ತಕ್ಕಶಿಕ್ಷೆಯು ನನಗೆ ಆಗಲೇಬೇಕಾಗಿರುವದು; ಆದ್ದರಿಂದ ಈಗ ನಾನು ಗಾಯನಮಾಡುತ್ತ ನನ್ನ ಒಂದೊಂದೇ ಶಿರಸ್ಸನ್ನು ನಿನಗೆ ಅರ್ಪಿಸುವೆನು, ಎಂದು ಹೇಳಿ ಆ ವೀರಭಕ್ತಾಗ್ರೇಸರನು ಶಿರಸ್ಸನ್ನು ಖಂಡಿಸಲುದ್ಯೋಗಿಸಿ ಮತ್ತೆ ಭಗವಾನ್ ಶಂಕರನನ್ನು ಕುರಿತು—ಹೇಗಂಗಾಧರಾ, ಚಂದ್ರಮೌಳೀ, ನಿನ್ನ ಅಷ್ಟಮೂರ್ತಿಗಳಿಂದ ಈ ಜಗತ್ತು ಉಂಟಾಗಿರುವದರಿಂದ ಜಗದ್ರೂಪನಾದ ನಿನಗೆ ನಾನು ಎಲ್ಲಿ ನನ್ನ ಈ ಶಿರಃಕಮಲವನ್ನು ಅರ್ಪಿಸಿದರೂ ಅದು ನಿನ್ನ ಚರಣದಲ್ಲಿಯೇ ಬೀಳುವದು, ಎಂದು ತನ್ನ ಒಂದೊಂದೇ ಶಿರಸ್ಸನ್ನು ಖಂಡಿಸಿ ಶಿವಚರಣಕ್ಕೆ ಅರ್ಪಿಸಹತ್ತಿದನು. ಆಗ ಕರುಣಾಕರನಾದ ಶಂಕರನು ಆತನಿಗೆ ಪ್ರತ್ಯಕ್ಷನಾಗಿ—ಎಲೈ ಪ್ರೇಮಲಸತ್ಯಭಕ್ತನೇ, ದೇಹದಂಡನ ಯುಕ್ತವಾದ ಭಕ್ತಿಯಿಂದ ನನ್ನನ್ನು ಚೈತನ್ಯರಹಿತನಾಗಿ ಮಾಡಿದೆ. ನಿನ್ನ ಅಪರಾಧವನ್ನು ಪೂರ್ಣವಾಗಿ ಕ್ಷಮಿಸಿರುತ್ತೇನೆ. ಎಲೈ ಪುಲಸ್ತಿನಂದನಾ, ನಿನಗೆ ಬೇಕಾದವರವನ್ನು ಬೇಡಿಕೋ! ಈಕಾಲದಲ್ಲಿ ನಿನಗೆ ಈ ಯಾವತ್ತು ಬ್ರಹ್ಮಾಂಡವನ್ನು ಕೊಟ್ಟರೂ ಅದು ನಿನ್ನ ಭಕ್ತಿಗೆ ಸಾಲದು. ನೀನು ಅರ್ಪಿಸಿದ ಬಿಲ್ವದಲವು ನನ್ನ ಹೃದಯವನ್ನು ಶಾಂತಗೊಳಿಸಿತು; ನೀನು ಅರ್ಪಿಸಿದ ಶಿರಃಕಮಲಗಳು ನನ್ನನ್ನು ನಿನ್ನಾಧೀನವಾಗಮಾಡಿದವು; ಆದ್ದರಿಂದ ರಾವಣೇಶ್ವರಾ, ಮಾತಾಡು, ನಿನಗೆ ಬೇಕಾದದ್ದನ್ನು ಬೇಡು-

ಈ ಮೇರೆಗೆ ಭಗವಾನ್ ಶಂಕರನು ಭಕ್ತಿಪರವಶನಾಗಿ ರಾವಣನಿಗೆ ವರಕೊಡಲುಸಿದ್ಧನಾಗಿರಲು, ಈ ಪ್ರಸಂಗದಲ್ಲಿ ವಿಘ್ನಮಾಡಲು ಕಾಯ್ದುಕೊಂಡು ಕುಳಿತಿದ್ದ ನಾರದನು ಪರಮೇಶ್ವರನನ್ನು ಕುರಿತು—ದೇವದೇವೋತ್ತಮಾ, ರಾವಣನಿಗೆ ಹೀಗೆ ವಶವಾಗುವದು ಜಗತ್ತಿಗೆ ಹಿತಕರವಲ್ಲ. ರಾವಣೇಶ್ವರನ ಬೇಡಿಕೆಯು ಯಾವಬಗೆಯದಿರುತ್ತದೆಂಬದು ಈ ಮೊದಲೆ ಎಲ್ಲರ ಅನುಭವಕ್ಕೆ ಬಂದಿರುವದು; ಆದ್ದರಿಂದ ವಿಚಾರಮಾಡಿ ವರವನ್ನು ಕೊಡತಕ್ಕದ್ದು, ಎಂದು ಹೇಳಲು, ಪಾರ್ವತಿಯೂ ಅದಕ್ಕೆ ಅನುಮತಿಸಿದಳು. ಆಗ ಚಂದ್ರಶೇಖರನು—ನಾರದಾ, ಹೀಗೆ ನೀವು ನಮ್ಮ ದೇವಭಕ್ತರ 'ವ್ಯವಹಾರದಲ್ಲಿ ಅಡ್ಡಬರುವದು ಸರಿಯಲ್ಲ. ರಾವಣೇಶ್ವರಾ, ಬೇಡು—ಬೇಡು; ನಿನಗೆ ಬೇಕಾದ ವರವನ್ನು ಬೇಡಿಕೋ- ನೀನು ಇಂದ್ರಾದಿದೇವತೆಗಳಿಗಿಂತಲೂ ನನಗೆ ಹೆಚ್ಚುಪ್ರಿಯನಾಗಿರುತ್ತೀ, ಎಂದು ಅಭಯವಿತ್ತನು. ಆಗ ರಾವಣೇಶ್ವರನು—ಪ್ರಭೋ, ತಾಯಿಯ ಆಶೆಯನ್ನು ತೃಪ್ತಿಪಡಿಸುವದು ಪ್ರತಿಒಬ್ಬ ಮಗನ ಕರ್ತವ್ಯವಾಗಿರುವದು. ನನ್ನ ತಾಯಿಯು ಮನಸ್ಸಿನಲ್ಲಿ ನಿಮ್ಮ ಆತ್ಮಲಿಂಗವನ್ನು ಅರ್ಚಿಸುವ ಇಚ್ಛೆಯಾಗಿದೆ; ಆದ್ದರಿಂದ ದೇವಾ, ನಿನ್ನ ಆತ್ಮಲಿಂಗವು ನನಗೆ ಬೇಕು!

ಶಂಕರ:—ರಾವಣಾ, ಆತ್ಮಲಿಂಗವೆಂದರೆ ನನ್ನ ಸರ್ವಸ್ವವು; ನನಗೆ ಅದು ಪೂಜ್ಯ

ವಾದದ್ದು ; ಅದನ್ನು ಕೊಡುವದರಿಂದ ನನ್ನನ್ನೇ ನಿನಗೆ ಕೊಟ್ಟಹಾಗಾಯಿತು. ನೀನು ಬೇಡುವ ವರವು ಯಾವಾಗಾದರೂ ಹೀಗೆ ಅಶಕ್ಯಕೋಟಿಯೊಳಗಿನದೇ ಇರುವದು. ಎಲಾ, ಮೃಗಶೃಂಗ ಆತ್ಮಲಿಂಗವನ್ನು ನಿನಗೆ ಕೊಡುವದರಿಂದ, ಅದು ನಿನಗೆ ಪ್ರಾಪ್ತವಾದ ಪಕ್ಷದಲ್ಲಿ ಯಾವತ್ತೂ ವಿಶ್ವದಸತ್ವವೂ ಶಕ್ತಿಯೂ ನಿನ್ನ ಕೈಸೇರಿದಂತಾಗುವವು. ಆ ಮೇಲೆ ಇಂದ್ರಾದಿ ದೇವತೆಗಳೂ, ವಿಷ್ಣುಬ್ರಹ್ಮಾದಿಕರೂ ನಿನ್ನ ಮನೆಯಲ್ಲಿ ಆಳುಗಳಾಗಿ ದುಡಿಯಬೇಕಾದೀತು, ಅಂದಬಳಿಕ ಉಳಿದವರಪಾಡೇನು?

ನಾರದ—ಶಂಭೋ, ಅದರಲ್ಲಿಯೆನು ಮಹತ್ವವು? ನಾವು ಆತನ ಆಳುಗಳಾಗಿ ದುಡಿಯೋಣವಂತೆ! ನಿನ್ನಂಥ ದೇವರೂ, ಇವನಂಥ ಭಕ್ತರೂ ಇದ್ದಬಳಿಕ ನಮ್ಮ ಸ್ಥಿತಿಯು ಹೀಗಾಗುವದೇಸರಿ.

ರಾವಣ—ಕೇವಲ ತಾಯಿಯ ಸಂತೋಷಕ್ಕಾಗಿ ಬೇಡುವೆನು.

ಶಂಕರ—ನಿನ್ನಂಥ ಬುದ್ಧಿವಂತನು ಈ ಜಗತ್ತಿನಲ್ಲಿ ನಿನೊಬ್ಬನೇ ಎಂದು ನಿಶ್ಚಯವಾಗಿ ಹೇಳಬಹುದು.

ರಾವಣ—ದೇವಶ್ರೇಷ್ಠಾ, ನಿನ್ನಂಥ ಕೊಡಗೈದೊರೆಯು ನಿನೊಬ್ಬನೇ ಎಂದು ನಾನು ಕೈ ಎತ್ತಿಹೇಳುವೆನು.

ಶಂಕರ—ಆಗಲಿ, ನಿನ್ನ ತಾಯಿಯ ಇಚ್ಛೆಯನ್ನು ಪೂರ್ಣಮಾಡು! ಆದರೆ ಈ ಲಿಂಗವನ್ನು ನಿನ್ನ ಊರಿಗೆ ಒಯ್ಯುವವರೆಗೆ ಬಹಳ ಎಚ್ಚರದಿಂದ ನಡೆದುಕೊಳ್ಳಬೇಕಾಗುವದು. ಈ ನನ್ನ ಆತ್ಮಲಿಂಗವು ಸರ್ವ ವಿಶ್ವದ ಸತ್ವಗುಣವಾಗಿರುವದರಿಂದ ಇದನ್ನು ನೆಲದಮೇಲೆ ಇಡಬೇಡ! ಯಾಕಂದರೆ ಇಟ್ಟಲ್ಲಿ ಇದು ಸ್ಥಿರವಾಗಿ, ತಿರುಗಿ ನಿನ್ನ ಕೈಗೆ ಬಾರದೆ ಹೋದೀತು. ಈ ಮಾತನ್ನು ಪೂರ್ಣಲಕ್ಷದಲ್ಲಿಡು. ಹೋಗು, ತಾಯಿಯನ್ನು ಸಂತೋಷಪಡಿಸು.

ಹೀಗೆ ಪರಮೇಶ್ವರನು ಜಗತ್ತಿನ ಸತ್ವಗುಣವನ್ನೇ ರಾವಣನಿಗೆ ಕೊಟ್ಟುಬಿಟ್ಟದ್ದರಿಂದ, ತ್ರೈಲೋಕ್ಯದಲ್ಲಿ ರಾಜಸ–ತಾಮಸಗುಣಗಳ ವೃದ್ಧಿಯಾಯಿತು. ಎಲ್ಲಿನೋಡಿದರೂ ಅತೃಪ್ತಿ, ಅಸೂಯೆ, ಕಲಹ, ಹಿಂಸೆ, ವಿಷಯಾಸಕ್ತಿ ಇವು ಕಣ್ಣಿಗೆ ಬೀಳಹತ್ತಿದವು. ಬ್ರಹ್ಮಾದಿ ದೇವತೆಗಳ ಸ್ಥಿತಿಯೂ ಹೀಗಾದದ್ದನ್ನು ನೋಡಿ ನಾರದಮುನಿಯು ವೈಕುಂಠವಾಸಿಯಾದ ನಾರಾಯಣನಿಗೆ ಯಾವತ್ತು ಸಂಗತಿಯನ್ನುತಿಳಿಸಿ, ಇದಕ್ಕೆ ಉಪಾಯವೇನೆಂದು ಕೇಳಿಕೊಳ್ಳಲು, ವಿಷ್ಣುವು—ನಾರದಾ, ಇದಕ್ಕೆ ಉಪಾಯವೆಂದರೆ ಪರಮೇಶ್ವರನ ಆತ್ಮಲಿಂಗವು.ರಾವಣನಿಗೆ ದಕ್ಕದಂತೆ ಮಾಡುವದೊಂದೇಉಪಾಯವು. ಇದಕ್ಕೆ ನಾನೊಂದು ಹಂಚಿಕೆ ಹೇಳುವೆನು. ಅದರಂತೆ ಮಾಡಿರಿ. ನಾನು ನನ್ನ ಚಕ್ರವನ್ನು ಸೂರ್ಯನಿಗೆ ಮರೆಮಾಡಿ ಸಂಧ್ಯಾಕಾಲವನ್ನುಂಟುಮಾಡುವೆನು. ರಾವಣನು ಕರ್ಮಶೀಲ ಬ್ರಾಹ್ಮಣನಾದದ್ದರಿಂದ ಸಂಧ್ಯಾವಂದನಮಾಡದೆ ಇರುವದಿಲ್ಲವು. ಅವನು ಸಂಧ್ಯಾವಂದನ ಮಾಡುವ ಸಮಯದಲ್ಲಿ ಲಿಂಗವನ್ನು ಯಾರು ಹಿಡಿದುಕೊಂಡಾರೆಂದು ಹಾದಿಯ ನೋಡುತ್ತಿರುವಾಗ, ಈ ಗಣಪತಿಯು ಬ್ರಾಹ್ಮಣ ವಟುವೇಷಧಾರಿಯಾಗಿ ಅವನಬಳಿಯಲ್ಲಿ ಸುಳಿ

ದಾಡಲಿ. ಬಳಿಕ ರಾವಣನು ಪರಮೇಶ್ವರನ ಆತ್ಮಲಿಂಗವನ್ನು ಆ ವಟುವಿನಕೈಯ್ಯಲ್ಲಿ ಕೊಟ್ಟು ಸಂಧ್ಯಾವಂದನ ಮಾಡುತ್ತಿರುವಾಗ, ಗಣಪತಿಯು ಆ ಲಿಂಗವನ್ನು ಕೆಳಗಿಟ್ಟು ಬಿಟ್ಟರಾಯಿತು! ಎಂದು ಹೇಳಿದನು. ಬಳಿಕ ನಾರದನು ಗಣಪತಿಯನ್ನು ಕರಕೊಂಡು ರಾವಣನಬಳಿಗೆ ಹೋದನು. ಆಗ ರಾವಣನು ಈಗಿನ ಗೋಕರ್ಣಕ್ಷೇತ್ರವಿರುವಲ್ಲಿಗೆ ಬಂದಿದ್ದನು. ಅಷ್ಟರಲ್ಲಿ ವಿಷ್ಣುಮಾಯೆಯಿಂದ ಸಂಧ್ಯಾಕಾಲವಾಗಲು, ರಾವಣನು—ಎಷ್ಟು ಬೇಗನೆ ಸಂಧ್ಯಾಕಾಲವಾಯಿತಲ್ಲ! ಈಗ ಸಂಧ್ಯಾವಂದನೆಮಾಡದಿದ್ದರೆ ಕಾಲಾತೀತವಾಗುವದು. ಈ ಪ್ರಸಂಗದಲ್ಲಿ ಲಿಂಗದ ವ್ಯವಸ್ಥೆಯನ್ನು ಏನುಮಾಡಬೇಕು? ಎಲ ಎಲಾ! ಈ ಲಿಂಗವಾದರೂ ಎಷ್ಟು ಭಾರವಾಯಿತಿದು! ಎಂದು ಯೋಚಿಸುತ್ತಿರುವಾಗ, ನಾರದನು ತಾನು ಮರೆಗೆನಿಂತು ವಟುವೇಷಧಾರಿಯಾದ ಗಣಪತಿಯನ್ನು ಮುಂದೆ ಮಾಡಿದನು. ರಾವಣನು ಆ ವಟುವನ್ನು ನೋಡಿ, ಕರ್ಮಾಸಕ್ತಬುದ್ಧಿಯುಳ್ಳವನಾಗಿ ಅವನಕೈಯ್ಯಲ್ಲಿ ಲಿಂಗವನ್ನು ಕೊಡಬೇಕೆಂದು ಯೋಚಿಸಿ—ಎಲೈ ಬಾಲಕಾ, ಏ ತಮ್ಮಾ! ಇಲ್ಲಿ ಸ್ವಲ್ಪಬಾ ನೋಡೋಣ, ಎಂದು ಕರೆಯಲು, ಹೀಗೆ ಕರೆಯುವ ಹಾದಿಯನ್ನೇ ನೋಡುತ್ತಿದ್ದ ಗಣೇಶನು ರಾವಣನಬಳಿಗೆ ಬಂದು ಅವನನ್ನು ನೋಡಿ ಅಂಜಿ—

ಗಣೇಶ—ಅಬ್ಬಬ್ಬಾ! ಬೇಡಪ್ಪಾ! ನಿನ್ನನ್ನು ನೋಡಿದರೆ ನನಗೆ ಅಂಜಿಕೆಬರುತ್ತದೆ! ನಮ್ಮ ಮನೆಯಲ್ಲಿ ವೃದ್ಧರಿರುವರು; ಅವರಿಗೆ ಪೂಜೆಗೆ ಬಿಲ್ವಪತ್ರಗಳೂ, ಪುಷ್ಪಗಳೂ ಬೇಕಾಗಿರುವದರಿಂದ ಬಂದಿರುವೆನು. ಬೇಗನೆ ಒಯ್ಯದಿದ್ದರೆ ಅವರು ಸಿಟ್ಟುಮಾಡುವರು. ನನಗೆ ನಿಲ್ಲಲಿಕ್ಕೆ ಅವಕಾಶವಿಲ್ಲ.

ರಾವಣ—ಎಲ! ಎಂಥ ಉದ್ಧತನಿವನು! ತಮ್ಮಾ, ಹೀಗೆ ಅವಸರಮಾಡಬೇಡ, ನನಗೆ ಸ್ವಲ್ಪ ಸಹಾಯಮಾಡು.

ಗಣೇಶ—ನನ್ನಂಥ ವಟುವಿನಿಂದ ನಿನ್ನಂಥ ಸಮರ್ಥನಿಗೆ ಆಗುವ ಸಹಾಯವೇನು? ನನ್ನಿಂದ ಯಾವಕೆಲಸವಾದೀತು?

ರಾವಣ—ತಮ್ಮಾ, ನಿನ್ನಿಂದಾಗುವ ಕೆಲಸವನ್ನೇ ನಿನಗೆ ಹೇಳುವೆನು. ಈ ಲಿಂಗವನ್ನಿಷ್ಟು ನಾನು ಸಂಧ್ಯಾವಂದನೆಮಾಡಿ ಬರುವತನಕ ಹಿಡಿದುಕೋ; ಆದರೆ ತಮ್ಮಾ, ನಿನ್ನ ಹೆಸರೇನು?

ಗಣೇಶ—ನನಗೆ ಗಣೇಶಭಟ್ಟನೆನ್ನುವರು!

ರಾವಣ—ನಿನ್ನ ತಂದೆಯ ಹೆಸರೇನು?

ಗಣೇಶ—ಶಂಕರಭಟ್ಟ.

ರಾವಣ—ಅಡ್ಡಹೆಸರು?

ಗಣೇಶ—ವಿಶ್ವಾಸಘಾತಕಿ.

ರಾವಣ—ನಡೆ ಅತ್ತ, ವಿಶ್ವಾಸಘಾತಕಿಗಳ ಮನೆತನದವರ ನೆರಳುಬೇಡ!

ಗಣೇಶ—ಇದೇನು? ಹೆಸರು ಕೇಳಿ ಹೊಡೆಯುವಿರಲ್ಲ! ನಿಲ್ಲಿರಿ, ನಮ್ಮ ಹಿರಿಯರ

ಮುಂದೆ ಹೇಳುವೆನು! ಎಂದನು. ಎಲೈ ವಿವೇಕಶೀಲನೇ, ಈ ಮೇರೆಗೆ ನುಡಿದು ಗಣಪತಿಯು ಮನೆಗೆ ಹೋಗತೊಡಗಲು; ಮಹಾಕರ್ಮಠನಾದ ರಾವಣನು ಕರ್ಮದ ಕಾಲವು ಕ್ರಮಿಸುವದೆಂದು ತಿಳಿದು "ಹೊತ್ತುಬಿದ್ದಾಗ ಕತ್ತೆಯ ಕಾಲುಹಿಡಿ"ಎನ್ನುವಂತೆ ಗಣೇಶಭಟ್ಟನನ್ನು ಕರೆದು ರಮಿಸಿ "ತಮ್ಮಾ ಬೇಗನೇ ಬರುವೆನು, ಈ ಲಿಂಗವನ್ನು ಹಿಡಿದುಕೋ" ಎಂದುಹೇಳಿ ಲಿಂಗವನ್ನು ಆತನ ಕೈಯಲ್ಲಿ ಕೊಟ್ಟನು. ಅಹಹ! ತಾನು ಪ್ರತ್ಯಕ್ಷ ಶಿವಪುತ್ರನಾದರೂ ಈ ವರೆಗೆ ಶಿವನ ಆತ್ಮಲಿಂಗವ ಧರಿಸುವ ಯೋಗಬಾರದ್ದಕ್ಕಾಗಿ ಗಣೇಶನು ಆಶ್ಚರ್ಯಪಟ್ಟು ಹರ್ಷರೋಮಾಂಚಿತನಾಗಿ ರಾವಣನ ಭಕ್ತಿಯನ್ನು ಮನಸ್ಸಿನಲ್ಲಿ ಕೊಂಡಾಡುತ್ತ ಆತನನ್ನು ಕುರಿತು—ಮಹಾರಾಯಾ, ಈ ಲಿಂಗವು ಎಷ್ಟು ಜಡವಿರುವದಲ್ಲ! ನಾವು ಗಂಜಿಯ ಕುಡಿಯುವ ಸಮುದ್ರತೀರದ ಭಿಕ್ಷುಕರು! ನಿಮ್ಮಹಾಗೆ ಬಲಶಾಲಿಗಳಲ್ಲವು. ಹಿಡಿಯುವವಾಗುವತನಕ ಇದನ್ನು ಹಿಡಿಯುವೆನು; ಕೈಸೋತಕೂಡಲೆ ಕೆಳಗಿಡುವೆನು, ಅನ್ನಲು, ರಾವಣನು—ಹಾ! ಹಾಗೆ ಕೆಳಗಿಟ್ಟೀ! ನಿನಗೆ ಭಾರವಾದಕೂಡಲೆ ನನ್ನನ್ನು ಕರೆ, ವಿಶ್ವಾಸಘಾತಮಾತ್ರ ಮಾಡಬೇಡ. ನಾನು ಸಂಧ್ಯಾವಂದನೆಯನ್ನು ಸ್ವಲ್ಪದರಲ್ಲಿ ಮುಗಿಸಿಕೊಂಡು ಬೇಗನೆ ಬರುವೆನು, ಎಂದು ಹೇಳಿದನು. ಅದಕ್ಕೆ ಗಣಪತಿಯು—ಎಲೈ ಸಮರ್ಥನೇ, ನಿನ್ನನ್ನು ಯಾವಹೆಸರಿನಿಂದ ಕರೆಯಬೇಕೆಂದು ಕೇಳಲು, ನನ್ನನ್ನು ರಾವಣೇಶ್ವರನೆಂದು ಕರೆ, ಎಂದು ಹೇಳಿ, ಸಂಧ್ಯಾವಂದನೆಗೆ ಹೊರಟನು. ಆಗ ಮತ್ತೆ ಗಣಪತಿಯು—ರಾವಣೇಶ್ವರಾ, ಒಮ್ಮೆಯಾಕೆ, ಮೂರುಸಾರೆ ನಿನ್ನ ಹೆಸರು ತಕ್ಕೊಂಡು ಕರೆಯುವೆನು, ಅಧಕ್ಕೂ ನೀನು ಬರದಿದ್ದರೆ ಈ ಲಿಂಗವನ್ನು ಕೆಳಗಿಡುವೆನು, ಎಂದು ಹೇಳಿದನು. ವಿವೇಕಶೀಲಾ, ಈಶ್ವರೀಮಾಯೆಯನ್ನು ಗೆಲ್ಲುವ ಯೋಗ್ಯತೆಯು ರಾವಣನಂಥ ಮಹಾಭಕ್ತನಿಗೂ ಆಗದಿರುವಾಗ ಅನ್ಯರಪಾಡೇನು? ಅತ್ತ ರಾವಣನು ಸಂಧ್ಯಾವಂದನೆ ಮಾಡಹತ್ತಿದಕೂಡಲೆ ಇತ್ತ ಗಣಪತಿಯು—"ರಾವಣೇಶ್ವರಾ, ಕೈ ಸೋತಿತು" ಎಂದು ಒಮ್ಮೆ ಕರೆದನು, ಕೂಡಲೆ ಎರಡನೆಯಸಾರೆಯೂ ಕರೆದನು. ಆಗ ರಾವಣನು—"ನಿಲ್ಲುನಿಲ್ಲೆಂದು" ಕೈ ಸನ್ನೆ ಮಾಡುತ್ತಿರಲು, ಗಣಪತಿಯು ಮೂರನೆಯಸಾರೆಯೂ "ರಾವಣಾ, ಕೈ ಸೋತಿತು" ಎಂದು ಕರೆದು ಲಿಂಗವನ್ನು ಕೆಳಗಿಟ್ಟುಬಿಟ್ಟನು!

ಈ ಮೇರೆಗೆ ಗಣಪತಿಯು ಲಿಂಗವನ್ನು ಕೆಳಗಿಡಲು, ರಾವಣನು ಸಿಟ್ಟಿನಿಂದ ಬಂದು ಗಣಪತಿಯ ತಲೆಯಮೇಲೆ ಕೊಸಿದು—ಎಲೈ ವಿಶ್ವಾಸಘಾತಕಿಯಾದ ಭಿಕ್ಷುಕ ಪೋರನೇ, ನಿರ್ಬಲಾ, ಈ ರಾವಣನ ಸರ್ವಸ್ವದ ಘಾತಮಾಡಿಬಿಟ್ಟೆಯಲ್ಲ! ಎಲೈ ಮತಿಮಂದನೇ, ಈಶ್ವರನ ತೇಜೋಮಯವಾದ ಆತ್ಮಲಿಂಗವು ದೊರೆತು, ವಿಶ್ವದ ಸತ್ವವೆಲ್ಲ ನನ್ನ ಕೈಸೇರಿರಲು, ಅದನ್ನು ಕೆಳಗಿಟ್ಟು ನನ್ನನ್ನು ಹಾಳುಮಾಡಿಬಿಟ್ಟೆಯಲ್ಲ! ನಿನ್ನನ್ನು ಸಂಹರಿಸಬೇಕೆಂದರೆ, ಬಾಲಹತ್ಯೆ, ಮೇಲೆ ಬ್ರಹ್ಮತ್ಯೆ! ಇನ್ನು ನಿನ್ನನ್ನು ಸಂಹರಿಸುವದರಿಂದಾಗುವ ಪ್ರಯೋಜನವಾದರೂ ಏನು? ನಡೆ, ಹೊರಟುಹೋಗು. ನನ್ನ ಸರ್ವಶಕ್ತಿಯನ್ನು ಉಪಯೋಗಿಸಿ ಈ ಲಿಂಗವನ್ನು ಭೂಮಿಯಿಂದ ಕಿತ್ತುವಯತ್ನಮಾಡುವೆನು, ಎಂದು ಹೇಳಿ, ತನ್ನ ಮಹಾಸಾಮರ್ಥ್ಯದಿಂದ ಲಿಂಗವನ್ನು ಕಿತ್ತಹೋದನು.

ಆದರೆ ಅದು ಮಿಸುಕಲಿಲ್ಲ! ವಿವೇಕಶೀಲಾ, ಯಾವ ಪರಮಾತ್ಮನ ಪ್ರಾಪ್ತಿಗಾಗಿ ಕರ್ಮ ಕಲಾಪವಿರುವದೋ, ಆ ಪರಮಾತ್ಮನೇ ಕೈಸೇರಿರುವಾಗ, ಶ್ರೇಷ್ಠಶಿವಭಕ್ತ ರಾವಣನೂ ಅಜ್ಞಾನಿಯಾದ ಕರ್ಮಠನಂತೆ ಕರ್ಮವನ್ನು ಆಚರಿಸಹೋದನೆಂದರಿಂದ ಲಿಂಗವನ್ನು ಕಳೆದುಕೊಂಡಬಳಿಕ, ಪ್ರಾರಬ್ಧದ ಪ್ರಾಬಲ್ಯವು ಎಷ್ಟಿರುತ್ತದೆಂಬದನ್ನು ನೀನೇ ವಿಚಾರ ಮಾಡು. ರಾವಣನ ಪ್ರಾರಬ್ಧಭೋಗವು ತೀರದೆಯಿದ್ದದ್ದರಿಂದ ರಾವಣನಂಥ ಭಕ್ತಶ್ರೇಷ್ಠನಿಗೂ ಈಶ್ವರಪ್ರಾಪ್ತಿಯಾಗದಿರುವಾಗ, ನಮ್ಮಂಥ ಪಾಮರರು ಕರ್ಮಭೋಗಭಾಗಿಗಳಾಗುವದರಲ್ಲಿ ಆಶ್ಚರ್ಯವೇನು? ರಾವಣನು ಶಿವಭಕ್ತಿಯಿಂದ ಧನ್ಯನಾಗಿದ್ದರೂ ಪ್ರಾರಬ್ಧಭೋಗವು, ಅಂದರೆ ಅವನಿಗುಂಟಾಗಿದ್ದ ಬ್ರಹ್ಮಶಾಪದ ಅವಧಿಯು ತೀರುವತನಕ ಅವನು ಭವಬಂಧನದಿಂದ ಮುಕ್ತನಾಗುವಹಾಗಿದ್ದಿಲ್ಲ. ಇರಲಿ. ತಾನು ಎಷ್ಟುಪ್ರಯತ್ನಮಾಡಿದರೂ ಲಿಂಗವು ಬಾರದಿರುವದನ್ನು ನೋಡಿ ರಾವಣನು ಮಹಾದುಃಖದಿಂದ ಮೂರ್ಛಿತನಾದನು!

ಈ ಮೇರೆಗೆ ರಾವಣನು ಮೂರ್ಛಿತನಾಗಲು, ಭಗವಾನ್ ಶಂಕರನು, ಬ್ರಹ್ಮ-ವಿಷ್ಣು ಮೊದಲಾದ ದೇವತೆಗಳೊಡನೆ, ಹಾಗು ಮಹರ್ಷಿಗಳೊಡನೆ ಸಮುದ್ರತೀರದ ಗೋಕರ್ಣಕ್ಷೇತ್ರಕ್ಕೆ ಬಂದು ಆ ದೇವಾದಿಕರನ್ನು ಕುರಿತು--ಎಲೈ ದೇವಾದಿಕರೇ, ನಾವೆಲ್ಲರೂ ಭೂಲೋಕದ ಈ ಪುಣ್ಯಭೂಮಿಯಲ್ಲಿ ಒಟ್ಟುಗೂಡುವ ಸುಪ್ರಸಂಗವು ಒದಗಲಿಕ್ಕೆ ಮೂರ್ಛಿತನಾಗಿರುವ ಈ ನಮ್ಮ ಪ್ರಿಯಭಕ್ತ ರಾವಣೇಶ್ವರನೇ ಕಾರಣನು. ಈತನು ನಮ್ಮ ಆತ್ಮಲಿಂಗವನ್ನು ಕಸಿದುಕೊಂಡು ಹೋಗುವಷ್ಟು ಭಕ್ತಿಯು ಬಲವುಳ್ಳವನು! ಈತನನ್ನು ಮೊದಲು ಎಚ್ಚರಗೊಳಿಸೋಣ, ಅನ್ನಲು, ಪರಮೇಶ್ವರನ ಇಚ್ಛೆಯಿಂದ ರಾವಣನು ಎಚ್ಚತ್ತು, ದೇವಾದಿಕರ ಸಮೂಹವನ್ನು ನೋಡಿ ಆಶ್ಚರ್ಯಪಟ್ಟು ಪಶ್ಚಾತ್ತಾಪದಿಂದ—ಎಲೈ ದೇವಾಧಿದೇವಾ ಮಹಾದೇವಾ, ಎಲೈ ಕ್ಷೀರಾಬ್ಧಿವಾಸಿಯಾದ ವೈಕುಂಠನಾಯಕನೇ, ಸಮಸ್ತದೇವತೆಗಳಿರಾ, ಈ ಅಧಮಾಧಮರಾವಣನು ನಾನು ನಿಮ್ಮೆಲ್ಲರನ್ನು ನಮಿಸುವೆನು; ನನಗೆ ಅಭಯವನ್ನಿತ್ತು, ಜನ್ಮಮರಣದಿಂದ ನನ್ನನ್ನು ಮುಕ್ತಮಾಡಿರಿ! ನನ್ನ ಗರ್ವವು ಸಂಪೂರ್ಣವಾಗಿ ಇಳಿದು ಹೋಯಿತು. ಅಜ್ಞಾನಾಂಧಕಾರದಲ್ಲಿ ಮುಳುಗಿದ ನಾನು ನಿಮ್ಮ ಪುಣ್ಯದರ್ಶನದಿಂದ ಮುಕ್ತನಾದೆನು. ನನ್ನಮೇಲೆ ಆದ ನಿಮ್ಮ ಈ ಅನುಗ್ರಹವು ಸಾಮಾನ್ಯವಾದದ್ದಲ್ಲ! ಈಶ್ವರನು ನನ್ನ ಕಣ್ಣಲ್ಲಿ ಜ್ಞಾನಾಂಜನವನ್ನು ಹಾಕಿ ದಿವ್ಯದೃಷ್ಟಿಯನ್ನು ಕೊಟ್ಟನು. ಎಲೈ ಪಾರ್ವತೀತನಯಾ, ಗಣೇಶಾ, ಈ ದುಷ್ಟನು ನಾನು ನಿನ್ನನ್ನು ಹೊಡೆದೆನು, ಇದಕ್ಕಾಗಿ ನನ್ನನ್ನು ಕ್ಷಮಿಸು; ಅಥವಾ ಈ ಗದೆಯಿಂದ ಹೊಡೆದು ನನ್ನ ದೇಹವನ್ನು ಛಿನ್ನವಿಚ್ಛಿನ್ನವಾಗಿ ಮಾಡು, ಅನ್ನಲು ಗಣೇಶನು--ಛೆಛೆ! ರಾವಣಾ, ಹಾಗೆ ತಿಳಿಯಬೇಡ. ನಿನ್ನ ಯೋಗದಿಂದ ನನಗೆ ಪರಮೇಶ್ವರನ ಆತ್ಮಲಿಂಗಧಾರಣದ ಸುಯೋಗವು ಒದಗಿತು; ಇದಲ್ಲದೆ, ಅಂಶತಃ ಜಗದ್ಧಿತವೂ ನನ್ನಿಂದ ಒದಗಿತು; ಆದ್ದರಿಂದ ಮಹಾಶಿವಭಕ್ತನಾದ ನಿನ್ನಿಂದ ನನ್ನಮೇಲೆ ಒಂದುಬಗೆಯ ಅನುಗ್ರಹವೇ ಆಗಿರುವದು, ಅನ್ನುತ್ತಿರಲು, ಪರಮೇಶ್ವರನು

ರಾವಣನನ್ನು ಕುರಿತು--ಪಶ್ಚಾತ್ತಾಪದಿಂದ ಶುದ್ಧವಾಗಿರುವ ನನ್ನ ಪ್ರಿಯಭಕ್ತನೇ! ನೀನು ನಿಜವಾಗಿಯೇ ಭಕ್ತಿಯ ಮಹಿಮೆಯನ್ನು ವ್ಯಕ್ತಮಾಡಿದೆ! ಬ್ರಹ್ಮಾಂಡ, ಕೈಲಾಸ, ವೈಕುಂಠ, ಭೂಲೋಕ ಇವೆಲ್ಲವೂ ನಿನ್ನ ಭಕ್ತಿಯ ಯೋಗದಿಂದ ಏಕತ್ರವಾದವು! ಅಂದ ಬಳಿಕ ನಿನ್ನ ಶಕ್ತಿಯು ಎಷ್ಟು ಮಹತ್ತರವಾದದ್ದು! ಅತ್ತನೋಡು, ನಿನ್ನ ತಾಯಿಯೂ, ಹೆಂಡತಿಯೂ, ಬಂಧುಗಳೂ ಬರುತ್ತಿರುವರು, ಹೋಗು ತಾಯಿಯನ್ನು ನಮಸ್ಕರಿಸು, ಎಂದು ಹೇಳಿದನು. ಅದಕ್ಕೆ ರಾವಣನು--ದೇವಾ, ಇನ್ನು ನನಗೆ ಯಾತರ ಇಚ್ಛೆಯೂ ಇಲ್ಲ. ನನಗೆ ತಾಯಿಯುಬೇಡ, ಹೆಂಡತಿಬೇಡ, ಬಂಧುಗಳುಬೇಡ, ರಾಜ್ಯಸುಖವೂ ಬೇಡ; ಬರಿಯ ನಿನ್ನ ಚರಣಗಳಷ್ಟುಬೇಕು. ನಿನ್ನ ಆ ಚರಣಗಳ ವಿಯೋಗವು ನನಗೆ ಎಂದೂ ಆಗದಂತೆ ನನ್ನನ್ನು ಅನುಗ್ರಹಿಸು, ಎಂದು ಬೇಡಿಕೊಳ್ಳಲು, ಪರಮೇಶ್ವರನು--ರಾವಣಾ, ಇಲ್ಲ, ಸದ್ಯಕ್ಕೆ ಹಾಗೆ ಆಗಲಿಕ್ಕೆ ಬರುವಹಾಗಿಲ್ಲ. ನಿನ್ನ ಪೂರ್ವಸಂಚಿತವು ಇನ್ನೂ ತೀರಿರುವದಿಲ್ಲ! ಇಷ್ಟರಲ್ಲಿ ನಿನಗೆ ಮೋಕ್ಷವು ದೊರೆಯಲಾರದು; ಆದರೂ ಯೋಗ್ಯಕಾಲದಲ್ಲಿ ನಿನಗೆ ಮೋಕ್ಷವು ದೊರೆಯುವದು. ಇದು ನನ್ನ ಪೂರ್ಣ ಆಶೀರ್ವಾದವೆಂದು ತಿಳಿ, ಎಂದು ಹೇಳುತ್ತಿರಲು, ರಾವಣನು--ದೇವಾ, ಹಾಗಾದರೆ ಇನ್ನೂ ನನ್ನಿಂದ ಪಾಪಕರ್ಮಗಳು ಘಟಿಸಬೇಕಾಗಿವೆಯೆಂದಹಾಗಾಯಿತಲ್ಲ! ಆದರೂ ನಿನ್ನ ಈ ಕಲ್ಯಾಣಕಾರಕ ಆಶೀರ್ವಾದದ ಬಲದಿಂದ ಕಾಲಹರಣಮಾಡುವೆನು. ಅವ್ವಾ, ನಿನ್ನ ಇಚ್ಛೆಯನ್ನು ಪೂರ್ಣಮಾಡುವದು ನನ್ನಿಂದಾಗದ್ದಕ್ಕಾಗಿ ನನ್ನನ್ನು ಕ್ಷಮಿಸು, ಎಂದು ಪ್ರಾರ್ಥಿಸಿದನು. ಅದಕ್ಕೆ ಕೈಕಸಿಯು--ಬಾಲಕಾ, ನಿನ್ನಂಥ ಪುತ್ರಶ್ರೇಷ್ಠನ ಯೋಗದಿಂದ ನಮಗೆ ತ್ರೈಮೂರ್ತಿಗಳ, ಹಾಗು ಯಾವತ್ತು ದೇವತೆಗಳ, ಅದರಂತೆ ಮಹರ್ಷಿಗಳ ದರ್ಶನವಾಗಿ ನಮ್ಮ ಉದ್ಧಾರವಾಯಿತು. ಇದಲ್ಲದೆ ಇಡಿಯ ಭೂಲೋಕವೇ ಭಗವಾನ್ ಶಂಭುವಿನ ಆತ್ಮಲಿಂಗವನ್ನು ಪೂಜಿಸಿ ಮುಕ್ತವಾಗಲಿಕ್ಕೆ ಆಸ್ಪದವು ನಿನ್ನಿಂದಲೇ ದೊರೆಯಿತು; ಅಂದಬಳಿಕ ನಿನ್ನ ಭಕ್ತಿಯ ಪ್ರಭಾವವು ಸಾಮಾನ್ಯವಾದದ್ದೇ! ಪುತ್ರಶ್ರೇಷ್ಠಾ, ನಿನ್ನಂಥ ಸುಪುತ್ರನು ನನ್ನ ಹೊಟ್ಟೆಯಲ್ಲಿ ಹುಟ್ಟಿದ್ದರಿಂದ ನಾನು ಧನ್ಯಳಾದೆನು!

ಈ ಮೇರೆಗೆ ಕೈಕಸಿಯು ರಾವಣನನ್ನು ಆತನ ಶಿವಭಕ್ತಿಯ ಪ್ರಭಾವಕ್ಕಾಗಿ ಶ್ಲಾಘಿಸುತ್ತಿರಲು, ಪರಮೇಶ್ವರನು ಪುನಃ ಯಾವತ್ತು ದೇವತೆಗಳನ್ನು ಕುರಿತು--"ದೇವತೆಗಳಿರಾ, ನನ್ನ ಸತ್ವಮಯ ಆತ್ಮಲಿಂಗದಲ್ಲಿ ನಾನು ಇನ್ನು ಯಾವಾಗಲೂ ವಾಸಮಾಡತಕ್ಕವನು! ಯಾಕಂದರೆ ನಾನು ಇದನ್ನು ನಿತ್ಯದಲ್ಲಿ ಪೂಜಿಸಬೇಕಾಗುವದು. ನಮ್ಮ ಕೈಲಾಸವನ್ನು ಈ ಮಹಾ ಬಲಾಢ್ಯಭಕ್ತನು ಇಲ್ಲಿಗೆ ತಂದಿರುವದರಿಂದ, ಇನ್ನು ನಮ್ಮ ಈ ಆತ್ಮಲಿಂಗಕ್ಕೆ ಮಹಾಬಲೇಶ್ವರನೆಂದು ಕರೆಯಿರಿ! ಅದರಂತೆ, ಈ ಕೆಲಸದಲ್ಲಿ ಗಣಪತಿಯು ಆಯಾಸಪಟ್ಟಿರುವದರಿಂದ, ಈ ಗೋಕರ್ಣಕ್ಷೇತ್ರದಲ್ಲಿ ಆತನಿಗೆ ಅಗ್ರಪೂಜೆಯ ಮಾನವಿರತಕ್ಕದ್ದು; ಅಂದರೆ, ಗಣಪತಿಯನ್ನು ಪೂಜಿಸಿದ ಬಳಿಕ ಮಹಾಬಲೇಶ್ವರನ ಪೂಜೆಯನ್ನು ಮಾಡಬೇಕು. ಇದಕ್ಕೆ ತಪ್ಪಿದವರ ಸೇವೆಯು ವ್ಯರ್ಥವಾಗುವದಲ್ಲದೆ,

ಅವರು ನನ್ನ ರೋಷಕ್ಕೆ ಪಾತ್ರರಾಗುವರು. ಈ ಗೋಕರ್ಣಮಹಾಕ್ಷೇತ್ರವು ಇಂದಿನಿಂದ ಭೂಕೈಲಾಸವೆನಿಸುವದು, ಎಂದು ಹೇಳಲು, ಎಲ್ಲರೂ ಪರಮಾನಂದಪಟ್ಟು, ತಮ್ಮತಮ್ಮ ಸ್ಥಾನಗಳಿಗೆ ತೆರಳಿದರು!

ಈ ಮೇರೆಗೆ ಭಗವಾನ್ ಸದಾಶಿವನ ಅದ್ಭುತಭಕ್ತವಾತ್ಸಲ್ಯವನ್ನು ಕೇಳಿ ವಿವೇಕಶೀಲನು—ಸದ್ಗುರೋ, ವ್ಯವಹಾರದೃಷ್ಟಿಯಿಂದ ರಾವಣನ ಬೇಡಿಕೆಯೂ, ಪರಮೇಶ್ವರನ ಕೊಡುವಿಕೆಯೂ ಲೋಕವಿಲಕ್ಷಣವಾಗಿ ಇರುವದರಿಂದ ಮನಸ್ಸಿಗೆ ಸಮಾಧಾನವಾಗದೆ, ಇಲ್ಲದ ಶಂಕೆಗಳು ಬರತೊಡಗಿವೆ. ಮಹಾಭಕ್ತನಾದ ರಾವಣನು ಏನೂ ಸಂಕೋಚವಿಲ್ಲದೆ ಲೋಕಮಾತೆಯನ್ನು ಪರಮೇಶ್ವರನಲ್ಲಿ ಕೇಳಿದ್ದು ಆಶ್ಚರ್ಯವಾಗಿ ತೋರುತ್ತದೆ. ಅದರಂತೆ ಲೋಕಮಾತೆಯಾದ ಪಾರ್ವತಿಯು ಮಹಾಸಮರ್ಥಳಿದ್ದು, ವಿಷ್ಣುವಿನ ಮಾಯೆಯಿಂದ ಆಕೆಯು ವಿಪತ್ತಿನಿಂದ ಪಾರಾದಳಲ್ಲ! ತಾನು ಆದಿಮಾಯೆಯಿದ್ದು, ತಾನೇ ವಿದ್ರೂಪಳಾಗಿ ತನ್ನ ವಿಪತ್ತನ್ನು ತಾನೇ ದೂರಮಾಡಿಕೊಳ್ಳಲು ಯಾಕೆ ಸಮರ್ಥಳಾಗಲಿಲ್ಲ? ಭಗವತೀ ಪಾರ್ವತಿಯ ಮಾತೂ ಇರಲಿ, ಪ್ರತ್ಯಕ್ಷ ಶಂಕರನೇ ಮಹಾ ಸಮರ್ಥನಿದ್ದು, ತನ್ನ ಆತ್ಮಲಿಂಗವು ರಾವಣನಿಗೆ ಮಾರ್ಗದಲ್ಲಿ ಅತ್ಯಂತ ಭಾರವಾಗಿ ಆತನು ಅದನ್ನು ಕೆಳಗಿಟ್ಟು ಬಿಡುವಂತೆ ಯಾಕೆಮಾಡಲಿಲ್ಲ? ಆ ಲಿಂಗವನ್ನು ಕೆಳಗಿಡಲಿಕ್ಕೆ ಸಂಧ್ಯಾಕಾಲವಾಗುವಂತೆ ವಿಷ್ಣುವು ಚಕ್ರವನ್ನು ಯಾಕೆಹಿಡಿಯಬೇಕು? ಅದರಂತೆ ನಾರದನೂ, ಗಣಪತಿಯೂ ಸುಮ್ಮನೆ ಆಯಾಸವೇಕೆ ಪಡಬೇಕು? ಸದ್ಗುರೋ, ಈ ಶಂಕೆಗಳನ್ನು ನಿವಾರಣಮಾಡಿ ಮನಸ್ಸನ್ನು ಸಮಾಧಾನಪಡಿಸಬೇಕು, ಎಂದು ಕೇಳಿಕೊಳ್ಳಲು, ಸಿದ್ಧಮುನೀಶ್ವರನು—ವಿವೇಕಶೀಲಾ, ಮರೆಮೋಸದ ಲೌಕಿಕದೃಷ್ಟಿಯಿಂದ ನಿನ್ನ ಪ್ರಶ್ನಗಳು ಸಮರ್ಪಕವಾಗಿ ತೋರಿದರೂ, ಭಗವಾನ್ ಸದಾಶಿವನ ನಿಸ್ಪೃಹತೆಯ ಭಕ್ತವಾತ್ಸಲ್ಯದ ದೃಷ್ಟಿಯಿಂದ ಅವು ಅಸಮರ್ಪಕವಾಗಿರುತ್ತವೆ. ಶಿಷ್ಯೋತ್ತಮನೆ, ಪರಮೇಶ್ವರನಿಗೆ ಪಾರ್ವತಿಯನ್ನು ಕೊಡೆಂದು ಕೇಳಲಿಕ್ಕೆ ರಾವಣನಿಗೆ ಸಂಕೋಚವೇಕೆ ಬರಲಿಲ್ಲವೆಂದು ನೀನು ಕೇಳುವೆ? ಆದರೆ ಪರಕೀಯತ್ವವು ಹೆಚ್ಚು ಹೆಚ್ಚು ಆದ ಮಾನದಿಂದ ಸಂಕೋಚವು ಹೆಚ್ಚಾಗುವದೂ, ಪರಕೀಯತ್ವವು ಕಡಿಮೆ ಕಡಿಮೆಯಾದ ಮಾನದಿಂದ, ಅಂದರೆ ಸ್ವಕೀಯತ್ವವು ಹೆಚ್ಚಿದಮಾನದಿಂದ ಸಂಕೋಚವು ಕಡಿಮೆಯಾಗುವದೂ ನಿನ್ನ ಅನುಭವಕ್ಕೆ ಬರುವಮಾತಾಗಿರುವದು. ಒಟ್ಟಿಗೆ ಬೇಡುವವರಲ್ಲಿಯೂ ಕೊಡುವವರಲ್ಲಿಯೂ ಭೇದಬುದ್ಧಿಯು ಇದ್ದ ಮಾನದಿಂದ ಸಂಕೋಚವು ಹೆಚ್ಚು, ಅಭೇದಬುದ್ಧಿಯು ಇದ್ದಮಾನದಿಂದ ಸಂಕೋಚವು ಕಡಿಮೆ. ನಾವು ನಮ್ಮಲ್ಲಿಯೇ ಏನನ್ನಾದರೂ ಬೇಡಲಿಕ್ಕೆ ಸಂಕೋಚಪಡಬಹುದೊ? ಪಡುವದಿಲ್ಲ; ಯಾಕಂದರೆ ಬೇಡುವವರೂ ನಾವೆಯೇ, ಕೊಡುವವರೂ ನಾವೆಯೇ ಇರುವದರಿಂದ, ಸಂಕೋಚಕ್ಕೆ ಆಸ್ಪದವೇ ಇರುವದಿಲ್ಲವು. ಅದರಂತೆ ಭಕ್ತನಾದ ರಾವಣನಲ್ಲಿ, ಹಾಗು ಭಜನಮಾಡಿಸಿಕೊಳ್ಳುವ ಪರಮೇಶ್ವರನಲ್ಲಿದೇಹದೃಷ್ಟಿಯಿಂದ ಭೇದತೋರಿದರೂ, ರಾವಣನ ಭಕ್ತಿ, ಹಾಗು ಪರಮಾತ್ಮನ ಭಕ್ತವಾತ್ಸಲ್ಯಗಳು ಏಕರೂಪವಾಗಿರುವದರಿಂದ, ಆತ್ಮದೃಷ್ಟಿಯಿಂದ ಏಕರೂಪವಾಗಿದ್ದ

ಆ ಇಬ್ಬರು ದೇವಭಕ್ತರು ತಮ್ಮ ವಾತ್ಸಲ್ಯ-ಭಕ್ತಿಗಳ ವೈಭವದಲ್ಲಿ ದೇಹಾಭಿಮಾನವನ್ನು ಅಳಿದುಬಿಟ್ಟದ್ದರಿಂದ ಕೊಡ-ಕೇಳುವದರಲ್ಲಿ ಸಂಕೋಚಕ್ಕೆ ಆಸ್ಪದವಿಲ್ಲದೆ ಹೋಯಿತು! ವಿವೇಕಶೀಲಾ, ತಾನು ರುದ್ರನಾಗಿಯೇ ರುದ್ರನನ್ನು ಪೂಜಿಸಬೇಕಾಗಿರಲು, ಉಪಾಸನೆಯಲ್ಲಿ ರಾವಣನು ರುದ್ರನೇ ಆಗಿ ಹೋಗಿರುವದರಿಂದ ಕೇಳುವವನೂ ರುದ್ರನೇ, ಕೊಡುವವನೂ ರುದ್ರನೇ ಆಗಿ, ಆ ಉಪಾಸ್ಯೋಪಾಸಕಭಾವದಲ್ಲಿ ಭೇದ ಉಳಿಯುವದಿಲ್ಲ- ಈ ಏಕರೂಪತೆಯು ನಮ್ಮಂಥ ದೇಹಾಭಿಮಾನಿಗಳಿಗೆ ಹ್ಯಾಗೆ ಅನುಭವಕ್ಕೆ ಬಂದೀತು? ಆದರೆ ರಾವಣನು ಮಹಾಭಕ್ತನಾದರೂ, ದೈವಸಂಕಲ್ಪದಂತೆ ಅವನು ತನ್ನ ಜೀವನಯಾತ್ರೆಯನ್ನು ಕೇವಲ ಅಹಂಕಾರದಲ್ಲಿಯೇ ಸಾಗಿಸಬೇಕಾದದ್ದರಿಂದ, ಆ ದೇಹಾಭಿಮಾನದ ಸ್ಥಿತಿಯಲ್ಲಿ ಲೋಕಮಾತೆಯನ್ನು ಪರಿಗ್ರಹಿಸುವದು ಅವನಿಗೆ ಅಶಕ್ಯವಾಯಿತು; ಆದ್ದರಿಂದ ವಿಷ್ಣುವೇ ಮೊದಲಾದವರು ಉಪಾಯಾಂತರದಿಂದ ಆ ಮಹಾ ವಿಪತ್ತನ್ನು ದೂರಮಾಡಿ ರಾವಣನ, ಹಾಗು ಜಗತ್ತಿನ ಕಲ್ಯಾಣಮಾಡಿದರು! ಇದಕ್ಕೆಲ್ಲ ಸದಾಶಿವನ ಅನುಗ್ರಹವೇ ಕಾರಣವು.

ಇನ್ನು ಈ ವಿಪನ್ನಿವಾರಣವನ್ನು ಭಗವಾನ್ ರುದ್ರನೇ ಯಾಕೆಮಾಡಲಿಲ್ಲವೆಂದು ನೀನು ಕೇಳುವೆ ! ಆದರೆ ನಮ್ಮ ಲೌಕಿಕರಲ್ಲಿರುವಂತೆ ಪರಮಾತ್ಮನಲ್ಲಿ ಮರೆಮೋಸಗಳಿರುವದಿಲ್ಲವು. ಆತನು ಕೊಟ್ಟೆನೆಂದರೆ ಕೊಟ್ಟೆನು, ಇಲ್ಲವೆಂದರೆ ಇಲ್ಲ. ತಾನೇ ಕೊಟ್ಟು ತಾನೇ ಕಸಿದುಕೊಳ್ಳುವದು, ಅದರಲ್ಲಿಯೂ ಹಾದಿಯ ಬಡಿಯುವವರಂತೆ ಕೊಟ್ಟದ್ದನ್ನು ಕಸಿದುಕೊಳ್ಳುವದು ನೈತಿಕದೃಷ್ಟಿಯಿಂದ ನಮ್ಮಂಥ ಪಾಮರರೂ ಮಹಾಪರಾಧವೆಂದು ಎಣಿಸುತ್ತಿರಲು, ಸರ್ವತಂತ್ರ ಸ್ವತಂತ್ರನಾದ ಪರಮಾತ್ಮನು ಇಂಥ ಹೀನತನವನ್ನು ಯಾಕೆಮಾಡುವನು! ಆದ್ದರಿಂದಲೇ ಪರಮಾತ್ಮನ ಆತ್ಮಲಿಂಗವು ರಾವಣನಿಗೆ ಎತ್ತಲಶಕ್ಯವಾಗುವಂತೆ ಭಾರವಾಗಲಿಲ್ಲ. ವಿವೇಕಶೀಲಾ, ಭಗವತೀ ಪಾರ್ವತಿಯೆಂದರೆ ಪರಮಾತ್ಮನ ಅರ್ಧಾಂಗವು; ಆದರೆ ತನ್ನ ಆತ್ಮಲಿಂಗವನ್ನೇ, ಅಂದರೆ ತನ್ನನ್ನೇ ರಾವಣನಿಗೆ ಕೊಟ್ಟುಬಿಟ್ಟ ಪರಮಾತ್ಮನು ಹೆಂಡತಿಯನ್ನು ಕೊಟ್ಟದ್ದು ಯಾವದೊಡ್ಡ ಮಾತು? ಹೆಂಡಿರುಮಕ್ಕಳೆಲ್ಲರೂ ತನ್ನ ಸಲುವಾಗಿಯೇ ಇರುವರಲ್ಲದೆ ತಾನು ಅವರಸಲುವಾಗಿ ಇರುವದಿಲ್ಲವೆಂಬ ಶ್ರುತಿಯ ಅಭಿಪ್ರಾಯವನ್ನು ಮನಸ್ಸಿನಲ್ಲಿ ತಂದರೆ, ತನ್ನನ್ನೇ ಕೊಡುವ ಪರಮೇಶ್ವರನು ಭಗವತೀ ಪಾರ್ವತಿಯನ್ನು ಕೊಟ್ಟದ್ದೇನು ಆಶ್ಚರ್ಯವಲ್ಲ; ಅದರಂತೆ ಪರಮೇಶ್ವರನ ಆತ್ಮನನ್ನೇ ಬೇಡಿದ ಮಹಾತ್ಮನಾದ ರಾವಣನಿಗೆ ಪಾರ್ವತಿಯನ್ನು ಬೇಡುವದೂ ದೊಡ್ಡಮಾತಲ್ಲ! ಆದರೆ ದೇಹಾಭಿಮಾನದ ಮೋಹವಶರಾದ ನಮ್ಮಂಥ ಅಜ್ಞಾನಿಗಳಿಗೆ ಮಾತ್ರ ಹೆಂಡತಿಯು ಆತ್ಮನಿಗಿಂತಲೂ ಹೆಚ್ಚಿನವಳಾಗಿರುವಳೆಂಬ ಭ್ರಾಂತಿಯಿರುವದು! ವಿವೇಕಶೀಲಾ, ಪ್ರಜಾನುರಂಜನಕ್ಕಾಗಿ ಶ್ರೀ ರಾಮನು, ತುಂಬಾಹಡೆಯಲಾದ ತನ್ನ ಹೆಂಡತಿ ಲೋಕಮಾತೆ ಜಾನಕಿಯನ್ನು ಅಡವಿಗಟ್ಟಿದ್ದನ್ನು ಕೇಳಿರುವೆಯಲ್ಲವೆ? ಆದ್ದರಿಂದ ದೊಡ್ಡವರ ಕೃತಿಯ ಮರ್ಮವನ್ನು ದೊಡ್ಡವರೇ ಅರಿತುಕೊಳ್ಳುವರು. ಭಗವಂತನು ಸಾಮಾನ್ಯನಲ್ಲ; ಆತನ ಅರ್ಧಾಂಗಿಯಾದ ಲೋಕಮಾತೆಯೂ ಸಾಮಾ

ನ್ಯಳಲ್ಲ; ಅವರನ್ನು ತತ್ಸ್ವರೂಪಹೊಂದಿಯೇ ಪೂಜಿಸುವ ರಾವಣನೂ ಸಾಮಾನ್ಯ ನಲ್ಲ! ಆದ್ದರಿಂದ ನಾವು ಇಂಥವರ ವಿಷಯುವಾಗಿ ಬಹು ವಿವೇಕದಿಂದ ವಿಚಾರಮಾಡಬೇಕು; ಅಂಥ ವಿವೇಕವಿಲ್ಲದ ಮೂಢರು ನಾವಾಗಿದ್ದರೆ, ದೊಡ್ಡವರ ಆಟವನ್ನು ದೊಡ್ಡವರೇ ಬಲ್ಲರೆಂದು ತಿಳಿದು, ತಿಳುವಳಿಕೆ ಹಟ್ಟುವವರೆಗೆ ಇಲ್ಲದ ಕುತರ್ಕಮಾಡದೆ ಮೂಢ ಭಕ್ತಿ ಯನ್ನು ತಾಳಿ, ಪರಮಾತ್ಮನ ವಿಷಯದಭಕ್ತಿ-ವಿಶ್ವಾಸಗಳಲ್ಲಿ ಅಂತರವಾಗಗೊಡಬಾರದು!

ವಿವೇಕಶೀಲಾ; ಇನ್ನು ಲೋಕಮಾತೆಯಾದ ಪಾರ್ವತಿಯು ತಾನೇ ಮಾಯಾಸ್ವ ರೂಪಳಿದ್ದು, ತನ್ನ ಮಾಯೆಯಿಂದ ತಾನೇ ವಿದ್ರೂಪಳಾಗದೆ ವಿಷ್ಣುವಿನ ಮಾಯೆಯಿಂದ ಯಾಕೆ ವಿದ್ರೂಪಳಾದಳೆಂದು ಕೇಳುವೆ; ಆದರೆ ಪಾರ್ವತಿಯು ಪರಮೇಶ್ವರನ ಪತ್ನಿಯ ಲ್ಲವೆ? ಪತಿಯನ್ನು ಅನುಸರಿಸುವದು ಪತ್ನಿಯ ಧರ್ಮವಲ್ಲವೆ? ತಾನು ಎಷ್ಟು ಸಮರ್ಥ ಳಾಗಿದ್ದರೂ ಪತಿಯ ಆಜ್ಞೆಯನ್ನು ಪಾಲಿಸುವದು ಕುಲೀನ ಸ್ತ್ರೀಯ ಕರ್ತವ್ಯವಾದದ್ದರಿಂದ, ಆ ಸತೀಶಿಖಾಮಣಿಯು ಪತಿಗೆ ದ್ರೋಹವೆಣಿಸದೆ ಪರಾಧೀನತೆಯಿಂದ ರಾವಣನನ್ನು ಅನು ಸರಿಸಬೇಕಾಯಿತು. ವಿವೇಕಶೀಲಾ, ನಿಸ್ಪೃಹವೃತ್ತಿಯ ನೆಟ್ಟನ್ನ ಹಾದಿಯು ಪಾರ್ವತೀ- ಪರಮೇಶ್ವರರ ಗೂಢತತ್ವ-ಗಂಭೀರವಾದ ಆಚರಣೆಯಿದು! ಅದರ ಮರ್ಮವು ಅವರ ಕೃಪೆಯಿಲ್ಲದೆ ನಮ್ಮ ಬುದ್ಧಿಯಿಂದ ನಮಗೆ ಹ್ಯಾಗೆ ತಿಳಿದೀತು! ಸರ್ವತಂತ್ರ ಸ್ವತಂತ್ರ ನಾದ ಭಗವಾನ್ ಶಂಕರನ ಮಾತು ಇರಲಿ, ಆತನ ಅಧೀನರಾದ ಬ್ರಹ್ಮಾದಿದೇವತೆಗಳಾ ದರೂ ತಮ್ಮ ವರವನ್ನು ತಾವೇ ತಿರುಗಿಸಿಲ್ಲ. ಕಪಟಿಗಂಟಕ ಸ್ವಭಾವದ ನಮ್ಮ ಮಾನವ ರಂತೆಯೇ ದೇವತೆಗಳು ನಡೆದರೆ, ಅವರಿಗೂ ನಮಗೂ ಭೇದವೇನು ಉಳಿಯುವದು? ಅವ ರಿಗೆ ದೇವತೆಗಳೆಂದಾದರೂ ಯಾಕೆ ಅನ್ನಬೇಕು? ವರವನ್ನುಪಡೆದವನು ಅಮಾರ್ಗಿಯಾದರೆ ಲೋಕಹಿತಾರ್ಥವಾಗಿ ಅವನನ್ನು ವರಕೊಡದಿದ್ದ ಅನ್ಯದೇವತೆಗಳು ಉಪಾಯದಿಂದ ದಂಡಿಸಿ ಲೋಕವನ್ನು ನಿಷ್ಕಂಟಕವಾಗಿ ಮಾಡಬಹುದು; ಆದರೆ ವರವನ್ನು ಕೊಟ್ಟ ದೇವತೆಗಳೇ ತಮ್ಮ ವರವನ್ನು ತಿರುಗಿಸಲಾರರು. ಇದೇ ದೇವತ್ವದ ಮುಖ್ಯ ಲಕ್ಷಣವು! ವಿವೇಕಶೀಲಾ, ಲೋಕವ್ಯವಹಾರವೆಲ್ಲ ಈಶ್ವರೀಲೀಲೆಯೆಂದು ನಾನು ಈ ಮೊದಲೆ ಹೇಳಿರುವದನ್ನು ಯಾ ವಾಗಲೂ ಮರೆಯಬೇಡ. ಈಶ್ವರನೂ ಅತರ್ಕ್ಯನೇ, ಅವನ ಮಾಯೆಯೂ ಅತರ್ಕ್ಯವೇ, ಅವನ ಲೀಲೆಯೂ ಅತರ್ಕ್ಯವೇ! ಇನ್ನು ನಾವು ಈಶ್ವರನನ್ನೂ, ಅವನ ಮಾಯೆಯನ್ನೂ, ಅವನ ಲೀಲೆಯನ್ನೂ ತಿಳಿಯಲು ಸಮರ್ಥರಾಗಲಿಕ್ಕಿಲ್ಲ; ಆದರೆ ಈಶ್ವರಭಕ್ತಿಯಿಂದ ಈಶ್ವರನ ಕೃಪೆಯನ್ನು ಸಂಪಾದಿಸಿ, ಅದರ ಬಲದಿಂದ ನಾವು ಈಶ್ವರನನ್ನು ಪಡೆಯ ಬಹುದು; ಆದ್ದರಿಂದ ಕಲ್ಪನಾಕೋಟಿಗಳನ್ನು ಕಳಚಿಚಲ್ಲಿ ಅಕೃತ್ರಿಮವಾದ ಭಕ್ತಿಯಿಂದ ನಾವು ಪರಮೇಶ್ವರಪ್ರಾಪ್ತಿಗಾಗಿ ಯತ್ನ ಮಾಡತಕ್ಕದ್ದು!



## ೬ನೇ ಸುಧಾತರಂಗ !

ಅವತಾರ-ಹರಲೀಲೆಗಳು-

### ೧ ವರಾಹ-ಹರಲೀಲೆ.

(ಭಾಗವತ-ಲಿಂಗಪುರಾಣ.)

ಶ್ರೀ ಸದಾಶಿವನ ಅಸುರವಧಲೀಲೆಯನ್ನೂ, ಆತನು ಭೂಕೈಲಾಸವನ್ನು ಂಟು ಮಾಡಿದ ಚರಿತ್ರವನ್ನೂ ಕೇಳಿ ವಿವೇಕಶೀಲಾದಿ ಶಿಷ್ಯರಿಗೆ ಪರಮಾನಂದವಾಯಿತು. ಅವರು ಪರಮೋತ್ಸಾಹದಿಂದ ಸಿದ್ಧಮುನೀಶ್ವರನನ್ನು ಕುರಿತು- ಸದ್ಗುರೋ. ನೀನು ವಿವರಿಸಿದ ಪರಮೇಶ್ವರನ ಅದ್ಭುತ ಲೀಲೆಗಳ ಶ್ರವಣದಿಂದ ನಾವು ಪರಮ ಸಂತುಷ್ಟರಾದೆವು; ಆದರೆ ಭಗವಾನ್ ಸದಾಶಿವನು ಶ್ರೀವಿಷ್ಣುವಿನ ವರಾಹಾವತಾರವನ್ನು ಉಪಸಂಹರಿಸಿ ಆ ಆದಿ ವರಾಹನ ಕೋರೆಯನ್ನೂ, ಅದರಂತೆ ಅದೇ ಭಗವಾನ್ ವಿಷ್ಣುವಿನ ನೃಸಿಂಹಾವತಾರವನ್ನು ಉಪಸಂಹರಿಸಿ ಆ ನೃಸಿಂಹನ ಮುಖವನ್ನೂ ತನ್ನ ರುಂಡಮಾಲೆಯಲ್ಲಿ ಸೇರಿಸಿದನೆಂದು ಭಗವಾನ್ ವೇದವ್ಯಾಸರು ಲಿಂಗಪುರಾಣದಲ್ಲಿ ವರ್ಣಿಸಿರುವರಂತೆ; ಅದರಂತೆ, ತ್ರಿವಿಕ್ರಮಾವತಾರವನ್ನೂ ಶಿವನು ಉಪಸಂಹರಿಸಿ, ಅದರ ಅವಶೇಷವನ್ನೂ ಧರಿಸಿದನೆಂದು ಕೇಳಿದ್ದೇನೆ. ಅವುಗಳ ವರ್ಣನವನ್ನು ಸವಿಸ್ತಾರವಾಗಿ ನಮಗೋಸ್ಕರ ನಿರೂಪಿಸುವ ಕೃಪೆಯಾಗಬೇಕು. ಮುನಿವರಾ, ಮಹಾಜ್ಞಾನಿಯೂ, ಸತ್ವಗುಣಮೂರ್ತಿಯೂ, ಸ್ಥಿತಿಕರ್ತನೂ ಆದ ವಿಷ್ಣುವಿನ ಅವತಾರ ಸಮಾಪ್ತಿಯನ್ನು ಸದಾಶಿವನು ಯಾಕೆ ಮಾಡಬೇಕಾಯಿತು? ಆ ಭಗವಾನ್ ವಿಷ್ಣುವು ತನ್ನ ಅವತಾರದ ಸಮಾಪ್ತಿಯನ್ನು ತಾನೇ ಯಾಕೆ ಮಾಡಿಕೊಳ್ಳಲಿಲ್ಲ? ಜಗತ್ಕಲ್ಯಾಣಕ್ಕಾಗಿ ನೃಸಿಂಹಾದಿಅವತಾರತಾಳಿದ ಪ್ರಭುವು, ಕಾರ್ಯವಾದಕೂಡಲೆ, ವೇಷಧಾರಿಯು ವೇಷವನ್ನು ಕಳಿಚಿಬಿಡುವಂತೆ ಭಗವಾನ್ ವಿಷ್ಣುವು ತನ್ನ ಕೂರ್ಮ-ನೃಸಿಂಹಾದಿರೂಪಗಳನ್ನು ತಾನೇ ಯಾಕೆ ಕಳಚಿಬಿಡಲಿಲ್ಲ? ಒಬ್ಬ ಸಾಮಾನ್ಯ ವೇಷಧಾರಿಯ ಯೋಗ್ಯತೆಯೂ ವಿಷ್ಣುವಿಗೆ ಇಲ್ಲದಾಯಿತೆಂದುಹೇಳಬಹುದೆ? ಸದ್ಗುರೋ, ಅಜ್ಞಾನದ ಮೂಲಕವಾಗಿ ನಮಗೆ ಬಂದಿರುವ ಈ ಸಂಶಯಗಳ ನಿವಾರಣ ಮಾಡಬೇಕು, ಎಂದು ಪ್ರಾರ್ಥಿಸಲು, ಸಿದ್ಧಮುನೀಶ್ವರನು-ವಿವೇಕಶೀಲನೇ, ಬಹು ಯೋಗ್ಯ ಪ್ರಶ್ನ ಮಾಡಿದೆ. ಮೂಲಕ್ಕೆ ಹೋಗಿ ವಿಚಾರಮಾಡದೆಯಿರುವದರಿಂದ ಇಂಥ ಸಂಶಯಗಳು ಉತ್ಪನ್ನವಾಗುತ್ತವೆ. ಭಗವಾನ್ ಸದಾಶಿವನಿಂದಲೇ ಬ್ರಹ್ಮ-ವಿಷ್ಣು-ಮಹೇಶ್ವರರೆಂಬ ತ್ರಿಮೂರ್ತಿಗಳು ರಜ-ಸತ್ವ-ತಮಗುಣಗಳಿಂದ ಉತ್ಪನ್ನವಾಗಿರಲು, ಆ ಮೂರು ರೂಪಗಳೂ ತತ್ವತಃ ಸದಾಶಿವನಿಂದ ಭಿನ್ನವಲ್ಲವೆಂಬದನ್ನು ಚನ್ನಾಗಿ ನೆನಪಿನಲ್ಲಿಡು. ವೇಷಧಾರಿಯು ತನ್ನ ಮೂಲರೂಪದ ಸ್ಮರಣದಿಂದಲೇ ವೇಷವನ್ನು ಪರಿತ್ಯಜಿಸುವದರಿಂದ, ಅವನ ವೇಷಪರಿತ್ಯಾಗಕ್ಕೆ ಮೂಲರೂಪವೇ ಕಾರಣವಾಗುವದಿಲ್ಲವೇ? ಅದರಂತೆ ವಿಷ್ಣುರೂಪದ ಸದಾಶಿವನು ವರಾಹ-ನೃಸಿಂಹರೂಪಗಳನ್ನು ಜಗತ್ಕಲ್ಯಾಣಕ್ಕಾಗಿ ತಾಳಿರಲು, ಜಗತ್

ಲ್ಯಾಣದ ಕಾರ್ಯವಾದ ಬಳಿಕ ತನ್ನ ಮೂಲ ಸದಾಶಿವರೂಪಸ್ಮರಣದಿಂದ, ಅಥವಾ ಆ ಮೂಲರೂಪದ ಬಾಧೆಯಿಂದ ತನ್ನ ಆ ವರಾಹ-ನೃಸಿಂಹಾದಿರೂಪಗಳನ್ನು ತ್ಯಜಿಸಿದರೆ ವ್ಯತ್ಯಾಸವೇನು? ವಿಷ್ಣುವೂ ಸದಾಶಿವರೂಪವೇ, ನೃಸಿಂಹನೂ ಸದಾಶಿವರೂಪವೇ, ವರಾಹನೂ ಸದಾಶಿವರೂಪವೇ, ಶರಭವೂ ಸದಾಶಿವರೂಪವೇ! ಅಂದಬಳಿಕ ಜಗತ್ತಿನ ಸೃಷ್ಟಿ-ಸ್ಥಿತಿಲಯಗಳಿಗಾಗಿ ಬ್ರಹ್ಮ-ವಿಷ್ಣು-ಮಹೇಶ್ವರ ರೂಪಗಳನ್ನು ಧರಿಸಿ ಭಗವಾನ್ ಸದಾಶಿವನು ಸೃಷ್ಟಿಯ ವ್ಯವಹಾರಬಿದ್ದಂತೆ ತನ್ನ ಅಗಾಧಮಾಯೆಯಿಂದ ಒಂದು ಅವತಾರ ತಾಳುವನು, ಒಂದು ಅವತಾರವನ್ನು ಅಡಗಿಸುವನು, ಒಂದು ಅವತಾರದಿಂದ ಅನ್ಯರನ್ನು ಸಂಹರಿಸುವನು, ಒಂದು ಅವತಾರದಿಂದ ತನ್ನನ್ನೇ ಸಂಹರಿಸಿಕೊಳ್ಳುವನು. ಭಗವಾನ್ ಸದಾಶಿವನ ಈ ಅದ್ಭುತಲೀಲೆಯನ್ನು ಅರಿಯುವದಕ್ಕೆ ಅಜ್ಞಾನಿಗಳಾದ ಪಾಮರರು ನಾವು ಹ್ಯಾಗೆ ಸಮರ್ಥರಾದೇವು?

ವಿವೇಕಶೀಲಾ, "ಮಮಮಾಯಾದುರತ್ಯಯಾ" ಎಂಬಂತೆ ನನ್ನ ಮಾಯೆಯೇ ನನಗೆ ತಿಳಿಯಲಶಕ್ಯವೆಂದು ಭಗವಂತನು ಹೇಳಿರುವಾಗ, ನಮ್ಮ ಸ್ವರೂಪವನ್ನೇ ಅರಿಯದ ನಾವು ಈಶ್ವರಸ್ವರೂಪವನ್ನೂ, ಆತನ ಮಾಯೆಯಸ್ವರೂಪವನ್ನೂ ಹ್ಯಾಗೆ ಅರಿತೇವು? ಹೀಗೆ ಅಜ್ಞಾನದಲ್ಲಿ ಮುಣುಗಿ ದೇಹಾಭಿಮಾನದಿಂದ ಅಧಃಪತನಹೊಂದಿದ ನಾವು, ನಮ್ಮ ಕ್ಷುದ್ರವ್ಯವಹಾರವನ್ನೇ ಭಗವದ್ವ್ಯಾಪಾರಕ್ಕೆ ಹಚ್ಚಿ ಸುಮ್ಮಸುಮ್ಮನೆ ಕುಕಲ್ಪನೆಯಿಂದ ಭಗವಂತನ ಬೇರೆ ಬೇರೆ ರೂಪಗಳ ಸಂಬಂಧದಿಂದ ದ್ವೇಷಾಸೂಯಗಳನ್ನು ತಾಳಿ ನರಕಕ್ಕೆ ಇಳಿಯುವೆವು. ವಿವೇಕಶೀಲನೇ, ಎಲ್ಲಕ್ಕೂ ವಿವೇಕವು ಬೇಕು. ವಿವೇಕಿಯಾಗುವದಕ್ಕಿಂತ ಹೆಚ್ಚಿನ ಪಾಂಡಿತ್ಯವಿಲ್ಲ. ಎಲ್ಲ ಭಗವದವತಾರಗಳೂ ಜಗತ್ಕಲ್ಯಾಣಕ್ಕಾಗಿಯೇ ಇರುವದರಿಂದ, ನಮ್ಮ ಭಕ್ತಿಗೆ ಕಾರಣವಾಗುವ ಗುರೂಪದಿಷ್ಟವಾದ ಯಾವ ಅವತಾರವನ್ನೇ ಆಗಲಿ, ಸರ್ವೋತ್ತಮತ್ವದಿಂದ ಆರಾಧಿಸಿ ಸರ್ವತ್ರ ಆ ರೂಪವನ್ನು ನೋಡುವಯೋಗ್ಯತೆಯನ್ನು ಪಡೆದು ದ್ವೇಷಾಸೂಯಾದಿ ಮಾಯಾಗುಣಗಳನ್ನು ಪರಿತ್ಯಜಿಸಿ ಕೃತಾರ್ಥರಾಗುವದನ್ನು ಬಿಟ್ಟು, ಇಲ್ಲದ ಕುಕಲ್ಪನೆಯಿಂದ ಅವತಾರ ಅವತಾರಗಳಿಗೆ ಒರೆಹಚ್ಚಿ ದುರಹಂಕಾರದಿಂದ ಯಾವ ಅವತಾರಗಳ ಪ್ರಸಾದಕ್ಕೂ ಗುರಿಯಾಗದೆ ಹೋಗುವದು ಮಹಾ ಮೂರ್ಖತನವೇಸರಿ. "ನೀರು ನೀರಿನಲ್ಲಿ ಕೂಡಿ ನೀರೂ, ಹಾಲು ಹಾಲಿನಲ್ಲಿ ಕೂಡಿ ಹಾಲೂ ಆಗುವಂತೆ, ಶಿವ-ವಿಷ್ಣುಗಳು ಏಕರೂಪವಾಗಿದ್ದು, ವಿಷ್ಣುವಿನ ಅವತಾರಸಮಾಪ್ತಿಯಾದಬಳಿಕ ವಿಷ್ಣುವು ಶಿವರೂಪದಲ್ಲಿ ಏಕಮಯ್ಯತೆ ಹೊಂದಿದನೆಂ"ತಲೂ, "ನನ್ನ ಭಕ್ತರಿಗೆ ಸಿದ್ಧಿಯು ಬೇಕಾಗಿದ್ದರೆ ಅವರು ನೃಸಿಂಹನನ್ನು ಪೂಜ್ಯನೆಂದು ಭಾವಿಸಬೇಕೆಂ"ತಲೂ,"ನಾನು ಆ ನೃಸಿಂಹನನ್ನು ನಮಸ್ಕರಿಸುವೆನೆಂ"ತಲೂ ವೀರಭದ್ರರೂಪಿಯಾದ ಶಂಕರನೇ ಲಿಂಗಪುರಾಣದಲ್ಲಿ ಹೇಳಿರುವನು. ವಿವೇಕಶೀಲಾ, ತಿರುಗಿ ಕೇಳಿದರೆ, ಆತ್ಮದೃಷ್ಟಿಯಿಂದ ನಾವೂ ನೀವೂ ಎಲ್ಲರೂ ಸದಾಶಿವಾಂಶರೇ ಆಗಿರುವದರಿಂದ, ನಮ್ಮ ನಮ್ಮ ಕರ್ಮಗಳನ್ನು ಮರೆತುಬಿಟ್ಟರೆ ತತ್ವತಃ ಶ್ರೇಷ್ಠ-ಕನಿಷ್ಠಭಾವವನ್ನು ಯಾರು ಯಾರಿಗೆ ಆರೋಪಿಸಬೇಕು! ಆದರೂ ವ್ಯಾವಹಾರಿಕರಾದ

ನಮಗೆ ಕರ್ಮಬಾಧೆತಪ್ಪದ್ದರಿಂದ ಅಂಥ ಯೋಗ್ಯತೆ ಬಾರದಿರಲು, ವಿವೇಕದಿಂದ ನಮ್ಮ ನಮ್ಮ ಉಪಾಸ್ಯದೇವತೆಗಳನ್ನು ಸರ್ವೋತ್ತಮತ್ವೇನ ಆರಾಧಿಸಬೇಕು. ಸತಿಯು ತನ್ನ ಪತಿಯನ್ನು ದೇವರೆಂದು ತಿಳಿದು ಸೇವಿಸಬೇಕೆಂದು ಹೇಳುವದರಿಂದ, ಅನ್ಯರ ಪತಿಗಳನ್ನು ಆಕೆಯು ಶತ್ರುಗಳೆಂದು ತಿಳಿಯಬೇಕೆಂದಾಗಲಿ, ತನ್ನ ಪತಿಯನ್ನು ಅನ್ಯರ ಪತಿಗೆ ಒರೆಹಚ್ಚಿ ನೋಡಬೇಕೆಂದಾಗಲಿ ಹೇಳಿದಹಾಗಾಗುವದೊ? ಇದಲ್ಲದೆ ಭಗವಾನ್ ವಿಷ್ಣುವಿಗೆ ಅಜ್ಞಾನವು ಮುಸುಕಲಿಕ್ಕೆ ಒಂದು ನೈಮಿತ್ತಿಕಕಾರಣವೂ ಉಂಟು. ಅದನ್ನು ನಿಮಗೆ ಹೇಳುವೆನು ಕೇಳಿರಿ.

ಹಿಂದಕ್ಕೆ ದೇವಾಸುರಯುದ್ಧವು ದಿವ್ಯಸಹಸ್ರವರ್ಷಗಳವರೆಗೆ ನಡೆದು ಬಹುಜನ ದೇವತೆಗಳು ಮರಣಹೊಂದಿದರು. ಆಗ ಇಂದ್ರನು ತಮ್ಮ ಗುರುವಾದ ಬ್ರಹಸ್ಪತಿಗೆ ಶರಣುಹೋಗಲು, ಬ್ರಹಸ್ಪತಿಯು ಇಂದ್ರನಿಗೆ ಅಭಯವಿತ್ತು, ಶ್ರೀಶಂಕರನಿಂದ ಸಂಜೀವನೀ ಮಂತ್ರವನ್ನು ಪಡೆದುಕೊಂಡು ಬರುವದಕ್ಕಾಗಿ ಆತನನ್ನು ಕುರಿತು ತಪಸ್ಸನ್ನಾಚರಿಸಹತ್ತಿದನು. ಈ ಸುದ್ದಿಯನ್ನು ದೈತ್ಯ ಗುರುವಾದ ಶುಕ್ರಾಚಾರ್ಯನು ಕೇಳಿ ತಾನೂ ಆ ಮಂತ್ರವನ್ನು ಸಂಪಾದಿಸಿಕೊಂಡು ಬರಲು, ಶಿವನನ್ನು ಕುರಿತು ಬ್ರಹಸ್ಪತಿಯ ಎದುರಿಗೆ ಕುಳಿತು ತಪಶ್ಚರ್ಯಮಾಡತೊಡಗಿದನು. ಅವರಿಬ್ಬರ ತಪಶ್ಚರ್ಯಕ್ಕೆ ಭಗವಾನ್ ಸದಾಶಿವನು ಪ್ರಸನ್ನನಾಗಿ ಬಂದು—ಇವರಿಬ್ಬರೂ ಒಂದೇ ಫಲಕ್ಕಾಗಿ ತಪಶ್ಚರ್ಯಮಾಡಿರುವರು; ಇವರ ಸತ್ವವನ್ನು ಪರೀಕ್ಷಿಸಿ ಮಂತ್ರೋಪದೇಶಮಾಡಬೇಕೆರಿದು ಯೋಚಿಸಿ ಆ ಗುರುಶುಕ್ರರನ್ನು ಕುರಿತು—ಬ್ರಾಹ್ಮಣಶ್ರೇಷ್ಠರೇ, ನಾನು ನಿಮಗೆ ಮಂತ್ರವನ್ನು ಉಪದೇಶಿಸುವೆನು; ಆದರೆ ಅದರ ಸಿದ್ಧಿಗಾಗಿ ನೀವು ಹೋಮಕುಂಡದಲ್ಲಿ ತಲೆಕೆಳಗೆಮಾಡಿ ದಿವ್ಯ ಸಹಸ್ರವರ್ಷ ಅದರ ಪುರಶ್ಚರಣಮಾಡಬೇಕು ಎಂದು ಹೇಳಿದನು; ಆದರೆ ಗುರುವಿಗೆ ಧೈರ್ಯಸಾಲದೆ ತನ್ನಿಂದ ಹಾಗೆ ಪುರಶ್ಚರಣಮಾಡುವದಾಗದೆಂದು ಹೇಳಿ ಶಿವಚರಣಕ್ಕೆರಗಿ ಹೋಗಲು, ಶುಕ್ರಾಚಾರ್ಯನು, ನಾನು ಹಾಗೆ ಪುರಶ್ಚರಣಮಾಡುವೆನೆಂದು ಹೇಳಿದನು. ಆಗ ಭಗವಾನ್ ಸದಾಶಿವನು ಶುಕ್ರನ ಧೈರ್ಯಕ್ಕೆ ಮೆಚ್ಚಿ ಸಂಜೀವನೀ ಮಂತ್ರವನ್ನು ಆತನಿಗೆ ಉಪದೇಶಿಸಿದನು. ಬಳಿಕ ಶುಕ್ರಾಚಾರ್ಯನು ದೈತ್ಯರಬಳಿಗೆ ಬಂದು—ನಾನು ಮಂತ್ರವನ್ನು ಸಂಪಾದಿಸಿಕೊಂಡು ಬಂದಿರುವೆನು; ಇನ್ನು ಅದರ ಪುರಶ್ಚರಣವನ್ನು ದಿವ್ಯ ಸಹಸ್ರವರ್ಷ ಮಾಡಿ ಸಿದ್ಧಿಯನ್ನು ಪಡೆಯಬೇಕಾಗಿದೆ. ಅಲ್ಲಿಯವರೆಗೆ ನೀವು ಭಸ್ಮ-ರುದ್ರಾಕ್ಷಗಳನ್ನು ಧರಿಸಿ ಗಿರಿಗಂಹರಗಳಲ್ಲಿ ಕುಳಿತು ಶಿವಧ್ಯಾನಮಾಡಿರಿ. ಈ ಸ್ಥಿತಿಯಲ್ಲಿಯೂ ನಿಮಗೆ ದೇವತೆಗಳಿಂದ ಬಾಧೆಯಾದರೆ ನನ್ನ ತಂದೆಯಾದ ಭೃಗುವಿಗೆ ಶರಣುಹೋಗಿರಿ, ಎಂದು ಹೇಳಿ ಮಂತ್ರಪುರಶ್ಚರಣಕ್ಕಾಗಿ ಹೊರಟುಹೋದನು. ಇತ್ತ ದೇವತೆಗಳು ಶುಕ್ರನಿಗೆ ಸಂಜೀವನಿಯು ಪ್ರಾಪ್ತವಾದದ್ದನ್ನು ಕೇಳಿ ಬೆದರಿ, ಆ ಮಂತ್ರಸಿದ್ಧಿಯಾಗುವದರೊಳಗಾಗಿ ಯಾವತ್ತು ದೈತ್ಯರನ್ನು ಸಂಹರಿಸಿಬಿಡಬೇಕೆಂದು ತಿಳಿದು ತಮ್ಮ ಗುರುವಿನ ಅಪ್ಪಣೆಯಂತೆ ಶಿವಧ್ಯಾನಾಸಕ್ತರಾಗಿದ್ದ ದೈತ್ಯರನ್ನು ಸಿಕ್ಕಲ್ಲಿ ಕೊಲ್ಲಹತ್ತಿದರು. ಆಗ ದೈತ್ಯರು ಭೃಗುಋಷಿಗಳ ಆಶ್ರಮಕ್ಕೆ ಓಡಿಬರಲು, ಆ ಋಷಿಗಳು ಧ್ಯಾನಸ್ಥರಾಗಿ ಕುಳಿತಿದ್ದರು.

ಆಗ ಭೃಗುಪತ್ನಿಯು ದೈತ್ಯರಿಗೆ ಅಭಯವಿತ್ತು ತನ್ನ ಮಂತ್ರಸಾಮರ್ಥ್ಯದಿಂದ ಇಂದ್ರಾದಿ ದೇವತೆಗಳ ಕೈಕಾಲುಗಳು ಅಲ್ಲಾಡದಂತೆ ಮಾಡಿದಳು! ಆಗ ದೇವೇಂದ್ರನು ವಿಷ್ಣುವನ್ನು ಕುರಿತು—ಈಕೆಯನ್ನು ನಿನ್ನ ಚಕ್ರದಿಂದ ಸಂಹರಿಸಬೇಕೆಂದು ಪ್ರಾರ್ಥಿಸಲು, ಕೂಡಲೆ ವಿಷ್ಣುಚಕ್ರವು ಆಭೃಗುಪತ್ನಿಯು ಶಿರಸ್ಸನ್ನು ಛೇದಿಸಿತು. ಆಗ ದೈತ್ಯರು ಕ್ರೋಧಸಂತಪ್ತರಾಗಿ ದೇವತೆಗಳನ್ನು ಹಣಿಯುವದಕ್ಕಾಗಿ ಗರ್ಜಿಸಲು, ಆ ಗದ್ದಲಕ್ಕೆ ಭೃಗುಋಷಿಯು ಸಮಾಧಿ ಭಂಗವಾಗಿ, ಆತನು ತನ್ನ ಹೆಂಡತಿಯುನ್ನು ಸಂಹರಿಸಿದ್ದಕ್ಕಾಗಿ ಸಿಟ್ಟಿನಿಂದ ವಿಷ್ಣುವನ್ನು ಕುರಿತು—ಎಲೈ ಸ್ಥಿತಿಕರ್ತನೇ, ಅಜ್ಞಾನಿಯಂತೆ ಧರ್ಮವರಿಯದೆ ಈಗ ಸ್ತ್ರೀಹತ್ಯಮಾಡಿರುವದರಿಂದ ನೀನೂ ಅಜ್ಞಾನಾವೃತನಾಗಿ ಮತ್ಸ್ಯಾದಿ ಹತ್ತುಜನ್ಮಗಳನ್ನು ಹೊಂದು, ಎಂದು ಶಾಪಕೊಟ್ಟನು- ಆಗ ವಿಷ್ಣುವು ತನಗಾದ ಶಾಪಕ್ಕಾಗಿ ಭಗವಾನ್ ಶಂಕರನನ್ನು ಪ್ರಾರ್ಥಿಸಲು, ಆತನು—ವಿಷ್ಣುವೇ, ನಿನ್ನ ದಶಾವತಾರಗಳು ಜಗತ್ಕಲ್ಯಾಣ ಕಾರಕವಾಗುವಂತೆ ಮಾಡುವೆನು; ಮತ್ತು ಋಷಿಶಾಪದಿಂದ ನೀನು ಅಜ್ಞಾನಾವೃತನಾಗಲು, ನಾನೇ ನಿನ್ನ ಅವತಾರಗಳ ಸಮಾಪ್ತಿಯನ್ನು ಮಾಡಿ, ಅವುಗಳ ಕುರುಹನ್ನು ಧರಿಸಿ ಆ ದೇಹಗಳ ಸಾಫಲ್ಯವನ್ನು ಮಾಡುವೆನು, ಎಂದು ಹೇಳಿದನು. ಆದ್ದರಿಂದ ವಿವೇಕಶೀಲನೇ, ಸೃಷ್ಟಿಯಧರ್ಮಕ್ಕನುಸರಿಸಿ ಲೀಲಾ ನಾಟಕಿಯಾದ ಸದಾಶಿವನು ಭೃಗುಋಷಿಯ ರೂಪದಿಂದ ತಾನೇ ಶಾಪಕೊಡುವವನೂ, ವಿಷ್ಣುರೂಪದಿಂದ ತಾನೇ ಶಾಪಹೊಂದುವವನೂ ಆದನು; ಯಾಕಂದರೆ ಈ ಜಗತ್ತಿನಲ್ಲಿ ಸದಾಶಿವನಿಂದ ಹೊರತಾದದ್ದೇನೂ ಇಲ್ಲದಿರಲು, ಲೀಲೆಗಾಗಿ ಆತನೇ ಬೇರೆಬೇರೆ ರೂಪಗಳನ್ನು ಧರಿಸದಿದ್ದರೆ ಬೇರೆ ಯಾರು ಧರಿಸಬೇಕು? ಆದ್ದರಿಂದ ವಿವೇಕಶೀಲಾ, ನಿಮ್ಮ ಕಲ್ಯಾಣಕ್ಕಾಗಿ, ಭಗವಾನ್ ಸದಾಶಿವರೂಪವಾದ ಭಗವಾನ್ ವಿಷ್ಣುವಿನ ವರಾಹ–ನೃಸಿಂಹ–ತ್ರಿವಿಕ್ರಮಾವತಾರಗಳ ಸಾದ್ಯಂತವರ್ಣನವನ್ನು ಭಾಗವತ–ಲಿಂಗಪುರಾಣಗಳಲ್ಲಿ ವರ್ಣಿಸಿದಂತೆ ವಿಸ್ತಾರವಾಗಿ ವರ್ಣಿಸುವೆನು ಕೇಳು. ಅದರಿಂದ ಪ್ರಹ್ರಾದ–ಬಲಿಗಳಂಥ ಮಹಾಭಗವದ್ಭಕ್ತ ಶಿಖಾಮಣಿಗಳ ಸದಾಚರಣೆಯು ಅವರ ಶತ್ರುಗಳಾದ ದೇವತೆಗಳೂ ಹ್ಯಾಗೆ ಅನುಕರಿಸತಕ್ಕಂತಹದಿರುವದೆಂಬದನ್ನು ನೀವು ಮನಗಾಣಬಹುದು; ಆದ್ದರಿಂದ ನೀವು ಮಾತ್ಸರ್ಯರಹಿತರಾಗಿ, ಸರ್ವವೂ ಸದಾಶಿವಮಯವೆಂಬ ಸದ್ಭಾವದಿಂದ ಶ್ರೀ ಸದಾಶಿವಕಥಾಶ್ರವಣ ಮಾಡಿರಿ.

ವಿವೇಕಶೀಲನೇ, ಶಿವಪ್ರಸಾದಹೊಂದಿ ಬ್ರಹ್ಮದೇವನು ತನ್ನ ಮನಸ್ಸಿನಿಂದಲೂ, ದೇಹದಿಂದಲೂ ಎಷ್ಟು ಸೃಷ್ಟಿಯನ್ನು ಮಾಡಿದರೂ ಪ್ರಜಾವೃದ್ಧಿಯಾಗದೆಯಿದ್ದದ್ದನ್ನು ನೋಡಿ ಆತನು ಚಿಂತೆಗೊಳಗಾದನು. ಹೀಗಿರುವಾಗ ಅಕಸ್ಮಾತ್ತಾಗಿ ಬ್ರಹ್ಮದೇವನ ದೇಹವು ಇಬ್ಭಾಗವಾಗಿ ಅದರೊಳಗಿಂದ ಒಂದು ಮಿಥುನವು (ಜೋಡು) ಉತ್ಪನ್ನವಾಯಿತು. ಅದರಲ್ಲಿ ಪುರುಷನು ಸ್ವಾಯಂಭುವ ಮನುವು, ಸ್ತ್ರೀಯು ಆತನ ಪಟ್ಟರಾಣಿಯಾದ ಶತರೂಪೆಯು. ಇವರಿಂದಲೇ ಮೈಥುನಜನ್ಯ ಸೃಷ್ಟಿಯು ಆರಂಭವಾಗಿ ಪ್ರಜಾವೃದ್ಧಿಯಾಗಹತ್ತಿತು. ಅವರಿಗೆ ಪ್ರಿಯವ್ರತ–ಉತ್ತಾನಪಾದರೆಂಬ ಇಬ್ಬರು ಗಂಡುಮಕ್ಕಳೂ, ಆಕೂತಿ, ದೇವಹೂತಿ, ಪ್ರಸೂತಿ ಎಂಬ ಮೂವರು ಹೆಣ್ಣುಮಕ್ಕಳೂ

ಆದರು. ಆ ಮನುವು ಅಕೂತಿಯನ್ನು ಋಚಿಋಷಿಗೆ, ದೇವಹೂತಿಯನ್ನು ಕರ್ದಮನಿಗೆ, ಪ್ರಸೂತಿಯನ್ನು ದಕ್ಷನಿಗೆ ಕೊಟ್ಟನು. ಈ ಮೂವರ ಸಂತತಿಯಿಂದ ಈ ಜಗತ್ತು ತುಂಬಿರುವದು. ಇರಲಿ. ಮನುವಿನ ಜನ್ಮವಾದಬಳಿಕ ಆತನು ಬ್ರಹ್ಮದೇವನನ್ನು ಕುರಿತು— ಭಗವನ್, ನಿಮ್ಮನ್ನು ನಮಸ್ಕರಿಸುವೆನು. ನೀವು ಯಾವತ್ತು ಭೂತಗಳ ಜನ್ಮದಾತೃಗಳೂ, ಅನ್ನದಾತೃಗಳೂ ಆಗಿರುವಿರಿ; ಆದ್ದರಿಂದ ನಾನು ಏನುಮಾಡಿದರೆ ನಿಮ್ಮ ಆರಾಧನೆಮಾಡಿದಂತಾಗಿ ಇಹಲೋಕದಲ್ಲಿ ಕೀರ್ತಿಯೂ, ಪರಲೋಕದಲ್ಲಿ ಸದ್ಗತಿಯೂ ಪ್ರಾಪ್ತವಾಗುವವು, ಎಂದು ಕೇಳಲು, ಬಹ್ಮದೇವನು—ಅಪ್ಪಾ ಮನೂ, ನಿನ್ನ ನಿಷ್ಕಪಟವಾದ ಶ್ರದ್ಧೆಯನ್ನು ನೋಡಿ ನಾನು ಸಂತುಷ್ಟನಾದೆನು, ನಿಮ್ಮ ಇಬ್ಬರ ಕಲ್ಯಾಣವಾಗಲಿ; ನಿನ್ನ ಪ್ರಿಯಭಾರ್ಯೆಯಲ್ಲಿ ನಿನಗೆ ಅನುರೂಪವಾದ ಸಂತತಿಯಾಗಲಿ. ಮನೂ, ಮಗನು ತಂದೆಯ ಆಜ್ಞೆಯನ್ನು ಶಿರಸಾವಹಿಸಿ ಪಾಲಿಸುವದೇ ಪಿತೃಸೇವೆಯು, ಇದರಿಂದ ಎಲ್ಲ ಅರ್ಥಗಳು ಸಾಧಿಸುವವು. ನೀನು ಪೃಥ್ವಿಯನ್ನು ಧರ್ಮದಿಂದ ಪಾಲಿಸಿ ಯಜ್ಞಗಳ ಯೋಗದಿಂದ ಯಜ್ಞಪುರುಷನ ಆರಾಧನವಾಡು; ಅಂಥರೆ ನನ್ನ ಅತ್ಯುತ್ತಮ ಸೇವೆ ಮಾಡಿದಂತಾಗಿ ಪರಮಾತ್ಮನೂ ಸಂತುಷ್ಟನಾಗುವನು, ಎಂದು ಹೇಳಿದನು. ಅದನ್ನು ಕೇಳಿ ಮನುವು—ಪ್ರಭೋ, ನಿಮ್ಮ ಆಜ್ಞೆಯು ನನಗೆ ಶಿರಸಾವಂದ್ಯವಾಗಿರುವದು; ಆದರೆ ಯಾವತ್ತು ಪ್ರಜೆಗಳಿಗೂ, ನನಗೂ ಇರಲಿಕ್ಕೆ ಒಂದು ಸ್ಥಳವನ್ನು ತೋರಿಸಿಕೊಡಿರಿ; ಯಾಕಂದರೆ, ಆಶ್ರಯಸ್ಥಾನವಾದ ಪೃಥ್ವಿಯು ರಸಾತಳಕ್ಕೆ ಹೋಗಿರುವದು; ಅದನ್ನು ಮೇಲಕ್ಕೆ ತೆಗೆಯುವ ವಿಚಾರವನ್ನು ಮೊದಲು ಮಾಡಬೇಕು.

ಮನುವಿನ ಈ ಮಾತು ಬ್ರಹ್ಮದೇವನ ಮನಸ್ಸಿಗೆ ಬಂದಿತು. ಆತನು ಮನಸ್ಸಿನಲ್ಲಿ—ನಾನು ಇತ್ತ ಸೃಷ್ಟಿಯನ್ನು ಮಾಡುವ ಕೆಲಸದಲ್ಲಿ ತೊಡಗಿರಲು, ಅತ್ತ ಉದಕದ ಅಭಿವೃದ್ಧಿಯಾಗಿ ಅದರಲ್ಲಿ ಪೃಥ್ವಿಯು ಮುಣುಗಿಹೋಯಿತು. ಇನ್ನು ನಾನು ಏನು ಮಾಡಲಿ? ನನ್ನನ್ನು ಉತ್ಪನ್ನಮಾಡಿದ ಈಶ್ವರನೇ ಇದಕ್ಕೆ ಏನಾದರೂ ಉಪಾಯ ಮಾಡಬೇಕು, ಎಂದು ಯೋಚಿಸುತ್ತಿರುವಾಗ, ಆತನ ಮೂಗಿನೊಳಗಿನಿಂದ ಒಂದು ಅಂಗುಷ್ಠದಷ್ಟು ಹಂದಿಯ ಮರಿಯು ಹೊರಬಿದ್ದಿತು. ಅದನ್ನು ನೋಡಿ ಬ್ರಹ್ಮದೇವನು ಇದೇನೆಂದು ಆಶ್ಚರ್ಯಪಡುತ್ತಿರಲು, ಆ ವರಾಹವು ನೋಡ ನೋಡುತ್ತ ಪರ್ವತಪ್ರಾಯವಾಗಿ ಬೆಳೆದು ಭಯಂಕರ ಗರ್ಜನೆಮಾಡಿತು. ಆಗ ಹಲವು ತರ್ಕವಿತರ್ಕಗಳನ್ನು ಮಾಡುತ್ತಿದ್ದ ಬ್ರಹ್ಮದೇವನೂ, ಮರೀಚ್ಯಾದಿ ಪ್ರಜಾಪತಿಗಳೂ ಈತನು ಸರ್ವವ್ಯಾಪಿಯಾದ ಈಶ್ವರನೇ ಎಂದು ನಿಶ್ಚಯಿಸಿದರು. ಆಗ ಅವರಿಗೆ ಪರಮಾನಂದವಾಯಿತು. ಆ ಮೇಲೆ ಜನಲೋಕ, ತಪೋಲೋಕ, ಸತ್ಯಲೋಕದೊಳಗಿನ ಜನರು ವೇದವಾಣಿಯಿಂದ ಆ ವರಾಹರೂಪಿ ಭಗವಂತನ ಸ್ತೋತ್ರಮಾಡಿದರು. ಅದರಿಂದ ಭಗವಂತನು ಸಂತುಷ್ಟನಾಗಿ ಅವರೆಲ್ಲರನ್ನು ಆನಂದಪಡಿಸುವದಕ್ಕಾಗಿ ಮತ್ತೊಮ್ಮೆ ಗರ್ಜಿಸಿ ಪೃಥ್ವಿಯನ್ನು ತಕ್ಕೊಂಡು ಬರಲಿಕ್ಕೆ, ಜಲವನ್ನು ಬಗಿದು ರಸಾತಲವನ್ನು ಹೊಕ್ಕನು. ಆತನ ರಭಸದಿಂದ ಸಮುದ್ರದಲ್ಲಿ ಭಯಂಕರವಾದ ತೆರೆಗಳು ಉತ್ಪನ್ನವಾಗಿ, ಅದು ಅಲ್ಲೋಲ

ಕಲ್ಲೋಲವಾಯಿತು. ಈ ಆಶ್ಚರ್ಯವನ್ನು ನೋಡಿ ಎಲ್ಲರೂ ದಂಗು ಬಡಿದು ನಿಂತಿರಲು, ಕ್ಷಣಮಾತ್ರದಲ್ಲಿ ಭಗವಂತನು ಭೂಮಿಯನ್ನು ಚಂಡಿನಂತೆ ತನ್ನ ಶುಭ್ರವಾದ ಕೋರೆಗಳ ಮೇಲೆ ಇಟ್ಟುಕೊಂಡು ಮೇಲಕ್ಕೆ ಬಂದನು. ಆಗ ಹಿರಣ್ಯಾಕ್ಷನೆಂಬ ಒಬ್ಬ ಭಯಂಕರ ದೈತ್ಯನು ಗದಾಧಾರಿಯಾಗಿ ಆತನ ಬೆನ್ನು ಹತ್ತಿದನು. ಆಗ ಭಗವಂತನು ತನ್ನ ಶಕ್ತಿಯ ಆಶ್ರಯದಿಂದ ಪೃಥ್ವಿಯನ್ನು ಯೋಗ್ಯಸ್ಥಾನದಲ್ಲಿ ಇಟ್ಟು ಆ ಕ್ರೂರದೈತ್ಯನನ್ನು ತನ್ನ ಚಕ್ರದಿಂದ ಸಂಹರಿಸಿದನು. ಭಗವಂತನ ಈ ಅದ್ಭುತಕಾರ್ಯವನ್ನು ನೋಡಿ ಬ್ರಹ್ಮದೇವನೇ ಮೊದಲಾದವರಿಗೆ ಆನಂದವಾಗಿ, ಅವರು ಹಲವು ವಿಧದಿಂದ ಆತನ ಸ್ತೋತ್ರ ಮಾಡಿದರು. ಅಷ್ಟರಲ್ಲಿ ಭಗವಂತನು ತನ್ನ ಅವತಾರಕೃತ್ಯವನ್ನು ಮುಗಿಸಿ ನಿಜಧಾಮವನ್ನು ಕುರಿತು ತೆರಳಿದನು.

ಸಿದ್ಧಮುನೀಶ್ವರ—ವಿವೇಕಶೀಲಾ, ಮೈತ್ರೇಯಋಷಿಗಳು ಹೇಳಿದ ವರಾಹಾವತಾರದ ವರ್ಣನದಲ್ಲಿ ಹಿರಣ್ಯಾಕ್ಷದೈತ್ಯನ ಹೆಸರು ಹೊರಟಿತಷ್ಟೆ? ಆ ದೈತ್ಯನು ಯಾರು? ಅವನೊಡನೆ ಭಗವಂತನು ಯುದ್ಧಮಾಡಲು ಕಾರಣವೇನು ? ಎಂದು ವಿದುರನು ಪ್ರಶ್ನೆ ಮಾಡಲು, ಮೈತ್ರೇಯಋಷಿಗಳು ಹೇಳಿದ್ದನ್ನೇ ನಿನಗೆ ನಾನು ಹೇಳುವೆನು ಕೇಳು. ಮೈತ್ರೇಯ ಋಷಿಗಳು ವಿದುರನನ್ನು ಕುರಿತು--ವಿದುರಾ, ಪೂರ್ವದಲ್ಲಿ ದಕ್ಷಪ್ರಜಾಪತಿಯು ದಿತಿಯೇ ಮೊದಲಾದ ತನ್ನ ಹದಿಮೂರುಜನ ಹೆಣ್ಣುಮಕ್ಕಳನ್ನು ಮರೀಚಿಯ ಮಗನಾದ ಕಶ್ಯಪನಿಗೆ ಕೊಟ್ಟಿದ್ದನು. ಒಂದುದಿನ ದಿತಿಯು ತನ್ನ ಸವತಿಯ ಮಕ್ಕಳನ್ನು ನೋಡಿ ತನಗೂ ಮಕ್ಕಳಾಗಬೇಕೆಂದು ಬಯಸಿ ಕಾಮಪೀಡಿತಳಾಗಿ, ಹೋಮಶಾಲೆಯಲ್ಲಿ ಹಾಲಿನ ಹೋಮ ಮಾಡುತ್ತ ಕುಳಿತಿರುವ ತನ್ನ ಪತಿಯಾದ ಕಶ್ಯಪಋಷಿಯ ಬಳಿಗೆ ಹೋದಳು. ಆಗ ಆಕೆಯು ತನ್ನ ಪತಿಯನ್ನು ಕುರಿತು--"ಮಹಾರಾಜ, ನನಗೆ ಸಂತತಿಯ ಇಚ್ಛೆಯಾಗಿರುವದರಿಂದ ಅನುಗ್ರಹಿಸಿ ಅದನ್ನು ಪೂರ್ಣಮಾಡಬೇಕು. ನನ್ನ ಸವತಿಯರ ಮಕ್ಕಳನ್ನು ನೋಡಿ ನನಗೆ ಸಂತಾಪವಾಗುತ್ತದೆ. ನನ್ನ ತಂದೆಯಾದ ದಕ್ಷಪ್ರಜಾಪತಿಯ ಮುಖ್ಯ ಉದ್ದೇಶವು ಪ್ರಜಾವೃದ್ಧಿ ಮಾಡುವದೇ ಆಗಿರುತ್ತದೆ. ಅದಕ್ಕಾಗಿ ಆತನು ತನ್ನ ಹದಿಮೂರುಜನ ಹೆಣ್ಣುಮಕ್ಕಳನ್ನು ನಮ್ಮ ಒಪ್ಪಿಗೆಯಿಂದ ನಿಮಗೆ ಕೊಟ್ಟಿರುವನು. ನೀವು ನಮ್ಮೆಲ್ಲರನ್ನು ಸಮನಾಗಿ ಪ್ರೀತಿಸುತ್ತಿದ್ದು, ಕೆಲವರಿಗೆ ಸಂತತಿಯನ್ನು ಅನುಗ್ರಹಿಸಿ ಕೆಲವರಿಗೆ ಅನುಗ್ರಹಿಸದೆ ಇರುವದು ವಿಷಮಭಾವವಲ್ಲವೆ? ಪ್ರಿಯಾ, ತಮ್ಮ ದರ್ಶನದಿಂದ ನಾನು ಅತ್ಯಂತ ಕಾಮಪೀಡಿತಳಾಗಿದ್ದೇನೆ; ತಾವು ನನ್ನ ಇಚ್ಛೆಯನ್ನು ತೃಪ್ತಮಾಡಬೇಕು.

ವಿದುರಾ, ಮದನವ್ಯಥೆಯಿಂದ ದಿತಿಯು ಮೈಮೇಲಿನ ಎಚ್ಚರವು ತಪ್ಪಿತ್ತು; ಆದ್ದರಿಂದ ಪ್ರದೋಷಕಾಲವಾದರೂ ಗತಿಸಿ ಹೋಗಲೆಂದು ಕಶ್ಯಪರು ಆಕೆಯೊಡನೆ ಗೌರವದ ಭಾಷಣಮಾಡಲಾರಂಭಿಸಿದರು. ಅವರು ತಮ್ಮ ಹೆಂಡತಿಯಾದ ದಿತಿಯನ್ನು ಕುರಿತು—ಭೀರು, ನೀನು ಇಷ್ಟೇಕೆ ಸಂಶಯಗ್ರಸ್ತಳಾಗುವೆ? ನಿನ್ನ ಯಾವತ್ತು ಇಚ್ಛೆಗಳನ್ನು ಪೂರ್ಣಮಾಡಲಿಕ್ಕೆ ನಾನು ಸಿದ್ಧನಿರುತ್ತೇನೆ. ಪತ್ನಿಯಿಂದಲೇ ಪುರುಷನಿಗೆ ಧರ್ಮಾರ್ಥಕಾಮಗಳೆಂಬ ಮೂರು ಪುರುಷಾರ್ಥಗಳು ಸಾಧಿಸುವದರಿಂದ, ನಿನ್ನ ಇಚ್ಛೆಯನ್ನು ನಾನು ಹೇಗೆ ಪೂರ್ಣ

ಮಾಡಲಿಕ್ಕಿಲ್ಲ? ಗೃಹಸ್ಥಾಶ್ರಮಿಯು ಪತ್ನಿಯ ಸಹಾಯದಿಂದಲೇ ದುಃಖರೂಪ ಸಂಸಾರ ವನ್ನು ತಾನು ದಾಟುವನಲ್ಲದೆ, ಅನ್ಯರು ದಾಟಲಿಕ್ಕೂ ಸಹಾಯುಮಾಡುವನು. ನಿಮ್ಮಿಂದ ನಮಗೆ ಸಂಸಾರದ ಭಾರವು ಕಡಿಮೆಯಾಗುವದು, ಇಂದ್ರಿಯಗಳನ್ನು ಜಯಿಸಲಿಕ್ಕೆ ಸಹಾಯುವಾಗುವದು. ಪತ್ನಿಯರಾದ ನಿಮ್ಮ ಈ ಉಪಕಾರ ತೀರಿಸುವದು ಪತಿಗಳಿಗೆ ಅಶಕ್ಯವಾಗಿರುವದು; ಆದ್ದರಿಂದ ದಿತಿ, ನಿನ್ನ ಮನೋದಯ್ಯವನ್ನು ನಾನು ಪೂರ್ಣಮಾಡುವೆನು; ಆದರೆ ಲೋಕನಿಂದೆಯ ಭಯುಕ್ಕಾಗಿ ಒಂದು ಗಳಿಗೆ ನಿಲ್ಲು; ಯಾಕಂದರೆ, ಇದು ರಾಕ್ಷಸ ಕಾಲವಾದದ್ದರಿಂದ ಶ್ರೀ ಶಂಕರನು ತನ್ನ ಅನುಚರರಿಂದ ಸಹಿತನಾಗಿ ನಂದಿಯ ಮೇಲೆ ಕುಳಿತು ಅತ್ತಿತ್ತ ಸಂಚರಿಸುತ್ತಿರುವನು. ಆತನ ದೃಷ್ಟಿಯು ಬಹು ತೀಕ್ಷ್ಣವಾದದ್ದು. ಆತನಿಗೆ ಎಲ್ಲವೂ ಕಾಣುವದು. ಸೂರ್ಯ, ಚಂದ್ರ, ಅಗ್ನಿ ಇವು ಆತನ ನೇತ್ರುಗಳು. ಆತನ ವೃತ್ತಿಯು ಬಹು ಭಯುಂಕರವಾದದ್ದು. ಶ್ಮಶಾನವಾಸಿಯಾದ ಪಿಂಗಟವರ್ಣದ ಜಡೆಯ ಆ ಭಗವಂತನ ಸುವರ್ಣತುಲ್ಯದೇಹದ ಕಾಂತಿಯು, ಭಸ್ಮಲೇಪನದಿಂದ ಲುಪ್ತಪ್ರಾಯುವಾಗಿ ಕಾಣುತ್ತದೆ. ಆತನ ಭಯದಿಂದ ನೀನು ಮನೋನಿಗ್ರಹ ಮಾಡುವದು ಉಚಿತವು. ಆತನು ನಿನ್ನ ಆಪ್ತನಾದದ್ದರಿಂದ ನಿನ್ನ ತಪ್ಪು ಕ್ಷಮಿಸುವನೆಂದು ತಿಳಿಯಬೇಡ; ಯಾಕಂದರೆ ಆತನಿಗೆ ಸ್ವ–ಪರಭೇದವೇ ಗೊತ್ತಿಲ್ಲವು. ಆ ಶಂಕರನ ಪ್ರಭಾವವು ಅತರ್ಕ್ಯವಾದದ್ದು. ಆತನು ಉಪಭೋಗಿಸಿದ ನಿರ್ಮಾಲ್ಯದ, ಅಥವಾ ವಿಭೂತಿಯ ಪ್ರಾಪ್ತಿಗಾಗಿ ನಾವು ವ್ರತಾದಿ ಸಾಧನಗಳನ್ನು ಮಾಡಬೇಕಾಗುವದು. ಪ್ರಿಯೇ, ತನ್ನ ಮಾಯಾಪಟಲವನ್ನು ದೂರಮಾಡಿಕೊಳ್ಳಲಿಚ್ಛಿಸುವವರು, ಆ ಭಗವಂತನ ನಿರ್ದೋಷವಾದ ಯಶಸ್ಸಿನ ಗಾಯುನಮಾಡುವರು. ಆತನಿಗೆ ಸಮಾನವಾದವರು, ಅಥವಾ ಆತನಿಂದ ಶ್ರೇಷ್ಠರಾದವರು ಯಾರೂ ಇಲ್ಲ. ಸಾಧುಗಳ ಗತಿಸ್ವರೂಪನಾದ ಆ ಶಂಕರನು ಪಿಶಾಚವೃತ್ತಿಯನ್ನು ಅಂಗೀಕರಿಸಿರುವನು. ಅಶಾಶ್ವತ ದೇಹವನ್ನು ವಸ್ತ್ರಾಲಂಕಾರಗಳಿಂದ ಅಲಂಕರಿಸುವ ಮೂರ್ಖರೇ, ಶ್ರೀ ಶಂಕರನ ಈ ಸ್ಥಿತಿಯನ್ನು ನಿಂದಿಸುವರು. ಆ ಭಗವಂತನು ಹಾಕಿ ಕೊಟ್ಟಿರುವ ಧರ್ಮಮರ್ಯಾದೆಯನ್ನು ಬ್ರಹ್ಮಾದಿದೇವತೆಗಳು ಪಾಲಿಸುವರು- ಜಗತ್ತಿನ ಆಗು ಹೋಗುಗಳಿಗೆ ಆತನೇ ಕಾರಣನು; ಮಾಯೆಯುಕೂಡ ಆತನಿಗೆ ಅಂಕಿತವಾಗಿರುತ್ತದೆ. ಹೀಗಿದ್ದು, ಆ ಭಗವಾನ್ ಶಂಕರನು ಪಿಶಾಚವೃತ್ತಿಯನ್ನು ಅಂಗೀಕರಿಸುವನಲ್ಲ! ದೊಡ್ಡವರ ಚರಿತ್ರುವು ಅತರ್ಕ್ಯವಾದದ್ದೆಂಬದು ಸುಳ್ಳಲ್ಲ!

ಈ ಮೇರೆಗೆ ಕಶ್ಯಪಮುನಿಯು ಹಲವುಪ್ರಕಾರದಿಂದ ಹೆಂಡತಿಗೆ ಹೇಳಿದ್ದು ವ್ಯರ್ಥವಾಯಿತು. ಮದನವ್ಯಥೆಯಿಂದ ವಿಚಾರಶೂನ್ಯಳಾದ ಆ ಸ್ತ್ರೀಯು ನಿರ್ಲಜ್ಜೆಯಿಂದ ಆ ಬ್ರಹ್ಮಋಷಿಯ ಸೆರಗು ಹಿಡಿದಳು. ಆಗ ಆತನು ನಿರುಪಾಯನಾಗಿ ತನ್ನ ದೈವದ ಮೇಲೆ ಕೈ ಊರಿ ಆಕೆಯೊಡನೆ ಏಕಾಂತ ಬಳಿಸತೊಡಗಿದನು! ಆ ಮೇಲೆ ಆ ಋಷಿಯು ಸ್ನಾನಾನಂತರ, ಪ್ರಾಣಾಯಾಮಮಾಡಿ ಮೌನವ್ರತದಿಂದ ಸೂರ್ಯನನ್ನು ಧ್ಯಾನಿಸತೊಡಗಿದನು, ಇತ್ತ ದಿತಿಗೂ ತನ್ನ ಅವಿಚಾರಕ್ಕಾಗಿ ಪಶ್ಚಾತ್ತಾಪವಾಗಿ, ಲಜ್ಜೆಯಿಂದ ತಲೆಬಾಗಿಸಿ ಆಕೆಯು ತನ್ನ ಪತಿಯಬಳಿಗೆ ಬಂದು––ಮಹಾರಾಜ, ನಾನು ಶಂಕರನ

ದೊಡ್ಡ ಅಪರಾಧಮಾಡಿದ್ದೇನೆ. ಆತನು ನನ್ನ ಗರ್ಭದ ನಾಶಮಾಡಬಾರದೆಂದು ಪ್ರಾರ್ಥಿಸುವೆನು. ಆತನು ಸಕಾಮ-ನಿಷ್ಕಾಮ-ಭಕ್ತರಿಗೆ ಫಲಕೊಡುವವನಾಗಿದ್ದರೂ, ದುಷ್ಟರ ಶಾಸನ ಮಾಡಲಿಕ್ಕೆ ಆತನು ಹಿಂದೆಮುಂದೆ ನೋಡುವದಿಲ್ಲ ; ಪೃಥ್ವಿಯು ಸಂಹಾರಮಾಡಲಿಚ್ಛಿಸಿದಾಗ ಆತನು ತನ್ನದೊಂದು ದೃಷ್ಟಿಪಾತದಿಂದ ಅದನ್ನು ಸುಟ್ಟು ಬೂದಿಮಾಡುವನು. ಆತನ ಸಿಟ್ಟು ಇಷ್ಟು ಭಯಂಕರವಾದದ್ದಿದ್ದರೂ, ಆತನು ದಯಾಳುವೂ ಇರುವನು. ಅದರಲ್ಲಿ ಸ್ತ್ರೀಯರು ನಾವು ಯಾರ ದಯೆಗೆ ಪಾತ್ರರಾಗಲಿಕ್ಕಿಲ್ಲ? ವ್ಯಾಧರಂಥ ಕ್ರೂರಜನರೂ ನಮ್ಮ ಮೇಲೆ ದಯಮಾಡುವರು. ಇದಲ್ಲದೆ ಸ್ತ್ರೀಯರ ಸ್ವಭಾವವು ಎಷ್ಟು ಹಟಮಾರಿತನದ್ದೆಂಬದರ ಅನುಭವವು ಭಗವಾನ್ ಶಂಕರನಿಗೂ ಇರುವದು; ಯಾಕಂದರೆ ಆತನಿಗೂ ಹೆಂಡತಿಯಿದ್ದಾಳೆ; ಆದ್ದರಿಂದ ಪೂರ್ಣದಯಾಲುವಾದ ಆ ಸತಿಯ ಪತಿ ನನ್ನ ಭಾವಮೈದುನನು ನನ್ನನ್ನು ರಕ್ಷಿಸಲಿ. ಎಂದು ಪ್ರಾರ್ಥಿಸುವಾಗ ಆಕೆಯು ಭಯದಿಂದ ನಡುಗುತ್ತಿದ್ದಳು. ಹೆಂಡತಿಯ ಈ ಪಶ್ಚಾತ್ತಾಪದ ಸ್ಥಿತಿಯನ್ನು ನೋಡಿ ತಮ್ಮ ಸಾಯಂಕಾಲದ ವಿಹಿತಕರ್ಮಗಳು ಮುಗಿದಬಳಿಕ ಕಶ್ಯಪರು ಆಕೆಯನ್ನು ಕುರಿತು—ಎಲೈ, ಅಭದ್ರೆ-ತಾಮಸಸ್ತ್ರೀಯೇ, ನಾನು ಮೊದಲೇ ಹೇಳಿದೆನು; ಆದರೆ ನೀನು ಕೇಳಲಿಲ್ಲವು. ಈಗ ನಿನ್ನಿಂದ ನಾಲ್ಕು ಅಪರಾಧಗಳು ಘಟಿಸಿರುತ್ತವೆ —೧ ಗರ್ಭಧಾರಣಕಾಲದಲ್ಲಿ ನಿನ್ನ ಅಂತಃಕರಣವು ಶುದ್ಧವಾಗಿದ್ದಿಲ್ಲ. ೨ ಆ ಕಾಲವು ಅಮಂಗಲವಾದದ್ದಿತ್ತು. ೩ ನನ್ನ ಆಜ್ಞೆಯನ್ನು ಮೀರಿದೆ. ೪ ರುದ್ರನ ಅನುಚರರ ಅವಮಾನ ಮಾಡಿದೆ; ಆದ್ದರಿಂದ ನಿನಗಾಗುವ ಇಬ್ಬರು ಗಂಡುಮಕ್ಕಳು ಲೋಕಪಾಲಕರಿಂದ ಸಹಿತವಾಗಿ ತ್ರಿಲೋಕಗಳಿಗೆ ಉಪದ್ರವಕೊಡುವ ನೀಚರಾಗುವರು. ಅವರು ನಿರಪರಾಧಿಗಳನ್ನು ಹೊಡೆಯುವರು, ಸ್ತ್ರೀಯರನ್ನು ಪೀಡಿಸುವರು, ಸಾಧುಗಳಿಗೆ ಕ್ರೋಧವನ್ನುಂಟು ಮಾಡುವರು; ಆದ್ದರಿಂದ ಬುದ್ಧಿಯಲ್ಲಿ ವಾಸಮಾಡುವ ಭಗವಾನ್ ವಿಷ್ಣುವು ಅವತರಿಸಿ ಅವರನ್ನು ಶಾಸನಗೊಳಿಸುವನು, ಎಂದು ಹೇಳಲು, ದಿತಿಯು—“ಮಹಾರಾಜ, ನನ್ನ ಮಕ್ಕಳು ವಿಷ್ಣುವಿನಿಂದ ಹತರಾದರೆ ಆಗಲಿ; ಆದರೆ ಸಾಧುಗಳ ಕ್ರೋಧಕ್ಕೆ ಒಳಗಾಗಿ ಶಾಪದಿಂದ ದಗ್ಧರು ಮಾತ್ರ ಆಗಬೇಡ; ಯಾಕಂದರೆ, ಸಾಧುಗಳಿಂದ ಶಪಿಸಲ್ಪಟ್ಟ ನೀಚರು ನರಕಕ್ಕೆ ಹೋದರೂ, ಹಾಗು ಅವರು ಬೇರೆಕಡೆಯಲ್ಲಿ ಜನ್ಮ ತಾಳಿದರೂ ಎಲ್ಲಿಯೂ ಅವರ ವಿಷಯವಾಗಿ ಯಾರೂ ದಯೆ ತೋರಿಸುವದಿಲ್ಲ!

ಹೆಂಡತಿಯ ಈ ಮಾತುಗಳನ್ನು ಕೇಳಿ ಕಶ್ಯಪಋಷಿಗಳು—ಎಲೈ, ಸ್ತ್ರೀಯೇ, ನಿನಗೆ ಕೃತಕರ್ಮದ ಪಶ್ಚಾತ್ತಾಪವಾಯಿತು; ನೀನು ಯೋಗ್ಯಾಯೋಗ್ಯದ ವಿಚಾರ ಮಾಡಿದೆ; ಭಗವಾನ್ ವಿಷ್ಣುವಿನಲ್ಲಿ ಪೂಜ್ಯಬುದ್ಧಿಯನ್ನು ತಾಳಿದೆ; ಶ್ರೀ ಶಂಕರನ ಹಾಗು ನನ್ನ ವಿಷಯವಾಗಿ ನಿನ್ನಲ್ಲಿ ಆದರಬುದ್ಧಿಯು ಉಂಟಾಯಿತು; ಆದ್ದರಿಂದ ನಿನ್ನ ಮಗನಿಗೆ, ಸಾಧುಗಳಿಗೂ ಮಾನ್ಯನಾದ ಒಬ್ಬ ಮಗನು ಹುಟ್ಟುವನು. ಆತನ ಪವಿತ್ರ ಕೀರ್ತಿಯನ್ನು ಲೋಕವು ಭಗವಂತನಿಗೆ ಸಮಾನವಾಗಿಯೇ ಹೊಗಳೀತು. ಸಾಧಕಪುರುಷರು ಆ ನಿನ್ನ ಮೊಮ್ಮಗನ ಸ್ವಭಾವದಂಥ ಸ್ವಭಾವವುಳ್ಳವರಾಗಬೇಕೆಂದು ತಾವು

ನಿರ್ವೈರಭಾವದವರೂ, ಸಮಚಿತ್ತಭಾವದವರೂ ಆಗಲು ಯತ್ನಿಸುವರು. ನಿನ್ನ ಮೊಮ್ಮಗನಿಗೆ ಸರ್ವತ್ರದಲ್ಲಿ ಈಶ್ವರನು ಕಂಡಾನು. ಎಂದು ಹೇಳಲು, ತನಗೆ ಮಹಾಭಗವದ್ಭಕ್ತನಾದ ಮೊಮ್ಮಗನು ಹುಟ್ಟುವನೆಂಬದನ್ನು ಕೇಳಿ ದಿತಿಗೆ ಪರಮಾನಂದವಾಯಿತು.

ಹಿರಣ್ಯಾಕ್ಷನಉತ್ಪತ್ತಿಯು:—ತನ್ನ ಪುತ್ರರಿಂದ ದೇವಾದಿಕರಿಗೆ ತ್ರಾಸವಾದೀತೆಂಬಭಯದಿಂದ ದಿತಿಯು ಕಶ್ಯಪನ ಉಗ್ರವೀರ್ಯವನ್ನು ನೂರುವರ್ಷಗಳವರೆಗೆ ತನ್ನ ಉದರದಲ್ಲಿ ಧಾರಣಮಾಡಿದಳು; ಆದರೆ ಲೋಕಕ್ಕೆ ತೊಂದರೆಯಾಗುವದೇನು ತಪ್ಪಲಿಲ್ಲ. ಬ್ರಹ್ಮವೀರ್ಯವೇ ಅದು! ಅದರ ತೇಜವು ಸಾಮಾನ್ಯವಾದದ್ದಿರಬಹುದೆಯೇ? ದಿತಿಯ ಆ ಗರ್ಭದ ತೇಜದಿಂದ ಸೂರ್ಯ-ಚಂದ್ರರು ತೇಜೋಹೀನರಾಗಿ ಜಗತ್ತಿನಲ್ಲಿ ಕಗ್ಗತ್ತಲೆಯು ಮುಸುಕಿತು. ಅದರಿಂದ ಇಂದ್ರ, ಯಮ ಮೊದಲಾದ ಸರ್ವಲೋಕಪಾಲರ ಪರಾಕ್ರಮವು ನಡೆಯದಾಯಿತು. ಹೀಗೆ ಎಲ್ಲರ ಕಾರ್ಯಗಳು ನಿಂತುಹೋದದ್ದರಿಂದ ದೇವತೆಗಳೆಲ್ಲರೂ ಬ್ರಹ್ಮದೇವನ ಬಳಿಗೆಬಂದು, ಜಗತ್ತಿನಲ್ಲಿ ಅಂಧಃಕಾರ ಮುಸುಕಿದ ಕಾರಣವನ್ನು ಕೇಳಿಕೊಳ್ಳಲು, ಬ್ರಹ್ಮದೇವನು ಅವರನ್ನು ಕುರಿತು--ದೇವತೆಗಳಿರಾ, ಹೇಳುವೆನು ಕೇಳಿರಿ. ನಿಮಗಿಂತ ಮೊದಲೇ ನನ್ನ ಮನಸ್ಸಿನಿಂದ ಉತ್ಪನ್ನರಾಗಿದ್ದ ಸನಕ-ಸನಂದನ-ಸನಾತನ-ಸನತ್ಕುಮಾರರೆಂಬ ನಾಲ್ಕುಜನ ಮಕ್ಕಳು, ನಿರಿಚ್ಛರಾಗಿ ಆಕಾಶದಲ್ಲಿ ಸಂಚರಿಸುತ್ತ ಸರ್ವರಿಗೂ ಪೂಜ್ಯವಾದ ವೈಕುಂಠಲೋಕಕ್ಕೆ ಹೋದರು. ಅಲ್ಲಿರುವ "ನೈಶ್ರೇಯಸ"ವೆಂಬ ವಿಷ್ಣುಭಕ್ತರ ವಿಹಾರದ ಅತ್ಯಂತ ಮನೋಹರವಾದ ಉದ್ಯಾನವೂ, "ಲಕ್ಷ್ಮೀವನ"ವೆಂಬ ವಿಲಾಸಸ್ಥಾನವೂ ದರ್ಶನಯೋಗ್ಯವಾದವುಗಳಿದ್ದರೂ ಆ ನಿರಿಚ್ಛರಾದ ಸನಕಾದಿಕರು ಅವನ್ನು ಕಣ್ಣೆತ್ತಿ ನೋಡದೆ, ಶ್ರೀ ವಿಷ್ಣುವಿನ ನಿವಾಸಸ್ಥಾನವನ್ನು ಕುರಿತು ನೆಟ್ಟಗೆ ತೆರಳಿದರು. ಅಲ್ಲಿಯ ಆರು ಕಾವಲಿನ ಸ್ಥಾನಗಳನ್ನು ದಾಟಿ ಅವರು ಏಳನೆಯ ಸ್ಥಾನಕ್ಕೆ ಹೋಗಲು, ಅವರನ್ನು ಜಯವಿಜಯರೆಂಬ ಪಾರ್ಷದರು ತಮ್ಮ ಕೈಯೊಳಗಿನ ವೇತ್ರಯಷ್ಟಿಯಿಂದ ಪ್ರತಿಬಂಧಿಸಿದರು. ದೇವತೆಗಳಿರಾ, ಸನಕಾದಿಕರಿಗೆ ಪ್ರತಿಬಂಧವೆಂಬದು ಗೊತ್ತೇ ಇದ್ದಿಲ್ಲ; ಯಾಕಂದರೆ ಅವರು ಸರ್ವತ್ರ ಸಮಭಾವವುಳ್ಳವರಾದ್ದರಿಂದ ಯಾರಿಂದಲೂ ಪ್ರತಿಬಂಧವಿಲ್ಲದೆ ಅವರು ಬೇಕಾದಲ್ಲಿ ಸಂಚರಿಸುತ್ತಿದ್ದರು. ವಾಯುವಿನ ಉಡದಾರ-ವಾಯುವಿನವೇ ಲಂಗೋಟಿಯಿಂದ ಒಪ್ಪುವ ಆ ನಗ್ನರಾದ ಜ್ಞಾನವೃದ್ಧ-ವಯೋವೃದ್ಧ-ಬಾಲಕರನ್ನು ನೋಡಿ ಜಯವಿಜಯರಿಗೆ ನಗೆಬಂದಿತು. ಪ್ರತ್ಯಕ್ಷ ಮಹಾವಿಷ್ಣುವೂ ಎದುರುಗೊಳ್ಳಲು ಬರುವ ಯೋಗ್ಯತೆಯುಳ್ಳ ಆ ಋಷಿವರ್ಯರು ಆ ಪಾರ್ಷದರ ಔದ್ಧತ್ಯಕ್ಕಾಗಿ ಕೋಪಗೊಂಡರು. ಆಗ ಅವರು ಜಯವಿಜಯರನ್ನು ಕುರಿತು-ದ್ವಾರಪಾಲಕರೇ, ಈ ಲೋಕದಲ್ಲಿ ಈಶ್ವರದರ್ಶನಕ್ಕೆ ಪ್ರತಿಬಂಧವಿರುವಕಾರಣ ತೋರುವದಿಲ್ಲ; ಯಾಕಂದರೆ ಈಲೋಕಕ್ಕೆ ಬರುವವರೆಲ್ಲರೂ ವಿಷ್ಣುಭಕ್ತರೇ ಇರುವರು; ಅಂದಬಳಿಕ ಇಲ್ಲಿ—"ಇವರು ಬರಬೇಕು-ಇವರು ಬರಬಾರದು" ಎಂಬ ದ್ವೈತಭಾವವೇಕೆ? ಶ್ರೀವಿಷ್ಣುವಿನಲ್ಲಿ ದ್ವೈತಭಾವವು ಸರ್ವಥಾ ಇರುವದಿಲ್ಲ. ನೀವು ಕಪಟಿಗಳಿರುವದರಿಂದ ಮಂದಿಯಲ್ಲಿಯೂ ಕಪಟಾರೋಪಣ ಮಾಡುವದು ನಿಮ್ಮ

ಬುದ್ಧಿಯು ದೋಷವಾಗಿರುತ್ತದೆ. ದ್ವಾರಪಾಲಕರೇ, ಮಹಾಕಾಶದಲ್ಲಿಯೂ, ಘಟಾಕಾಶದಲ್ಲಿಯೂ ತತ್ವತಃ ಭೇದವಿಲ್ಲದಿರುವಂತೆ, ಮಹಾವಿಷ್ಣುವಿಗೂ, ಈ ವೈಕುಂಠದಲ್ಲಿ ವಾಸಮಾಡುವ ಮಹಾತ್ಮರಿಗೂ ಕಿಂಚಿತ್ತಾದರೂ ಭೇದವಿಲ್ಲ. ಹೀಗಿದ್ದು, ನೀವು ನಮ್ಮ ವಿಷಯವಾಗಿ ಶಂಕಿಸುತ್ತಿರುವದರಿಂದ, ನೀವು ವೇಷಧಾರಿಗಳಾದ ವಂಚಕರು ಕಾಣುತ್ತೀರಿ; ಇರಲಿ. ನೀವು ವಿಷ್ಣುಭಕ್ತರಿರುವದರಿಂದ ನಿಮ್ಮ ಅಪರಾಧಕ್ಕಾಗಿ ಯೋಗ್ಯ ಶಾಸನವಾಗುವದು ಯೋಗ್ಯವಾಗಿರುತ್ತದೆ; ಆದ್ದರಿಂದ ನೀವು ಈ ಲೋಕವನ್ನು ಬಿಟ್ಟು, ದ್ವೈತಭಾವವನ್ನು ವಹಿಸುವ ಪಾತಕಿಯಾದ ಮನುಷ್ಯನಿಗೆ ಕಾಮ-ಕ್ರೋಧ-ಲೋಭ ಎಂಬ ಶತ್ರುಗಳು ಉತ್ಪನ್ನವಾಗುವಂಥ ಮನುಷ್ಯ ಲೋಕಕ್ಕೆ ಹೋಗಿರಿ.

ದೇವತೆಗಳೇ, ಬ್ರಾಹ್ಮಣರ ಈ ಭಯಂಕರ ಶಾಪವು ಕಿವಿಗೆ ಬಿದ್ದಕೂಡಲೆ ದ್ವಾರಪಾಲಕರು ಭಯಭೀತರಾಗಿ ಆ ಋಷಿಮಂಡಲದ ಚರಣಕ್ಕೆ ಸಾಷ್ಟಾಂಗವೆರಗಿದರು. ಅವರು ಕೈಜೋಡಿಸಿ—"ಮುನಿವರ್ಯರೇ, ನೀವು ನಮಗೆ ಶಾಸನ ಮಾಡಿದ್ದು ಯೋಗ್ಯವೇ ಇರುವದು. ನೀವು ನುಡಿದಂತೆ ಆಗಲಿ; ಯಾಕಂದರೆ ಅಪರಾಧಕ್ಕೆ ತಕ್ಕ ಶಾಸನವಾಗುವದರಿಂದ ಪಾಪವು ತೊಳೆದು ಹೋಗುತ್ತದೆ; ಆದ್ದರಿಂದ ಶಾಪವಾದದ್ದರಲ್ಲಿ ನಮ್ಮ ಹಿತವೇ ಇರುವದು. ಆದರೆ ನಮ್ಮ ಅಪರಾಧಕ್ಕಾಗಿ ತಮ್ಮ ಕೃಪೆಯಿಂದಲೇ ಈಗ ನಮಗೆ ಅನುತಾಪವು ಉಂಟಾಗಿರುವದರಿಂದ, ಅಧೋಯೋನಿಯಲ್ಲಿ ಉತ್ಪನ್ನವಾಗಿ ನಮಗೆ ಮೋಹವು ಉತ್ಪನ್ನವಾದರೂ, ಆ ಲೋಕನಾಯಕನಾದ ಭಗವಂತನ ವಿಷಯದ ವಿಸ್ಮೃತಿಯು ಉಂಟಾಗದಂತೆ ನಮ್ಮನ್ನು ಅನುಗ್ರಹಿಸಿರಿ"ಎಂದು ಪ್ರಾರ್ಥಿಸುತ್ತಿರಲು, ಅತ್ತ ಭಗವಂತನಿಗೆ ತನ್ನ ದ್ವಾರಪಾಲಕರು ಮಾಡಿದ ಅಪರಾಧವು ಅಂತರ್ದೃಷ್ಟಿಯಿಂದ ಅರಿಕೆಯಾಗಿ, ಆತನು ದ್ವಾರಪಾಲಕರಿಗಿಂತಲೂ ಹೆಚ್ಚು ಅಂಜಿ, ಲಕ್ಷ್ಮಿಯೊಡನೆ ಕಾಲನಡಿಗೆಯಿಂದಲೇ ಆ ಮುನಿಗಳಿದ್ದಲ್ಲಿಗೆ ಬಂದನು. ತಾವು ಸಮಾಧಿಯೋಗದಲ್ಲಿ ಧ್ಯಾನ ಮಾಡುತ್ತಿದ್ದ ಪರಬ್ರಹ್ಮ ಮೂರ್ತಿಯು ಪ್ರತ್ಯಕ್ಷ ಎದುರಿಗೆ ಬಂದು ನಿಂತದ್ದರಿಂದ ಆ ಋಷಿಗಳಿಗೆ ಪರಮಾನಂದವಾಯಿತು. ಆ ಭಗವನ್ಮೂರ್ತಿಯನ್ನು ಒಂದೇ ಸವನೆ ನೋಡಿದರೂ ಅವರಿಗೆ ತೃಪ್ತಿಯಾಗಲೊಲ್ಲದು. ಪ್ರಭುವಿನ ಚರಣಕಮಲರಜಃಕಣಗಳಿಂದ, ಹಾಗು ತುಲಸೀದಲ ಮಕರಂದದಿಂದ ಕೂಡಿದ ನಸುಗಾಳಿಯು ನಾಸಾಗ್ರದ ದ್ವಾರದಿಂದ ಅವರ ಶರೀರದಲ್ಲಿ ಪ್ರವೇಶಿಸಲು, ಅವರ ವೃತ್ತಿಯು ಒಮ್ಮೆಲೆ ಪ್ರಕ್ಷುಬ್ಧವಾಗಿ ಭಕ್ತಿಸುಖದಲ್ಲಿ ಅವರು ಲೋಲುಪರಾಗತೊಡಗಿದರು. ಹರ್ಷಭರದಿಂದ ಅವರ ಶರೀರದಲ್ಲಿ ರೋಮಾಂಚಗಳು ಉತ್ಪನ್ನವಾದವು! ಭಗವಂತನ ಸುಂದರಾವಯವಗಳನ್ನು ನೋಡುವ ಅವಸರದಲ್ಲಿ ಅವರ ನೇತ್ರಗಳು, ಆತನ ಅವಯವಗಳಿಂದ ಅವಯವಗಳಿಗೆ ಎಡತಾಕಿ ದಣಿಯಲು, ಅವರು ಆ ಗೊಡವೆಬಿಟ್ಟು, ಕಣ್ಣು ಮುಚ್ಚಿ ಅಂತಃಕರಣದಲ್ಲಿ ಭಗವಂತನ ಧ್ಯಾನಮಾಡಿ, ಆತನ ಸ್ತೋತ್ರಮಾಡತೊಡಗಿದರು.—ಹೇ, ಅನಂತಾ, ನೀನು ಎಲ್ಲರ ಹೃದಯದಲ್ಲಿದ್ದೂ, ದುಷ್ಟರಿಗೂ, ಪಾಪಿಗಳಿಗೂ, ನಿನ್ನ ದರ್ಶನವಾಗುವದಿಲ್ಲ! ನೀನು ನಮ್ಮ ಅಂತಃಕರಣದಲ್ಲಿ ಯಾವಾಗಲೂ ಪ್ರಕಾಶಮಾನನಾಗಿರುವೆ; ಆದರೆ ನಿನ್ನ ಪ್ರತ್ಯಕ್ಷ ಮೂರ್ತಿಯ ದರ್ಶನವು ಇಂದೇ

ಆಯಿತು. ನನ್ನ ತಂದೆಯಾದ ಬ್ರಹ್ಮನು ಆತ್ಮಸ್ವರೂಪವನ್ನು ಹೇಳಿದಾಗಲೇ ಅದು ಬುದ್ಧಿಯಲ್ಲಿ ಪ್ರಕಟವಾಯಿತು. ವಿರಕ್ತಭಕ್ತರು ತಮ್ಮ ಅಂತಃಕರಣದಲ್ಲಿ ಗುರುತಿಸುವ ಆತ್ಮಸ್ವರೂಪವು ಇದೇ. ನೀನು ಶುದ್ಧಸತ್ವರೂಪವನ್ನು ಧರಿಸಿ, ಅದರ ವಿಷಯವಾಗಿ ನಿನ್ನ ಭಕ್ತರಲ್ಲಿ ಪ್ರೀತಿಯನ್ನು ಉತ್ಪನ್ನ ಮಾಡುವೆ. ಈಶ್ವರಾ, ನಿನಗೆ ಶರಣುಬಂದವರು ಕೇವಲ ಕಲ್ಯಾಣಮೂರ್ತಿಗಳು. ಅವರು ಯಾವಾಗಲೂ ನಿನ್ನ ಲೀಲೆಯ ಗಾಯನ ಮಾಡುತ್ತಿರುವರು. ಆ ಗಾಯನದ ಮುಂದೆ ಅವರಿಗೆ ಮೋಕ್ಷವೂ ತುಚ್ಛವಾಗಿ ತೋರುವಾಗ ಇತರ ಇಂದ್ರ–ಚಂದ್ರಾದಿಪದಗಳ ಪಾಡೇನು? ಆದ್ದರಿಂದ ನಿನ್ನಲ್ಲಿ ಭಕ್ತಿಯಿಡುವದರಲ್ಲಿ ಯಾವಾಗಲೂ ನಮ್ಮ ಪ್ರವೃತ್ತಿಯಿರಲಿ. ದೇವಾ, ಈ ವರೆಗೆ ನಮ್ಮಿಂದ ಸ್ವಲ್ಪವೂ ಪಾಪಘಟಿಸಿಲ್ಲ; ಆದರೆ ಇಂದು ನಿನ್ನ ಭಕ್ತರನ್ನು ಶಪಿಸಿದ ಮಹತ್ಪಾಪವು ಘಟಿಸಿತು. ಈ ಪಾಪದಿಂದ ನಮಗೆ ಅಧೋಗತಿಯು ಪ್ರಾಪ್ತವಾಗುವ ಸಂಭವವಿರುವದು; ಆದ್ದರಿಂದ ಈಗ ನಾವು ಪ್ರಾರ್ಥಿಸುವೇನಂದರೆ—ನರಕವಾಸದಲ್ಲಿಯೂ ನಮ್ಮ ಅಂತಃಕರಣವು ನಿನ್ನ ಪಾದದಲ್ಲಿ ತೊಡಗುವದಾದರೆ, ಹಾಗು ನಮ್ಮ ಕಿವಿಗಳು ನಿನ್ನ ಕಥಾಶ್ರವಣದಲ್ಲಿ ತಲ್ಲೀನವಾಗುವಹಾಗಿದ್ದರೆ ನಮಗೆ ಅಗತ್ಯವಾಗಿ ನರಕವಾಸವು ಉಂಟಾಗಲಿ! ಎಲೈ ಅನಂತಕೀರ್ತಿಯ ಪರಮೇಶ್ವರನೇ, ನಿನ್ನ ಈ ರೂಪವನ್ನು ನೋಡಿ ನಮಗೆ ಪರಮಾನಂದವಾಯಿತು. ವಿಷಯಾಸಕ್ತರಿಗೆ ನಿನ್ನ ದರ್ಶನವಾಗುವದು ದುರ್ಲಭವಾಗುವದು. ದೇವಾ, ನಮ್ಮ ನಮಸ್ಕಾರಗಳು ನಿನಗೆ ಅರ್ಪಣವಾಗಲಿ.

ಈ ಮೇರೆಗೆ ಆ ಯೋಗಸಂಪನ್ನರಾದ ಸನತ್ಕುಮಾರರು ಆಡಿದ ಮಾತುಗಳನ್ನು ಕೇಳಿ ಭಗವಂತನು ಒಳ್ಳೆಯ ಗೌರವದಿಂದ—ಮುನಿಶ್ರೇಷ್ಠರೇ, ನಿಮ್ಮ ಮುಂದೆ ನಿಂತಿರುವ ಇವರು ಜಯವಿಜಯರೆಂಬ ನನ್ನ ಪಾರ್ಷದರು. ಇವರು ನನ್ನ ಹೃದ್ಗತವನ್ನು ಅರಿಯದ್ದರಿಂದ ನಿಮ್ಮ ದೊಡ್ಡ ಅಪರಾಧ ಮಾಡಿರುವರು. ವಾಸ್ತವವಾಗಿ ನೋಡಿದರೆ, ಅವರು ನಿಮ್ಮ ಅಪರಾಧ ಮಾಡಿರದೆ ಪ್ರತ್ಯಕ್ಷ ನನ್ನ ಅಪರಾಧ ಮಾಡಿರುವರೆಂದು ನಾನು ತಿಳಿಯುವೆನು. ಯಾಕಂದರೆ, ನೀವು ನನ್ನ ಭಕ್ತರಿರುವದರಿಂದ ನನಗೂ ನಿಮಗೂ ಭೇದವಿಲ್ಲ. ವಿಪ್ರವರ್ಯರೇ, ಬ್ರಾಹ್ಮಣರು ನನ್ನ ದೈವತವು; ಆದ್ದರಿಂದ ನೀವು ಅವರಿಗೆ ಮಾಡಿದ ದಂಡನವು ನನಗೆ ಮಾನ್ಯವಾಗಿರುವದು; ಆದರೆ ಜಯವಿಜಯರಾದರೂ ನನ್ನ ಸೇವಕರೇ ಆಗಿರುವದರಿಂದ, ನನ್ನ ಸೇವಕರು ಮಾಡಿದ ಅಪರಾಧವು ನನ್ನದೇ ಎಂದು ತಿಳಿದು ಅದಕ್ಕಾಗಿ ನಾನು ನಿಮ್ಮ ಕ್ಷಮೆ ಬೇಡುವೆನು. ಸೇವಕನ ತಪ್ಪಿಗಾಗಿ ಜನರು ಅವನ ಒಡೆಯನನ್ನು ನಿಂದಿಸುವರು. ಆ ನಿಂದೆಯು ಒಡೆಯನ ಕೀರ್ತಿಯನ್ನು ನಾಶ ಮಾಡುವದು. ಎಲೈ ಬ್ರಹ್ಮಪುತ್ರರೇ, ನಾನು ಈ ಶ್ರೇಷ್ಠಪದವಿಯನ್ನು ಹೊಂದಿದ್ದು ನಿಮ್ಮಿಂದ! ನೀವು ನನ್ನ ಪವಿತ್ರ ಕೀರ್ತಿಯನ್ನು ವರ್ಣಿಸಿರುವದರಿಂದ ಚಾಂಡಾಲರೂ ಪವಿತ್ರರಾಗುವರು. ಅಂತೇ, ಋಷಿಗಳೇ, ನಿಮಗೆ ಪ್ರತಿಕೂಲವಾಗಿ ನಡೆಯಲಿಕ್ಕೆ ಪ್ರತ್ಯಕ್ಷ ಈ ನನ್ನ ಬಾಹುಗಳು ಯತ್ನಿಸಿದರೆ ಅವನ್ನು ಸಹ ತುಂಡರಿಸಿ ಚಲ್ಲಲಿಕ್ಕೆ ನಾನು ಹಿಂದೆ ಮುಂದೆ ನೋಡಲಿಕ್ಕಿಲ್ಲ, ಅಂದಬಳಿಕ ಎರಡನೆಯವರ ಪಾಡೇನು ? ನನ್ನ ಚರಣಧೂಲಿಯಿಂದ ಜನರ

ಪಾಪಗಳು ತತ್ಕಾಲ ಭಸ್ಮವಾಗಲಿಕ್ಕೂ, ನನಗೆ ಸುಸ್ವಭಾವವು ಪ್ರಾಪ್ತವಾಗಲಿಕ್ಕೂ, ನಾನು ಅನಾದರ ಮಾಡಿದರೂ ಚಂಚಲಳಾದ ಲಕ್ಷ್ಮಿಯು ನನ್ನನ್ನು ಒಂದು ಕ್ಷಣವಾದರೂ ಅಗಲದೆ ಇರಲಿಕ್ಕೂ ನಿಮ್ಮ ಬ್ರಾಹ್ಮಣರ ಸೇವೆಯ ಪ್ರಭಾವವೇ ಕಾರಣವಾಗಿರುವದು! ವಿಪ್ರರೇ, ನನಗೆ ಎರಡು ಮುಖಗಳಿರುವವು; ಒಂದು ಅಗ್ನಿಯು, ಎರಡನೆಯದು ಬ್ರಾಹ್ಮಣರು. ಅವುಗಳಲ್ಲಿ ಬ್ರಾಹ್ಮಣವೆಂಬ ಮುಖವು ಶ್ರೇಷ್ಠವಾದದ್ದರಿಂದ ನಿಮ್ಮ ಅವಮಾನವೆಂದರೆ ನನ್ನ ಮುಖದ ಅವಮಾನವಾಯಿತೆಂದು ನಾನು ತಿಳಿಯುವೆನು. ಜ್ಞಾನಸಂಪನ್ನರಾದ ಬ್ರಾಹ್ಮಣರು ತಾವು ಮಾಡಿದ ಕರ್ಮಗಳನ್ನು ನನಗೆ ಅರ್ಪಿಸಿ, ತಾವು ಸಂತುಷ್ಟರಾಗಿರುತ್ತಾರೆ. ಇಂಥ ನಿಷ್ಕಾಮರಾದ ಬ್ರಾಹ್ಮಣರಿಗೆ ಸುಗ್ರಾಸಭೋಜನ ಮಾಡಿಸುವದರಿಂದ ನಾನು ತೃಪ್ತನಾಗುವಂತೆ, ಯಜ್ಞದಲ್ಲಿ ಅಗ್ನಿಮುಖದಿಂದ ಅರ್ಪಿಸಿದ ಪದಾರ್ಥಗಳನ್ನು ತಿನ್ನುವದರಿಂದ ನಾನು ತೃಪ್ತನಾಗುವದಿಲ್ಲ. "ನಾವು ದ್ವಾರಪಾಲರನ್ನು ಕೇಳದೆ ಒಳಗೆ ಬಂದ ತಪ್ಪನ್ನು ದ್ವಾರಪಾಲರು ಯಾಕೆ ಸಹನ ಮಾಡಬೇಕು" ಎಂದು ನೀವು ಕೇಳಬಹುದು; ಆದರೆ ಅದಕ್ಕೆ ನನ್ನ ಉತ್ತರವು "ಮೂಲತಃ ಅದು ನಿಮ್ಮ ಅಪರಾಧವೇ ಅಲ್ಲವೆಂಬದು!" ಯಾಕಂದರೆ, ಯೋಗಮಾಯೆಯು ಅಗಾಧವಾದ ಐಶ್ವರ್ಯವುಳ್ಳ, ಹಾಗು ಜಗತ್ತನ್ನು ಪವಿತ್ರವಾಗಮಾಡುವ ಚರಣತೀರ್ಥವುಳ್ಳ ನಾನು, ಬ್ರಾಹ್ಮಣರ ಚರಣಧೂಲಿಯನ್ನು ಶಿರಸ್ಸಿನಲ್ಲಿ ಧರಿಸುತ್ತಿರಲು, ಆ ಬ್ರಾಹ್ಮಣರು ನಿಷ್ಪ್ರತಿಬಂಧದಿಂದ ನನ್ನ ಬಳಿಗೆ ಬರುವದು ತಪ್ಪೇ ? ಇದಲ್ಲದೆ ಬ್ರಾಹ್ಮಣರು, ಗೋಗಳು, ನಿರಾಶ್ರಿತಪ್ರಾಣಿಗಳು ಇವು ನನ್ನ ವಾಸಸ್ಥಳಗಳೆಂದು ನಾನು ತಿಳಿದಿರುವೆನಾದ್ದರಿಂದ, ಪ್ರಸಂಗವಿಶೇಷದಲ್ಲಿ ಅವರು ತಪ್ಪುಮಾಡಿದರೂ ಅನ್ಯರು ಅದನ್ನು ಸಹಿಸಲೇ ಬೇಕು. ಎಲೈ ಬ್ರಾಹ್ಮಣರೇ, ಇಷ್ಟು ವಿವೇಕಬುದ್ಧಿಯಿಲ್ಲದ್ದರಿಂದ, ಆಕಳು ಬ್ರಾಹ್ಮಣರು, ಅನಾಥಪ್ರಾಣಿಗಳು ಇವುಗಳಲ್ಲಿಯೂ-ನನ್ನಲ್ಲಿಯೂ ಭೇದಭಾವವೆಣಿಸುವವರು ನನ್ನ ಬಲವಾದ ಶಿಕ್ಷೆಗೆ ಪಾತ್ರರಾಗುವರು. ಬ್ರಾಹ್ಮಣರು ಕಠೋರ ಭಾಷಣ ಮಾಡಿದರೂ ಅದನ್ನು ಸಹಿಸಿ, ಸವಿಮಾತುಗಳಿಂದ ಅವರನ್ನು ಸಮಾಧಾನ ಪಡಿಸಿ, ಅವರನ್ನೇ ಶರಣು ಹೋಗುವವರು, ನನ್ನನ್ನು ಪೂಜಿಸಿದರೆಂದು ತಿಳಿದು ನಾನು ಅವರನ್ನು ಗೌರವಿಸುವೆನು. ಎಲೈ ಮುನಿಶ್ರೇಷ್ಠರೇ, ಬ್ರಾಹ್ಮಣರ ವಿಷಯವಾಗಿ ಇಷ್ಟು ನನ್ನ ಪೂಜ್ಯಬುದ್ಧಿಯಿದ್ದರೂ ನನ್ನ ದೂತರು ನಿಮ್ಮ ಅಪರಾಧ ಮಾಡಿರುವದರಿಂದ, ನಿಮ್ಮ ಮಾತಿನಂತೆ ಅವರಿಗೆ ದುರ್ಗತಿಯು ಆಗಲಿ; ಆದರೆ ಅವರು ಆ ಪ್ರವಾಸವನ್ನು ಬೇಗನೆ ಮುಗಿಸಿಕೊಂಡು ನನ್ನ ಬಳಿಗೆ ಬರಲೆಂಬದೇ ತಮ್ಮ ಬಳಿಯಲ್ಲಿ ನನ್ನ ಪ್ರಾರ್ಥನೆಯು. ಅದನ್ನು ನೀವು ಮಾನ್ಯಮಾಡಿದರೆ ನನ್ನನ್ನು ಅನುಗ್ರಹಿಸಿದಂತೆ ಆಗುವದು!

ಎಲೈ ದೇವತೆಗಳಿರಾ, ಈ ಮೇರೆಗೆ ಭಗವಂತನು ತನಗಿಂತಲೂ ಬ್ರಾಹ್ಮಣರು ಶ್ರೇಷ್ಠರೆಂದು ಗೌರವಿಸಿ ಮಾತಾಡಿದ್ದನ್ನುಕೇಳಿ ಸನಕಾದಿಕರಿಗೆ ಬಹಳಸಂತೋಷವಾಯಿತು. ಅವರ ಮನಸ್ಸಿನಲ್ಲಿ ಜಯವಿಜಯರ ಉದ್ಧಟತನಕ್ಕಾಗಿ ಉಂಟಾಗಿದ್ದ ಸಂತಾಪವು ಸಮೂಲ ನಷ್ಟವಾಗಿ, ತಿರುಗಿ ಭಗವಂತನ ಭಾಷಣದ ವಿಚಾರ ಮಾಡುವಲ್ಲಿ ಅವರ ಮತಿಯು

ಗುಂಗಾಯಿತು. ಎಷ್ಟು ವಿಚಾರಮಾಡಿದರೂ ಭಗವಂತನ ಮಾತಿನ ರಹಸ್ಯವು ಅವರಿಗೆ ತಿಳಿಯಲೊಲ್ಲದು; ಯಾಕಂದರೆ ಆ ಭಾಷಣವು ಅಲ್ಪವಾಗಿದ್ದರೂ ಅರ್ಥದಿಂದ ಗಂಭೀರವಾದದ್ದೂ, ಅಭಿಪ್ರಾಯದಿಂದ ಗೂಢವಾದದ್ದೂ ಆಗಿತ್ತು. ಕಡೆಗೆ ಆ ಋಷಿಗಳು ಕೈಜೋಡಿಸಿ ಭಗವಂತನನ್ನು ಕುರಿತು—ಎಲೈ ಜಗತ್ಪಾಲಕನಾದ ಈಶ್ವರನೇ, ನೀನು ಪರಮಸಮರ್ಥನಿದ್ದು ನಮಗೇ ಹೆಚ್ಚಳವನ್ನು ಕೊಟ್ಟು ನಮ್ಮಿಂದ ಅನುಗ್ರಹಪಡೆಯಲಿಚ್ಛಿಸುವದರ ಮರ್ಮವನ್ನು ತಿಳಿಯಲು ನಾವು ಸಮರ್ಥರಲ್ಲವು. ನಾನು ಬ್ರಾಹ್ಮಣ ಪಕ್ಷಪಾತಿಯು, ಬ್ರಾಹ್ಮಣರು ನನ್ನ ದೈವತವೆಂದು ನೀನು ಹೇಳುವದು ಕೇವಲ ಲೋಕಶಿಕ್ಷಣಕ್ಕಾಗಿ ಎಂಬದರಲ್ಲಿ ಸಂಶಯವಿಲ್ಲ. ವಸ್ತುಸ್ಥಿತಿಯನ್ನು ನೋಡಿದರೆ ಬ್ರಾಹ್ಮಣರ ಆತ್ಮನೂ, ಅವರ ಪರಮ ದೈವತವೂ ನೀನೇ ಆಗಿರುವೆ; ಯಾಕಂದರೆ, ವೇದಪ್ರತಿಪಾದ್ಯವಾದ ಅನಾದ್ಯನಂತ ಧರ್ಮವು ನಿನ್ನಿಂದಲೇ ಉತ್ಪನ್ನವಾಗಿರುವದು. ಕಾಲಕಾಲಕ್ಕೆ ಅವತಾರ ಮಾಡಿ ಆ ಸನಾತನಧರ್ಮವನ್ನು ನೀನೇ ರಕ್ಷಿಸುವೆ, ಮತ್ತು ಆ ಧರ್ಮವನ್ನು ಆಚರಿಸುವವರಿಗೆ ದೊರೆಯುವ ಫಲವೂ ನೀನೇ ಆಗಿರುತ್ತೀ. ಯೋಗಿಜನರು ಸಂಸಾರದಿಂದ ನಿವೃತ್ತರಾಗುವದು ನಿನ್ನ ಅನುಗ್ರಹದಿಂದಲೇ. ಹೀಗಿರಲು, ಇತರರು ನಿನ್ನನ್ನು ಅನುಗ್ರಹಿಸುವದು ಹ್ಯಾಗೆ ಸಂಭವಿಸೀತು? ಇನ್ನು ಬ್ರಾಹ್ಮಣರಿಂದಲೇ ನನ್ನ ಎಲ್ಲ ಐಶ್ವರ್ಯಗಳೆಂದು ನೀನು ಹೇಳುವದು ಲೋಕಕ್ಕೆ ಮೇಲುಪಙ್ತಿಯನ್ನು ಹಾಕಿಕೊಡುವದಕ್ಕಾಗಿಯೇ ಸರಿ; ಯಾಕಂದರೆ ಸರ್ವೈಶ್ವರ್ಯಗಳ ಆಧಾರವು ನೀನೇ ಆಗಿದ್ದು, ವೈಭವೇಚ್ಛುಗಳಾದ ಬ್ರಹ್ಮಾದಿ ದೇವತೆಗಳಿಂದ ಚರಣಸೇವೆಗೊಳ್ಳುವ ಲಕ್ಷ್ಮಿಯು ನಿನ್ನ ಆಶ್ರಯ ಪಡೆಯುವದಕ್ಕಾಗಿ ನಿನ್ನನ್ನು ಸೇವಿಸುತ್ತಿರಲು, ಬ್ರಾಹ್ಮಣರ ಚರಣಧೂಲಿಯಾಗಲಿ, ಶ್ರೀವತ್ಸಲಾಂಛನವಾಗಲಿ ನಿನ್ನನ್ನು ಪವಿತ್ರವಾಗಮಾಡುವದು ಹ್ಯಾಗೆ? ಈಶ್ವರಾ, ಧರ್ಮವು ನಿನ್ನ ಸ್ವರೂಪವಾಗಿರುವದು. ನಿನ್ನ ಆ ಧರ್ಮಸ್ವರೂಪದ ತಪ-ಶೌಚ-ದಯಾ ಎಂಬ ಈ ಮೂರು ಮುಖ್ಯ ಚರಣಗಳಿಂದ ಈ ಸ್ಥಾವರಜಂಗಮಾತ್ಮಕ ಸೃಷ್ಟಿಯನ್ನು ದೇವ-ಬ್ರಾಹ್ಮಣರ ಸಲುವಾಗಿ ನೀನು ರಕ್ಷಿಸಿರುವೆ. ರಜೋಗುಣ-ತಮೋಗುಣಗಳು ಧರ್ಮಘಾತಕಗಳಾಗಿರುವದರಿಂದ ಅವನ್ನು ನಷ್ಟಪಡಿಸಿ ನೀನು ಕೇವಲ ಸತ್ವಗುಣಾತ್ಮಕ ಮೂರ್ತಿಯ ಧಾರಣಮಾಡಿರುತ್ತೀ. ಭಗವಂತನೇ, ಆ ನಿನ್ನ ಸತ್ವಗುಣದ ಮೂರ್ತಿಯೇ ನಮ್ಮನ್ನು ರಕ್ಷಿಸತಕ್ಕದ್ದಾಗಿರುವದು. ದೇವಾ, ನೀನು ಬ್ರಾಹ್ಮಣಕುಲವನ್ನು ಗೌರವಿಸಿ ಅದನ್ನು ರಕ್ಷಿಸದಿದ್ದರೆ ವೇದೋಕ್ತಮಾರ್ಗವು ನಷ್ಟವಾಗಿ ಹೋದೀತು. ಧರ್ಮದ ನಾಶವು ನಿನಗೆ ಎಂದೂ ಇಷ್ಟವಲ್ಲದ್ದರಿಂದಲೇ ನೀನು ಬ್ರಾಹ್ಮಣರಿಗೆ ನಮಸ್ಕಾರಮಾಡಿ ಅವರಮುಂದೆ ಲೀನನಾಗುವೆ. ಹೀಗೆ ನೀನು ಮಾಡುವದರಿಂದ ನಿನ್ನ ಗೌರವಕ್ಕೆ ಕೊರತೆ ಬರುವದು ಅಷ್ಟರಲ್ಲಿಯೇ ಅದೆ; ಆದ್ದರಿಂದ ಈಗ ನಾವು ನಿನ್ನನ್ನು ಬೇಡಿಕೊಳ್ಳುವದೇನಂದರೆ—ನೀನು ಈ ದ್ವಾರಪಾಲರನ್ನು ಬೇಕಾದರೆ ದಂಡಿಸು. ಬೇಡಾದರೆ ಅವರಿಗೆ ಪಾರಿತೋಷಿಕವನ್ನು ಕೊಡು; ನೀನು ಏನುಮಾಡಿದರೂ ಅದು ನಮಗೆ ಶಿರಸಾವಂದ್ಯವಾಗಿರುವದು. ಇದೂ ಅಲ್ಲದೆ, ನಿನ್ನ ನಿರಪರಾಧಿಗಳಾದ ದ್ವಾರಪಾಲರನ್ನು ಶಪಿಸಿದ ಅಪರಾಧಕ್ಕಾಗಿ ನಮ್ಮನ್ನು ನೀನು ದಂಡಿಸಿದರೂ ನಮಗೆ ಅದು ಮಾನ್ಯವೇ ಇರುವದು!

ಈ ಮೇರೆಗೆ ಆಡಿದ ಸನತ್ಕುಮಾರರ ಮಾತುಗಳನ್ನು ಕೇಳಿ ಭಗವಂತನು:—ಶ್ರೇಷ್ಠ ಬ್ರಾಹ್ಮಣರೇ, ನೀವು ನನ್ನ ದ್ವಾರಪಾಲರನ್ನು ಶಿಕ್ಷಿಸಿದಿರೆಂದು ಖೇದಪಡಬೇಡಿರಿ; ಯಾಕಂದರೆ ಆ ಶಾಪವನ್ನು ನಾನೇ ನಿಮ್ಮ ಕಡೆಯಿಂದ ಕೊಡಿಸಿರುವೆನು. ಅವರು ನನ್ನಲ್ಲಿ ದ್ವೇಷಭಾವವನ್ನು ವಹಿಸಿ ನನ್ನ ಸತತವಾದ ಚಿಂತನದಿಂದ ಬೇಗನೆ ನನ್ನಲ್ಲಿಗೆ ಬರುವರು, ಎಂದು ಹೇಳಲು, ಅವರು ಭಗವಾನ್ ಶ್ರೀಹರಿಯನ್ನು ಒಮ್ಮೆ ಅವಲೋಕಿಸಿ ಆತನಿಗೆ ಪ್ರದಕ್ಷಿಣನಮಸ್ಕಾರಮಾಡಿ ಆತನ ಅಪ್ಪಣೆಪಡೆದು ಆನಂದದಿಂದ ಹೊರಟುಹೋದರು. ಇತ್ತ ಭಗವಂತನು ಜಯವಿಜಯರನ್ನು ಕುರಿತು—ನಿಮ್ಮ ದುಃಖನಿವಾರಣಮಾಡುವ ಸಾಮರ್ಥ್ಯವು ನನ್ನಲ್ಲಿರುತ್ತದೆ; ಆದರೆ ಬ್ರಾಹ್ಮಣರ ಶಬ್ದದ ಅವಮಾನಮಾಡುವ ಇಚ್ಛೆಯು ನನಗೆ ಇಲ್ಲ; ಯಾಕಂದರೆ ಹೀಗೆ ಆಗಲೇಬೇಕಾಗಿತ್ತು ; ಹೀಗಾಗುವದು ನನಗೆ ಇಷ್ಟವೇ ಇರುತ್ತದೆ. ಹಾಗಿಲ್ಲದಿದ್ದರೆ ನೀವು ಅವರನ್ನು ಅವಮಾನಗೊಳಿಸುತ್ತಿದ್ದಿಲ್ಲ; ಅವಮಾನಗೊಳಿಸಿದರೂ, ಅತ್ಯಂತ ಶಾಂತರಾದ ಆ ಮುನಿಗಳಿಗೆ ಸಿಟ್ಟುಬರುತ್ತಿದ್ದಿಲ್ಲ. ಜಯವಿಜಯರೇ , ಇದು ನನ್ನ ಇಚ್ಛೆಯೇ. ಸೃಷ್ಟಿಮಾಡುವ ಇಚ್ಛೆಯು ನನಗೆ ಆಗುವಂತೆ ಯುದ್ಧಮಾಡುವ ಇಚ್ಛೆಯೂ ನನಗೆ ಆಯಿತು; ಆದರೆ ನನ್ನೊಡನೆ ಕ್ಷಣಹೊತ್ತು ಕಾದುವವರಾದರೂ ಯಾರು ಸಿಗಬೇಕು? ನಿಮ್ಮಲ್ಲಿ ಅಂಥ ಯೋಗ್ಯತೆಯಿದ್ದರೂ ಈಸ್ಥಿತಿಯಲ್ಲಿ ನೀವು ನನ್ನೊಡನೆ ಶತ್ರುತ್ವವಹಿಸಲಾರಿರಿ. ಎಲ್ಲಕಾರ್ಯಗಳು ನನ್ನ ಇಚ್ಛೆಯಿಂದಲೇ ಆಗುವದರಿಂದ ನೀವು ಚಿಂತೆಮಾಡಬೇಡಿರಿ. ನೀವು ಸ್ವಲ್ಪಕಾಲದಲ್ಲಿಯೇ ನನ್ನಲ್ಲಿಗೆ ಬರುವಿರಿ, ಎಂದು ಹೇಳಲು, ಪ್ರಖರಬ್ರಹ್ಮಶಾಪದ ಮೂಲಕ ಕೂಡಲೆ ಜಯವಿಜಯರ ದೇಹಪಾತವಾಗಿ ಅವರು ಸದ್ಯಕ್ಕೆ ಕಶ್ಯಪರ ರೇತೋರೂಪದಿಂದ ದಿತಿಯ ಉದರದಲ್ಲಿ ಗರ್ಭಾವಸ್ಥೆಯಲ್ಲಿರುವರು. ಅವರು ವಿಷ್ಣುವಿನ ಪಾರ್ಷದರಾದದ್ದರಿಂದ ಅವರ ತೇಜಸ್ಸಿನಮುಂದೆ ಸೂರ್ಯನ ತೇಜಸ್ಸೂ ನಷ್ಟವಾಯಿತು. ಇದಕ್ಕಾಗಿ ಉಪಾಯವನ್ನು ಯೋಚಿಸುವದು ಈಶ್ವರನಕಡೆಗೇ ಸರಿ.

ಈ ಮೇರೆಗೆ ದಿತಿಯ ಗರ್ಭೋತ್ಪತ್ತಿಯ ಕಾರಣವನ್ನು ಬ್ರಹ್ಮನು ಹೇಳಿದಬಳಿಕ ಎಲ್ಲ ದೇವತೆಗಳು ಆತನಲ್ಲಿ ವಿಶ್ವಾಸವಿಟ್ಟು ನಿರ್ಭಯದಿಂದ ತಮ್ಮತಮ್ಮ ಸ್ಥಳಗಳಿಗೆ ಹೋದರು. ಇತ್ತ ದಿತಿಯ ಗರ್ಭಕ್ಕೆ ನೂರುವರ್ಷವಾಗಲು, ಆಕೆಯು ಅವಳಿ ಜವಳಿ ಗಂಡುಮಕ್ಕಳನ್ನು ಹಡೆದಳು. ಆಗ ಭಯಂಕರ ಉತ್ಪಾತಗಳಾದದ್ದನ್ನು ನೋಡಿ ಜಗತ್ತು ಭಯಗ್ರಸ್ತವಾಯಿತು. ಹುಟ್ಟಿದಕೂಡಲೆ ಕೂಸುಗಳು ಪರ್ವತಗಳ ಹಾಗೆ ಬೆಳೆಯಹತ್ತಿದವು. ಬೆಳೆಯುತ್ತ ಬೆಳೆಯುತ್ತ ಅವುಗಳ ಮಸ್ತಕಗಳು ಗಗನಕ್ಕೆ ಮುಟ್ಟಿದವು. ಅವರಿಂದ ತ್ರೈಲೋಕ್ಯಕ್ಕೆ ಬಾಧೆಯಾಗತೊಡಗಿತು . ಅವರಲ್ಲಿ ಮೊದಲು ಹುಟ್ಟಿದವನಿಗೆ ಹಿರಣ್ಯಾಕ್ಷನೆಂತಲೂ, ಹಿಂದುಗಡೆ ಹುಟ್ಟಿದವನಿಗೆ ಹಿರಣ್ಯಕಶಿಪುವೆಂತಲೂ ಕಶ್ಯಪರು ನಾಮಕರಣಮಾಡಿದ್ದರು- ಅವರಿಬ್ಬರು ಬಂಧುಗಳು ಪರಸ್ಪರ ಅತ್ಯಂತ ಪ್ರೇಮವುಳ್ಳವರಾಗಿದ್ದರು. ಅವರೊಡನೆ ಯುದ್ಧಮಾಡುವ ವೀರರು ತ್ರೈಲೋಕ್ಯದಲ್ಲಿ ಯಾರೂ ಇಲ್ಲದಾಯಿತು . ಅವರಲ್ಲಿ ಹಿರಣ್ಯಾಕ್ಷನು ಯುದ್ಧದ ಉತ್ಸುಕತೆಯಿಂದ

ಸ್ವರ್ಗಕ್ಕೆ ಹೋದನು; ಆವರೆ ಆತನ ಭಯದಿಂದ ಎಲ್ಲ ದೇವತೆಗಳು ಅಡಗಿಕೊಂಡರು. ಕಡೆಗೆ ಹಿರಣ್ಯಾಕ್ಷನು ವರುಣಲೋಕಕ್ಕೆ ಹೋಗಿ ಕುಚೋದ್ಯತನದಿಂದ ವರುಣನನ್ನು ತಲೆಬಾಗಿ ನಮಸ್ಕರಿಸಿ—"ರಾಜಾಧಿರಾಜಾ, ವರುಣಾ, ನನಗೆ ಯುದ್ಧದಾನವನ್ನು ಕೊಡು. ನೀನು ಮಹಾ ಪರಾಕ್ರಮಿಯಿದ್ದು ಲೋಕಪಾಲನಿರುವೆ. ಬಹುದಿವಸಗಳಿಂದ ನಾನು ನಿನ್ನ ಕೀರ್ತಿಯನ್ನು ಕೇಳುತ್ತಬಂದಿದ್ದೇನೆ. ನೀನು ಪರಾಕ್ರಮಿಗಳಾದ ದೈತ್ಯದಾನವರನ್ನು ಗೆದ್ದು ಹಿಂದಕ್ಕೆ ದೊಡ್ಡ ರಾಜಸೂಯ ಯಜ್ಞಮಾಡಿದೆಯಂತೆ"ಎಂದು ಉಪಹಾಸದಿಂದ ನುಡಿಯಲು, ವರುಣನಿಗೆ ಬಹಳ ಸಿಟ್ಟುಬಂದಿತು; ಆದರೂ ಆತನು ಕಾಲಕ್ಕೆ ಲಕ್ಷ ಗೊಟ್ಟು ಆತ್ಮಸಂಯಮನಮಾಡಿ ಶಾಂತವೃತ್ತಿಯಿಂದ ಹಿರಣ್ಯಾಕ್ಷನನ್ನು ಕುರಿತು—ಅಪ್ಪಾ, ಹಿರಣ್ಯಾಕ್ಷಾ, ಇಲ್ಲಿಯವ್ವರೆಗೆ ಎಷ್ಟೋ ದೊಡ್ಡದೊಡ್ಡ ಯುದ್ಧಗಳನ್ನು ಮಾಡಿದೆನು; ಆದರೆ ಈಗ ವೃದ್ಧಾಪ್ಯಕಾಲವಾದದ್ದರಿಂದ ಎಲ್ಲ ಉಪದ್ವ್ಯಾಪವನ್ನು ಬಿಟ್ಟು ಸ್ವಸ್ಥವಾಗಿ ಕುಳಿತಿದ್ದೇನೆ. ನಿನಗೆ ಯುದ್ಧಮಾಡುವ ಇಚ್ಛೆಯಿದ್ದರೆ ನಾನು ಹೇಳುವೆನು ಕೇಳು. ನಿನ್ನೊಡನೆ ಯುದ್ಧಮಾಡಲಿಕ್ಕೆ ಒಬ್ಬ ವಿಷ್ಣುವು ಸಮರ್ಥನಾಗಿರುವನು. ನಿನ್ನಂಥ ವೀರಪುರುಷರು ಆತನನ್ನು ಬಹಳವಾಗಿ ಹೊಗಳುವರು. ನಿನ್ನಂಥ ದುಷ್ಟರೂ, ಉನ್ಮತ್ತರೂ ಆದವರನ್ನು ನಾಶಮಾಡುವದಕ್ಕಾಗಿ ಆತನು ಹಲವು ಅವತಾರ ಧರಿಸುವನು. ಆತನು ನಿನ್ನ ಯುದ್ಧದ ಇಚ್ಛೆಯನ್ನು ಪೂರ್ಣಮಾಡಿ, ಸಮರಭೂಮಿಯಲ್ಲಿ ನಿನ್ನನ್ನು ಶಯನಮಾಡಿಸುವನು. ಆ ಮೇಲೆ ನಿನ್ನ ಮಾಂಸವನ್ನು ತಿನ್ನುವದಕ್ಕಾಗಿ ನರಿ–ನಾಯಿ–ಹದ್ದುಗಳು ನಿನ್ನ ಸುತ್ತು ನೆರೆಯುವವು.

ವರುಣನ ಮಾತುಗಳನ್ನು ಕೇಳಿ ಹಿರಣ್ಯಾಕ್ಷನಿಗೆ ಬಹಳ ಆನಂದವಾಯಿತು. ವಿಷ್ಣುವು ನಿನ್ನನ್ನು ಕೊಲ್ಲುವನೆಂದು ಹೇಳಿದ್ದನ್ನು ಆತನು ಲೆಕ್ಕಿಸಲೇ ಇಲ್ಲ. ನಾರದರ ಮುಖದಿಂದ ವಿಷ್ಣುವು ಇರುವ ಸ್ಥಾನವನ್ನು ತಿಳಿದು ಆ ಆದಿದೈತ್ಯನು ರಸಾತಳಕ್ಕೆ ಹೋದನು. ಅಲ್ಲಿ ವರಾಹರೂಪಿ ಪರಮಾತ್ಮನು ಭೂಮಿಯನ್ನು ಹರಣಮಾಡಿ ಅದನ್ನು ತನ್ನ ಕೋರೆಯಮೇಲೆ ಇಟ್ಟುಕೊಂಡು ಬರುತ್ತಿದ್ದನು. ಆತನ ನೇತ್ರದ ಕಾಂತಿಯಿಂದ ಹಿರಣ್ಯಾಕ್ಷನು ತೇಜೋಹೀನನಾದನು. ಆ ದೈತ್ಯನು ವರಾಹನನ್ನು ಕುರಿತು—ಏನು ಆಶ್ಚರ್ಯವಿದು, ಅರಣ್ಯದೊಳಗಿನ ಪಶುಗಳು ಜಲದಲ್ಲಿ ಕೂಡ ಸಂಚಾರಮಾಡಲಿಕ್ಕೆ ಬರುವವು! ಎಲಾ, ಮೂರ್ಖಾ, ಇತ್ತ ನನ್ನ ಬಳಿಗೆಬಂದು ಪೃಥ್ವಿಯನ್ನು ಇಟ್ಟುಹೋಗು. ಬ್ರಹ್ಮನು ಪಾತಾಳವಾಸಿಗಳಾದ ನಮಗೆ ಇದನ್ನು ಕೊಟ್ಟಿರುವದರಿಂದಲೇ ಅದು ಇಲ್ಲಿಗೆ ಬಂದಿರುತ್ತದೆ. ಎಲೈ ಅಧಮನೇ, ನೀನು ಕಪಟದಿಂದ ವರಾಹರೂಪ ಧಾರಣಮಾಡಿದ್ದರೂ ನಿನ್ನ ಗುರುತು-ನಾನು ಹಿಡಿದಿರುವೆನು. ದುಷ್ಟಾ, ನಿರ್ಲಜ್ಜಾ, ಹೇಡಿಯೇ, ನಾನು ಇಲ್ಲಿ ನಿಂತಿರಲು, ಪೃಥ್ವಿಯನ್ನು ಹ್ಯಾಗೆ ತಕ್ಕೊಂಡು ಹೋಗುತ್ತೀ ನೋಡುತ್ತೇನೆ. ಎಂದು ಬಾಯಿಗೆಬಂದಹಾಗೆ ಮಾತಾಡಹತ್ತಿದನು. ಅದರಿಂದ ಭಗವಂತನಿಗೆ ಸಿಟ್ಟುಬಂದರೂ, ತನ್ನ ಕೋರೆಗಳಮೇಲೆ ಭಯದಿಂದ ಒಂದೇಸವನೆ ನಡುಗುತ್ತಿದ್ದ ಪೃಥ್ವಿಯನ್ನು ಯೋಗ್ಯಸ್ಥಾನದಲ್ಲಿ ಇರಿಸಿ, ತನ್ನ ಆಧಾರಶಕ್ತಿಯಿಂದ ಅದನ್ನು ರಸಾತಳಕ್ಕೆ

ಇಳಿಯುವಂತೆ ಮಾಡಿಬಂದು ಹಿರಣ್ಯಾಕ್ಷನನ್ನು ಕುರಿತು ಉಪಹಾಸದಿಂದ—"ಅಪ್ಪಾ ಹಿರಣ್ಯಾಕ್ಷಾ, ನೀನು ಅಂದಂತೆ ನಾನು ವನಪಶುವಂತು ಸರಿಯೇ; ಆದರೆ ಸದ್ಯಕ್ಕೆ ನಿನ್ನಂಥ ಗ್ರಾಮಸಿಂಹವನ್ನು ಹುಡುಕುತ್ತಿರುವೆನು. ಎಲೈ ದೈವಹೀನನೇ, ನೀನು ತೀರ ಮೃತ್ಯುವಿನ ಬಾಗಿಲಿಗೆ ಬಂದು ನಿಂತಿರುವದರಿಂದ ಹೀಗೆ ನಿನ್ನ ಬುದ್ಧಿಗೆ ಭ್ರಂಶವಾಗಿದೆ; ಆದ್ದರಿಂದ ನೀನು ಈಗ ಎಷ್ಟು ಹರಟಿದರೂ ನನ್ನಂಥ ವೀರರು ಅದಕ್ಕೆ ಲಕ್ಷ್ಯಗೊಡಲಾರರು. ನಾನಂತು ಅಂಜುಬುರುಕನು, ನಿರ್ಲಜ್ಜನು! ಆದರೆ ಈಗ ನಿನ್ನ ಸಂಗಡ ಯುದ್ಧವನ್ನಂತು ಮಾಡಲೇಬೇಕಾಗಿರುವದಷ್ಟೇ? ಯಾಕಂದರೆ, ಬಲಿಷ್ಠರ ಸಂಗಡ ದ್ವೇಷಬಳಿಸಿದ ಬಳಿಕ ಏನಾದರೂ ಮಾಡಿ ಅವರನ್ನು ಗೊತ್ತಿಗೆ ಹಚ್ಚಿದಹೊರತು ಪರಿಣಾಮವಾಗದು," ಇತ್ಯಾದಿ ಮರ್ಮಭೇದಕ ಮಾತುಗಳನ್ನಾಡುತ್ತಿರಲು, ಅವರಿಬ್ಬರು ವೀರರು ಆಶ್ಚರ್ಯಕರವಾಗಿ ಯುದ್ಧಮಾಡತೊಡಗಿದರು. ಬ್ರಹ್ಮಾದಿ ದೇವತೆಗಳು ನೋಡುತ್ತಿರಲು, ಬಹಳಹೊತ್ತು ಅವರು ಕಾದಿದರು. ಮೊದಲು ಅವರ ಗದಾಯುದ್ಧವಾಯಿತು; ಬಳಿಕ ಮಾಯಾಯುದ್ಧವಾಯಿತು. ಆ ಮೇಲೆ ಆ ಅಸುರನು ಭಗವಂತನಮೇಲೆ ಭಯಂಕರವಾದ ತ್ರಿಶೂಲವನ್ನು ಪ್ರಯೋಗಿಸಿದನು. ಆ ಇಬ್ಬರು ವೀರರ ಶಕ್ತಿ-ಯುಕ್ತಿಗಳಿಂದ ಕೂಡಿದ ಯುದ್ಧವು ಲೋಕಕ್ಕೆ ಅದ್ಭುತವಾಯಿತು. ದೈತ್ಯನು ತನ್ನ ಮಹಾಸಾಮರ್ಥ್ಯದಿಂದ ಭಗವಂತನಿಗೆ ಮುಷ್ಟಿಪ್ರಹಾರಮಾಡಿದನು; ಆದರೆ ಅದರ ಪರಿಣಾಮವೇನೂ ಆಗಲಿಲ್ಲ. ಹಿರಣ್ಯಾಕ್ಷನು ಹತ್ತರಬಂದದ್ದನ್ನು ನೋಡಿ ಭಗವಂತನು ತನ್ನ ಅಲೌಕಿಕ ಸಾಮರ್ಥ್ಯದಿಂದ ಆತನ ಮೆಲಕಿಗೆ ಹೊಡೆಯಲು, ದೈತ್ಯನ ಕಣ್ಣುಗುಡ್ಡೆಗಳು ಹೊರಬಿದ್ದು ಆತನು ಮರಣಹೊಂದಿದನು.

ಈ ಮೇರೆಗೆ ಭಗವಾನ್ ಶ್ರೀಹರಿಯು ವರಾಹರೂಪದಿಂದ ಉನ್ಮತ್ತಹಿರಣ್ಯಾಕ್ಷನನ್ನು ಸಂಹರಿಸಲು, ಜಗತ್ತು ಕಂಟಕರಹಿತವಾಯಿತು. ದೇವತೆಗಳು ಆನಂದದಿಂದ ವರಾಹರೂಪಪರಮಾತ್ಮನ ಮೇಲೆ ಹೂಮಳೆಗರೆದರು; ಆದರೆ ತಾಮಸ ಸ್ವಭಾವದ ರಾಕ್ಷಸನನ್ನು ಸಂಹರಿಸುವ ಆವೇಶದಲ್ಲಿ ವರಾಹರೂಪತಾಳಿದ ವಿಷ್ಣುವೂ ಉನ್ಮತ್ತನಾಗಿ ಭೂಮಿಗೆ ಭಾರವಾಗತೊಡಗಿದನು. ಭೃಗುಋಷಿಯ ಶಾಪವನ್ನು ಸತ್ಯವಾಗ ಮಾಡುವದೊಂದು ಪರಮಾತ್ಮನ ಉದ್ದೇಶವಿತ್ತು; ಮೇಲಾಗಿ ನಿರ್ಗುಣನೂ, ನಿರಂಜನನೂ, ನಿಷ್ಕಲಂಕನೂ ಆದ ಪರಮಾತ್ಮನು ತಿರ್ಯಗ್ಯೋನಿಯೆನಿಸುವ ವರಾಹರೂಪತಾಳಿದ್ದು ಜಗತ್ಕಲ್ಯಾಣಕ್ಕಾಗಿಯೇ ಆದ್ದರಿಂದ, ಕಾರ್ಯವಾದ ಬಳಿಕ ಆ ರೂಪವನ್ನು ಉಪಸಂಹರಿಸುವದೂ ಅವಶ್ಯವಾಗಿತ್ತು. ಹೀಗಿರಲು, ಭಗವಾನ್ ಸದಾಶಿವನು ತಾನು ವಿಷ್ಣುವಿಗೆ ಈ ಮೊದಲೆ ಅಭಿವಚನ ಕೊಟ್ಟಂತೆ, ಜಗತ್ಕಲ್ಯಾಣರೂಪವಾದ ಕಾರ್ಯವಾದದ್ದರಿಂದ ಅನವಶ್ಯಕವಾದ ವಿಷ್ಣುವಿನ ವರಾಹರೂಪವನ್ನು,-ಆದರೆ ವಿವೇಕಶೀಲಾ, ವಿಷ್ಣುವನ್ನಲ್ಲ-ಸಂಹರಿಸಿ, ಭೂಭಾರಕವಾದ ಅದರ ಕೋರೆಯನ್ನು ತನ್ನ ರುಂಡಮಾಲೆಯಲ್ಲಿ ಸೇರಿಸಿಕೊಂಡನು. ಸಾಮಾನ್ಯವಾಗಿ ಆತ್ಮತತ್ವವೇ ಸದಾಶಿವಾಂಶವಿರುವದರಿಂದ ಅದು ಅವಿನಾಶಿಯಾಗಿರಲು, ಸದಾಶಿವನ ರೂಪವಾದ ವಿಷ್ಣುರೂಪಪರಮಾತ್ಮನ ನಾಶವನ್ನು ಭಗ

ವಾನ್ ಸದಾಶಿವನು ಮಾಡಿದನೆಂಬ ಮಾತು ಕೇವಲ ಅಶಾಸ್ತ್ರೀಯವಾದದ್ದು. ಜಗತ್ತಿಗೆ ತಾಪವನ್ನುಂಟು ಮಾಡುವ ಹಿರಣ್ಯಾಕ್ಷನು ವಧ್ಯನಾದಂತೆ, ಭಗವಾನ್ ವಿಷ್ಣುವಿನ ವರಾಹರೂಪವೂ ಜಗತ್ತಿಗೆ ತಾಪವನ್ನುಂಟುಮಾಡಿದಾಗ ವಧ್ಯವಾಯಿತು; ಆದರೆ ದೈತ್ಯ ಸಂಹಾರವಾಗುವವರೆಗೆ ಅದು ಜಗತ್ತಿಗೆ ಕಲ್ಯಾಣಕಾರಕವಾದದ್ದರಿಂದ ಆ ಆದಿವರಾಹ ರೂಪವನ್ನು ಭಗವದ್ರೂಪವೆಂದು ತಿಳಿದು ಭಗವದ್ಭಕ್ತರು ಈಗಲೂ ಆರಾಧಿಸುತ್ತಿರುವರು. ವಿವೇಕಶೀಲಾ, ಅವತಾರವೆಂದರೆ ಕೆಳಗೆ ಇಳಿದು ಬರೋಣವು; ಒಂದುಬಗೆಯಾಗಿ ಸ್ಪಷ್ಟವಾಗಿ ಹೇಳಬೇಕಾದರೆ, ಮಾಯಾರಹಿತನಾದ ಪರಮಾತ್ಮನು ಜಗತ್ತಿನ ಕಲ್ಯಾಣಕ್ಕಾಗಿ ಮಾಯೆಗೆ ಒಳಗಾದವನಂತೆ ಆಚರಿಸುವದೇ ಅವತಾರದ ರಹಸ್ಯವಾಗಿರುವದು. ಪ್ರಬುದ್ಧರೆನಿಸುವ ನಾವು ಸಣ್ಣಹುಡುಗರ ವ್ಯವಹಾರದಲ್ಲಿ ಸೇರುವಾಗ ಹುಡುಗರಂತೆ ಆಗಬೇಕಾಗುವದಲ್ಲವೆ? ಅದರಂತೆ ಸದಾಶಿವನ ರೂಪಗಳಾದ ಬ್ರಹ್ಮ-ವಿಷ್ಣು-ಮಹೇಶ್ವರರು ಜಗತ್ತಿನ ಕಲ್ಯಾಣಕ್ಕಾಗಿ ದೇವ-ಮನುಷ್ಯ-ತಿರ್ಯಗ್ ಯೋನಿಗಳಲ್ಲಿ ಕ್ರಮವಾಗಿ ಸಾತ್ವಿಕ-ರಾಜಸ-ತಾಮಸಗುಣಗಳ ಆಧಿಕ್ಯದಿಂದ ಅನಂತ ಅವತಾರಗಳನ್ನು ಎತ್ತಿರುವರು; ಆದರೆ ಕಾರ್ಯವಾದಬಳಿಕ ಆ ಅವತಾರಗಳ ಪರಿಸಮಾಪ್ತಿಯಾಗದಿದ್ದರೆ, ಪರಮಾತ್ಮನೂ ಜೀವಾತ್ಮನಂತೆ ಸದಾಬದ್ಧನೇ ಆಗಿರಬೇಕಾದೀತಲ್ಲ. ಸರ್ವತಂತ್ರ ಸ್ವತಂತ್ರನಾದ ಪರಮಾತ್ಮನು ಬೇಕಾದಾಗ ಬದ್ಧನಾಗುವನು, ಬೇಕಾದಾಗ ಮುಕ್ತನಾಗುವನು. ಈ ಸ್ವಾತಂತ್ರ್ಯವು ಜೀವಾತ್ಮನಿಗಿಲ್ಲದಿರುವದೇ ಜೀವಾತ್ಮ-ಪರಮಾತ್ಮರಲ್ಲಿಯ ವೈಲಕ್ಷಣ್ಯವು; ಆದ್ದರಿಂದ ವಿವೇಕಶೀಲಾ, ಪರಮಾತ್ಮನ ಅವತಾರಗಳ ಉತ್ಪತ್ತಿ-ಸ್ಥಿತಿ-ಲಯಗಳಲ್ಲಿ ಪರಮಾತ್ಮಭಾವವನ್ನೇ ತಾಳಬೇಕೆಂಬದನ್ನು ಮರೆಯಬೇಡ. ನಮ್ಮ ದೃಶ್ಯಜಡರೂಪದನಾಶವೆಂದರೆ ನಮ್ಮ ಜಡದೇಹದ ನಾಶವಾಗಿರಲು, ಪರಮಾತ್ಮನ ಅವತಾರದ ದೃಶ್ಯ ಜಡರೂಪದ ನಾಶವೆಂದರೆ ಪರಮಾತ್ಮನ ನಾಶವು ಹ್ಯಾಗಾದೀತು? ಇಂಥ ಪಾಮರ ವಿಚಾರದಿಂದ ಪರಮಾತ್ಮನಸರ್ವಾಂತರ್ಯಾಮಿತ್ವವನ್ನು ಮರೆತು ದೇಹಾಭಿಮಾನದಿಂದ ಅಂಧರಾಗಿ ಅಧಃಪತನ ಹೊಂದದಂತೆ ವಿವೇಕಿಗಳಾದವರು ಜಾಗರೂಕರಾಗಿರತಕ್ಕದ್ದು. ಇನ್ನು ಮೇಲೆ ಭಗವಂತನ ನೃಸಿಂಹ-ಹರಲೀಲೆಯನ್ನು ವರ್ಣಿಸುವೆನು ಕೇಳು. ಭಗವಂತನ ಲೀಲೆಯೆಂದು ಹೇಳುವದರಲ್ಲಿಯ ಗೂಢಾರ್ಥವನ್ನು ಸರ್ವಥಾ ಮರೆಯಬೇಡ. ಸದಾಶಿವನ ಲೀಲೆಯೆಂದರೆ ಅದ್ವೈತನಾದ ಆ ಸದಾಶಿವ-ಪರಮಾತ್ಮನು ತಾನೇ ಬದ್ಧನೂ, ಮುಕ್ತನೂ ಆಗಿ ಸ್ವೇಚ್ಛೆಯಿಂದ ಮಾಡುವ ವ್ಯವಹಾರವು! ಇರಲಿ, ಮುಂದಿನ ಶಿವಕಥೆಯಲ್ಲಿ ನಿನ್ನ ಅವಧಾನವಿರಲಿ.

ವಿವೇಕಶೀಲಾ, ಒಮ್ಮೆ ಪರೀಕ್ಷಿತರಾಜನು ಶುಕಾಚಾರ್ಯರನ್ನು ಕುರಿತು— ಶುಕಮುನಿಯೇ, ಭಗವಾನ್ ವಿಷ್ಣುವು ಸರ್ವಭೂತಗಳಲ್ಲಿ ಸಮಭಾವವುಳ್ಳವನೂ, ಸರ್ವರ ಹಿತಮಾಡುವವನೂ ಆಗಿದ್ದು, ಆತನು ಇಂದ್ರನ ಪಕ್ಷವನ್ನು ವಹಿಸಿ ದಿತಿಯ ಮಕ್ಕಳನ್ನು, ಅಂದರೆ ದೈತ್ಯರನ್ನು ಕೊಂದ ಕಾರಣವೇನು? ಎಂದು ಕೇಳಲು, ಶುಕಾಚಾರ್ಯರು—ಪರೀಕ್ಷಿತರಾಜಾ, ಬಹಳ ಉತ್ತಮಪ್ರಶ್ನಮಾಡಿದೆ. ಭಗ

ವಂತನು ತ್ರಿಗುಣಾತ್ಮಕ ಪ್ರಕೃತಿಯಿಂದ ಬೇರೆಯಿದ್ದು, ನಿರ್ಗುಣನೂ, ಜನ್ಮರಹಿತನೂ ಆಗಿರುವನು. ಆತನು ಸ್ಪಷ್ಟವಾಗಿ ಕಾಣದಿದ್ದರೂ ಮಾಯೆಯು ಅಥವಾ ಪ್ರಕೃತಿಯು ಸತ್ವ-ರಜ-ತಮ ಎಂಬ ಗುಣಗಳನ್ನು ಸ್ವೀಕರಿಸಿ, ಕೊಲ್ಲುವವನ ರೂಪವನ್ನೂ ತಾನೇ ಧರಿಸುವನು; ಕೊಲ್ಲಿಸಿಕೊಳ್ಳುವವನ ರೂಪವನ್ನೂ ತಾನೇ ಧರಿಸುವನು. ಪ್ರಕೃತಿಯು ಈ ಗುಣಗಳ ಉತ್ಕರ್ಷವು, ಅಥವಾ ಅಪಕರ್ಷವು ಒಮ್ಮೆಲೆ ಆಗುವದಿಲ್ಲ. ಸತ್ವಗುಣದ ಉತ್ಕರ್ಷವಾಗುವ ಸಮಯು ಒದಗಿದರೆ, ಪರಮೇಶ್ವರನು ದೇವತೆಗಳ, ಹಾಗು ಋಷಿಗಳ ಪಕ್ಷವನ್ನು ವಹಿಸುವನು; ಅದರಂತೆಯೇ ರಜೋಗುಣದ ಉತ್ಕರ್ಷವಾಗುವ ಸಮಯು ಒದಗಿದರೆ ಆತನು ದೈತ್ಯರ ಪಕ್ಷವನ್ನೂ, ತಮೋಗುಣದ ಉತ್ಕರ್ಷವಾಗುವ ಸಮಯು ಒದಗಿದರೆ ಯಕ್ಷ-ರಾಕ್ಷಸ-ಪಕ್ಷವನ್ನೂ ವಹಿಸುವನು! ವಾಸ್ತವವಾಗಿ ಪರಮೇಶ್ವರನು ಯಾರ ಪಕ್ಷವನ್ನೂ ವಹಿಸುವದಿಲ್ಲ. ಕಟ್ಟಿಗೆಯ ಆಕಾರವೇ ಅಗ್ನಿಯ ಆಕಾರವಾಗಿ ತೋರುವಂತೆ, ಸತ್ವ-ರಜ-ತಮಗುಣಗಳ ಜನರ ಅಂತರಂಗದಲ್ಲಿ ಸಮನಾಗಿ ತುಂಬಿಕೊಂಡಿರುವ ಪರಮಾತ್ಮನು ಆಯಾಗುಣದವನಾಗಿ ತೋರುವನು; ಮತ್ತು ಆಯಾಗುಣದ ಉತ್ಕರ್ಷವಾದಾಗ ಆಯಾ ಪಕ್ಷವನ್ನು ಸ್ವೀಕರಿಸಿದಂತೆ ಭಾಸವಾಗುವದು. ಪರಮೇಶ್ವರನಿಗೆ ಸೃಷ್ಟಿಯನ್ನು ಮಾಡುವ ಇಚ್ಛೆಯಾದಾಗ ಆತನು ಮಾಯೆಯ ಯೋಗದಿಂದ ರಜೋಗುಣದ ವೃದ್ಧಿಯನ್ನೂ, ಆ ಸೃಷ್ಟಿಯಲ್ಲಿ ವಿಹಾರ ಮಾಡುವ ಇಚ್ಛೆಯಾದಾಗ ಸತ್ವಗುಣದ ವೃದ್ಧಿಯನ್ನೂ, ಶಯನಮಾಡಬೇಕೆಂಬ ಇಚ್ಛೆಯಾದಾಗ ತಮೋಗುಣದ ವೃದ್ಧಿಯನ್ನೂ ಮಾಡುವನು. ಸೃಷ್ಟಿಯು ಈ ಮೂರು ಗುಣಗಳ ವೈಷಮ್ಯದಿಂದಲೇ ಉಂಟಾಗಿರುವದರಿಂದ, ಸೃಷ್ಟಿಯು ಇರುವವರೆಗೆ ಈ ಗುಣಗಳ ಏರಿಳಿತಗಳು ಯಾವಾಗಲೂ ಆಗುತ್ತಲೇ ಇರುವವು; ಆದ್ದರಿಂದ ಸತ್ವಗುಣದ ವೃದ್ಧಿಯಾಗಿ ರಜಸ್ತಮೋಗುಣಗಳ ಹ್ರಾಸವಾಗುವ ಕಾಲವಿದ್ದಲ್ಲಿ ಪರಮೇಶ್ವರನು ದೇವತೆಗಳ ಪಕ್ಷವಹಿಸಿ ದೈತ್ಯರ ನಾಶಮಾಡಿದನೆಂಬಂತೆ ತೋರುತ್ತದೆ. ಆದರೆ ದೈತ್ಯರಿಂದ ದೇವತೆಗಳನ್ನು ಹೊಡೆದೋಡಿಸಿ ದೈತ್ಯರನ್ನು ಬಹು ದಿವಸ ಮನಬಂದಂತೆ ಮೆರೆಯಗೊಟ್ಟಾಗ ಅದೇ ಭಗವಂತನು ದೈತ್ಯರ ಪಕ್ಷವಹಿಸಿದ ಹಾಗಾಗುವದಿಲ್ಲವೋ!

ಪರೀಕ್ಷಿತರಾಜಾ, ಇದೇ ಸಂಬಂಧದಿಂದ ಧರ್ಮರಾಜನು ನಾರದರಿಗೆ ಪ್ರಶ್ನೆಮಾಡಲು, ನಾರದರು ಆ ಧರ್ಮರಾಜನಿಗೆ ಹೇಳಿದ್ದನ್ನು ನಿನಗೆ ನಾನು ಹೇಳುವೆನು ಕೇಳು- ರಾಜಸೂಯ ಯಜ್ಞದಲ್ಲಿ ಭಗವಂತನು ತನ್ನ ಶತ್ರುಗಳಾದ ಶಿಶುಪಾಲ-ವಕ್ರದಂತರನ್ನು ಸಂಹರಿಸಲು, ಅವರು ಸಾಯುಜ್ಯಮುಕ್ತಿಯನ್ನು ಹೊಂದಿದರು. ಆಗ ಧರ್ಮರಾಜನು ನಾರದರಿಗೆ—ದೇವಋಷಿಯೇ, ಮಹಾ ಮಹಾ ಭಗವದ್ಭಕ್ತರಿಗೂ ದೊರೆಯದಂಥ ಸಾಯುಜ್ಯಪದವಿಯು ಶಿಶುಪಾಲ-ವಕ್ರದಂತರಿಗೆ ದೊರೆಯಿತಲ್ಲ, ಇದರ ಅರ್ಥವೇನು? ವೇನರಾಜನಂತೆ ಅವರು ನರಕಕ್ಕೆ ಪಾತ್ರರಾದವರು; ಅಂಥವರಿಗೆ ಸಾಯುಜ್ಯಪದವಿಯೆ! ಮುನಿವರ್ಯ, ನನ್ನ ಈ ಸಂಶಯವನ್ನು ದೂರಮಾಡಬೇಕು, ಎಂದು ಕೇಳಲು, ನಾರದರು—ಧರ್ಮರಾಜಾ, ನಿಂದೆಯಿಂದ ಕುಗ್ಗುವದೂ, ಸ್ತುತಿಯಿಂದ ಹಿಗ್ಗುವದೂ ದೇಹಾಭಿಮಾನಿ ಜೀವ

ಶಿಗೆ ಮಾತ್ರ ಸಂಬಂಧಿಸುವದು; ಅವುಗಳ ಸಂಬಂಧವು ದೇಹಾಭಿಮಾನವಿಲ್ಲದ ಪರಮೇಶ್ವರನಿಗೆ ಸರ್ವಥಾ ಆಗುವದಿಲ್ಲ. ಈಶ್ವರನು ಸರ್ವರ ಆತ್ಮನೂ, ಸರ್ವಸಾಕ್ಷಿಯೂ ಇರುವದರಿಂದ ಯಾವದಾದರೂ ರೀತಿಯಿಂದ ಆತನಲ್ಲಿ ಮನಸ್ಸನ್ನಿಟ್ಟರೆ, ಸಾಯುಜ್ಯವು ದೊರೆಯುವದು. ಸಕ್ಕರೆಯನ್ನು ಪ್ರೀತಿಯಿಂದ ತಿನ್ನಲಿ, ಸಿಟ್ಟಿನಿಂದ ತಿನ್ನಲಿ ಬಾಯಿಸಿಹಿಯಾಗುವದೇನೂ ತಪ್ಪುವದಿಲ್ಲ; ಯಾಕಂದರೆ ಸಕ್ಕರೆಗೆ ಸ್ವತಃ ರಾಗ-ಲೋಭಾದಿ ವಿಕಾರಗಳಿಲ್ಲ. ಅದರಂತೆ ಧರ್ಮರಾಜಾ, ಯಾವದೊಂದು ಕಾರಣದಿಂದ ಈಶ್ವರನಲ್ಲಿ ಲಕ್ಷವಿರಿಸುವದಷ್ಟು ಹಿತಕಾರಕವಾಗಿರುವದೆಂಬದನ್ನು ಮರೆಯಬೇಡ. ಅದರಲ್ಲಿಯೂ ವಿರೋಧಭಕ್ತಿಯಿಂದ ಭಗವಂತನಲ್ಲಿ ಮನಸ್ಸನ್ನಿರಿಸುವದು ಹೆಚ್ಚು ಸುಲಭವು; ಯಾಕಂದರೆ, ಯಾರೊಬ್ಬರ ಮನಸ್ಸಿನಲ್ಲಿ ಹೆಜ್ಜೆ ಹೆಜ್ಜೆಗೆ ಅವರ ಶತ್ರುಗಳು ಬರುವಂತೆ ಅವರ ಮಿತ್ರರು ಬರುವದಿಲ್ಲ; ಆದ್ದರಿಂದ ಈಶ್ವರನಲ್ಲಿ ಶತ್ರುತ್ವಬೆಳಿಸಿದರೆ ಆತನ ನಿದಿಧ್ಯಾಸವು ಹೆಚ್ಚಲಿಕ್ಕೆ ಸಾಧನವಾಗಿ ಬೇಗನೆ ಸಾಯುಜ್ಯವು ಪ್ರಾಪ್ತವಾಗುವದು! ಕುರಡೀಕುಂತಾರದ ಹುಳದ ನಿದಿಧ್ಯಾಸದಿಂದ, ಅದು ತನ್ನ ಮನೆಯಲ್ಲಿಟ್ಟದ್ದ ಹಸರಹುಳವೂ ಕುರಡೀಕುಂತಾರವೇ ಆಗುವದಿಲ್ಲವೇ? ಆದ್ದರಿಂದ ಧರ್ಮರಾಜಾ, ಈಶ್ವರನ ಚಿಂತನವು ಇಂಥ ಕಾರಣದಿಂದಲೇ ಒದಗಬೇಕೆಂಬ ನಿಯಮವಿಲ್ಲ; ಗೋಪಿಕಾಸ್ತ್ರೀಯರಿಗೆ ಕಾಮದಿಂದ, ಶಿಶುಪಾಲಾದಿಕರಿಗೆ ದ್ವೇಷದಿಂದ, ಕಂಸನಿಗೆ ಭಯದಿಂದ, ಯಾದವರಿಗೆ ಆಪ್ತತ್ವದಿಂದ, ನಿಮಗೆ ಪ್ರೇಮದಿಂದ, ನಮ್ಮಂಥವರಿಗೆ ಭಕ್ತಿಯಿಂದ ಈಶ್ವರಚಿಂತನವು ಉಂಟಾಗಿರುವದು. ಧರ್ಮರಾಜಾ, ನೀನು ಹೇಳಿದ ವೇನರಾಜನಿಗೆ ಈ ಐದರಲ್ಲಿ ಯಾವ ಪ್ರಕಾರದಿಂದಲೂ ಈಶ್ವರನ ಚಿಂತನವು ಒದಗದ್ದರಿಂದ ಆತನಿಗೆ ನರಕವಾಸವು ಪ್ರಾಪ್ತವಾಯಿತು. ಶಿಶುಪಾಲ-ವಕ್ರದಂತರ ಪೂರ್ವೇತಿಹಾಸವು ನನಗೆ ಗೊತ್ತಿರುವದು. ಅವರು ವಿಷ್ಣುವಿನ ಸೇವಕರಾದ ಜಯವಿಜಯರು. ಅವರು ಸನಕಾದಿಕರನ್ನು ನೋಡಿ ನಕ್ಕದ್ದರಿಂದ ಆ ಮುನಿಗಳು ಅವರಿಗೆ—"ನೀವು ದೈತ್ಯರಾಗಿರಿ" ಎಂದು ಶಾಪಕೊಟ್ಟರು; ಆ ಮೇಲೆ ಆ ಮುನಿಗಳು ಕರುಣಾಳುಗಳಾಗಿ ಅವರಿಗೆ—"ನೀವು ಮೂರು ಜನ್ಮಗಳಾದ ಮೇಲೆ ಪುನಃ ಸ್ವಪದಕ್ಕೆ ಬರುವಿರಿ" ಎಂದು ಹೇಳಿದರು. ಆ ಜಯವಿಜಯರೇ ಮೊದಲನೇಯ ಜನ್ಮದಲ್ಲಿ ದಿತಿಯ ಹೊಟ್ಟೆಯಲ್ಲಿ ಹಿರಣ್ಯಾಕ್ಷ-ಹಿರಣ್ಯಕಶಿಪುಗಳಾಗಿ ಹುಟ್ಟಿದರು. ಅವರನ್ನು ಭಗವಂತನು ಕ್ರಮವಾಗಿ ವರಾಹ, ನೃಸಿಂಹಾವತಾರಗಳಿಂದ ಸಂಹರಿಸಿದನು. ಆಗ ಹಿರಿಯನಾದ ಹಿರಣ್ಯಕಶಿಪುವು ತನ್ನ ಮಗನಾದ ಭಗವದ್ಭಕ್ತ ಪ್ರಹ್ರಾದನನ್ನು ನಾಶಗೊಳಿಸಬೇಕೆಂದು ಮಾಡಿದ ಯತ್ನಗಳೆಲ್ಲ ವ್ಯರ್ಥವಾದವು. ಇರಲಿ. ಮುಂದೆ ಎರಡನೆಯ ಜನ್ಮದಲ್ಲಿ ಅವರು ವಿಶ್ರವಸ್ಸುವಿನ ಪತ್ನಿಯಾದ ಕೇಶಿನಿಯ ಹೊಟ್ಟೆಯಲ್ಲಿ ರಾವಣ-ಕುಂಭಕರ್ಣರಾಗಿ ಹುಟ್ಟಲು, ಅವರನ್ನು ಶ್ರೀ ರಾಮನು ಸಂಹರಿಸಿದನು. ಈಗ ಅವರೇ ಇಬ್ಬರು ಮೂರನೆಯ ಜನ್ಮದಲ್ಲಿ ನಿಮ್ಮ ಅಬಚಿಯ ಹೊಟ್ಟೆಯಲ್ಲಿ ಶಿಶುಪಾಲ-ವಕ್ರದಂತರಾಗಿ ಹುಟ್ಟಿದ್ದರು. ವಿಷ್ಣುಚಕ್ರದಿಂದ ಅವರ ಪಾಪಗಳು ಭಸ್ಮವಾಗಲು, ಶತ್ರುತ್ವದ ನಿದಿಧ್ಯಾಸದ ಮೂಲಕ ಅವರು ಸಾಯುಜ್ಯ ಮುಕ್ತಿಯನ್ನು ಹೊಂದಿದರು.

## ೨ ನೃಸಿಂಹ-ಹರಲೀಲೆ

ಪ್ರಹ್ರಾದ ಚರಿತ್ರ:—ಈ ಮೇರೆಗೆ ನಾರದರು ಹೇಳಲು, ಧರ್ಮರಾಜನು—ಮುನಿಶ್ರೇಷ್ಠಾ, ಭಗವದ್ಭಕ್ತನಾದ ಪ್ರಹ್ರಾದನನ್ನು ಆತನ ತಂದೆ ಹಿರಣ್ಯಕಶಿಪುವು ಹಲವು ಯಾತನೆಗಳಿಗೆ ಗುರಿಮಾಡಿದ ಕಾರಣವೇನು? ಅದನ್ನು ನನಗೋಸ್ಕರ ದಯಮಾಡಿ ಹೇಳಬೇಕು, ಎಂದು ಪ್ರಾರ್ಥಿಸಿದನು. ಆಗ ನಾರದನು—ಧರ್ಮರಾಜಾ, ಭಗವಂತನು ವರಾಹ ರೂಪದಿಂದ ಹಿರಣ್ಯಾಕ್ಷನನ್ನು ಸಂಹರಿಸಿದ ಸುದ್ದಿಯನ್ನು ಕೇಳಿ ಆತನ ಅಣ್ಣನಾದ ಹಿರಣ್ಯಕಶಿಪುವು ಸಿಟ್ಟಿನಿಂದ ಹುಚ್ಚಾದನು. ಆತನು ತನ್ನ ಸಭೆಯಲ್ಲಿ ಯಾವತ್ತು ದೈತ್ಯ ದಾನವರನ್ನು ಕುರಿತು—ಎಲೈ ದೈತ್ಯ ದಾನವರುಗಳಿರಾ, ತಮ್ಮನ ಸೇಡು ಯಾವಾಗ ತೀರಿಸಿಕೊಂಡೇನೆನ್ನುವಹಾಗೆ ನನಗೆ ಆಗಿದೆ! ಶೂಲದಿಂದ ಆ ವಿಷ್ಣುವಿನ ಮಸ್ತಕವನ್ನು ಸೀಳಿ ಅವನ ರಕ್ತದಿಂದ ನನ್ನ ತಮ್ಮನಿಗೆ ತರ್ಪಣಕೊಟ್ಟಾಗ ನನಗೆ ಸಮಾಧಾನವಾಗುವದು; ಆದ್ದರಿಂದ ಎಲೈ ದ್ವಿಮೂರ್ಧನ್, ಎಲೈ ತ್ರಿನೇತ್ರಾ, ಎಲೈ ಶಂಬರಾ, ಎಲೈ ಶತಬಾಹೋ, ಎಲೈ ಹಯಗ್ರೀವ-ನಮುಚಿ- ಇಲ್ವಲ-ವಿಪ್ರಚಿತ್ತಿ-ಪುಲೋಮನ್-ಶಕುನಿ ಮೊದಲಾದ ದೈತ್ಯರೇ, ನೀವೆಲ್ಲರು ಪೃಥ್ವಿಯಲ್ಲಿ ಹರಿಬಿದ್ದು ಬ್ರಾಹ್ಮಣರ ಯಜ್ಞಯಾಗಾದಿಗಳನ್ನು ಕೆಡಿಸಿರಿ; ಮತ್ತು ತಪಸ್ವಿಗಳ ತಪಸ್ಸಿಗೆ ವಿಘ್ನಮಾಡಿರಿ; ಅದರಂತೆ ವೇದಾಧ್ಯಯನವನ್ನು ನಡೆಯಗೊಡಬೇಡಿರಿ! ವೀರರೇ, ನಿರಪರಾಧಿಗಳಾದ ಬ್ರಾಹ್ಮಣರನ್ನು ಹ್ಯಾಗೆ ಪೀಡಿಸೋಣವೆಂದು ನೀವು ಸರ್ವಥಾ ಹಿಂದೆಮುಂದೆ ನೋಡತಕ್ಕದ್ದಲ್ಲ. ಯಾಕಂದರೆ ಯಜ್ಞಯಾಗಾದಿ ಧರ್ಮಕೃತ್ಯಗಳಿಂದ ಅವರು ವಿಷ್ಣುವಿನ ಬಲವನ್ನು ಹೆಚ್ಚಿಸುವರು; ಆದ್ದರಿಂದಲೇ ವಿಷ್ಣುವು ದೇವತೆಗಳಿಗೂ, ಋಷಿಗಳಿಗೂ, ಪಿತೃಗಳಿಗೂ, ಸರ್ವ ಭೂತಗಳಿಗೂ ಆಶ್ರಯಕೊಡುವನು! ಹೀಗೆ ನಮ್ಮ ಶತ್ರುಗಳಿಗೆ ಆಶ್ರಯಕೊಡುವ ಬ್ರಾಹ್ಮಣರೂ ನಮ್ಮ ಶತ್ರುಗಳೇ ಆದ್ದರಿಂದ ಅವರನ್ನು ಛಲಿಸಬೇಕು, ಎಂದು ಹೇಳಲು, ತಮ್ಮ ಮನಸ್ಸಿಗೆ ಸೇರಿಕೆಯಾದದ್ದನ್ನೇ ದೈತ್ಯರಾಜನು ತಮಗೆ ಮಾಡಹೇಳಿದ್ದರಿಂದ, ದೈತ್ಯ-ದಾನವ-ಸ್ತೋಮವು ಹಿರಿಹಿರಿಹಿಗ್ಗಿ ಒಂದಕ್ಕೆ ಎರಡುಮಾಡಿ ಗೋ-ಬ್ರಾಹ್ಮಣರನ್ನು ಪರಿಪರಿಯಾಗಿ ಕಾಡುತ್ತ, ಜನರನ್ನು ತಿಕ್ಕಿಮುಕ್ಕುತ್ತ, ಊರು-ಕೇರಿಗಳನ್ನು ಸುಟ್ಟು ಸೂರೆಮಾಡತೊಡಗಿತು!

ಶಿಶುರೂಪದಯಮನಬೋಧವು:—ಇತ್ತ ಹಿರಣ್ಯಕಶಿಪುವು ತನ್ನ ದುಃಖವನ್ನು ನುಂಗಿಕೊಂಡು ತಮ್ಮನ ಔರ್ಧ್ವದೇಹಿಕ ಕರ್ಮವನ್ನು ತೀರಿಸಿ, ತನ್ನ ತಾಯಿಯಾದ ದಿತಿಯನ್ನೂ, ಹಿರಣ್ಯಾಕ್ಷನ ಹೆಂಡಿರು-ಮಕ್ಕಳನ್ನೂ ಸಮಾಧಾನಪಡಿಸುವದಕ್ಕಾಗಿ ಅವರನ್ನು ಕುರಿತು—ಅವ್ವಾ, ನಾದನಿಯೇ, ಮಕ್ಕಳಿರಾ, ವೀರಪುರುಷರ ಮರಣದ ವಿಷಯವಾಗಿ ಶೋಕಮಾಡುವದು ಯೋಗ್ಯವಲ್ಲ. ಶತ್ರುವಿನೊಡನೆ ಕಾದುವಾಗ ಮರಣವು ಒದಗಬೇಕೆಂದು ಅವರು ಇಚ್ಛಿಸುತ್ತಲೇ ಇರುವರು. ದೇಹವು ನಾಶವಂತವು; ಅದರ

ಚೈತನ್ಯವು ಹೊರಟು ಹೋದಕೂಡಲೆ ಅದು ಬೀಳುತ್ತದೆ. ಆ ಚೈತನ್ಯರೂಪ ಆತ್ಮಕ್ಕೆ ಮಾತ್ರ ನಾಶವಿಲ್ಲ-ಕ್ಷಯವೃದ್ಧಿಗಳೂ ಇಲ್ಲ; ಅದು ಯಾವಾಗಲೂ ಒಂದೇಸಮನಾಗಿದ್ದು, ನಿರ್ಮಲವಾಗಿರುವದು. ಅವ್ವಾ! ಹಿಂದಕ್ಕೆ ಸುಯಜ್ಞನೆಂಬ ರಾಜನು ಯುದ್ಧದಲ್ಲಿ ಮರಣಹೊಂದಲು, ಅವನ ಹೆಂಡಿರು ಶವದ ಮೇಲೆ ಬಿದ್ದು ಬಿದ್ದು ಅಳುತ್ತ ಆಕ್ರೋಶಮಾಡತೊಡಗಿದರು. ಹೊತ್ತು ಮುಣುಗಿದರೂ ದಹನಕ್ಕೆ ಶವವನ್ನು ಕೊಡಲೊಲ್ಲರು. ಅದನ್ನು ನೋಡಿ ಯಮನು ಸಣ್ಣ ಹುಡುಗನಾಗಿ ಬಂದು ರಾಜನ ಹೆಂಡಿರನ್ನು ಕುರಿತು—ಎಲ ಎಲಾ, ಇಲ್ಲಿ ಇದ್ದವರೆಲ್ಲ ನನಗಿಂತ ದೊಡ್ಡವರಿದ್ದು, ದಿನಾಲು ಒದಗುತ್ತಿರುವ ಹುಟ್ಟು-ಸಾವುಗಳನ್ನು ನೋಡಿದವರಾಗಿದ್ದರೂ ಎಷ್ಟು ಮೋಹಗ್ರಸ್ತರಾಗಿರುವಿರಲ್ಲ! ಮನುಷ್ಯನು ಎಲ್ಲಿಂದಬಂದನೋ ಅಲ್ಲಿಗೆ ಹೋದರೆ, ಅದಕ್ಕಾಗಿ ಯಾಕೆ ಅಳಬೇಕು? ರಾಜನು ಹೋದಂತೆ ಇವರೂ ಹೋಗತಕ್ಕವರೇ ಆಗಿರಲು, ಇವರು ಶೋಕಪಡುವದು ಆಶ್ಚರ್ಯವಲ್ಲವೆ! ಅಂದಬಳಿಕ ಇವರಿಗಿಂತ ನಾನೇ ಬೇಕು; ಯಾಕಂದರೆ ತಾಯಿತಂದೆಗಳಿಬ್ಬರೂ ನನ್ನನ್ನು ಪರದೇಶಿಮಾಡಿ ಹೋಗಿದ್ದರೂ, ನಾನು ಅದರಚಿಂತೆಯನ್ನೇ ಮಾಡುವದಿಲ್ಲ. ಹೊಟ್ಟೆಯಲ್ಲಿ ನನ್ನನ್ನು ರಕ್ಷಿಸಿದ ದೇವರೇ ಈಗಲೂ ನನ್ನನ್ನು ರಕ್ಷಿಸುವನು. ಸ್ತ್ರೀಯರುಗಳಿರಾ, ನಿರ್ವಿಕಾರನಾದ ಪ್ರಭುವು ತನ್ನ ಇಚ್ಛೆಯಂತೆ ವಿಶ್ವದ ಉತ್ಪತ್ತಿ-ರಕ್ಷಣ-ನಾಶಗಳನ್ನು ಮಾಡಿ ಕ್ರೀಡಿಸುತ್ತಿರಲು, ಸುಮ್ಮ ಸಮ್ಮನೆ ನೀವೇಕೆ ಅಳುತ್ತೀರಿ? ಬೀದಿಯೊಳಗೆ ಬಿದ್ದವಸ್ತುವೂ ಈಶ್ವರೇಚ್ಛೆಯಿಂದ ಸುರಕ್ಷಿತವಾಗಿರಬಹುದು; ಆದರೆ ಮನೆಯಲ್ಲಿ ಭದ್ರವಾಗಿ ಬಚ್ಚಿಟ್ಟಿದ್ದ ವಸ್ತುವು ಆತನ ಇಚ್ಛೆಯಿಂದ ಇಲ್ಲದಾದೀತು. ಸ್ಥೂಲಶರೀರದ ಉತ್ಪತ್ತಿಯ ಕಾರಣವು ಆ ಪ್ರಾಣಿಯ ಸೂಕ್ಷ್ಮಶರೀರವಾಗಿರುವದು, ಸೂಕ್ಷ್ಮಶರೀರದ ಪ್ರಾಕ್ತನಕರ್ಮದಿಂದ ಅದಕ್ಕೆ ಅನೇಕ ಜನ್ಮಗಳು ಪ್ರಾಪ್ತವಾಗುವವೆಂಬದು ಸಾರ್ವತ್ರಿಕ ನಿಯಮವಾಗಿರುವದು. ಆತ್ಮನು ದೇಹದಲ್ಲಿದ್ದರೂ, ಆತನು ಜನ್ಮ-ಮರಣ ಮೊದಲಾದ ಉಪಾಧಿಗಳಿಂದ ಅಲಿಪ್ತನಾಗಿರುವನು. ಕೆಲವರು ದೇಹವನ್ನೇ ಆತ್ಮನೆಂದು ತಿಳಿಯುವರು; ಆದರೆ ಆ ದೃಶ್ಯವೆಂದರೆ ಜಡವಾದ ದೇಹವನ್ನು ಆತ್ಮನೆಂದು ತಿಳಿಯುವದು ಅಜ್ಞಾನವೇ ಸರಿ! ಆತ್ಮನು ದೇಹದಲ್ಲಿದ್ದ ಮಾತ್ರದಿಂದ ಆತನಿಗೆ ದೇಹವೆನ್ನುತ್ತಿದ್ದರೆ, ಮನುಷ್ಯನು ಮನೆಯಲ್ಲಿದ್ದ ಮಾತ್ರದಿಂದ ಮನುಷ್ಯನಿಗೆ ಮನೆಯೆನ್ನಬೇಕಾದೀತಲ್ಲ! ಅಹೋ, ಕೊಡವು ಒಡೆಯುವಹಾಗೆ, ನೀರಗುಳ್ಳೆಯು ನಷ್ಟವಾಗುವಹಾಗೆ, ಕಟಕಕುಂಡಲಾದಿ ಅಲಂಕಾರಗಳು ಮುರಿಯುವ ಹಾಗೆ ನೀರು-ಮಣ್ಣು-ತೇಜಸ್ಸು ಎಂಬ ಮೂರು ದ್ರವ್ಯಗಳಿಂದಾದ ಈ ದೇಹವು ಕಾಲಶಕ್ತಿಯಿಂದ ಕ್ಷೀಣವಾಗಿ ನಾಶಹೊಂದುವದು! ಎಲೈ ಸ್ತ್ರೀಯರೇ, ಬೆಂಕಿಯು ಕಟ್ಟಿಗೆ ಮೊದಲಾದವನ್ನು ಆಶ್ರಯಿಸಿದ್ದರೂ, ದಾಹ-ಪ್ರಕಾಶಾದಿ ಗುಣಗಳಿಂದ ಆ ಅಗ್ನಿಯು ಕಾಷ್ಠಾದಿಗಳಿಂದ ಬೇರೆಯಾಗಿ ಕಾಣುವಂತೆ, ಆತ್ಮನು ಶರೀರದಲ್ಲಿದ್ದರೂ ಪ್ರಾಣ, ಮುಖ, ನಾಶಿಕ ಇತ್ಯಾದಿ ಸ್ಥಾನಗಳಲ್ಲಿ ಚೈತನ್ಯರೂಪ ವಿಶಿಷ್ಟಗುಣದಿಂದ ಅವನು ಭಿನ್ನವಾಗಿ ತೋರುವನು; ಮತ್ತು ಆಕಾಶವು ಸರ್ವತ್ರ ವ್ಯಾಪ್ತವಾಗಿದ್ದೂ, ಅದು ಅಲಿಪ್ತವಾಗಿ ತೋರುವಂತೆ,

ಆತ್ಮನು ಸರ್ವಸ್ಥಿರ-ಚರಪದಾರ್ಥಗಳಲ್ಲಿ ವ್ಯಾಪ್ತನಾಗಿದ್ದೂ, ಅವುಗಳಿಂದ ಅಲಿಪ್ತನಾಗಿ ತೋರುವನು. ತಿಳಿಗೇಡಿಗಳೇ, ದೇಹವೇ ಆತ್ಮವಿದ್ದಪಕ್ಷದಲ್ಲಿ ನಿಮ್ಮ ಸುಯಜ್ಞನ ದೇಹವು ಮುಂದೆ ಬಿದ್ದಿರುವಾಗ ಅಳುವಿರೇಕೆ? ಇನ್ನು, ಆತನು ನಮ್ಮ ಸಂಗಡ ಮಾತಾಡುವದಿಲ್ಲ, ನಮ್ಮ ಕಡೆಗೆ ನೋಡುವದಿಲ್ಲ, ಆದ್ದರಿಂದ ಆತನು ಸತ್ತನೆಂದು ತಿಳಿದು ಅಳುತ್ತೇವೆನ್ನುತ್ತಿದ್ದರೆ, ಇಷ್ಟು ದಿವಸ ನಿಮ್ಮ ಸಂಗಡ ಮಾತಾಡುತ್ತಿದ್ದ, ಹಾಗು ನಿಮ್ಮನ್ನು ನೋಡುತ್ತಿದ್ದ ಆ ಎರಡನೆಯವನು ಎಂದಾದರೂ ನಿಮ್ಮ ಕಣ್ಣಿಗೆ ಬಿದ್ದಿದ್ದನೇ ನೀವೇ ಹೇಳಿರಿ! ಸರ್ವೇಂದ್ರಿಯಗಳ ವ್ಯಾಪಾರದ ಮುಖ್ಯ ಹೇತುವಾದ ಪ್ರಾಣವೂ ಕೂಡ, ನೋಡುವವನೂ-ಮಾತಾಡುವವನೂ ಆಗದಿರುವಾಗ ಆ ನೋಡುವ-ಮಾತಾಡುವ ಕಾರ್ಯಗಳನ್ನು ಜಡದೇಹವು ಹ್ಯಾಗೆ ಮಾಡೀತು? ಸರ್ವೇಂದಿಯಗಳ ಯೋಗದಿಂದ ಅವುಗಳ ವಿಷಯಗಳ ಅವಲೋಕನ ಮಾಡುವ ಆತ್ಮನು, ಪ್ರಾಣದಿಂದಲೂ-ದೇಹದಿಂದಲೂ ಬೇರೆಯಾಗಿರುವನು. ಭೂತಗಳು, ಇಂದ್ರಿಯಗಳು, ಮನಸ್ಸು ಇವುಗಳ ಐಕ್ಯದಿಂದ ಈ ಉಚ್ಚನೀಚ ಶರೀರಗಳು ಉತ್ಪನ್ನವಾಗುವವು. ಜೀವಾತ್ಮನು ಆ ಶರೀರಗಳ ಅಭಿಮಾನವನ್ನು ವಹಿಸುವವರೆಗೆ ಜನ್ಮಮರಣಗಳ ಸುತ್ತುಗಳಲ್ಲಿ ಆತನು ಸಿಕ್ಕಿಕೊಳ್ಳುವನು; ಅದೇ ಆತನು ಸ್ವಸ್ವರೂಪಜ್ಞಾನವನ್ನು ಪಡೆದು ಅಭಿಮಾನತ್ಯಾಗಮಾಡಿದ ಕೂಡಲೆ ಸಚ್ಚಿನ್ಮಯಪದದಲ್ಲಿ ಲೀನನಾಗಿ ಪರಬ್ರಹ್ಮದಲ್ಲಿ ಕೂಡಿಹೋಗುವನು. ಸ್ತ್ರೀಯರುಗಳಿರಾ, ವ್ಯವಹಾರವೆಲ್ಲ ಮಾಯೆಯ ಆಟವು. ನೀವು ಸುಯಜ್ಞರಾಜನು ಸತ್ತನೆಂದು ಅಳುತ್ತೀರಿ; ಆದರೆ ನೀವು ಎಂದು ಸಾಯುವಿರೆಂಬದು ನಿಮಗೆ ಗೊತ್ತಿರುವದೇ? ಕುಲಿಂಗವೆಂಬ ಒಂದು ಗಂಡುಪಕ್ಷಿಯು, ತನ್ನ ಹೆಣು, ಬಲೆಯಲ್ಲಿ ಸಿಕ್ಕಿತೆಂದು ಚಿಂತಿಸುತ್ತ ಕುಳಿತಾಗ ಮರೆಗೆ ಕುಳಿತಿದ್ದ ಬೇಟೆಗಾರನು ಬಾಣದಿಂದ ಅದನ್ನೂ ನೆಲಕ್ಕೆ ಕೆಡವಿದನಂತೆ! ಆದ್ದರಿಂದ ಸ್ತ್ರೀಯರೇ, ಎಲ್ಲವೂ ಈಶ್ವರಾಧೀನವಾಗಿರುವಾಗ, ನೀವು ನೂರುವರ್ಷ ಹೀಗೆ ಅಳುತ್ತ ಕುಳಿತರೂ ನಿಮ್ಮ ಪತಿಯುಬದುಕುವದಿಲ್ಲವು, ಎಂದು ಹೇಳಿ, ಆ ಬಾಲರೂಪ ಯಮನು ಗುಪ್ತನಾದನು. ಆಗ ಎಲ್ಲರ ಭ್ರಮವು ದೂರವಾಗಿ, ಅವರು ಸುಯಜ್ಞರಾಜನ ಔರ್ಧ್ವದೇಹಿಕ ಕರ್ಮವನ್ನು ಮಾಡಿದರು; ಆದ್ದರಿಂದ—ಅವ್ವಾ, ತಂಗೀ, ಮಕ್ಕಳಿರಾ, ನೀವು ನಿಮ್ಮ ಸಲುವಾಗಿ, ಅಥವಾ ಅನ್ಯರ ಸಲುವಾಗಿ ಎಷ್ಟುಮಾತ್ರವೂ ದುಃಖಿಸಬೇಡಿರಿ; ಯಾಕಂದರೆ ಇಲ್ಲಿ ನಮ್ಮದೇನಿರುತ್ತದೆ? ಪ್ರಾಣಿಗಳು "ನಾನು" "ನೀನು" ಎಂಬ ಅಭಿಮಾನವಹಿಸುವದು ಅಜ್ಞಾನವಾಗಿರುವದು. ಆ ಅಜ್ಞಾನವು ನಷ್ಟವಾದರೆ ಶೋಕಕ್ಕೆ ಆಸ್ಪದವೇ ಇಲ್ಲ.

**ಹಿರಣ್ಯಕಶಿಪುವಿಗೆ ವರಪ್ರಾಪ್ತಿಯು:**—ಈ ಮೇರೆಗೆ ಹಿರಣ್ಯಕಶಿಪುವು ತನ್ನ ಆಪ್ತರನ್ನು ಸಮಾಧಾನಪಡಿಸಿ ತಾನು ಅಜಿಂಕ್ಯನಾಗಬೇಕೆಂದು ತಪಶ್ಚರ್ಯಕ್ಕಾಗಿ ಮಂದರಪರ್ವತಕ್ಕೆ ಹೋದನು. ಅಲ್ಲಿಯ ಗುಹೆಯಲ್ಲಿ ಆತನು ಊರ್ಧ್ವಬಾಹುವಾಗಿ ಆಕಾಶವನ್ನು ನೋಡುತ್ತ ಕಾಲಹೆಬ್ಬೆರಳುಗಳ ಮೇಲೆ ನಿಂತು ಘೋರತಪಶ್ಚರ್ಯ ಮಾಡತೊಡಗಿದನು. ಆತನ ತಪಸ್ತೇಜದಿಂದ ತ್ರೈಲೋಕ್ಯಕ್ಕೆ ಬಾಧೆಯಾಗ ತೊಡಗಿತು.

ಆಗ ದೇವತೆಗಳು ಬ್ರಹ್ಮದೇವನ ಬಳಿಗೆ ಹೋಗಿ—ದೇವಾ, ಹಿರಣ್ಯಕಶಿಪುವಿನ ತಪಸ್ಸಿನಿಂದ ನಮಗೆ ಬಹಳ ತ್ರಾಸವಾಗುತ್ತಿದ್ದು, ಸ್ವರ್ಗದಲ್ಲಿರಲು ನಾವು ಅಸಮರ್ಥರಾಗಿರುವೆವು. ಭೂಲೋಕದಲ್ಲಿಯೂ ಹಾಹಾಕಾರವುಂಟಾಗಿದೆ; ಆದ್ದರಿಂದ ನಮಗೆ ಹವಿರ್ಭಾಗಗಳನ್ನು ಕೊಡುವವರು ಜೀವದಿಂದಿರುವದರೊಳಗೆ ಈ ಅರಿಷ್ಟದ ಪ್ರತಿಕಾರವನ್ನು ಮಾಡಬೇಕೆಂದು ಪ್ರಾರ್ಥಿಸುತ್ತೇವೆ. ದೇವಾ, ಹಿರಣ್ಯಕಶಿಪುವಿನ ಮನಸ್ಸಿನಲ್ಲಿ ನಿನ್ನ ಪದವನ್ನು ಸಂಪಾದಿಸುವ ಇಚ್ಛೆಯಿರುತ್ತದೆಂದು ಕೇಳುತ್ತೇವೆ! ಹಾಗಾದರೆ ಸಾಧುಗಳಿಗೆ ಬಹಳ ದುಃಖವಾಗಿ, ಅವರಿಗೆ ರಕ್ಷಕರು ಯಾರೂ ಉಳಿಯಲಿಕ್ಕಿಲ್ಲ, ಎಂದು ಹೇಳಲು, ಬ್ರಹ್ಮದೇವನು, ದಕ್ಷ-ಭೃಗು ಮೊದಲಾದವರನ್ನು ಕರಕೊಂಡು ಹಿರಣ್ಯಕಶಿಪುವಿನ ಆಶ್ರಮಕ್ಕೆ ಬಂದನು! ಆದರೆ ಆ ದೈತ್ಯನು ಅಲ್ಲಿ ಕಾಣಲಿಲ್ಲ. ಆತನ ಮೈಮೇಲೆ ಹುತ್ತು ಬೆಳೆದಿದ್ದು, ಆತನ ಮೈಯೊಳಗಿನ ರಕ್ತಮಾಂಸಾದಿಗಳನ್ನೆಲ್ಲ ಇರುವೆಗಳು ತಿಂದು ಬಿಟ್ಟಿದ್ದವು. ಇಷ್ಟಾದರೂ ಆತನು ಮೋಡಮುಚ್ಚಿದ ಸೂರ್ಯನಂತೆ ತನ್ನ ತಪೋವೀರ್ಯದಿಂದ ತಾಪಗೊಳಿಸುತ್ತಿದ್ದನು. ಆಗ ಬ್ರಹ್ಮದೇವನು ಮುಗುಳುನಗೆ ನಗುತ್ತ ಹಿರಣ್ಯಕಶಿಪುವನ್ನು ಕುರಿತು—ಎಲೈ ದೈತ್ಯರಾಜನೇ, ಏಳು ಏಳು, ನಿನ್ನ ಕಲ್ಯಾಣವಾಗಲಿ. ನಿನ್ನಂಥ ಉಗ್ರತಪಸ್ವಿಯನ್ನು ನಾನು ಹಿಂದೆಯೂ ನೋಡಲಿಲ್ಲ, ಮುಂದೆಯೂ ನೋಡಲಿಕ್ಕಿಲ್ಲ. ದಿತಿಪುತ್ರಾ, ನೀನು ಕೇವಲ ನಿರ್ಧಾರದಿಂದಲೇ ನನ್ನನ್ನು ಜಯಿಸಿರುವೆ; ನಾನು ನಿನಗೆ ಅಧೀನನಾಗಿರುವೆನು; ಬೇಕಾದ ವರಗಳನ್ನು ಬೇಡಿಕೋ, ಎಂದು ಹೇಳಿ, ತನ್ನ ಕಮಂಡಲೂದಕವನ್ನು ಹುತ್ತಿನ ಮೇಲೆ ಪ್ರೋಕ್ಷಿಸಲು, ಹಿರಣ್ಯಕಶಿಪುವು ಉತ್ಸಾಹ-ಸಾಮರ್ಥ್ಯ-ತೇಜಸ್ಸುಗಳುಳ್ಳವನಾಗಿ ಹುತ್ತಿನಿಂದ ಹೊರಗೆ ಬಂದು ಬ್ರಹ್ಮದೇವನಿಗೆ ಸಾಷ್ಟಾಂಗವೆರಗಿ ಬಗೆಬಗೆಯಿಂದ ನುತಿಸಿ—"ದೇವಾ, ವರಕೊಡಲು ಸಿದ್ಧನಾಗಿದ್ದರೆ, ನಿನ್ನ ದಾಸಾನುದಾಸನಾದ ಈ ಹಿರಣ್ಯಕಶಿಪುವಿನ ವರಯಾಚನೆಯನ್ನು ಪೂರ್ಣಮಾಡು. ದೇವಾ, ನೀನು ಉತ್ಪನ್ನ ಮಾಡಿರುವ ಯಾವ ಪ್ರಾಣಿಗಳಿಂದಲೂ ನನಗೆ ಮರಣವು ಒದಗಬಾರದು. ಅದರಂತೆ ಹಗಲಿನಲ್ಲಿ ಅಥವಾ ರಾತ್ರಿಯಲ್ಲಿ, ಒಳಗೆ ಅಥವಾ ಹೊರಗೆ, ಪೃಥ್ವಿಯಲ್ಲಿ ಅಥವಾ ಆಕಾಶದಲ್ಲಿ, ದೈತ್ಯರು-ಮನುಷ್ಯರು-ದೇವತೆಗಳು-ಪಶುಗಳು-ಪಕ್ಷಿಗಳು-ಸರ್ಪಗಳು-ಸಜೀವ ಅಥವಾ ನಿರ್ಜೀವವಸ್ತುಗಳು ಮೊದಲಾದ ಯಾವ ಪದಾರ್ಥಗಳಿಂದಲೂ ಎಲ್ಲಿಯೂ ಮರಣವು ಉಂಟಾಗಬಾರದು. ನನ್ನ ಸಮ್ಮುಖದಲ್ಲಿ ಯಾವನೂ ಯುದ್ಧಸನ್ನದ್ಧನಾಗಿ ನಿಲ್ಲಬಾರದು. ಎಲ್ಲ ಪ್ರಾಣಿಗಳಮೇಲೆ ನನ್ನ ಒಬ್ಬನ ಅಧಿಕಾರವೇ ನಡೆಯಬೇಕು; ಮತ್ತು ಲೋಕಪಾಲರ ಆಧಿಪತ್ಯವೂ, ನಿನ್ನ ಸ್ವಂತದಸ್ಥಾನವೂ ನನಗೆ ಪ್ರಾಪ್ತವಾಗಿ, ಅವುಗಳಿಂದ ನಾನು ಎಂದೂ ಭ್ರಷ್ಟನಾಗಬಾರದು, ಎಂದು ಕೇಳಿಕೊಂಡನು. ಆತನ ತಪಶ್ಚರ್ಯಕ್ಕೆ ಮೆಚ್ಚಿದ್ದ ಬ್ರಹ್ಮದೇವನು ಇಂಥ ದುರ್ಲಭ ವರವನ್ನೂ ಕೊಟ್ಟು, ಹಿರಣ್ಯಕಶಿಪುವಿನಿಂದ ಪೂಜೆಗೊಂಡು ಸತ್ಯಲೋಕಕ್ಕೆ ಹೊರಟು ಹೋದನು.

ಇತ್ತ ಬ್ರಹ್ಮನ ವರದಿಂದ ಹೇಮಮಯ ಶರೀರವನ್ನು ಧರಿಸಿದ ಹಿರಣ್ಯಕಶಿಪುವು

ತಾನು ಇನ್ನು ಅಜೇಂಕ್ಯನಾದೆನೆಂದು ತಿಳಿದು ತನ್ನ ತಮ್ಮನ ಮರಣದ ಸೇಡು ತೀರಿಸಿಕೊಳ್ಳಲು ಆತುರಪಟ್ಟು ಭಗವಾನ್ ವಿಷ್ಣುವಿನ ದ್ವೇಷಮಾಡತೊಡಗಿದನು. ಆ ಪ್ರಬಲ ದೈತ್ಯನು ತ್ರೈಲೋಕ್ಯಗಳನ್ನು ಗೆದ್ದು, ನಂದನವನದೊಳಗಿನ ಇಂದ್ರನ ವಸತಿಸ್ಥಾನದಲ್ಲಿಯೇ ಇರಹತ್ತಿದನು. ಬ್ರಹ್ಮ–ವಿಷ್ಣು–ಮಹೇಶ್ವರರ ಹೊರತು ಉಳಿದ ದೇವತೆಗಳೆಲ್ಲ ಅವನನ್ನು ಸೇವಿಸತೊಡಗಿದರು. ವಿಶ್ವಾವಸು, ತುಂಬುರು, ನಾನು, ಗಂಧರ್ವರು, ಸಿದ್ಧರು ಆತನ ಮುಂದುಗಡೆಯಲ್ಲಿ ಗಾಯನ ಮಾಡುತ್ತಲಿದ್ದೆವು; ವಿದ್ಯಾಧರರೂ, ಅಪ್ಸರರೂ ನೃತ್ಯ ಮಾಡುತ್ತಿದ್ದರು; ಋಷಿಗಳು ಅವನನ್ನು ಸ್ತುತಿಸತೊಡಗಿದ್ದರು; ಪೃಥ್ವಿಯ ಮೇಲಿನ ಜನರು ಯಜ್ಞಯಾಗಾದಿಗಳನ್ನು ಮಾಡಿ ಆತನನ್ನು ಆರಾಧಿಸುತ್ತಿದ್ದರು; ಆತನೂ ತನ್ನ ಸಾಮರ್ಥ್ಯದಿಂದ ಹವಿರ್ಭಾಗವನ್ನು ಸ್ವೀಕರಿಸುತ್ತಿದ್ದನು! ಧರ್ಮರಾಜಾ, ಆ ಪರಾಕ್ರಮಿಯಾದ ದೈತ್ಯನ ದರ್ಪದಿಂದ ಸಪ್ತ ದ್ವೀಪವತೀ ಭೂಮಿಯು ಗೆಯ್ಮೆದೆ ಬೆಳೆಯುತ್ತಿತ್ತು; ಮೇಘಗಳು ಕಾಲಕಾಲಕ್ಕೆ ಮಳೆಸುರಿಸಹತ್ತಿದವು; ಸಮುದ್ರನೂ ಆತನ ಹೆಂಡಿರೂ ತಮ್ಮ ತೆರೆಗಳಿಂದ ಅಮೂಲ್ಯರತ್ನರಾಶಿಗಳನ್ನು ಆತನಿಗೆ ಅರ್ಪಿಸುತ್ತಿದ್ದರು. ಇಂಥ ವೈಭವಸಂಪನ್ನನಾಗಿ ಆ ದೈತ್ಯರಾಜನು ಶಾಸ್ತ್ರವಿರುದ್ಧವಾಗಿ ಆಚರಿಸುತ್ತಿರಲು, ಎಪ್ಪತ್ತೊಂದು ಯುಗಗಳಿಗಿಂತ ಹೆಚ್ಚು ಕಾಲವು ಕ್ರಮಿಸಿಹೋಯಿತು! ಆ ಮದೋನ್ಮತ್ತ ದೈತ್ಯನ ದುರ್ವರ್ತನದಿಂದ ತ್ರೈಲೋಕ್ಯಗಳು ತ್ರಸ್ತವಾದವು. ಆಗ ದೇವತೆಗಳೂ, ಋಷಿಗಳೂ, ಯಾವತ್ತೂ ಲೋಕಪಾಲಕರೂ ಮಹಾವಿಷ್ಣುವಿಗೆ ಶರಣುಹೋಗಿ ಸ್ತೋತ್ರ ಮಾಡಲು—"ಈ ದುಷ್ಟ ದೈತ್ಯನ ನಾಶಕಾಲವು ಸಮೀಪಿಸಿರುವದು, ಹೆದರಬೇಡರಿ; ಈತನ ಮಗನಾದ ಪ್ರಹ್ಲಾದನು ನನ್ನ ಭಕ್ತನಿದ್ದು, ಆತನನ್ನು ಈ ತಂದೆಯೇ ಕೊಲ್ಲಲು ಯತ್ನಿಸುವದರಿಂದ ನಾನು ಈ ದುಷ್ಟನ ಸಂಹಾರ ಮಾಡುವೆನು" ಎಂದು ಆಕಾಶವಾಣಿಯಾಯಿತು. ಆಗ ಎಲ್ಲರೂ ಸಮಾಧಾನಪಟ್ಟು ಭಗವಾನ್ ವಿಷ್ಣುವಿಗೆ ನಮಸ್ಕರಿಸಿ ತಮ್ಮ ತಮ್ಮ ಸ್ಥಳಗಳಿಗೆ ಹೊರಟುಹೋದರು.

**ಪ್ರಹ್ಲಾದನ ಗುಣಗಳು:**—ಧರ್ಮರಾಜಾ, ಪ್ರಹ್ಲಾದನ ಗುಣಗಳನ್ನು ವರ್ಣಿಸುವೆನು ಕೇಳು. ಹಿರಣ್ಯಕಶಿಪುವಿನ ಮಹಾ ಸಮರ್ಥರಾದ ನಾಲ್ವರು ಮಕ್ಕಳಲ್ಲಿ ಪ್ರಹ್ಲಾದನು ಎಲ್ಲರಿಗೂ ಹಿರಿಯನು. ಆತನು ಸುಶೀಲನೂ, ಸತ್ಯವಚನಿಯೂ, ಜಿತೇಂದ್ರಿಯನೂ ಇದ್ದು, ಬ್ರಾಹ್ಮಣರ ಕೈವಾರಿಯೂ, ಸಾಧುಗಳ ಸೇವಕನೂ ಆಗಿದ್ದನು. ಆತನು ತನ್ನ ವಿದ್ಯೆ, ಐಶ್ವರ್ಯ, ಕುಲೀನತೆ, ಸೌಂದರ್ಯ ಇವುಗಳ ಸಂಬಂಧದಿಂದ ಸ್ವಲ್ಪವಾದರೂ ಗರ್ವಪಡುತ್ತಿದ್ದಿಲ್ಲ. ಆತನು ಸರ್ವಭೂತಗಳಲ್ಲಿ ಒಬ್ಬ ಪರಮೇಶ್ವರನಿರುವನೆಂಬ ಬುದ್ಧಿಯುಳ್ಳವನಾಗಿದ್ದನು. ಆತನು ದೀನರ ಮೇಲೆ ತಂದೆಯಂತೆ ಲೋಭ ಮಾಡುವನು; ಸಮಾನಶೀಲರಲ್ಲಿ ಬಂಧುವಿನಂತೆ ನಡೆದುಕೊಳ್ಳುವನು; ಗುರುಜನರನ್ನು ಈಶ್ವರನೆಂದು ತಿಳಿಯುವನು; ಎಂಥ ಸಂಕಟಗಳೊದಗಿದರೂ ಆತನ ಶಾಂತವೃತ್ತಿಯು ಚಲಿಸುತ್ತಿದ್ದಿಲ್ಲ. ಆತನು ಇಂದ್ರಿಯ–ಪ್ರಾಣ–ಶರೀರ–ಬುದ್ಧಿಗಳ ನಿಯಮನ ಮಾಡಿ, ದೈತ್ಯಧರ್ಮವನ್ನು ಪೂರ್ಣವಾಗಿ ಬಿಟ್ಟುಬಿಟ್ಟಿದ್ದನು. ಅವನು ಯಾವತ್ತು ವಿಷಯ

ಗಳನ್ನು ತುಚ್ಛವೆಂದು ಭಾವಿಸುವನು. ಅವನ ಈ ಸದ್ಗುಣ-ಈಶ್ವರಭಕ್ತಿಗಳಿಗಾಗಿ ದೈತ್ಯರ ಶತ್ರುಗಳಾದ ದೇವತೆಗಳೂ ಆತನ ಸ್ತೋತ್ರಮಾಡಿ ಪ್ರೀತಿಯಿಂದ ಅವನನ್ನು ವಂದಿಸುತ್ತಿದ್ದರು. ಆತನು ಚಿಕ್ಕಂದಿನಿಂದಲೇ ಭಗವದ್ಭಕ್ತಿಯುಳ್ಳವನಾದದ್ದರಿಂದ ಆಟಪಾಟಗಳ ಗೊಡವಿಗೆ ಹೋಗದೆ, ಈಶ್ವರಧ್ಯಾನತತ್ಪರನಾಗಿರುತ್ತಿದ್ದನು. ಭಗವದ್ಭಕ್ತನ ಈ ನಡತೆಯು ಆತನ ತಂದೆಯಾದ ಹಿರಣ್ಯಕಶಿಪುವಿಗೆ ಸೇರಲಿಲ್ಲ. ಆ ದೈತ್ಯರಾಜನು ಶುಕ್ರಾಚಾರ್ಯರ ಮಕ್ಕಳಾದ ಶಂಡ, ಅಮರ್ಕ, ಎಂಬವರ ಬಳಿಯಲ್ಲಿ ಮಗನನ್ನು ವಿದ್ಯಾಭ್ಯಾಸಕ್ಕಾಗಿ ಇಟ್ಟನು; ಆದರೆ ಪ್ರಹ್ರಾದನು ರಾಜನೀತಿ ಮೊದಲಾದ ಲೌಕಿಕ ವಿದ್ಯೆಗಳಲ್ಲಿ ಮೊದಲೇ ನಿಪುಣನಿದ್ದದ್ದರಿಂದ, ದ್ವೈತಬುದ್ಧಿಯನ್ನೂ, ಅಹಂಕಾರವನ್ನೂ ಹೆಚ್ಚಿಸುವ ಆ ಲೌಕಿಕ ವಿದ್ಯೆಗಳಿಗೆ ಆತನು ಮೆಚ್ಚದಾದನು. ಒಂದುದಿನ ಹಿರಣ್ಯಕಶಿಪುವು ಮಗನನ್ನು ಆತನ ಗುರುಗಳ ಸಮಕ್ಷ ತೊಡೆಯ ಮೇಲೆ ಕುಳ್ಳಿರಿಸಿಕೊಂಡು—"ತಮ್ಮಾ, ನಿನಗೆ ಏನು ಸೇರುತ್ತದೆ" ಎಂದು ಕೇಳಲು, ಪ್ರಹ್ರಾದನು—ದೈತ್ಯಾಧಿಪತೇ, ಪ್ರಾಣಿಗಳು ಅಹಂಮಮತೆಯಿಂದ ಬದ್ಧರಾಗಿ ಈ ಸಂಸಾರರೂಪ ಅಂಧಃಕಾರದಲ್ಲಿ ಮುಣುಗಿಹೋಗಿ ಆತ್ಮನಾಶಮಾಡಿಕೊಳ್ಳುವರು; ಆದ್ದರಿಂದ ನಿವಾಂತವಾದ ವನದಲ್ಲಿ ಹೋಗಿ ಶ್ರೀ ಹರಿಯ ಆಶ್ರಯವನ್ನು ಸಂಪಾದಿಸುವದು ನನಗೆ ಸೇರುತ್ತದೆ" ಎಂದು ಹೇಳಿದನು. ಅದನ್ನು ಕೇಳಿ ಹಿರಣ್ಯಕಶಿಪುವು ನಕ್ಕು ಆತನ ಗುರುಗಳಿಗೆ—ಬ್ರಾಹ್ಮಣರೇ, ಸಣ್ಣ ಹುಡುಗರ ಕೋಮಲಮನಸ್ಸಿನ ಮೇಲೆ ಅನ್ಯರ ಬೋಧದ ಪರಿಣಾಮವು ಬಹು ಬೇಗನೆ ಆಗುತ್ತದೆ. ಆದ್ದರಿಂದ ಶತ್ರುಪಕ್ಷದ ಜನರು ನಿಮ್ಮ ಮನೆಯಲ್ಲಿ ಗುಪ್ತರೀತಿಯಿಂದ ಬಂದು ಹುಡುಗನಿಗೆ ಏನಾದರೂ ಕಲಿಸದಂತೆ ಜಾಗರೂಕರಾಗಿ ಇರತಕ್ಕದ್ದು, ಎಂದು ಹೇಳಿ ಮಗನನ್ನು ಗುರುಗಳ ಮನೆಗೆ ಕಳಿಸಿದನು.

ಬಳಿಕ ಶಂಡ-ಅಮರ್ಕರು ಪ್ರಹ್ರಾದನಿಗೆ ಶಿಕ್ಷೆಯ ಭಯತೋರಿಸಿ ರಾಜನೀತಿ ಮೊದಲಾದವನ್ನು ಕಲಿಸಿ ಆತನನ್ನು ಕೆಲವು ದಿನಗಳ ಮೇಲೆ ಆತನ ತಂದೆಯ ಬಳಿಗೆ ಪುನಃ ಕರಕೊಂಡುಹೋದರು. ಆಗ ಪ್ರಹ್ರಾದನ ತಾಯಿಯಾದ ಕಯಾಧೂವು ಪ್ರಹ್ರಾದನಿಗೆ ಎರೆದು ಉಡಿಗೆತೊಡಿಗೆಗಳಿಂದ ಅವನನ್ನು ಅಲಂಕರಿಸಿ ಪತಿಯ ಬಳಿಗೆ ಕಳಿಸಿದಳು. ಪ್ರಹ್ರಾದನು ತಂದೆಯನ್ನು ನಮಸ್ಕರಿಸಲು, ಹಿರಣ್ಯಕಶಿಪುವು ಮಗನನ್ನು ಅಪ್ಪಿಕೊಂಡು ಆನಂದಾಶ್ರುಗಳು ಉದುರುತ್ತಿರಲು, ಆತನ ನೆತ್ತಿಯನ್ನು ಮೂಸಿನೋಡಿ ಅತ್ಯಂತವಾತ್ಸಲ್ಯದಿಂದ—ತಮ್ಮಾ, ಈ ವರೆಗೆ ನೀನು ನಿನ್ನ ಗುರುಗಳ ಬಳಿಯಲ್ಲಿ ಕಲಿತದ್ದರೊಳಗೆ ಉತ್ತಮರೀತಿಯಿಂದ ಬರುವದನ್ನು ಅನ್ನು ನೋಡೋಣ, ಅನ್ನಲು, ಪ್ರಹ್ರಾದನು—ಎಲೈ ತಂದೆಯೇ, "ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಂ। ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮನಿವೇದನಂ" ॥ ಎಂಬ ಒಂಬತ್ತು ಪ್ರಕಾರದ ಭಕ್ತಿಯು ಉಂಟಾಗುವ ಅಧ್ಯಯನವೇ ಶ್ರೇಷ್ಠವೆಂದು ಹೇಳಿದನು. ಅದನ್ನು ಕೇಳಿ ಹಿರಣ್ಯಕಶಿಪುವು ಕ್ರೋಧಸಂತಪ್ತನಾಗಿ ಆ ಶುಕ್ರಪುತ್ರರನ್ನು ಕುರಿತು—ಎಲೈ ನೀಚರಿರಾ, ನನ್ನ ಮಗನಿಗೆ ಇದೇನು ಕಲಿಸಿ ಇಟ್ಟಿರಿ? ನಮ್ಮ ಶತ್ರುಗಳಿಗೆ ನೀವು ಅನುಕೂಲವಾಗಿರುವಂತೆ ತೋರು

ತ್ತದೆ, ಎಂದು ತಿರಸ್ಕರಿಸಿ ನುಡಿಯುತ್ತಿರಲು, ಆ ಬ್ರಾಹ್ಮಣರು—ಎಲೈ ಇಂದ್ರಶತ್ರುವೇ, ವ್ಯರ್ಥವಾಗಿ ನಮಗೆ ಯಾಕೆ ದೋಷಕೊಡುವೆ? ಈಗ ನಿನ್ನ ಮಗನು ಹೇಳಿದ್ದನ್ನು ನಾವೂ ಕಲಿಸಿರುವದಿಲ್ಲ; ಬೇರೆ ಯಾರೂ ಕಲಿಸಿರುವದಿಲ್ಲ; ಅದು ಆತನ ಹುಟ್ಟುಗುಣವಾಗಿರುವದು, ಅನ್ನಲು, ದೈತ್ಯನು ಮಗನಿಗೆ—ಎಲೈ ಮೂರ್ಖಶಿರೋಮಣಿಯೇ, ಇದನ್ನು ನಿನಗೆ ಯಾರೂ ಕಲಿಸದಿದ್ದರೆ ಈ ದುರ್ಬುದ್ಧಿಯು ನಿನಗೆ ಎಲ್ಲಿಂದ ಉತ್ಪನ್ನವಾಯಿತು? ಎಂದು ಕೇಳಲು, ಪ್ರಹ್ಲಾದನು—“ ತಾತ, ಇಂದ್ರಿಯಾಧೀನರಾಗಿ ಸಂಸಾರಚಿಂತನೆ ಮಾಡುವವರಿಗೆ ತನ್ನಿಂದ ತಾನೇ ಆಗಲಿ, ಸಹವಾಸದಿಂದಾಗಲಿ ಭಕ್ತಿಯು ಉತ್ಪನ್ನವಾಗುವದಿಲ್ಲ. ಸಂಸಾರವು ಸುಳ್ಳು ಇದ್ದು, ಬ್ರಹ್ಮವು ಸತ್ಯವಿರುತ್ತದೆಂದು ಕಾಣುವವರ ಮನಸ್ಸಿನಲ್ಲಿ ಮಾತ್ರ ಭಕ್ತಿಯು ನಡುವದು. ವಿಷಯವಾಸನೆಯುಳ್ಳವರ ಬುದ್ಧಿಯು ಅದ್ವಿತೀಯ ಪರಬ್ರಹ್ಮನ ಕಡೆಗೆ ತಿರುಗಬೇಕಾದರೆ, ಮಹಾತ್ಮರಾದ ಸಾಧುಗಳ ಸಮಾಗಮವಾಗಿ ಅವರ ಚರಣಧೂಲಿಯ ಸ್ಪರ್ಶದಿಂದ ಅವರು ಪವಿತ್ರರಾಗಬೇಕಾಗುವದು. ಹೀಗೆ ಪವಿತ್ರರಾದವರೇ ಪರಬ್ರಹ್ಮಸ್ವರೂಪದ ಜ್ಞಾನಮಾಡಿಕೊಳ್ಳಲು ಯೋಗ್ಯರಾಗಿ, ಆ ಸಾಧುಗಳ ಅನುಗ್ರಹದಿಂದ ಈ ಅನರ್ಥಕಾರಕ ಸಂಸಾರದಿಂದ ಮುಕ್ತರಾಗುವರು.” ಎಂದು ಹೇಳಿದನು. ಈ ಮಾತುಗಳನ್ನು ಕೇಳಿದ ಕೂಡಲೆ ಹಿರಣ್ಯಕಶಿಪುವು ಸಿಟ್ಟಿನಭರದಲ್ಲಿ ಮಗನನ್ನು ತೊಡೆಯಮೇಲಿಂದ ದೂಡಿಕೊಟ್ಟು ಬಳಿಯಲ್ಲಿದ್ದವರಿಗೆ—ಈಗಲೇ ಇವನನ್ನು ಕೊಲ್ಲಿರೆಂದು ಆಜ್ಞಾಪಿಸಿದನು. ಆಗ ದೈತ್ಯರು ಪ್ರಹ್ಲಾದನ ಮರ್ಮಸ್ಥಾನಗಳಲ್ಲಿ ಶೂಲದಿಂದ ಇರಿದರು; ಆದರೆ ಶಸ್ತ್ರಾಸ್ತ್ರಗಳ ನಿಯಂತೃವಾದ ಪರಮೇಶ್ವರನನ್ನು ಶರಣುಹೋಗಿದ್ದ ಪ್ರಹ್ಲಾದನಿಗೆ ಆ ಶೂಲದ ಇರತಗಳಿಂದ ಏನಾಗಬೇಕು? ಅವೆಲ್ಲ ದೈವಹೀನ ಪುರುಷನ ಪ್ರಯತ್ನಗಳಂತೆ ವ್ಯರ್ಥವಾಗಿ ಹೋದವು. ಇದನ್ನು ನೋಡಿ ಹಿರಣ್ಯಕಶಿಪುವಿನ ಮನಸ್ಸಿನಲ್ಲಿ ಭಯವು ಉತ್ಪನ್ನವಾಯಿತು. ಆತನು ಪ್ರಹ್ಲಾದನ ನಾಶಕ್ಕಾಗಿ ಭಯಂಕರ ಉಪಾಯಗಳನ್ನು ನಡಿಸಿದನು. ಆತನು ಅವನನ್ನು ಸೊಕ್ಕಿದ ಆನೆಯಿಂದ ತುಳಿಸಿದನು; ದೊಡ್ಡ ದೊಡ್ಡ ಹಾವುಗಳಿಂದ ಕಡಿಸಿದನು; ಗುಡ್ಡದಮೇಲಿಂದ ಕೆಳಗೆ ದಬ್ಬಿಸಿದನು; ತಗ್ಗಿನಲ್ಲಿ ಹುಗಿಸಿದನು; ವಿಷವನ್ನು ಕುಡಿಸಿದನು; ಉಪವಾಸ ಕೆಡವಿಸಿದನು; ಚಳಿ-ಗಾಳಿ-ಬೆಂಕಿ-ನೀರುಗಳ ಬಾಧೆಗೆ ಒಳಪಡಿಸಿದನು; ಆದರೂ ಆ ನಿಷ್ಪಾಪನಾದ ಭಗವದ್ಭಕ್ತ ಪ್ರಹ್ಲಾದನು ಮರಣಹೊಂದದೆ ಹೆಚ್ಚು ತೇಜಸ್ವಿಯಾದನು. ಅದನ್ನು ನೋಡಿ ಹಿರಣ್ಯಕಶಿಪುವು ಮನಸ್ಸಿನಲ್ಲಿ—ಇಷ್ಟು ಮಾಡಿದರೂ ಇವನ ನಾಶವಾಗದೆಯಿದ್ದ ಬಳಿಕ, ಇವನೇ ನನ್ನ ನಾಶಕ್ಕೆ ಕಾರಣವಾಗುವನೋ ಏನು? ಎಂದು ಚಿಂತಿಸುತ್ತಿರಲು, ಶುಕ್ರಪುತ್ರ ಶಂಡಾಮರ್ಕರು ಅವನನ್ನು ಕುರಿತು—ದೈತ್ಯರಾಜನೇ, ನಿನ್ನಂಥ ತ್ರೈಲೋಕ್ಯವಿಜಯಿಗೆ ಈ ಹುಡುಗನಿಂದಾಗುವದೇನು? ನೀನು ಹೀಗೆ ಚಿಂತಾಗ್ರಸ್ತನಾಗುವ ಕಾರಣವಿಲ್ಲ. ಶುಕ್ರಾಚಾರ್ಯರು ತಿರುಗಿ ಬರುವವರೆಗೆ ಇವನನ್ನು ವರುಣಪಾಶದಿಂದ ಕಟ್ಟಿ ಹಾಕಿ ಇಡಬೇಕು. ಮನುಷ್ಯನ ಬುದ್ಧಿಯು ಮಹತ್ಸೇವೆಯಿಂದಲೂ, ವಯೋಮಾನದಿಂದಲೂ ದಿನದಿನಕ್ಕೆ ತಿದ್ದುತ್ತ ಹೋಗುವದು.

ಬ್ರಾಹ್ಮಣರ ಈ ಮಾತು ಹಿರಣ್ಯಕಶಿಪುವಿಗೆ ಯುಕ್ತವಾಗಿ ತೋರಿದ್ದರಿಂದ ಆತನು ಪ್ರಹ್ಲಾದನನ್ನು ಪುನಃ ಬ್ರಾಹ್ಮಣರ ವಶಕ್ಕೆ ಒಪ್ಪಿಸಿದನು. ಆ ಮೇಲೆ ಆ ಗುರುಗಳು ಪ್ರಹ್ಲಾದನಿಗೆ ಧರ್ಮಾರ್ಥ-ಕಾಮಗಳ ಸಂಬಂಧದ ವಿಷಯಗಳನ್ನು ಬೋಧಿಸಹತ್ತಿದರು. ಒಂದು ದಿನ ಗುರುಗಳು ಯಾವದೋ ಒಂದು ಮನೆಗೆಲಸದಲ್ಲಿ ಮಗ್ನವಾಗಿರಲು, ಪ್ರಹ್ಲಾದನು ತನ್ನ ಗೆಳೆಯರನ್ನು ಕೂಡಿಸಿಕೊಂಡು ಅವರನ್ನು ಕುರಿತು—

ಮಿತ್ರರೆ, ಮೋಕ್ಷಪ್ರದವಾದ ಈ ಮನುಷ್ಯಜನ್ಮವು ದುರ್ಲಭವೂ, ಅಶಾಶ್ವತವೂ ಆದದ್ದೆಂದು ತಿಳಿದು ವಿವೇಕಿಗಳು ಬಾಲ್ಯದಿಂದಲೇ ಭಾಗವತ ಧರ್ಮವನ್ನು ಆಚರಿಸಬೇಕು. ಭಗವಂತನು ಸರ್ವರ ಅಂತರ್ಯಾಮಿಯಿದ್ದು, ಸರ್ವರ ಕಲ್ಯಾಣಮಾಡುವವನಾದದ್ದರಿಂದ ಆತನಿಗೆ ಶರಣು ಹೋಗುವದು ಇಹಲೋಕದ ಮುಖ್ಯ ಕರ್ತವ್ಯವು. ಆದ್ದರಿಂದ ಶರೀರವು ಸದೃಢವಾಗಿರುವಾಗಲೇ ಮನುಷ್ಯನು ತನ್ನ ಕಲ್ಯಾಣಕ್ಕಾಗಿ ಯತ್ನ ಮಾಡಬೇಕು. ಪ್ರಾಣಕ್ಕಿಂತಲೂ ಹೆಚ್ಚಾದ ದ್ರವ್ಯ, ಸವಿಮಾತಿನ ಹೆಂಡತಿ, ಅತ್ಯಂತ ವಾತ್ಸಲ್ಯದಮಕ್ಕಳು, ಪ್ರೇಮಬದ್ಧರಾದ ಆಪ್ತೇಷ್ಟರು, ಸರ್ವಸುಖಾನುಕೂಲತೆಯುಳ್ಳ ಹೊಲ-ಮನೆ-ದನ-ಕರುಗಳು ಇವೆಲ್ಲವುಗಳ ಮೋಹಪಾಶದಲ್ಲಿ ಮನುಷ್ಯನು ಸಿಕ್ಕಬಳಿಕ ಆತನಿಗೆ ವೈರಾಗ್ಯವು ಹ್ಯಾಗೆ ಉತ್ಪನ್ನವಾಗಬೇಕು? ಆತನು ಕುಟುಂಬದಲ್ಲಿ ಅತ್ಯಾಸಕ್ತನಾಗಿ ಹೋಗಿರುವದರಿಂದ ತಾಪತ್ರಯಗಳಿಂದ ಪೀಡಿತನಾದರೂ ವೈರಾಗ್ಯವನ್ನು ತಾಳಿಸುದಿಲ್ಲ. ಇಹಪರಗಳಲ್ಲಿ ದುಃಖವನ್ನು ಭೋಗಿಸಬೇಕಾಗುವದೆಂದು ಗೊತ್ತಿದ್ದರೂ, ಜಿತೇಂದ್ರಿಯನಲ್ಲದ್ದರಿಂದ ಆ ಮನುಷ್ಯನು ಪರದ್ರವ್ಯವನ್ನು ಅಪಹರಿಸುವನು; ಆದ್ದರಿಂದ ಸಂಸಾರದಲ್ಲಿ ಆಸಕ್ತಿಯುಂಟಾಗುವ ಮೊದಲೇ, ಅಂದರೆ ಬಾಲ್ಯದಿಂದಲೇ ಭಗವಂತನಲ್ಲಿ ಭಕ್ತಿಯನ್ನಿಡಬೇಕು; ಆದ್ದರಿಂದ ಮಿತ್ರರೇ, ನೀವು ದೈತ್ಯರ ಸಹವಾಸವನ್ನು ಬಿಟ್ಟು, ಸರ್ವಸಂಗಪರಿತ್ಯಾಗಮಾಡಿದ ಸಾಧುಗಳು ಮೋಕ್ಷವೆಂದು ಕರೆಯುವ ನಾರಾಯಣನಿಗೆ ಶರಣುಹೋಗಿರಿ. ಆತನು ಸ್ಥಾವರಜಂಗಮಾತ್ಮಕ ವಸ್ತುಗಳಲ್ಲಿ , ಯಾವತ್ತು ಜೀವರಾಶಿಗಳಲ್ಲಿ, ನಿರ್ಜೀವಘಟಾದಿಗಳಲ್ಲಿ , ಆಕಾಶಾದಿ ಮಹಾಭೂತಗಳಲ್ಲಿ , ಸತ್ವಾದಿ ಗುಣಗಳಲ್ಲಿ , ಗುಣಸಾಮ್ಯದಲ್ಲಿ, ಮಹತ್ತತ್ವದಲ್ಲಿ ನಿರ್ವಿಕಾರ ಬ್ರಹ್ಮರೂಪದಿಂದ ತುಂಬಿರುವದರಿಂದ, ಹೀಗೆ ಸರ್ವತ್ರವ್ಯಾಪ್ತನಾದ ಆತನನ್ನು ಸಂತುಷ್ಟನನ್ನಾಗಿ ಮಾಡಲಿಕ್ಕೆ ಆಯಾಸಪಡುವ ಕಾರಣವಿಲ್ಲ. ದ್ರಷ್ಟೃರನೂ, ಭೋಕ್ತೃರನೂ ಆದ ಜೀವನು ಅಂತರ್ಯದಲ್ಲಿ ವಾಸಮಾಡುವನು. ಇದು ಪರಮೇಶ್ವರನ ವ್ಯಾಪಕವೂ, ಅನಿರ್ದೇಶ್ಯವೂ ಆದ ರೂಪವು. ಅದರಂತೆ ದೃಶ್ಯವೂ, ಭೋಗ್ಯವೂ ಆದ ಶರೀರವು ಆ ಪರಮೇಶ್ವರನ ವ್ಯಾಪ್ಯವೂ; ನಿರ್ದೇಶ್ಯವೂ ಆದ ರೂಪವಾಗಿರುವದು. ಆ ಪರಮೇಶ್ವರನು ಸ್ವತಃ ಭೇದರಹಿತನಾಗಿದ್ದರೂ, ಈ ಬೇರೆಬೇರೆ ರೂಪಗಳನ್ನು ಧರಿಸುವದರಿಂದ ಆತನು ವ್ಯಾಪ್ಯನೂ-ವ್ಯಾಪಕನೂ, ಅನಿರ್ದೇಶ್ಯನೂ-ನಿರ್ದೇಶ್ಯನೂ ಆಗಿ ತೋರುವನು. ಪರಮೇಶ್ವರನ ನಿಜವಾದ ರೂಪವೆಂದರೆ ಶುದ್ಧಾನುಭವಾತ್ಮಕ ಬ್ರಹ್ಮಾನಂದವಾಗಿರುವದು. ಗುಣಾತ್ಮಕಸೃಷ್ಟಿಯನ್ನು ಉತ್ಪನ್ನಮಾಡುವ ಮಾಯೆಯಿಂದ ಆತನ ಸ್ವರೂಪವು ಆಚ್ಛಾದಿತವಾಗಿರುವದರಿಂದ,

ಹೀಗೆ ಆತನು ಭಿನ್ನಪ್ರಕಾರವಾಗಿ ತೋರುವನು; ಆದ್ದರಿಂದ ಹುಡುಗರಿರಾ, ನೀವು ದೈತ್ಯರ ಸಹವಾಸವನ್ನು ಬಿಟ್ಟು ಪ್ರಾಣಿಮಾತ್ರಗಳಲ್ಲಿ ಪ್ರೇಮಮಾಡಿರಿ . ಭೂತದಯೆಯಿಂದ ಆ ಆದಿನಾರಾಯಣ-ಪರಮೇಶ್ವರನಿಗೆ ಬಹಳ ಸಂತೋಷವಾಗುತ್ತದೆ. ಗುಣಪರಿಣಾಮದಿಂದ ಅನಾಯಾಸವಾಗಿ ಪ್ರಾಪ್ತವಾಗುವ ಧರ್ಮಾರ್ಥ-ಕಾಮಗಳಿಂದ ನಮಗಾಗುವ ಪ್ರಯೋಜನವೇನು? ಮತ್ತು ಹರಿಗುಣವರ್ಣನದಿಂದ ಸತ್ಯಸುಖವು ಪ್ರಾಪ್ತವಾಗುತ್ತಿರಲು, ಮೋಕ್ಷವಾದರೂ ನಮಗೆ ಯಾತಕ್ಕೆ ಬೇಕು? ವೇದವು ಉಪದೇಶಿಸಿರುವ ಧರ್ಮ-ಅರ್ಥ-ಕಾಮ-ಆತ್ಮವಿದ್ಯಾ-ತರ್ಕಶಾಸ್ತ್ರ-ದಂಡನೀತಿ ಮೊದಲಾದವು ಪರಮೇಶ್ವರನಿಗೆ ಆತ್ಮಾರ್ಪಣ ಮಾಡಲು ಸಹಾಯಕಾರಿಗಳಾಗಿದ್ದರೆಯೇ ಅವು ಒಳ್ಳೇಯವೆಂತಲೂ, ಸತ್ಯವೆಂತಲೂ ನಾನು ತಿಳಿಯುವೆನು . ಮಿತ್ರರೇ , ನಾನು ಉಪದೇಶಿಸುವ ಈ ಜ್ಞಾನವು ನಾರಾಯಣನಿಂದ ನಾರದರಿಗೆ ಪ್ರಾಪ್ತವಾಯಿತು, ನಾರದರಿಂದ ನಾನು ಇದನ್ನು ಕೇಳಿದೆನು-

ಧರ್ಮರಾಜಾ, ಈ ಮೇರೆಗೆ ಪ್ರಹ್ರಾದನು ಹೇಳಲು, ಆ ಹುಡುಗರು—"ಪ್ರಹ್ರಾದಾ, ನಾವಿಲ್ಲದಾಗ ನಾರದರಿಂದ ನೀನು ಯಾವಾಗ ಇದನ್ನು ಕೇಳಿದೆ ? ಎಂದು ಕೇಳಲು, ಪ್ರಹ್ರಾದನು—ಮಿತ್ರರೇ , ನನ್ನ ತಂದೆಯು ಮಂದರಪರ್ವತಕ್ಕೆ ತಪಸ್ಸಿಗೆ ಹೋಗಲು ಇಂದ್ರಾದಿದೇವತೆಗಳು ಸಂತೋಷಪಟ್ಟು ದೈತ್ಯರನ್ನು ಹೊಡೆದೋಡಿಸಿದರು. ಇಂದ್ರನಂತು ನನ್ನ ತಾಯಿಯಾದ ಪಟ್ಟರಾಣಿ ಕಯಾಧೂವನ್ನೇ ಅಪಹರಿಸಿಕೊಂಡು ಹೋದನು. ಆಗ ಆಕಸ್ಮಾತ್ತಾಗಿ ನಾರದರು ಆತನನ್ನು ಕಂಡು, ಈ ನಿರಪರಾಧಿಸ್ತ್ರೀಯನ್ನು ಅಪಹರಿಸುವದು ಅನುಚಿತವೆಂದು ಹೇಳಲು, ಇಂದ್ರನು—ದೇವರ್ಷೇ, ದೇವಶತ್ರುವಾದ ಹಿರಣ್ಯಕಸಿಪುವಿನ ದುಃಸ್ಸಹ ತೇಜವು (ಗರ್ಭವು) ಈಕೆಯಲ್ಲಿರುವದು! ಆದ್ದರಿಂದ ಈಕೆಯು ಹಡೆದ ಬಳಿಕ ಆ ಶಿಶುವನ್ನು ಕೊಂದು ಈಕೆಯನ್ನು ಬಿಟ್ಟುಬಿಡುವೆನು, ಎಂದು ಹೇಳಿದನು. ಅದಕ್ಕೆ ನಾರದರು—"ಇಂದ್ರಾ, ಈಕೆಯ ಗರ್ಭದಲ್ಲಿ ಭಗವದ್ಭಕ್ತನಿರುವದರಿಂದ ಅವನ ನಾಶವಾಗದು " ಎಂದು ಹೇಳಲು , ಇಂದ್ರನು ನನ್ನಮೇಲಿನ ಪ್ರೇಮದಿಂದ ನನ್ನ ತಾಯಿಗೆ ಪ್ರದಕ್ಷಿಣಮಾಡಿ ಆಕೆಯನ್ನು ಬಿಟ್ಟುಹೋದನು. ಆಗ ನಾರದರು ನಮ್ಮ ತಾಯಿಯನ್ನು ತಮ್ಮ ಆಶ್ರಮಕ್ಕೆ ಕರೆದೊಯ್ದು, ನನ್ನ ತಂದೆಯು ಬರುವವರೆಗೆ ಆಕೆಯ ಸಂರಕ್ಷಣಮಾಡಿದರು. ಈ ಅವಧಿಯಲ್ಲಿ ನನ್ನ ತಾಯಿಯ ಸೇವೆಗೆ ಮೆಚ್ಚಿ ನಾರದರು ಗರ್ಭದಲ್ಲಿದ್ದ ನನ್ನ ಸಲುವಾಗಿ ಆಕೆಗೆ ಜ್ಞಾನೋಪದೇಶ ಮಾಡಿದರು. ಅವರು ಮಾಡಿ ಬೋಧದ ಮುಖ್ಯ ಆಶಯವೇನಂದರೆ, "ಆತ್ಮನು ದೇಹದಿಂದ ಭಿನ್ನವಿರುವನು. ಉತ್ಪತ್ತಿ, ಸ್ಥಿತಿ, ವೃದ್ಧಿ, ಪರಿಣಾಮ, ಸಂಕೋಚ, ನಾಶ ಈ ಆರು ವಿಕಾರಗಳು ದೇಹಕ್ಕಾಗುವವಲ್ಲದೆ, ಆತ್ಮನಿಗಾಗುವದಿಲ್ಲ. ಆತ್ಮನುನಿತ್ಯನು, ನಿರ್ವಿಕಾರನು, ನಿರ್ಮಲನು, ಅದ್ವಿತೀಯನು, ದೇಹಸಾಕ್ಷಿಯು, ದೇಹಧಾರಿಯು, ಕ್ರಿಯಾಶೂನ್ಯನು, ಸ್ವಯಂಪ್ರಕಾಶನು, ಸರ್ವೋತ್ಪಾದಕನು, ಸರ್ವವ್ಯಾಪಿಯು, ಅಲಿಪ್ತನು, ಅಮೇಷ್ಟಿತನು ಇರುವನು . ಈ ವಿವೇಕೋತ್ಪಾದಕವಾದ ಹನ್ನೆರಡು ಶ್ರೇಷ್ಠ ಲಕ್ಷಣಗಳಿಂದ ಆತ್ಮನು ದೇಹದಿಂದ ಭಿನ್ನವೆಂದು

ತಿಳಿದು, ಮೋಹದಿಂದ ಉತ್ಪನ್ನವಾಗುವ ದೇಹದ ದುರಭಿಮಾನವನ್ನು ಬಿಟ್ಟುಬಿಡಬೇಕು. ಮಣಿಗಳ ಸರದಲ್ಲಿ ಪೋಣಿಸಿದ ದಾರವು ಒಂದೇ ಇದ್ದು, ಎಲ್ಲ ಮಣಿಗಳನ್ನು ವ್ಯಾಪಿಸಿರುವಂತೆ, ಆತ್ಮನು ಒಬ್ಬನೇ ಇದ್ದು, ಸರ್ವವನ್ನೂ ವ್ಯಾಪಿಸಿರುವನು. ಇದೇ ಆತ್ಮನ ಅನ್ವಯವು; ಅದರಂತೆ ದಾರವು ಮಣಿಯಲ್ಲಿ ಇದ್ದೂ, ಮಣಿಗಳಿಂದ ಅದು ಬೇರೆಯಾಗಿರುವಹಾಗೆ, ಆತ್ಮನು ಸರ್ವಪದಾರ್ಥಗಳಲ್ಲಿದ್ದೂ ಆ ಪದಾರ್ಥಗಳಿಂದ ಆತನು ಬೇರೆಯಾಗಿರುವನು. ಇದೇ ಆತ್ಮನ ವ್ಯತಿರೇಕವು. ಇಂಥ ಆತ್ಮನ ಜ್ಞಾನಮಾಡಿಕೊಳ್ಳಲಿಕ್ಕೆ ಸಾವಿರಾರು ಉಪಾಯಗಳಿರುವವು. ಅವುಗಳಲ್ಲಿ ನಾರದರು ಹೇಳಿದ ಉಪಾಯಗಳು ಯಾವವೆಂದರೆ— ಷಡ್ಗುಣೈಶ್ವರ್ಯಸಂಪನ್ನನಾದ ಪರಮಾತ್ಮನಲ್ಲಿ ದೃಢಭಕ್ತಿಯು ಉತ್ಪನ್ನವಾಗುವ ಧರ್ಮಗಳನ್ನು ಆಚರಿಸಬೇಕು; ಗುರುಗಳನ್ನು ಸೇವಿಸಬೇಕು; ಸಾಧುಗಳಲ್ಲಿಯೂ, ಈಶ್ವರನಲ್ಲಿಯೂ ಭಕ್ತಿಯನ್ನಿಡಬೇಕು; ಈಶ್ವರನನ್ನು ಪೂಜಿಸಬೇಕು; ಸರ್ವರಲ್ಲಿ ಈಶ್ವರನು ತುಂಬಿರುವನೆಂಬ ದೃಢಭಾವನೆಯಿಂದ ಸರ್ವರನ್ನೂ ಉತ್ತಮರೀತಿಯಿಂದ ಮನ್ನಿಸಬೇಕು; ಸರ್ವರ ಮನೋರಥಗಳನ್ನು ಪೂರ್ಣಮಾಡಬೇಕು. ಇಂಥ ನಿಸ್ಸೀಮಭಕ್ತರಿಗೆ ಪರಮಾನಂದವು ಪ್ರಾಪ್ತವಾಗುವದು.

ಈ ಮೇರೆಗೆ ಪ್ರಹ್ರಾದನು ಉಪದೇಶಿಸಲು, ದೈತ್ಯಕುಮಾರರು ತಮ್ಮ ಗುರುಗಳು ಹೇಳಿದ್ದನ್ನು ಕಲಿಯದೆ, ಪ್ರಹ್ರಾದನು ಹೇಳಿದ ನಿರ್ಮಲ ಭಕ್ತಿಮಾರ್ಗವನ್ನು ಆಚರಿಸತೊಡಗಿದರು. ಇದನ್ನು ನೋಡಿ ಷಂಡಾಮರ್ಕರು ಭಯಪಟ್ಟು ಎಲ್ಲ ಸಂಗತಿಯನ್ನು ಹಿರಣ್ಯಕಶಿಪುವಿಗೆ ತಿಳಿಸಿದರು. ಆಗ ಆ ದೈತ್ಯರಾಜನು ಸಂತಾಪಗೊಂಡು ಪ್ರಹ್ರಾದನನ್ನು ಸಂಹರಿಸುವದಕ್ಕಾಗಿ ತನ್ನ ಎದುರಿಗೆ ನಿಲ್ಲಿಸಿ ಕ್ರೋಧಾವೇಶದಿಂದ ಆತನನ್ನು ನೋಡುತ್ತ— ಉದ್ಧಟಾ, ಮಂದಮತೇ, ಚಾಂಡಾಲಾ, ಕುಲಘಾತಕಾ, ನನ್ನ ಮಾತನ್ನು ಲಕ್ಷಿಸದೆ ನಿನ್ನ ಹಟವನ್ನೇ ನಡೆಸುವೆಯಾ? ನಿಲ್ಲು, ನಿನ್ನನ್ನು ಯಮಸದನಕ್ಕೆ ಅಟ್ಟುವೆನು. ದುಷ್ಟಾ, ನನ್ನ ಭಯದಿಂದ ತ್ರೈಲೋಕ್ಯಗಳು ನಡುಗುತ್ತಿರಲು, ಅಂಥ ನನ್ನ ಆಜ್ಞೆಯನ್ನು ಯಾರ ಆಶ್ರಯದಿಂದ ನೀನು ಉಲ್ಲಂಘಿಸುವೆ? ಎಂದು ಕೇಳಲು, ಪ್ರಹ್ರಾದನು—"ರಾಜಾ, ಯಾರ ಆಶ್ರಯದಿಂದ ಈ ಯಾವತ್ತೂ ಸ್ಥಾವರ–ಜಂಗಮಾತ್ಮಕವಾದ ಜಗತ್ತು ನಡೆಯುವದೋ, ಆ ಭಗವಂತನ ಆಶ್ರಯವೇ ನನಗಿರುವದು. ತಾತಾ, ಆತನ ಆಶ್ರಯವು ಕೇವಲ ನನಗೇ ಇರುತ್ತದೆಂತಲ್ಲ, ಯಾವತ್ತು ಬಲಿಷ್ಠ ಪ್ರಾಣಿಗಳಿಗೆ, ಬ್ರಹ್ಮಾದಿದೇವತೆಗಳಿಗೆ, ಹಾಗು ನಿನಗೆ ಸಹ ಆತನ ಆಶ್ರಯವೇ ಇರುವದು. ಶರೀರಬಲ–ಧೈರ್ಯ–ಶೌರ್ಯ–ಉತ್ಸಾಹ ಇವೆಲ್ಲ ಆ ಪರಮಾತ್ಮನವೇ ಉಗ್ರರೂಪಗಳಾಗಿರುವವು. ನೀನು ದೈತ್ಯಭಾವವನ್ನು ತ್ಯಜಿಸಿ ಸರ್ವತ್ರ ಸಮಬುದ್ಧಿಯನ್ನು ವಹಿಸು. ಮೊದಲು ಷಡ್ರಿಪುಗಳನ್ನು ಜಯಿಸದೆ, "ನಾನು ತ್ರೈಲೋಕ್ಯವನ್ನು ಜಯಿಸಿದೆನೆನ್ನು"ವದು ಮೂರ್ಖತನವೇ ಸರಿ." ಎಂದು ಉತ್ತರ ಕೊಟ್ಟನು. ಆಗ ಹಿರಣ್ಯಕಶಿಪುವು—ಮೂರ್ಖಾ, ನಿನ್ನ ನಾಲಿಗೆಯು ಉದ್ದವಾದಂತೆ ತೋರುತ್ತದೆ. ನಿನ್ನ ಅಂತಕಾಲವು ಸಮೀಪಿಸಿರುವದರಿಂದಲೇ ನೀನು ಹೀಗೆ ಬಡಬಡಿಸುತ್ತೀ. ಮೂರ್ಖಾ, ನನ್ನ ಹೊರತು ಬೇರೆ ಜಗನ್ನಾಯಕರ್ಯ

ಯೂರಿರುವರೋ? ಆ ನಿನ್ನ ದೇವರು ಎಲ್ಲ ಕಡೆಯಲ್ಲಿ ಇರುವನೆಂದು ಬೊಗಳುವೆಯಲ್ಲ? ಅವನು ಈ ಖಂಬದಲ್ಲಿ ಯಾಕೆ ಇರುವದಿಲ್ಲವೋ? ಎಂದು ಕೇಳಲು, ಪ್ರಹ್ರಾದನು-ಆದೇಕೆ ಇರುವದಿಲ್ಲ? ಇದೋ, ಈ ಖಂಬದಲ್ಲಿಯೇ ಕಾಣುತ್ತಿರುವನು ನೋಡು, ಎಂದು ನುಡಿಯುತ್ತಿರುವಷ್ಟರಲ್ಲಿ, ಹಿರಣ್ಯಕಶಿಪುವು-ದುಷ್ಟಾ, ಏನು ಬಡಬಡಿಸುತ್ತೀ? ನಿಲ್ಲು, ನಿನ್ನನ್ನು ತುಂಡರಿಸುವೆನು, ನಿನ್ನ ಪ್ರೀತಿಯ ಹರಿಯು ನಿನ್ನನ್ನು ಹ್ಯಾಗೆ ರಕ್ಷಿಸುವನು ನೋಡುತ್ತೇನೆ, ಎಂದು ನುಡಿದು ಖಡ್ಗಸಹಿತವಾಗಿ ಒಮ್ಮೆಲೆ ಸಿಂಹಾಸನದಿಂದ ದುಮುಕಿ, "ಎಲ್ಲಿರುವನೊ ನಿನ್ನಹರಿ? ಈ ಖಂಬದಲ್ಲಿರುವನೆಯೆ?" ಅನ್ನುತ್ತ ಆ ಖಂಬವನ್ನು ಕಸುವಿನಿಂದ ಗುದ್ದಿದನು! ಆಗ ಬ್ರಹ್ಮಾಂಡಕಟಾಹವು ಒಡೆದು ಹೋಗುವಂತೆ ಭಯಂಕರ ಶಬ್ದವಾಯಿತು. ಅದನ್ನು ಕೇಳಿ ಹಿರಣ್ಯಕಶಿಪುವು ಚಕಿತನಾದನು. ಆತನು ಅತ್ತಿತ್ತ ನೋಡುತ್ತಿರಲು, ದೈತ್ಯರೆಲ್ಲರೂ ಚದರಿಹೋದರು. ಅಷ್ಟರಲ್ಲಿ ತನ್ನ ವಾಸ್ತವ್ಯವು ಎಲ್ಲ ಕಡೆಯಲ್ಲಿರುವದೆಂಬದನ್ನು ಸಿದ್ಧಮಾಡಿ ತೋರಿಸುವದಕ್ಕಾಗಿಯೂ, ತನ್ನ ಭಕ್ತನ ವಚನವನ್ನು ಸತ್ಯಮಾಡಿತೋರಿಸುವದಕ್ಕಾಗಿಯೂ ಭಗವಾನ್ ಶ್ರೀಹರಿಯು ನೃಸಿಂಹರೂಪವನ್ನು ಧರಿಸಿ ಆ ಸ್ತಂಭದಲ್ಲಿ ಪ್ರಕಟವಾದನು! ಭಗವಂತನ ಅದ್ಭುತವೂ-ಭಯಂಕರವೂ ಆದ ರೂಪವನ್ನು ನೋಡಿ ದೈತ್ಯರಾಜನು ವಿಚಾರಮಗ್ನನಾದನು. ಆತನು ಮನಸ್ಸಿನಲ್ಲಿ—ಇದೇನು? ಇದು ಪೂರ್ಣಮನುಷ್ಯನೂ ಅಲ್ಲ, ಪೂರ್ಣ ಪಶುವೂ ಅಲ್ಲ, ಇರುವದಾದರೂ ಏನಿದು? ಎಂದು ಯೋಚಿಸುತ್ತಿರಲು, ಭಗವಂತನು ಆತನ ಹತ್ತರ ಬಂದನು. ಆಗಿನ ಭಗವಂತನ ಉಗ್ರರೂಪವನ್ನು ಏನುವರ್ಣಿಸುವದು? ಆತನ ಆ ಭಯಂಕರಮುಖವು, ಕೆಂಪಡರಿದ ಕಣ್ಣುಗಳು, ತೀಕ್ಷ್ಣ ಕೋರೆದಾಡೆಗಳು, ನೆಟ್ಟರಿಸಿದ ಕಿವಿಗಳು, ಪರ್ವತದ ಗುಹೆಗಳಂಥ ಮೂಗಿನ ಹೊರಳೆಗಳು, ಪುಷ್ಟವಾದ ಕುತ್ತಿಗೆ, ವಿಶಾಲವಕ್ಷಸ್ಥಳ, ಕೃಶವಾದ ಉದರ, ನೂರಾರು ಕೈಗಳು ಇವುಗಳ ಯೋಗದಿಂದ ತೋರುವ ಉಗ್ರರೂಪವು ಹಿರಣ್ಯಕಶಿಪುವಿಗೆ ಆಶ್ಚರ್ಯಕರವಾಗಿಯೂ, ಭಯಪ್ರದವಾಗಿಯೂ ತೋರಿತು. ಆದರೂ ಆ ವೀರನು ಗದಾಪಾಣಿಯಾಗಿ ನೃಸಿಂಹನೊಡನೆ ಕಾದತೊಡಗಲು, ನೃಸಿಂಹನು ಕೆಲಹೊತ್ತು ವಿನೋದಯುದ್ಧಮಾಡಿದನು. ಆ ಮೇಲೆ ಗರುಡನು ಸರ್ಪವನ್ನು ಹಿಡಿಯುವಂತೆ ಆತನು ಹಿರಣ್ಯಕಶಿಪುವನ್ನು ಹಿಡಿದನು. ಆಗ ಹಿರಣ್ಯಕಶಿಪುವು ಕೊಸರಿಕೊಳ್ಳಲು ಮಾಡಿದ ಪ್ರಯತ್ನವು ವ್ಯರ್ಥವಾಯಿತು. ಕಡೆಗೆ ಹಾವು ಇಲಿಯನ್ನು ಹಿಡಿದಂತಾಗಿ ದೈತ್ಯನು ನರಸಿಂಹನ ತೆಕ್ಕೆಯಲ್ಲಿ ಒದ್ದಾಡಹತ್ತಿದನು. ಧರ್ಮರಾಜಾ, ವಜ್ರಾಯುಧಕ್ಕೂ ಹರಿಯದ ಚರ್ಮವುಳ್ಳ ಆ ದೈತ್ಯನನ್ನು ನೃಸಿಂಹನು ಮುಚ್ಚಂಜೆಯ ಹೊತ್ತಿನೊಳಗೆ, ಸಭೆಯ ಬಾಗಿಲಿನ ಹೊಸತಿಲಿನಲ್ಲಿ ತೊಡೆಯಮೇಲೆ ಕೆಡವಿಕೊಂಡು ಉಗುರುಗಳಿಂದ ಆತನ ಕರಳು ಬಗಿಯಹತ್ತಿದನು. ಆ ಭಗವಾನ್ ನೃಸಿಂಹನ ಕಣ್ಣುಗಳು ಮೊದಲೇ ಭಯಂಕರ, ಅದರಲ್ಲಿ ಸಿಟ್ಟುಬಂದದ್ದು, ಕೇಳುವದೇನು? ಆ ಕೆಂಡದಂಥ ಕಣ್ಣುಗಳೊಡನೆ ಆತನ ಮೋರೆ-ಕೂದಲುಗಳು ರಕ್ತದಿಂದ ಕೆಂಪಾಗಿ ತೋರಹತ್ತಿದ್ದರಿಂದ ಮುಖದ ಉಗ್ರತೆಯು ಹೆಚ್ಚಿತು. ಕರಳಮಾಲೆಯಿಂದ ಆಭಗವನ್ಮೂರ್ತಿಯು ಅತ್ಯಂತ ಭಯ

ಪ್ರದವಾಗಿ ತೋರಹತ್ತಿತು. ಶ್ರೀನರಹರಿಯು ಕರಳು ಬಗಿದಮೇಲೆ ಆ ದೈತ್ಯನ ದೇಹವನ್ನು ತೊಡೆಯಿಂದ ಕೆಳಕ್ಕೆ ದೂಡಿಬಿಟ್ಟನು.

ನೃಸಿಂಹನ ಆಗಿನ ಉಗ್ರಮೂರ್ತಿಯನ್ನು ನೋಡುವ ಧೈರ್ಯವು ಯಾರಿಗೂ ಆಗಲೊಲ್ಲದು. ನರಹರಿಯು ಆ ಸಭೆಯಲ್ಲಿರುವ ಸಿಂಹಾಸನದಮೇಲೆ ಕುಳಿತುಕೊಂಡನು; ಆದರೆ ಆತನ ಸನಿಯಕ್ಕೆ ಹೋಗುವ ಧೈರ್ಯವು ಯಾರಿಗೆ ಆಗಬೇಕು! ಹಿರಣ್ಯಕಶಿಪುವಿನ ಸಂಹಾರದಿಂದ ದೇವತೆಗಳಿಗೆ ಪರಮಾನಂದವಾಯಿತು. ದೇವದುಂದುಭಿಗಳು ಬಾರಿಸಿದವು. ದೇವಾಂಗನೆಯರು ಹೂ ಮಳೆಗರೆದರು. ನರಸಿಂಹನ ದರ್ಶನಕ್ಕಾಗಿ ಬಂದ ದೇವತೆಗಳ ವಿಮಾನಗಳಿಂದ ಆಕಾಶವು ತುಂಬಿಹೋಯಿತು. ಬ್ರಹ್ಮನೇ ಮೊದಲಾದ ದೇವತೆಗಳೂ, ಋಷಿಗಳೂ, ಗಂಧರ್ವಾದಿಕರೂ ಕೈಜೋಡಿಸಿ ಸಿಂಹಾಸನದಮೇಲೆ ಕುಳಿತಿರುವ ನರಸಿಂಹನ ಸ್ತೋತ್ರಮಾಡತೊಡಗಿದರು; ಆದರೂ ನೃಸಿಂಹನ ಕ್ರೋಧವು ಶಾಂತವಾಗಲೊಲ್ಲದು. ಆತನಬಳಿಗೆ ಹೋಗಲು ಸಾಕ್ಷಾತ್ ಲಕ್ಷ್ಮಿಯೂ ಭಯಪಟ್ಟಳು. ಆಗ ಬ್ರಹ್ಮನು ಪ್ರಹ್ಲಾದನನ್ನು ಮುಂದಕ್ಕೆ ಕಳಿಸಲು, ಆತನು ಮೆಲ್ಲಮೆಲ್ಲನೆ ಮುಂದಕ್ಕೆ ಹೋಗಿ ಭಗವಂತನಿಗೆ ಸಾಷ್ಟಾಂಗವೆರಗಿದನು. ಆಗ ಭಕ್ತನನ್ನು ನೋಡಿ ಶ್ರೀನರಹರಿಯಲ್ಲಿ ಕರುಣೆಯು ಉತ್ಪನ್ನವಾಯಿತು. ಆತನು ತನ್ನ ಅಭಯ ಹಸ್ತವನ್ನು ಆ ಶ್ರೇಷ್ಠಭಕ್ತನ ತಲೆಯಮೇಲೆ ಇಡಲು, ಆ ಭಕ್ತನ ವಾಸನಾರೂಪವಾದ ಸರ್ವಪಾಪಗಳ ನಾಶವಾಗಿ, ತತ್ ಕ್ಷಣದಲ್ಲಿ ಆತನಿಗೆ ಸಾಕ್ಷಾತ್ಕಾರವಾಗಿ , ಆತನು ಭಗವಂತನ ಚರಣಕಮಲಗಳನ್ನು ಹೃದಯದಲ್ಲಿ ಧಾರಣಮಾಡಿದನು. ಆಗ ಆತನ ಸರ್ವಾಂಗದಲ್ಲಿ ರೋಮಾಂಚಗಳು ಉತ್ಪನ್ನವಾದವು; ಕಣ್ಣುಗಳಿಂದ ಆನಂದಾಶ್ರುಗಳು ಸುರಿಯಹತ್ತಿದವು. ಆಗ ಆತನು ಸದ್ಗದಿತ ವಾಣಿಯಿಂದ—ಅಹಹ! ಸತ್ವಗುಣಸಂಪನ್ನರಾದ ಬ್ರಹ್ಮಾದಿ ದೇವತೆಗಳ ಸ್ತೋತ್ರಕ್ಕೂ ಸಂತುಷ್ಟನಾಗದ ಪರಮೇಶ್ವರನು, ದೈತ್ಯಕುಲೋತ್ಪನ್ನನಾದ ನನಗೆ ಹ್ಯಾಗೆ ಪ್ರಸನ್ನನಾಗಬೇಕು! ಆದರೆ ಆ ಭಗವಂತನು ರೂಪ, ಗುಣ, ಪಾಂಡಿತ್ಯಾದಿಗಳಿಗೆ ಪ್ರಸನ್ನನಾಗದೆ ಭಕ್ತಿಗೆ ಮಾತ್ರ ಪ್ರಸನ್ನನಾಗುವಹಾಗೆ ನನಗೆ ತೋರುತ್ತದೆ. ಪರಮೇಶ್ವರನಲ್ಲಿ ಭಕ್ತಿಯಿಲ್ಲದ ವೇದಶಾಸ್ತ್ರಸಂಪನ್ನ ಬ್ರಾಹ್ಮಣನಿಗಿಂತ, ಆ ಭಗವಂತನಲ್ಲಿ ಭಕ್ತಿಯುಳ್ಳ ಚಾಂಡಾಲನೇ ಶ್ರೇಷ್ಠನೆಂದು ನಾನು ತಿಳಿಯುವೆನು; ಯಾಕಂದರೆ ಭಕ್ತಿಸಂಪನ್ನನಾದ ಚಾಂಡಾಲನು ತನ್ನ ಕುಲವನ್ನೆಲ್ಲ ಉದ್ಧರಿಸುವನು; ಆದರೆ ಆ ಅಧಮ ಬ್ರಾಹ್ಮಣನು ತನ್ನ ಉದ್ಧಾರವನ್ನೇ ಮಾಡಿಕೊಳ್ಳಲಾರದಾಗಿರುವನು. ನಮ್ಮ ಪೂಜೆಯಿಂದ ಭಗವಂತನು ಸಂತುಷ್ಟನಾಗುವನೆಂಬ ಮಾತುಸುಳ್ಳು; ಕೇವಲ ಭಕ್ತರ ಕಲ್ಯಾಣಕ್ಕಾಗಿಯೇ ಆತನು ಪೂಜೆಯನ್ನು ಸ್ವೀಕರಿಸುವನು. ಮುಖವನ್ನು ಸುಶೋಭಿತವಾಗಿ ಮಾಡುವದರಿಂದ ಪ್ರತಿಬಿಂಬವೂ ಶುಶೋಭಿತವಾಗುವಂತೆ, ಮನೋಭಾವದಿಂದ ಭಗವಂತನನ್ನು ಪೂಜಿಸಿದರೆ, ಮನುಷ್ಯನಲ್ಲಿ ಪ್ರತಿಬಿಂಬರೂಪದಿಂದ ಇರುವ ಜೀವನು ಸತ್ವಾದಿಗುಣಗಳಿಂದ ಶುಶೋಭಿತನಾಗುವನು. ದೇವಾ, ಲೋಕಕಂಟಕನಾದ ದೈತ್ಯನನ್ನು ಸಂಹರಿಸಿದ ಬಳಿಕ ಇನ್ನು ನಿನ್ನ ಈ ಕ್ರೋಧವು ಯಾತಕ್ಕೆಬೇಕು? ನಿನ್ನ ಈ ಉಗ್ರರೂಪವು ಭಯಂಕರವಾದದ್ದೆಂಬ

ದೇನೋ ನಿಜವು; ಆದರೆ ನಾನು ಅವಕ್ಕೆ ಸರ್ವಥಾ ಅಂಜುವದಿಲ್ಲ. ನಾನು ಅಂಜುವದು ಸಂಸಾರದೊಳಗಿನ ತಾಪತ್ರಯಕ್ಕೆ! ದೇವಾ, ನಾನು ವ್ಯರ್ಥವಾಗಿ ದೇಹಾಭಿಮಾನತಾಳಿ ಸಂಸಾರಚಕ್ರದಲ್ಲಿ ಭ್ರಮಣ ಮಾಡುತ್ತಿರುವೆನು. ಈ ಪರಿಭ್ರಮಣವು ನಿನ್ನ ಸೇವೆ ಯಿಂದ ತಪ್ಪುವದಾದ್ದರಿಂದ ಆ ಸೇವಾಕ್ರಮವನ್ನು ನನಗೆ ತಿಳಿಸು. ನನ್ನ ಉಪಾಸ್ಯದೈವ ತವು ನೀನೇ. ಸತ್ಸಮಾಗಮದಿಂದ ನಿನ್ನ ಗುಣಗಳ ಮಹಿಮೆಯನ್ನು ನಾನು ಅರಿತೆನು. ಈ ಜಗತ್ತಿನಲ್ಲಿ ದುಃಖನಿವಾರಕ ಉಪಾಯಗಳು ಹಲವು ಇದ್ದರೂ ನಿನ್ನ ಕೃಪೆಯು ಹೊರತು ಅವು ಫಲಿಸುವದಿಲ್ಲ. ದೇವಾ, ನೀನು ಪ್ರತಿಯುಗದಲ್ಲಿಯೂ ಬೇರೆಬೇರೆ ಅವತಾರಮಾಡಿ, ಆಯಾ ಯುಗಧರ್ಮಗಳನ್ನು ರಕ್ಷಿಸಿ, ಕಲಿಯುಗದಲ್ಲಿ ಮಾತ್ರ ನೀನು ದೃಗ್ಗೋಚರನಾಗ ದಿರುವದರಿಂದ ನಿನಗೆ "ತ್ರಿಯುಗ"ನೆಂದು ಅನ್ನುವರು. ನಿತ್ಯಮುಕ್ತಾ, ನೀನು ನನ್ನಂತೆ ಸಂಸಾರಮಗ್ನರಾದ ಜನರನ್ನೆಲ್ಲ ಉದ್ಧರಿಸು. ಸೃಷ್ಟಿ–ಸ್ಥಿತಿ–ಲಯಗಳನ್ನು ಮಾಡುವ ಮಹಾಸಮರ್ಥನಾದ ನಿನಗೆ ಇದು ಅಸಾಧ್ಯವಲ್ಲ. ಇನ್ನು "ನಿನ್ನೊಬ್ಬನನ್ನೇ ಉದ್ಧರಿಸುವನೆಂ"ದು ನೀನು ಅನ್ನಬಹುದು; ಆದರೆ ಅಂತಹ ಉದ್ಧಾರವು ನನಗೆ ಬೇಕಿಲ್ಲ; ಯಾಕಂದರೆ, ನಿನ್ನ ಭಕ್ತರನ್ನೇ ನಾನು ನಿತ್ಯದಲ್ಲಿ ಸೇವಿಸುತ್ತಿರುವದರಿಂದ ನಾನು ಮುಕ್ತನೇ ಇರುವೆನು; ಆದ್ದರಿಂದ ಈ ಯಾವತ್ತು ಮೂಢಜನರನ್ನು ಉದ್ಧರಿಸಿದರೆ ಮಾತ್ರ ದೊಡ್ಡ ಅನುಗ್ರಹವಾದೀತು! ಈ ದೀನಜನರನ್ನು ಬಿಟ್ಟು ಒಬ್ಬನೇ ಮುಕ್ತನಾಗಿಹೋಗಲು ನಾನು ಇಚ್ಛಿಸುವದಿಲ್ಲ! ದೇವಾ, ಈ ದೀನಜನರ ಸಂಸಾರಾಸಕ್ತಿಯನ್ನು ನೋಡಿ ನನ್ನ ಮನಸ್ಸು ಮರುಗುತ್ತದೆ. ಹುರುಕು ತುರಿಸಿ ತುರಿಸಿ ಸುಖವುಂಡವನು, ಹಿಂದುಗಡೆ ಬೀಳುವ ಉರುಪನ್ನು ತಾಳದೆ ಅಳುವನು; ಆದರೆ ಮತ್ತೆ ತಿಂಡಿಯೇಳಲು, ಮತ್ತೆ ತುರಿಸುವನು. ಇದರಂತೆ, ಈ ಸಂಸಾರಮಗ್ನರಾದವರು, ಸಂಸಾರವು ಅಶಾಶ್ವತವೆಂತಲೂ, ದುಃಖಮಯವೆಂತಲೂ ಅರಿತಿದ್ದರೂ ಪುನಃ ಸಂಸಾರವನ್ನೇ ಮಾಡುವರಲ್ಲದೆ ವೈರಾಗ್ಯತಾಳುವದಿಲ್ಲ- ವಿವೇಕಿಗಳು ಮಾತ್ರ ಉರುಪು ನೆನಿಸಿ ಹುರುಕಿನ ಕಡತವನ್ನು ಸಹಿಸುವಂತೆ, ಸಂಸಾರತಾಪವನ್ನು ನೆನಿಸಿ ಪ್ರಬಲವಾದ ಆಶೆಯನ್ನೂ, ಕಾಮೇಚ್ಛೆಯನ್ನೂ ಸಹಿಸುವರು! ದೇವಾ, ನಿಸ್ಸೀಮ ಭಕ್ತಿಯಿಲ್ಲದೆ ಮುಕ್ತಿಯು ದೊರೆಯುವದಿಲ್ಲ; ಉತ್ತಮಸೇವೆಯಿಲ್ಲದೆ ಭಕ್ತಿಯು ಉತ್ಪನ್ನವಾಗುವದಿಲ್ಲ; ಆದ್ದರಿಂದ ನಾನು ಮೊದಲು ಬೇಡಿಕೊಂಡಂತೆ ನನಗೆ ದಾಸ್ಯಯೋಗವನ್ನೇ ಕೊಡು-

ಭಕ್ತಶ್ರೇಷ್ಠ–ಪ್ರಹ್ರಾದನ ಈ ಸ್ತೋತ್ರವನ್ನು ಕೇಳಿ ನರಹರಿಯು ಸಂತುಷ್ಟನಾಗಿ:—ಎಲೈ ಆಸುರಶ್ರೇಷ್ಠಾ, ಬಾಳಾ ಪ್ರಹ್ರಾದಾ, ನಿನ್ನ ಕಲ್ಯಾಣವಾಗಲಿ: ನಾನು ನಿನಗೆ ಪ್ರಸನ್ನನಾಗಿರುವದರಿಂದ ಬೇಕಾದವರಗಳನ್ನು ಬೇಡಿಕೋ, ಎಂದು ಆ ಭಕ್ತಶ್ರೇಷ್ಠನಿಗೆ ವರಗಳ ಆಶೆ ತೋರಿಸಿದನು; ಆದರೆ, ಆತನು ಅದಕ್ಕೆ ಮರುಳಾಗಲಿಲ್ಲ. ಯಾವ ವರವಾದರೂ ತನ್ನ ಭಕ್ತಿಯೋಗಕ್ಕೆ ವಿಘ್ನಕಾರಿಯೆಂದು ತಿಳಿದು ಆತನು ನೃಸಿಂಹನನ್ನು ಕುರಿತು—ದೇವಾ, ಜನ್ಮತಃ ಭೋಗಕ್ಕೆ ಬೇಸತ್ತು ನಿನಗೆ ಶರಣುಬಂದವನಿಗೆ ಪುನಃ ಭೋಗದ ಆಶೆಯನ್ನು ಯಾತಕ್ಕೆ ತೋರಿಸುತ್ತೀ? ಭಕ್ತನನ್ನು ಪರೀಕ್ಷಿಸುವ ನಿನ್ನ ಉದ್ದೇಶವು ನನಗೆ ಗೊತ್ತಾಯಿತು! ನಿನ್ನಿಂದ ಭೋಗೇಚ್ಛೆಯನ್ನು ಪೂರ್ಣಮಾಡಿಕೊಳ್ಳುವವನು,

ಕೇವಲ ವಣಿಗ್ವೃತ್ತಿ (ಕ್ರಯವಿಕ್ರಯವೃತ್ತಿ) ಯುವನೇಸರಿ! ದೇವಾ, ಜಗತ್ತಿನಲ್ಲಿ ಸೇವ್ಯ ಸೇವಕ ಭಾವವು ಕಂಡುಬರುವದೇನೋನಿಜ; ಆದರೆ ಅದು ವಾಸ್ತವವಲ್ಲ. ಭಗವಂತಾ, ಒಡೆಯನಿಂದ ಧ್ರವ್ಯವು ದೊರೆಯಬೇಕೆಂಬದಿಷ್ಟೇ ಹೇತುವಿನಿಂದ ಸೇವೆಮಾಡುವವನು ಸೇವಕನೇ ಅಲ್ಲವು; ಅದರಂತೆ ಸೇವಕನಿಂದ ಕೆಲಸಮಾಡಿಸಿಕೊಳ್ಳುವ ಉದ್ದೇಶದಿಂದಷ್ಟೇ ದ್ರವ್ಯಕೊಡುವ ಒಡೆಯನು ಒಡೆಯನೇ ಅಲ್ಲವು. ದೇವಾ, ಈ ಕಾರ್ಯಕಾರಣಾತ್ಮಕ ಸೇವ್ಯಸೇವಕ ಭಾವದಂತೆ ನಿನ್ನ ನನ್ನ ಸಂಬಂಧವಿಲ್ಲವು; ಯಾಕಂದರೆ, ನಾನು ನಿನ್ನ ನಿಷ್ಕಾಮಭಕ್ತನಿರುವೆನು, ನೀನು ನನ್ನ ನಿರಪೇಕ್ಷಸ್ವಾಮಿಯಿರುವೆ! ಆದರೂ ನೀನು ವರವನ್ನು ಕೊಟ್ಟೇತಿರುವೆನೆಂದು ಅನ್ನುತ್ತಿದ್ದರೆ, ನನ್ನ ಅಂತಃಕರಣದಲ್ಲಿ ಕಾಮವಾಸನೆಯು ಮೂಲತಃ ಉದ್ಭವಿಸಲೇ ಬಾರದೆಂಬ ವರವನ್ನು ನಾನು ಬೇಡಿಕೊಳ್ಳುತ್ತೇನೆ, ಅದನ್ನಿಷ್ಟು ಕೊಡು; ಯಾಕಂದರೆ ಕಾಮದ ಉತ್ಪತ್ತಿಯಾಯಿತೆಂದರೆ, ಇಂದ್ರಿಯಗಳು—ಮನಸ್ಸು—ಪ್ರಾಣ—ದೇಹ—ಧರ್ಮ—ಧೈರ್ಯ—ಸಾರಾಸಾರವಿವೇಕ—ಲಜ್ಜಾ—ಐಶ್ವರ್ಯ—ಪ್ರತಾಪ—ಸ್ಮೃತಿ—ಸತ್ಯ ಇವೆಲ್ಲವುಗಳ ನಾಶವಾಗಿಹೋಗುವದು. ಎಲೈ ಪುರಾಣಪುರುಷಾ, ಭಕ್ತದುಃಖನಾಶಕಾ, ಅದ್ಭುತನೃಸಿಂಹರೂಪಧಾರಕಾ, ಪರಬ್ರಹ್ಮನ್, ಪರಮಾತ್ಮನ್, ನಿನಗೆ ನನ್ನ ಅನಂತಪ್ರಣಾಮಗಳಿರಲಿ, ಎಂದು ಪ್ರಾರ್ಥಿಸಿ ನಮಸ್ಕರಿಸಲು, ನೃಸಿಂಹನು—ಪ್ರಹ್ರಾದಾ, ನಿನ್ನಂಥ ನನ್ನ ಏಕನಿಷ್ಠಭಕ್ತರು ಇಹಪರಸುಖಗಳನ್ನು ಇಚ್ಛಿಸರು; ಆದರೂ ಈ ಮನ್ವಂತರವು ಮುಗಿಯುವವರೆಗೆ ನನ್ನ ಆಜ್ಞೆಯಂತೆ ಇಲ್ಲಿ ನೀನು ದೈತ್ಯರಾಜನ ಐಶ್ವರ್ಯವನ್ನು ಭೋಗಿಸುತ್ತಿರು. "ಇದರಿಂದ ನಾನು ಕರ್ಮಬದ್ಧನಾದೇನೆಂ"ದು ನೀನು ಭಯಪಡಬೇಡ. ಸರ್ವಾಂತರ್ಯಾಮಿಯಾದ ನನ್ನನ್ನು ಯಾವಾಗಲೂ ಸ್ಮರಿಸು, ನನ್ನ ಪ್ರಿಯಕಥೆಗಳ ಗಾಯನಮಾಡು, ಸರ್ವಕರ್ಮಗಳನ್ನು ನನಗೆ ಅರ್ಪಿಸು, ಅಂದರೆ ಸುಖೋಪಭೋಗದಿಂದ ನಿನ್ನ ಪುಣ್ಯದ ನಾಶವೂ, ಸದಾಚರಣೆಯಿಂದ ನಿನ್ನ ಪಾಪದ ನಾಶವೂ, ಕಾಲಗತಿಯಿಂದ ನಿನ್ನ ದೇಹದ ನಾಶವೂ ಆಗಿ, ಕಡೆಗೆ ನೀನು ನನ್ನ ಸ್ವರೂಪದಲ್ಲಿ ಕೂಡಿಕೊಳ್ಳುವೆ. ದೇವತೆಗಳೂ ನಿನ್ನ ಕೀರ್ತಿಯ ಗಾಯನಮಾಡುವರು. ಪ್ರಹ್ರಾದಾ, ನೀನು ಮಾಡಿದ ನನ್ನ ಸ್ತೋತ್ರದ, ಹಾಗು ನನ್ನ, ಅದರಂತೆ ಈ ಚರಿತ್ರದ ಸ್ಮರಣ—ಪಠನಗಳನ್ನು ಮಾಡುವವರೂ ಕರ್ಮಬಂಧನದಿಂದ ಮುಕ್ತರಾಗುವರು!

ನರಹರಿಯ ಈ ವರಪ್ರದಾನದಿಂದ ಪ್ರಹ್ರಾದನು ಸಂತುಷ್ಟನಾಗಿ ಆ ಭಗವಂತನನ್ನ ಕುರಿತು—ದೇವಾ, ನಿನ್ನಲ್ಲಿ ನನ್ನದಿನ್ನೊಂದು ಪ್ರಾರ್ಥನೆಯೇನಂದರೆ, ಕ್ರೋಧದಿಂದ ಹೃದಯವು ವ್ಯಾಪ್ತವಾದದ್ದರಿಂದಲೂ, ಈಶ್ವರೀ ತೇಜಸ್ಸು ತಿಳಿಯದ್ದರಿಂದಲೂ ನನ್ನ ತಂದೆಯು ನಿನ್ನನ್ನು ಬಹಳವಾಗಿ ನಿಂದಿಸಿದನು; ಮತ್ತು ನನ್ನ ತಮ್ಮನನ್ನು ಕೊಂದವನು ಈತನೇ ಎಂದು ನಿನ್ನೊಡನೆ ದ್ವೇಷ ಬಳಿಸಿದನು; ಅದರಂತೆ ನಿನ್ನ ಭಕ್ತನಾದ ನನ್ನನ್ನು ಬಹಳವಾಗಿ ಪೀಡಿಸಿದನು. ಇಂಥ ದುಸ್ತರ ಪಾತಕಗಳು ಘಟಿಸಿರುವ ನನ್ನ ತಂದೆಯು, ಆ ಪಾಪಗಳಿಂದ ಶುದ್ಧನಾಗಲಿ! ಎಲೈ ಭಕ್ತವತ್ಸಲಾ, ನೀನು ಕಟಾಕ್ಷದಿಂದ ಆತನನ್ನು

ನೋಡಿದಾಗಲೇ ಆತನು ಮುಕ್ತನಾಗಿದ್ದರೂ, ನನ್ನ ತಿಳುವಳಿಕೆ ಕಡಿಮೆಯಾದದ್ದರಿಂದ ಹೀಗೆ ಪ್ರಾರ್ಥಿಸುವೆನು, ಎಂದು ಕೇಳಿಕೊಳ್ಳಲು, ನೃಸಿಂಹನು—ಎಲೈ ನಿಷ್ಪಾಪಾ, ನಿನ್ನ ತಂದೆಯು ತನ್ನ ಪೂರ್ವ ಕಲ್ಪದೊಳಗಿನ ಇಪ್ಪತ್ತೊಂದು ಜನ ಪೂರ್ವಜರೊಡನೆ ಪವಿತ್ರನಾಗಿರುವನು! ಅಪ್ಪಾ, ನಿನ್ನಂಥ ಕುಲೋದ್ಧಾರಕ ಪುತ್ರನು ಆತನ ಮನೆಯಲ್ಲಿ ಹುಟ್ಟಿರಲು, ಆತನಿಗೆ ಪಾವಿತ್ರ್ಯವು ಯಾಕೆ ದೊರೆಯಲಿಕ್ಕಿಲ್ಲ? ಆದ್ದರಿಂದ ಪ್ರಹ್ಲಾದಾ, ನಿನ್ನಂಥ ಪುತ್ರನ ಜನ್ಮದಿಂದಲೂ, ನನ್ನ ಹಸ್ತಸ್ಪರ್ಶದಿಂದಲೂ ನಿನ್ನ ತಂದೆಯು ಪವಿತ್ರನಾಗಿರುವನೆಂಬದರಲ್ಲಿ ಸಂಶಯವಿಲ್ಲ; ಆದರೆ ಶಾಸ್ತ್ರಮರ್ಯಾದೆಯಂತೆ ಆತನ ಔರ್ಧ್ವದೇಹಿಕ ಕರ್ಮಗಳನ್ನು ಮಾಡಿ, ಆತನ ಸಿಂಹಾಸನದ ಮೇಲೆ ಕುಳಿತು ವೇದಜ್ಞರಾದ ಬ್ರಾಹ್ಮಣರು ಹೇಳಿದಂತೆ ಕರ್ಮಗಳನ್ನು ಮಾಡಿ ಅವನ್ನೆಲ್ಲ ನನಗೆ ಅರ್ಪಿಸುತ್ತಹೋಗು. ಎಂದು ಹೇಳಲು, ಶ್ರೀ ನೃಸಿಂಹನ ಅಪ್ಪಣೆಯಂತೆ ಪ್ರಹ್ಲಾದನು ತಂದೆಯ ಉತ್ತರಕಾರ್ಯವನ್ನು ಮಾಡಿದನು. ಆ ಮೇಲೆ ಶ್ರೇಷ್ಠರಾದ ಬ್ರಾಹ್ಮಣರು ಅವನಿಗೆ ಪಟ್ಟಾಭಿಷೇಕ ಮಾಡಿದರು.

ಈ ಮೇರೆಗೆ ಭಕ್ತರ ಉದ್ಧಾರದ ಕಾರ್ಯವಾದಬಳಿಕ ವಿಷ್ಣುವು ನೃಸಿಂಹಾವತಾರ ತಾಳಿದ ಉದ್ದೇಶವು ಸಫಲವಾದಂತಾಯಿತು; ಆದರೆ ಉಗ್ರನೃಸಿಂಹರೂಪದಿಂದ ಜಗತ್ತಿಗೆ ತ್ರಾಸವಾಗತೊಡಗಿತು. ದೇವತೆಗಳು ಮಾಡಿದ ಸ್ತೋತ್ರದಿಂದ ನರಹರಿಯು ಶಾಂತನಾಗಲೊಲ್ಲನು. ಆಗ ಬ್ರಹ್ಮದೇವನು ಭಯಭೀತನಾಗಿ ಯಾವತ್ತು ದೇವತೆಗಳೊಡನೆ ಭಗವಾನ್ ಶಂಕರನಿಗೆ ಶರಣುಹೋಗಿ ಸ್ತೋತ್ರಮಾಡತೊಡಗಿದನು. ಆಗ ಬ್ರಹ್ಮದೇವನ ಸ್ತೋತ್ರದಿಂದ ಶಂಕರನು ಪ್ರಸನ್ನನಾಗಲು, ಆಗ ಬ್ರಹ್ಮದೇವನು ಆತನನ್ನು ಕುರಿತು—ದೇವಾಧಿದೇವಾ, ನೀನು ಜಗತ್ತಿನ ದುಃಖಗಳನ್ನು ನಾಶಮಾಡತಕ್ಕವನಿರುವೆ. ವಿಷ್ಣುವು ನೃಸಿಂಹಾವತಾರತಾಳಿ ಲೋಕಹಿತಕ್ಕಾಗಿ ಹಿರಣ್ಯಕಶಿಪುವನ್ನು ಸಂಹರಿಸಿದನು; ಆದರೆ ಆ ಸಿಂಹರೂಪದಿಂದ ಜಗತ್ತಿಗೆ ತ್ರಾಸವಾಗತೊಡಗಿದೆ; ಆದ್ದರಿಂದ ಶಿಷ್ಟಪಾಲನ–ದುಷ್ಟಶಾಸನಧುರೀಣನಾದ ನೀನು ನೃಸಿಂಹರೂಪವನ್ನು ಸಂಹರಿಸು, ಎಂದು ಬೇಡಿಕೊಳ್ಳಲು, ಶಂಕರನು ನೃಸಿಂಹನ ವೀರ್ಯವನ್ನು ನಾಶಮಾಡಬೇಕೆಂದು ಯೋಚಿಸಿ ಮಹಾಪ್ರಲಯವನ್ನುಂಟುಮಾಡುವ ತನ್ನ ಭೈರವಸ್ವರೂಪವಾದ ವೀರಭದ್ರನ ಸ್ಮರಣ ಮಾಡಿದನು. ಕೂಡಲೆ ವೀರಭದ್ರನು ಪ್ರಕಟವಾದನು. ಆತನ ಸಂಗಡ ಹಲವು ಶಿವಗಣವು ಜಿಗಿದಾಡುತ್ತ ಅಟ್ಟಹಾಸ ಮಾಡುತ್ತ ಬಂದಿತು. ಆಗ ವೀರಭದ್ರನು ಶಿವನನ್ನು ನಮಸ್ಕರಿಸಿ—ಪ್ರಭೋ, ನನ್ನ ಸ್ಮರಣ ಮಾಡಿದ ಕಾರಣವೇನು? ಆಜ್ಞಾಪಿಸಿ ನನ್ನನ್ನು ಅನುಗ್ರಹಿಸಬೇಕು. ಎಂದು ಪ್ರಾರ್ಥಿಸಲು, ಭಗವಾನ್ ಶಂಕರನು—ವೀರಭದ್ರಾ, ದೇವತೆಗಳಿಗೆ ಅಕಾಲದಲ್ಲಿ ಭಯವು ಉತ್ಪನ್ನವಾಗಿರುವದು. ನೃಸಿಂಹನ ಕ್ರೋಧಾಗ್ನಿಯು ಶಾಂತವಾಗಲಿಲ್ಲವು. ಆತನೆಡೆಗೆ ಹೋಗಿ ಮೊದಲು ಆತನನ್ನು ಬೋಧಿಸಿ ಶಾಂತಮಾಡು. ಅದರಿಂದ ಆತನ ಕ್ರೋಧವು ಶಾಂತವಾಗದಿದ್ದರೆ, ನನ್ನ ಪರಮ ಉಗ್ರವಾದ ಭೈರವರೂಪವನ್ನು ಆತನಿಗೆ ತೋರಿಸು. ಅಲ್ಪತೇಜದ ಸಂಹಾರವನ್ನು ಅಲ್ಪತೇಜದಿಂದ, ಮಹಾತೇಜದ ಸಂಹಾರವನ್ನು ಮಹಾತೇಜದಿಂದ ಮಾಡಬೇಕು. ನೃಸಿಂಹನು ಭೈರವರೂಪದರ್ಶನದಿಂದಲೂ ಶಾಂತನಾಗ

ಬಿದ್ದತೆ, ಅವನ ಶಿರಸ್ಸನ್ನು ಕೊಯ್ದುಕೊಂಡು ನನ್ನ ಬಳಿಗೆ ತಕ್ಕೊಂಡು ಬಾ, ಎಂದು ಹೇಳಿ ದನು. ಕೂಡಲೆ ಭಗವದಾಜ್ಞೆಯಂತೆ ವೀರಭದ್ರನು ನೃಸಿಂಹನ ಬಳಿಗೆ ಹೋಗಿ, ತಂದೆಯು ಮಗನನ್ನು ವಾತ್ಸಲ್ಯದಿಂದ ಬೋಧಿಸುವಂತೆ ವೀರಭದ್ರನು ನೃಸಿಂಹನನ್ನು ಕುರಿತು— ಭಗವನ್, ಮಾಧವಾ, ಜಗತ್ತಿನ ಕಲ್ಯಾಣಕ್ಕಾಗಿ ನೀನು ಈ ರೂಪವನ್ನು ಧರಿಸಿರುವೆ. ಪರಮೇಶ್ವರನ ಅಪ್ಪಣೆಯಂತೆ ಜಗತ್ತಿನ ಸುಸ್ಥಿತಿಯನ್ನು ಕಾಯ್ದುಕೊಳ್ಳುವದು ನಿನ್ನ ಕೆಲಸವು. ಅದರಂತೆ ಮತ್ಸ್ಯಾವತಾರ ತಾಳಿ ನೀನು ಜಂತುಚಕ್ರನನ್ನು ರಕ್ಷಿಸಿದೆ; ಕೂರ್ಮಾವತಾರದಿಂದ ಭೂಮಿಯನ್ನು ಸ್ಥಿರಗೊಳಿಸಿದೆ; ವರಾಹಾವತಾರದಿಂದ ಆ ಭೂಮಿಯನ್ನು ರಸಾತಲದಿಂದ ಮೇಲಕ್ಕೆ ಎತ್ತಿಕೊಂಡು ಬಂದೆ; ಈ ನೃಸಿಂಹಾವತಾರ ದಿಂದ ಹಿರಣ್ಯಕಶಿಪುವನ್ನು ಸಂಹರಿಸಿದೆ. ನಿನ್ನ ಕರ್ತವ್ಯವು ಮುಗಿದಿರುವದರಿಂದ ಇನ್ನು ಈ ರೂಪವನ್ನು ಬಿಟ್ಟುಬಿಡು.

ವೀರಭದ್ರನ ಈ ಮಾತುಗಳನ್ನು ಕೇಳಿ ನೃಸಿಂಹನ ಸಿಟ್ಟು ಮತ್ತಿಷ್ಟು ಹೆಚ್ಚಿತು. ಆತನು ವೀರಭದ್ರನಿಗೆ—"ನೀನು ಬಂದಂತೆ ತಿರುಗಿಹೋಗು. ನಾನು ಈ ಚರಾಚರ ವಸ್ತುಗಳನ್ನೆಲ್ಲ ಸಂಹರಿಸತಕ್ಕವನು. ನನ್ನ ಪ್ರಸಾದದಿಂದಲೇ ಸರ್ವವೂ ಮರ್ಯಾದಿತ ವಾಗಿರುವದು. ಯಾವತ್ತು ಶಕ್ತಿಯು ಪ್ರವರ್ತಕನು ನಾನೇ. ಬ್ರಹ್ಮಾದಿದೇವತೆಗಳು ನನ್ನ ಅಂಶವಾಗಿರುವರು. ರುದ್ರನಂತು ಬ್ರಹ್ಮದೇವನ ಮಸ್ತಕದಿಂದ ಉತ್ಪನ್ನವಾಗಿರುವನು. ನಾನೇ ಕರ್ತೃವು, ನಾನೇ ನಿಯಂತೃವು, ನಾನೇ ಕಾಲನು, ನನಗಿಂತಲೂ ಹೆಚ್ಚಿನವನು ಯಾವನಿರುವನು? ನೀನು ನನಗೆ ಶರಣುಬಂದು ನಿರ್ಭೀರನಾಗಿ ಹೋಗು, ಎಂದು ನುಡಿ ಯಲು, ನೃಸಿಂಹನ ಈ ಅಹಂಕಾರಯುಕ್ತ ಭಾಷಣಗಳನ್ನು ಕೇಳಿ ವೀರಭದ್ರನು ನಕ್ಕು—ಏನಂದಿ? ವಿಶ್ವೇಶನ ಸ್ಮರಣವೂ ನಿನಗೆ ಇಲ್ಲದಾಯಿತೇ? ನಿನ್ನ ಅವತಾರಗಳಲ್ಲಿ ಯಾವ ಅವತಾರವು ಈಗ ಬಾಳಿ ಉಳಿದಿರುವದು? ಅವುಗಳಂತೆ ಈ ಅವತಾರವೂ ನಾಮ ಶೇಷವಾದೀತು. ನೀನು ಪ್ರಕೃತಿಯಿರುವೆ, ರುದ್ರನು ಪುರುಷನಿರುವನು. ಆತನು ನಿನಗೆ ಸರ್ವಶಕ್ತಿಯನ್ನು ಕೊಟ್ಟಿರುವನು. ಕುಂಬಾರನ ಗಾಲಿಯು ಅವನ ಇಚ್ಛೆಯಂತೆ ತಿರುಗುತ್ತಿರುವಹಾಗೆ, ನೀನು ಈಶಪ್ರೇರಣೆಯಿಂದ ನಿನ್ನ ಕೆಲಸವನ್ನು ಮಾಡುತ್ತಿರುವೆ. ಪ್ರಜೆಗಳ ಸೃಷ್ಟಿಮಾಡಲಿಕ್ಕೆ ಬರಬೇಕೆಂದು ಬ್ರಹ್ಮನು ಶಿವನನ್ನು ಧ್ಯಾನಿಸಲು, ಅದ ರಿಂದ ಶಿವನು ಸಂತುಷ್ಟನಾಗಿ ಬ್ರಹ್ಮದೇವನ ಹಣೆಯಿಂದ ರುದ್ರರೂಪದಿಂದ ಹೊರಬಿ ದ್ದನು. ಇದರಿಂದ ಶಿವನಿಗೆ ಬಂದ ಕೊರತೆಯೇನು ? ಕೂರ್ಮಾವತಾರದೊಳಗಿನ ನಿನ್ನ ಕಪಾಲವೂ, ವರಾಹಾವತಾರದೊಳಗಿನ ನಿನ್ನ ಕೋರೆಯೂ ಶಂಕರನ ಮಾಲೆಯಲ್ಲಿ ಈಗೂ ಇರುವವು. ದಕ್ಷಯಜ್ಞದಲ್ಲಿ ಯಜ್ಞರೂಪನಾದ ನಿನ್ನ ಶಿರಚ್ಛೇದವನ್ನು ನಾನು ಮಾಡಿರುವೆನು; ದಧೀಚಿಋಷಿಯು ನಿನ್ನನ್ನು ಸೋಲಿಸಿದನು; ನಿನಗೆ ಸುದರ್ಶನ ಚಕ್ರವು ಯಾರಿಂದ ಪ್ರಾಪ್ತವಾಯಿತೆಂಬದನ್ನು ಮರೆತುಬಿಟ್ಟೆಯೋ ಏನು? ಸಾಧುಗಳಲ್ಲದವರ ಮೇಲೆ ಮಾಡಿದ ಉಪಕಾರವು ಅಪಕಾರವೇ ಆಗುವದು. ನೀನು ಈಗ ಗರ್ವದಿಂದಲೂ, ಅಹಂಕಾರದಿಂದಲೂ ಗರ್ಜಿಸುವದು ಯೋಗ್ಯವಲ್ಲ. ಈ ಎಲ್ಲ ಸಂಗತಿಗಳ ವಿಚಾರ

ಮಾಡಿ ನಿನ್ನ ಕ್ರೋಧದ ಉಪಶಮವನ್ನು ನೀನೇ ಮಾಡಿಕೋ- ಇಲ್ಲದಿದ್ದರೆ ನಿನ್ನನ್ನು ನನ್ನಬಲದಿಂದ ಸಂಹರಿಸಬೇಕೆಂದು ನನಗೆ ಶಿವಾಜ್ಞೆಯಾಗಿದೆ, ಎಂದು ಹೇಳಿದನು. ಈ ಮಾತುಗಳನ್ನು ಕೇಳಿ ನೃಸಿಂಹನು ಸಿಟ್ಟಿನಿಂದ ಮೈಮರೆತು ವೀರಭದ್ರನ ಮೇಲೆ ಹಾರುತ್ತಿರಲು, ಅಷ್ಟರಲ್ಲಿ ವೀರಭದ್ರನು ಮಹಾಘೋರ ರೂಪವನ್ನು ಧರಿಸಿದನು- ಈ ಗಗನ ವ್ಯಾಪಿಯಾದ ರೂಪವು ಶಂಕರನ ತೇಜದಿಂದ ದೇದೀಪ್ಯಮಾನವಾಗಿತ್ತು. ಅದರ ತೇಜಸ್ಸಿನಮುಂದೆ ಎಲ್ಲ ತೇಜಸ್ಸುಗಳು ಅಡಗಿಹೋದವು- ಶಂಕರನ ಈ ಸಂಹಾರಕಾರಕ ರೂಪವನ್ನು ನೋಡಿ ದೇವತೆಗಳು ಜಯಜಯ ಧ್ವನಿಮಾಡಿದರು. ಶರಭಾಕೃತಿಯ ಈ ಪಕ್ಷಿರೂಪಕ್ಕೆ ಎರಡು ರೆಕ್ಕೆಗಳೂ, ನಾಲ್ಕುಕೈಗಳೂ, ತೀಕ್ಷ್ಣವಾದ ಚಂಚುವೂ—ಉಗುರುಗಳೂ ಇದ್ದವು. ಸೂರ್ಯನ ಮುಂದಿನ ಹೊನ್ನೆಯಹುಳದಂತೆ, ಈ ಶರಭರೂಪದ ಮುಂದಿನ ನೃಸಿಂಹನು ತೇಜೋಹೀನನಾಗಿ ತೋರಹತ್ತಿದನು. ಹಾಳಿಯಹದ್ದು ಹಾವನ್ನು ಮೇಲಕ್ಕೆ ಒಯ್ದು ನೆಲಕ್ಕೆ ಅಪ್ಪಳಿಸುವಂತೆ, ಶರಭರೂಪಿಯಾದ ವೀರಭದ್ರನು ನೃಸಿಂಹನ ಕೈಕಾಲುಗಳನ್ನು ಕಟ್ಟಿ ಅವನನ್ನು ಮೇಲಕ್ಕೆ ಒಯ್ಯುವನು, ನೆಲಕ್ಕೆ ಅಪ್ಪಳಿಸುವನು— ಹೀಗೆ ಹಲವು ಸಾರೆ ಮಾಡಿದ್ದರಿಂದ ನೃಸಿಂಹನು ಕಸುವುಗೆಟ್ಟು ಪರವಶನಾಗಿ ಕೈಜೋಡಿಸಿ ಶಂಕರನನ್ನು ಅಷ್ಟೋತ್ತರ ಶತನಾಮಗಳಿಂದ ಸ್ತೋತ್ರಮಾಡಿ ಸಂತೋಷಪಡಿಸಿದನು. ಆಗ ನೃಸಿಂಹನು ಶಂಕರನನ್ನು ಕುರಿತು—ದೇವಾ, ಅಹಂಕಾರದಿಂದ ನಾನಿನ್ನೆ ಹೀಗೆ ಮತ್ತನಾದಾಗೆಲ್ಲ ನನ್ನ ಅಹಂಕಾರ ದೋಷವನ್ನು ಹೀಗೆಯೇ ದೂರಮಾಡು. ಎಂದು ಪ್ರಾರ್ಥಿಸಿದನು. ಆಗ ವೀರಭದ್ರನು ನೃಸಿಂಹನ ಶಿರಸ್ಸನ್ನೂ, ಮೈದೊಗಲನ್ನೂ ತಕ್ಕೊಂಡು ಶಿವನಬಳಿಗೆ ಹೋಗಲು, ಶಿವನು ಶಿರಸ್ಸನ್ನು ತನ್ನ ರುಂಡಮಾಲೆಯಲ್ಲಿ ಸೇರಿಸಿ, ಮೈದೊಗಲನ್ನು ಹೊದ್ದುಕೊಂಡನು. ಬ್ರಹ್ಮದೇವಾದಿಕರು ಶಂಕರನನ್ನು ಸ್ತುತಿಸಲು, ಆತನು ಆ ದೇವತೆಗಳನ್ನು ಕುರಿತು—ದೇವತೆಗಳಿರಾ, ನೀರು ನೀರಲ್ಲಿ; ಅಥವಾ ಹಾಲು ಹಾಲಿನಲ್ಲಿ ಕೂಡಿದರೆ ಒಂದೇ ಆಗುವಂತೆ, ಶಿವ–ವಿಷ್ಣುಗಳು ಒಂದೇ ಇರುವರು. ವಿಷ್ಣುವಿನ ಅವತಾರ ಸಮಾಪ್ತಿಯಾದಬಳಿಕ ವಿಷ್ಣುವು ಶಿವನಲ್ಲಿ ಏಕರೂಪವಾಗಿ ಕೂಡಿಕೊಂಡನು- ನನ್ನ ಭಕ್ತರಿಗೆ ಸಿದ್ಧಿಯು ಬೇಕಾಗಿದ್ದರೆ ಅವರು ನೃಸಿಂಹನನ್ನು ಪೂಜಿಸಬೇಕು. ನಾನು ಆ ನೃಸಿಂಹನನ್ನು ನಮಸ್ಕರಿಸುವೆನು, ಎಂದು ನುಡಿದು ವೀರಭದ್ರನು ಅಂತರ್ಧಾನಹೊಂದಿದನು. ಈ ಕಥಾಶ್ರವಣದಿಂದ ಮಹತ್ಫಲಗಳು ಸಾಧಿಸುವವು. ವಿವೇಕಶೀಲನೇ, ಭಗವಂತನು ಹೇಳಿದ ಈ ರಹಸ್ಯವನ್ನು ವಿವೇಕದಿಂದ ವಿಚಾರಿಸು. ಹೀಗೆ ವಿಷ್ಣುವಿನ ಅವತಾರವನ್ನು ಕಾರ್ಯವಾದಬಳಿಕ ಶಿವನು ಉಪಸಂಹರಿಸಿದಂತೆ, ವಿಷ್ಣುವಿನ ಅವತಾರವಾದ ಪರಶುರಾಮನ ತೇಜಸ್ಸನ್ನು, ಅವತಾರ ಕಾರ್ಯವಾದಬಳಿಕ ಪರಶುರಾಮನು ಅಹಂಕಾರ ತಾಳಲು, ವಿಷ್ಣುವಿನ ಅವತಾರವೇ ಆದ ಶ್ರೀರಾಮನೇ ಆ ಪರಶುರಾಮಾವತಾರದ ಸತ್ವಹರಣಮಾಡಿದ್ದು ಪ್ರಸಿದ್ಧವಾಗಿರುತ್ತದೆ- ಅದರಂತೆ ಭಗವಾನ್ ಶಂಕರನು ತನ್ನ ಅಂಶಾವತಾರವಾದ ಭಗವತೀಕಾಲಿಯ ಕ್ರೋಧವನ್ನು ತಾನೇ ಶೋಷಿಸಿದ ಸಂಗತಿಯು ಲಿಂಗಪುರಾಣದಲ್ಲಿ ಹೇಳಿರುವದನ್ನು ಹೇಳುವೆನು ಕೇಳು. ದಾರುಕ

ದೈತ್ಯನು ಲೋಕಕಂಟಕನಾಗಿ ಎಲ್ಲ ದೇವತೆಗಳನ್ನು ಪೀಡಿಸಲು, ಸ್ತ್ರೀಯಿಂದ ಮರಣ ಹೊಂದತಕ್ಕ ಆ ದೈತ್ಯನನ್ನು ಸಂಹರಿಸುವದಕ್ಕಾಗಿ ಶಂಕರನು ಪಾರ್ವತಿಯನ್ನು ಪ್ರಾರ್ಥಿಸಿದನು. ಶಿವಾಜ್ಞಾಪಾಲನತತ್ಪರಳಾದ ಪಾರ್ವತಿಯು ಕೂಡಲೆ ಶಿವನ ಶರೀರದಲ್ಲಿ ಸೇರಿ ಆತನ ಒಂದು ಅಂಶವನ್ನು ಸ್ವೀಕರಿಸಿ ಆತನ ಕಂಠದೊಳಗಿನ ಕಾಲಕೂಟವಿಷದಿಂದ ತನ್ನ ದೇಹವನ್ನು ನಿರ್ಮಾಣಮಾಡಿದಳು! ಶಂಕರನು ತೃತೀಯನೇತ್ರದಿಂದ ಆಕೆಯಕಡೆಗೆ ನೋಡಿ ಆಕೆಯನ್ನು ಮಹಾಕಾಲಿಯ ರೂಪದಿಂದ ನಿರ್ಮಿಸಿದನು. ಆಕೆಯ ಆ ವಿಕ್ರಾಳರೂಪವನ್ನು ನೋಡಿ ದೇವತೆಗಳು ಅಂಜಿ ಓಡಿದರು. ಮುಂದೆ ಭಗವತೀಕಾಲಿಯು ದಾರುಕನ ಸಂಹಾರಮಾಡಿದಳು; ಆದರೆ ಮುಂದೆ ಆಕೆಯ ಕ್ರೋಧಾಗ್ನಿಯಿಂದ ಯಾವತ್ತು ಜಗತ್ತು ಅಸ್ವಸ್ಥವಾಯಿತು. ಆದ್ದರಿಂದ ಆಕೆಯ ಕ್ರೋಧಾಗ್ನಿಯನ್ನು ಶೋಷಿಸಿಬಿಡಬೇಕೆಂದು ಶಂಕರನು ತನ್ನ ಮಾಯೆಯಿಂದ ಸಣ್ಣಹುಡುಗನಾದನು. ಆಗ ಕಾಲಿಯು ಆತನನ್ನು ಎತ್ತಿಕೊಂಡು ಮೊಲೆಕುಡಿಸಲು, ಹಾಲಿನೊಡನೆ ಕಾಲಿಯ ಕ್ರೋಧವನ್ನು ಶಿಶುರೂಪದ ಶಂಕರನು ಹೀರಿಕೊಂಡನು ! ಈ ಭಗವತೀ ಕಾಲಿಯ ಪ್ರಸನ್ನತೆಗಾಗಿಯೇ ಶಂಕರನು ತಾಂಡವ ನರ್ತನಮಾಡಿದನಂತೆ! ಆದ್ದರಿಂದ ವಿವೇಕಶೀಲಾದಿ ಶಿಷ್ಯರೇ, ಭಗವದವತಾರಗಳ ಉಪಕ್ರಮೋಪಸಂಹಾರಗಳ ರಹಸ್ಯವರಿಯದೆ, ಮನಸ್ಸನ್ನು ದ್ವೇಷಾಸೂಯೆಗಳಿಂದ ಕಲುಷಿತಮಾಡುವದು ಹಿತಕರವಲ್ಲವೆಂಬದನ್ನು ಚೆನ್ನಾಗಿ ನೆನಪಿನಲ್ಲಿಡಿರಿ.

## ೩ ತ್ರಿವಿಕ್ರಮ-ಹರಲೀಲೆ

ವಿವೇಕಶೀಲಾ, ಭಾಗವತ ಹಾಗು ಅನ್ಯಪುರಾಣಗಳ ಆಧಾರದಿಂದ ತ್ರಿವಿಕ್ರಮ—ಹರಲೀಲೆಯನ್ನು ಹೇಳುವೆನು ಕೇಳು. ಭಾಗವತದಲ್ಲಿಪರೀಕ್ಷಿತರಾಜನು ಶುಕಾಚಾರ್ಯರನ್ನು ಕುರಿತು—ಶುಕಮುನೇ, ಸಕಲೈಶ್ವರ್ಯಸಂಪನ್ನನಾದ ಶ್ರೀಹರಿಯು ಒಬ್ಬದರಿದ್ರನಂತೆ ಬಲಿರಾಜನಲ್ಲಿಮೂರುಪಾದ ಭೂಮಿಯನ್ನುಯಾಕೆಬೇಡಿದನು? ಬಲಿಯುಭಗವಂತನ ಇಚ್ಛೆಯನ್ನು ಪೂರ್ಣಮಾಡಿರಲು, ಆ ನಿರಪರಾಧಿಯಾದ ದೈತ್ಯರಾಜನನ್ನು ಭಗವಂತನು ಕಟ್ಟಿಹಾಕಿದ್ದು ಒಳ್ಳೇಚಮತ್ಕಾರವಾಗಿ ತೋರುತ್ತದೆ; ಆದ್ದರಿಂದ ಗುರುವರಾ, ಇವುಗಳ ಕಾರಣವನ್ನು ವಿವರಿಸುವ ಕೃಪೆಯಾಗಬೇಕು,ಎಂದುಕೇಳಿಕೊಳ್ಳಲು,ಶುಕಾಚಾರ್ಯರು ಪರೀಕ್ಷಿತರಾಜಾ, ನೀನು ಉತ್ತಮ ಪ್ರಶ್ನ ಮಾಡಿದೆ, ಹೇಳುತ್ತೇನೆ ಕೇಳು. ಇಂದ್ರನು ಯುದ್ಧದಲ್ಲಿ ಬಲಿಯನ್ನು ಗೆದ್ದು ಕೊಲ್ಲಲು, ಶುಕ್ರಾಚಾರ್ಯನು ಆತನನ್ನು ಪುನಃ ಬದುಕಿಸಿದ್ದನ್ನು ನೀನು ಕೇಳಿರುವೆಯಷ್ಟೇ! ಆಗ ಬಲಿಯು ಶುಕ್ರಾಚಾರ್ಯನ ಶಿಷ್ಯನಾಗಿ ಆತನ ಸೇವೆಯನ್ನು ನಿಸ್ಸೀಮವಾಗಿ ಮಾಡಿದನು. ಅದರಿಂದ ಶುಕ್ರಾಚಾರ್ಯನು ಪ್ರಸನ್ನನಾಗಿ, ಸ್ವರ್ಗವನ್ನು ಇಚ್ಛಿಸುವ ಆ ಬಲಿಗೆ ಋಗ್ವೇದದಬ್ರಾಹ್ಮಣದೊಳಗಿನ ಐಂದ್ರಮಹಾಭಿಷೇಕದಿಂದ ವಿಧಿಪೂರ್ವಕ ಅಭಿಷೇಕಮಾಡಿದನು. ತರುವಾಯ ಆ ಭಾರ್ಗವನು ಬಲಿಯಕೈಯಿಂದ "ವಿಶ್ವಜಿತ್" ಎಂಬ ಹೆಸರಿನ ಯಜ್ಞವನ್ನು ಮಾಡಿಸಲು, ಯಜ್ಞನಾರಾಯಣನು ಸಂತುಷ್ಟನಾಗಿ, ಆ ಹೋಮಕುಂಡದೊಳಗಿಂದ

ಇಂದ್ರನ ರಥದಂಥ ಸುವರ್ಣಮಂಡಿತವಾದದ್ದೊಂದು ರಥವೂ, ಎರಡು ಶ್ರೇಷ್ಠ ಅಶ್ವಗಳೂ, ಒಂದು ಸುವರ್ಣಧನುಸ್ಸೂ, ಎರಡು ಅಕ್ಷಯ್ಯ ಬತ್ತಳಿಕೆಗಳೂ, ಒಂದು ದಿವ್ಯ ಕವಚವೂ ಹೊರಟವು. ಆ ಬಲಿಯ ಪಿತಾಮಹನಾದ ಪ್ರಹ್ರಾದನು ಎಂದೂ ಬಾಡದಿರುವ ಒಂದು ಮಾಲೆಯನ್ನು ಬಲಿಗೆ ಕೊಟ್ಟನು; ಶುಕ್ರಾಚಾರ್ಯನು ಒಂದು ಶಂಖವನ್ನು ಕೊಟ್ಟನು; ಈ ಮೇರೆಗೆ ಬ್ರಾಹ್ಮಣರು ಆತನಿಗೆ ಯುದ್ಧಸಾಹಿತ್ಯಗಳನ್ನು ಒದಗಿಸಿಕೊಟ್ಟು ಆತನ ಸ್ವಸ್ತಿವಾಚನ ಮಾಡಿದರು. ಬಲಿಯು ಬ್ರಾಹ್ಮಣರಿಗೆ ಪ್ರದಕ್ಷಿಣೆಮಾಡಿ, ಅವರನ್ನೂ ಅಜ್ಜನಾದ ಪ್ರಹ್ರಾದನನ್ನೂ ನಮಸ್ಕರಿಸಿ, ಸರ್ವ ಸನ್ನಾಹದಿಂದ ದೈತ್ಯ–ಸೈನ್ಯದೊಡನೆ ಸ್ವರ್ಗಕ್ಕೆ ದಾಳಿಯಿಟ್ಟನು. ಹೀಗೆ ದಂಡೆತ್ತಿಹೋಗಿ ಇಂದ್ರನ ಅಮರಾವತಿಯನ್ನು ಮುತ್ತಿ ಬಲಿಯು ಶಂಖವನ್ನು ಊದಲು, ಇಂದ್ರನು ಇದನ್ನರಿತು ಕೂಡಲೆ ದೇವತೆಗಳ ಸಭೆ ಕೂಡಿಸಿದನು. ಆ ಸಭೆಯಲ್ಲಿ ಆತನು ಬ್ರಹಸ್ಪತಿಯನ್ನು ಕುರಿತು—ಗುರುವರ್ಯರೇ, ನಮ್ಮ ಹಳೆ ಶತ್ರುವಾದ ಬಲಿಯು ಮಹಾ ಬಲಾಢ್ಯನಾಗಿ ನಮ್ಮ ನಗರವನ್ನು ಮುತ್ತಿರುವನಲ್ಲ, ಆತನು ಇಷ್ಟು ಬಲಿಷ್ಠನು ಹ್ಯಾಗೆ ಆದನು? ಎಂದು ಪ್ರಶ್ನಮಾಡಲು, ಬ್ರಹಸ್ಪತಿಯು––"ಇಂದ್ರಾ, ಬ್ರಹ್ಮವಾದಿಯಾದ ಭೃಗು-ಬ್ರಾಹ್ಮಣನು ಬಲಿಗೆ ಈ ಸರ್ವೈಶ್ವರ್ಯಗಳನ್ನೂ, ಸಾಮರ್ಥ್ಯವನ್ನೂ ಒದಗಿಸಿಕೊಟ್ಟಿರುವನು; ಆದ್ದರಿಂದ ಈಗ ನೀವು ಅವನಿಗೆ ಈಡಾಗಲಾರಿರಿ; ಕಾರಣ ಕಾಲಕ್ಕನುಸರಿಸಿ ನೀವು ಈ ಸ್ಥಳದಿಂದ ಗುಪ್ತರಾಗತಕ್ಕದ್ದು. ಸದ್ಯಕ್ಕೆ ಬಲಿಯು ಮಹಾಸಮರ್ಥನಿದ್ದು, ಬ್ರಾಹ್ಮಣರ ಪ್ರಸಾದದಿಂದ ಅವನ ಬಲವು ಉತ್ತರೋತ್ತರ ಅಭಿವೃದ್ಧವಾಗುತ್ತ ಹೋಗುವದು. ಮುಂದೆ ಈತನು ಮತ್ತನಾಗಿ ಬ್ರಾಹ್ಮಣರ ಅವಮಾನಮಾಡಲು, ಅವರ ಶಾಪದಿಂದ ಈತನು ಐಶ್ವರ್ಯಭ್ರಷ್ಟನಾಗುವನು. ಆ ಮೇಲೆ ನೀವು ಪುನಃ ನಿಮ್ಮ ಸ್ಥಾನಕ್ಕೆ ಬರಬೇಕು" ಎಂದು ಹೇಳಿದನು.

ಬ್ರಹಸ್ಪತಿಯ ಈ ಸೂಚನೆಯಂತೆ ದೇವತೆಗಳು ಬೇರೆಬೇರೆ ರೂಪಗಳನ್ನು ಧರಿಸಿ ಅಮರಾವತಿಯಿಂದ ಹೊರಟುಹೋಗಲು, ಬಲಿಯು ಅನಾಯಾಸವಾಗಿ ಸ್ವರ್ಗಾಧಿಪತಿಯಾದನು. ಈ ಮೇರೆಗೆ ಬ್ರಾಹ್ಮಣರು ಸಂಪಾದಿಸಿಕೊಟ್ಟ ಐಶ್ವರ್ಯವನ್ನು ಬಹುಕಾಲ ಅನುಭವಿಸುತ್ತ ಆತನು ಕೃತಕೃತ್ಯನಾಗಿ ಆನಂದಪಡುತ್ತಿರಲು, ಇದನ್ನು ನೋಡಿ ದೇವತೆಗಳ ತಾಯಿಯಾದ ಅದಿತಿಗೆ ಬಹಳ ದುಃಖವಾಯಿತು. ಆಕೆಯ ಪತಿಯಾದ ಕಶ್ಯಪನು ಬಹುದಿವಸದ ಸಮಾಧಿಯನ್ನು ಇಳಿಸಿ ಮನೆಗೆ ಬರಲು, ಅಂಥ ದುಃಖದಸ್ಥಿತಿಯಲ್ಲಿಯೂ ಆ ಸಾಧ್ವಿಯು ಪತಿಯಸತ್ಕಾರವನ್ನುಉತ್ತಮರೀತಿಯಿಂದ ಮಾಡಿದಳು. ಆ ಮೇಲೆ ಕಶ್ಯಪರು ಆಸನದಲ್ಲಿ ಕುಳಿತುಕೊಂಡು ಹೆಂಡತಿಯ ದುಃಖದ ಕಾರಣವನ್ನು ಕೇಳಲು, ಆಕೆಯು ಭಗವನ್, ತಮ್ಮ ಕೃಪೆಯು ನನ್ನಮೇಲೆ ಇರುವದರಿಂದ ನನಗೆ ಯಾತರ ಕೊರತೆಯಿರುತ್ತದೆಂದು ನಾನು ದುಃಖಪಡಬೇಕು? ಆದರೆ ನನ್ನ ಮಕ್ಕಳ ಐಶ್ವರ್ಯವನ್ನು ಶತ್ರುಗಳು ಅಪಹರಿಸಿದ್ದರಿಂದ ನಾನು ದುಃಖಸಾಗರದಲ್ಲಿ ಮುಳುಗಿರುವೆನು. ಮಹರಾಜ, ಸತ್ವ–ರಜಸ್ತಮೋಗುಣಗಳ ಪ್ರಜೆಗಳು ನಿಮ್ಮ ಮನಸ್ಸಿನಿಂದಲೂ, ಶರೀರದಿಂದಲೂ ಉತ್ಪನ್ನರಾಗಿ

ರುವದರಿಂದ, ತಾವು ಎಲ್ಲರೊಡನೆ ಪ್ರೇಮದಿಂದ ನಡಕೊಳ್ಳಬೇಕಾಗುವದೆಂಬದು ನಿಜವು; ಆದರೆ ಎಲೈ ಸಮರ್ಥನೆ, ಪರಮೇಶ್ವರನು ಕೂಡ ಭಕ್ತರಪಕ್ಷಗಟ್ಟುವನು; ಅಂದಬಳಿಕ ನೀವು ನನ್ನ ಪರಮೇಶ್ವರರಾಗಿದ್ದು ನಿಮ್ಮನ್ನು ನಾನು ಏಕನಿಷ್ಠೆಯಿಂದ ಸೇವಿಸುತ್ತಿರುವದ ರಿಂದ ನನ್ನ ಮನೋರಥವನ್ನು ಪೂರ್ಣಮಾಡಲೇಬೇಕು. ಆದ್ದರಿಂದ ಹೇ ಸಾಧೋ, ನಮ್ಮ ಮಕ್ಕಳ ಗತವೈಭವವು ಹ್ಯಾಗೆ ಪ್ರಾಪ್ತವಾಗುವದೆಂಬದನ್ನು ಹೇಳಬೇಕು. ಭಕ್ತರ ಕಲ್ಯಾಣ ಮಾಡಲು ತಾವು ಯಾವಾಗಲೂ ತತ್ಪರರಾಗಿರುವದರಿಂದ ನನ್ನನ್ನು ಅನುಗ್ರಹಿಸಬೇಕು. ಎಂದು ಪ್ರಾರ್ಥಿಸಲು, ಕಶ್ಯಪರು ಆಕೆಗೆ ಪಯೋವ್ರತವನ್ನು ಉಪದೇಶಿಸಿದರು. ಅವರ ಉಪದೇಶದಂತೆ ಆ ಸಾಧ್ವಿಯು ಪಯೋವ್ರತದ ದ್ವಾರದಿಂದ ಭಗವಂತನನ್ನು ಆರಾಧಿಸಿದಳು. ಆ ಸುವ್ರತೆಯ ಭಕ್ತಿಗೆ ಮೆಚ್ಚಿ ಪರಮೇಶ್ವರನು ಪ್ರತ್ಯಕ್ಷನಾಗಿ ಆಕೆಯನ್ನು ಕುರಿತು—ಎಲೈ ದೇವಮಾತೆಯೇ, ದುರ್ಮದ-ದೈತ್ಯರನ್ನು ಸಮರಾಂಗಣದಲ್ಲಿ ಜಯಿಸಿ ಗತವೈಭವ ವನ್ನು ತಿರುಗಿ ಸಂಪಾದಿಸಬೇಕೆಂಬ ಇಚ್ಛೆಯಿಂದ ನೀನು ವ್ರತಮಾಡಿದ್ದನ್ನು ನಾನು ಅರಿತಿ ರುವೆನು; ಆದರೆ ಹೇ ದೇವೀ, ಪ್ರಸ್ತುತದಲ್ಲಿ ಆ ದೈತ್ಯರನ್ನು ಜಯಿಸುವದು ತೀರ ಅಶಕ್ಯ ವಾಗಿರುವದು; ಯಾಕಂದರೆ ಪರಮಸಮರ್ಥರಾದ ಬ್ರಾಹ್ಮಣರು ಅವರನ್ನು ಸಂರಕ್ಷಿಸಿ ರುವರು; ಆದರೂ ವ್ರತಾಚರಣೆಯಿಂದ ನನ್ನ ಮನಸ್ಸನ್ನು ನೀನು ಸಂತೋಷಪಡಿಸಿರುವದ ರಿಂದ ನಾನು ಏನಾದರೂ ಉಪಾಯವನ್ನು ಮಾಡಲೇಬೇಕಾಗಿರುವದು; ಆದ್ದರಿಂದ ಕಶ್ಯಪನ ಉಗ್ರತಪಸ್ಸಿನಿಂದ ಉತ್ಪನ್ನವಾದ ತೇಜಸ್ಸಿನಲ್ಲಿರುವ ನಾನು ನನ್ನ ಅಂಶದಿಂದ ನಿನ್ನಮಗನಾಗಿ ಅವತರಿಸಿ ನಿನ್ನ ಮಕ್ಕಳನ್ನು ರಕ್ಷಿಸುವೆನು. ಎಲೈ ಭದ್ರೆ, ಇನ್ನು ನಾನು ನಿನ್ನ ಪತಿಯಲ್ಲಿ ತೇಜೋರೂಪದಿಂದ ಇರುವೆನೆಂಬ ಭಾವನೆಯಿಂದ ನೀನು ಪತಿಸೇವೆಯನ್ನು ಮಾಡು. ನಾನು ನಿನಗೆ ಕೊಟ್ಟಿರುವ ಈ ವರದ ಸುದ್ದಿಯನ್ನು ಯಾರಿಗೂ ಹೇಳಬೇಡ.

ಈ ಮೇರೆಗೆ ಹೇಳಿ ಭಗವಂತನು ಗುಪ್ತನಾಗಲು, ಅದಿತಿಯು ಪತಿಸೇವೆಯಲ್ಲಿ ತತ್ಪರಳಾದಳು. ಪತಿಸೇವಾ-ತತ್ಪರರಾದ ಸತಿಯರಿಗೆ ಯಾವದು ತಾನೆ ಅಸಾಧ್ಯವು? ಆದ್ದರಿಂದ ಪತಿಸೇವೆಯ ಪ್ರಭಾವದಿಂದ ಅದಿತಿಯು ಗರ್ಭಧಾರಣಮಾಡಲು, ಆಕೆಯ ಗರ್ಭದಿಂದ ಭಗವಂತನು ಭಾದ್ರಪದ ಶುದ್ಧ ದ್ವಾದಶಿಯ ದಿವಸ ಅಭಿಜಿತ್ ಮುಹೂರ್ತದಲ್ಲಿ ಅವತರಿಸಿದನು. ಎಲ್ಲ ಕಡೆಯಲ್ಲಿ ಮಂಗಲವಾದ್ಯಗಳು ಬಾರಿಸತೊಡಗಿದವು. ಅಪ್ಸರೆಯರು ನೃತ್ಯಮಾಡತೊಡಗಿದರು; ಗಂಧರ್ವರು ಗಾಯನವನ್ನು ಆರಂಭಿಸಿದರು; ಋಷಿಗಳು ಭಗವಚ್ಚಿಂತನ ಮಾಡತೊಡಗಿದರು; ದೇವ-ಮನು-ಪಿತರರೇ ಮೊದಲಾದ ವರು ಜಯಘೋಷಮಾಡಿದರು; ಸರ್ವತ್ರ ಆನಂದೋತ್ಸವಗಳು ಜರಗತೊಡಗಿದವು. ಋಷಿಗಳು ಕಶ್ಯಪರಿಂದ ಜಾತಕರ್ಮಾದಿ ಸಂಸ್ಕಾರಗಳನ್ನು ಮಾಡಿಸಿದರು. ಮುಂದೆ ವಾಮನನು ದೊಡ್ಡವನಾಗಲು, ಆತನ ಉಪನಯನವಾಯಿತು. ಆಗ ಆತನಿಗೆ ಗಾಯತ್ರೀಮಂತ್ರದ ಉಪದೇಶವನ್ನು ಸ್ವತಃ ಸೂರ್ಯನು ಮಾಡಿದನು; ಬೃಹಸ್ಪತಿಯು ಯಜ್ಞೋಪವೀತವನ್ನು ಕೊಟ್ಟನು; ಕಶ್ಯಪನು ಮೇಖಲೆಯನ್ನು (ಉಡದಾರವನ್ನು)

ಕೊಟ್ಟನು; ಭೂಮಿಯು ಕೃಷ್ಣಾಜಿನವನ್ನು ಕೊಟ್ಟಳು; ಮಾತೆಯಾದ ಅದಿತಿಯು ಕೌಪೀನವನ್ನು ಕೊಟ್ಟಳು; ವೇದ ಪಿತೃವಾದ ಬ್ರಹ್ಮದೇವನು ಕಮಂಡಲುಕೊಟ್ಟನು; ಸಪ್ತರ್ಷಿಗಳು ದರ್ಭವನ್ನು ಕೊಟ್ಟರು; ಸರಸ್ವತಿಯು ಅಕ್ಷಮಾಲೆಯನ್ನು ಕೊಟ್ಟಳು; ಕುಬೇರನು ಭಿಕ್ಷಾಪಾತ್ರೆಯನ್ನು ಕೊಟ್ಟನು; ಜಗಜ್ಜನನಿಯಾದ ಭವಾನಿಯು ಭಿಕ್ಷೆಯನ್ನಿತ್ತಳು. ಈ ಮೇರೆಗೆ ಎಲ್ಲರೂ ಸತ್ಕರಿಸಲು, ಬ್ರಹ್ಮಋಷಿಗಳ ಸಮುದಾಯದಲ್ಲಿ ಆತನು ಬಹಳವಾಗಿ ಒಪ್ಪಿದನು. ಆ ಮೇಲೆ ವಾಮನನು ಅಗ್ನಿಯನ್ನು ಸ್ಥಾಪಿಸಿ ಪ್ರಜ್ವಲಗೊಳಿಸಿ ಆತನನ್ನು ಯಥಾವಿಧಿ ಪೂಜಿಸಿದನು.

ಮುಂದೆ ಕೆಲವು ದಿವಸಗಳ ಮೇಲೆ ಶುಕ್ರಾಚಾರ್ಯನು ಬಲಿಯ ಕೈಯಿಂದ ನರ್ಮದೆಯ ಉತ್ತರತೀರದಲ್ಲಿ "ಭೃಗುಕಚ್ಛ"ವೆಂಬ ಹೆಸರಿನ ಪ್ರದೇಶದಲ್ಲಿ ಅಶ್ವಮೇಧ ಮಾಡಿಸುತ್ತಿರುವನೆಂಬ ಸುದ್ದಿಯು ವಾಮನನಿಗೆ ಹತ್ತಿತು. ಆಗ ಆತನು ಯಜ್ಞಮಂಟಪಕ್ಕೆ ಹೋಗಲು, ಆತನ ತೇಜಸ್ಸಿನಮುಂದೆ ಯಾವತ್ತು ಋತ್ವಿಜರೂ ತೇಜೋಹೀನರಾಗಿ ತೋರಹತ್ತಿದರು. ಈ ತೇಜಸ್ವಿಯು ಪ್ರತ್ಯಕ್ಷ ಸೂರ್ಯನೋ, ಅಗ್ನಿನಾರಾಯಣನೋ, ಸನತ್ಕುಮಾರನೋ ಎಂದು ಎಲ್ಲರೂ ಆಶ್ಚರ್ಯದಿಂದ ತರ್ಕಿಸಹತ್ತಿದರು. ಆಗ ವಾಮನನ ಒಂದು ಕೈಯಲ್ಲಿ ದಂಡ ಕಮಂಡಲುಗಳಿದ್ದು, ಮತ್ತೊಂದು ಕೈಯಲ್ಲಿ ಆತನು ಛತ್ರಿಕೆಯನ್ನು ಹಿಡಿದಿದ್ದನು. ಆತನ ಟೊಂಕದಲ್ಲಿ "ಮುಂಜ"ಎಂಬ ಹುಲ್ಲಿನ ಉಡದಾರವು ಒಪ್ಪುತ್ತಿದ್ದು ಆತನು ಕೃಷ್ಣಾಜಿನವನ್ನು ಹೊತ್ತಿದ್ದನು. ಇಂಥ ತೇಜಸ್ವಿಯಾದ ವಾಮನಮೂರ್ತಿಯನ್ನು ನೋಡಿ ಎಲ್ಲರೂ ಆಶ್ಚರ್ಯಪಟ್ಟು, ಪ್ರತ್ಯಕ್ಷ ಅಗ್ನಿಯಿಂದ ಸಹಿತವಾಗಿ ಎಲ್ಲರೂ ಎದ್ದು ನಿಂತು ಆತನನ್ನು ಸತ್ಕರಿಸಿದರು. ಬಲಿಯು ಆತನಿಗೆ ಆಸನವನ್ನು ಕೊಟ್ಟು ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿ ಆತನ ಚರಣತೀರ್ಥವನ್ನು ಮಸ್ತಕದಲ್ಲಿ ಧರಿಸಿದನು. ತರುವಾಯ ಆ ದೈತ್ಯಾಧಿಪತಿಯು ವಾಮನನಿಗೆ--ಹೇ ಬ್ರಹ್ಮನ್, ನಿನ್ನ ಆಗಮನದಿಂದ ಯಜ್ಞಮಂಟಪವು ಪವಿತ್ರವಾಯಿತು. ಇಂದು ನಮ್ಮ ಯಜ್ಞಾನುಷ್ಠಾನಗಳು ಯಥಾಸಾಂಗಸಿದ್ಧಿಸಿದ್ದರಿಂದ ನಿನ್ನನ್ನು ನಾನು ನಮಸ್ಕರಿಸುವೆನು. ನೀನು ಸಾಕ್ಷಾತ್ ಬ್ರಹ್ಮಋಷಿಗಳ ಮೂರ್ತಿಮಂತ ತಪಸ್ಸಾಗಿರುತ್ತೀ. ಬಟೋ, ನೀನು ನನ್ನನ್ನು ಏನೋ ಕೇಳಲಿಕ್ಕೆ ಬಂದಹಾಗೆ ತೋರುತ್ತದೆ. ಆದ್ದರಿಂದ ನಾನು ಏನು ಕೊಡಲಿ ಹೇಳು. ತ್ರೈಲೋಕ್ಯಾಧಿಪತಿಯಾದ ನಾನು ಪ್ರಸನ್ನನಾಗಿ ಬೇಡಿದ್ದು ಕೊಡಲು ಸಿದ್ಧನಾಗಿದ್ದೇನೆ; ಆದ್ದರಿಂದ ತಿರುಗಿ ಯಾಚನೆಯನ್ನೇ ಮಾಡದಂತೆ ಕೇಳಿಕೊಂಡುಬಿಡು.

ಈ ಮೇರೆಗೆ ಬಲಿಯು ನುಡಿಯಲು, ವಾಮನನು ಮನಸ್ಸಿನಲ್ಲಿ—ಧರ್ಮಮಾರ್ಗದಿಂದ ನಡೆಯುವ ಪುರುಷನ ಐಶ್ವರ್ಯವನ್ನು ಯಾಚನೆಯ ಹೊರತು ಅನ್ಯ ಉಪಾಯಗಳಿಂದ ಹರಣಮಾಡುವದು ಅಪ್ರಶಸ್ತವೆಂದು ಯೋಚಿಸಿ, ಬಲಿಯನ್ನು ಕುರಿತು—ಎಲೈ ತ್ರೈಲೋಕ್ಯಪತೇ, ನನ್ನ ವಿಷಯವಾಗಿ ನೀನು ವ್ಯಕ್ತಮಾಡಿದ ಆದರವು ನಿನ್ನ ಶ್ರೇಷ್ಠ ಕುಲಕ್ಕೆ ಒಪ್ಪುವಂತೆ ಇರುವದು. ಪರಲೋಕ-ಸಾಧನವಾದ ಧರ್ಮವನ್ನು ಸಂಪಾದಿಸುವ ವಿಷಯದಲ್ಲಿ ನಿನಗೆ ಶುಕ್ರಾಚಾರ್ಯನಂಥ ಬ್ರಾಹ್ಮಣನೂ, ಪ್ರಹ್ಲಾದನಂಥ

ಮಹಾಭಗವದ್ಭಕ್ತನೂ ಉಪದೇಶಕರಾಗಿರುವದರಿಂದ ನಿನ್ನ ನಡತೆಯನ್ನು ಕುರಿತು ಏನು ಹೇಳುವದು? ಎಲೈ ಬಲಿರಾಜನೇ, ಯಾಚಕನು ಸಂಪತ್ತನ್ನೇ ಕೇಳಲಿ, ಯುದ್ಧವನ್ನೇ ಕೇಳಲಿ ಇಲ್ಲವೆನ್ನುವಂಥ ಸತ್ವಹೀನ ಪುರುಷನು ನಿನ್ನ ವಂಶದಲ್ಲಿ ಉತ್ಪನ್ನವಾಗಲೇ ಇಲ್ಲವು. ನಿನ್ನ ತಂದೆಯಾದ ವಿರೋಚನನ ದಾನಶೂರತ್ವ, ನಿನ್ನ ಅಜ್ಜನಾದ ಪ್ರಹ್ಲಾದನ ಭಗವದ್ಭಕ್ತಿ, ಮುತ್ತಜ್ಜಂದಿರಾದ ಹಿರಣ್ಯಾಕ್ಷ-ಹಿರಣ್ಯಕಶಿಪುಗಳ ಪರಾಕ್ರಮ ಇವು ಲೋಕವಿಖ್ಯಾತವಾಗಿರುವವು. ನೀನಾದರೂ ನಿನ್ನ ಪೂರ್ವಜರಂತೆ ಪರಾಕ್ರಮಿಯೂ, ದಾನಶೂರನೂ ಇರುತ್ತೀ. ಇಂಥ ನಿನ್ನನ್ನು ನಾನು ಬೇಡುವದೇನಂದರೆ-ನನ್ನ ಪಾದದಳತೆಯ ಮೂರುಪಾದ ಭೂಮಿಯನ್ನು ನನಗೆ ಕೊಡು. ನೀನು ಹೆಚ್ಚುಕೊಡಲು ಸಮರ್ಥನಿದ್ದರೂ, ಕೆಲಸಕ್ಕಿಂತ ಹೆಚ್ಚು ತಕ್ಕೊಳ್ಳುವದು ಜಾಣತನದ ಲಕ್ಷಣವಲ್ಲ; ಯಾಕಂದರೆ ಅದರಿಂದ ಪಾಪವು ಒದಗುವದು. ಬಲಿರಾಜಾ, ಇಂದ್ರಿಯಾಧೀನನಾದವನಿಗೆ ತ್ರೈಲೋಕ್ಯಗಳನ್ನು ಕೊಟ್ಟರೂ ಆತನು ತೃಪ್ತನಾಗನು. ಅರ್ಥ, ಹಾಗು ಕಾಮ ಇವುಗಳ ವಿಷಯದ ಅಸಂತೋಷವು ಸಂಸಾರಪರಿಭ್ರಮಣದ ಕಾರಣವಾಗಿರುವದು. ಸಹಜಪ್ರಾಪ್ತವಾದ ವಸ್ತುವಿನಿಂದ ತೃಪ್ತನಾಗುವ ಬ್ರಾಹ್ಮಣನ ತೇಜಸ್ಸು ಹೆಚ್ಚುವದು; ಹಾಗೆ ತೃಪ್ತನಾಗದಿದ್ದರೆ ಉದಕದಿಂದ ತೊಯ್ದ ಅಗ್ನಿಯಂತೆ ಬ್ರಾಹ್ಮಣನ ತೇಜಸ್ಸಿನ ಅವಸ್ಥೆಯಾಗುವದು; ಆದ್ದರಿಂದ ನನಗೆ ಮೂರೇಪಾದ ಭೂಮಿಯನ್ನು ಕೊಡು, ಎಂದು ಕೇಳಿದನು.

ವಾಮನನ ಈ ರೀತಿಯನ್ನು ನೋಡಿ ಬಲಿಯು ನಕ್ಕು—"ಬಟೋ, ನಿನ್ನ ಇಚ್ಛೆಯಿದ್ದಷ್ಟೇ ತಕ್ಕೊಳ್ಳು; ಎಂದು ಹೇಳಿ, ತ್ರಿಪಾದ ಭೂಮಿದಾನದ ಉದಕವನ್ನು ವಾಮನನ ಹಸ್ತದಲ್ಲಿ ಬಿಡುವದಕ್ಕಾಗಿ ಉದಕಪಾತ್ರೆಯನ್ನು ತಕ್ಕೊಳ್ಳಲು, ಮಹಾಜ್ಞಾನಿಯಾದ ಶುಕ್ರಾಚಾರ್ಯನು ವಿಷ್ಣುವಿನ ಯಾವತ್ತು ಕಪಟವನ್ನು ಅರಿತು ಬಲಿರಾಜನನ್ನು ಕುರಿತು—ಎಲೈ ವಿರೋಚನ-ಪುತ್ರಾ, ಮುಂದೆ ಒದಗುವ ಅನರ್ಥವನ್ನು ಅರಿಯದೆ ನೀನು ದಾನ ಕೊಡುವದು ನನ್ನ ಮನಸ್ಸಿಗೆ ಬರುವದಿಲ್ಲವು- ಈತನು ಸಾಮಾನ್ಯ ವಟುವಾಗಿರದೆ, ಭಗವಾನ್ ವಿಷ್ಣುವಾಗಿದ್ದು, ದೇವಕಾರ್ಯವನ್ನು ಸಾಧಿಸುವದಕ್ಕಾಗಿ ಈ ಮೋಸದ ಸೋಗು ಹಾಕಿಕೊಂಡು ಬಂದಿದ್ದಾನೆ. ನೀನು ಒಪ್ಪಿಕೊಂಡಂತೆ ಈತನಿಗೆ ಮೂರುಪಾದ ಭೂಮಿಯನ್ನು ಕೊಡಲಿಕ್ಕೆ ನೀನು ಸಮರ್ಥನಲ್ಲ. ಅಪ್ಪಾ, ಬಲಿ, ಸರ್ವಜಗತ್ತು ಈತನ ಶರೀರವಾಗಿರುವದು. ಈತನು ಒಂದು ಪಾದದಿಂದ ಭೂಮಿಯನ್ನೂ, ಎರಡನೆಯದರಿಂದ ಸ್ವರ್ಗವನ್ನೂ, ಆಕ್ರಮಿಸಿ, ತನ್ನ ದೇಹದಿಂದ ಆಕಾಶವನ್ನು ಆಕ್ರಮಿಸುವನು. ಅಂದಬಳಿಕ ಮೂರನೆಯ ಪಾದಕ್ಕಾಗಿ ಈತನಿಗೆ ನೀನೇನು ಕೊಡುತ್ತೀ? ಹೀಗೆ ವಚನಭ್ರಷ್ಟನಾದ ನೀನು ಕಡೆಗೆ ನರಕಕ್ಕೆ ಹೋಗಬೇಕಾದೀತಲ್ಲ! ಆದ್ದರಿಂದ ಬಲಿರಾಜಾ, ನೀನು ಈ ದಾನವನ್ನು ಕೊಡಬೇಡ. ಮೂರ್ಖ, ತನ್ನ ನಿರ್ವಾಹದ ಸಾಧನವೂ ಉಳಿಯದಂತೆ ದಾನ ಕೊಡುವದಕ್ಕೆ ಯಾರೂ ಮೆಚ್ಚರು. ಧರ್ಮ, ಅರ್ಥ, ಕಾಮ, ಕೀರ್ತಿ, ಕುಟುಂಬ ಈ ಐದುಸ್ಥಾನಗಳಲ್ಲಿ ತನ್ನ ಸಂಪತ್ತನ್ನು ಹಂಚುವವನಿಗೆ ಇಹಪರಗಳಲ್ಲಿ ಸುಖವಾಗುವದು- ಇನ್ನು, ಒಮ್ಮೆ ಕೊಡುತ್ತೇನೆಂದು ಹೇಳಿ ಹಿಂದುಗಡೆ ಕೊಡುವದಿಲ್ಲೆಂದು ಹ್ಯಾಗೆ ಅನ್ನ

ಬೇಕೆಂದು ನೀನು ಕೇಳಬಹುದು; ಆದರೆ ಆ ಸಂಬಂಧದಿಂದ ಶ್ರುತಿಯಲ್ಲಿರುವ ವಚನವನ್ನು ಹೇಳುವೆನು ಕೇಳು. "ಓಂ" ಎಂದು ಉಚ್ಚರಿಸಿ ಅಂಗೀಕಾರ ಮಾಡಿದ್ದಕ್ಕೆ ಸತ್ಯವೆನ್ನುವರು; ಮತ್ತು ಇದ್ದೂ "ಇಲ್ಲ" ಎಂದು ನಿರಾಕರಿಸುವದಕ್ಕೆ ಅಸತ್ಯವೆನ್ನುವರು. ಸತ್ಯದಲ್ಲಿ ಕಿಂಚಿತ್ತಾದರೂ ಅಸತ್ಯದ ಮಿಶ್ರಣವಿದ್ದಹೊರತು ಸತ್ಯವು ಫಲದ್ರೂಪವಾಗುವದಿಲ್ಲ; ಅದು ಹ್ಯಾಗೆಂಬದನ್ನು ಹೇಳುತ್ತೇನೆ ಕೇಳು. ಶ್ರುತಿಯಲ್ಲಿ ಸತ್ಯವು ದೇಹರೂಪವೃಕ್ಷದ ಪುಷ್ಪ-ಫಲಗಳೆಂತಲೂ, ಅಸತ್ಯವು ಆ ವೃಕ್ಷದ ಬೇರು ಎಂತಲೂ ಹೇಳಿದೆ; ಅಂದಬಳಿಕ ಸತ್ಯರೂಪಫಲವು ಪ್ರಾಪ್ತವಾಗಬೇಕಾದರೆ, ಅಸತ್ಯರೂಪ ಬೇರಿನ ರಕ್ಷಣ ಮಾಡಬೇಕಾಗುವದಲ್ಲವೆ? ಬೇರು ಇಲ್ಲದಿದ್ದರೆ ಗಿಡವು ಎಲ್ಲಿ ಉಳಿಯುವದು? ಗಿಡವೇ ಉಳಿಯದಿದ್ದರೆ ಸತ್ಯರೂಪಫಲವು ಪ್ರಾಪ್ತವಾಗುವ ಬಗೆಯೇನು? ಆದ್ದರಿಂದ ದೇಹ ರಕ್ಷಣಕ್ಕಾಗಿ ಅನೃತದ ರಕ್ಷಣಮಾಡಲೇಬೇಕಾಗುವದು. ರಾಜಾ, ಸತ್ಯದಲ್ಲಿಯೂ ಕೆಲಮಟ್ಟಿಗೆ ದೋಷವಿರುವದು. ಅಸತ್ಯದಲ್ಲಿಯೂ ಕೆಲ ಮಟ್ಟಗೆ ಗುಣವಿರುವದು. "ಕೊಡುತ್ತೇನೆಂ"ದು ಉಚ್ಚರಿಸಿದ ಕೂಡಲೆ ಉಚ್ಚರಿಸುವವನ ದ್ರವ್ಯಹರಣವಾಗುತ್ತದೆ; ಅದೇ "ಎಲ್ಲ ಕೊಡುತ್ತೇನೆ" ಎಂದು ಉಚ್ಚರಿಸಿದ ಕೂಡಲೆ ಉಚ್ಚರಿಸುವವನಿಗೆ ನಿಲ್ಲಲಿಕ್ಕೆ ಸ್ಥಳವು ಕೂಡ ಇಲ್ಲದಂತೆ ಸರ್ವಸ್ವದ ಹರಣವಾಗುತ್ತದೆ. ಇದು ಸತ್ಯದೊಳಗಿನ ದೋಷವು. ಇನ್ನು ಅಸತ್ಯದೊಳಗಿನ ಗುಣವನ್ನು ಹೇಳುವೆನು ಕೇಳು; ಇದ್ದೂ ಇಲ್ಲವೆನ್ನುವದರಿಂದ ದ್ರವ್ಯನಾಶವು ತಪ್ಪುತ್ತದೆ; ಆದರೆ "ಇಲ್ಲ; ಇಲ್ಲ" ಎಂದು ದೈನ್ಯದಿಂದು ಉಚ್ಚರಿಸಿದರೆ ಜನರು ದಯಾವಂತರಾಗಿ ಹಾಗೆ ಉಚ್ಚರಿಸುವವನಿಗೆ ತಿರುಗಿ ದ್ರವ್ಯ ಕೊಡುವರು! ಇದರಿಂದ ಯಾವಾಗಲೂ "ಇಲ್ಲ" ಎಂದು ಅಸತ್ಯವನ್ನೇ ನುಡಿಯಬೇಕೆಂದು ನಾನು ಹೇಳುವದಿಲ್ಲ. ಯಾವಾಗಲೂ "ಇಲ್ಲ" ಎಂದು ಸುಳ್ಳು ಆಡುವವನ ಅಪಕೀರ್ತಿಯಾಗುವದು; ಹೀಗೆ ಅಪಕೀರ್ತಿಗೆ ಗುರಿಯಾಗಿ ಜೀವಿಸುವದಕ್ಕಿಂತ ಸತ್ತು ಹೋಗುವದು ಲೇಸು; ಆದರೆ ಪ್ರಸಂಗ ಒದಗಿದಾಗ ದೇಹರಕ್ಷಣಕ್ಕಾಗಿ ಸುಳ್ಳು ಆಡಿದರೆ ಪಾಪ ಬರುವದಿಲ್ಲವೆಂದು ಹೇಳುವದಿಷ್ಟೇ ನನ್ನ ಮಾತಿನ ತಾತ್ಪರ್ಯವಾಗಿರುತ್ತದೆ. ಸ್ತ್ರೀಯರಿಂದ ಯಾವದೊಂದು ಕೆಲಸವನ್ನು ಮಾಡಿಸಿಕೊಳ್ಳುವಾಗ, ವಿನೋದ ಮಾಡುವಾಗ, ಉಪಜೀವನ ಪ್ರಸಂಗವಿದ್ದಾಗ, ಪ್ರಾಣಸಂಕಟ ಒದಗಿದಾಗ, ಗೋಬ್ರಾಹ್ಮಣರ ಜೀವ ಉಳಿಯುವಹಾಗಿದ್ದಾಗ ಅಸತ್ಯವನ್ನು ಉಪಯೋಗಿಸಿದರೆ ಪಾಪ ಬರುವದಿಲ್ಲ.

ಈ ಮೇರೆಗೆ ಉಪದೇಶಿಸಿದ ಶುಕ್ರಾಚಾರ್ಯರನ್ನು ಕುರಿತು ಬಲಿಯು—ಗುರುವರ್ಯರೇ, ಅರ್ಥ, ಕಾಮ, ಕೀರ್ತಿ, ವೃತ್ತಿ ಇವನ್ನು ಸಾಧಿಸಿಕೊಳ್ಳಲಿಕ್ಕೆ ವ್ಯತ್ಯಯವನ್ನುಂಟುಮಾಡದೆಯಿರುವದೇ ಧರ್ಮವೆಂದು ನೀವು ನನಗೆ ಕಲಿಸಿದ್ದು ಅಕ್ಷರಶಃ ನಿಜವಿರುವದು; ಆದರೆ ಒಮ್ಮೆ ಕೊಡುತ್ತೇನೆಂದು ಹೇಳಿ ತಿರುಗಿ ಬೀಳುವದು ನನ್ನ ಕುಲಕ್ಕೆ ಲಾಂಛನಾಸ್ಪದವಾಗಿರುವದು. ನನ್ನ ಜನ್ಮವು ಪ್ರಹ್ಲಾದನ ಕುಲದಲ್ಲಾಗಿರುವದೆಂಬದನ್ನು ನಾನು ಮರೆಯತಕ್ಕದ್ದಲ್ಲ. ಪೃಥ್ವಿಯು ಕೂಡ—"ನಾನು ಎಲ್ಲದರ ಭಾರವನ್ನು

ಸಹಿಸುವೆನು; ಆದರೆ ಅಸತ್ಯವಾದಿಗಳ ಭಾರವನ್ನು ಮಾತ್ರ ಸಹಿಸಲಾರೆನೆಂ”ದು ಹೇಳಿರುವಳು; ಆದ್ದರಿಂದ ಅಸತ್ಯಕ್ಕಿಂತ ಹೆಚ್ಚಿನ ದುರ್ಧರವಾದ ಯಾವ ಅಧರ್ಮವೂ ಇಲ್ಲ. ನಾನಂತು, ಬ್ರಾಹ್ಮಣನನ್ನು ಮೋಸಗೊಳಿಸುವದಕ್ಕಿಂತ ನರಕದ, ದಾರಿದ್ರ್ಯದ, ಪದಚ್ಯುತಿಯ, ಬಹಳಹೇಳುವದೇನು? ಮೃತ್ಯುವಿನ ಭಯವನ್ನೂ ಕಡಿಮೆಯೆಂದು ತಿಳಿಯುವೆನು. ದ್ರವ್ಯ ಮೊದಲಾದ ವಸ್ತುಗಳು ಬಹಳವಾದರೆ ಮನುಷ್ಯನ ಮರಣದವರೆಗೆ ಅವನ ಹತ್ತರ ಇರತಕ್ಕವು; ಸತ್ತಬಳಿಕ ಅವನೆಲ್ಲಿಯೊ, ಆ ವಸ್ತುಗಳೆಲ್ಲಿಯೊ! ಅಂದಬಳಿಕ ಅವನ್ನು ತಾನಿರುವಾಗಲೇ ಕೊಟ್ಟುಬಿಟ್ಟರೆ ಕೆಟ್ಟದ್ದೇನು! ಇನ್ನು ನಿರ್ವಾಹದಮಟ್ಟಿಗೆ ಅಲ್ಪಸ್ವಲ್ಪ ಇಟ್ಟುಕೊಳ್ಳಬೇಕೆಂದರೆ, ಅದರಿಂದ ಬ್ರಾಹ್ಮಣನು ಸಂತುಷ್ಟನಾಗುವದಿಲ್ಲವಲ್ಲ! ಹೀಗೆ ದಾನದಿಂದ ಯಾಚಕನು ಸಂತುಷ್ಟನಾಗದಿದ್ದರೆ ಆ ದಾನವು ನಿರರ್ಥಕವಾದದ್ದಲ್ಲವೆ? ದಧೀಚಿ, ಶಿಬಿ ಇವರಂಥ ಸತ್ಪುರುಷರು ಯಾಚಕರ ಇಚ್ಛೆಯನ್ನು ಪೂರ್ಣಮಾಡುವದಕ್ಕಾಗಿ ತಮ್ಮ ಪ್ರಾಣವನ್ನು ಕೊಟ್ಟಿರುವಾಗ, ಪೃಥಿವ್ಯಾದಿ ಪದಾರ್ಥಗಳ ಪ್ರತಿಷ್ಠೆಯೇನು? ಮುನಿವರ್ಯರೇ, ಯುದ್ಧದಲ್ಲಿಯಾಗಲಿ, ದಾನಕೊಡುವದರಲ್ಲಿಯಾಗಲಿ ಕೀರ್ತಿಯನ್ನು ಸಂಪಾದಿಸಿದ ದೈತ್ಯರ ಕೀರ್ತಿಯೊಂದಲ್ಲದೆ ಈಗ ಬೇರೆಯೇನು ಉಳಿದಿರುವದು? ಅವರು ಸಂಪಾದಿಸಿದ ಇಹಪರಲೋಕಗಳನ್ನೂ, ಭೋಗಗಳನ್ನೂ ಕಾಲನು ಯಾವಾಗೋ ಅವರಿಂದ ಕಸಿದುಕೊಂಡು ಬಿಟ್ಟನು. ಯುದ್ಧದಲ್ಲಿ ಹಿಂಜರಿಯದೆ ಪ್ರಾಣತ್ಯಾಗಮಾಡುವ ಬಹುಜನ ವೀರರು ಇರಹಬುದು; ಆದರೆ ಸತ್ಪಾತ್ರನು ತಾನಾಗಿ ನಡೆದು ಬಂದಿರಲು, ಆತನ ಇಚ್ಛೆಯನ್ನು ಪೂರ್ಣಮಾಡುವವರು ಅಪರೂಪವೆಂದು ನನಗೆ ತೋರುತ್ತದೆ. ಗುರುವರ, ಸರ್ವಸ್ವ ದಾನಮಾಡುವದರಿಂದ ದಾರಿದ್ರ್ಯಪ್ರಾಪ್ತಿಯಾಗುವದೆಂದು ತಾವು ಹೇಳುವಿರಿ; ಆದರೆ ಉದಾರರೂ, ದಯಾವಂತರೂ ಆದವರು ಸಾಮಾನ್ಯ ಜನರ ಇಚ್ಛಾಪೂರ್ತಿಮಾಡುವಾಗ ದಾರಿದ್ರ್ಯ ಒದಗಿದರೂ ವಿಷಾದಪಡುವದಿಲ್ಲ; ಅಂದಬಳಿಕ ತಮ್ಮಂಥ ಬ್ರಹ್ಮಜ್ಞಾನಿಗಳ ಇಚ್ಛೆಯನ್ನು ಪೂರ್ಣಮಾಡುವಾಗ ನನಗೆ ದಾರಿದ್ರ್ಯವು ಒದಗಿದರೆ ಕೆಟ್ಟದ್ದೇನು? ಅದೊಂದು ಉತ್ತಮಕೆಲಸವೇ ಆಗುವದು! ಅದರಲ್ಲಿ ತಾವು ಹೇಳಿದಂತೆ ಈತನು ಬಟುವಾಗಿರದೆ ವಿಷ್ಣುವಾಗಿದ್ದರಂತು ದಾನಮಾಡುವ ನನ್ನ ಸಂಕಲ್ಪವು ಮತ್ತಿಷ್ಟು ದೃಢವಾಯಿತು! ಯಾಕಂದರೆ, ತಮ್ಮಂಥ ದೊಡ್ಡ ದೊಡ್ಡ ವಿದ್ವಾಂಸರೂ ಆ ವಿಷ್ಣುವಿನ ಪ್ರಾಪ್ತಿಗಾಗಿ ಪಶುವಧರಹಿತವಾಗಿಯೂ, ಪಶುವಧಸಹಿತವಾಗಿಯೂ ಯಜ್ಞಮಾಡುತ್ತಿರಲು, ಅದೇ ವಿಷ್ಣುವು ತಾನಾಗಿ ನನ್ನಕಡೆಗೆ ಯಾಚಕನಾಗಿ ಬಂದಿರುವನೆಂದಬಳಿಕ ಇದಕ್ಕಿಂತ ಹೆಚ್ಚಿನ ಅನುಕೂಲತೆಯೇನುಬೇಕು? ನಾನಂತು ಈತನಿಗೆ ದಾನಕೊಟ್ಟೇ ಕೊಡುವೆನು; ಆ ಮೇಲೆ ಆತನು ನನಗೆ ವರಗಳನ್ನಾದರೂ ಕೊಡಲಿ, ಅಥವಾ ನನ್ನ ಶತ್ರುವಾದರೂ ಆಗಲಿ! ನಾನು ಅಪರಾಧ ಮಾಡದಿರುವಾಗ ಈತನು ನನ್ನನ್ನು ಕಟ್ಟಿಹಾಕುತ್ತಿದ್ದರೆ ಹಾಕಲೊಲ್ಲನೇಕೆ! ಈಗಂತು ನನಗೆ ಅಂಜಿ ಬ್ರಾಹ್ಮಣನಾಗಿ ಬಂದಿರುವದರಿಂದ ನಾನು ಈತನನ್ನು ಸರ್ವಥಾ ಹೊಡೆಯುವದಿಲ್ಲ. ಇನ್ನು ಈತನಿಗೇ ತನ್ನ ಕೀರ್ತಿಯನ್ನು ಕಾಯ್ದುಕೊಳ್ಳಬೇಕೆಂಬ ಬುದ್ಧಿಯು ಹುಟ್ಟಿದರೆ, ನನ್ನೊಡನೆ

ಯುದ್ಧಮಾಡಿ ನನ್ನನ್ನು ಕೊಂದು ಪೃಥ್ವಿಯನ್ನಾದರೂ ಸ್ವಾಧೀನಪಡಿಸಿಕೊಂಡಾನು, ಅಥವಾ ಯುದ್ಧದಲ್ಲಿ ಸತ್ತಾದರೂ ಬಿದ್ದಾನು!

ಪರೀಕ್ಷಿತರಾಜಾ, ಈ ಮೇರೆಗೆ ಪಾಂಡಿತ್ಯಸುರಿಸಿ ಬಲಿಯು ದಾನಕೊಡಲು ನಿಶ್ಚಯಿಸಿದ್ದನ್ನು ನೋಡಿ ಶುಕ್ರಾಚಾರ್ಯನು—"ಮೂರ್ಖಾ, ನೀನೇ ಪಂಡಿತನೆಂದು ತಿಳಿದು ನನ್ನ ಅಪ್ಪಣೆಯನ್ನು ಮೀರುವದರಿಂದ ನೀನು ಬೇಗನೆ ಐಶ್ವರ್ಯಭ್ರಷ್ಟನಾಗುವಿ" ಎಂದು ಶಾಪಕೊಟ್ಟನು; ಆದರೂ ಆ ಮಹಾತ್ಮನಾದ ಬಲಿಯು ಸತ್ಯದಿಂದ ಚಲಿಸ ಲಿಲ್ಲ. ಆತನ ಹೆಂಡತಿಯಾದ ವಿಂಧ್ಯಾವಲಿಯು ಜಲಪೂರ್ಣ ಸುವರ್ಣಪಾತ್ರವನ್ನು ತಕ್ಕೊಂಡುಬಂದಳು. ಆಗ ಬಲಿಯು ವಾಮನನ ಪಾದಪ್ರಕ್ಷಾಲನಮಾಡಿ ತೀರ್ಥವನ್ನು ಶಿರಸ್ಸಿನಲ್ಲಿ ಧರಿಸಿ ಹಸ್ತದಲ್ಲಿ ದಾನೋದಕವನ್ನು ಬಿಡಲು, ಕೂಡಲೆ ದೇವಾದಿಕರಿಗೆ ಸಂತೋ ಷವಾಗಿ, ಅವರೆಲ್ಲರೂ ಬಲಿಯ ನಿಷ್ಕಪಟವೃತ್ತಿಯನ್ನು ಹೊಗಳಿ ಅವನಮೇಲೆ ಪುಷ್ಪವೃ ಷ್ಟಿಗರೆದರು. ಪರೀಕ್ಷಿತಾ, ತಿಳಿದೂತಿಳಿದೂ ಶತ್ರುಗಳಿಗೆ ಸರ್ವಸ್ವವನ್ನು ಅರ್ಪಿಸುವವನ ದೊಡ್ಡಿಸ್ತನವನ್ನೂ, ಔದಾರ್ಯವನ್ನೂ ಏನು ವರ್ಣಿಸಬೇಕು? ತರುವಾಯ ವಾಮ ನನು ವಿಶ್ವರೂಪತಾಳಿ ಒಂದು ಪಾದದಿಂದ ಭೂಮಿಯನ್ನೂ, ಎರಡನೆಯ ಪಾದದಿಂದ ಸ್ವರ್ಗ ವನ್ನೂ, ದೇಹದಿಂದ ಆಕಾಶವನ್ನೂ ವ್ಯಾಪಿಸಿದನು. ಆಗ್ಗೆ ಬಲಿಯಬಳಿಯಲ್ಲಿ ಮೂರ ನೆಯಪಾದಕ್ಕಾಗಿ ಕೊಡಲಿಕ್ಕೆ ಏನೂ ಉಳಿಯಲಿಲ್ಲ; ಯಾಕಂದರೆ ಭಗವಂತನ ಪಾದವು ಮಹರ್ಲೋಕಾದಿ ಯಾವತ್ತು ಲೋಕಗಳನ್ನು ವ್ಯಾಪಿಸಿ, ಅದು ಸತ್ಯಲೋಕಕ್ಕೆ ಹೋಗಿ ಮುಟ್ಟಿತು! ಅಲ್ಲಿ ಬ್ರಹ್ಮಾದಿದೇವತೆಗಳು ಅದನ್ನು ಪೂಜಿಸಿದರು. ಪರೀಕ್ಷಿತರಾಜಾ, ಬ್ರಹ್ಮದೇವನ ಕಮಂಡಲೂದಕವು ಭಗವಚ್ಚರಣಸ್ಪರ್ಶದಿಂದ ಪವಿತ್ರವಾದದ್ದರಿಂದ, ಅದು ಗಂಗಾರೂಪವನ್ನು ಹೊಂದಿ, ಆಕಾಶದಿಂದ ಬೀಳುತ್ತ ಬೀಳುತ್ತ ಭೂಲೋಕಕ್ಕೆ ಬಂದಿತು. ಇತ್ತ ಬಲಿಯ ಯಜ್ಞಮಂಟಪದಲ್ಲಿ ದೈತ್ಯರು ವಾಮನನ ಮೋಸಕ್ಕಾಗಿ ಅವನನ್ನು ಹೊ ಡೆಯಹೋಗಲು, ವಿಷ್ಣುವಿನ ಪಾರ್ಷದರು ಬಹುಜನ ದೈತ್ಯರನ್ನು ಸಂಹರಿಸಿದರು. ಆಗ ಬಲಿಯು ದೈತ್ಯರನ್ನು ಕುರಿತು—ಎಲೈ ವಿಪ್ರಚಿತ್ತೀ, ಎಲೈ ರಾಹೂ, ಎಲೈ ನೇಮೀ, ಈಗ ನಮಗೆ ಕಾಲವು ಪ್ರತಿಕೂಲವಿರುವದರಿಂದ ನೀವು ಯುದ್ಧಮಾಡಬೇಡಿರಿ. ಸರ್ವಪ್ರಾಣಿಗಳಿಗೆ ಸುಖದುಃಖಗಳನ್ನು ಒದಗಿಸಿಕೊಡುವ ಕಾಲನಿಗೆ ವಿರುದ್ಧವಾಗಿ ನಡೆ ಯುವದರಲ್ಲಿ ಅರ್ಥವೇನು? ಆದ್ದರಿಂದ ಈಗ ಯುದ್ಧಮಾಡದೆ ಕಾಲನಿರೀಕ್ಷಣೆಮಾಡುತ್ತ ಸ್ವಸ್ಥವಾಗಿ ಕುಳಿತುಕೊಳ್ಳಿರಿ, ಎಂದು ಹೇಳಲು, ದೈತ್ಯರು ಯುದ್ಧವನ್ನು ನಿಲ್ಲಿಸಿ ರಸಾತಲಕ್ಕೆ ಹೋದರು. ಇತ್ತ ಗರುಡನು ಭಗವಂತನ ಇಚ್ಛೆಯನ್ನರಿತು ಬಲಿಯನ್ನು ವರುಣಪಾಶದಿಂದ ಬಂಧಿಸಿದನು! ರಾಜಾ, ಹೀಗೆ ಬಂಧಿಸಿದ್ದನ್ನು ಕೇಳಿ ಆಶ್ಚರ್ಯಪಡ ಬೇಡ. ಬಲಿಯ ಸರ್ವಸ್ವವನ್ನು ಹರಣಮಾಡಿದ ಭಗವಂತನು ಆತನ ದೇಹವನ್ನು ಹರ ಣಮಾಡಿ, ಆತನ ದೇಹಾಭಿಮಾನವನ್ನು ಕಳೆದು ಆತನನ್ನು ಅನುಗ್ರಹಿಸಬೇಕೆಂತಲೇ ಹೀಗೆ ಆತನನ್ನು ಪಾಶದಿಂದ ಬಿಗಿದನು! ಆದರೂ ಬಲಿಯು ಶಾಂತವಾಗಿಯೇ ಇದ್ದನು. ಆಗ ಭಗವಂತನು ಬಲಿಗೆ—ಎಲೈ ಅಸುರನೇ, ನೀನು ವಚನಕೊಟ್ಟಂತೆ ನನಗೆ ಮೂರ

ನೆಯುಪಾದ ಭೂಮಿಯನ್ನು ಕೊಡದ್ದರಿಂದ, ನಿನ್ನ ಗುರುವಿನ ಮತದಂತೆ ನೀನು ವಚನ ಭ್ರಷ್ಟರಿಗಾಗುವ ನರಕವನ್ನು ಕೆಲವುದಿವಸ ಭೋಗಿಸಬೇಕಾಗುವದು, ಎಂದು ಹೇಳಿದನು.

ಹೀಗೆ ಭಗವಂತನು ಬಲಿಯು ಸತ್ವಭಂಗ ಮಾಡಬೇಕೆಂದು ನುಡಿಯಲು, ಬಲಿಯು ಸ್ವಲ್ಪವಾದರೂ ತನ್ನ ಸತ್ವವನ್ನು ಕಳೆದುಕೊಳ್ಳದೆ ಗಂಭೀರ ವಾಣಿಯಿಂದ ವಾಮನ ನನ್ನು ಕುರಿತು—ಹೇ ಉತ್ತಮ ಕೀರ್ತೇ, ಸುರಶ್ರೇಷ್ಠಾ, ನೀನು ಕಪಟದಿಂದ ಮೊದಲು ವಾಮನ ರೂಪವನ್ನೂ, ಆಮೇಲೆ ವಿಶ್ವರೂಪವನ್ನೂ ತಾಳಿದ್ದರಿಂದ ನನ್ನ ಮಾತು ಸುಳ್ಳು ಬೀಳುವದಿಲ್ಲ; ಇದರ ಮೇಲೆಯೂ ಸುಳ್ಳುಬೀಳುತ್ತದೆಂದು ನೀನು ತಿಳಿಯುತ್ತಿದ್ದರೆ, ನಾನು ಹ್ಯಾಗೆ ನಡೆದರೆ ಸತ್ಯಪಾಲನ ಮಾಡಿದಹಾಗಾಗುವದೆಂಬದನ್ನು ನನಗೆ ಹೇಳು. ದೇವಾ, ನಿನ್ನ ಮೂರನೆಯ ಪಾದಕ್ಕಾಗಿ ನನ್ನ ಮಸ್ತಕವನ್ನು ಕೊಡುವೆನು, ಅದರ ಮೇಲೆ ನಿನ್ನ ಪಾದವನ್ನು ಇಡು. ನೀನು ಹೊರಗಿನಿಂದ ದೈತ್ಯರ ಶತ್ರುವಾಗಿ ತೋರುತ್ತಿದ್ದರೂ, ನಮ್ಮ ತಮೋಗುಣವನ್ನು ನಾಶಮಾಡುವದರಿಂದ ನೀನು ನಮ್ಮ ನಿಜವಾದ ಹಿತಕರ್ತೃವಾಗಿರುತ್ತೀ! ಈ ವರೆಗೆ ಎಷ್ಟೋ ದೈತ್ಯರು ವಿರೋಧ ಭಕ್ತಿಯಿಂದ, ನಿನ್ನ ನಿಸ್ಸೀಮ ಭಕ್ತರು ಹೊಂದುವ ಪದವಿಯನ್ನು ಹೊಂದಿರುವರು, ಎಂದು ನುಡಿಯುತ್ತಿರಲು, ಪ್ರಹ್ರಾದನು ಅಲ್ಲಿಗೆ ಬಂದು, ತನ್ನ ಮೊಮ್ಮಗನ ಸರ್ವಸ್ವವನ್ನೂ ಹರಣಮಾಡಿ ಆತನನ್ನು ಅನುಗ್ರಹಿಸಿದ್ದನ್ನು ನೋಡಿ ಭಗವಂತನನ್ನು ಅಭಿನಂದಿಸಿದನು. ಅಷ್ಟರಲ್ಲಿ ಬಲಿಯ ಹೆಂಡತಿಯಾದ ವಿಂಧ್ಯಾವಲಿಯು ಅಲ್ಲಿಗೆ ಬಂದು ಕೈಜೋಡಿಸಿ ಭಗವಂತನನ್ನು ಕುರಿತು—ಪರಮೇಶ್ವರಾ, ಈ ವಿಶ್ವವನ್ನು ನೀನು ನಿನ್ನ ಕ್ರೀಡೆಗಾಗಿ ನಿರ್ಮಾಣ ಮಾಡಿರುವದರಿಂದ ಅದರ ಸ್ವಾಮಿಯು ನೀನೇ ಆಗಿರುತ್ತೀ. ಹೀಗಿದ್ದು, ನಾವು ತ್ರೈಲೋಕ್ಯದ ಅಧಿಪತಿಗಳೆನ್ನುವದು ಅಜ್ಞಾನವೇ ಸರಿ. ನನ್ನ ಪತಿಯಾದರೂ ಅದೇ ವರ್ಗದಲ್ಲಿ ಬರುವರು. "ನಾನು ಸ್ವತಂತ್ರನು, ಕರ್ತೃತ್ವಶಾಲಿಯು" ಎಂಬ ಅವರ ಅಭಿಮಾನವನ್ನು ನೀನು ಹರಣ ಮಾಡಿದೆ; ಅಂದಮೇಲೆ ಅವರು ನಿನಗೇನು ಅರ್ಪಿಸುವರು? ಈಗ ನಿನ್ನ ಮೂರನೆಯ ಪಾದಕ್ಕಾಗಿ ತಮ್ಮ ದೇಹವನ್ನು ಕೊಡಲು ಅವರು ಸಿದ್ಧವಾಗಿರುವರು! ಆದರೆ ಆ ದೇಹವಾದರೂ ಅವರದೋ? ಈ ಮಾತು ಇನ್ನೂ ಅವರ ಲಕ್ಷದಲ್ಲಿ ಬಾರದ್ದರಿಂದ ಅವರ ದೇಹಾಭಿಮಾನವು ಇನ್ನೂ ಅಳಿದಿಲ್ಲವೆಂದು ಹೇಳಬೇಕಾಗುತ್ತದೆ; ಆದರೆ ದೇವಾ, ನೀನು ದಯಾಳುವಾದದ್ದರಿಂದ ಅವರ ಬಂಧವಿಮೋಚನ ಮಾಡು, ಎಂದು ಪ್ರಾರ್ಥಿಸಲು, ಬ್ರಹ್ಮದೇವನೂ ಆಕೆಯ ಮಾತನ್ನು ಎತ್ತಿಕೊಂಡನು. ಆಗ ಭಗವಂತನು ಬ್ರಹ್ಮದೇವಾ, ನಾನು ಯಾರಮೇಲೆ ಅನುಗ್ರಹಮಾಡುವೆನೋ ಅವರ ಸರ್ವಸ್ವವನ್ನು ಮೊದಲು ಹರಣಮಾಡುವೆನು; ಅದರಂತೆ ಈಗ ನಾನು ಈ ದೈತ್ಯನ ಸರ್ವಸ್ವ-ಹರಣಮಾಡಿದರೂ ಈತನು ಸತ್ಯಭ್ರಷ್ಟನಾಗದೆ, ಗೆಲ್ಲಲಶಕ್ಯವಾದ ನನ್ನ ಮಾಯೆಯನ್ನು ಗೆದ್ದನು! ಆದ್ದರಿಂದ ದೇವತೆಗಳಿಗೂ ದುರ್ಲಭವಾದ ಪದವಿಗೆ ಈತನನ್ನು ಮುಟ್ಟಿಸಿರುವೆನು! ಈತನು ಮುಂದೆ ಸಾವರ್ಣಿ ಮನ್ವಂತರದಲ್ಲಿ ಇಂದ್ರನಾಗುವನು. ಆಗ ನಾನು ಈತನನ್ನು ರಕ್ಷಿಸುವೆನು. ಅಲ್ಲಿಯವರೆಗೆ ಈತನು ಪ್ರತಿಸ್ವರ್ಗದಂತೆ ಇರುವ ಸುತಲದ ಅಧಿಪತಿಯಾಗಿ ಅಲ್ಲಿ ವಾಸಿಸುವನು. ಅಲ್ಲಿ

ನಾನು ಗದಾಪಾಣಿಯಾಗಿ ಈತನ ಮನೆಬಾಗಿಲು ಕಾಯುವೆನು, ಎಂದು ಹೇಳಿದನು. ಭಗವಂತನ ಈ ಮಾತನ್ನು ಕೇಳಿ ಪರಮಾನಂದಪಟ್ಟ ಬಲಿಯು ಭಗವದಾಜ್ಞೆಯಂತೆ ಸುತುಲಕ್ಕೆ ತನ್ನ ಪರಿವಾರಸಹಿತವಾಗಿ ಪ್ರಹ್ಲಾದನನ್ನು ಮುಂದೆ ಮಾಡಿಕೊಂಡು ಹೋಗಿ ಅಲ್ಲಿಯ ರಾಜ್ಯವಾಳಹತ್ತಿದನು. ಭಗವದಾಜ್ಞೆಯಂತೆ ಶುಕ್ರಾಚಾರ್ಯರು ಯಜ್ಞಸಮಾಪ್ತಿಯನ್ನು ಮಾಡಿದರು. ಇತ್ತ ದೇವತೆಗಳಿಗೆ ಸ್ವರ್ಗಪ್ರಾಪ್ತಿಯಾಗಿ ವಾಮನನಿಗೆ ಉಪೇಂದ್ರ ಪದವಿಯು ದೊರೆಯಿತು.

ವಿವೇಕಶೀಲಾ, ಈ ಮೇರೆಗೆ ಭಗವಾನ್ ವಿಷ್ಣುವು ವಾಮನಾವತಾರದಿಂದ ಬಲಿಯಲ್ಲಿ ತ್ರಿಪಾದಭೂಮಿಯನ್ನು ಬೇಡಿ, ಮುಂದೆ ತ್ರಿವಿಕ್ರಮವೆಂಬ ವಿಶ್ವವ್ಯಾಪಿಯಾದ ಅವತಾರವನ್ನು ತಾಳಿ, ಬಲಿಯನ್ನು ರಸಾತಲಕ್ಕೆ ಮೆಟ್ಟಿ ಇಂದ್ರನ ಪದವನ್ನು ಇಂದ್ರನಿಗೆ ಕೊಟ್ಟು ತಾನು ಬಲಿಯ ಬಾಗಿಲವನ್ನು ಕಾಯುಹತ್ತಿದನಷ್ಟೆ? ಹೀಗೆ ಜಗತ್ತಿನ ಕಲ್ಯಾಣವಾದ ಬಳಿಕ ವಿಷ್ಣುವು ತನ್ನ ವಿಶ್ವವ್ಯಾಪಿಯಾದ ತ್ರಿವಿಕ್ರಮಾವತಾರವನ್ನು ಉಪಸಂಹರಿಸದಿದ್ದರೆ, ಜಗತ್ತಿಗೆ ಹೇಗೆ ಸುಖವಾಗಬೇಕು? ದೇವತೆಗಳು ಸಾತ್ವಿಕರು, ದೈತ್ಯರು ರಾಜಸರು. ಸತ್ವಗುಣದ ಆಧಿಪತ್ಯದಿಂದ ಲೋಕಕ್ಕೆ ಶಾಂತಿಯೂ, ರಾಜಸಗುಣದ ಆಧಿಪತ್ಯದಿಂದ ಲೋಕಕ್ಕೆ ತಾಪವೂ ಆಗುವದರಿಂದ, ವಿಷ್ಣುವು ರಾಜಸಿಯಾದ ಬಲಿದೈತ್ಯನನ್ನು ಉಚ್ಚಾಸನದಿಂದ ತಳ್ಳಿ ಸಾತ್ವಿಕನಾದ ಇಂದ್ರನನ್ನು ಉಚ್ಚಪದಕ್ಕೆ ಏರಿಸಿದನು. "ಯೇ ಯಥಾಮಾಂ ಪ್ರಪದ್ಯಂತೇ ತಾಂಸ್ತಥೈವ ಭಜಾಮ್ಯಹಂ" ಎಂಬ ದೈವೀತತ್ವದಂತೆ, "ನೀನಿದ್ದಂತೆ ನಾನಿರುವೆನೆ"ನ್ನುವದು ದೈವೀಧರ್ಮವು; ಆದರೆ ಇದಕ್ಕೆ ವಿರುದ್ಧವಾಗಿ ಅಹಂಕಾರಾವ್ರತರಾದ ದೈತ್ಯರು "ನಾವಿದ್ದಂತೆ ನೀವಿರಬೇಕೆಂ"ದು ಜಗತ್ತಿಗೆ ಹೇಳುವದರಿಂದ, ಪರಸ್ವಾತಂತ್ರ್ಯಪಹಾರಕವಾದ ಆ ಧರ್ಮವು ಆಸುರೀಧರ್ಮವೆನಿಸುವದು. ದೈವೀಧರ್ಮದಲ್ಲಿ ಎಲ್ಲರ ಜೀವಾತ್ಮಗಳು ಜಗದಾತ್ಮನಿಗೆ ಸಂಬಂಧಪಟ್ಟವೆಂಬ ಭಾವವು ಜಾಗ್ರತವಾಗಿರುವದರಿಂದ, ಆ ಧರ್ಮದಿಂದ ಜೀವಮಾತ್ರಗಳ ಸ್ವಾತಂತ್ರ್ಯಕ್ಕೆ ಬಾಧೆ ಬರುವದಿಲ್ಲವು; ಆದ್ದರಿಂದ ಜೀವನು "ಆತ್ಮೈವಾತ್ಮನೋ ಬಂಧುರಾತ್ಮೈವರಿಪುರಾತ್ಮನಃ" ಎಂಬ ತತ್ವದಂತೆ ಬೇಕಾದರೆ ತಾನು ವಿಷಯವನ್ನು ಆಶ್ರಯಿಸಿ ಪತಿತನೂ ಆಗಬಹುದು; ಬೇಡಾದರೆ ಸದ್ಗುರುವನ್ನು ಆಶ್ರಯಿಸಿ ಪಾವನನೂ ಆಗಬಹುದು; ಆದರೆ ಈ ಸ್ವಾತಂತ್ರ್ಯವು ಆಸುರೀಧರ್ಮದ ಆಧಿಪತ್ಯದ ಕೆಳಗೆ ಜೀವರಿಗೆ ಉಳಿಯುವದಿಲ್ಲ. ಬಲಿಯು ಎಷ್ಟು ನ್ಯಾಯಿಯೂ, ಧರ್ಮಿಷ್ಠನೂ, ಸತ್ಯವಾದಿಯೂ, ಪ್ರಜಾಹಿತದಕ್ಷನೂ ಆಗಿದ್ದರೂ, ಆತನು ದೈತ್ಯನಾಗಿ ಎಲ್ಲರೂ ತನ್ನ ಶಾಸನಕ್ಕೆ ಒಳಗಾಗಿರಬೇಕೆಂದು ಹೇಳುತ್ತಿದ್ದದ್ದರಿಂದ ಜೀವಮಾತ್ರಗಳು ಆಸುರೀಬಲದ ಆತನ ಶಾಸನದಿಂದ ಬದ್ಧರಾಗಿ, ಅವರಿಗೆ ಪತಿತರಾಗಲಿಕ್ಕೂ, ಪಾವನರಾಗಲಿಕ್ಕೂ ಸ್ವಾತಂತ್ರ್ಯವಿದ್ದಿಲ್ಲ. ಹೀಗೆ ಜೀವಾತ್ಮನ ಸ್ವಾತಂತ್ರ್ಯ ಹರಣಮಾಡುವ ದೈತ್ಯರು ಒಂದಿಲ್ಲೊಂದು ದಿನ ನಷ್ಟವಾಗಲೇ ಬೇಕಾಗುವದು; ಯಾಕಂದರೆ ಆತ್ಮನ ಸ್ವಾತಂತ್ರ್ಯವು ಸ್ವಯಂಸಿದ್ಧವಾಗಲಿ, ಈಶ್ವರದತ್ತವಾಗಲಿ ಆಗಿರುವದರಿಂದ, ಅದನ್ನು ಕಡೆತನಕ ಕಸಿದುಕೊಳ್ಳಲು ಯಾರೂ ಸಮರ್ಥರಾಗ

ಲಾರರು. ಮಂದಿಯ ಸ್ವಾತಂತ್ರ್ಯಹರಣಮಾಡುವವರ ಸ್ವಾತಂತ್ರ್ಯವು ಒಂದಿಲ್ಲೊಂದು ದಿನ ನಾಶವಾಗುವದಂತು ಇರಲಿ, ಅವರ ನಾಶವೂ ಆಗುವ ಸಂಭವವಿರುವದು. ಅಂತೇ ಶ್ರೀ ವಿಷ್ಣುವು ತ್ರಿವಿಕ್ರಮಾವತಾರದಿಂದ ಬಲಿಯನ್ನು ಪದಭ್ರಷ್ಟಮಾಡಿ ಪಾತಾಳಕ್ಕೆ ಮೆಟ್ಟಿದನು.

ವಿವೇಕಶೀಲಾ, ವಿಷ್ಣುವು ಹೀಗೆ ಲೋಕಕಲ್ಯಾಣ ಮಾಡಿದ್ದೆಲ್ಲ ವಿಹಿತವಾಯಿತು; ಆದರೆ ನಾನೇ ಸರ್ವರ ಅಧಿಪತಿಯೆಂದು ಆಸುರೀಭಾವದಿಂದ ಅಭಿಮಾನಪಡುವ ಅಹಂಕಾರಿಯಾದ ಬಲಿದೈತ್ಯನನ್ನು ವಿಷ್ಣುವು "ಸೇರಿಗೆ ಸವಾಸೇರು" ಅನ್ನುವಂತೆ ತ್ರಿವಿಕ್ರಮಾವತಾರದಿಂದ ಸೋಲಿಸುವ ಭರದಲ್ಲಿ ಆ ವಿಷ್ಣುವಿನ ತ್ರಿವಿಕ್ರಮ ರೂಪವೂ ಭೃಗುಶಾಪದ ಪಾಲನೆಗಾಗಿ ಅಹಂಕಾರತಾಳಲು, ಅದನ್ನು ಭಗವಾನ್ ಸದಾಶಿವನು ತಾನು ಮೊದಲು ವಿಷ್ಣುವಿಗೆ ಅಭಯವಿತ್ತಂತೆ ಉಪಸಂಹರಿಸಬೇಕಾಯಿತು. ತ್ರಿವಿಕ್ರಮನ ಪಾದವು ಸತ್ಯಲೋಕಕ್ಕೆ ಹೋದಾಗ ಲೋಕಕಲ್ಯಾಣದ ಕಾರ್ಯವಾಗಿ ಹೋಗಿರಲು, ಬ್ರಹ್ಮದೇವನು ಆ ಪಾದವನ್ನು ಪೂಜಿಸುವದಕ್ಕಾಗಿ—"ಈ ಪಾದವು ಈಶ್ವರ ಪಾದವಾಗಿದ್ದರೆ ಪೂಜೆಗೆ ಯೋಗ್ಯವಾಗಲಿ, ಆಗದಿದ್ದರೆ ಕೊಳೆತು ನೀರು ಹರಿಯಲಿ" ಎಂದು ನುಡಿದಾಗ, ಆಪಾದವು ಕೊಳೆತು ಹರಿಯಹತ್ತಿತೆಂದು ಪುರಾಣಾಂತರಗಳಲ್ಲಿ ಹೇಳಿದೆ. ಸಾತ್ವಿಕನಾದ ಭಗವಾನ್ ವಿಷ್ಣುವು ಭೃಗುಶಾಪದ ಪಾಲನೆಗಾಗಿ ಅಜ್ಞಾನಾವೃತನಾಗಬೇಕಾಗಿರಲು, ಆ ಶಾಪವೇ ಕಾರಣವಾಗಿರುವ ತ್ರಿವಿಕ್ರಮಾವತಾರವು ಲೋಕಕಲ್ಯಾಣದ ಕಾರ್ಯವಾದಬಳಿಕ ಶಿವಸಂಕಲ್ಪದಂತೆ ಅಜ್ಞಾನದ ಆರೋಪದಿಂದ ಅಹಂಕಾರತಾಳಿ ರಾಜಸ–ತಾಮಸ ಗುಣಗಳುಳ್ಳದ್ದಾಗಲು, ಆ ಅವತಾರದ ಪಾದವು ಈಶ್ವರಪಾದವು ಹ್ಯಾಗಾದೀತು? ಅಂತೇ ಆ ಪಾದವು ಕೊಳೆತು ಸೋರಿರಬಹುದು! ಹಾಗೆ ಪಾದವು ಕೊಳೆತು ಸೋರುತ್ತಿರುವಾಗ ತ್ರಿವಿಕ್ರಮನು ಕ್ರೋಧಾವೇಶತಾಳಿ ತನ್ನ ಆ ಪಾದದಿಂದ ಬ್ರಹ್ಮನನ್ನು ಒದೆಯಹೋಗಲು, ಬ್ರಹ್ಮನ ಪ್ರಾರ್ಥನೆಯಂತೆ ಸಾಕ್ಷಾತ್ ಪರಮೇಶ್ವರನು ಆ ತ್ರಿವಿಕ್ರಮಾವತಾರವನ್ನು ಸಂಹರಿಸಿ ಅದರ ಬೆನ್ನೆಲವನ್ನು ಧರಿಸಬೇಕಾಯಿತು! ವಿವೇಕಶೀಲಾ, ತನಗಿಂತಲೂ ತನ್ನ ವೈಭವವನ್ನರಿತಿರುವ ತನ್ನ ಭಕ್ತರೇ ಶ್ರೇಷ್ಠರೆಂಬ ಈಶ್ವರೀಸಿದ್ಧಾಂತದಂತೆ, ವಿಷ್ಣುವು ಈಶ್ವರಭಕ್ತನಾದ ಭೃಗುಋಷಿಯ ಶಾಪವನ್ನು ನಡೆಯಗೊಟ್ಟಿದ್ದೂ, ಆ ಪ್ರಸಂಗದಲ್ಲಿ ತ್ರಿಮೂರ್ತಿಗಳ ಉತ್ಪತ್ತಿಸ್ಥಾನವಾದ ಭಗವಾನ್ ಸದಾಶಿವನು ತಾನು ವಿಷ್ಣುವಿಗೆ ಅಭಯವಿತ್ತಂತೆ, ತನ್ನ ರೂಪವಾದ ವಿಷ್ಣುವಿನ ಅವತಾರದ ಅಜ್ಞಾನವನ್ನು ದೂರಮಾಡಿ, ಆ ಅವತಾರದ ಅವಶೇಷವನ್ನು ಧರಿಸಿ ಅದನ್ನು ಸಫಲಗೊಳಿಸಿದ್ದೂ ಸ್ವಾಭಾವಿಕವೇಸರಿ! ವಿವೇಕಶೀಲಾ, ತ್ರಿಮೂರ್ತಿಗಳಲ್ಲಿ ಯಾರೇ ಆಗಲಿ, ತಾವು ಅನ್ಯರಿಗೆ ವರಪ್ರದಾನಮಾಡಿದ ಸಂಬಂಧದಲ್ಲಿ, ಹಾಗು ಮುದಿಯ ಶಾಪಕ್ಕೆ ಒಳಗಾದ ಸಂಬಂಧದಲ್ಲಿ ಅತ್ಯಂತ ಸರಳ ರೀತಿಯಿಂದ ವರ್ತಿಸಿರುವದನ್ನು ಮರೆಯಲಾಗದು. ಈ ಸರಳತನವೇ ದೇವತ್ವದ ಲಕ್ಷಣವಾಗಿರುವದು. ಶಾಪಾನುಗ್ರಹಗಳ ದುಷ್ಪರಿಣಾಮವನ್ನು ದೇವತೆಗಳು ಅನ್ಯರೂಪದಿಂದ ನಿವಾರಿಸಬಹುದಲ್ಲವೆ. ಆ ಶಾಪಾನುಗ್ರಹಗಳಿಗೆ ಸಂಬಂಧಪಟ್ಟ ರೂಪದಲ್ಲಿ ನಿವಾ

ರಿಸದಿರುವದೊಂದು ದೇವತೆಗಳ ಧರ್ಮವಾಗಿರುವದು! ಇರಲಿ, ಭಗವಾನ್ ವಿಷ್ಣುವಿನ ವಾಮನ-ತ್ರಿವಿಕ್ರಮಾವತಾರಗಳು ಭಗವತ್ಸ್ವರೂಪಗಳೇ ಆಗಿರುವದರಿಂದ ಭಗವದ್ಭಕ್ತರಿಂದ ಅವು ಈಗಲೂ ಪೂಜ್ಯವಾಗಿರುತ್ತವೆ! ಮೇಲಿನ ನೃಸಿಂಹಾವತಾರದಲ್ಲಿ ಹೇಳಿದ ರಹಸ್ಯವನ್ನೂ, ಭಗವಾನ್ ವೀರಭದ್ರನು ಹೇಳಿದ ರಹಸ್ಯವನ್ನೂ ಇಲ್ಲಿಯೂ ನೀನು ನೆನಪಿಗೆ ತಂದುಕೋ.

ಈ ಮೇರೆಗೆ ಹೇಳಿದ್ದನ್ನು ಕೇಳಿ ವಿವೇಕಶೀಲನು—"ಸದ್ಗುರೋ, ನೀವು ಹೇಳಿದ ರಹಸ್ಯವು ತಿಳಿಯಿತು; ಆದರೆ ಬಲಿಯು ಮಹಾನ್ಯಾಯಿಯೂ, ಅತ್ಯಂತ ಧರ್ಮಿಷ್ಠನೂ, ಸತ್ಯವಾದಿಯೂ ಆದದ್ದಕ್ಕೆ ಫಲವೇನು ದೊರೆತಂತಾಯಿತು? ಆತನು ರಸಾತಳಕ್ಕೆ ಇಳಿದದ್ದೇ ಫಲವೇನು? ಗುರುವರಾ, ತನ್ನ ಗುರುವಾದ ಶುಕ್ರಾಚಾರ್ಯನು ಶಾಪ ಕೊಟ್ಟರೂ ಬಲಿಯು ಸತ್ಯಭ್ರಷ್ಟನಾಗಲಿಲ್ಲವಲ್ಲ!" ಎಂದು ಪ್ರಶ್ನಮಾಡಲು, ಸಿದ್ಧಮುನಿಗಳು—ವಿವೇಕಶೀಲಾ, ಬಲಿಯು ಅಂಥ ಘನವಾದ ಯೋಗ್ಯತೆಯುವನೆಂತಲೇ ಭಗವಂತನು ಮುಂದಿನ ಮನ್ವಂತರದಲ್ಲಿ ಅವನಿಗೆ ಇಂದ್ರಪದವಿಯನ್ನು ಕೊಟ್ಟು, ಅಲ್ಲಿಯವರೆಗೆ ಇಂದ್ರನ ಭೋಗಕ್ಕೆ ಸಮಾನವಾದ ಭೋಗವುಳ್ಳ ಸುತುಲದ ಅಧಿಪತಿಯಾಗಿರಲು ಅವನನ್ನು ನಿಯಮಿಸಿ, ತಾನು ಆತನ ಮನೆಯ ಬಾಗಿಲ ಕಾಯಹತ್ತಿದನು! ತ್ರೈಲೋಕ್ಯದ ಒಡೆಯನಾದ ಶಾಶ್ವತ ದೇವರನ್ನು ಆಳುಮಾಡಿಕೊಳ್ಳುವ ಯೋಗ್ಯತೆಯು ಹೆಚ್ಚಿನದೋ, ಅಥವಾ ತ್ರೈಲೋಕ್ಯದ ನಾಶವಂತ ವೈಭವಕ್ಕೆ ತಾನೇ ಆಳಾಗಿರುವ ಯೋಗ್ಯತೆಯು ಹೆಚ್ಚಿನದೊ ನೀನೇ ವಿಚಾರಮಾಡು! ಬಲಿಯು ಅಂಥ ಘನತರವಾದ ಯೋಗ್ಯತೆಯುವನೆಂತಲೇ ಶ್ರೀವಿಷ್ಣುರೂಪ ಪರಮಾತ್ಮನು ಮೊದಲು ಅವನ ತ್ರೈಲೋಕ್ಯಾಭಿಮಾನವನ್ನೂ, ಆ ಮೇಲೆ ಅವನ ದೇಹಾಭಿಮಾನವನ್ನೂ ಅರ್ಥಾತ್ ಅವನ ಸರ್ವಸ್ವವನ್ನೂ ಹರಣಮಾಡಿ ಅವನಿಗೆ ತನ್ನ (ಭಗವತ್ಸ್ವರೂಪದ) ಜ್ಞಾನವನ್ನು ಮಾಡಿಕೊಟ್ಟನು! ಮತ್ತು ಬಲಿಯು ಮಹಾಧರ್ಮಿಷ್ಠನೆಂಬದನ್ನು ತೋರಿಸುವದಕ್ಕಾಗಿಯೇ ಪರಮಾತ್ಮನು ಭಿಕ್ಷುಕನಾಗಿ ಅವನಬಳಿಗೆ ಹೋಗಿ ಅವನನ್ನು ಗೌರವಿಸಿದನು; ಆದರೆ ಬಲಿಯು ಎಂಥ ಧರ್ಮಿಷ್ಠನೂ, ಸತ್ಯವಾದಿಯೂ ಆಗಿದ್ದರೂ ಅವನು ರಾಜಸಿಯಾದದ್ದರಿಂದ ಅವನ ಅಹಂಕಾರದ ಪರಸ್ವಾತಂತ್ರ್ಯಪಹಾರಕ ಆಧಿಪತ್ಯದಿಂದ ಲೋಕಕ್ಕೆ ಹ್ಯಾಗೆ ಸುಖವಾಗಬೇಕು? ಮೇಲಾಗಿ ಈಶ್ವರನಿಂದ ನಿಯಮಿಸಲ್ಪಟ್ಟದ್ದ ಇಂದ್ರನನ್ನು ಬಲಿಯು ಅಹಂಕಾರದಿಂದ ಹೊರದೂಡಿದ್ದನು; ಆದ್ದರಿಂದ ಪರಮಾತ್ಮನು ಆತನ ಅಹಂಕಾರವನ್ನು ನಷ್ಟಪಡಿಸಿ ತನ್ನ ಜ್ಞಾನವನ್ನು ಮಾಡಿಕೊಟ್ಟು ಲೋಕದೊಡನೆ ಬಲಿಯನ್ನೂ ಅನುಗ್ರಹಿಸಿದನು! ಒಟ್ಟಿಗೆ ಧರ್ಮಿಷ್ಠ ಅಹಂಕಾರದ ಬಲಿರಾಜನು ಹೋಗಿ, ಈಶ್ವರಕೃಪೆಯಿಂದ ಈಶ್ವರನಿಷ್ಠ ಸಾತ್ವಿಕನಾದನು; ಅಂದಬಳಿಕ ಇದರಿಂದ ಬಲಿಯ ಉತ್ಕರ್ಷವಾಯಿತೋ, ಅಪಕರ್ಷವಾಯಿತೋ ನೀನೇ ವಿವೇಕದಿಂದ ತಿಳಿದುಕೋ. "ಯಸ್ಯಾನುಗ್ರಹಮಿಚ್ಛಾಮಿ ತಸ್ಯ ವಿತ್ತಂ ಹರಾಮ್ಯಹಂ" ಎಂಬ ಭಗವದುಕ್ತಿಯಂತೆ ಭಗವಂತನು ಅನುಗ್ರಹ ಯೋಗ್ಯನನ್ನಾಗಿ ಮಾಡುವದಕ್ಕಾಗಿ ಭಕ್ತರ ಸರ್ವಸ್ವವನ್ನು ಹರಣಮಾಡಬೇಕಾಗುತ್ತದೆ.

ಯಾತೆಯೋ ಭಗವಂತನು ಬಲಿಯು ಸರ್ವಸ್ವವನ್ನು ಹರಣಮಾಡಿದನು; ಬಲಿಯಲ್ಲಿ ತ್ರೈಲೋಕ್ಯಾಧಿಪತ್ಯದ ಅಭಿಮಾನವಿದ್ದಂತೆ ತನ್ನ ದೇಹಾಭಿಮಾನವೂ ಇತ್ತೆಂಬದಕ್ಕೆ ಆತನ ಹೆಂಡತಿಯಾದ ವಿಂಧ್ಯಾವಲಿಯ ಮಾತುಗಳೇ ಸಾಕ್ಷಿಯಾಗಿರುವವು; ಇದಲ್ಲದೆ ಬಲಿಯು ಭಗವತ್ಕೃಪೆಯಿಂದ ತಾನು ಸಾತ್ವಿಕನಾಗಲಿಕ್ಕೆ ಎಷ್ಟು ಆತುರಪಡುತ್ತಿದ್ದನೆಂಬದಕ್ಕೆ ಆತನು ಒಮ್ಮೆ ಭಗವಾನ್ ಶ್ರೀ ಕೃಷ್ಣನನ್ನು ಪ್ರಾರ್ಥಿಸಿದ್ದೇ ಉದಾಹರಣವಾಗಿರುವದು. ಶ್ರೀ ಕೃಷ್ಣನು ಕಂಸನಿಂದ ಕೊಲ್ಲಲ್ಪಟ್ಟಿದ್ದ ತನ್ನ ಹಿಂದಿನ ಆರು ಜನ ಅಣ್ಣಂದಿರನ್ನು ತನ್ನ ತಾಯಿಯಾದ ದೇವಕಿಯ ಇಚ್ಛೆಯಂತೆ ಸುತುಲದಿಂದ ತರುವದಕ್ಕಾಗಿ ಬಲಿಯ ಬಳಿಗೆ ಬಲರಾಮನೊಡನೆ ಹೋಗಿರಲು, ಬಲಿಯು ಭಗವಂತನನ್ನು ಪೂಜಿಸಿ ಹಲವುಬಗೆಯಿಂದ ಸ್ತೋತ್ರಮಾಡಿ—"ಎಲೈ ವಿಶ್ವಮೂರ್ತಿಯೇ, ಸತ್ವ—ರಜ—ತಮ ಈ ಮೂರು ಗುಣಗಳಲ್ಲಿ ರಜಸ್ತಮೋಗುಣಗಳಿಗೆ ಹೆಚ್ಚು ಫಲಪ್ರಾಪ್ತಿಯಾಗುವದೆಂಬದು ನನ್ನ ಅನುಭವಕ್ಕೆ ಬಂದಿರುವದು. ಆದರೂ ನನಗೆ ಸತ್ವಗುಣಾತ್ಮಕಬುದ್ಧಿಯನ್ನೇಕೊಡು; ನಿಷ್ಕಾಮಬುದ್ಧಿಯಿಂದ ನಿನ್ನ ಚರಣದ ಸಹವಾಸವನ್ನು ಮಾಡುವ ಯೋಗವನ್ನು ಒದಗಿಸಿಕೊಟ್ಟು ಸಂಸಾರದಿಂದ ನನ್ನನ್ನು ಮುಕ್ತಮಾಡು; ಗಿಡದಮೇಲಿಂದ ತಾನಾಗಿ ಉದುರಿಬಿದ್ದ ಹಣ್ಣುಗಳನ್ನು ತಿಂದು ಜೀವಿಸುವ ವಾಸನೆಯನ್ನು ನನ್ನಲ್ಲಿ ಉತ್ಪನ್ನಮಾಡು; ನಿತ್ಯಸತ್ಸಂಗವನ್ನು ಒದಗಿಸಿಕೊಟ್ಟು ನನ್ನಕೈಯಿಂದ ನಿನ್ನ ದಾಸ್ಯವನ್ನು ಮಾಡಿಸಿ ನನ್ನನ್ನು ನಿಷ್ಪಾಪನನ್ನಾಗಿ ಮಾಡು," ಎಂದು ಪ್ರಾರ್ಥಿಸಿದನು!

ವಿವೇಕಶೀಲಾ, ಒಟ್ಟಿಗೆ ಭೃಗುಶಾಪದಿಂದ ಶ್ರೀ ವಿಷ್ಣುಪರಮಾತ್ಮನು ತಾಳಿದ ಯಾವ ಅವತಾರಗಳೂ ಲೋಕಕಲ್ಯಾಣವಾದನಂತರ ಯಥಾಸ್ಥಿತವಾಗಿ ಉಳಿದಿರುವದಿಲ್ಲ. ಅವತಾರವೆಂದರೆ ಕೆಳಗೆ ಇಳಿದುಬರೋಣವು- ಅಂದರೆ ಅಲೌಕಿಕನಾದ ಸಚ್ಚಿದಾನಂದ ಘನಪರಮಾತ್ಮನು ಲೋಕಕಲ್ಯಾಣಕ್ಕಾಗಿ ಲೌಕಿಕನಾಗಿ ಪ್ರಕಟವಾಗುವದು- ಅಂದಬಳಿಕ ಮೂಲಪರಮಾತ್ಮನದೃಷ್ಟಿಯಿಂದ ಅವು ಶಾಶ್ವತವಾಗಿ ಹ್ಯಾಗೆ ಉಳಿದಾವು? "ಈ ಮುಸಲದಿಂದ ಯಾದವರ ನಾಶವಾಗಲೆಂ"ದು ಋಷಿಗಳು ಶಾಪಕೊಟ್ಟ ನೆವದಿಂದ ದಯಾಘನನೂ, ಸಮಯಾನುವರ್ತಿಯೂ, ಸ್ವತಂತ್ರನೂ ಆದ ಶ್ರೀ ಕೃಷ್ಣಪರಮಾತ್ಮನು "ಜರಾ" ಎಂಬ ಹೆಸರಿನ ವ್ಯಾಧನ ಬಾಣತಾಕಿ ದೇಹತ್ಯಾಗಮಾಡಿರಲು, ಸಾಕ್ಷಾತ್ ಸದಾಶಿವನ ಶರಭಾದಿ ಅವತಾರಗಳಿಂದ ವಿಷ್ಣುವಿನ ಅವತಾರಗಳ ಉಪಸಂಹಾರವಾಗಿದ್ದರೆ ವ್ಯತ್ಯಾಸವೇನು? ನಾವು ಹಾಕಿದ ವೇಷಗಳನ್ನು ನಾವೇಕಳಚಿಚಲ್ಲಲಿ, ಮಂದಿಕಳಚಿಚಲ್ಲಲಿ, ಅವು ವೇಷಗಳೇ ಆದಾವಲ್ಲದೆ ಅವು ನಮ್ಮ ನಿಜರೂಪಗಳಾಗಬಹುದೆ? ಅದರಂತೆ ವೇಷಗಳ ನಾಶದೊಡನೆ ನಮ್ಮ ನಿಜರೂಪದ ನಾಶವಾಗಬಹುದೆ? ಅಂದಬಳಿಕ ಜಗತ್ಕಲ್ಯಾಣಕ್ಕಾಗಿ ಕಾಲಕಾಲಕ್ಕೆ ಆದ ಭಗವದವತಾರಗಳು ತಾತ್ಕಾಲಿಕಗಳೆಂದು ತಿಳಿದು ಅವುಗಳನಾಶಕ್ಕೆ ಮಹತ್ವಕೊಡದೆ, ಶಾಶ್ವತ ಮೂಲರೂಪಕ್ಕೆ ಮಹತ್ವಕೊಡತಕ್ಕದ್ದು- ಅವತಾರವು ಮೂಲರೂಪದ ಅಂಶಮಾತ್ರವಾದದ್ದರಿಂದ ಅಂಶ ಅಂಶೀಭಾವದಂತೆ ಅಂಶವು ಮೂಲ ಅಂಶಿಯಲ್ಲಿ ಕೂಡಲು ನಾಮಿಕವಾದ ಅದರ ದೃಶ್ಯರೂಪವು ನಷ್ಟವಾಗುವದೆಂದು ತಿಳಿಯಬೇಕು.

## ೭ ನೇ ಸುಧಾತರಂಗ !

# ಶಬರ-ಶಂಕರಲೀಲೆ.

( ಮಹಾಭಾರತ. )

ಈ ಮೇರೆಗೆ ಸಿದ್ಧ ಮುನೀಶ್ವರರು ವಿವೇಚಿಸಲು, ವಿವೇಕಶೀಲಾದಿ ಶಿಷ್ಯರ ಮಾತ್ಸರ್ಯಾದಿ ಮಾನಸಿಕ ಮಲಗಳ ನಿವಾರಣವಾಗಿ ಅವರು ಪರಮಾನಂದಪಟ್ಟರು. ಅವರು ವಿವೇಕಶೀಲನ ಮುಖಾಂತರವಾಗಿ —"ಸದ್ಗುರೋ, ನಿನ್ನ ಸರಸವಾದ ತಾತ್ವಿಕನಿರೂಪಣದಿಂದ ಶ್ರವಣದ ಕುತೂಹಲವು ಮತ್ತಿಷ್ಟು ಹೆಚ್ಚಾಗುತ್ತಲಿದೆ. ನೀನು ಮಾಡಿಸಿದ ಅವತಾರಹರಲೀಲೆಗಳ ಶ್ರವಣದಿಂದ ನಾವು ಪರಮಧನ್ಯರಾದೆವು; ಆದರೆ ನಿನ್ನ ಸುಧಾವರ್ಷಿಣೀ ವಾಣಿಯಿಂದ ನಮಗೆ ನೀನು ಶಬರಶಂಕರಲೀಲೆಯು ಶ್ರವಣಮಾಡಿಸಬೇಕೆಂದು ಪ್ರಾರ್ಥಿಸುತ್ತೇವೆ. ಸದ್ಗುರೋ, ಋಷೀಶ್ವರರಾದ ವೇದವ್ಯಾಸರ ಉಪದೇಶದಂತೆ ಅರ್ಜುನನು ಇಂದ್ರಕೀಲಪರ್ವತಕ್ಕೆ ತಪಶ್ಚರ್ಯಕ್ಕಾಗಿ ಹೋಗಿ ಉಗ್ರತಪಶ್ಚರ್ಯಮಾಡಲು, ಭಗವಾನ್ ಸದಾಶಿವನು ಶಬರರೂಪದಿಂದ ಬಂದು ಅರ್ಜುನನ ಸತ್ವವನ್ನೂ, ಭಕ್ತಿಪ್ರಭಾವವನ್ನೂ ಪರೀಕ್ಷಿಸಿ ಪಾಶುಪತಾಸ್ತ್ರವನ್ನು ಹ್ಯಾಗೆ ಕೊಟ್ಟನು? ಹೀಗೆ ಭಗವಾನ್ ಪಶುಪತಿಯು ಪ್ರಸಾದ ದೊರೆತದ್ದರಿಂದ ಇಂದ್ರಾದಿ ಲೋಕಪಾಲಕರು ಅರ್ಜುನನಿಗೆ ಅಸ್ತ್ರಗಳನ್ನು ಹ್ಯಾಗೆ ಕೊಟ್ಟರು? ಅದರಂತೆ, ಅರ್ಜುನನನ್ನು ತಪಸ್ಸಿಗೆ ಕಳಿಸುವಮೊದಲು ಧರ್ಮ, ಭೀಮ, ದ್ರೌಪದಿ ಇವರಲ್ಲಿ ಗೌರವದ ಸಂವಾದವಾಯಿತಂತೆ, ಆ ಸಂವಾದಗಳ ಆಶಯವೇನು? ಇವೇ ಮೊದಲಾದ ವಿಷಯಗಳನ್ನು ನಮಗೋಸ್ಕರ ನಿರೂಪಿಸಿ ನಮ್ಮನ್ನು ಧನ್ಯರಾಗಮಾಡತಕ್ಕದ್ದು. ಎಂದು ಪ್ರಾರ್ಥಿಸಲು, ಸಿದ್ಧ ಮುನೀಶ್ವರರು — ವಿವೇಕಶೀಲಾ. ಬಹುಯೋಗ್ಯ ಪ್ರಶ್ನಮಾಡಿದೆ. ಧರ್ಮಿಷ್ಠರಾದ ಪಾಂಡವರು ದುರ್ಯೋಧನಾದಿ ದುಷ್ಟರ ದುರಾಲೋಚನೆಯ ಕೃತಿಗಳಿಂದ ವನವಾಸವನ್ನು ಭೋಗಿಸುತ್ತಿರುವಾಗ, ಧರ್ಮದಪ್ರಭುವಾದ ಭಗವಾನ್ ಸದಾಶಿವನು ದುಷ್ಟನಾಶಕ್ಕಾಗಿ ಪಾಶುಪತಾಸ್ತ್ರವನ್ನು ಹ್ಯಾಗೆ ಕೊಟ್ಟನೆಂಬದನ್ನು ನಿಮಗೆ ಹೇಳುತ್ತೇನೆ ಕೇಳಿರಿ. ನಿಮ್ಮ ಪ್ರಶ್ನಗಳಿಗೆ ಉತ್ತರಕೊಡುವಾಗ ಅನಾಯಾಸವಾಗಿ ನನಗೆ ಶಿವಚರಿತ್ರಗಳ ಸ್ಮರಣ - ಮನನಗಳಾಗಿ ನನ್ನ ಮನಸ್ಸಿನಲ್ಲಿ ಹೊಸಹೊಸ ಆನಂದದ ತೆರೆಗಳು ಉತ್ಪನ್ನವಾಗುವವು! ಮನುಷ್ಯನ ಧನ್ಯತೆಗೆ, ಶಿವಚರಿತ್ರ ಶ್ರವಣ - ಕಥನಗಳ ವ್ಯವಹಾರದಲ್ಲಿ ತಲ್ಲೀನವಾಗುವದಕ್ಕಿಂತ ಹೆಚ್ಚಿನ ಸಾಧನವಿಲ್ಲ! ವಿವೇಕಶೀಲಾ, ನಿಮ್ಮ ಸಹವಾಸದಿಂದ ನನ್ನ ಮನಸ್ಸಿಗೆ ಲೌಕಿಕ ವ್ಯವಹಾರದಲ್ಲಿ ಹರಿದಾಡಲಿಕ್ಕೆ ಆಸ್ಪದವಿಲ್ಲಬಂತಾದದ್ದು ಸಾಮಾನ್ಯಲಾಭವಲ್ಲ! ಹೀಗೆ ಶೈವಸುಧಾರ್ಣವಾಸ್ವಾದಕ್ಕೆ ಕಾರಣರಾದ ನೀವು ಧನ್ಯರೇಸರಿ! ಶಿಷ್ಯೋತ್ತಮರೇ, ಇನ್ನು ನಾನು ಹೇಳುವ ಶಿವಚರಿತ್ರದಲ್ಲಿ ಅವಧಾನವಿರಲಿ.

ದ್ರೌಪದಿಯ ಭಾಷಣ (ಕ್ಷಮಾ, ತೇಜಸ್ಸು.):—ಕೌರವಕುಲಕಲಂಕನಾದ ದುರ್ಯೋಧನನು ಶಕುನಿಯೊಡನೆ ಆಲೋಚಿಸಿ ಪಾಂಡವರನ್ನು ಮೋಸದಿಂದ ಲೆತ್ತದಾಟದಲ್ಲಿ ಸೋಲಿಸಿ ಅವರನ್ನು ಹನ್ನೆರಡು ವರ್ಷ ವನವಾಸವನ್ನೂ, ಒಂದು ವರ್ಷ ಅಜ್ಞಾತವಾಸವನ್ನೂ ಭೋಗಿಸುವದಕ್ಕಾಗಿ ಅಡವಿಗೆ ಅಟ್ಟಿದನಷ್ಟೇ? ಆ ಧರ್ಮಿಷ್ಠರಾದ ಪಾಂಡವರು ಕಾಮ್ಯಕವನದಲ್ಲಿರುವಾಗ ಶ್ರೀಕೃಷ್ಣನು ಅವರನ್ನು ಕಾಣುವದಕ್ಕಾಗಿ ಬಂದನು. ಆತನು ಹಿರಿಯರಾದ ಧರ್ಮ-ಭೀಮರನ್ನು ನಮಸ್ಕರಿಸಿ, ಓರಿಗೆಯವನಾದ ಅರ್ಜುನನನ್ನು ಆಲಿಂಗಿಸಿದನು; ಚಿಕ್ಕವರಾದ ನಕುಲಸಹದೇವರು ಕೃಷ್ಣನನ್ನು ನಮಸ್ಕರಿಸಿದರು. ತರುವಾಯ ಕೃಷ್ಣನು ಧರ್ಮರಾಜನನ್ನು ಕುರಿತು—ಧರ್ಮಾ, ಆಗ ನಾನು ದ್ವಾರಕೆಯಲ್ಲಿದ್ದರೆ, ದುರ್ಯೋಧನನು ನನ್ನನ್ನು ಕರೆಸದಿದ್ದರೂ ನಾನು ಹಸ್ತಿನಾವತಿಗೆ ಬಂದು ನಿಮ್ಮ ಅನ್ಯಾಯದ ಲೆತ್ತದಾಟವನ್ನು ನಿಲ್ಲಿಸುತ್ತಿದ್ದೆನು; ಆದರೆ ಏನು ಮಾಡಲಿ! ಆಗ ನಾನು ಶಾಲ್ವನ ಸಂಹಾರಕ್ಕಾಗಿ ಆನರ್ತದೇಶಕ್ಕೆ ಹೋಗಿದ್ದೆನು. ನಾನು ಬಂದಿದ್ದರೆ ಲೆತ್ತದ ಆಟವೇ ಆಗುತ್ತಿದ್ದಿಲ್ಲ; ಒಂದು ಪಕ್ಷದಲ್ಲಿ ಆಗಿದ್ದರೆ ದುರ್ಯೋಧನನು ಬದುಕುತ್ತಿದ್ದಿಲ್ಲ; ಆದರೆ ಮಾಡುವದೇನು! ಈಗ ನಿನ್ನ ಸ್ಥಿತಿಯು ಒಡ್ಡು ಒಡೆದ ನೀರಿನಹಾಗಾಗಿದೆ; ನಾನೇನು ಮಾಡಲಿ? ಎಂದು ಹೇಳಿ, ಮತ್ತೂ ನಾಲ್ಕು ಸಮಾಧಾನದ ಮಾತುಗಳನ್ನಾಡಿ ತಂಗಿಯಾದ ಸುಭದ್ರೆಯನ್ನೂ, ಸೋದರಳಿಯನಾದ ಅಭಿಮನ್ಯುವನ್ನೂ ಕರೆದುಕೊಂಡು ಪಾಂಡವರ ನಿರೂಪದಿಂದ ಆತನು ರಥವೇರಿ ದ್ವಾರಕೆಗೆ ಹೊರಟು ಹೋದನು. ಇತ್ತ ಧರ್ಮರಾಯನು ಬಹು ದಿವಸ ಒತ್ತಟ್ಟಿಗೆ ಇರುವದು ನೆಟ್ಟಗಲ್ಲವೆಂದು ತಿಳಿದು ಪರಿವಾರದೊಡನೆ ಕಾಮ್ಯಕವನದಿಂದ ದ್ವೈತವನಕ್ಕೆ ಸಾಗಿದನು. ಧರ್ಮರಾಜನಂಥ ಧರ್ಮಿಷ್ಠರಿದ್ದಲ್ಲಿ ಸತ್ಪುರುಷರು ತಾವಾಗಿ ಬರುವದು ಆಶ್ಚರ್ಯವಲ್ಲ. ಪಾಂಡವರು ದ್ವೈತವನದಲ್ಲಿರುವಾಗ ಮಾರ್ಕಾಂಡೇಯ ಹಾಗು ಬಕಮುನಿಗಳು ಬಂದು ಧರ್ಮರಾಜನನ್ನು ಉಚಿತವಾದ ಉಪದೇಶದಿಂದ ಸಮಾಧಾನಗೊಳಿಸಿದರು. ಹೀಗೆ ಪಾಂಡವರು ವನವಾಸದ ಕಷ್ಟಗಳನ್ನು ಅನುಭವಿಸುತ್ತ, ವನದಿಂದ ವನಕ್ಕೆ ಹೋಗುತ್ತ, ಒಂದು ದಿನ ದ್ವೈತವನದಲ್ಲಿ ದ್ರೌಪದಿಯೊಡನೆ ಕುಳಿತುಕೊಂಡು ವನವಾಸದ ದುಃಖ-ಶೋಕಗಳ ಮಾತುಗಳನ್ನಾಡುತ್ತಿರಲು, ದರ್ಶನೀಯಳೂ, ಜ್ಞಾನಸಂಪನ್ನಳೂ, ಮಹಾಪತಿವ್ರತೆಯೂ ಆದ ದ್ರೌಪದಿಯು ಧರ್ಮರಾಜನನ್ನು ಕುರಿತು—ನೃಪಶ್ರೇಷ್ಠಾ, ನಿನ್ನ ಈ ಕಷ್ಟವನ್ನು ನಾನು ನೋಡಲಾರೆನು. ಆ ನೀಚ ದುರ್ಯೋಧನನು ಕಠಿಣಹೃದಯನಾದದ್ದರಿಂದಲೇ ನಿನ್ನಂಥ ಧರ್ಮಿಷ್ಠನನ್ನು ವನವಾಸದ ದುಃಖಕ್ಕೆ ಈಡುಮಾಡಿ, ಶಕುನಿ-ಕರ್ಣ-ದುಶ್ಶಾಸನಂಥ ನೀಚರೊಡನೆ ಚಕ್ಕಂದವಾಡುತ್ತಿರುವನು! ಇದನ್ನು ನೆನಿಸಿದರೆ ನನ್ನ ಸರ್ವಾಂಗವು ತ್ರದಹಿಸುತ್ತದೆ; ಆದರೆ ನೃಪಶ್ರೇಷ್ಠಾ, ಇಂಥ ದುಃಖವನ್ನು ಸಹಿಸುತ್ತ ಕೈಲಾಗದವನಂತೆ ಸುಮ್ಮನೆ ನೀನು ಯಾಕೆ ಇರುತ್ತೀ? ಸಹನಶೀಲನಾದ್ದರಿಂದ ಸತ್ವಸ್ಥನು ನೀನು ಧರ್ಮವನ್ನು ಅತಿಕ್ರಮಿಸಲಾರದೆ ದುಃಖವನ್ನು ಸಹಿಸಿ ಸುಮ್ಮನೆಯಿದ್ದರೂ ಇರಬಹುದು; ಆದರೆ ನಿನ್ನ ಆಜ್ಞಾಧಾರಕ ಶೂರ ಬಂಧುಗಳ, ಹಾಗು ದ್ರುಪದಕುಲೋತ್ಪನ್ನಳಾದ

ನನ್ನ ಕಷ್ಟಗಳನ್ನೂ ನೋಡಿ ನಿನಗೆ ದುರ್ಯೋಧನಾದಿಗಳ ವಿಷಯುವಾಗಿ ಸಿಟ್ಟುಬರಲೊಲ್ಲದಲ್ಲ! ಸಿಟ್ಟುಬಾರದವನು ಕ್ಷತ್ರಿಯನೇ ಅಲ್ಲವೆಂದು ಜನರು ಅನ್ನುವದುಂಟು. ಪ್ರಸಂಗ ಒದಗಿದಾಗ್ಯೂ ತನ್ನ ತೇಜಸ್ಸನ್ನು ಪ್ರಕಟಿಸದ ಕ್ಷತ್ರಿಯನನ್ನು ಯಾವತ್ತೂ ಪ್ರಾಣಿಗಳು ಯಾವಾಗಲೂ ತಿರಸ್ಕರಿಸುವವು; ಆದ್ದರಿಂದ ನೀನು ಶತ್ರುಗಳನ್ನು ಯಾವಬಗೆಯಿಂದಲೂ ಕ್ಷಮಿಸಬೇಡ; ಯಾಕಂದರೆ ಪರಾಕ್ರಮದಯೋಗದಿಂದ ಅವರ ನಾಶವಾಗುವದು ಶಕ್ಯವಾಗಿರುತ್ತದೆಂಬದರಲ್ಲಿ ಸಂಶಯವಿಲ್ಲ; ಇನ್ನು ಮಾಡುವ ಪ್ರಸಂಗದಲ್ಲಿ ಕ್ಷಮೆಯನ್ನು ಮಾಡಬೇಕು, ಮಾಡಬಾರದೆಂದು ನಾನು ಹೇಳುವದಿಲ್ಲ; ಯಾಕಂದರೆ ಕ್ಷಮಿಸತಕ್ಕ ಸಮಯದಲ್ಲಿ ಕ್ಷತ್ರಿಯನು ಶಾಂತನಾಗದಿದ್ದರೆ ಅವನಿಗೆ ಇಹ—ಪರಗಳೆರಡೂ ಸಾಧಿಸದೆ ಹೋಗಿ, ಅವನು ಯಾವತ್ತು ಪ್ರಾಣಿಗಳಿಗೆ ಅಪ್ರಿಯನಾಗುವನು; ಆದರೆ ದುರ್ಯೋಧನನಂಥ ದುಷ್ಟನ ವಿಷಯದಲ್ಲಿ ಮಾತ್ರ ಕ್ಷಮೆಯು ಕೆಲಸದ್ದಲ್ಲ.

ಧರ್ಮರಾಜಾ, ಒಮ್ಮೆ ಬಲಿಚಕ್ರವರ್ತಿಯು ತನ್ನ ಅಜ್ಜನಾದ ಪ್ರಹ್ಲಾದನನ್ನು ಕುರಿತು—ತಾತಾ, ಕ್ಷಮೆ, ತೇಜ ಇವುಗಳಲ್ಲಿ ಶ್ರೇಷ್ಠವಾದದ್ದು ಯಾವದೆಂದು ಕೇಳಲು, ಪ್ರಹ್ಲಾದನು—ಅಪ್ಪಾಬಲಿ, ಯಾವಾಗಲೂ ಕಠೋರತನವೂ ಕೆಲಸದ್ದಲ್ಲ, ಯಾವಾಗಲೂ ಕ್ಷಮೆಯೂ ಕೆಲಸದ್ದಲ್ಲೆಂಬ ಮಾತನ್ನು ನೀನು ಚನ್ನಾಗಿ ಲಕ್ಷದಲ್ಲಿಡು. ಯಾವಾಗಲೂ ಸಹನಶೀಲನಾದ ಪುರುಷನನ್ನು ಅವನ ಸೇವಕರೂ, ಆಪ್ತರೂ, ಶತ್ರುಗಳೂ, ತಟಸ್ಥವೃತ್ತಿಯವರೂ ಸದಾ ತಿರಸ್ಕರಿಸುವರು. ಅಂಥವನ ಸಂಗಡ ಯಾರೂ ವಿನಯದಿಂದ ನಡೆದುಕೊಳ್ಳುವದಿಲ್ಲ. ಪ್ರಭುವು ಯಾವಾಗಲೂ ಕ್ಷಮಾಶೀಲನಾದರೆ ಆಪ್ತರೂ, ಸೇವಕರೇ ಮೊದಲಾದವರೂ ಚಕ್ಕಂದವಾಡತೊಡಗಲು, ಪರಿವಾರದಲ್ಲಿ ಇಲ್ಲದ ದೋಷಗಳು ಸೇರಿ ಅರ್ಥಹಾನಿ, ಮಾನಹಾನಿಗಳಾಗುವ ಪ್ರಸಂಗವು ಒದಗುವದು. ಇವೇ ಮೊದಲಾದವು ಕ್ಷಮೆಯಲ್ಲಿಯ ದೋಷಗಳಾಗಿರುವವು. ಅದರಂತೆ, ರಜೋಗುಣವ್ಯಾಪ್ತನಾದ ಮನುಷ್ಯನು ಯಾವಾಗಲೂ ಕೋಪಾವಿಷ್ಟನಾಗಿ ತನ್ನಲ್ಲಿಯ ಕಠೋರತನದಿಂದ ಯೋಗ್ಯವಿರಲಿ—ಅಯೋಗ್ಯವಿರಲಿ ಯಾವಾಗಲೂ ಅನ್ಯರನ್ನು ಹಲವು ಪ್ರಕಾರಗಳಿಂದ ಶಿಕ್ಷಿಸುತ್ತಲೇ ಇರುವನು; ಅದರಿಂದ ಆ ಕಠೋರಮನುಷ್ಯನ ಮಿತ್ರರೂ ಶತ್ರುಗಳಾಗುವರು; ಅವನ ಆಪ್ತೇಷ್ಟರಲ್ಲಿಯೂ ಅವನ ವಿಷಯವಾಗಿ ದ್ವೇಷಬುದ್ಧಿಯು ಉತ್ಪನ್ನವಾಗುವದು. ಅನ್ಯರನ್ನು ಅವಮಾನಗೊಳಿಸುವದರಿಂದ ಅವನು ದ್ರವ್ಯಹಾನಿ, ದೂಷಣ, ಅನಾದರ, ಸಂತಾಪ, ದ್ವೇಷ, ಮೋಹ ಇವುಗಳಿಗೆ ಗುರಿಯಾಗಬೇಕಾಗುವದು. ಇಂಥ ಸಿಟ್ಟಿನವರ ಐಶ್ವರ್ಯವು ಬೇಗನೆ ನಷ್ಟವಾಗುವದು; ಆಪ್ತೇಷ್ಟರು ಅವನನ್ನು ತ್ಯಜಿಸುವರು; ಕಿಂಬಹುನಾ ಅವನ ಪ್ರಾಣಘಾತವೂ ಆಗುವದು. ಹೀಗೆ ಉಪಕಾರಮಾಡಿದವರಮೇಲೆಯೂ, ಅಪಕಾರಮಾಡಿದವರಮೇಲೆಯೂ ಸರಿಯಾಗಿಯೇ ಸಿಟ್ಟಿನಿಂದ ಹರಿಹಾಯುವದರಿಂದ ಜನರ ಮನಸ್ಸು ಉದ್ವಿಗ್ನವಾಗುವದು, ಅಂದಬಳಿಕ ಅಂಥವನ ಅಭ್ಯುದಯವು ಹ್ಯಾಗಾಗಬೇಕು? ಸಮಯಸಿಕ್ಕಕೂಡಲೆ ಜನರು ಅವನ ಸೇಡು ತೀರಿಸಿಕೊಳ್ಳುವರು; ಆದ್ದರಿಂದ ಯಾವಾಗಲೂ ಕಠೋರತನ ತಾಳುವದು ಯೋಗ್ಯವಲ್ಲ! ಅಪ್ಪಾ ಬಲಿ,

ದೇಶ, ಕಾಲ, ತನ್ನ ಸಾಮರ್ಥ್ಯಗಳನ್ನರಿತು ವಿವೇಕದಿಂದ ಕ್ಷಮೆಯನ್ನಾಗಲಿ, ಕಠೋರ ತನವನ್ನಾಗಲಿ ತಾಳಿದರೆ ಹಿತವಾಗುವವು. ಕ್ಷಮೆಮಾಡಲೇಬೇಕಾದ, ಹಾಗು ದಂಡಿಸ ಲೇಬೇಕಾದ ಪ್ರಸಂಗಗಳನ್ನು ಜ್ಞಾನಿಗಳು ಹೇಳಿರುವರು, ಅವನ್ನು ನಿನಗೆ ಹೇಳುವೆನು ಕೇಳು. ತನಗೆ ಪೂರ್ವದಲ್ಲಿ ಉಪಕಾರಮಾಡಿದವನ ಅಪರಾಧವನ್ನು ಅವನ ಉಪಕಾರ ಕ್ಕಾಗಿಯೂ, ಬುದ್ಧಿಪೂರ್ವಕ ಅಪರಾಧಮಾಡದವನ ಅಪರಾಧವನ್ನು ಅವನ ಅಜ್ಞಾನ ಕ್ಕಾಗಿಯೂ, ಕೈತಪ್ಪಿ ಅಪರಾಧಮಾಡಿದವನ ಅಪರಾಧವನ್ನು ಅವನ ಪ್ರಮಾದಕ್ಕಾ ಗಿಯೂ ಕ್ಷಮಿಸತಕ್ಕದ್ದು; ಆದರೆ ಬುದ್ಧಿಪೂರ್ವಕ ಅಪರಾಧಮಾಡಿ ಅದನ್ನು ತಿಳಿಯದ ಮಾಡಿದೆನೆಂದು ನಟಿಸುವವನನ್ನೂ, ವಕ್ರಮಾರ್ಗದಿಂದ ನಡೆಯುವವನನ್ನೂ ಶಿಕ್ಷಿಸತ ಕ್ಕದ್ದು. ಯಾರೊಬ್ಬರ ಒಂದನೆಯುಸಾರಿಯು ಅಪರಾಧವನ್ನು ಕ್ಷಮಿಸತಕ್ಕದ್ದು; ಆದರೆ ಅವನು ತಿರುಗಿ ಸ್ವಲ್ಪ ಅಪರಾಧಮಾಡಿದರೂ ಅವನನ್ನು ಕಠಿಣವಾಗಿ ಶಿಕ್ಷಿಸತಕ್ಕದ್ದು. ಅಪ್ಪಾ, ಬಲಿ, ಕ್ಷಮಾಶಸ್ತ್ರದಿಂದ ಎಂಥ ದುಷ್ಟರನ್ನಾದರೂ ಹಾದಿಗೆತರಬಹುದು. ಆದರೆ ಕ್ಷಮೆಗೆ ಮೇಲೆಹೇಳಿದಂತೆ ದೇಶ--ಕಾಲ--ತನ್ನ ಸಾಮರ್ಥ್ಯ ಇವನ್ನು ವಿಚಾರಿಸ ಬೇಕಾಗುತ್ತದೆ. ಒಮ್ಮೊಮ್ಮೆ ಜನರ ಅಂಜಿಕೆಗಾಗಿಯೂ ಅಪರಾಧಿಗಳನ್ನು ಕ್ಷಮಿಸಬೇ ಕಾಗುತ್ತದೆ" ಎಂದು ಹೇಳಿರುವನು; ಆದ್ದರಿಂದ ಯುಧಿಷ್ಠಿರಾ, ಲೋಭಾವಿಷ್ಟರೂ, ಯಾವಾಗಲೂ ಅಪಕಾರಮಾಡುವವರೂ ಆದ ಧೃತರಾಷ್ಟ್ರನಮಕ್ಕಳ ವಿಷಯವಾಗಿ ನೀನ ಕಠೋರತನದಿಂದಲೇ ನಡೆಯುವ ಕಾಲವು ಒದಗಿರುವದು. ಕೌರವರನ್ನು ಕ್ಷಮಿಸುವ ಸಮಯವು ಉಳಿದಿರುವದಿಲ್ಲ; ಆದ್ದರಿಂದ ಈಗ ನೀನು ಕ್ಷಮೆಯನ್ನು ತ್ಯಜಿಸಿ ತೇಜಸ್ಸನ್ನು ಪ್ರಕಟಿಸತಕ್ಕದ್ದು. ಮನುಷ್ಯನು ಮೃದುತನದಿಂದ ನಡೆದರೆ ಜನರು ಅವನನ್ನು ತಿರಸ್ಕರಿ ಸುವರು, ಕಠೋರತನದಿಂದ ನಡೆಯಹತ್ತಿದರೆ ಉದ್ವಿಗ್ನರಾಗುವರು, ಆದ್ದರಿಂದ ಸಮಯ ವರಿತು ನಡೆಯಬಲ್ಲವನೇ ನಿಜವಾದ ಭೂಪತಿಯು.

ಯುಧಿಷ್ಠಿರನ ಉತ್ತರ (ಕ್ಷಮೆಯೇ ಶ್ರೇಷ್ಠ)—ದ್ರೌಪದಿಯ ಈ ಮಾತುಗಳನ್ನು ಕೇಳಿ ಯುಧಿಷ್ಠಿರನು--ದ್ರೌಪದೀ, ಕ್ರೋಧವೇ ಮನುಷ್ಯನ ಪ್ರಾಣ ಘಾತಕ್ಕೆ ಕಾರಣವಾಗಿದ್ದು, ಅದೇ ಅವನ ಅಸ್ತಿತ್ವಕ್ಕೂ ಸಾಧನವಾಗಿರುವದು; ಹ್ಯಾ ಗೆಂಬರೆ ಕ್ರೋಧವನ್ನು ಜಯಿಸದೆಯಿದ್ದವನ ಪ್ರಾಣಘಾತವಾಗಿ, ಕ್ರೋಧವನ್ನು ಸಂಹರಿಸಿ ದವನ ಅಸ್ತಿತ್ವವು ಸ್ಥಿರವಾಗಿರುವದು; ಅರ್ಥಾತ್ ಅವನ ಅಭ್ಯುದಯವಾಗುವದು. ಕ್ರೋಧದಿಂದ ಪ್ರಜೆಗಳ ವಿಧ್ವಂಸವಾಗುವದು ಜನರಲ್ಲಿ ಕಂಡುಬರುತ್ತಿರಲು, ನನ್ನಂಥ ವನು ಕ್ರೋಧವನ್ನು ಹ್ಯಾಗೆ ಪ್ರಕಟಿಸಬೇಕು? ಕ್ರೋಧಪರವಶನಾದ ಮನುಷ್ಯನು ಪಾಪ ಮಾಡಬಹುದು, ಸಮ್ಮಾನನೀಯ ಪುರುಷನನ್ನೂ ವಧಿಸಬಹುದು; ಅತ್ಯಂತ ಶ್ರೇಷ್ಠ ಪುರುಷರನ್ನೂ ಕಠೋರ ಭಾಷಣದಿಂದ ನೋಯಿಸಬಹುದು; ಯಾಕಂದರೆ ಸಿಟ್ಟಿಗೆದ್ದವನಿಗೆ ಏನು ಮಾತಾಡಬೇಕು--ಏನು ಮಾತಾಡಬಾರದು, ಏನು ಮಾಡಬೇಕು--ಏನು ಮಾಡಬಾ ರದು ಎಂಬವರ ಎಚ್ಚರವೇ ಇರುವದಿಲ್ಲ. ಕ್ರೋಧಾವಿಷ್ಟನು ಅವಧ್ಯನನ್ನು ವಧಿಸ ಬಹುದು, ವಧ್ಯನನ್ನು ವಧಿಸದಿರಬಹುದು; ಕಿಂಬಹುನಾ ತನ್ನ ಕೈಯಿಂದಲೇ ತನ್ನ

ನಾಶವನ್ನು ಮಾಡಿಕೊಳ್ಳಬಹುದು. ಕ್ರೋಧದ ಈ ದೋಷಗಳನ್ನರಿತೇ ವಿದ್ವಾಂಸರು ಇಹಪರಕಲ್ಯಾಣಕ್ಕಾಗಿ ಕ್ರೋಧವನ್ನು ಜಯಿಸಿರುವರು. ಇಂಥ ವಿದ್ವಾಂಸರಿಂದ ಜಯಿಸಲ್ಪಟ್ಟ ಕ್ರೋಧವನ್ನು ನನ್ನಂಥ ಮನುಷ್ಯನು ಹ್ಯಾಗೆ ಸ್ವೀಕರಿಸಬೇಕು? ಸಿಟ್ಟಿಗೆದ್ದವನ ಮೇಲೆ ಸಿಟ್ಟಾಗದವನು ತನ್ನ ಹಾಗು ಎರಡನೆಯವರ, ಅರ್ಥಾತ್ ಸಿಟ್ಟಿಗೆದ್ದವನ ಕಲ್ಯಾಣಕ್ಕೂ ಕಾರಣನಾಗುವನು; ಯಾಕಂದರೆ ಆವನ ಅಕ್ರೋಧದಿಂದ ಉಭಯರೂ ಸ್ವಸ್ಥರಾಗುವರು. ತನಗೆ ಕ್ಲೇಶವಾಗುತ್ತದೆಂದು ಮೂರ್ಖ ಮನುಷ್ಯನು ತಾನು ಸಾಮರ್ಥ್ಯಹೀನನಾಗಿದ್ದರೂ ಬಲಿಷ್ಠ ಮನುಷ್ಯನ ಮೇಲೆ ಸಿಟ್ಟಾಗಿ ತನ್ನ ನಾಶಕ್ಕೆ ತಾನೇ ಕಾರಣನಾಗುವನು. ಅಂಥವನಿಗೆ ಉತ್ತಮಲೋಕಪ್ರಾಪ್ತಿಯಾಗುವದಿಲ್ಲ; ಆದ್ದರಿಂದ ಸಾಮರ್ಥ್ಯಹೀನನು ತನ್ನ ಕ್ರೋಧವನ್ನು ನುಂಗಿಕೊಳ್ಳಬೇಕು. ಅದರಂತೆಯೇ ಸಾಮರ್ಥ್ಯವಿದ್ದವನು ತನಗೆ ಕ್ಲೇಶವಾಗುತ್ತಿದ್ದರೂ ಕ್ರೋಧವಶನಾಗಿ ಕ್ಲೇಶವನ್ನುಂಟು ಮಾಡಿದವರ ನಾಶಮಾಡದಿದ್ದರೆ ಇಹಪರ ಲೋಕಗಳಲ್ಲಿ ಆನಂದಪಡುವನು. ಆದ್ದರಿಂದ ಪ್ರಾಣಿಯು ಬಲಿಷ್ಠವೇ ಇರಲಿ, ಬಲಹೀನವೇ ಇರಲಿ ಅದರ ವಿಷಯವಾಗಿ ಮನುಷ್ಯನು ಯಾವಾಗಲೂ ಕ್ಷಮೆಯನ್ನೇ ತಾಳುತ್ತಿರಬೇಕು. ದ್ರೌಪದೀ, ಸಜ್ಜನರು ಕ್ರೋಧದ ನಿಗ್ರಹದ ಪ್ರಶಂಸೆಯನ್ನೇ ಮಾಡುವರು. ಕ್ಷಮಾಶೀಲರಾದ ಸಜ್ಜನರ ಉತ್ಕರ್ಷವೇ ಇಹಲೋಕದಲ್ಲಿ ಆಗುವದೆಂದು ಸತ್ಪುರುಷರ ಮತವಿರುವದು. ಅಸತ್ಯ ಭಾಷಣಕ್ಕಿಂತ ಸತ್ಯಭಾಷಣವು ಶ್ರೇಷ್ಠವಿರುವಂತೆ, ಕಠೋರತನಕ್ಕಿಂತ ಮೃದುತನವು ಶ್ರೇಯಸ್ಕರವಾಗಿರುವದು. ಅಂತಃಕರಣದಲ್ಲಿ ಕ್ರೋಧವಿಲ್ಲದವನಿಗೆ ದೂರದರ್ಶಿಗಳಾದ ಜ್ಞಾನಿಗಳು ತೇಜಸ್ವಿಯೆನ್ನುವರು. ಅಂತಃಕರಣದಲ್ಲಿ ಕ್ರೋಧವಿದ್ದರೂ ಜ್ಞಾನಶಕ್ತಿಯ ಯೋಗದಿಂದ ಅದನ್ನು ಪ್ರತಿಬಂಧಿಸುವವನಿಗೇ ತತ್ವದರ್ಶಿಗಳಾದ ವಿದ್ವಾಂಸರು ತೇಜಸ್ವಿಯೆನ್ನುವರು. ಕೋಪಾವಿಷ್ಟನಿಗೆ ಕರ್ತವ್ಯಾಕರ್ತವ್ಯಜ್ಞಾನವು ಸರಿಯಾಗಿ ಆಗುವದಿಲ್ಲ; ಆದ್ದರಿಂದ ತೇಜಸ್ವಿಯಾದವನು ಕ್ರೋಧವನ್ನು ಒತ್ತಟ್ಟಿಗೆ ಕಟ್ಟಿ ಇಡಬೇಕು. ಕ್ರೋಧಾವಿಷ್ಟನಿಗೆ ದಕ್ಷತೆ, ಅಸಹಿಷ್ಣುತೆ, ಶೌರ್ಯ, ಚಟವಟಿಕೆ ಎಂಬ ತೇಜಸ್ಸಿನ ಗುಣಗಳನ್ನು ಬೇಗನೆ ಸಂಪಾದಿಸಲಿಕ್ಕೆ ಬರುವದಿಲ್ಲ. ಕ್ರೋಧವನ್ನು ತ್ಯಜಿಸಿದರೆಯೇ ಮನುಷ್ಯನಿಗೆ ಉತ್ಕೃಷ್ಟಪ್ರಕಾರದ ತೇಜಸ್ಸು ಪ್ರಾಪ್ತವಾಗುವದು. ಎಲೈ ಮಹಾಜ್ಞಾನಿಯಾದ ದ್ರೌಪದಿಯೇ, ತೇಜಸ್ಸನ್ನು ಯೋಗ್ಯಕಾಲದಲ್ಲಿ ಉಪಯೋಗಿಸಿದರೆ ಕ್ರುದ್ಧನಾದವನಿಗೂ ಅದು ಅತ್ಯಂತ ದುಸ್ಸಹವಾಗುವದು. ಅಜ್ಞಾನಿಗಳು ಕ್ರೋಧಕ್ಕೇ ತೇಜಸ್ಸೆಂದು ನಿಶ್ಚಯಪೂರ್ವಕವಾಗಿ ಅನ್ನುವರು, ಆದರೆ ವಸ್ತುತಃ ಹಾಗಲ್ಲವು; ಯಾಕಂದರೆ ಕ್ರೋಧವು ರಜೋಗುಣದ ಪರಿಣಾಮವಾಗಿದ್ದು, ಲೋಕವಿನಾಶಕ್ಕಾಗಿಯೇ ಅದನ್ನು ಮನುಷ್ಯನಲ್ಲಿ ಉಂಟು ಮಾಡಲಾಗಿರುವದು; ಆದರೆ ತೇಜಸ್ಸಿನಮಾತು ಹಾಗಲ್ಲ; ಆದ್ದರಿಂದ ಸದ್ವರ್ತನದ ಮನುಷ್ಯನು ಯಾವಾಗಲೂ ಕ್ರೋಧವನ್ನು ತ್ಯಜಿಸಬೇಕು. ಸ್ವಧರ್ಮಭ್ರಷ್ಟ ಮನುಷ್ಯನು ಬೇಕು, ಸಿಟ್ಟಿನವನು ಕೆಲಸಕ್ಕೆ ಬಾರದವನೆಂಬದು ಶಾಸ್ತ್ರದ ನಿಶ್ಚಯವಾಗಿರುವದು. ಇಂದಬಳಿಕ ನಾನು ದುರ್ಯೋಧನನಂಥವನ ಮೇಲೆಯೂ ಹ್ಯಾಗೆ ಸಿಟ್ಟಿಗೇಳಲಿ?

ದ್ರೌಪದೀ, ಕ್ರೋಧದಿಂದಾಗುವ ಅನರ್ಥವನ್ನು ಎಷ್ಟೆಂದು ಹೇಳಬೇಕು! ಮನುಷ್ಯರಲ್ಲಿ ಪೃಥ್ವಿಯಂತೆ ಕ್ಷಮಾಶೀಲಪುರುಷರು ಇಲ್ಲದಿದ್ದರೆ ಅವರಲ್ಲಿ ಸಖ್ಯವು ಬೆಳೆಯದೆ, ಬೈದವನನ್ನು ಬೈಯ್ಯು, ಹೊಡೆದವನನ್ನು ಹೊಡೆ, ಬಡಿದವನನ್ನು ಬಡಿ, ಕೊಂದವನನ್ನು ಕೊಲ್ಲು ಎಂಬಂತೆ ಅನರ್ಥಗಳಾಗಿ, ಮನುಷ್ಯರ ಸಂಹಾರವಾಗಿ ಹೋಗುತ್ತಿತ್ತು. ಕ್ಷಮಾಗುಣವಿಲ್ಲದಿದ್ದರೆ ಮಗನು ತಂದೆಯನ್ನೂ, ತಂದೆಯು ಮಗನನ್ನೂ, ಗಂಡನು ಹೆಂಡತಿಯನ್ನೂ, ಹೆಂಡತಿಯು ಗಂಡನನ್ನೂ, ಗುರುವು ಶಿಷ್ಯನನ್ನೂ, ಶಿಷ್ಯನು ಗುರುವನ್ನೂ ಕೊಲ್ಲಲಿಕ್ಕೆ ಸಹ ಹಿಂದೆಮುಂದೆ ನೋಡುತ್ತಿದ್ದಿಲ್ಲ! ಇದರಿಂದ ಸರ್ವತ್ರ ಅಧರ್ಮದ ಪ್ರಸಾರವಾಗಿ ಪ್ರಾಣಿಗಳ ಸಂಹಾರವಾಗುತ್ತಿತ್ತು. ದ್ರೌಪದೀ, ಈ ಜಗತ್ತೆಲ್ಲ ಕೋಪಾವಿಷ್ಟವಾಗಿ ಹೋದರೆ ಪ್ರಜೋತ್ಪತ್ತಿಯೂ ಆಗಲಿಕ್ಕಿಲ್ಲ; ಯಾಕಂದರೆ ಸುಂದರೀ, ಸ್ತ್ರೀಪುರುಷರ ಸಮ್ಮೇಲನವೇ ಪ್ರಜೋತ್ಪತ್ತಿಯು ಮೂಲಕಾರಣವಾಗಿರುವದು. ಒಟ್ಟಿಗೆ ಕ್ರೋಧವು ಪ್ರಜೆಗಳ ವಿನಾಶದ ಹಾಗು ನಿಕೃಷ್ಟಸ್ಥಿತಿಯ ಕಾರಣವಾಗಿರುವದು. ಕ್ಷಮೆಯುಳ್ಳ ಪೃಥ್ವಿಯನ್ನೂ ಸರಿಗಟ್ಟುವಂಥವರು ದೃಷ್ಟಿಗೋಚರವಾಗುವದರಿಂದಲೇ ಪ್ರಾಣಿಗಳ ಉತ್ಪತ್ತಿಯೂ, ಅಭ್ಯುದಯವೂ ಆಗುತ್ತಿರುವವು. ಸುಂದರೀ, ಎಂಥ ವಿಪತ್ತು ಪ್ರಾಪ್ತವಾದರೂ ಮನುಷ್ಯನು ಕ್ಷಮೆಯನ್ನೇ ತಾಳತಕ್ಕದ್ದು. ಯಾವಾಗಲೂ ಕ್ರೋಧವನ್ನು ನಿಗ್ರಹಿಸುವವನೂ, ಅಸಮರ್ಥ ಮನುಷ್ಯನು ಕೂಡ ತನ್ನನ್ನು ಬೈಯಲಿ-ಹೊಡೆಯಲಿ ಅದನ್ನು ಸಹಿಸುವವನೂ ವಿದ್ವಾಂಸನೆನಿಸುವನು; ಅವನೇ ಸತ್ಪುರುಷನು, ಅವನೇ ಪ್ರತಾಪಶಾಲಿಯು ಆಗಿರುವನು. ಇವನಿಗೆ ಅವಿನಾಶಿಯಾದ ಸ್ವರ್ಗಾದಿಲೋಕಗಳು ಪ್ರಾಪ್ತವಾಗುವವು. ಕೋಪಾವಿಷ್ಟನಲ್ಲಿ ಜ್ಞಾನದ ಕೊರತೆಯಿರುವದರಿಂದ ಇಹಲೋಕದಲ್ಲಿಯೂ, ಪರಲೋಕದಲ್ಲಿಯೂ ಅವನ ನಾಶವಾಗುವದು. ದ್ರೌಪದೀ, ಈ ಸಂಬಂಧದಿಂದ ಕ್ಷಮಾಶೀಲನಾದ ಮಹಾತ್ಮ ಕಾಶ್ಯಪನು ಹೇಳಿರುವನೇನಂದರೆ—ಕ್ಷಮೆಯೇ ಧರ್ಮವು; ಕ್ಷಮೆಯೇ ಯಜ್ಞವು; ಕ್ಷಮೆಯೇ ವೇದವು; ಕ್ಷಮೆಯೇ ಶಾಸ್ತ್ರವು ಎಂಬ ಜ್ಞಾನವಾದವನೇ ಎಲ್ಲವನ್ನು ಸಹಿಸಲು ಸಮರ್ಥನಾಗುವನು. ಬ್ರಹ್ಮ, ಸತ್ಯ, ಭೂತ, ಭವಿಷ್ಯ, ತಪ, ವಿಶುದ್ಧತಾ ಇವೆಲ್ಲ ಕ್ಷಮೆಯ ಸ್ವರೂಪಗಳೇ ಆಗಿರುವವು. ಕ್ಷಮಾಶೀಲಪುರುಷನಿಗೆ ಪ್ರಾಪ್ತವಾಗುವ ಲೋಕಗಳು ಯಜ್ಞಯಾಗಗಳನ್ನು ಮಾಡುವವರಿಗೆ ಪ್ರಾಪ್ತವಾಗಲಾರವು; ಇದೂ ಅಲ್ಲದೆ ಬ್ರಹ್ಮಜ್ಞಾನಿಗಳಿಗೂ, ತಪಸ್ವಿಗಳಿಗೂ ಆ ಕ್ಷಮಾಶೀಲರ ಲೋಕಗಳು ಪ್ರಾಪ್ತವಾಗುವದಿಲ್ಲವು. ಕ್ಷಮೆಯೇ ತೇಜಸ್ವಿಗಳ ತೇಜವೂ, ತಪಸ್ವಿಗಳ ಬ್ರಹ್ಮವೂ, ಸತ್ಯನಿಷ್ಠ ಪುರುಷರ ಸತ್ಯವೂ ಆಗಿದ್ದು, ಕ್ಷಮೆಯು ಯಜ್ಞವು, ಕ್ಷಮೆಯು ಶಾಂತಿಯು ಆಗಿರುವದು. ದ್ರೌಪದೀ, ಮನುಷ್ಯನು ಸರ್ವವನ್ನು ಸಹಿಸಿದಾಗಲೇ ಬ್ರಹ್ಮಸ್ವರೂಪನಾಗುತ್ತಿರಲು, ಇಂಥ ಕ್ಷಮಾಗುಣವನ್ನು ನಾನು ಹ್ಯಾಗೆ ಪರಿತ್ಯಜಿಸಲಿ? ನಮ್ಮ ಪಿತಾಮಹ ವ್ಯಾಸ-ಭೀಷ್ಮರೂ, ದ್ರೋಣಾದಿ ಗುರುಗಳೂ, ದೇವಕೀಪುತ್ರನಾದ ಶ್ರೀ ಕೃಷ್ಣನೂ ಕ್ಷಮೆಯನ್ನೇ ಪ್ರಶಂಸಿಸುತ್ತಿರುವದರಿಂದ ನೀನು ಕ್ರೋಧವನ್ನು ತ್ಯಜಿಸು. ಈ ಎಲ್ಲ ಮಹಾತ್ಮರು ದುರ್ಯೋಧನನನ್ನು ನಿಶ್ಚಯವಾಗಿ ಶಾಂತನಾಗ

ಮಾಡುವರೆಂದು ನನ್ನ ಬುದ್ಧಿಗೆ ತೋಚುತ್ತದೆ. ಇದರ ಮೇಲೆಯೂ ದುರ್ಯೋಧನನು ಲೋಭವಶನಾಗಿ ಅವರ ಮಾತು ಕೇಳದಿದ್ದರೆ ಅವನು ನಾಶ ಹೊಂದುವನು; ಯಾಕೆಂದರೆ, ಎಲೈ ಸುಂದರಿಯೇ, ಈಗ ಭರತವಂಶಕ್ಕೆ ಅಕಲ್ಯಾಣಕಾರಕ ಕಾಲವು ಒದಗಿರುವದೆಂದು ಯಾವಾಗಲೂ ನನ್ನ ಕಣ್ಣಿಗೆ ಕಟ್ಟಿರುತ್ತದೆ. ದುರ್ಯೋಧನನು ಅನಧಿಕಾರಿಯಾದದ್ದರಿಂದ ಅವನು ಕ್ಷಮೆಯನ್ನು ಅವಲಂಬಿಸಲಾರನು, ನಾನು ಕ್ಷಮೆಯನ್ನು ತಾಳಲು ಅಧಿಕಾರಿಯಿರುವದರಿಂದ ಕ್ಷಮಾಗುಣವು ತಾನಾಗಿಯೇ ನನ್ನನ್ನು ಅಂಗೀಕರಿಸಿರುವದು. ಒಟ್ಟಿಗೆ ಕ್ಷಮೆಯು, ಘಾತಕತನದ ಅಭಾವವೂ, ಜಿತೇಂದ್ರಿಯ ಪುರುಷನ ಕರ್ತವ್ಯವೂ ಆಗಿದ್ದು, ಈ ಕರ್ತವ್ಯವೇ ಸನಾತನ ಧರ್ಮವಾಗಿರುವದು; ಆದ್ದರಿಂದ ನಾನು ತಡಮಾಡದೆ ಕ್ಷಮೆಯನ್ನೇ ಅವಲಂಬಿಸುವೆನು.

ದ್ರೌಪದಿಯ ಪ್ರತ್ಯುತ್ತರವು (ಧರ್ಮಕ್ಕೂ ದೇವರಿಗೂ ದೋಷಾರೋಪಣೆ):—ಧರ್ಮರಾಜಾ, ನಿನ್ನನ್ನು ಈ ಮೋಹದಲ್ಲಿ ಕೆಡವಿದ ಆ ಸೃಷ್ಟಿ–ಸ್ಥಿತಿ–ಕರ್ತೃವಾದ ಪರಮೇಶ್ವರನಿಗೆ ನನ್ನ ನಮಸ್ಕಾರವು. ಹಿರಿಯರು ಹೋದಹಾದಿಯಿಂದ ಹೋಗುವದು ಯೋಗ್ಯವಾಗಿರಲು, ನಿನಗೆ ಇದೆಲ್ಲಿಯ ವಿಲಕ್ಷಣಬುದ್ಧಿಯು ಉತ್ಪನ್ನವಾಯಿತು! ಉತ್ಕೃಷ್ಟ ಅಥವಾ ನಿಕೃಷ್ಟ ವಿಷಯೋಪಭೋಗದ ಸಾಧನಗಳೆಲ್ಲ ಕರ್ಮಯೋಗದಿಂದಲೇ ಪ್ರಾಪ್ತವಾಗುವವು. ಕರ್ಮದ ಫಲವನ್ನು ತಪ್ಪಿಸಿಕೊಳ್ಳಲಿಕ್ಕೆ ಯಾವನಿಗೂ ಬರುವದಿಲ್ಲ; ಆ ಫಲದಿಂದ ಮುಕ್ತನಾಗಹೋಗುವದು ಕೇವಲ ಅಜ್ಞಾನವಾಗಿರುವದು. ಇಹಲೋಕದಲ್ಲಿ ಮನುಷ್ಯನಿಗೆ ಪ್ರಾಪ್ತವಾಗುವ ಸಂಪತ್ತು—ಧರ್ಮದಿಂದಾಗಲಿ, ಘಾತಕತನವಿಲ್ಲದ್ದರಿಂದಾಗಲಿ, ಕ್ಷಮೆಯಿಂದಾಗಲಿ, ಸರಳತನದಿಂದಾಗಲಿ, ಜನರ ವಿಷಯದ ಕನಿಕರದಿಂದಾಗಲಿ ಪ್ರಾಪ್ತವಾಗುವದಿಲ್ಲೆಂಬದೇ ನಿಶ್ಚಯವು. ಆದ್ದರಿಂದಲೇ ಧರ್ಮಿಷ್ಠನೂ, ಘಾತಕತನವಿಲ್ಲದವನೂ, ಕ್ಷಮಾಶೀಲನೂ, ಸರಳಸ್ವಭಾವದವನೂ, ಜನರ ಸಲುವಾಗಿ ಕನಿಕರವುಳ್ಳವನೂ ಆದ ನಿನಗೆ ಇಂಥ ದುಸ್ಸಹ ಸಂಕಟವು ಪ್ರಾಪ್ತವಾಗಿರುವದು. ನಿನ್ನಂತೆ ನಿನ್ನ ಈ ಬಂಧುಗಳೂ ಧರ್ಮಿಷ್ಠರೇ ಇರುವದರಿಂದ, ವಾಸ್ತವವಾಗಿ ಮೇಲಿನ ಧರ್ಮಾದಿಗಳು ಸುಖಸಾಧನಗಳಿದ್ದರೆ ಅವರೂ ದುಃಖವನ್ನು ಭೋಗಿಸಲು ಯೋಗ್ಯರಲ್ಲ. ನೀನಂತು ಧರ್ಮಮೂರ್ತಿಯೇ! ಧರ್ಮದಸಲುವಾಗಿಯೇ ನಿನ್ನ ರಾಜ್ಯವಿದ್ದು, ನಿನ್ನ ಪ್ರಾಣಗಳಾದರೂ ಧರ್ಮಕ್ಕಾಗಿಯೇ ಇರುವವೆಂಬದು ಬ್ರಾಹ್ಮಣರಿಗೂ, ಗುರುಗಳಿಗೂ, ದೇವತೆಗಳಿಗೂ ಕೂಡ ಗೊತ್ತಿರುವದು. ನೀನು ಧರ್ಮದಸಲುವಾಗಿ ನಿನ್ನ ಬಂಧುಗಳನ್ನೂ ನನ್ನನ್ನು ಕೂಡ ಬಿಡಬಹುದು; ಆದರೆ ಧರ್ಮವನ್ನು ಯಾರಸಲುವಾಗಿಯೂ ಬಿಡಲಾರೆಯೆಂಬಂತೆ ನನಗೆ ತೋರುತ್ತದೆ! ರಾಜಾ, ಧರ್ಮವನ್ನು ರಕ್ಷಿಸತೊಡಗಿದರೆ ಧರ್ಮವೂ ಅವನನ್ನು ರಕ್ಷಿಸುವದೆಂದು ನಾನು ಬಲ್ಲವರ ಬಾಯಿಂದ ಕೇಳಿದ್ದೇನೆ; ಆದರೆ ಆ ಧರ್ಮವು ನಿನ್ನನ್ನು ಮಾತ್ರ ರಕ್ಷಿಸುವದಿಲ್ಲವು. ಹಾಗೆ ಅದು ನಿನ್ನನ್ನು ರಕ್ಷಿಸುತ್ತಿದ್ದರೆ ಧರ್ಮಿಷ್ಠನಾದ ನಿನಗೆ ಈ ಸಂಕಟವು ಯಾಕೆ ಬರುತ್ತಿತ್ತು? ಧರ್ಮಾಚರಣಶೀಲನಾದ ನಿನಗೆ ದ್ಯೂತದಲ್ಲಿ ಭಯಂಕರ ಪರಾಜಯವು ಯಾಕಾಗುತ್ತಿತ್ತು? ನೀನು ಸರಳನೂ,

ಕೋಮಲಾಂತಃಕರಣವುಳ್ಳವನೂ, ಉದಾರನೂ, ವಿನಯಶೀಲನೂ ಇದ್ದದ್ದರಿಂದ ಘಾತಕ ತನವಿಲ್ಲದವನೆಂದು ಸಿದ್ಧವಾಗುವದಷ್ಟೆ! ಅಂದಬಳಿಕ ಇಂಥ ಸದ್ವರ್ತನನಾದ ನಿನಗೆ ಶೋಚ್ಯತರೂಪ ಸಂಕಟವನ್ನು ಉತ್ಪನ್ನಮಾಡುವ ಬುದ್ಧಿಯು ಯಾಕೆ ಉತ್ಪನ್ನವಾಯಿತು. ಹೇಳು? ನಿನ್ನ ದುಃಖವನ್ನೂ, ಈ ಬಗೆಯ ನಿನ್ನ ವಿಪತ್ತನ್ನೂ ನೋಡಿ ನನ್ನ ಮನಸ್ಸು ಕ್ಲೇಶವಿಷ್ಟವಾಗಿ ಖಿನ್ನವಾಗುತ್ತದೆ. ಇನ್ನು ಎಲ್ಲರೂ ಈಶ್ವರಾಧೀನರು, ಯಾರಿಗೂ ಸ್ವಾತಂತ್ರ್ಯವಿಲ್ಲೆಂದು ಜನರು ಹೇಳುವದುಂಟು. ಪ್ರಾಣಿಗಳ ಸುಖದುಃಖವನ್ನೂ, ಪ್ರಿಯಾಪ್ರಿಯಗಳನ್ನೂ ಆ ಪ್ರಾಣಿಗಳ ಗರ್ಭೋತ್ಪತ್ತಿಯಸಲುವಾಗಿ ರೇತಸ್ಸಿನ ಪ್ರವೃತ್ತಿಯಾಗುವ ಮೊದಲೇ ದೇವರು ಗೊತ್ತುಮಾಡಿಬಿಟ್ಟಿರುವನಂತೆ. ಎಲೈ ನರಶ್ರೇಷ್ಠನೇ, ಕೀಲದಗೊಂಬೆಯು ಕೀಲವಾಡಿಸಿದಂತೆ ಅದು ಕುಣಿಯುವಹಾಗೆ ಪ್ರಾಣಿಗಳಸ್ಥಿತಿಯಿರುತ್ತದೆ. ಹೀಗೆ ಪ್ರಾಣಿಯು ಈಶ್ವರಾಧೀನವಾದದ್ದರಿಂದ ಅದರ ಸತ್ತೆಯು ಅನ್ಯರಮೇಲೆ ಅಥವಾ ಸ್ವತಃ ತನ್ನ ಮೇಲೆ ಇರುವದಿಲ್ಲ. ಮುಗದಾಣಹಾಕಿದ ಎತ್ತಿನಂತೆ ಅದು ಪರಮೇಶ್ವರಾಧೀನವಾಗಿ ನಡೆಯುತ್ತಿರುವದು. ಜನ್ಮದ ಪೂರ್ವದಲ್ಲಿ ಪರಮೇಶ್ವರನಲ್ಲಿಯೇ ಇದ್ದು, ಕಡೆಗೆ ಪರಮೇಶ್ವರನಲ್ಲಿಯೇ ಲೀನವಾಗಿ ಹೋಗುವ ಪ್ರಾಣಿಯು, ಈಗ ಮಧ್ಯಸ್ಥಿತಿಯಲ್ಲಿಯಾದರೂ ಅನ್ಯರ ಆಧೀನವು ಹ್ಯಾಗಾದೀತು? ಪರಮೇಶ್ವರನು ಸರ್ವ ಪ್ರಾಣಿಗಳಲ್ಲಿ ವ್ಯಾಪ್ತನಾಗಿದ್ದು, ಅವುಗಳ ಶುಭಾಶುಭಕರ್ಮಗಳ ಪ್ರವರ್ತಕನಾಗಿರುವನು; ಆದರೆ ಆತನು ಇಂಥವನೇ ಎಂದು ಪ್ರಾಣಿಗಳಿಗೆ ಗೊತ್ತಾಗುವದಿಲ್ಲವು. ಒಟ್ಟಿಗೆ ಪರಮಾತ್ಮನು ತನ್ನಮಾಯೆಯಿಂದ ಪ್ರಾಣಿಗಳನ್ನು ಮೋಹಿಸಿ, ತೊಗರಿಯ ಕಟ್ಟಿಗೆಯಿಂದ ತೊಗರಿಯ ಕಟ್ಟಿಗೆಯನ್ನು ಬಡಿಯುವಂತೆ ಒಂದು ಪ್ರಾಣಿಯಿಂದ ಮತ್ತೊಂದು ಪ್ರಾಣಿಯನ್ನು ಕೊಲ್ಲಿಸುವನು. ಹುಡುಗರು ಆಟಿಗೆಗಳನ್ನು ತಕ್ಕೊಂಡು ಆಡುವಂತೆ ಈಸ್ವೈರವೃತ್ತಿಯ ಪರಮಾತ್ಮನು ಈ ಪ್ರಾಣಿಗಳಯೋಗದಿಂದ ಕ್ರೀಡಿಸುವನು. ಹೀಗೆ ಆಟವಾಡುವಾಗ ಪ್ರಾಣಿಗಳ ಪರಸ್ಪರ ಸಂಯೋಗವನ್ನು ಮಾಡಿಸುವನು, ವಿಯೋಗವನ್ನು ಮಾಡಿಸುವನು. ಇವನ್ನೆಲ್ಲ ನೋಡುತ್ತಿರಲು, ಪ್ರಾಣಿಗಳ ಸಂಗಡ ಪರಮೇಶ್ವರನ ನಡತೆಯು, ಮಕ್ಕಳೊಡನೆ ತಾಯಿತಂದೆಗಳ ನಡತೆಯಿರುವಂತೆ ವಾತ್ಸಲ್ಯದ್ದಾಗಿರದೆ, ರೋಷದ ಅನ್ಯಪ್ರಾಣಿಗಳ ನಡತೆಯಿರುವಹಾಗೆ ಸಿಟ್ಟಿನದಾಗಿರುತ್ತದೆಂದು ನನಗೆ ತೋರುತ್ತದೆ. ಅಂತೇ ಸದಾಚಾರಸಂಪನ್ನರೂ, ವಿನಯಶೀಲರೂ ಆದ ಸಜ್ಜನರು ಉದರನಿರ್ವಾಹದ ಚಿಂತೆಯಿಂದ ಕೃಶರಾಗುತ್ತಿದ್ದು, ದುಷ್ಟರು ಸುಖಿಗಳಾಗಿ ದ್ರವ್ಯವಿಷಯದ ವಿಚಾರದಲ್ಲಿ ಮಗ್ನರಾಗಿ ಹೋಗಿರುವದು ಕಂಡುಬರುತ್ತದೆ! ಯುಧಿಷ್ಠಿರಾ, ನಿನ್ನ ಈ ವಿಪತ್ತನ್ನೂ, ದುರ್ಯೋಧನನ ಐಶ್ವರ್ಯವನ್ನೂ ನೋಡಿಯೇ ನಾನು ಆ ವಿಷಮದೃಷ್ಟಿಯ ಪರಮೇಶ್ವರನನ್ನು ನಿಂದಿಸಬೇಕಾಗಿದೆ. ಆರ್ಯರ ಶಾಸ್ತ್ರಗಳ ಅತಿಕ್ರಮಣಮಾಡುವಂಥ, ಕ್ರೂರನೂ-ಲೋಭಿಯೂ-ಧರ್ಮದ ಅಪಕರ್ಷ ಮಾಡುವವನೂ ಆದಂಥ ದುರ್ಯೋಧನನಿಗೆ ಐಶ್ವರ್ಯಕೊಡುವದರಿಂದ ಆ ಪರಮೇಶ್ವರನಿಗೆ ಫಲವೇನು ದೊರೆಯಿತೋ ಯಾರಿಗೆಗೊತ್ತು! ಕರ್ಮದ ಸಂಬಂಧವು ಕೇವಲ ಕರ್ತೃವಿಗೇ ಇದ್ದು, ಇತರರಿಗೆ ಅದರ ಸಂಬಂಧವಿರುವದಿಲ್ಲವೆಂಬದು ನಿಜವಾಗಿ

ದ್ದರೆ, ದುರ್ಯೋಧನನಂಥ ದುಷ್ಟನಿಗೆ ಐಶ್ವರ್ಯವನ್ನು ಕೊಡುವದೂ, ನಿನ್ನಂಥ ಧರ್ಮಿಷ್ಠನನ್ನು ವಿಪತ್ತಿನಲ್ಲಿ ಕೆಡುವುವದೂ ದುಷ್ಕರ್ಮವಾದದ್ದರಿಂದ ಈ ದುಷ್ಕರ್ಮ ಮಾಡಿದ್ದಕ್ಕಾಗಿ ಪರಮೇಶ್ವರನು ನಿಜವಾಗಿಯೇ ನಿರ್ದಯನೆಂದು ನಿರ್ಣಯಿಸಲ್ಪಡುವನು; ಆದರೆ ಕರ್ಮಜನ್ಯಪಾತಕದ ಸಂಬಂಧವು ಕರ್ತೃವಿಗೆ ಇಲ್ಲವೆಂದು ಅಂದರೆ, ದುರ್ಯೋಧನನಿಗೆ ಐಶ್ವರ್ಯಪ್ರಾಪ್ತಿಯಾಗುವದು ಈಶ್ವರನಕಡೆಗೆ ಇರದೆ, ಆ ಐಶ್ವರ್ಯಪ್ರಾಪ್ತಿಗೆ ದುರ್ಯೋಧನನಬಲವೇ ಕಾರಣವೆಂದು ಸಿದ್ಧವಾಗಿ, ಅದರಿಂದ ನಿನ್ನಂಥ ದುರ್ಬಲಜನರನ್ನೂ ನೋಡಿ ನನ್ನ ಮನಸ್ಸು ಮರಗುತ್ತದೆ.

ಯುಧಿಷ್ಠಿರನ ಪ್ರತ್ಯುತ್ತರ(ನಾಸ್ತಿಕತನವು ಬೇಡ)— ದ್ರೌಪದೀ, ನಿನ್ನ ಭಾಷಣವನ್ನು ನಾನು ಕೇಳಿದೆನು. ಅದು ಉತ್ಕೃಷ್ಟವಾಗಿದ್ದು, ಅದರೊಳಗಿನ ಪದಗಳ ಪೋಣಿಕೆಯು ವಿಲಕ್ಷಣವಾಗಿರುವದು, ಅದರಲ್ಲಿ ಸೌಕುಮಾರ್ಯವೂ ಇರುವದು ನಿಜವು; ಆದರೆ ಅದರಲ್ಲಿ ನಾಸ್ತಿಕತನವಿರುತ್ತದೆ. ಎಲೈ ರಾಜಕನ್ಯೇ, ನಾನು ಫಲಾಪೇಕ್ಷೆಯಿಂದ ಎಂದೂ ಕರ್ಮಮಾಡುವದಿಲ್ಲ. ದಾನವನ್ನಾಗಲಿ, ಹೋಮಹವನಗಳನ್ನಾಗಲಿ ನಾನು ಕರ್ತವ್ಯವೆಂದೇ ಮಾಡುವೆನು. ದ್ರೌಪದೀ, ಕರ್ಮಜನ್ಯಫಲಗಳು ದೊರೆಯುತ್ತಿರಲಿ, ದೊರೆಯುತ್ತಿರದಿರಲಿ, ಗೃಹಸ್ಥಾಶ್ರಮಿಯು ಅವನ್ನು ಅವಶ್ಯವಾಗಿ ಮಾಡಲೇಬೇಕೆಂಬ ಬುದ್ಧಿಯಿಂದ ನಾನು ಶಾಸ್ತ್ರಮಾರ್ಗವನ್ನು ಅತಿಕ್ರಮಿಸದೆ, ಸಜ್ಜನರ ಆಚರಣೆಯನ್ನು ಲಕ್ಷಿಸಿ ಶಕ್ತ್ಯನುಸಾರ ಮಾಡುತ್ತಿರುವೆನು. ನನ್ನ ಅಂತಃಕರಣವು ಸ್ವಾಭಾವಿಕವಾಗಿಯೇ ಧರ್ಮದಲ್ಲಿ ನಿಶ್ಚಲವಾಗಿರುವದು. ಧರ್ಮಮಾಡಿ ಫಲವನ್ನು ಸಂಪಾದಿಸುವದು ವ್ಯಾಪಾರದೃಷ್ಟಿಯಾಗಿರುವದು. ಹೀಗೆ ಧರ್ಮದ ವ್ಯಾಪಾರಮಾಡುವವನು ಧರ್ಮಜ್ಞರಲ್ಲಿ ನಿಂದ್ಯನಾಗಿ ಎಣಿಸಲ್ಪಟ್ಟಿರುವನು. ಫಲಾಪೇಕ್ಷೆಯಿಂದ ಧರ್ಮಮಾಡುವವನಿಗೂ, ವೇದದಲ್ಲಿ ವಿಶ್ವಾಸವಿಲ್ಲದ್ದರಿಂದ ಧರ್ಮದ ಫಲದ ವಿಷಯವಾಗಿ ಅವಿಶ್ವಾಸಪಡುವವನಿಗೂ ಧರ್ಮದ ಫಲವು ದೊರೆಯುವದಿಲ್ಲವು. ವೇದವು ಮುಖ್ಯಪ್ರಮಾಣವಾಗಿದ್ದು, ಅದರ ಅನುರೋಧದಿಂದ ನಾನು ನಿನಗೆ ಹೇಳುವೆನೇನಂದರೆ—ನೀನು ಧರ್ಮದವಿಷಯವಾಗಿ ಎಂದೂ ಸಂಶಯಪಡಬೇಡ; ಯಾಕಂದರೆ ಧರ್ಮದ ವಿಷಯವಾಗಿ ಸಂಶಯಪಡುವವನು ಪಶುಪಕ್ಷ್ಯಾದಿಗಳ ಯೋನಿಯಲ್ಲಿ ಹುಟ್ಟಬರಬೇಕಾಗುವದು. ಮಹಾತಪಸ್ವಿಯಾದ ಮಾರ್ಕಾಂಡೇಯ ಮುನಿಯು ಧರ್ಮದ ಯೋಗದಿಂದಲೇ ದೀರ್ಘಾಯುಷಿಯಾಗಿ ಇಹಲೋಕದಲ್ಲಿ ಸಂಚರಿಸುತ್ತಿರುವದನ್ನು ನೀನು ನೋಡುವದಿಲ್ಲವೇ? ವ್ಯಾಸ, ವಸಿಷ್ಠ, ಮೈತ್ರೇಯ, ನಾರದ, ಲೋಮಶ, ಶುಕ ಮೊದಲಾದವರ ಅಂತಃಕರಣಗಳು ಧರ್ಮದ ಯೋಗದಿಂದಲೇ ಶುದ್ಧವಾಗಿದ್ದು, ಅವರಿಗೆ ಧರ್ಮದಿಂದಲೇ ಅಲೌಕಿಕ ಸಾಮರ್ಥ್ಯವು ಪ್ರಾಪ್ತವಾಗಿರುವದು- ಇಂಥ ಮಹಾತ್ಮರು ಧರ್ಮವೇ ಮನುಷ್ಯನ ಪ್ರಥಮಕರ್ತವ್ಯವೆಂದು ಹೇಳುತ್ತಿರುವರು. ಆದ್ದರಿಂದ ಎಲೈ ಕಲ್ಯಾಣೀ ರಾಜಪತ್ನೀ ದ್ರೌಪದೀ, ನೀನು ಅಜ್ಞಾನಬುದ್ಧಿಯಿಂದ ಪರಮೇಶ್ವರನ ಅಥವಾ ಧರ್ಮದ ನಿಂದೆಯನ್ನು ಮಾಡಬೇಡ; ಅವುಗಳ ವಿಷಯವಾಗಿ ಶಂಕಿಸಲೂಬೇಡ. ಧರ್ಮದ ವಿಷಯ

ದಲ್ಲಿ ಸಂಶಯಗ್ರಸ್ತನಾದ ಮನುಷ್ಯನು, ಧರ್ಮತತ್ವಗಳ ನಿರ್ಣಯಜ್ಞಾನವುಳ್ಳ ಯಾವತ್ತು ಜನರನ್ನು ಹುಚ್ಚರೆಂದು ತಿಳಿಯುವನು; ಅವನು ಎರಡನೆಯವರ ಮಾತನ್ನು ನಿಜವೆಂದು ತಿಳಿಯದೆ, ತನ್ನ ಮಾತನ್ನಷ್ಟು ನಿಜವೆಂದು ತಿಳಿದು ಉದ್ಧತನಾಗುವನು. ಅಂಥವನಿಂದ ಸ್ವಂತದ ಕಲ್ಯಾಣದ, ಅರ್ಥಾತ್ ಧರ್ಮದ ಹಾನಿಯಾಗುವದು. ಇಂದ್ರಿಯಗಳು ಸಂತುಷ್ಟವಾಗುವ, ಅಥವಾ ಇಂದ್ರಿಯಗಳಿಗೆ ಗೋಚರವಾಗುವ ಪ್ರತ್ಯಕ್ಷ ವಿಷಯಗಳು ಮಾತ್ರ ಇರುತ್ತವೆಂದು ಆ ಮೂರ್ಖನಿಗೆ ತೋರುವದು- ಉಳಿದ ವಿಷಯಗಳ ಸಂಬಂಧದಿಂದ ಅವನು ಅಜ್ಞಾನಿಯಾಗಿಹೋಗುವನು. ಅವನು ಶಿಷ್ಟಾಚಾರಗಳನ್ನು ಉಲ್ಲಂಘಿಸುವವನಾದದ್ದರಿಂದ ಕಾಮ-ಲೋಭಗಳಲ್ಲಿ ಅತ್ಯಂತ ಆಸಕ್ತನಾಗಿ ನರಕಕ್ಕೆ ಗುರಿಯಾಗುವನು. ಎಲೈ ಅನಿಂದಿತೆ, ಧರ್ಮನಿಷ್ಠರು ಆಚರಿಸಿದಧರ್ಮವು ನಿಷ್ಫಲವಾಗಿದ್ದರೆ ಯಾವತ್ತು ಜಗತ್ತು ಘೋರ ಅಂಧಃಕಾರದಲ್ಲಿ ಮಗ್ನವಾಗಿಹೋಗುತ್ತಿತ್ತು. ಯಾರಿಗೂ ಮೋಕ್ಷಪ್ರಾಪ್ತಿಯಾಗುತ್ತಿದ್ದಿಲ್ಲ. ಎಲ್ಲರೂ ಪಶುಗಳಂತೆ ಉಪಜೀವಿಸುತ್ತಿದ್ದರು, ಯಾರಿಗೂ ಅಭೀಷ್ಟವಸ್ತುವಿನ ಪ್ರಾಪ್ತಿಯಾಗುತ್ತಿದ್ದಿಲ್ಲ. ಯಾವತ್ತು ಧರ್ಮಕಾರ್ಯಗಳು ನಿಷ್ಫಲವಿದ್ದು ಮೋಸಗೊಳಿಸುವವಾಗಿದ್ದರೆ ಸಾಮರ್ಥ್ಯಸಂಪನ್ನರಾದ ಋಷಿಗಳೂ, ದೇವತೆಗಳೂ. ಗಂಧರ್ವರೂ, ಅಸುರರೂ, ರಾಕ್ಷಸರೂ ಧರ್ಮವನ್ನು ಯಾಕೆ ಆಚರಿಸುತ್ತಿದ್ದರು? ಪುಣ್ಯದ ಫಲವನ್ನು ಪರಮಾತ್ಮನು ಕೊಡುವನೆಂಬ ನಂಬಿಗೆಯಿಂದಲೇ ಅವರು ಧರ್ಮವನ್ನು ಆಚರಿಸುವರು; ಯಾಕಂದರೆ ಧರ್ಮವೇ ಅವಿನಾಶಿಯಾದ ಸುಖದ ಹೇತುವಾಗಿರುವದು. ಒಟ್ಟಿಗೆ ಧರ್ಮವೂ ನಿಷ್ಫಲವಾದದ್ದಲ್ಲ; ಅಧರ್ಮವೂ ನಿಷ್ಫಲವಾದದ್ದಲ್ಲ. ಅಧರ್ಮನಿಷ್ಠರಿಗೆ ಪರಲೋಕದಲ್ಲಿ ಧರ್ಮಜನ್ಯಸುಖವು ದೊರೆಯುವದಿಲ್ಲ. ಸುಂದರೀ, ಶಾಸ್ತ್ರದಲ್ಲಿ ಹೇಳಿರುವ ಪುಣ್ಯ-ಪಾಪ-ಕರ್ಮಗಳ ಫಲಗಳ ಉತ್ಪತ್ತಿಯನ್ನೂ, ಪ್ರಾಣಿಗಳ ಉತ್ಪತ್ತಿ-ನಾಶಗಳ ಜ್ಞಾನವನ್ನೂ ದೇವತೆಗಳು ಗುಪ್ತವಾಗಿ ಇಟ್ಟಿರುವರು. ಬಹಳಮಾಡಿ ಯಾವತ್ತು ಜನರು ಇವುಗಳ ಸಂಬಂಧದಿಂದ ಅಜ್ಞಾನಿಗಳೇ ಇರುವರು. ಒಬ್ಬಾನೊಬ್ಬನಿಗೆ ಇವುಗಳ ಜ್ಞಾನವಾದರೆ ಸಾವಿರಾರುಕಲ್ಪಗಳ ಮೇಲೆ ಆಗುವದು; ಆದರೆ ಆ ಜ್ಞಾನವಾಗುವದರಿಂದ ಅವನ ಕಲ್ಯಾಣವಾಗುವದಿಲ್ಲ; ಯಾಕಂದರೆ ಈ ಸಂಗತಿಗಳನ್ನು ದೇವತೆಗಳು ಗುಪ್ತವಾಗಿ ಇಡಬೇಕಾಗಿರುವದು; ಆದ್ದರಿಂದ ಇವುಗಳ ಜ್ಞಾನವು ಮನುಷ್ಯರಿಗೆ ಆಗುವದು ಇಷ್ಟವಲ್ಲ. ದೇವತೆಗಳ ಮಾಯೆಯು ಅಜ್ಞೇಯವಾದದೆಂದು ಪ್ರಸಿದ್ಧವೇ ಇರುವದು- ಆಶೆಯ ಪರಿತ್ಯಾಗಮಾಡಿ ನಿಯಮನಿಷ್ಠರಾಗಿ ಇರುವ, ಹಾಗು ತಪಶ್ಚರ್ಯದಿಂದ ತಮ್ಮ ಪಾತಕಗಳನ್ನು ಸುಟ್ಟುಬಿಟ್ಟು ಶುದ್ಧಾಂತಃಕರಣರಾಗಿರುವ ಬ್ರಾಹ್ಮಣರಿಗೇ ಈ ಸಂಗತಿಗಳ ಜ್ಞಾನವಾಗುವದು, ಉಳಿದವರಿಗೆ ಆಗುವದಿಲ್ಲ. ಆದ್ದರಿಂದ ದೇವರ, ಅಥವಾ ಧರ್ಮದವಿಷಯವಾಗಿ ಶಂಕಿಸಬಾರದು. ಧರ್ಮದ ಫಲವು ಇಹಲೋಕದಲ್ಲಿಯೇ ದೊರೆಯುತ್ತಿರುವದು ಅದರ ಸಾರ್ವಕಾಲಿಕ ಸ್ವಭಾವವೆಂದು ಬ್ರಹ್ಮದೇವನು ತನ್ನ ಮಕ್ಕಳಿಗೆ ಹೇಳಿರುವದು ಕಶ್ಯಪಮುನಿಗೆ ಗೊತ್ತಿರುವದು; ಆದ್ದರಿಂದ ದ್ರೌಪದೀ, ನಿನ್ನ ಸಂಶಯವು ಮಂಜಿನಂತೆ ಒಮ್ಮೆಲೆ ದೂರವಾಗಲಿ. ನಿನ್ನ

ನಾಸ್ತಿಕಬುದ್ಧಿಯನ್ನು ಬಿಟ್ಟುಬಿಡು. ಪರಮೇಶ್ವರನನ್ನು ನಿಂದಿಸಬೇಡ, ಧರ್ಮವನ್ನು ದೂಷಿಸಬೇಡ; ಆದರೆ ಅವುಗಳ ವಿಷಯದ ಅಧ್ಯಯನಮಾಡಿ ಪೂಜ್ಯಬುದ್ಧಿಯನ್ನು ತಾಳು.

ದ್ರೌಪದಿಯ ನೀತಿವಾದ(ಕರ್ಮಭೇದ-ದೈವ, ಹಟ, ಪ್ರಯತ್ನ):—

ವಿವೇಕಶೀಲಾ, ಈ ಮೇರೆಗೆ ಧರ್ಮನು ಹೇಳಿದ್ದನ್ನು ಕೇಳಿ ದುಃಖವಿಹ್ವಲಳಾದ ದ್ರೌಪದಿಯು ಮತ್ತೆ ತನ್ನ ಆ ಪತಿಯನ್ನು ಕುರಿತು :– ಪಾರ್ಥಾ, ನಾನು ಧರ್ಮಕ್ಕೆ ದೋಷವನ್ನೂ ಇಡುವದಿಲ್ಲ, ಅದರ ಅವಮಾನವನ್ನೂ ಮಾಡುವದಿಲ್ಲ. ಪ್ರಜಾಪಾಲಕನಾದ ಪರಮೇಶ್ವರನ ಅವಜ್ಞೆಯನ್ನು ನಾನು ಯಾಕೆ ಮಾಡೇನು ? ಎಲೈ ಭರತವಂಶಜನೇ, ದುಃಖವಾದದ್ದರಿಂದ ಹೀಗೆ ನಾನು ಬಡಬಡಿಸುತ್ತೇನೆಂದು ತಿಳಿದುಕೋ. ಇನ್ನು ಹೀಗೆಯೇ ನಾನು ಬಡಬಡಿಸತಕ್ಕವಳು ! ಅದನ್ನು ನೀನು ಶಾಂತ ಮನಸ್ಸಿನಿಂದ ಕೇಳಿಕೊಳ್ಳು. ಎಲೈ ಶತ್ರುನಾಶಕಾ, ಜ್ಞಾನಿಯಾದ ಮನುಷ್ಯನು ಇಹಲೋಕದಲ್ಲಿ ಅವಶ್ಯವಾಗಿ ಕರ್ಮವನ್ನು ಮಾಡತಕ್ಕದ್ದು; ಯಾಕಂದರೆ ಕರ್ಮಮಾಡದೆ ವೃಕ್ಷಾದಿ ಸ್ಥಾವರಗಳಹೊರತು ಉಳಿದ ಪ್ರಾಣಿಗಳ ಜೀವನವಾಗುವದಿಲ್ಲ. ಆಕಳಕರುವಿಗೆ ಹಸಿವೆಯಾದಕೂಡಲೆ ಅದು ಮೊಲೆಕುಡಿಯುತ್ತದೆ, ಸೂರ್ಯನ ತಾಪವಾದರೆ ನೆರಳಿಗೆ ನಿಲ್ಲುತ್ತದೆ. ಒಟ್ಟಿಗೆ ಕರ್ಮದಯೋಗದಿಂದಲೇ ಪ್ರಾಣಿಗಳ ಉಪಜೀವನವಾಗುವದು. ಜಂಗಮಪ್ರಾಣಿಗಳಲ್ಲಿ ವಿಶೇಷವಾಗಿ ಮನುಷ್ಯರು ಕರ್ಮದಿಂದಲೇ ಇಹ–ಪರಗಳ ಉಪಜೀವಿಕೆಗಳನ್ನು ಸಂಪಾದಿಸಲು ಇಚ್ಛಿಸುವರು. ಕರ್ಮವನ್ನು ಪರಿತ್ಯಜಿಸಿದರೆ ಉಪಜೀವಿಕೆಯು ಸಾಗಲಾರದು. ಆದ್ದರಿಂದ ನೀನೂ ಉದ್ಯೋಗ ಮಾಡು; ಹೀಗೆ ಖಿನ್ನನಾಗಿ ಕುಳಿತುಕೊಳ್ಳಬೇಡ; ಇನ್ನು ಹಾಕಿಕೋ ಉದ್ಯೋಗರೂಪ ಕವಚವನ್ನು ಮೈಯಲ್ಲಿ ! ಮಾಡತಕ್ಕದ್ದನ್ನೆಲ್ಲ ನಾನು ಮಾಡಿರುವೆನೆಂದು ತಿಳಿಯುವವನು ಸಾವಿರದಲ್ಲಿ ಒಬ್ಬನಾದರೂ ಸಿಗುವನೋ ಇಲ್ಲವೋ ಸಂಶಯವಿರುವದು. ಹೀಗೆ ತಿಳಿಯುವಂಥ ಮನುಷ್ಯನು ಸಿಕ್ಕರೂ, ತಾನು ಸಂಪಾದಿಸಿದ್ದನ್ನು ಸಂರಕ್ಷಿಸುವದಕ್ಕಾಗಿಯೂ, ಅದನ್ನು ಅಭಿವೃದ್ಧಿಗೊಳಿಸುವದಕ್ಕಾಗಿಯೂ ಅವನು ಪ್ರಯತ್ನವನ್ನು ಮಾಡಲೇಬೇಕಾಗುವದು. ಇಲ್ಲದಿದ್ದರೆ ದಾನ–ಉಪಭೋಗ ಇವುಗಳಿಂದ ಹಿಮವತ್ಪರ್ವತವೂ ಕ್ಷಯವಾಗಬಹುದಾಗಿರಲು, ಅವನ ಸಂಪತ್ತಿನ ನಾಶದ ಪಾಡೇನು ? ಒಟ್ಟಿಗೆ, ಕರ್ಮ (ಉದ್ಯೋಗ) ಮಾಡದಿದ್ದರೆ ಎಲ್ಲದರ ಉಚ್ಛೇದವಾಗಿ ಹೋಗಬಹುದು. ಒಮ್ಮೊಮ್ಮೆ ಕರ್ಮವು ನಿಷ್ಫಲವಾಗಬಹುದು; ಆದರೆ ಫಲವುಮಾತ್ರ ಕರ್ಮದ ಹೊರತು ದೊರೆಯಲಾರದೆಂಬದು ನಿಶ್ಚಯವು.

ಯುಧಿಷ್ಠಿರಾ, ಈ ಲೋಕದಲ್ಲಿ ದೈವವಾದಿಗಳು, ಹಟವಾದಿಗಳು, ಕರ್ಮವಾದಿಗಳು ಅಥವಾ ಪೌರುಷವಾದಿಗಳು ಎಂದು ಮೂರುಬಗೆಯ ಜನರಿರುವರು. ಲೌಕಿಕ ಉಪಾಯದಹೊರತು ಪೂರ್ವಾರ್ಜಿತ ಕರ್ಮದಿಂದ ಫಲದೊರೆಯುವದೆಂದು ಹೇಳುವವರು ದೈವವಾದಿಗಳು. ಪೂರ್ವಾರ್ಜಿತಕರ್ಮವೂ ಬೇಡ, ಈಗಿನ ಪ್ರಯತ್ನವೂ ಬೇಡ ಯಾವದೊಂದು ಸಂಗತಿಯು ತನ್ನಿಂದ ತಾನೇ ಒದಗುವದೆಂದು ಹೇಳುವವರು ಹಟವಾದಿಗಳು. ಯಾರೂ ಏನೂಪ್ರಯತ್ನಮಾಡದೆ ಅಕಸ್ಮಾತ್ ದೊರೆತ ಫಲವನ್ನು ಇವರು ಇದಕ್ಕೆ

ಉದಾಹರಣವಾಗಿ ಹೇಳುವರು. ಸ್ವಂತದ ಪ್ರಯತ್ನದಿಂದ ಫಲಪ್ರಾಪ್ತಿಯಾಗುತ್ತದೆಂದು ಹೇಳುವವರೇ ಪೌರುಷ ಅಥವಾ ಪ್ರಯತ್ನವಾದಿಗಳು. ಒಟ್ಟಿಗೆ ದೈವ, ಹಟ, ಪ್ರಯತ್ನ ಇವು ಮೂರು, ಕಾರ್ಯಘಟನೆಗೆ ಕಾರಣಗಳಾದವು; ಆದರೆ ಕಾರ್ಯಘಟನೆಗೆ ಮೂರೇ ಕಾರಣಗಳು ಸಾಕಾಗಿರದೆ ಪೂರ್ವಕರ್ಮವೆಂಬ ನಾಲ್ಕನೆಯ ಕಾರಣವೂ ಕಾರ್ಯಸಿದ್ಧಿಗೆ ಬೇಕಾಗುವದು; ಯಾಕಂದರೆ ದೈವ, ಹಟ, ಪುರುಷಪ್ರಯತ್ನ ಇವೆಲ್ಲ ಪೂರ್ವಜನ್ಮದ ಕರ್ಮಗಳದೇ ರೂಪಾಂತರಗಳೆಂದು ಕೆಲವರ ಸಿದ್ಧಾಂತವಿರುವದು. ಪ್ರಾಣಿಗಳ ಉತ್ಪತ್ತಿಗೆ ಪೂರ್ವಕರ್ಮವೇ ಕಾರಣವು. ಪರಮೇಶ್ವರನು ಪ್ರಾಣಿಗಳಿಗೆ ಇಷ್ಟಾನಿಷ್ಟಫಲಗಳನ್ನು ಆಯಾಪ್ರಾಣಿಗಳಪೂರ್ವಕರ್ಮದ ಅನುರೋಧದಿಂದಲೇ ಕೊಡುವನೆಂದು ತತ್ವಜ್ಞಾನಿಗಳು ಹೇಳುವರು. ಹೀಗಿಲ್ಲದಿದ್ದರೆ ಪ್ರಾಣಿಗಳಲ್ಲಿ ಯಾವನೂದೈನ್ಯಯುಕ್ತನಾಗುತ್ತಿದ್ದಿಲ್ಲ. ಪೂರ್ವಕರ್ಮವಿರದಿದ್ದರೆ ಮನುಷ್ಯರ ಯತ್ನಕ್ಕೆಲ್ಲ ಫಲವು ದೊರೆಯುತ್ತಲೇ ಹೋಗುತ್ತಿತ್ತು. ಒಟ್ಟಿಗೆ ದೈವ – ಹಟ – ಪೌರುಷ ಇವು ಕಾರ್ಯಸಿದ್ಧಿಯುದ್ವಾರಗಳಿದ್ದು, ಕರ್ಮವೇ ಕಾರ್ಯಸಿದ್ಧಿಯು ಮುಖ್ಯಕಾರಣವಾಗಿರುವದು. ಕರ್ಮವನ್ನು (ಪ್ರಯತ್ನವನ್ನು) ಮಾಡಲೇಬೇಕೆಂದು ಮನುವಿನ ಸಿದ್ಧಾಂತವಿರುವದು. ಪ್ರಯತ್ನಮಾಡಿಯೂ ಫಲಪ್ರಾಪ್ತಿಯಾಗದಿದ್ದರೆ, ಅದಕ್ಕೆ ತನ್ನ ದುಷ್ಕರ್ಮವು ಪ್ರತಿಬಂಧಕವಾಗಿರುವದೆಂದು ತಿಳಿಯಬೇಕಲ್ಲದೆ, ಪ್ರಯತ್ನಮಾಡುವದನ್ನು ಬಿಡಬಾರದು. ನಿರುದ್ಯೋಗಿಯು ದರಿದ್ರನಾಗುವನು; ಉದ್ಯೋಗಿಯು ನಿಸ್ಸಂಶಯವಾಗಿ ಶ್ರೀಮಂತನಾಗುವನು. ಫಲಪ್ರಾಪ್ತಿಯು ಆಗುವದೋ ಇಲ್ಲವೋ ಎಂಬ ಸಂಶಯಕ್ಕೆ ಗುರಿಯಾದವನ ಕಾರ್ಯಸಿದ್ಧಿಯು ಸರ್ವಥಾ ಆಗುವದಿಲ್ಲ. ಸಂಶಯರಹಿತರಾಗಿ ಕಾರ್ಯಾಸಕ್ತರಾಗಿರುವ ಜನರು ಅತ್ಯಂತ ದುರ್ಮಿಳರು. ಯುಧಿಷ್ಠಿರಾ, ಸದ್ಯಕ್ಕೆ ನಮ್ಮ ಮೇಲೆ ದುರ್ಧರಪ್ರಸಂಗವು ಒದಗಿರುವದು. ನೀನು ಪ್ರಯತ್ನಮಾಡಿದರೆ ನಿಸ್ಸಂಶಯವಾಗಿ ಅದರ ಪರಾಭವವಾಗುವದು. ಪ್ರಯತ್ನ ಮಾಡಿಯೂ ನಿನಗೆ ಫಲಪ್ರಾಪ್ತಿಯಾಗದಿದ್ದರೆ ನಿನ್ನ ಈ ತಮ್ಮಂದಿರಿಂದ ಕಾರ್ಯಸಿದ್ಧಿಯಾಗುವದಿಲ್ಲೆಂದು ಗೊತ್ತಾದರೂ ಆಗಿಹೋದೀತು. ಶತ್ರುಗಳ ಯಶಸ್ಸಿಗೆ ಫಲದೊರೆಯುವದೋ, ನಮ್ಮ ಯಶಸ್ಸಿಗೆ ಫಲದೊರೆಯುವದೋ ಎಂಬದು ಪ್ರಯತ್ನ ಮಾಡಿದ ಬಳಿಕ ಬಹುಕಾಲ ಕ್ರಮಿಸಿದ ಮೇಲೆ ಗೊತ್ತಾಗುತ್ತಿರುತ್ತದೆ; ಕರ್ಮಮಾಡಿದ ಹೊರತು ಗೊತ್ತಾಗುವದಿಲ್ಲ. ಮಾಡುವಹಾಗೆ ಕರ್ಮಮಾಡಿ ಅದಕ್ಕೆ ಫಲದೊರೆಯದಿದ್ದರೆ ಅದಕ್ಕಾಗಿ ತನಗೆ ದೋಷವಿಟ್ಟುಕೊಳ್ಳುವದು ಉಚಿತವಲ್ಲ; ಯಾಕಂದರೆ ಕಾರ್ಯಸಿದ್ಧಿಯಾಗಲಿಕ್ಕೆ ಪ್ರಯತ್ನದಂತೆ ದೈವ ಹಾಗು ಹಟ ಎಂಬ ಬೇರೆ ಎರಡು ಕಾರಣಗಳಿರುತ್ತವೆ. ಪ್ರಯತ್ನಮಾಡದಿದ್ದರೆ, ಸಿದ್ಧಿಯಾಗುವದೋ ಇಲ್ಲವೋ ಎಂಬದು ತಿಳಿಯಲಿಕ್ಕೆ ಮಾರ್ಗವಿಲ್ಲದಾಗುವದು. ಕಾರ್ಯಸಾಧನದ ಅಂಗಭೂತ ಸಂಗತಿಗಳು ಒದಗಿ ಬಾರದ್ದರಿಂದ ಹಲವುಸಾರೆ ಪ್ರಯತ್ನಕ್ಕೆ ಅಲ್ಪ ಫಲವು ದೊರೆಯುವದು, ಅಥವಾ ಮೂಲತಃ ಫಲವು ದೊರೆಯುವದೇ ಇಲ್ಲವೆಂಬದು ನಿಜವು; ಆದರೆ ಇಷ್ಟರ ಮೇಲಿಂದ ಪ್ರಯತ್ನಮಾಡದಿರುವದು ತಪ್ಪು. ಪ್ರಯತ್ನಮಾಡದಿದ್ದರೆ ಸಿದ್ಧಿರೂಪ ಮುಖ್ಯ ಫಲವೂ ದೊರೆಯಲಾರದು;

ತನ್ನಲ್ಲಿರುವ ಶೌರ್ಯಾದಿಗುಣಗಳೂ ಪ್ರಕಟವಾಗಲಾರವು; ಆದ್ದರಿಂದ ಸುಜ್ಞಮನುಷ್ಯನು ತನ್ನ ಉತ್ಸಾಹ ಸಾಮರ್ಥ್ಯಗಳ ಮಾನದಿಂದ ದೇಶ, ಕಾಲ, ಸಾಮಾದಿಕ ಉಪಾಯಗಳು, ತನ್ನ ಕಲ್ಯಾಣ ಇವುಗಳ ವಿಚಾರವನ್ನು ಸಂಪತ್ತಿಯ ಅಭಿವೃದ್ಧಿಗಾಗಿ ತನ್ನ ಬುದ್ಧಿಯಿಂದ ಮಾಡುತ್ತಿರಬೇಕು; ಯಾಕಂದರೆ ಇವು ಕಾರ್ಯಸಿದ್ಧಿಯ ಸಾಧನಗಳಾಗಿರುವವು. ಈ ಸಾಧನಗಳಿಗಿಂತಲೂ ಕಾರ್ಯಸಾಧನವು ತನ್ನ ಪರಾಕ್ರಮವನ್ನೇ ಮುಖ್ಯವಾಗಿ ಅವಲಂಬಿಸಿರುವದು. ಇನ್ನು ಶತ್ರುವು ಮಹಾಬಲಿಷ್ಠನಿದ್ದರೆ ಪರಾಕ್ರಮಕ್ಕಿಂತ ಸಾಮಾದಿ ಉಪಾಯಗಳಿಂದ ಕಾರ್ಯಸಾಧಿಸಬೇಕಾಗುವದೆಂಬದು ನಿಜವು; ಆದರೆ ಶತ್ರುವು ಎಂಥ ಬಲಿಷ್ಠನಿದ್ದರೂ ಅವನನ್ನು ಸಂಕಟದಲ್ಲಿ ಕೆಡವುವ, ಹಾಗು ಅವನನ್ನು ದೇಶದಿಂದ ಓಡಿಸುವ ಇಚ್ಛೆಯನ್ನು ತ್ಯಜಿಸಬಾರದು. ಯೋಗ್ಯ ಸಂಧಿಯು ಒದಗಿದಕೂಡಲೆ ಕಾರ್ಯವನ್ನು ಸಾಧಿಸಬೇಕು. ಉದ್ಯೋಗದಫಲವು ದೊರೆಯಲಿಲ್ಲೆಂದು ತನ್ನನ್ನು ತಿರಸ್ಕರಿಸಿಕೊಳ್ಳಬಾರದು; ಯಾಕಂದರೆ ತನ್ನನ್ನು ತುಚ್ಛನೆಂದು ತಿಳಿಯುವ ಮನುಷ್ಯನಿಗೆ ಉತ್ತಮವಾದ ಐಶ್ವರ್ಯವು ಎಂದೂ ದೊರೆಯಲಾರದು. ಭರತಕುಲಶ್ರೇಷ್ಠಾ, ಜನರ ಕಾರ್ಯಸಿದ್ಧಿಯ ವ್ಯವಸ್ಥೆಯು ಹೀಗಿರುವದು. ಕಾಲಸ್ಥಿತಿಗಳ ಮಾನದಿಂದ ಪ್ರಯತ್ನ ಮಾಡುವದೇ ಸಿದ್ಧಿಯ ಮೂಲಕಾರಣವಾಗಿರುವದು. ಈ ಜ್ಞಾನವನ್ನು ನಾನು ನನ್ನ ತಂದೆಯ ಬಳಿಯಲ್ಲಿದ್ದ ಒಬ್ಬ ಪಂಡಿತ ಬ್ರಾಹ್ಮಣನ ಮುಖದಿಂದ ಸಂಪಾದಿಸಿದೆನು.

ಭೀಮನ ಅಭಿಪ್ರಾಯ(ಧರ್ಮ-ಅರ್ಥ-ಕಾಮಗಳವಿಚಾರ):— ವಿವೇಕಶೀಲಾ, ಈ ಮೇರೆಗೆ ದ್ರೌಪದೀ–ಯುಧಿಷ್ಠಿರರ ಸಂಭಾಷಣವಾದದ್ದನ್ನು ಕೇಳಿ ಅಸಹಿಷ್ಣುವಾದ ಭೀಮಸೇನನು ಸಿಟ್ಟಾಗಿ ಮುಂದಕ್ಕೆ ಬಂದು ಮುಸುಗುಟ್ಟುತ್ತ ಯುಧಿಷ್ಠಿರನನ್ನು ಕುರಿತು—"ಯುಧಿಷ್ಠಿರಾ, ಸತ್ಪುರುಷರಿಗೆ ಯೋಗ್ಯವಾದ, ಹಾಗು ಧರ್ಮಕ್ಕೆ ಅನುಕೂಲವಿರುವ ರಾಜ್ಯಪ್ರಾಪ್ತಿಯ ಹಾದಿಯನ್ನು ಹಿಡಿ. ನಾವು ಧರ್ಮ, ಅರ್ಥ, ಕಾಮಗಳನ್ನು ಸಂಪಾದಿಸದೆ ಕೇವಲ ವನದಲ್ಲಿ ಇದ್ದು ಪ್ರಯೋಜನವೇನು? ದುರ್ಯೋಧನನು ನಮ್ಮ ರಾಜ್ಯವನ್ನು ಧರ್ಮದಿಂದಾಗಲಿ, ಸರಳತನದಿಂದಾಗಲಿ, ಪರಾಕ್ರಮದಿಂದಾಗಲಿ, ತಕ್ಕೊಂಡಿರದೆ ನರಿಯು ಸಿಂಹನ ಸ್ವಾಧೀನದಲ್ಲಿದ್ದ ಮಾಂಸವನ್ನು ಕಪಟದಿಂದ ಎಬ್ಬಿಸುವಂತೆ ಮಾಯಾವಿ ದ್ಯೂತದಿಂದ ಅಪಹರಿಸಿರುವನು. ರಾಜಾ, ಅಲ್ಪಸ್ವಲ್ಪವಾದ ಧರ್ಮದ ನೆಳಲಲ್ಲಿದ್ದು, ಅದಕ್ಕಾಗಿ ಧರ್ಮ ಕಾಮಗಳ ಉತ್ಪತ್ತಿಸ್ಥಾನವಾದ ಅರ್ಥವನ್ನು ದೂಡಿಕೊಟ್ಟು ನೀನೇಕೆ ದುಃಖವನ್ನು ಅನುಭವಿಸುತ್ತ ಕುಳಿತಿರುವೆ? ಗಾಂಡೀವಧಾರಿಯಾದ ಅರ್ಜುನನು ರಕ್ಷಿಸುತ್ತಿದ್ದದ್ದರಿಂದ ಇಂದ್ರನಿಗೂ ಅಪಹರಿಸಲಶಕ್ಯವಾದನಮ್ಮ ರಾಜ್ಯವನ್ನು ನೋಡನೋಡುತ್ತ ಶತ್ರುಗಳು ಅಪಹರಿಸಿದರು! ಧರ್ಮವಾಸನೆಯಲ್ಲಿ ವಿಶ್ವಾಸವಿಟ್ಟಿರುವ ನಿನ್ನ ಸಮಾಧಾನಕ್ಕಾಗಿಯೇ ನಾವು ನಮ್ಮ ಅಂತಃಕರಣಗಳನ್ನು ಬಿಗಿ ಹಿಡಿದುಕೊಂಡಿರುವೆವು. ಇದರಿಂದ ನಮ್ಮ ಮಿತ್ರರು ಚಿಂತೆಯಿಂದ ಕೃಶರೂ, ನಮ್ಮ ಶತ್ರುಗಳು ಸಂತೋಷದಿಂದ ಪುಷ್ಟರೂ ಆಗುತ್ತಿರುವರು. ಈ ವನವಾಸರೂಪ ಪಶುವೃತ್ತಿಯನ್ನು ಹೇಡಿಗಳಲ್ಲದೆ ಪರಾಕ್ರಮಿಗಳು ಅಂಗೀಕರಿಸಲಾರರು. ನಿನ್ನ ಈ ವೃತ್ತಿಗೆ ಶ್ರೀ ಕೃಷ್ಣನು,

ಅರ್ಜುನನು, ಅಭಿಮನ್ಯುವು, ನಾನು, ನಕುಲಸಹದೇವರು ಸೈ ಅನ್ನೆವು! ರಾಜಾ, ನೀನು "ಧರ್ಮಧರ್ಮ" ಎಂದು ಅನ್ನುತ್ತ, ಯಾವಾಗಲೂ ವ್ರತಗಳನ್ನು ಮಾಡಿ ಸೊರಗಿ ಹೋಗಿರುತ್ತೀ! ಒಬ್ಬ ಷಂಢನಿಗೆ ಯೋಗ್ಯವಾದ ಈ ಬಗೆಯ ಉಪಜೀವಿಕೆಯು ನಿನಗೆ ವೈರಾಗ್ಯದಿಂದ ಪ್ರಾಪ್ತವಾಗಿರಲಿಕ್ಕಿಲ್ಲವಷ್ಟೆ? ಐಶ್ವರ್ಯವನ್ನು ಸಂಪಾದಿಸಲು ಅಸಮರ್ಥರಾದ ನಿಂದ್ಯ ಜನರೇ ಸ್ವಾರ್ಥವನ್ನು ಹಾಳುಮಾಡುವ ಈ ವೈರಾಗ್ಯವನ್ನು ಪ್ರೀತಿಸುವರು. ರಾಜಾ, ನೀನು ದೂರದರ್ಶಿ ಇದ್ದು, ನಮ್ಮಲ್ಲಿ ಪೌರುಷವಿರುತ್ತದೆಂಬದು ನಿನಗೆ ಕಾಣುತ್ತಿದ್ದರೂ ನೀನು ಶಾಂತಿಯನ್ನೇ ಧರಿಸಿ ನಮಗೊದಗಿರುವ ಅನರ್ಥಗಳನ್ನು ನೋಡಲೊಲ್ಲೆ! ನಮಗೆ ಸಂಗ್ರಾಮದಲ್ಲಿ ಮರಣ ಒದಗಿದರೆ ದುಃಖವಿಲ್ಲ; ಆದರೆ ಧೃತರಾಷ್ಟ್ರನ ಪೋರರು ನಮ್ಮನ್ನು ಶಕ್ತಿಹೀನರೆಂದು ತಿಳಿಯುವದನ್ನು ನೋಡಿ ನಮಗೆ ದುಃಖವಾಗುತ್ತದೆ. ಯುದ್ಧದಲ್ಲಿ ನಾವು ಮರಣ ಹೊಂದಿದರೆ ನಮಗೆ ಸದ್ಗತಿಯಾಗುವದು; ಅಥವಾ ನಾವೇ ಅವರನ್ನು ಸೋಲಿಸಿದರೆ ನಮಗೆ ರಾಜ್ಯಪ್ರಾಪ್ತಿಯಾಗುವದು. ಒಟ್ಟಿಗೆ ನಮಗೆ ದ್ವೇಷದ ಸೇಡೂ, ವಿಪುಲ ಕೀರ್ತಿಯೂ ಬೇಕಾಗಿರುವದರಿಂದ, ಸ್ವಧರ್ಮದಿಂದ ನಡೆಯುವ ನಮ್ಮ ಕರ್ತವ್ಯವು ಸರ್ವಥೈವ ಯುದ್ಧವೇ ಆಗಿರುವದು. ರಾಜಾ, ಮಿತ್ರರ, ಹಾಗು ತನ್ನ ಅಪಕರ್ಷಕ್ಕೆ ಕಾರಣವಾಗುವದು ಧರ್ಮವಾಗಿರದೆ, ಅದು ಪತ್ರಿ ಒಂದು ದುಃಖದ ಅಥವಾ ಅಧರ್ಮದ ಬೀಜವಾಗಿರುವದು. ಅಪ್ಪಾ ಯುಧಿಷ್ಠಿರಾ, ಮನುಷ್ಯನು ಬೇರೆ ಪುರುಷಾರ್ಥಗಳನ್ನು ಸಂಪೂರ್ಣವಾಗಿ ಬಿಟ್ಟುಕೊಟ್ಟು ಬರಿಯ ಧರ್ಮವೊಂದನ್ನೇ ಆಚರಿಸಹತ್ತಿದರೆ, ಆ ಧರ್ಮವು ಅರ್ಥಸಾಧ್ಯವಿದ್ದದ್ದರಿಂದ ಅಂಥ ಮನುಷ್ಯನು ಧರ್ಮವನ್ನು ಆಚರಿಸುವವಿಷಯದಲ್ಲಿ ಅಸಮರ್ಥನಾಗುವನು. ಹೀಗಾಯಿತೆಂದರೆ, ಸುಖದುಃಖಗಳೆರಡೂ ಪ್ರೇತವನ್ನು ತೊಲಗಿ ಹೋಗುವಂತೆ, ಧರ್ಮ ಹಾಗು ಅರ್ಥಎಂಬ ಎರಡೂ ಪುರುಷಾರ್ಥಗಳು ಆ ಮನುಷ್ಯನನ್ನು ಬಿಟ್ಟುಹೋಗುವವು. ಯಾವನ ಧರ್ಮವು ಕೇವಲ ಧರ್ಮಕ್ಕಾಗಿಯೇ ಇರುವದೋ ಅವನು ದುಃಖವನ್ನು ಭೋಗಿಸಲು ತಕ್ಕವನು, ಜಾಣನಲ್ಲ. ಕುರುಡನಿಗೆ ಸೂರ್ಯಪ್ರಕಾಶದ ಜ್ಞಾನವಾಗದಿರುವಂತೆ, ಅವನಿಗೆ ಧರ್ಮದ ಅರ್ಥವು ತಿಳಿಯುವದಿಲ್ಲೆಂದು ಅನ್ನಬೇಕಾಗುವದು. ಅದರಂತೆ, ಅರ್ಥವೆಂಬ ಪುರುಷಾರ್ಥವು ಕೇವಲ ತನ್ನ ಸಲುವಾಗಿಯೇ ಎಂದು ತಿಳಿಯುವವನಿಗೂ ಅರ್ಥದ ತತ್ವವು ತಿಳಿಯದೆ ಹೋಗಿ, ಕೇವಲ ಉದರಂಭರರು ತಮ್ಮ ಹೊಟ್ಟೆಯನ್ನು ತುಂಬಿಕೊಳ್ಳುವದಕ್ಕಾಗಿ ಅರಣ್ಯದಲ್ಲಿ ಆಕಳುಗಳನ್ನು ರಕ್ಷಿಸುತ್ತಿರುವಂತೆ ಅವನು ಜೀವಿಸುತ್ತಿರುವನೆಂದು ತಿಳಿಯಬೇಕು. ಧರ್ಮ–ಕಾಮಗಳನ್ನು ಆಚರಿಸದೆ ಕೇವಲ ಅರ್ಥಾಭಿಲಾಷಿಯಾಗಿರುವ ಪುರುಷನು ವಧ್ಯನೂ, ಬ್ರಹ್ಮಹತ್ಯೆಮಾಡಿದವನಂತೆ ಯಾವತ್ತು ಪ್ರಾಣಿಗಳಲ್ಲಿ ನಿಂದ್ಯನೂ ಆಗಿರುವನು. ಅದರಂತೆ ಯಾವಾಗಲೂ ಕಾಮಾಭಿಲಾಷಿಯಾಗಿ ಧರ್ಮ–ಅರ್ಥಗಳೆಂಬ ಉಳಿದ ಎರಡು ಪುರುಷಾರ್ಥಗಳನ್ನು ಪರಿತ್ಯಜಿಸುವವನಿಗೆ ಮಿತ್ರರು ಇಲ್ಲದಂತಾಗಿ, ಅವನು ಧರ್ಮ–ಅರ್ಥಎಂಬ ಎರಡು ಪುರುಷಾರ್ಥಗಳಿಂದಲೂ ಭ್ರಷ್ಟನಾಗುವನು. ಹೀಗಾಗಲು, ನೀರು ಇಲ್ಲದಾಗುವವರಿಂದ ಮೀನ

ಗಳು ಸಾಯುವಂತೆ, ಸ್ವಚ್ಛಂದದಿಂದ ಕಾಮದಲ್ಲಿಯೇ ರಮಮಾಣನಾಗಿರುವ ಧರ್ಮಾರ್ಥಶೂನ್ಯ ಮನುಷ್ಯನು ಕಾಮದ ನಾಶವಾಯಿತೆಂದರೆ ನಿಶ್ಚಯವಾಗಿ ನಾಶಹೊಂದುವನು. ಅಂತೇ ತಿಳಿದವರು ಧರ್ಮ-ಅರ್ಥಗಳೆಂಬ ಪುರುಷಾರ್ಥಗಳನ್ನು ಎಂದೂ ದುರ್ಲಕ್ಷಿಸುವದಿಲ್ಲ; ಯಾಕಂದರೆ, ಅರಣಿಯು ಅಗ್ನಿಯ ಉತ್ಪತ್ತಿಸ್ಥಾನವಾಗಿರುವಂತೆ ಧರ್ಮ, ಹಾಗು ಅರ್ಥ ಇವು ಕಾಮದ ಉತ್ಪತ್ತಿಸ್ಥಾನಗಳಾಗಿರುವವು. ಒಟ್ಟಿಗೆ, ಅರ್ಥವು ಸರ್ವಥೈವ ಧರ್ಮಮೂಲಕವೂ, ಧರ್ಮವಿದ್ದಾದರೂ ಸರ್ವಥೈವ ಅರ್ಥಮೂಲಕವೂ ಆಗಿದ್ದು, ಅವೆರಡೂ ಮೇಘ ಹಾಗು ಸಮುದ್ರಗಳಂತೆ ಪರಸ್ಪರಗಳ ಉನ್ನತಿಗೆ ಕಾರಣೀಭೂತವಾಗಿರುವವು. ಪುಷ್ಪಮಾಲಾ, ಚಂದನಾದಿಗಳ ಸಂಪರ್ಕ, ಸುವರ್ಣಾದಿಕಗಳ ಪ್ರಾಪ್ತಿ ಮೊದಲಾದವುಗಳ ಯೋಗದಿಂದಾಗುವ ಆನಂದರೂಪ ಅಂತಃಕರಣದ ಸಂಕಲ್ಪವೇ ಕಾಮವೆನಿಸುವದು.

ಯುಧಿಷ್ಠಿರಾ, ಅರ್ಥವನ್ನು ಇಚ್ಛಿಸುವ ಪುರುಷನು ಅದರಪ್ರಾಪ್ತಿಗಾಗಿ ವಿಪುಲ ಧರ್ಮಮಾಡಲಿಚ್ಛಿಸುವನು; ಮತ್ತು ಕಾಮವನ್ನು ಇಚ್ಛಿಸುವ ಪುರುಷನು ಅದರ ಪ್ರಾಪ್ತಿಗಾಗಿ ಅರ್ಥವನ್ನು ಸಂಪಾದಿಸಲು ಹೆಣಗುವನು- ಅಂದಬಳಿಕ ಅರ್ಥವನ್ನು ಸಂಪಾದಿಸಲಿಕ್ಕೆ ಧರ್ಮವೂ, ಕಾಮವನ್ನು ಸಂಪಾದಿಸಲಿಕ್ಕೆ ಅರ್ಥವೂ ಸಾಧನಗಳಾಗಿರುವವೆಂಬ ಮಾತು ಸಿದ್ಧವಾಗುವದು. ಕಾಮದಿಂದ ಉಳಿದ ಪುರುಷಾರ್ಥಗಳನ್ನು ಸಂಪಾದಿಸಲಿಕ್ಕೆ ಮನುಷ್ಯನು ಇಚ್ಛಿಸುವದಿಲ್ಲ. ಕಾಮದಯೋಗದಿಂದ ಬೇರೆ ಅಭೀಷ್ಟಗಳು ಸಿದ್ಧಿಸಲಾರವು; ಯಾಕಂದರೆ ಸಿದ್ಧಿಗಳಿಗೆ ಸಾಧನವು ಬೇಕಾಗಿದ್ದು ಕಾಮವು ಬೇರೆ ಪುರುಷಾರ್ಥಗಳ ಸಾಧನವಾಗಿರದೆ, ಕಟ್ಟಿಗೆಯಿಂದುಂಟಾದ ಬೂದಿಯಂತೆ ಆ ಕಾಮವು ಕೇವಲ ಫಲರೂಪವಾಗಿದ್ದು, ಪ್ರತ್ಯಕ್ಷ ಪ್ರೀತಿಯುನ್ನುಂಟುಮಾಡುವ ಅದರ ಉಪಯೋಗವು ಆಗಿ ಹೋಗುತ್ತದೆ; ಆದ್ದರಿಂದ ಆ ಕಾಮವು ಸಾಧನವಾಗಿರದೆ, ಫಲವಾಗಿರುವದೆಂದು ಶಾಸ್ತ್ರಜ್ಞರ ಮತವಿರುವದು. ಕಾಮ, ಹಾಗು ಲೋಭ ಇವುಗಳ ಅಧೀನನಾಗಿ ಧರ್ಮದ ಸ್ವರೂಪದ ಜ್ಞಾನವನ್ನು ಸಂಪಾದಿಸದ ದುಷ್ಟ ಮನುಷ್ಯನು ಇಹ-ಪರಲೋಕಗಳಲ್ಲಿ ವಧ್ಯನಾಗುವನು. ಇರಲಿ, ಸ್ತ್ರೀಧನಾದಿ ವಸ್ತುಗಳೇ ಪರಿವಾರವಾಗಿ ಉಳ್ಳ ಅರ್ಥದ ಸ್ಪಷ್ಟವಾದ ಜ್ಞಾನವು ನಿನಗಿರುತ್ತದೆ; ಮತ್ತು ಅವುಗಳ ಸಾಧನಗಳ ಹಾಗು ಅವುಗಳ ಹಲವು ಪ್ರಕಾರದ ಪರಿಣಾಮಗಳ ತಿಳವಳಿಕೆಯೂ ನಿನಗಿರುತ್ತದೆ. ಕಾಮದ ವಸ್ತುಗಳಾದ ಸ್ತ್ರೀಯರು, ಆಳುಗಳು, ಕುದುರೆಗಳು ಇತ್ಯಾದಿ ಪರಿವಾರಗಳ ಪ್ರಾಪ್ತಿಯಾಗದಿರುವದೂ, ಪ್ರಾಪ್ತಿಯಾದಬಳಿಕ ಅವುಗಳ ವಿಯೋಗವಾಗುವದೂ, ಅವಕ್ಕೆ ಮುಪ್ಪು ಅರ್ಥಾತ್ ಕ್ಷಯವುಂಟಾಗುವದೂ, ಅಥವಾ ಮರಣ ಒದಗುವದೂ ಇವಕ್ಕೇ ಅನರ್ಥವೆನ್ನುವರು- ಈ ಅನರ್ಥವು ಈಗ ನಮಗೆ ಒದಗಿಯೇ ಇರುವದು. ಕಣ್ಣು ಮೊದಲಾದ ಐದು ಜ್ಞಾನೇಂದ್ರಿಯಗಳೂ, ಮನಸ್ಸೂ, ಬುದ್ಧಿಯೂ ತಮ್ಮ ತಮ್ಮ ವಿಷಯಗಳಲ್ಲಿ ಆಸಕ್ತವಾದವೆಂದರೆ ಉಂಟಾಗುವ ಪ್ರೀತಿಯೇ ಕಾಮವೆಂದು ನನಗೆ ತೋರುತ್ತದೆ. ಒಟ್ಟಿಗೆ ಈಗ ನಾನು ಹೇಳಿದಂತೆ ಧರ್ಮ-ಅರ್ಥ-ಕಾಮಗಳ ಭೇದವಿರುತ್ತದೆಂದು ತಿಳಿದು ಮನುಷ್ಯನು ಕೇವಲ ಧರ್ಮದ

ಅಥವಾ ಕೇವಲ ಅರ್ಥದ, ಅಥವಾ ಕೇವಲ ಕಾಮದ ಅವಲಂಬನಮಾಡದೆ ಯಾವಾಗಲೂ ಎಲ್ಲ ಪುರುಷಾರ್ಥಗಳ ಸೇವನ ಮಾಡುತ್ತಿರಬೇಕು. ಪ್ರತಿದಿವಸದಲ್ಲಿ ಆರಂಭಕ್ಕೆ ಧರ್ಮವನ್ನು, ಮಧ್ಯದಲ್ಲಿ ಅರ್ಥವನ್ನು, ಕಡೆಗೆ ಕಾಮವನ್ನು ಆಚರಿಸಬೇಕೆಂದು ಶಾಸ್ತ್ರನಿಯಮವಿರುವದು. ತನ್ನ ವಯಸ್ಸಿನಲ್ಲಿಯಾದರೂ ಮೊದಲು ಕಾಮವನ್ನು, ಮಧ್ಯದಲ್ಲಿ ಅರ್ಥವನ್ನು, ಕಡೆಗೆ ಧರ್ಮವನ್ನು ಆಚರಿಸಬೇಕೆಂದು ಶಾಸ್ತ್ರವಿಹಿತವಿಧಿಯಿರುವದು. ಆದ್ದರಿಂದ ಯುಧಿಷ್ಠಿರಾ, ಪುರುಷಾರ್ಥಗಳ ಸೇವನದ ಕಾಲವನ್ನರಿಯುವ ಸುಜ್ಞಮನುಷ್ಯನು ಬೇರೆಬೇರೆ ಕಾಲಗಳನ್ನು ಗೊತ್ತುಮಾಡಿಕೊಂಡು ಧರ್ಮ, ಅರ್ಥ, ಕಾಮಗಳನ್ನು ಯೋಗ್ಯಪ್ರಕಾರದಿಂದ ಸೇವಿಸಬೇಕು. ಎಲೈ ಕುರುನಂದನಾ, ರಾಜಾ ಯುಧಿಷ್ಠಿರಾ, ಸುಖಾಭಿಲಾಷಿಯಾದ ಪುರುಷನ ಅತ್ಯಂತಿಕ ಕಲ್ಯಾಣದ ಸಾಧನವು ಮೋಕ್ಷವು, ಅಥವಾ ಉಪಾಯಾಂತರದಿಂದ ಸಂಪಾದಿಸಿದ ಅಭ್ಯುದಯುವು ಆಗಿರುವದು. ಆದ್ದರಿಂದ ನೀನು ಮೋಕ್ಷವನ್ನಾದರೂ ಬೇಗನೆ ಸಂಪಾದಿಸು, ಅಥವಾ ಅಭ್ಯುದಯುವನ್ನಾದರೂ ಸಂಪಾದಿಸು; ಯಾಕಂದರೆ ಇತ್ತ ಮೋಕ್ಷವೂ ಇಲ್ಲ, ಅತ್ತ ಅಭ್ಯುದಯುವೂ ಇಲ್ಲ ಎಂಬಂತೆ ನಡುವೆ ಬಡಬಡಿಸುವವನ ಆಯುಷ್ಯವು ರೋಗಗ್ರಸ್ತನ ಆಯುಷ್ಯದಂತೆ ಕಷ್ಟದಾಯಕವಾಗುವದು. ಧರ್ಮವೆಂದರೇನೆಂಬದು ನನಗೂ ಗೊತ್ತಿರುತ್ತದೆ; ನೀನಂತು ಯಾವಾಗಲೂ ಅದನ್ನು ಆಚರಿಸುತ್ತಲೇ ಇರುತ್ತಿ. ಯುಧಿಷ್ಠಿರಾ, ಧರ್ಮದ ಪ್ರಕಾರಗಳು ಹಲವು ಇರುತ್ತಿದ್ದರೂ, ಅತ್ಯಂತ ವಿಚಾರಸಂಪನ್ನರಾದ ಜ್ಞಾನಿಗಳು ಕರ್ಮವಿಧಾಯಕವಾಕ್ಯಗಳನ್ನೇ ಹೊಗಳುತ್ತಿರುವರು. ಒಟ್ಟಿಗೆ ಜ್ಞಾನಿಗಳ ಮತದಿಂದ ಕರ್ಮರೂಪ ಧರ್ಮವೇ ಶ್ರೇಷ್ಠವಾಗಿರುವದು; ಆದ್ದರಿಂದ ಜ್ಞಾನಯಜ್ಞ, ಸಜ್ಜನಸಂವಾದ, ವೇದಾಧ್ಯಯನ, ಸರಳತನದ ನಡತೆ ಇವೇ ಶ್ರೇಷ್ಠಧರ್ಮವಾಗಿದ್ದು, ಅದು ಇಹ-ಪರಲೋಕಗಳಲ್ಲಿ ಫಲದಾಯಕವಾಗತಕ್ಕದ್ದಾಗಿರುವದು; ಆದರೆ ಎಲೈ ಪುರುಷಶ್ರೇಷ್ಠಾ, ಎಲ್ಲ ಗುಣಗಳಿದ್ದರೂ ಅರ್ಥ ಒಂದು ಇಲ್ಲದಿದ್ದರೆ ಈ ಧರ್ಮವನ್ನಾಚರಿಸುವದು ಶಕ್ಯವಲ್ಲವು. ಧರ್ಮವು ಯಾವತ್ತು ಜಗತ್ತಿನ ಮೂಲವಿದ್ದು, ಧರ್ಮಕ್ಕಿಂತ ಶ್ರೇಷ್ಠವಾದದ್ದು ಎರಡನೆಯದೇನೂ ಇಲ್ಲವೆಂಬದು ನಿಜವಿದ್ದರೂ, ಇಂಥ ಧರ್ಮವು ವಿಪುಲ ಅರ್ಥ ಸಂಚಯುವಿದ್ದರೆಯೇ ಆಚರಿಸಲು ಶಕ್ಯವಾಗಿರುವದು. ಒಟ್ಟಿಗೆ ಧರ್ಮದ ಇಚ್ಛೆಯಿದ್ದರೂ ಅದಕ್ಕಾಗಿ ಮೊದಲು ಅರ್ಥವನ್ನು ಸಂಪಾದಿಸಬೇಕು.

ಆದರೆ ರಾಜಾ, ಕೇವಲ ಧರ್ಮದಲ್ಲಿ ಅಂತಃಕರಣವಿಟ್ಟು ಬಿಕ್ಕೆಬೇಡಿದರೆ, ಅಥವಾ ಸಾಹಸಮಾಡದಿದ್ದರೆ ಅರ್ಥ ಸಂಪಾದನಮಾಡುವದು ಶಕ್ಯವಲ್ಲವು. ಬ್ರಾಹ್ಮಣರಿಗೆ ಯಾಚನೆಯಿಂದ ಅರ್ಥಪ್ರಾಪ್ತಿಯಾಗುತ್ತಿದ್ದರೂ, ನೀನು ಕ್ಷತ್ರಿಯನಾದ್ದರಿಂದ ನಿನಗೆ ಯಾಚನೆಯು ನಿಷಿದ್ಧವಾಗಿರುವದು; ಆದ್ದರಿಂದ ನರಶ್ರೇಷ್ಠಾ, ನೀನು ನಿನ್ನ ಪರಾಕ್ರಮದಿಂದಲೇ ಅರ್ಥವನ್ನು ಸಂಪಾದಿಸುವ ಯತ್ನಮಾಡು. ಸ್ವಂತದ ಸಾಮರ್ಥ್ಯದಿಂದ ಉಪಜೀವಿಕೆಯನ್ನು ಸಾಗಿಸುವದೇ ಕ್ಷತ್ರಿಯನ ಶ್ರೇಷ್ಠಧರ್ಮವಾಗಿರುವದು; ಆದ್ದರಿಂದ ನೀನು ಸ್ವಧರ್ಮವನ್ನು ಅವಲಂಬಿಸಿ ನಮ್ಮಮೇಲೆ ಸಾಗಿಬರುವ ಶತ್ರುಗಳನ್ನು ಸಂಹರಿಸು; ಮತ್ತು

ಅರ್ಜುನನ ಕೈಯಿಂದ ಹಾಗು ನನ್ನ ಕೈಯಿಂದ ಧೃತರಾಷ್ಟ್ರರೂಪ ಅರಣ್ಯದನಾಶಮಾಡು. ಐಶ್ವರ್ಯ ರೂಪವಾದ ಅಭ್ಯುದಯವೇ-ಧರ್ಮದ ಫಲವಿದ್ದದ್ದರಿಂದ-ಅದು ಧರ್ಮವೆಂದು ಜ್ಞಾನಿಗಳು ಹೇಳಿರುವರು; ಆದ್ದರಿಂದ ನೀನು ಐಶ್ವರ್ಯರೂಪ ಅಭ್ಯುದಯವನ್ನೇ ಅವಲಂಬಿಸು. ಜನರನ್ನು ಉದ್ವೇಗಗೊಳಿಸುವ ಸಂಗ್ರಾಮದಂಥ ಕ್ರೂರಕರ್ಮವೇ ಧರ್ಮವಾಗಿರುವ ಕ್ಷತ್ರಿಯ ಕುಲದಲ್ಲಿ ನಿನ್ನ ಜನ್ಮವಾಗಿರುವದು. ಪ್ರಜೆಗಳ ಪಾಲನಕ್ಕಾಗಿ ಕ್ರೌರ್ಯರೂಪಕಾರ್ಯವನ್ನು ಮಾಡುವದು ನಿನಗೆ ನಿಂದ್ಯವಲ್ಲವು; ಯಾಕಂದರೆ ನೀನು ಕ್ಷತ್ರಿಯನಾದ್ದರಿಂದ ಪರಮೇಶ್ವರನೇ ನಿನ್ನ ಈ ಧರ್ಮವನ್ನು ಶಾಶ್ವತವೆಂದು ನಿರ್ಧರಿಸಿರುವನು. ಸ್ವಧರ್ಮಭ್ರಷ್ಟರಾಗುವವರ ಪ್ರಶಂಸೆಯನ್ನು ಯಾರೂಮಾಡುವದಿಲ್ಲ. ಕೇವಲ ಧರ್ಮದಲ್ಲಿ ಅಂತಃಕರಣವಿಟ್ಟು ಈ ವರೆಗೆ ಯಾವರಾಜನಿಗೂ ಎಂದೂ ಪೃಥ್ವಿಯೂ ದೊರೆತಿರುವದಿಲ್ಲ; ಐಶ್ವರ್ಯಪ್ರಾಪ್ತಿಯೂ ಆಗಿರುವದಿಲ್ಲ; ಸಂಪತ್ತಿನ ಲಾಭವೂ ಆಗಿರುವದಿಲ್ಲ; ಹಲವು ಕ್ಷುದ್ರಜನರಿಗೆ ಆಶೆತೋರಿಸುವದೇ ಮೊದಲಾದ ಶಾಠ್ಯವನ್ನು ಮಾಡುವದರಿಂದಲೇ ರಾಜ್ಯಪ್ರಾಪ್ತಿಯು ಆಗುತ್ತದೆ. ನೃಪಶ್ರೇಷ್ಠಾ, ದೇವತೆಗಳೂ ಶಾಠ್ಯದ ಅವಲಂಬನ ಮಾಡಿ, ಕೇವಲ ಐಶ್ವರ್ಯಸಂಪನ್ನರೂ ಹಿರಿಯರಾದದ್ದರಿಂದ ಐಶ್ವರ್ಯಭೋಗಕ್ಕೆ ಯೋಗ್ಯರೂ ಆದ ತಮ್ಮ ಅಣ್ಣಂದಿರೆನಿಸುವ ಅಸುರರನ್ನೂ ಗೆದ್ದಿರುವರು. ಸಾರಾಂಶ, ಹೇ ಮಹಾಬಾಹೋ, ಸಾಮರ್ಥ್ಯವುಳ್ಳವನಿಗೇ ಯಾವತ್ತು ದೊರೆಯುವದೆಂಬದನ್ನು ಲಕ್ಷ್ಯದಲ್ಲಿಟ್ಟು, ಅತ್ಯಂತ ಶಾಠ್ಯತೆಯನ್ನಾದರೂ ಅವಲಂಬಿಸಿ ಶತ್ರುಗಳನ್ನು ಸಂಹರಿಸು. ಅರ್ಜುನನಂಥ ಧನುರ್ಧರನೂ, ನನ್ನಂಥ ಗದಾಧರನೂ ಹಿಂದಕ್ಕಾಗಲಿಲ್ಲ, ಮುಂದಕ್ಕೆ ಆಗುವ ಹಾಗಿಲ್ಲ. ಯುಧಿಷ್ಠಿರಾ, ಅತ್ಯಂತ ಬಲಿಷ್ಠನಾಗಿದ್ದರೂ ಶೌರ್ಯದ ಅವಲಂಬನವನ್ನೇ ಮಾಡಬೇಕಾಗುವದು; ಯಾಕಂದರೆ ಕೇವಲ ಶರೀರಬಲ, ಸೈನ್ಯ, ಉತ್ಸಾಹ ಇವುಗಳ ಯೋಗದಿಂದ ಯುದ್ಧ ಮಾಡುವದು ಶಕ್ಯವಲ್ಲ; ಆದ್ದರಿಂದ ನೀನು ಶೌರ್ಯವನ್ನು ಅವಲಂಬಿಸು. ಉತ್ಕೃಷ್ಟ ಅರ್ಥಪ್ರಾಪ್ತಿಗಾಗಿ ಅರ್ಥತ್ಯಾಗವನ್ನು ಮಾಡಬೇಕಾಗುವದೆಂಬದು ನಿಜವು; ಆದರೆ ಅದನ್ನು ಬೀಜರೂಪದಿಂದ ಮಾಡಬೇಕು. ಒಕ್ಕಲಿಗರು ಯಾವತ್ತು ಧಾನ್ಯದೊಳಗಿಂದ ಅಲ್ಪ ಧಾನ್ಯವನ್ನು ಬೀಜಕ್ಕಾಗಿ ಕಾದಿಡುವರು; ಅದರೆ ಅರ್ಥಕ್ಕೆ ಸಂಧಿಯಾಗಿ ಅನರ್ಥ ಪ್ರಾಪ್ತಿಯಾಗುವಲ್ಲಿಯೂ, ಅಭ್ಯುದಯವು ಏನೂ ಆಗದಿರುವ ಪ್ರಸಂಗದಲ್ಲಿಯೂ ಅರ್ಥತ್ಯಾಗವನ್ನು ಮಾಡುವದೆಂದರೆ ಕತ್ತೆಗೆ ಖರಾರಿಯನ್ನು ಮಾಡಿದಹಾಗೆಯೇ ಸರಿ! ಪುಷ್ಕಳ ಅರ್ಥಪ್ರಾಪ್ತಿಗಾಗಿ ಸ್ವಲ್ಪ ಅರ್ಥತ್ಯಾಗ ಮಾಡುವಂತೆ, ಅಲ್ಪ ಧರ್ಮತ್ಯಾಗದಿಂದ ಪುಷ್ಕಲ ಧರ್ಮವನ್ನು ಸಂಪಾದಿಸುವವನೇ ನಿಜವಾದ ಜ್ಞಾನಸಂಪನ್ನನೆಂದು ತಿಳಿಯಬೇಕು. ರಾಜಾ, ಶೌರ್ಯವಿಲ್ಲದೆ ಕೇವಲ ಸ್ವವಿಮಾಶಿನಿಂದ, ಅಥವಾ ಉದ್ಯೋಗದಿಂದ ಯಾವತ್ತು ಪ್ರಜೆಗಳನ್ನು ಸ್ವಾಧೀನಪಡಿಸಿಕೊಳ್ಳುವದು ಯಾವನಿಗೂ ಶಕ್ಯವಲ್ಲ. ಸಾರಾಂಶ, ರಾಜಾ, ಸೂರ್ಯನು ತನ್ನ ಕಿರಣಗಳಿಂದ ಪ್ರಜೆಗಳನ್ನು ಶೋಷಿಸಿ, ಮಳೆಯಿಂದ ಪ್ರಜೆಗಳನ್ನು ರಕ್ಷಿಸುವಂತೆ ನೀನಾದರೂ ಶಿಷ್ಟಪಾಲನ ದುಷ್ಟಶಾಸನಮಾಡು. ಪೃಥ್ವಿಯನ್ನು ಯಥಾಸ್ಥಿತವಾಗಿ ಪಾಲಿಸುವದೇ ನಮ್ಮ ಅನಾದಿ ಸಿದ್ಧ

ಧರ್ಮವಾಗಿರುವದೆಂದು ನಾನು ಕೇಳಿರುವೆನು. ನಮ್ಮ ಹಿರಿಯರೂ ಹಾಗೆ ಮಾಡುತ್ತ ಬಂದಿರುವರು. ಕ್ಷತ್ರಿಯರಿಗೆ ಯುದ್ಧಾದಿ ಉಪಾಯಗಳಿಂದ ಜಯಪ್ರಾಪ್ತಿ ಮಾಡಿಕೊಂಡತೆ ಸದ್ಗತಿಯಾಗುವಂತೆ, ತಪಶ್ಚರ್ಯದಿಂದ ಸದ್ಗತಿಯಾಗುವದಿಲ್ಲ. ನಿನ್ನಮೇಲೆ ಪ್ರಜೆಗಳ ಭಕ್ತಿಯು ಸಂಪೂರ್ಣವಾಗಿರುವದು. ಸಭಾದಿಗಳಲ್ಲಿ ಅವರು ನಿನ್ನನ್ನು ಶ್ಲಾಘಿಸುವರು, ದುರ್ಯೋಧನಾದಿಗಳನ್ನು ನಿಂದಿಸುವರು. ಅದರಲ್ಲಿಯೂ ವಿಶೇಷವೇನಂದರೆ, ಯಾವತ್ತು ಬ್ರಾಹ್ಮಣರೂ, ಕೌರವರೂ ಕೂಡ ನೀನು ಸತ್ಯಪ್ರತಿಜ್ಞನೆಂದು ಆನಂದದಿಂದ ಹೇಳುತ್ತಿರುವರು. ನೀನು ಮೋಹದಿಂದಾಗಲಿ, ದೈನ್ಯದಿಂದಾಗಲಿ, ಲೋಭದಿಂದಾಗಲಿ, ಭೀತಿಯಿಂದಾಗಲಿ, ಕಾಮನಾತೃಪ್ತಿಗಾಗಿಯಾಗಲಿ, ಅರ್ಥಸಂಪಾದನದ ಹೇತುವಿನಿಂದಾಗಲಿ, ಎಂದೂ ಯಾವ ಪ್ರಕಾರದ ಅಸತ್ಯವನ್ನೂ ಆಡಿರುವದಿಲ್ಲವೆಂಬದು ನಿಜವು; ಆದರೂ ಈ ಕಾಲದಲ್ಲಿ ನೀನು ನಿನ್ನ ಪ್ರತಿಜ್ಞೆಯ ಭಂಗ ಮಾಡಿದರೂ ಚಿಂತೆಯಿಲ್ಲ; ಯಾಕಂದರೆ ಪೃಥ್ವಿಯ ಪ್ರಾಪ್ತಿಗಾಗಿ ಮಾಡಬೇಕಾದ ಪಾಪವನ್ನು ವಿಪುಲ ದಕ್ಷಿಣಾಯುಕ್ತವಾದ ಯಜ್ಞಗಳಿಂದ ಕಳೆದುಕೊಳ್ಳಬಹುದು. ಅದರಂತೆ ನೀನು ಯಜ್ಞಯಾಗಾದಿಗಳನ್ನೂ, ಬ್ರಾಹ್ಮಣರಿಗೆ ದಾನಧರ್ಮಾದಿಗಳನ್ನೂ ಮಾಡಿ ಪಾಪವನ್ನು ಕಳೆದುಕೊಳ್ಳಬಹುದು. ರಾಜ್ಯವನ್ನು ಸಂಪಾದಿಸಲಿಕ್ಕೆ ಇದು ತಕ್ಕ ಸಮಯವಾಗಿರುವದು. ನಾಯಿಯ ಚರ್ಮದ ಬುದ್ದಲಿಕೆಯಲ್ಲಿ ಹಾಕಿದ ಹಾಲಿನಂತೆ, ಶೂದ್ರನಮುಖದಲ್ಲಿರುವ ವೇದದಂತೆ, ಪಂಜುಗಳ್ಳಲ್ಲಿರುವ ಸತ್ಯದಂತೆ, ಸ್ತ್ರೀಯರಲ್ಲಿರುವ ಸಾಮರ್ಥ್ಯದಂತೆ, ದುರ್ಯೋಧನನಲ್ಲಿರುವ ಅರಸೊತ್ತಿಗೆಯ ಗತಿಯಾಗಿರುವದು; ಆದ್ದರಿಂದ ನೀನು ವಿಲಂಬ ಮಾಡದೆ ರಥಾರೂಢನಾಗಿ ಸರ್ವ ಸನ್ನಾಹದೊಡನೆ ಹೊರಟು, ಶೂರರಾದ ನಿನ್ನ ತಮ್ಮಂದಿರಿಂದೊಡಗೂಡಿ ಇಂದ್ರಪ್ರಸ್ಥನಾವತಿಯ ಮೇಲೆ ಸಾಗಿ ಹೋಗಿ ಧೃತರಾಷ್ಟ್ರನ ಪೋರರಿಂದ ರಾಜ್ಯವನ್ನು ಕಸಿದುಕೋ.

ಯುಧಿಷ್ಠಿರನ ಉತ್ತರ—ಎಲೈ ಭರತವಂಶಜಾ ಭೀಮಾ, ವಾಕ್ಯರೂಪ ಬಾಣಗಳ ತುದಿಯಿಂದ ಚುಚ್ಚಿ ನನ್ನನ್ನು ನೀನು ಹೀಯಾಳಿಸುವದು ಸರ್ವಥಾ ಸತ್ಯವಾಗಿರುತ್ತದೆ. ಅದಕ್ಕಾಗಿ ನಾನು ನಿನಗೆ ದೋಷವಿಡುವದಿಲ್ಲ; ಯಾಕಂದರೆ ನನ್ನ ಅನೀತಿಯಿಂದಲೇ ನಿಮಗೆ ಸಂಕಟವು ಒದಗಿರುತ್ತದೆ. ನಾನು ರಾಷ್ಟ್ರವನ್ನೂ, ರಾಜ್ಯಲಕ್ಷ್ಮಿಯನ್ನೂ ಧೃತರಾಷ್ಟ್ರನ ಮಕ್ಕಳಿಂದ ಸೆಳೆದುಕೊಳ್ಳುವ ಇಚ್ಛೆಯಿಂದ ದ್ಯೂತವನ್ನು ಅಂಗೀಕರಿಸಿದೆನು. ಆಗ ನನ್ನೊಡನೆ ದುರ್ಯೋಧನನು ದ್ಯೂತವಾಡಬೇಕಾಗಿದ್ದು, ಪರ್ವತೇಶ್ವರನಾದ ಶಕುನಿಯು ನನ್ನೊಡನೆ ಆಡಿ ಕಪಟದಿಂದ ನನ್ನನ್ನು ಸೋಲಿಸಿದನು; ಆದ್ದರಿಂದಲೇ ಭೀಮಸೇನಾ, ಈ ಕಷ್ಟವನ್ನು ನಾವು ಅನುಭವಿಸಬೇಕಾಯಿತು! ಹ್ಯಾಗೇ ಆಗಲಿ, ಶಕುನಿಯು ಹೇಳಿದ ಹಾಗೆ ಫಾಸೆಗಳು ಬೀಳುವದನ್ನು ನೋಡಿ ನಾನು ನನ್ನ ಮನಸ್ಸನ್ನು ಬಿಗಿಹಿಡಿಯಬಹುದಾಗಿತ್ತೆಂಬದು ನಿಜವು; ಆದರೆ ಕ್ರೋಧವು ಮನುಷ್ಯನ ಧೈರ್ಯದ ವಿಧ್ವಂಸ ಮಾಡುವದೆಂಬದನ್ನು ಲಕ್ಷದಲ್ಲಿಡತಕ್ಕದ್ದು. ಅಪ್ಪಾ ಭೀಮಾ, ಶೌರ್ಯ, ಅಭಿಮಾನ, ಪ್ರಯತ್ನ ಇವುಗಳಿಂದ ವ್ಯಾಪ್ತವಾದ ಅಂತಃಕರಣವನ್ನು

ಬಿಗಿಹಿಡಿಯುವದು ಶಕ್ಯವಿರದ್ದರಿಂದಲೇ ನನಗೆ ಹಾಗೆ ಮಾಡಲಿಕ್ಕೆ ಬರಲಿಲ್ಲವು. ಭೀಮಾ, ನಿನ್ನ ಮಾತಿಗೆ ನಾನು ದೋಷವಿಡುವದಿಲ್ಲ. ಯಾಕಂದರೆ ನನ್ನ ಮತದಿಂದ ಹಾಗೆ ಆಗಲೇ ಬೇಕಾಗಿತ್ತು. ಸಜ್ಜನರ ಸಮಕ್ಷ ನಾನು—"ಹನ್ನೆರಡು ವರ್ಷ ವನವಾಸವನ್ನೂ ಒಂದು ವರ್ಷ ಅಜ್ಞಾತವಾಸವನ್ನೂ ಮಾಡುವೆನೆಂ"ದು ಒಪ್ಪಿಕೊಂಡಿರಲು, ಈಗ ರಾಜ್ಯ ಪ್ರಾಪ್ತಿಗಾಗಿ ಆ ಪ್ರತಿಜ್ಞೆಯನ್ನು ಮುರಿಯಲು ನಾನು ಹ್ಯಾಗೆ ಮನಸ್ಸು ಮಾಡೇನು? ಧರ್ಮವನ್ನು ಅತಿಕ್ರಮಿಸಿ ಪೃಥ್ವಿಯನ್ನು ಪಾಲಿಸುವದು ಸಜ್ಜನರಿಗೆ ಮರಣಕ್ಕಿಂತಲೂ ಅತ್ಯಂತ ಕಷ್ಟಪ್ರದವೆಂದು ನನಗೆ ತೋರುತ್ತದೆ- ಭೀಮಾ, ದ್ಯೂತದಲ್ಲಿ ಶಕುನಿಯ ಬಾಹುವನ್ನು ದಗ್ಧ ಮಾಡುವದಕ್ಕಾಗಿ ಪರಿಘಕ್ಕೆ (ಒಂದು ಪ್ರಕಾರದ ಆಯುಧ) ನೀನು ಕೈ ಹಾಕಿದಾಗ ಅರ್ಜುನನು ನಿನ್ನನ್ನು ತಡೆದನಲ್ಲ, ಆಗೇ ನೀನು ಈ ವೀರಕರ್ಮವನ್ನು ಮಾಡಿದ್ದರೆ ಅದೇನು ದುಷ್ಕರವಾಗುತ್ತಿತ್ತೇನು? ಎಷ್ಟುಮಾತ್ರವೂ ಆಗುತ್ತಿದ್ದಿಲ್ಲ- ಅದೂ ಇರಲಿ, ನಿನ್ನಲ್ಲಿ ಪೌರುಷವಿರುತ್ತದೆಂಬ ಜ್ಞಾನವು ನಿನಗಿದ್ದರೆ, ಪ್ರತಿಜ್ಞೆಮಾಡುವದಕ್ಕಿಂತ ಮೊದಲೇ ನೀನು ನನಗೆ ಯಾಕೆಹೇಳಲಿಲ್ಲ? ಹೊತ್ತಿನಲ್ಲಿ ತಪ್ಪಿ ಈಗ ನನಗೆ ಮೇಲಿಂದ ಮೇಲೆ ಯಾಕೆ ಚುಚ್ಚುತ್ತೀ? ಭೀಮಾ, ದ್ರೌಪದಿಯು ಅತ್ಯಂತ ಕ್ಲೇಶಪಡುತ್ತಿರುವದನ್ನು ನೋಡಿ ಶತ್ರುವನ್ನು ಕ್ಷಮಿಸಿದ್ದಕ್ಕಾಗಿ ನನಗೆ ಬಹಳ ದುಃಖವಾಗುತ್ತಿದ್ದು, ಪ್ರತ್ಯಕ್ಷ ವಿಷ ಪ್ರಾಶನಮಾಡಿದಂತೆ ನಾನು ಕ್ಲೇಶಪಡುತ್ತಿರುವೆನು; ಆದರೂ ಎಲೈ ಭರತವಂಶಜನಾದ ವೀರನೇ, ಕೌರವವೀರರಮುಂದೆ ನಾನು ಪ್ರತಿಜ್ಞೆಮಾಡಿ ಹೇಳಿದ ಮಾತು ಸುಳ್ಳಾಗುವದು ಶಕ್ಯವಲ್ಲವು; ಆದ್ದರಿಂದ ಬೀಜಬಿತ್ತುವ ಒಕ್ಕಲಿಗರು, ಪೈರು ಹಣ್ಣಿಗೆ ಬರುವವರೆಗೆ ಹಾದಿಯು ನೋಡುತ್ತ ಕುಳಿತುಕೊಳ್ಳಬೇಕಾಗುವಂತೆ, ನೀನು ಸುಖೋತ್ಪತ್ತಿಯ ಕಾಲವನ್ನ ನಿರೀಕ್ಷಿಸುತ್ತಿರು. ಶತ್ರುಗಳಿಂದ ಮೊದಲು ಮೋಸ ಹೊಂದಿದವರು, ಅವರ ಶತ್ರುಗಳು ಶೌರ್ಯಾದಿ ಸಾಧನರೂಪ ಪುಷ್ಪಗಳಿಂದಲೂ, ಐಶ್ವರ್ಯರೂಪಫಲದಿಂದಲೂ ಯುಕ್ತವಾಗಿರುವಾಗ ಅವರನ್ನು ತುಂಡರಿಸಿದರೆ ಆ ಮೋಸ ಹೊಂದಿದವರ ಪೌರುಷಕ್ಕೆ ಅತ್ಯಂತ ಮಹತ್ವವುಂಟಾಗುವದು. ಅಂಥ ವೀರನೇ ಈ ಮೃತ್ಯುಲೋಕದಲ್ಲಿ ಬದುಕಿ ಇರುವನೆಂದು ತಿಳಿಯಬೇಕು. ಅಂಥವನಿಗೇ ಸಂಪೂರ್ಣ ಐಶ್ವರ್ಯ—ಪ್ರಾಪ್ತಿಯಾಗುವದು; ಶತ್ರುಗಳೂ ಅಂಥವನ ಮುಂದೆಯೇ ತಲೆಬಾಗಿಸುವರು; ದೇವತೆಗಳು ಇಂದ್ರನನ್ನು ಸೇವಿಸುವಂತೆ ಅವನ ಮಿತ್ರರು ಅಂಥವನನ್ನು ಸೇವಿಸತೊಡಗಿ, ಆತನ ಆಶ್ರಯದಿಂದ ತಮ್ಮ ಉಪಜೀವನವನ್ನು ಸಾಗಿಸತೊಡಗುವರು. ಒಟ್ಟಿಗೆ ನನ್ನ ಪ್ರತಿಜ್ಞೆಯು ನಿಶ್ಚಿತವಾದದ್ದೆಂದು ನೀನು ಸ್ಪಷ್ಟವಾಗಿ ತಿಳಿದುಕೋ. ಮೋಕ್ಷದ ಅಥವಾ ಪ್ರತ್ಯಕ್ಷ ಜೀವಿತದ ತ್ಯಾಗಮಾಡುವ ಪ್ರಸಂಗ ಒದಗಿದರೂ, ನಾನು ಸತ್ಯರೂಪ ಧರ್ಮವನ್ನು ಸ್ವೀಕರಿಸುವವನು! ಯಾಕಂದರೆ ರಾಜ್ಯ, ಪುತ್ರ, ಕೀರ್ತಿ, ದ್ರವ್ಯ ಇವು ಸತ್ಯದ ಒಂದು ಷೋಡಶಾಂಶವನ್ನೂ ಸರಿಗಟ್ಟಲಾರವು!

ಪುನಃ ಭೀಮನ ಭಾಷಣವು:—ಎಲೈ ಮಹಾರಾಜಾ, ದೇಹವು ಕ್ಷಣಭಂಗುರವಾಗಿರಲು, "ಶೀವು ಕಾಲನಿರೀಕ್ಷಣಮಾಡಿರೆಂ"ದು ನೀನು ನಮಗೆ ಹೇಳುವದು

ಆಶ್ಚರ್ಯವಲ್ಲವೆ? ಅಮರ್ಯಾದಿತವಾದ ಆಯುಷ್ಯವುಳ್ಳವರೂ, ಯಾವತ್ತು ಕಾಲದಲ್ಲಿ ಆಗುವದನ್ನು ಪ್ರತ್ಯಕ್ಷ ಅರಿತವರೂಮಾತ್ರ ಕಾಲದ ಪ್ರತೀಕ್ಷೆಮಾಡಿದರೆ ನಡೆಯುಬಹುದು; ಆದರೆ ನಮ್ಮ ಸ್ಥಿತಿಯು ಹಾಗಿಲ್ಲದಿರುವದರಿಂದ ನಾವು ಹದಿಮೂರುವರ್ಷಗಳನ್ನು ಕಳೆಯುವದರೊಳಗಾಗಿ ಕಾಲವು ನಮ್ಮ ಆಯುಷ್ಯವನ್ನು ಕ್ಷೀಣಮಾಡಿ ನಮ್ಮನ್ನು ಮೃತ್ಯುವಿನ ಸಮೀಪಕ್ಕೂ ಕರೆದೊಯ್ಯಬಹುದು; ಯಾಕಂದರೆ ಮರಣವು ಯಾವಾಗಲೂ ಶರೀರದ ಬೆನ್ನುಹತ್ತಿರುವದು; ಆದ್ದರಿಂದ ಮರಣವು ಒದಗುವದರೊಳಗಾಗಿಯೇ ನಾವು ರಾಜ್ಯಪ್ರಾಪ್ತಿಗಾಗಿ ಯತ್ನಮಾಡಬೇಕು. ತನ್ನಲ್ಲಿ ಉದ್ಯೋಗ-ಶೌರ್ಯಗಳು ಕಡಿಮೆಯಿರುವದರಿಂದ ವೈರದ ಪ್ರತಿಕಾರಮಾಡಲಾರದವನ ಜನ್ಮವು ವ್ಯರ್ಥವಾದದ್ದಾಗಿ ಅವನು ಕೇವಲ ಸಂಕಟಗಳನ್ನು ಅನುಭವಿಸಲಿಕ್ಕೇ ಹುಟ್ಟಬಂದಿರುವನೆಂದು ನಾನು ತಿಳಿಯುವೆನು. ಧರ್ಮಾ, ನಿನ್ನ ಬಾಹುಬಲದಿಂದಲೇ ಸುವರ್ಣಪ್ರಾಪ್ತಿಯಾಗುವದರಿಂದ ಆ ನಿನ್ನ ಬಾಹುಗಳು ಸುವರ್ಣದವಿರುವವೆಂದು ತಿಳಿದುಕೋ. ನೀನು ಸಂಗ್ರಾಮದಲ್ಲಿ ಬಾಹುಬಲದಿಂದ ಸುವರ್ಣಾದಿ ದ್ರವ್ಯಗಳನ್ನು ಸಂಪಾದಿಸಿ ಅವನ್ನು ಉಪಭೋಗಿಸು. ಮನುಷ್ಯನು ತನಗೆ ಅಪಕಾರ ಮಾಡಿದವನನ್ನು ವಧಿಸುವದರಿಂದ ಅವನಿಗೆ ತತ್ಕಾಲಕ್ಕೆ ನರಕವಾದರೂ, ಆ ನರಕವು ಅವನಿಗೆ ಸ್ವರ್ಗದ ಯೋಗ್ಯತೆಗೆ ಸಮಾನವಾದದ್ದಿರುವದು! ಧರ್ಮಾ, ಕ್ರೋಧದಿಂದಾಗುವ ಸಂತಾಪವು ನಿಜವಾಗಿಯೇ ಅಗ್ನಿಗಿಂತಲೂ ಪ್ರಖರವಾಗಿರುವದರಿಂದ ಆ ಕ್ರೋಧಾಗ್ನಿಯಿಂದ ಸಂತಪ್ತನಾದ ನನಗೆ ಹಗಲುರಾತ್ರಿ ನಿದ್ದೆಬಾರದಾಗಿದೆ. ಈ ಧನುರ್ಧರಾಗ್ರೇಸರನಾದ ಅರ್ಜುನನೂ ಚಡಪಡಿಸುತ್ತಿರುವನು. ನಾನು ಹಾಗು ದ್ರೌಪದಿಯು ಹೊರತು ಉಳಿದವರು ನಿನ್ನ ಸಮಾಧಾನಕ್ಕಾಗಿ ಸುಮ್ಮನಿದ್ದು ನನ್ನ ಹಾಗೆ ಸಂತಾಪಗೊಳ್ಳದಿದ್ದರೂ, ಅವರೆಲ್ಲರೂ ನಮ್ಮಿಬ್ಬರಂತೆ ಯುದ್ಧವನ್ನೇ ಅಭಿನಂದಿಸುತ್ತಿರುವರು; ಯಾಕಂದರೆ ಅವರೆಲ್ಲರೂ ನಮ್ಮ ಹಾಗೆಯೇ ಸಂಕಟಕ್ಕೆ ಗುರಿಯಾಗಿರುವರು. ಎಲೈ ಶತ್ರುದಮನಾ, ಸ್ವಭಾವದಲ್ಲಿ ದೋಷವಿರುವದರಿಂದ ನಿನ್ನ ಶರೀರದಲ್ಲಿ ಕಾರುಣ್ಯದ ಸಂಚಾರವಾಗಿದ್ದು, ನೀನು ಅಹಿಂಸಕನಾಗಿ ಕ್ಲೇಶವನ್ನು ಅನುಭವಿಸುತ್ತ ಕುಳಿತಿರುವೆ; ಆದರೆ ಯಾರೂ ನಿನ್ನ ಈ ಇರವನ್ನು ಹೊಗಳುವದಿಲ್ಲವು. ಎಲೈ ರಾಜನೇ, ನೀನು ವೇದಜ್ಞರಂತೆ ಆಲಸ್ಯಯುಕ್ತನೂ, ವಿಚಾರಶೂನ್ಯನೂ ಆಗಿದ್ದು, ನಿನ್ನ ಬುದ್ಧಿಯು ವೇದಾಧ್ಯಯನದಿಂದ ಕುಂಠಿತವಾಗಿ ಹೋಗಿರುವದರಿಂದ ನಿಜವಾದ ಸಂಗತಿಯು ಅದಕ್ಕೆ ತಿಳಿಯದಂತಾಗಿದೆ. ನೀನು ದಯಾಲುವು, ಅಂತೇ ಬ್ರಾಹ್ಮಣ ಸ್ವಭಾವದವನು ಆಗಿರುತ್ತೀ. ಇಂಥ ನೀನು ಕ್ಷತ್ರಿಯರಲ್ಲಿ ಯಾಕೆ ಹುಟ್ಟಿದೆಯೋ ತಿಳಿಯದು! ಯಾಕಂದರೆ ಈ ಕ್ಷತ್ರಿಯ ಜಾತಿಯಲ್ಲಿ ಬಹುತರ ಕ್ರೂರಬುದ್ಧಿಯ ಜನರೇ ಹುಟ್ಟುತ್ತಿರುವರು. ನೀನು ಮನುವಿನ ರಾಜಧರ್ಮವನ್ನು ಅರಿತಿದ್ದರೂ ಕ್ರೂರರೂ, ಶಾಠ್ಯಸಂಪನ್ನರೂ, ಅಶಾಂತಿಪ್ರಿಯರೂ, ಶಾಸನ ಮಾಡಲು ಯೋಗ್ಯರೂ ಆದ ಧೃತರಾಷ್ಟ್ರಪುತ್ರರನ್ನು ಯಾಕೆ ಕ್ಷಮಿಸುತ್ತಿರುವೆ? ಎಲೈ ಪುರುಷಶ್ರೇಷ್ಠಾ, ನೀನು ಬುದ್ಧಿ, ಶೌರ್ಯ, ಶಾಸ್ತ್ರಜ್ಞಾನ ಇವುಗಳಿಂದ ಯುಕ್ತನಾದವನೂ, ಸತ್ಕುಲದಲ್ಲಿ ಹುಟ್ಟಿದವನೂ ಆಗಿದ್ದು!

ಕರ್ತವ್ಯದ ವಿಷಯವಾಗಿ ಏನೂ ವಿಚಾರ ಮಾಡದೆ ಹೀಗೆ ಅಜಗರನ ಹಾಗೆ ಸ್ವಸ್ಥ ಯಾಕೆ ಕುಳಿತುಕೊಂಡಿರುವೆ? ಎಲೈ ಕುಂತೀಪುತ್ರಾ, ನಮ್ಮನ್ನೆಲ್ಲ ಒಂದು ವರ್ಷದವರೆಗೆ ಅಜ್ಞಾತವಾಸದಲ್ಲಿ ಗುಪ್ತವಿಡುವದೆಂದರೆ, ಕೇವಲ ಒಂದು ಹಿಡಿಹುಲ್ಲಿನಿಂದ ಹಿಮಪರ್ವತವನ್ನು ಮುಚ್ಚಲು ಇಚ್ಛಿಸುವ ಹಾಗೆಯೇ ಸರಿ! ಸುಪ್ರಸಿದ್ಧರಾಗಿದ್ದ ನೀನೂ ನಾವೂ ಒಂದು ವರ್ಷ ಗುಪ್ತವಾಗಿ ಹ್ಯಾಗೆ ಉಳಿದೇವು? ನಾವು ಉಳಿಯಲು ಯತ್ನಿಸಿದರೂ ನಮ್ಮ ಶತ್ರುಗಳು ಪ್ರಯತ್ನಪೂರ್ವಕವಾಗಿ ನಮ್ಮನ್ನು ಬೈಲಿಗೆಳೆಯದೆ ಯಾಕೆ ಬಿಟ್ಟಾರು? ಈಗ ನಾವು ಕಳೆದಿರುವ ಹದಿಮೂರು ತಿಂಗಳ ಅನುಭವದ ಮೇಲಿಂದ ನಾವು ಕಳೆಯಬೇಕಾಗಿರುವ ಮುಂದಿನ ಹನ್ನೆರಡು ವರ್ಷಗಳ ಅನುಮಾನವಾಗುವದಿಲ್ಲವೆ? ಆದ್ದರಿಂದ ರಾಜಾ, ಯುದ್ಧವನ್ನು ಉದಾಸೀನ ಮಾಡಬೇಡ. ಅಸತ್ಯಭಾಷಣದಿಂದ ತಟ್ಟುವ ಪಾಪವನ್ನು ಹಿಂದುಗಡೆ ಪ್ರಾಯಶ್ಚಿತ್ತದಿಂದ ಕಳೆದುಕೊಳ್ಳಲಿಕ್ಕೆ ಬಂದೀತು. ಎತ್ತುಗಳನ್ನು ಪರಿಪುಷ್ಟವಾಗಿ ಮೇಸಿದರೆ, ಅವುಗಳನ್ನು ಹೂಡಿದ ಪಾಪದಿಂದ ಮನುಷ್ಯನು ಮುಕ್ತನಾಗುವನು. ಒಟ್ಟಿಗೆ ರಾಜಾ, ನೀನು ಶತ್ರುಗಳನ್ನು ಸಂಹರಿಸಲು ನಿಶ್ಚಯಿಸು, ಯಾಕಂದರೆ ಪ್ರತಿಒಬ್ಬ ಕ್ಷತ್ರಿಯನಿಗೆ ಸಂಗ್ರಾಮದ ಹೊರತು ಅನ್ಯಧರ್ಮವಿಲ್ಲವು.

ಯುಧಿಷ್ಠಿರನ ಉತ್ತರ—ವಿವೇಕಶೀಲಾ, ಈ ಮೇರೆಗೆ ಭೀಮನು ಆಡಿದ ಕ್ಷತ್ರಿಯ ಧರ್ಮೋಚಿತ ಮಾತುಗಳನ್ನು ಕೇಳಿ ಶತ್ರುತಾಪನ ಪುರುಷಶ್ರೇಷ್ಠ ಕುಂತೀಪುತ್ರ ಯುಧಿಷ್ಠಿರನು ಉಸುರ್ಗರೆದು ತನ್ನೊಳಗೆ—ನಾನು ರಾಜಧರ್ಮಗಳನ್ನೂ ಕೇಳಿರುವೆನು; ವರ್ಣಗಳ ಆಚಾರವನ್ನೂ ಕೇಳಿರುವೆನು. ಆದರೆ ಸುಮ್ಮನೆ ಅವನ್ನು ಕೇಳುವದರಿಂದೇನು ಪ್ರಯೋಜನವು? ಭವಿಷ್ಯ-ವರ್ತಮಾನ ಕಾಲಗಳನ್ನು ಲಕ್ಷಿಸಿ ನಡೆಯುವವನೇ ನಿಜವಾದಜ್ಞಾನಸಂಪನ್ನನು. ನಾನು ಉತ್ತಮ ಪ್ರಕಾರದ ಧರ್ಮ ವ್ಯವಸ್ಥೆಯನ್ನು ಬಲ್ಲವನಾಗಿದ್ದರೂ, ಮೇರು ಪರ್ವತದಂತೆ ಉನ್ನತಾವಸ್ಥೆಯಲ್ಲಿರುವ ಶತ್ರುಗಳನ್ನು ಕೇವಲ ಬಲಾತ್ಕಾರದಿಂದ ಮರ್ದನಮಾಡಲು ಹ್ಯಾಗೆ ಸಮರ್ಥನಾದೇನು? ಕ್ಷಾತ್ರಧರ್ಮವನ್ನು ನಡೆಸಲು ನಮಗೆ ತಕ್ಕಸಮಯವಿಲ್ಲವು. ಎಂದು ಕ್ಷಣಹೊತ್ತು ವಿಚಾರಿಸಿ, ಹೀಗೆಯೇ ಮಾಡತಕ್ಕದ್ದೆಂದು ಮನಸ್ಸಿನಲ್ಲಿಯೇ ನಿಶ್ಚಯಿಸಿ ಭೀಮಸೇನನನ್ನು ಕುರಿತು—ಎಲೈ ಮಹಾಬಾಹೋ ಭರತವಂಶಜಾ ಭೀಮಾ, ನೀನು ಹೇಳುವದೆಲ್ಲ ನಿಜವು; ಆದರೆ ನಾನು ಹೇಳುವ ಈ ಎರಡನೆಯ ಮಾತನ್ನೂ ಲಕ್ಷಗೊಟ್ಟು ಕೇಳು. ಪಾಪದಾಯಕಕರ್ಮಗಳನ್ನೂ ಸಾಹಸದಿಂದ ಮಾಡಲು ದುಮುಕಿದರೆ ಅವು ಮುಂದೆ ದುಃಖಕ್ಕೆ ಕಾರಣವಾಗುವವು. ಉತ್ಕೃಷ್ಟಪ್ರಕಾರದ ಆಲೋಚನೆಯೂ, ಒಳ್ಳೆಯಪರಾಕ್ರಮವೂ, ಉತ್ತಮ ಪುಣ್ಯವೂ, ಅತಿಶಯ ವಿಚಾರವೂ ಇದ್ದರೆಯೇ ಯಾವತ್ತು ಸಂಗತಿಗಳು ಸಿದ್ಧಿಸುತ್ತಿದ್ದರೂ, ದೈವಾನುಕೂಲವೊಂದು ಇಲ್ಲದಿದ್ದರೆ ಎಲ್ಲ ವ್ಯರ್ಥವಾಗುವದು! ಇನ್ನು ನೀನು ಸಾಮರ್ಥ್ಯದ ಹೆಮ್ಮೆಯಿಂದ ಸೆಟೆದು ಹೋಗಿರುವದರಿಂದ ಕೇವಲ ಚಾಪಲ್ಯದಿಂದ ಕಾರ್ಯವನ್ನು ಆರಂಭಿಸಬೇಕೆನ್ನುತ್ತೀ; ಆದರೆ ನನ್ನ ಮಾತನ್ನು ಕೇಳಿಕೊಳ್ಳು. ಭೂರಿಶ್ರವ, ಶಲ್ಯ, ವೀರ್ಯವಂತನಾದ ಜರಾಸಂಧ, ಭೀಷ್ಮ, ದ್ರೋಣ, ಕರ್ಣ, ಶೌರ್ಯ

ಸಂಪನ್ನನಾದ ದ್ರೋಣಪುತ್ರ ಅಶ್ವತ್ಥಾಮ, ದುರ್ಜಯರಾದ ದುರ್ಯೋಧನಪ್ರಭೃತಿ ಧೃತರಾಷ್ಟ್ರ ಪುತ್ರರು ಇವರೆಲ್ಲರೂ ಅಸ್ತ್ರವಿದ್ಯೆಯಲ್ಲಿ ಚತುರರಾಗಿದ್ದು, ಶತ್ರುಗಳನ್ನು ಸಂಹರಿಸಲು ಉದ್ಯುಕ್ತರಾಗಿರುವರು; ಅದರಂತೆ ನಮ್ಮಿಂದ ತಾಪಹೊಂದಿದ ಮಾಂಡಲಿಕ ಹಾಗು ಪೃಥ್ವೀಪತಿರಾಜರೂ ಕೌರವರನ್ನು ಆಶ್ರಯಿಸಿದ್ದು, ಈಗ ಆ ಕೌರವರಮೇಲೆ ಆ ಮಾಂಡಲಿಕಾದಿ ರಾಜರ ಪ್ರೇಮವೂ ಉಂಟಾಗಿರುತ್ತದೆ. ಅವರು ಸಪರಿವಾರ ತಮ್ಮ ಸೈನ್ಯದೊಡನೆ ಕೌರವರಿಗೆ ಸಹಾಯಮಾಡತಕ್ಕವರು; ಯಾಕಂದರೆ ದುರ್ಯೋಧನನು ಅವರಿಗೆ ಪ್ರಾಪ್ತ್ಯಂದಿಶವನ್ನು ಕೊಡಲು ನಿಶ್ಚಯಿಸಿದ್ದು, ಹಲವು ಬಗೆಗಳಿಂದ ಅವರನ್ನು ಸನ್ಮಾನಿಸುತ್ತಿರುವನು; ಅಂದಬಳಿಕ ಅವರು ಸಂಗ್ರಾಮದಲ್ಲಿ ದುರ್ಯೋಧನನ ಸಲುವಾಗಿ ಪ್ರಾಣವನ್ನು ಕೊಡಲು ಹಿಂದೆಮುಂದೆ ನೋಡಲಿಕ್ಕಿಲ್ಲೆಂದು ನನಗೆ ಪೂರಾ ಗೊತ್ತಿರುವದು. ಎಲೈ ಮಹಾಬಾಹೋ, ಒಂದು ಬಗೆಯಿಂದ ದ್ರೋಣ, ಭೀಷ್ಮ, ಮಹಾತ್ಮನಾದ ಕೃಪ ಇವರ ನಡತೆಯು ನಮ್ಮೊಡನೆ ಹಾಗು ದುರ್ಯೋಧನಾದಿಗಳೊಡನೆ ಒಂದೇಸವನೆ ಇದ್ದರೂ, ಅವರು ದುರ್ಯೋಧನನ ಉಪ್ಪು ಉಂಡವರಾದದ್ದರಿಂದ ಅವನ ಋಣತೀರಿಸಲು ಅವರು ದುರ್ಯೋಧನನ ಸಲುವಾಗಿ ದೇಹತ್ಯಾಗ ಮಾಡಲಿಕ್ಕೂ ಹಿಂದೆ ಮುಂದೆ ನೋಡಲಿಕ್ಕಿಲ್ಲ. ಇವರೆಲ್ಲರಿಗೂ ದಿವ್ಯಾಸ್ತ್ರಗಳ ಜ್ಞಾನವು ಉತ್ತಮ ರೀತಿಯಿಂದ ಇರುತ್ತದೆ; ಎಲ್ಲರೂ ಧರ್ಮನಿಷ್ಠರಿದ್ದು, ಇಂದ್ರಾದಿ ದೇವತೆಗಳಿಗೂ ಅಜಿಂಕ್ಯರಾಗಿರುವರೆಂದು ನನಗೆ ತೋರುತ್ತದೆ. ಅವರಲ್ಲಿ ಕರ್ಣನಂತು ಅಸಹಿಷ್ಣುವೂ, ಯಾವಾಗಲೂ ಕ್ಷೋಭಿಸಿದವನೂ, ಯಾವತ್ತು ಪ್ರಕಾರದ ಅಸ್ತ್ರಗಳನ್ನು ಅರಿತವನೂ, ಅಭೇದ್ಯ ಕವಚಗಳಿಂದ ಆಚ್ಛಾದಿಸಲ್ಪಟ್ಟವನೂ ಆಗಿರುವನು. ಅವನನ್ನು ಸೋಲಿಸುವದು ಎಂದೂ ಶಕ್ಯವಲ್ಲವು. ಸಾರಾಂಶ ಈ ಎಲ್ಲ ನರಶ್ರೇಷ್ಠರನ್ನು ಸಂಗರದಲ್ಲಿ ಸೋಲಿಸಿದ ಹೊರತು, ಸಹಾಯಶೂನ್ಯನಾದ ದುರ್ಯೋಧನನನ್ನು ವಧಿಸಲು ನಿನಗೆ ಶಕ್ಯವಲ್ಲವು. ಭೀಮಾ, ಸೂತಪುತ್ರನಾದ ಕರ್ಣನ ಕೈಚಮತವು ಯಾವತ್ತು ಧನುರ್ಧರ ವೀರರನ್ನು ಮೀರಿರುವದೆಂಬ ಮಾತು ನನ್ನ ಅಂತಃಕರಣದಲ್ಲಿ ಯಾವಾಗಲೂ ಬಾಧಿಸುತ್ತಿರುವದರಿಂದ ನನಗೆ ನಿದ್ದೆಯೂ ಬರುವದಿಲ್ಲ.

ವ್ಯಾಸರ ದರ್ಶನವೂ, ಪ್ರತಿಸ್ಮೃತಿವಿದ್ಯೆಯ ಪ್ರಾಪ್ತಿಯೂ:— ಧರ್ಮರಾಜನ ಈ ಮಾತುಗಳನ್ನು ಕೇಳಿ ಅಸಹಿಷ್ಣುವಾದ ಭೀಮನ ಅಂತಃಕರಣವು ಖಿನ್ನವಾಯಿತು. ಆತನು ತ್ರಸ್ತನಾಗಿಹೋದದ್ದರಿಂದ ಏನೂ ಮಾತಾಡಲಿಲ್ಲವು. ಈ ಮೇರೆಗೆ ಆ ಇಬ್ಬರು ಪಾಂಡುಪುತ್ರರ ಸಂಭಾಷಣವು ನಡೆದಿರುವಾಗ ಮಹಾ ಯೋಗನಿಷ್ಠರಾದ ಸತ್ಯವತೀಪುತ್ರ ವ್ಯಾಸಮುನಿಗಳು ಅಲ್ಲಿಗೆ ಬಂದು ಪಾಂಡವರಿಂದ ಪೂಜೆಗೊಂಡ ಬಳಿಕ ಧರ್ಮರಾಜನನ್ನು ಕುರಿತು—ಎಲೈ ಮಹಾಬಾಹೋ ನರಶ್ರೇಷ್ಠಾ, ನಿನ್ನ ಮನಸ್ಸಿನಲ್ಲೇನಿರುತ್ತದೆಂಬದನ್ನು ನನ್ನ ಬುದ್ಧಿಯಿಂದ ಗೊತ್ತುಹಿಡಿದು ಇಲ್ಲಿಗೆ ನಾನು ತ್ವರೆಯಿಂದ ಬಂದಿರುತ್ತೇನೆ. ಭರತವಂಶಜಾ, ಭೀಷ್ಮ, ದ್ರೋಣ, ಕೃಪ, ಕರ್ಣ, ಅಶ್ವತ್ಥಾಮ, ರಾಜಪುತ್ರನಾದ ದುರ್ಯೋಧನ, ದುಶ್ಯಾಸನ ಇವರ ವಿಷಯದ ನಿನ್ನ ಮನಸ್ಸಿನೊಳಗಿನ ಅಂಜಿಕೆಯನ್ನು

ಶಾಸ್ತ್ರೋಕ್ತಕರ್ಮಗಳ ಯೋಗದಿಂದ ನಾನು ನಾಶಮಾಡುವೆನು; ಆದ್ದರಿಂದ ನಾನು ಹೇಳುವದನ್ನು ಕೇಳಿ ಧೈರ್ಯದಿಂದ ಅದರಂತೆ ಕರ್ಮಮಾಡು, ಎಂದು ಹೇಳಿ, ಭಾಷಣಪಟುವಾದ ವೇದವ್ಯಾಸಮುನಿಯು ಯುಧಿಷ್ಠಿರನನ್ನು ಏಕಾಂತದಲ್ಲಿ ಕರೆದೊಯ್ದು ಯುಕ್ತಿಯುಕ್ತ ಭಾಷಣದಿಂದ ಆತನನ್ನು ಕುರಿತು—ಭರತಕುಲಶ್ರೇಷ್ಠಾ, ನಿನ್ನ ಕಲ್ಯಾಣದ ಉತ್ಕೃಷ್ಟ ಕಾಲವು ಒದಗಿರುವದು; ಯಾಕಂದರೆ ಧನುರ್ಧರನಾದ ಅರ್ಜುನನು ಸಂಗ್ರಾಮದಲ್ಲಿ ಶತ್ರುಗಳನ್ನು ಸಂಹರಿಸತಕ್ಕವನಿರುವನು. ಅಂಥ ಸಾಮರ್ಥ್ಯವು ಆತನಿಗೆ ಬರುವದಕ್ಕಾಗಿ ಮೂರ್ತಿಮಂತ ಸಿದ್ಧಿಯೇ ಆಗಿರುವ ಪ್ರತಿಸ್ಮೃತಿನಾಮಕವಾದ ವಿದ್ಯೆಯನ್ನು ನಿನಗೆ ಉಪದೇಶಿಸುವೆನು, ಗ್ರಹಣಮಾಡು. ನೀನು ನನಗೆ ಶರಣಾಗತನಾಗಿರುವದರಿಂದ ಆ ವಿದ್ಯೆಯು ಪ್ರಾಪ್ತಿಯು ನಿನಗೆ ಆದಕೂಡಲೆ, ಅರ್ಜುನನಿಗೆ ಅಪರ ಸಿದ್ಧಿಯು ಉಂಟಾಗುವದು. ಎಲೈ ಪಂಡುಪುತ್ರನೇ, ಈ ವಿದ್ಯೆಯು ಪ್ರಾಪ್ತವಾದಬಳಿಕ ಅರ್ಜುನನನ್ನು ಇಂದ್ರ, ರುದ್ರ, ವರುಣ, ಕುಬೇರ, ಯಮ ಇವರ ಬಳಿಗೆ ಕಳಿಸು. ತಪಶ್ಚರ್ಯ ಹಾಗು ಪರಾಕ್ರಮಗಳ ಯೋಗದಿಂದ ಆತನಿಗೆ ದೇವತೆಗಳ ದರ್ಶನವಾಗುವದು ಶಕ್ಯವಾಗಿರುವದು. ಈ ಅರ್ಜುನನು ಶ್ರೀ ನಾರಾಯಣನ ಸಾಹಾಯುವುಳ್ಳಂಥ, ಹಾಗು ಅನಾದಿ, ಅನಂತ, ನಿತ್ಯ, ಮಹಾ ತೇಜಸ್ವಿಯಾದ ಋಷಿಯಾಗಿರುವನಲ್ಲದೆ, ಪ್ರತ್ಯಕ್ಷ ಪರಬ್ರಹ್ಮರೂಪಿಯೂ ಆಗಿರುವದರಿಂದ ಅಜಿಂಕ್ಯನಾಗಿರುವನು. ಅದರಲ್ಲಿ ಇಂದ್ರ, ರುದ್ರ, ಯಾವತ್ತು ಲೋಕಪಾಲರು ಇವರಿಂದ ಅಸ್ತ್ರಗಳನ್ನು ಸಂಪಾದಿಸಿದ ಬಳಿಕಂತು ಈ ಮಹಾಬಾಹುವು ಸಂಗ್ರಾಮರೂಪವಾದ ಮಹಾಕಾರ್ಯವನ್ನು ಸಹಜವಾಗಿ ಮಾಡುವನು. ಎಲೈ ಕುಂತೀಪುತ್ರಾ ರಾಜಾ ಯುಧಿಷ್ಠಿರಾ, ಇನ್ನುಮೇಲೆ ಈ ವನವನ್ನುಬಿಟ್ಟು ವಾಸಕ್ಕಾಗಿ ಎರಡನೆಯ ವನವನ್ನು ನೋಡು; ಯಾಕಂದರೆ ಒಂದೇ ಸ್ಥಳದಲ್ಲಿ ಬಹುಕಾಲ ಇರುವದರಿಂದ ಆನಂದದಾಯಕವಾಗುವದಿಲ್ಲ.

**ಅರ್ಜುನನಿಗೆ ವಿದ್ಯೋಪದೇಶವು:**—ಈ ಮೇರೆಗೆ ಭಾಷಣಮಾಡಿದ ಬಳಿಕ ಲೋಕವ್ಯವಹಾರದ ತತ್ವಗಳನ್ನು ತಿಳಿಯುವ ಯೋಗನಿಷ್ಠರೂ, ಜ್ಞಾನಸಂಪನ್ನರೂ, ಆದ ಸತ್ಯವತೀ ಪುತ್ರ ಭಗವಾನ್ ವೇದವ್ಯಾಸರು, ಪವಿತ್ರನೂ, ಶರಣಾಗತನೂ ಆದ ಧರ್ಮರಾಜನಿಗೆ ಅತ್ಯಂತ ಉತ್ಕೃಷ್ಟವಾದ ಆ ವಿದ್ಯೆಯನ್ನು ಉಪದೇಶಿಸಿ ಆತನಿಂದ ನಿರೂಪಿತರಾಗಿ ಅಲ್ಲಿಯೇ ಗುಪ್ತರಾದರು. ಬುದ್ಧಿವಂತನಾದ ಧರ್ಮಾತ್ಮಾ ಯುಧಿಷ್ಠಿರನಾದರೂ ಅಂತಃಕರಣದ ನಿಗ್ರಹಮಾಡಿ ಹೊತ್ತು ಹೊತ್ತಿಗೆ ನಿರಂತರ ಅಭ್ಯಾಸಮಾಡಿ ಆ ವಿದ್ಯೆಯನ್ನು ತನ್ನ ಅಂತಃಕರಣದಲ್ಲಿ ಸ್ಥಿರಗೊಳಿಸಿಕೊಂಡನು. ವ್ಯಾಸರ ಭಾಷಣದಿಂದ ಆತನಿಗೆ ಆನಂದವಾಯಿತು. ಮುಂದೆ ಆತನು ದ್ವೈತವನದಿಂದ ಹೊರಟು ಸರಸ್ವತೀತೀರದೊಳಗಿನ ಕಾಮ್ಯಕವೆಂಬ ಹೆಸರಿನ ಅರಣ್ಯಕ್ಕೆ ಪುನಃ ಹೋದನು. ಆಗ ದೇವರ್ಷಿಗಳು ದೇವೇಂದ್ರನನ್ನು ಹಿಂಬಾಲಿಸಿಹೋಗುವಂತೆ ತಪೋನಿಷ್ಠರೂ, ವೇದವೇದಾಂಗಗಳಲ್ಲಿ ಚತುರರೂ ಆದ ಬ್ರಾಹ್ಮಣರು ಆತನನ್ನು ಹಿಂಬಾಲಿಸಿಹೋದರು. ಮುಂದೆ ಕೆಲಕಾಲವು ಕ್ರಮಿಸಿದಮೇಲೆ ವ್ಯಾಸಮುನಿಯ ಅಪ್ಪಣೆಯಂತೆ ಸುಪ್ರಸಿದ್ಧ ಜ್ಞಾನಿ

ಯೂದ ಅರ್ಜುನನನ್ನು ಕುರಿತು ಏಕಾಂತದಲ್ಲಿ ಧರ್ಮರಾಜನು ಮೈದಡವಿ ವಾತ್ಸಲ್ಯದಿಂದ-ಎಲೈ, ಭರತವಂಶಜಾ, ಭೀಷ್ಮ, ದ್ರೋಣ, ಕೃಪ, ಕರ್ಣ, ಅಶ್ವತ್ಥಾಮ ಇವರಲ್ಲಿ ಈವೊತ್ತಿಗೆ ನಾಲ್ಕೂಪಾದಗಳಿಂದ ಯುಕ್ತವಾದ ಸಂಪೂರ್ಣ ಧನುರ್ವೇದವು ನಿಶ್ಚಲವಾಗಿ ವಾಸಿಸುತ್ತಿರುವದು. ಅವರಿಗೆ ಯಾವತ್ತು ಅಸ್ತ್ರದೇವತೆಗಳು, ಬ್ರಾಹ್ಮಣ ಹಾಗು ಮನುಷ್ಯಪ್ರಯೋಗಗಳು, ಅವುಗಳ ವಿಷಯದ ಪ್ರಯತ್ನ ಹಾಗು ಅವುಗಳಮೇಲಿನ ಉಪಾಯಗಳು ಇವುಗಳ ಜ್ಞಾನವು ಸಂಪೂರ್ಣವಾಗಿ ಇರುತ್ತದೆ; ಮತ್ತು ಧೃತರಾಷ್ಟ್ರ ಪುತ್ರನು ಅವರನ್ನು ಸರ್ವಥೈವ ಸಮಾಧಾನಪಡಿಸಿದ್ದು, ತನ್ನ ಪ್ರಾಪ್ತಿಯಲ್ಲಿ ಅವರನ್ನು ಪಾಲುಗಾರರಾಗಿ ಮಾಡಿರುವನು. ಅದರಿಂದ ಅವರು ಸಂತುಷ್ಟರಾಗಿದ್ದು, ದುರ್ಯೋಧನನಾದರೂ ಹಿರಿಯರ ಸಂಗಡ ನಡೆಮಕೊಳ್ಳುವಂತೆ ಅವರಸಂಗಡ ನಡೆದುಕೊಳ್ಳುವನು. ಸಾರಾಂಶ, ಈವೊತ್ತಿಗೆ ಗ್ರಾಮಗಳು, ನಗರಗಳು, ಸಾಗರಗಳು, ಅರಣ್ಯಗಳು, ಖನಿಗಳು ಇವುಗಳೊಡನೆ ಈ ಎಲ್ಲ ಪೃಥ್ವಿಯು ದುರ್ಯೋಧನನ ಅಧೀನದಲ್ಲಿಯೇ ಇರುವದು; ಆದ್ದರಿಂದ ಆ ಪೃಥ್ವಿಯು ಸ್ವಾಭಾವಿಕವಾಗಿ ನಮಗೆ ದೊರೆಯುವದು ಅಶಕ್ಯವಾಗಿರುವದು. ನಮಗೆಂದರೆ ನೀನೊಬ್ಬನು ಪ್ರಿಯನಾಗಿರುತ್ತೀ; ನಮ್ಮ ಸರ್ವಭಾರವು ನಿನ್ನಮೇಲೆಯೇ ಇರುವದು; ಆದ್ದರಿಂದ ಎಲೈ ಶತ್ರುನಾಶಕಾ, ಇದಕ್ಕಾಗಿ ಏನಾದರೂ ಪ್ರಯತ್ನಮಾಡುವಕಾಲವು ಒದಗಿರುತ್ತದೆಂದು ನನ್ನ ಬುದ್ಧಿಗೆ ತೋರುತ್ತದೆ. ಅಪ್ಪಾ ಅರ್ಜುನಾ, ನಾನು ವ್ಯಾಸಮುನಿಗಳಿಂದ ಒಂದು ಉಪನಿಷತ್ತನ್ನು ಸಂಪಾದಿಸಿರುತ್ತೇನೆ, ಅದನ್ನು ಪ್ರಯೋಗಿಸುವದರಿಂದ ಯಾವತ್ತು ಜಗತ್ತಿನ ಜ್ಞಾನವು ಉತ್ಕೃಷ್ಟರೀತಿಯಿಂದ ಆಗುವದು; ಆದ್ದರಿಂದ ಅರ್ಜುನಾ, ಆ ಉಪನಿಷದ್ರೂಪವಾದ ವೇದವನ್ನು ಕಲಿತು ಅತ್ಯಂತವಾದ ಏಕಾಗ್ರಾಂತಃಕರಣದಿಂದ ಯೋಗ್ಯಕಾಲದಲ್ಲಿ ಅದರ ಪ್ರಯೋಗಮಾಡಿ, ದೇವತೆಗಳ ಅನುಗ್ರಹವಾಗುವ ಹಾದಿಯನ್ನು ನೋಡುತ್ತ ಕುಳಿತುಕೋ. ಭರತಕುಲಶ್ರೇಷ್ಠಾ, ಅಂತಃಕರಣವನ್ನು ತಪಶ್ಚರ್ಯದಲ್ಲಿ ತೊಡಗಿಸು, ಸದಾಚರಣನಿಷ್ಠನಾಗು; ಹಾಗು ಧನುಷ್ಯ-ಕವಚ-ಖಡ್ಗಗಳನ್ನು ತಕ್ಕೊಂಡು ಮುನಿವೃತ್ತಿಯಿಂದ ಇರು; ಯಾರಿಗೂ ಹಾದಿಯನ್ನು ಬಿಡದೆ ಉತ್ತರದಿಕ್ಕಿಗೆ ಹೋಗು. ಅಲ್ಲಿಗೆ ಹೋದಬಳಿಕ ನೀನು ಇಂದ್ರನಿಗೆ ಶರಣುಹೋಗು. ಅಂದರೆ ಆತನು ನಿನಗೆ ಅಸ್ತ್ರಗಳನ್ನು ಕೊಡುವನು; ಯಾಕಂದರೆ, ಅರ್ಜುನಾ, ವೃತ್ರಾಸುರನಿಂದ ಭೀತರಾದ ದೇವತೆಗಳು, ಆ ಕಾಲಕ್ಕೆ ತಮ್ಮ ಅಸ್ತ್ರರೂಪವಾದ ಸಾಮರ್ಥ್ಯವನ್ನು ಇಂದ್ರನಿಗೆ ಅರ್ಪಿಸಿದರು; ಆದ್ದರಿಂದ ಇಂದ್ರನ ಬಳಿಯಲ್ಲಿ ಯಾವತ್ತು ಪ್ರಕಾರದ ಅಸ್ತ್ರಗಳು ಇರುವವು. ಹೀಗೆ ಒತ್ತಟ್ಟಿಗೆ ಇರುವ ಅಸ್ತ್ರಗಳೆಲ್ಲ ನಿನಗೆ ಇಂದ್ರನಿಂದ ದೊರೆಯುವವು; ಆದ್ದರಿಂದ ಇಂದು ನೀನು ದೀಕ್ಷಿತನಾಗಿ ಇಂದ್ರನ ದರ್ಶನಮಾಡಿಕೊಳ್ಳುವದಕ್ಕಾಗಿ ಹೊರಡು.

ಅರ್ಜುನನಿಗೆ ದ್ರೌಪದಿಯ ನಿರೂಪ:—ಈ ಮೇರೆಗೆ ಹೇಳಿ ಧರ್ಮರಾಜನು ವಾಣಿ, ದೇಹ, ಅಂತಃಕರಣ ಇವುಗಳ ನಿಗ್ರಹಮಾಡಿದ್ದ, ಹಾಗು ಯಥಾವಿಧಿ ದೀಕ್ಷೆಯನ್ನು ಹೊಂದಿದ್ದ ಅರ್ಜುನನಿಗೆ ಆ ಉಪನಿಷತ್ತನ್ನು ಕಲಿಸಿದನು; ಆ ಮೇಲೆ

ೞ ಜ್ಯೇಷ್ಠಬಂಧುವು ತನ್ನ ಪ್ರಿಯಬಂಧುವಿಗೆ ಪ್ರಯಾಣಕ್ಕಾಗಿ ಒಪ್ಪಿಗೆಯಿತ್ತನು. ಹೀಗೆ ಅಣ್ಣನಾದ ಧರ್ಮನಿಂದ ಆಜ್ಞಾಪಿತನಾದ ಮಹಾಬಾಹು ಅರ್ಜುನನು ಹೋಮ ಮಾಡಿ ಅನೇಕ ನಿಷ್ಕಗಳನ್ನು ದಕ್ಷಿಣೆ ಕೊಟ್ಟು ಬ್ರಾಹ್ಮಣರಿಂದ ಸ್ವಸ್ತಿವಾಚನವನ್ನು ಮಾಡಿಸಿ, ಗಾಂಡೀವಧನುಸ್ಸನ್ನೂ, ಅಕ್ಷಯ್ಯವಾದ ಎರಡು ವಿಶಾಲ ಬತ್ತಲಿಕೆಗಳನ್ನೂ ತಕ್ಕೊಂಡು ಕವಚವನ್ನು ತೊಟ್ಟು, ಹಸ್ತತಲತ್ರಾಣ, ಗೋಧಾ, ಅಂಗುಲೀತ್ರಾಣ ಇವುಗಳನ್ನು ಕಟ್ಟಿ, ಧೃತರಾಷ್ಟ್ರಪುತ್ರರ ವಧದ ಉದ್ದೇಶದಿಂದ ತಪಸ್ಸನ್ನು ಮಾಡುವದಕ್ಕಾಗಿ ಹೊರಟನು. ಹೊರಡುವ ಮೊದಲು ಆತನು ಒಮ್ಮೆ ಆಕಾಶದ ಕಡೆಗೆ ನೋಡಿ ಉಸುರ್ಗಳೆದನು. ಆಗ ಕೈಯಲ್ಲಿ ಧನುಸ್ಸನ್ನು ಹಿಡಿದ ಅರ್ಜುನನನ್ನು ನೋಡಿ ಬ್ರಾಹ್ಮಣರೂ, ಸಿದ್ಧರೂ, ಗುಪ್ತವಾಗಿರುವ ಭೂತಗಳೂ ಆತನನ್ನು ಕುರಿತು—"ಹೇ ಕುಂತೀಪುತ್ರಾ, ನಿನ್ನ ಅಂತಃಕರಣದಲ್ಲಿರುವ ಇಚ್ಛೆಗಳೆಲ್ಲ ಬೇಗನೆ ಸಿದ್ಧಿಸುವವು" ಎಂದು ವಿಜಯಾಶೀರ್ವಾದವಿತ್ತರು. ಆಗ ಭವ್ಯ ಶರೀರದ ಅರ್ಜುನನನ್ನು ಕುರಿತು ದ್ರೌಪದಿಯು ಎಲ್ಲರ ಅಂತಃಕರಣಗಳು ಆಕರ್ಷಿತವಾಗುವಂತೆ ಭಾಷಣ ಮಾಡಿದಳು, ಆಕೆಯು ಪಾರ್ಥನಿಗೆ—ಎಲೈ ಮಹಾ ಬಾಹೋ ಕುಂತೀಪುತ್ರಾ ಧನಂಜಯಾ, ನಿನ್ನ ಜನ್ಮವಾದ ಕೂಡಲೆ ನಿನಗೆ ಏನೇನಾಗಬೇಕೆಂದು ಕುಂತಿಯು ಇಚ್ಛಿಸಿದ್ದಳೋ ಆ ಇಚ್ಛೆಗಳೂ, ಈಗ ನೀನು ಸ್ವತಃ ಇಚ್ಛಿಸಿದ ಇಚ್ಛೆಗಳೂ ನಿನಗೆ ಈಗ ಪ್ರಾಪ್ತವಾಗಲಿ. ನಿಜವಾಗಿಯೆಂದರೆ ನಮ್ಮ ಕ್ಷತ್ರಿಯ ಕುಲದಲ್ಲಿ ಯಾರೂ ಹುಟ್ಟದಿರುವದೇ ಒಳ್ಳೆಯದು; ಯಾಕಂದರೆ ಶತ್ರುವನ್ನು ಸೋಲಿಸುವದಕ್ಕಾಗಿ ಕ್ಷತ್ರಿಯನು ಅನಂತ ಕಷ್ಟಗಳನ್ನು ಭೋಗಿಸಬೇಕಾಗುವದು. ಯಾವಾಗಲೂ ಭಿಕ್ಷೆಯಿಂದಲೇ ಜೀವನಸಾಗುವ ಬ್ರಾಹ್ಮಣರು ನಿಜವಾಗಿಯೇ ಭಾಗ್ಯಶಾಲಿಗಳು, ಅಂತೆಯೇ ವಂದ್ಯರಾಗಿರುವರು. ಆ ದುಷ್ಟ ದುರ್ಯೋಧನನು ರಾಜಸಭೆಯಲ್ಲಿ ನನ್ನ ಕಡೆಗೆ ನೋಡಿ ನಗುತ್ತ ನಗುತ್ತ—"ಎಲಾ, ಇದು ಆಕಳು" ಎಂದು ನುಡಿದನು! ಎಲೈ ಪಾರ್ಥಾ, ಇದರಿಂದ ನನಗೆ ಬಹಳ ದುಃಖವಾಗುತ್ತಿರುವದು; ಅದಕ್ಕಿಂತಲೂ ಆ ರಾಜಸಭೆಯಲ್ಲಿ ಆತನು ಅಯೋಗ್ಯವಾದ ಹಲವು ಬಾಷಣ ಮಾಡಿದ್ದಕ್ಕಾಗಿ ಆಗುವ ದುಃಖವು ಬಹು ದೊಡ್ಡದೆಂದು ನನಗೆ ತೋರುತ್ತದೆ; ಇದರಿಂದ ನಿನ್ನ ಗಮನಕ್ಕೆ ಅನುಮತಿಸುವದು ಯೋಗ್ಯವಾಗಿದ್ದರೂ ನಾನು ಹ್ಯಾಗೆ ಅನುಮತಿಸಲಿ? ಎಲೈ ವೀರಾ, ನಿನ್ನ ಯಾವತ್ತು ಬಂಧುಗಳಿಗೂ ನಿನ್ನ ವಿಯೋಗದಿಂದ ನಿದ್ದೆ ಬಾರದಿದ್ದರೂ ನಿನ್ನ ವಿಷಯದ ಮಾತುಗಳನ್ನಾಡುತ್ತ ಅವರು ತಮ್ಮ ಮನಸ್ಸನ್ನು ರಮಿಸಿಕೊಳ್ಳಬಹುದು; ಆದರೆ ಪಾರ್ಥಾ, ನೀನು ಚಿರಕಾಲ ಪ್ರವಾಸದಲ್ಲಿರುವದರಿಂದ ನನ್ನ ಮನಸ್ಸು ಸುಖೋಪಭೋಗದಲ್ಲಿ ತೊಡಗಲಾರದು; ದ್ರವ್ಯದಕಡೆಗೆ ಎಳೆಯಲಾರದು; ಬಹಳವೇನು ಜೀವಿತದ ಹಂಗೂ ಉಳಿಯದೆ ನಾನು ದುಃಖಮಗ್ನವಾಗಿರಬೇಕಾಗುವದು. ಆದರೂ ಎಲೈ ಕುಂತೀಪುತ್ರಾ, ನಮ್ಮೆಲ್ಲರ ಸುಖದುಃಖ, ಜೀವಿತ, ಮರಣ, ರಾಜ್ಯ, ಐಶ್ವರ್ಯ ಇವೆಲ್ಲ ನಿನ್ನನ್ನೇ ಅವಲಂಬಿಸಿರುವದರಿಂದ ನಿನಗೆ ನಾನು ನಿರೂಪಕೊಡುವೆನು; ನಿನ್ನ ಕಲ್ಯಾಣವಾಗಲಿ. ಎಲೈ ನಿಷ್ಪಾಪನೆ, ಬಲಿಷ್ಠರ ವಿರುದ್ಧವಾಗಿರುವ ಈ ನಮ್ಮ ಕಾರ್ಯ

ವನ್ನು ನೀನು ಕೊನೆಗಾಣಿಸು. ಎಲೈ ಮಹಾಬಲಸಂಪನ್ನಾ. ಈ ವಿಜಯವನ್ನು ಸಂಪಾದಿಸುವದಕ್ಕಾಗಿ ನಿನ್ನ ಪ್ರಯಾಣವು ನಿರ್ವಿಘ್ನವಾಗಿಯೂ, ಸತ್ವರವಾಗಿಯೂ ಆಗಲಿ. ಅದಕ್ಕಾಗಿ ನಾನು ಧಾತಾರನಿಗೆ, ವಿಧಾತಾರನಿಗೆ ನಮಸ್ಕರಿಸುವೆನು. ನಿನಗೆ ಕಲ್ಯಾಣವಾಗಲಿ. ಒಳ್ಳೇದು. ಹೋಗಿಬಾ. ನಿನಗೆ ಕ್ಷೇಮವಾಗಲಿ. ಎಲೈ ಧನಂಜಯಾ, ಮಾರ್ಗದಲ್ಲಿ ಹ್ರೀ, ಶ್ರೀ, ಕೀರ್ತಿ, ದ್ಯುತಿ, ಪುಷ್ಟಿ, ಉಮಾ, ಲಕ್ಷ್ಮೀ, ಸರಸ್ವತೀ ಈ ದೇವತೆಗಳು ನಿನ್ನನ್ನು ರಕ್ಷಿಸಲಿ. ಅರ್ಜುನಾ, ನೀನು ಜ್ಯೇಷ್ಠ ಬಂಧುವನ್ನು ಸತ್ಕರಿಸುವದರಿಂದ ಆತನು ಹೇಳಿದ ಕೆಲಸವು ನಿನ್ನಿಂದ ಕೊನೆಗಾಣಲಿ. ಎಲೈ ಭರತ ಕುಲಶ್ರೇಷ್ಠಾ, ನಿನಗೆ ಸುಖಪ್ರಾಪ್ತಿಯಾಗಬೇಕೆಂದು ವಸುಗಳು, ರುದ್ರರು, ಆದಿತ್ಯರು, ಮರುದ್ಗಣಗಳು, ವಿಶ್ವೇದೇವತೆಗಳು, ಸಾಧ್ಯರು ಇವರಿಗೆ, ನಾನು ಶರಣು ಹೋಗುವೆನು. ಎಲೈ ಭರತವಂಶಜಾ, ಅಂತರಿಕ್ಷ, ಪೃಥ್ವೀ, ಸ್ವರ್ಗ ಇವುಗಳಲ್ಲಿ ವಾಸಿಸುವ ಪ್ರಾಣಿಗಳಿಂದ, ಹಾಗು ನಿನ್ನ ಕಾರ್ಯಕ್ಕೆ ಅಡ್ಡ ಬರುವ ಬೇರೆ ಪ್ರಾಣಿಗಳಿಂದ ನಿನ್ನ ಕಲ್ಯಾಣವಾಗಲಿ!

**ಅರ್ಜುನನಿಗೆ ಇಂದ್ರ ದರ್ಶನ:**—ಹೀಗೆ ಆಶೀರ್ವಾದಾತ್ಮಕ ಭಾಷಣ ಮಾಡಿ ದ್ರೌಪದಿಯು ಸುಮ್ಮನಾದಳು. ಆಮೇಲೆ ಬಂಧು ಹಾಗು ಧೌಮ್ಯ ಇವರ ಪ್ರದಕ್ಷಿಣೆ ಮಾಡಿ ಮಹಾಬಾಹುವಾದ ಅರ್ಜುನನು ತನ್ನ ಸುಂದರ ಧನುಷ್ಯವನ್ನು ತಕ್ಕೊಂಡು ಹೊರಟನು. ಧರ್ಮರಾಜನು ಉಪದೇಶಿಸಿರುವ ಐಂದ್ರ ಯೋಗದಿಂದ ಯುಕ್ತವಾಗಿರುವ ಆ ಪರಾಕ್ರಮಿಯಾದ ಬಲಿಷ್ಠ ಅರ್ಜುನನು ಹಾದಿಯ ಹಿಡಿದು ಹೋಗ ಹತ್ತಿದ ಕೂಡಲೆ ಯಾವತ್ತು ಪ್ರಾಣಿಗಳು ಆತನ ಮಾರ್ಗದಿಂದ ದೂರ ಸರಿದು ಹೋದವು. ಅಪ್ಪಾ ವಿವೇಕಶೀಲಾ, ಶತ್ರುಗಳಿಗೆ ತಾಪವನ್ನುಂಟುಮಾಡುವ ಆ ಮಹಾಮತಿಯೋಗನಿಷ್ಠ ಅರ್ಜುನನು ಅಲ್ಲಿಂದ ತಪಸ್ವಿಗಳು ವಾಸಿಸುತ್ತಿರುವ ಪರ್ವತವನ್ನು ಏರಿ ಹೋದನು. ಆಮೇಲೆ ಅಲ್ಲಿಂದ ಆತನು ವಾಯುವೇಗದಿಂದ ನಡೆಯತೊಡಗಿ, ಒಂದೇ ದಿವಸದಲ್ಲಿ ದೇವತೆಗಳ ವಾಸಸ್ಥಾನವಾದ ಪವಿತ್ರ ಹಾಗು ದಿವ್ಯವೆನಿಸುವ ಹಿಮಾಲಯ ಪರ್ವತದ ಮೇಲೆ ಹೋದನು. ಮುಂದೆ ಆಆಲಸ್ಯಶೂನ್ಯ ಅರ್ಜುನನು ಹಿಮಾಲಯ—ಗಂಧಮಾದನ ಪರ್ವತಗಳನ್ನು ದಾಟಿ ಎರಡನೆಯ ದುರ್ಗಮ ಪ್ರದೇಶಗಳನ್ನು ದಾಟಿ ಹೋದನು. ಆ ಮೇಲೆ ಇಂದ್ರಕೀಲನಾಮಕ ಪರ್ವತದಮೇಲೆ ಹೋಗಿ ಅಲ್ಲಿ ಆತನು ನಿಂತುಕೊಂಡನು. ಆಗ "ಇಲ್ಲಿಯೇ ಇರು" ಎಂಬ ವಾಣಿಯು ಆಕಾಶದಿಂದ ಅವನ ಕಿವಿಗೆ ಬಿದ್ದಿತು. ಆಗ ಈ ವಾಣಿಯು ಯಾರಿಂದ ಹೊರಟಿತೆಂದು ಆ ಸವ್ಯಸಾಚಿಯು ನಾಲ್ಕು ಕಡೆಗೆ ನೋಡುತ್ತಿರಲು, ಒಂದು ಗಿಡದ ಬುಡದಲ್ಲಿ ಒಬ್ಬ ತಪಸ್ವಿಯು ಕುಳಿತಿದ್ದನು. ಆತನು ಬ್ರಹ್ಮತೇಜಸ್ಸಿನಿಂದ ದೇದೀಪ್ಯಮಾನನಾದವನೂ, ಪಿಂಗಟವರ್ಣದವನೂ, ಜಟಾಧಾರಿಯೂ, ಕೃಶನೂ ಆಗಿದ್ದನು. ಅರ್ಜುನನು ಅಲ್ಲಿ ನಿಂತಿರುವದನ್ನು ನೋಡಿ ಆ ಮಹಾ ತಪಸ್ವಿಯು ಆತನನ್ನು ಕುರಿತು—"ಅಪ್ಪಾ, ಧನುರ್ಬಾಣಗಳನ್ನು ತಕ್ಕೊಂಡು ಕವಚವನ್ನು ತೊಟ್ಟು, ಹಸ್ತತಲತ್ರಾಣವನ್ನೂ, ಖಡ್ಗವನ್ನೂ ಧರಿಸಿ ಇಲ್ಲಿಗೆ ಬಂದಿರುವ ಕ್ಷತ್ರಿಯಧರ್ಮನಿಷ್ಠನು ನೀನು

ಯೂರಿರುತ್ತೀ? ಇಲ್ಲಿ ಶಸ್ತ್ರಗಳ ಕೆಲಸವೇನು ಇರುವದಿಲ್ಲ; ಯಾಕಂದರೆ ಈ ಪ್ರದೇಶವು ಕ್ರೋಧ, ಆನಂದ, ಇತ್ಯಾದಿ ವಿಕಾರಗಳನ್ನು ಓಡಿಸಿಬಿಟ್ಟಿರುವ ಶಾಂತಿ ಯುಕ್ತ ಬ್ರಹ್ಮನಿಷ್ಠ ತಪಸ್ವಿಗಳ ವಸತಿ ಸ್ಥಾನವಾಗಿರುವದು. ಇಲ್ಲಿ ಧನುಸ್ಸಿನ ಕೆಲಸವಾದರೂ ಏನೂ ಇರುವದಿಲ್ಲ; ಯಾಕಂದರೆ ಈ ಸ್ಥಾನದಲ್ಲಿ ಎಂದೂ ಸಂಗ್ರಾಮವಾಗುವಹಾಗಿಲ್ಲ; ಆದ್ದರಿಂದ ಅಪ್ಪಾ, ಇಟ್ಟು ಬಿಡು ಈ ಧನುಷ್ಯಬಾಣಗಳನ್ನು ಒತ್ತಟ್ಟಿಗೆ! ಎಲೈ ವೀರನೇ, ನೀನು ವೀರ್ಯ ಸಂಪನ್ನನೂ, ತೇಜಸ್ವಿಯೂ ಆಗಿರುವದರಿಂದಲೇ ಪ್ರತ್ಯಕ್ಷ ಮೋಕ್ಷದಂತೆ ಇರುವ ಈ ಸ್ಥಾನಕ್ಕೆ ಪ್ರಾಪ್ತನಾಗಿರುತ್ತೀ. ಎರಡನೆಯ ಯಾವ ಮನುಷ್ಯನಿಗೂ ಹೀಗೆ ಬರಲಿಕ್ಕೆ ಬರಲಾರದು." ಎಂದು ನುಡಿದು ನಕ್ಕಂತೆ ಮಾಡಿ ಮೇಲೆ ಮೇಲೆ ಅದೇ ಮಾತನ್ನು ಹೇಳ ತೊಡಗಿದನು. ಆದರೂ ದೃಢನಿಶ್ಚಯದ ಅರ್ಜುನನ ಉತ್ಸಾಹ ಭಂಗಮಾಡುವದು ಆತನಿಂದಾಗಲಿಲ್ಲ. ಆದರಿಂದ ಆ ತಪಸ್ವಿಯು ಸಂತುಷ್ಟನಾಗಿ ನಕ್ಕಂತೆ ಮಾಡಿ ಅರ್ಜುನನಿಗೆ—"ಎಲೈ ಶತ್ರುನಾಶನಾ, ವರಗಳನ್ನು ಬೇಡಿಕೋ. ನಿನ್ನ ಕಲ್ಯಾಣವಾಗಲಿ. ನಾನು ಇಂದ್ರನಿರುವೆನು" ಎಂದು ಹೇಳಿದಕೂಡಲೆ ಕುರುಕುಲ ಧುರಂಧರನಾದ ಶೂರ ಅರ್ಜುನನು ನಮ್ರನಾಗಿ ಕೈಜೋಡಿಸಿ—"ಭಗವನ್, ತಮ್ಮ ಕಡೆಯಿಂದ ಸಂಪೂರ್ಣ ಅಸ್ತ್ರಗಳನ್ನು ಸಂಪಾದಿಸುವ ಇಚ್ಛೆಯು ನನಗಿರುವದು. ನಾನು ಸಂಪಾದಿಸತಕ್ಕ ಅಭೀಷ್ಟವಸ್ತುವು ಇದೆಯೇ. ಆದ್ದರಿಂದ ತಾವು ನನಗೆ ಇದೇ ವರವನ್ನು ಕೊಡಬೇಕು" ಎಂದು ಕೇಳಲು, ಇಂದ್ರನು ಮನಸ್ಸಿನಲ್ಲಿ ಸಂತುಷ್ಟನಾಗಿ—ಅರ್ಜುನಾ, ನೀನು ಇಲ್ಲಿಗೆ ಬಂದಿರುವದರಿಂದ ಅಸ್ತ್ರಗಳನ್ನು ತಕ್ಕೊಂಡು ಮಾಡುವದೇನು? ನೀನು ಬೇಕಾದ ಲೋಕಗಳನ್ನು ಬೇಡಿಕೋ. ನಿಜವಾಗಿ ನೀನು ಪ್ರತ್ಯಕ್ಷ ಮೋಕ್ಷಸ್ಥಾನಕ್ಕೆ ಬಂದಿರುತ್ತೀ, ಎಂದು ಹೇಳಿದನು. ಆದಕ್ಕೆ ಅರ್ಜುನನು—ಎಲೈ ದೇವಾಧಿಪತಿಯೇ, ಲೋಭಕ್ಕೆ ಹೇತುಭೂತವಾದ ದ್ರವ್ಯ, ಸುಖೋಪಭೋಗ, ಕೇವಲ ಸುಖಸ್ವರೂಪವಾದ ದೇವತ್ವ, ಅಥವಾ ಎಲ್ಲ ದೇವತೆಗಳ ಆಧಿಪತ್ಯ ಇವಾವನ್ನೂ ನಾನು ಇಚ್ಛಿಸುವದಿಲ್ಲ; ಯಾಕಂದರೆ ನನ್ನ ಆ ಬಂಧುಗಳನ್ನು ಅರಣ್ಯದಲ್ಲಿ ಬಿಟ್ಟು, ವೈರದ ಪ್ರತಿಕಾರಮಾಡದಿದ್ದರೆ ಜನರಲ್ಲಿ ನನ್ನ ಅಪಕೀರ್ತಿಯು ಸ್ಥಿರವಾಗಿ ಆಗುವದು, ಎಂದು ನುಡಿಯಲು, ಸರ್ವಲೋಕ ವಂದ್ಯನಾದ ಇಂದ್ರನು ಸಮಾಧಾನ ಪಟ್ಟು ಮಧುರವಾಣಿಯಿಂದ—"ಅಪ್ಪಾ ಅರ್ಜುನಾ, ಎಲ್ಲಿಗೆ ಹೋದರೆ ಮನುಷ್ಯನಿಗೆ ಪುನಃ ಸಂಸಾರದಲ್ಲಿ ಬೀಳಬೇಕಾಗುವದಿಲ್ಲವೋ, ಅಂಥ ಸ್ಥಾನದಲ್ಲಿ ವಾಸಿಸುವ ಶ್ರೀ ಶಂಕರನ ಸಾಕ್ಷಾತ್ಕಾರದವಿಷಯದಲ್ಲಿ ನೀನು ಪ್ರಯತ್ನಮಾಡು; ಯಾಕಂದರೆ ಎಲೈ ಕುಂತೀಪುತ್ರಾ, ಆತನ ಸಾಕ್ಷಾತ್ಕಾರವಾದನಂತರ ನಿನ್ನ ಮನೋರಥವು ಪೂರ್ಣವಾಗಿ ನೀನು ಸ್ವರ್ಗದಕಡೆಗೆ ಬರುತ್ತೀ." ಎಂದು ಹೇಳಿ, ಇಂದ್ರನು ಗುಪ್ತನಾದನು. ಬಳಿಕ ಅರ್ಜುನನೂ ಆ ಸ್ಥಳದಲ್ಲಿ ಯೋಗಸಿಷ್ಠನಾಗಿ ನಿಂತುಕೊಂಡನು.

ತಪಶ್ಚರ್ಯಕ್ಕಾಗಿ ಅರ್ಜುನನ ವನಪ್ರವೇಶವು:—ಆ ಅರಣ್ಯದಲ್ಲಿ ನಾನಾಪ್ರಕಾರದ ಪುಷ್ಪಗಳ ವೃಕ್ಷಗಳಿದ್ದವು; ಹಲವು ಪ್ರಕಾರದ ಪಕ್ಷಿಗಳು ವಾಸಿಸುತ್ತಿದ್ದವು; ನಾನಾಪ್ರಕಾರದ ಪಶು ಸಮೂಹದಿಂದ ಅದು ವ್ಯಾಪ್ತವಾಗಿಹೋಗಿತ್ತು;

ಸಿದ್ಧರೂ, ಚಾರಣರೂ ಅಲ್ಲಿ ವಾಸಿಸುತ್ತಿದ್ದರು. ಕುಂತೀ ಪುತ್ರನಾದ ಅರ್ಜುನನು ಮನುಷ್ಯರ ಗಾಳಿಯೂ ಇಲ್ಲದ ಆ ವನದಲ್ಲಿ ಪ್ರವೇಶಿಸಲು, ಆಕಾಶದಲ್ಲಿ ಶಂಖ ದುಂದುಭಿಗಳ ಧ್ವನಿಗಳು ಆಗಹತ್ತಿದವು; ಭೂಮಿಯ ಮೇಲೆ ಪುಷ್ಪವೃಷ್ಟಿಯಾಗತೊಡಗಿತು; ವಿಶಾಲವಾದ ಮೇಘಸಮುದಾಯಗಳು ಆಕಾಶವನ್ನು ವ್ಯಾಪಿಸಿಬಿಟ್ಟವು. ಆ ವನದಲ್ಲಿ ದೊಡ್ಡ ದೊಡ್ಡ ತಿರುಗಣಿ ಮಡುವುಗಳುಳ್ಳ, ಹಾಗು ವೈಡೂರ್ಯ ರತ್ನದಂತೆ ಸ್ವಚ್ಛ ನೀರುಳ್ಳ ನದಿಗಳು ಅರ್ಜುನನ ಕಣ್ಣಿಗೆ ಬಿದ್ದವು. ಆ ನದಿಗಳ ದಂಡೆಯಲ್ಲಿ ಹಂಸ, ಕಾರಂಡವಾದಿ ಪಕ್ಷಿಗಳು ತಮ್ಮ ಶಬ್ದಗಳಿಂದ ಆ ನದಿಗಳ ಪ್ರಶಂಸೆ ಮಾಡುತ್ತಿರುವಂತೆ ತೋರಿತು. ಸಾರಸಪಕ್ಷಿಗಳು ಶಬ್ದ ಮಾಡುತ್ತಿದ್ದವು, ಕೋಗಿಲೆಗಳ ಆಲಾಪವು ನಡೆದಿತ್ತು; ಕ್ರೌಂಚಗಳೂ-ಮಯೂರಗಳೂ ಆ ನದಿಗಳನ್ನು ನಾದಮಯವಾಗಿ ಮಾಡಿಬಿಟ್ಟಿದ್ದವು. ಆ ನದಿಗಳ ದಂಡೆಯಲ್ಲಿ ಸುಂದರ ಅರಣ್ಯಗಳಿದ್ದವು. ಪವಿತ್ರವೂ, ಶೀತಲವೂ, ನಿರ್ಮಲವೂ ಆದ ಜಲದಿಂದ ಯುಕ್ತವಾದ ಆ ಪರ್ವತದಮೇಲಿನ ನದಿಗಳನ್ನು ನೋಡಿ ಅರ್ಜುನನ ಅಂತಃಕರಣವು ಆನಂದಿತವಾಗಿ ಅವನು ಆ ರಮ್ಯವನ ಪ್ರದೇಶದಲ್ಲಿ ರಮಮಾಣನಾಗಿಹೋದನು. ಮುಂದೆ ತಪಶ್ಚರ್ಯಮಾಡತೊಡಗಿದಬಳಿಕ ಉಗ್ರತೇಜಸ್ವಿನ ಆ ಅರ್ಜುನನು ದರ್ಭದವಸ್ತ್ರವನ್ನು ಹೊದ್ದುಕೊಂಡು, ದಂಡ-ಕೃಷ್ಣಾಜಿನಗಳಿಂದ ವಿರಾಜಮಾನನಾಗಿ ಗಿಡಗಳಮೇಲಿಂದ ಭೂಮಿಯಮೇಲೆ ತಾನಾಗಿ ಉದುರಿದ ಒಂದಾನೊಂದು ಎಲೆಯನ್ನು ತಿಂದು ಇರಹತ್ತಿದನು. ಆಮೇಲೆ ಮೂರು ಮೂರು ದಿನಗಳಮೇಲೆ ಒಂದು ಹಣ್ಣು ತಿಂದು ಒಂದು ತಿಂಗಳು ತಪಶ್ಚರ್ಯಮಾಡಿದನು; ಆ ಮೇಲೆ ಆರಾರು ದಿನಗಳಿಗೊಂದು ಹಣ್ಣಿನಂತೆ ಎರಡನೆಯ ತಿಂಗಳು, ಹದಿಹದಿನೈದು ದಿನಗಳಿಗೊಂದು ಹಣ್ಣಿನಂತೆ ಮೂರನೆಯ ತಿಂಗಳು ತಪಶ್ಚರ್ಯಮಾಡಿದನು. ನಾಲ್ಕನೆಯ ತಿಂಗಳು ಆರಂಭವಾದ ಕೂಡಲೆ ಆ ಭರತಕುಲಶ್ರೇಷ್ಠ ಮಹಾಬಾಹು ಪಂಡುಪುತ್ರನು ಕಾಲಅಂಗುಷ್ಠದಿಂದ ನಿರಾಧಾರವಾಗಿ ನಿಂತು ಕೈಗಳನ್ನು ಎತ್ತಿ ವಾಯುಭಕ್ಷಣ ಮಾಡುತ್ತ ತಪಶ್ಚರ್ಯ ಮಾಡಿದನು. ಆ ಮಹಾತ್ಮನು ಯಾವಾಗಲೂ ಸ್ನಾನಮಾಡುತ್ತಿದ್ದದ್ದರಿಂದ ಅವನ ಜಡೆಗಳು ಮಿಂಚಿನಂತೆ ತೇಜಸ್ವಿಗಳೂ, ಕಮಲದಂತೆ ಮೃದುವೂ ಆದವು. ಆ ಮೇಲೆ ಯಾವತ್ತು ಋಷಿಗಳು ಅರ್ಜುನನ ಉಗ್ರತಪಶ್ಚರ್ಯದ ಸುದ್ದಿಯನ್ನು ಹೇಳುವದಕ್ಕಾಗಿ ಶ್ರೀ ಶಂಕರನಬಳಿಗೆ ಹೋದರು. ಅವರು ದೇವಶ್ರೇಷ್ಠನಾದ ಆ ಭಗವಂತನನ್ನು ನಮಸ್ಕರಿಸಿ, ಅರ್ಜುನನ ತಪಶ್ಚರ್ಯವನ್ನು ಕುರಿತು-ಭಗವನ್ ಶಂಭೋ, ಮಹಾತೇಜಸ್ವಿಯಾದ ಅರ್ಜುನನು ಅಪಾರವಾದ ಉಗ್ರತಪಶ್ಚರ್ಯವನ್ನು ಮಾಡುತ್ತ ಹಿಮಾಲಯದ ಪೃಷ್ಠಭಾಗದಲ್ಲಿರುತ್ತಿರುವನು. ಆತನ ತೇಜಸ್ಸು ದುಸ್ಸಹವಾಗಿರುವದು. ಎಲೈ, ದೇವೇಶ್ವರನೇ, ಆತನ ಹೇತುವೇನಿರುವದೆಂಬದು ನಮಗೆ ತಿಳಿಯುವದಿಲ್ಲವು. ಆತನ ತಪಸ್ತೇಜದಿಂದ ನಮ್ಮೆಲ್ಲರಿಗೆ ದಾಹವಾಗುತ್ತಿರುವದು; ಆದ್ದರಿಂದ ಸರ್ವೇಶ್ವರಾ, ಆತನ ಈ ಕೃತ್ಯಕ್ಕೆ ಪ್ರತಿಬಂಧಮಾಡು, ಎಂದು ಹೇಳಲು, ಸುಸಂಸ್ಕೃತವಾದ ಅಂತಃಕರಣಗಳುಳ್ಳ ಆ ಮುನಿಗಳ ಮಾತುಗಳನ್ನು ಕೇಳಿ ಭೂತಾಧಿಪತಿಮಹಾದೇವನು-"ಋಷಿಗಳಿರಾ,

ಅರ್ಜುನನ ಸಂಬಂಧದಿಂದ ನೀವು ಯಾವಪ್ರಕಾರದಿಂದಲೂ ಭಯಪಡವೆ, ಬಂದಂತೆ ಆನಂದದಿಂದ ಬೇಗನೆ ತಿರುಗಿಹೋಗಿರಿ; ಆಲಸ್ಯಮಾಡಬೇಡಿರಿ. ಆತನ ಅಂತಃಕರಣ ದಲ್ಲಿರುವ ಇಚ್ಛೆಯು ನನಗೆ ಪೂರ್ಣವಾಗಿ ಗೊತ್ತಿರುತ್ತದೆ. ಆತನಿಗೆ ಸ್ವರ್ಗದ ಇಚ್ಛೆ ಯಿಲ್ಲ, ಐಶ್ವರ್ಯದ ಇಚ್ಛೆಯಿಲ್ಲ, ಅಥವಾ ಆಯುಷ್ಯದ ಇಚ್ಛೆಯೂ ಇಲ್ಲ. ಆತ ನಿಗೆ ಬೇಕಾಗಿರುವದನ್ನೆಲ್ಲ ನಾನು ಇಂದು ಕೊಡತಕ್ಕವನಿರುತ್ತೇನೆ, ಎಂದು ಹೇಳಿದನು. ಈ ಮೇರೆಗೆ ಸತ್ಯವಾದಿಯಾದ ಶ್ರೀ ಶಂಕರನು ಆಡಿದ ಮಾತುಗಳನ್ನು ಕೇಳಿ ಋಷಿಗಳು ಸಂತೋಷಪಟ್ಟು ತಮ್ಮ ತಮ್ಮ ಆಶ್ರಮಗಳಿಗೆ ಹೊರಟುಹೋದರು.

ಕಿರಾತಾರ್ಜುನರ ಯುದ್ಧ:_ವಿವೇಕಶೀಲಾ, ಹೀಗೆ ಮಹಾತ್ಮರಾದ ತಪಸ್ವಿಗಳು ಹೊರಟುಹೋದ ಬಳಿಕ ಸರ್ವ ಪಾಪನಾಶಕನಾದ ಭಗವಾನ್ ಶಂಕರನು ಸುವರ್ಣ ವೃಕ್ಷ ದಂತೆ ಕಾಂತಿಮಾನವಾದ ಕಿರಾತ ವೇಷವನ್ನು ಧರಿಸಿ, ಶೋಭಾಯಮಾನವಾದ ಧನುಷ್ಯ ವನ್ನೂ, ಸರ್ಪಸದೃಶ ಬಾಣಗಳನ್ನೂ ತಕ್ಕೊಂಡು ಒಳ್ಳೇವೇಗದಿಂದ ಅರ್ಜುನನಿದ್ದಲ್ಲಿಗೆ ಬಂದನು. ಆಗ ಆ ಭಗವಾನ್ ಪರಮೇಶ್ವರನು ಎರಡನೆಯ ಮೇರುವಿನಂತೆ, ಅಥವಾ ಮೂರ್ತಿಮಂತ ಅಗ್ನಿಯಂತೆ ಕಾಣುತ್ತಿದ್ದನು. ಆತನ ಸಂಗಡ ಆತನ ಹಾಗೆ ವೇಷವೂ, ಆಚರಣವೂ ಉಳ್ಳ ದೇವೀ ಪಾರ್ವತಿಯು ಇದ್ದಳು. ಆತನ ಹಿಂದಿನಿಂದ ಅನೇಕ ಪ್ರಕಾರದ ವೇಷಗಳನ್ನು ಧರಿಸಿದ ಆನಂದ ಯುಕ್ತರಾದ ಪ್ರಮಥರು ಸಾಗಿ ಬರುತ್ತಿದ್ದರು; ಮತ್ತು ಸಾವಿರಾರು ಜನ ಸ್ತ್ರೀಯರೂ ಅವರಲ್ಲಿ ಇದ್ದರು. ಹೀಗೆ ಕಿರಾತವೇಷಧಾರಿಯಾದ ಪರಮಾತ್ಮನಿಂದ ಆ ತಪೋವನದ ಪ್ರದೇಶವು ಬಹಳವಾಗಿ ಶೋಭಿಸ ತೊಡಗಿತು. ಆಮೇಲೆ ಒಂದು ಕ್ಷಣದಲ್ಲಿ ಆ ಅರಣ್ಯವೆಲ್ಲ ನಿಶ್ಶಬ್ದವಾಯಿತು; ನೀರಿನ ಪ್ರವಾಹದ ಸಪ್ಪಳಗಳೂ, ಪಕ್ಷಿಗಳ ಧ್ವನಿಗಳೂ ನಿಂತು ಹೋದವು. ಮುಂದೆ ಆ ಕಿರಾತನು ಸರಳ ಮಾರ್ಗದಿಂದ ಅರ್ಜುನನ ಸಮೀಪಕ್ಕೆ ಬರುತ್ತಿರಲು, ಅರ್ಜುನನು, ತನ್ನನ್ನು ಸಂಹರಿಸುವದಕ್ಕಾಗಿ ಹಂದಿಯರೂಪ ತಾಳಿದ ಮೂಕನೆಂಬ ಹೆಸರಿನ ದೈತ್ಯನನ್ನು ಸಂಹರಿಸುವದಕ್ಕಾಗಿ ತನ್ನ ಗಾಂಡೀವ ಧನುಸ್ಸಿನ ಟಣತ್ಕಾರಮಾಡಿ ಭುಜಂಗಸದೃಶವಾದ ಬಾಣವನ್ನು ತಕ್ಕೊಂಡು ಆ ವರಾಹನನ್ನ ಕುರಿತು "ಈ ಸ್ಥಾನದಲ್ಲಿ ಪ್ರಾಪ್ತವಾಗಿರುವ ನಿರಪರಾಧಿಯಾದ ನನ್ನನ್ನು ಕೊಲ್ಲಲಿಚ್ಛಿಸುವ ನಿನ್ನನ್ನು ಯಮಸದನಕ್ಕೆ ಅಟ್ಟದೆ ಇರುವದಿಲ್ಲ" ಎಂದು ನುಡಿದು, ಅದರ ಮೇಲೆ ಬಾಣವನ್ನು ಬಿಡುತ್ತಿದ್ದನು- ಅಷ್ಟರಲ್ಲಿ ಶಬರರೂಪಿಯಾದ ಪರಮೇಶ್ವರನು ಆ ಅರ್ಜುನನನ್ನು ತಡೆದು—"ಇಂದ್ರನೀಲಮಣಿಯಂತೆ ಕಾಂತಿಯುಳ್ಳ ಈ ವರಾಹಕ್ಕೆ ನಾನು ಮೊದಲು ಗುರಿಯಿಟ್ಟದ್ದೇನೆ; ಆದ್ದರಿಂದ ನೀನು ಇದರಮೇಲೆ ಬಾಣಬಿಡಬೇಡ" ಎಂದು ಹೇಳಿದನು; ಆದರೆ ಅರ್ಜುನನು ಆತನ ಮಾತನ್ನು ಎಷ್ಟು ಮಾತ್ರವೂ ಲೆಕ್ಕಿಸದೆ ವರಾಹದ ಮೇಲೆ ಬಾಣವನ್ನು ಬಿಟ್ಟನು- ಇತ್ತ ಮಹಾ ತೇಜಸ್ವಿಯಾದ ಕಿರಾತನೂ ವಜ್ರದಂತೆ ಬಲಿಷ್ಠವಾದ ಅಗ್ನಿಜ್ವಾಲೆಯಂಥ ಬಾಣವನ್ನು ಅದೇಕಾಲಕ್ಕೆ ಆ ಹಂದಿಯ ಮೇಲೆ ಬಿಟ್ಟನು. ಆಗ ಅವರಿಬ್ಬರೂ ಬಿಟ್ಟ ಬಾಣಗಳು ಪರ್ವತದಂತೆ ವಿಶಾಲ ದೇಹವುಳ್ಳ ಮೂಕದೈತ್ಯನ ಮೈಯಲ್ಲಿ ನಟ್ಟು, ವಿದ್ಯುತ್-ವಜ್ರಗಳು ಪರ್ವತಗಳಮೇಲೆ ಬಿದ್ದಕೂಡಲೆ

ಕಡಕಡ ಶಬ್ದವಾಗುವಂತೆ, ಅವೆರಡು ಬಾಣಗಳು ದೈತ್ಯನ ಶರೀರದ ಮೇಲೆ ಬಿದ್ದಕೂಡಲೆ ಪ್ರಚಂಡ ಶಬ್ದವಾಯಿತು. ಆಮೇಲೆ ಪ್ರದೀಪ್ತಮುಖಗಳುಳ್ಳ ಸರ್ಪದಂಥ ಹಲವು ಬಾಣಗಳು ಆ ದೈತ್ಯನ ದೇಹದಲ್ಲಿ ಸೇರಿದ್ದರಿಂದ ಆ ದೈತ್ಯನು ಪುನಃ ತನ್ನ ಭಯಂಕರ ರಾಕ್ಷಸ ರೂಪವನ್ನು ಧರಿಸಿ ಮರಣ ಹೊಂದಿದನು. ಆಮೇಲೆ ಶತ್ರುನಾಶಕ ಅರ್ಜುನನ ದೃಷ್ಟಿಯು ಸ್ತ್ರೀ ಪರಿವಾರದೊಡನೆಯಿರುವ ಕಿರಾತವೇಷಧಾರಿಯಾದ ಸುವರ್ಣ ತುಲ್ಯಕಾಂತಿಯ ಪುರುಷನ ಕಡೆಗೆ ಹೋಯಿತು. ಆಗ ಆ ಪಾರ್ಥನು ಆನಂದಪಟ್ಟು ನಕ್ಕಹಾಗೆ ಮಾಡಿ ಆತನನ್ನು ಕುರಿತು—" ಎಲಾ, ಈ ಹಾಳು ಅರಣ್ಯದಲ್ಲಿ ಸಂಗಡ ಸ್ತ್ರೀಪರಿವಾರವನ್ನು ಕಟ್ಟಿಕೊಂಡು ಸಂಚಾರ ಮಾಡುವ ನೀನು ಯಾವನಿರುವೆ? ಎಲೈ ಸುವರ್ಣಕಾಂತಿಯುವನೇ, ಈ ಘೋರಾರಣ್ಯದಲ್ಲಿ ನಿನಗೆ ಅಂಜಿಕೆ ಬರುವದಿಲ್ಲವೆ? ಒಳ್ಳೇದು, ಅದಿರಲಿ. ಇಲ್ಲಿ ಬಂದಿದ್ದ ರಾಕ್ಷಸರೂಪಿವರಾಹದ ಮೇಲೆ ಮೊದಲು ನಾನು ಬಾಣ ಹೂಡಿದ್ದರಿಂದ ಅದು ನನ್ನದಾಗಿರಲು, ಅಭಿಲಾಷೆಯಿಂದ ಅಥವಾ ನನ್ನನ್ನು ಅನಾದರಿಸುವದಕ್ಕಾಗಿ ನೀನು ಅದರ ಮೇಲೆ ಬಾಣ ಪ್ರಯೋಗವೇಕೆ ಮಾಡಿದೆ ಹೇಳು. ಇನ್ನು ನೀನು ನನ್ನಕೈಯಿಂದ ಬದುಕಿ ಪಾರಾಗಲಾರೆ! ನನ್ನೊಡನೆ ಹೀಗೆ ನೀನು ನಡೆದದ್ದು ಮೃಗಯೆಯ (ಬೇಟೆಯ) ರೀತಿಯಲ್ಲವು; ಆದ್ದರಿಂದ ಎಲೈ ಪರ್ವತವಾಸಿಯಾದ ಪುರುಷಾ, ಇಂದು ನಾನು ನಿನ್ನ ಜೀವದ ಹಾಗು, ನಿನ್ನ ವಿಯೋಗವನ್ನುಂಟುಮಾಡುವೆನು.

ಈ ಮೇರೆಗೆ ಆ ಸವ್ಯಸಾಚಿಯಾದ ಪಂಡುಪುತ್ರನು ಮಾತಾಡಿದಕೂಡಲೆ ಕಿರಾತನು ನಕ್ಕಹಾಗೆ ಮಾಡಿ ಮೃದುಶಬ್ದಗಳಿಂದ ಆತನನ್ನು ಕುರಿತು—" ವೀರಾ, ನನಗೆ ಅರಣ್ಯದ ಅಂಜಿಕೆಬರುವದೆಂಬ ಮಾತನ್ನು ನಿನ್ನ ಮನಸ್ಸಿನಲ್ಲಿಯೂ ತರಬೇಡ; ಯಾಕಂದರೆ ನಾವು ಅರಣ್ಯದಲ್ಲಿಯೇ ಇರತಕ್ಕವರಾದದ್ದರಿಂದ ನಮಗೆ ಈ ವನಪ್ರದೇಶವು ಯಾವಾಗಲೂ ಸಂಚಾರಮಾಡಲಿಕ್ಕೆ ಯೋಗ್ಯವಾದದ್ದೇ ಇರುವದು; ಆದರೆ ನೀನು ಮಾತ್ರ ಈ ಸ್ಥಳದಲ್ಲಿ ದುಷ್ಕರವಸತಿಯನ್ನು ಯಾಕೆಮಾಡಿರುವೆಯೋ ಯಾರಿಗೆ ಗೊತ್ತು! ಎಲಾ, ತಪೋಧನಾ, ನಾವು ಇಲ್ಲಿ ಇರುತ್ತಿರಲಿಕ್ಕೆ ಇಲ್ಲಿ ಹಲವು ಪಶುಗಳಿರುವದೇ ಕಾರಣವು; ಆದರೆ ಅಗ್ನಿಯಂತೆ ತೇಜಸ್ವಿಯೂ, ಸುಕುಮಾರಾಂಗನೂ ಆದದ್ದರಿಂದ ನೀನು ಸುಖೋಪಭೋಗಕ್ಕೆ ಯೋಗ್ಯನಾಗಿರಲು, ಈ ಹಾಳುಪ್ರದೇಶದಲ್ಲಿ ಒಬ್ಬನೇ ಯಾಕೆ ಇರುವೆಯೋ ನಾನರಿಯೆನು, ಎನ್ನಲು ಅರ್ಜುನನು—ಕಿರಾತಾ, ನೀನು ಅಂದಂತೆ ಎರಡನೆಯ ಅಗ್ನಿಯಹಾಗೆ ನಾನು ಈ ಗಾಂಡೀವಧನುಷ್ಯವನ್ನೂ, ಅಗ್ನಿತುಲ್ಯಬಾಣಗಳನ್ನೂ ಆಶ್ರಯಿಸಿ ಈ ವನದಲ್ಲಿ ಇರುತ್ತಿರುವೆನು. ಅದರಂತೆ, ನನ್ನನ್ನು ಕೊಲ್ಲಬಂದ ವರಾಹರೂಪ ಮಹಾಪಶುವಿನ ರೂಪವನ್ನು ಧರಿಸಿ ಈ ಸ್ಥಾನದಲ್ಲಿ ಪ್ರಾಪ್ತವಾದ ಈ ಭಯಂಕರ ರಾಕ್ಷಸನ ಸಂಹಾರವನ್ನೂ ನಾನೇ ಮಾಡಿದೆನು. ಎಂದು ಹೇಳಿದನು. ಅದಕ್ಕೆ ಕಿರಾತನು—" ನಾನು ನನ್ನ ಧನುಸ್ಸಿನಿಂದ ಬಾಣವನ್ನು ಬಿಟ್ಟು ಮೊದಲು ಅವನ್ನು ಹೊಡೆದು ಯಮಸದನಕ್ಕೆ ಅಟ್ಟಿದೆನು; ಅದರಿಂದಲೇ ಇದು ಸತ್ತು ಭೂಮಿಯಮೇಲೆ ಬಿದ್ದಿರುತ್ತವೆ. ನಾನೇ ಮೊದಲು ಇದಕ್ಕೆ ಗುರಿಯಿಟ್ಟದ್ದರಿಂದ ಅದು ನನ್ನದಾಗಿದ್ದು, ನನ್ನ ಬಾಣಪ್ರಹಾ

ಶದಿಂದಲೇ ಅದು ಮರಣಹೊಂದಿರುತ್ತದೆ. ಎಲಾ ಮೂರ್ಖಾ, ಸ್ವಸಾಮರ್ಥ್ಯದಿಂದ ಮೈಮರೆತು ಬಿಟ್ಟು ಸ್ವಂತದ ದೋಷವನ್ನು ಎರಡನೆಯವರಮೇಲೆ ಹೊರಿಸುತ್ತಿರುವದು ಯೋಗ್ಯವಲ್ಲವು. ನಿನಗೆ ಸೊಕ್ಕು ಬಹಳ ಇರುತ್ತದೆ; ಒಳ್ಳೇದು, ಇನ್ನೇನು ನೀನು ನನ್ನಕೈಯಿಂದ ಜೀವಸಹಿತವಾಗಿ ಪಾರಾಗಲಾರೆ ನಿಲ್ಲು, ಈ ವಜ್ರತುಲ್ಯವಾದ ಬಾಣವನ್ನು ನಿನ್ನ ಮೇಲೆ ಬಿಡುವೆನು. ನೀನಾದರೂ ನಿನ್ನಲ್ಲಿ ಅವಸಾನವನ್ನು ತಂದುಕೊಂಡು ನನ್ನ ಮೇಲೆ ಬಾಣಗಳನ್ನು ಬಿಡು, ಅನ್ನಲು, ಕಿರಾತನ ಈ ಮಾತುಗಳನ್ನು ಕೇಳಿ ಅರ್ಜುನನು ಕ್ರುದ್ಧನಾಗಿ ಆತನ ಮೇಲೆ ಬಾಣಪ್ರಹಾರಮಾಡಿದನು; ಆದರೆ ಆ ಬಾಣಗಳನ್ನು ಕಿರಾತನು ಆನಂದದಿಂದ ಗ್ರಹಣಮಾಡಿ ಅವಕ್ಕೆ ಮೈಕೊಟ್ಟು ಒಮ್ಮೆ—"ಹ! ಇನ್ನಿಷ್ಟು ಇನ್ನಿಷ್ಟು" ಅನ್ನುತ್ತ, ಮತ್ತೊಮ್ಮೆ—"ಎಲಾ ಮೂರ್ಖಾ, ಮೂರ್ಖಾ!" ಅನ್ನುತ್ತ ಆತನನ್ನು ಕುರಿತು—"ಹ, ಮಾಡಿನ್ನು! ನಾನು ಬಿಟ್ಟಿರುವ ಮರ್ಮಭೇದಕವಾದ ಈ ನಾರಾಚ ಸಂಜ್ಞಕಬಾಣಗಳನ್ನು ತುಂಡುಮಾಡಿನ್ನು" ಎಂದು ನುಡಿದು, ಅರ್ಜುನನಮೇಲೆ ತೀಕ್ಷ್ಣಬಾಣಗಳನ್ನು ಬಿಟ್ಟನು. ಆಗ ಅರ್ಜುನನು ಆ ಕಿರಾತನ ಅಸ್ತ್ರಗಳಮೇಲೆ ಶಸ್ತ್ರಾಸ್ತ್ರಗಳನ್ನು ಬಿಟ್ಟನು. ಬಳಿಕ ಇಬ್ಬರೂ ಕ್ಷುಬ್ಧರಾಗಿ ಆಗಾಗ್ಗೆ ಗರ್ಜಿಸುತ್ತ ಭುಜಂಗಸದೃಶವಾದ ಬಾಣಗಳಿಂದ ಪರಸ್ಪರರ ಶರೀರಗಳಿಗೆ ಗಾಯುಗಳನ್ನು ಮಾಡತೊಡಗಿದರು. ಬಳಿಕ ಅರ್ಜುನನು ಕಿರಾತನಮೇಲೆ ಬಾಣಗಳ ಮಳೆಗರೆಯಲು, ಅವಕ್ಕೆ ಆ ಕಿರಾತರೂಪಿ ಶಂಕರನು ಶಾಂತವಾದ ಅಂತಃಕರಣದಿಂದ ಮೈಕೊಟ್ಟನು. ಈ ಮೇರೆಗೆ ಎರಡು ಗಳಿಗೆಗಳವರೆಗೆ ಬಾಣಗಳಿಗೆ ಮೈಕೊಟ್ಟರೂ ಶರೀರಕ್ಕೆ ಎಷ್ಟುಮಾತ್ರವೂ ಗಾಯವಾಗದೆ ಕಿರಾತರೂಪಿಯಾದ ಶಂಕರನು ಪರ್ವತದಂತೆ ಚಲಿಸದೆ ನಿಂತುಕೊಂಡನು. ಹೀಗೆ ತನ್ನ ಶರವೃಷ್ಟಿಯು ವ್ಯರ್ಥವಾದದ್ದನ್ನು ನೋಡಿ ಅರ್ಜುನನು ಅತ್ಯಂತ ಆಶ್ಚರ್ಯಚಕಿತನಾಗಿ "ಶಾಬಾಸ! ಶಾಬಾಸ!" ಎಂದು ಶಬರನನ್ನು ಹೊಗಳುತ್ತ ಮನಸ್ಸಿನಲ್ಲಿ—ಎಲಾ, ಇವನಂತು ಶರೀರದಿಂದ ಸುಕುಮಾರನಾಗಿದ್ದು, ಹಿಮಾಲಯದ ಶಿಖರದಲ್ಲಿ ಬಿದ್ದಿರುವವನು; ಅರ್ಥಾತ್ ಇವನು ಯುದ್ಧಕಲಾನಭಿಜ್ಞನು! ಹೀಗಿದ್ದೂ, ನನ್ನ ಗಾಂಡೀವಧನುಸ್ಸಿನಿಂದ ಹೊರಟ ಅಸಂಖ್ಯಾತಬಾಣಗಳಿಗೆ ಸಂತೋಷದಿಂದ ಮೈಕೊಡುವನಲ್ಲ, ಅಂದಬಳಿಕ ಇವನು ಯಾರಾಗಿರಬಹುದು? ಈತನು ಸಾಕ್ಷಾತ್ ದೇವಾಧಿದೇವ ಶಂಕರನಾಗಲಿ, ಬೇರೆ ದೇವತೆಯಾಗಲಿ, ಯಕ್ಷನಾಗಲಿ, ದೈತ್ಯನಾಗಲಿ ಇರಬಹುದಾಗಿ ನನಗೆ ತೋರುತ್ತದೆ; ಯಾಕಂದರೆ ಈ ಪರ್ವತಶ್ರೇಷ್ಠವಾದ ಹಿಮಾಲಯದಮೇಲೆ ದೇವತೆಗಳು ಬರುತ್ತಿರುವದರಿಂದ ಈ ಮಾತೇನು ಅಸಂಭವನೀಯವಾದದ್ದಲ್ಲ. ಇದಲ್ಲದೆ ನಾನು ಬಿಟ್ಟಿರುವ ಅಸಂಖ್ಯಬಾಣಗಳ ವೇಗವನ್ನು ಶ್ರೀ ಶಂಕರನ ಹೊರತು ಬೇರೆ ಯಾರಿಂದಲೂ ಸಹಿಸುವದು ಶಕ್ಯವಲ್ಲವು. ಇರಲಿ, ಒಬ್ಬ ಶಂಕರನಹೊರತು ಬೇರೆ ಯಾವ ದೇವತೆಯಾಗಲಿ, ಯಕ್ಷನಾಗಲಿ ಇದ್ದರೂ ಅವನನ್ನು ಈಗ ತೀಕ್ಷ್ಣಬಾಣದಿಂದ ಸಂಹರಿಸುವೆನು.

ವಿವೇಕಶೀಲಾ, ಈ ಮೇರೆಗೆ ನುಡಿದು ಪ್ರತಾಪಶಾಲಿಯಾದ ಅರ್ಜುನನು ಶಾಂತಾಂತಃಕರಣದಿಂದ ನೂರಾರು ಮರ್ಮಭೇದಕ ಬಾಣಗಳನ್ನು ಕಿರಾತನ ಮೇಲೆ ಪ್ರಯೋ-

ಗಾಸಿದನು; ಆದರೆ ಪರ್ವತವು ಪಾಷಾಣಗಳ ಮಳೆಗೆ ಮೈಕೊಡುವಂತೆ ತ್ರೈಲೋಕ್ಯಗ ಳನ್ನು ನಿರ್ಮಿಸುವ ಭಗವಾನ್ ಶಂಕರನು ಆ ಬಾಣಗಳನ್ನೂ ಶಾಂತಮನಸ್ಸಿನಿಂದ ಸ್ವೀಕ ರಿಸಿದನು. ಮುಂದೆ ಒಂದು ಕ್ಷಣದಲ್ಲಿ ಅರ್ಜುನನ ಬಾಣಗಳೆಲ್ಲ ತೀರಿಹೋದವು! ಇದರಿಂದ ಮಾತ್ರ ಆ ಕ್ಷತ್ರಿಯ ಶ್ರೇಷ್ಠನು ಅತ್ಯಂತ ಭಯಭೀತನಾಗಿ, ಹಿಂದಕ್ಕೆ ಖಾಂಡವವನ ದಹನಕಾಲದಲ್ಲಿ ತನಗೆ ಎರಡು ಅಕ್ಷಯ್ಯ ಬತ್ತಳಿಕೆಗಳನ್ನು ಕೊಟ್ಟಿದ್ದ ಭಗವಾನ್ ಅಗ್ನಿ ಯನ್ನು ಧ್ಯಾನಿಸತೊಡಗಿ ಮನಸ್ಸಿನಲ್ಲಿ—"ಎಲಎಲಾ, ಇನ್ನು ಈ ಧನುಸ್ಸಿನಿಂದ ನಾನು ಬಿಡಲಾದರೂ ಏನು? ಬತ್ತಳಿಕೆಗಳು ಬರಿದಾದವಲ್ಲ! ಆದರೆ ಈ ಪುರುಷನ ಮಾತಂತು ಆಡಲಿಕ್ಕೇಬರುವಹಾಗಿಲ್ಲ! ಇವನು ನನ್ನ ಬಾಣಗಳನ್ನೆಲ್ಲ ನುಂಗಿಬಿಡುತ್ತಿರುವನು, ಇರಲಿ, ಆನೆಯನ್ನು ಬರ್ಚಿಯಿಂದ ಇರಿಯುವಂತೆ ಇವನನ್ನು ನನ್ನ ಧನುಸ್ಸಿನ ಅಗ್ರದಿಂದ ಇರಿದು ಯಮಸದನಕ್ಕೆ ಅಟ್ಟುವೆನು, ಎಂದು ನುಡಿದು, ಮಹಾ ತೇಜಸ್ವಿಯಾದ ಅರ್ಜುನನು ಆ ಕಿರಾತನನ್ನು ತನ್ನ ಧನುಸ್ಸಿನ ಅಗ್ರದಿಂದ ಪ್ರಹಾರಮಾಡತೊಡಗಿದನು; ಮತ್ತು ಧನುಸ್ಸಿನ ಹಗ್ಗದ ಉರಲು ಹಾಕಿ ಆ ಕಿರಾತರೂಪ ಶಂಕರನನ್ನು ತನ್ನ ಕಡೆಗೆ ಎಳೆದು ಕೊಂಡು ತನ್ನ ವಜ್ರಮುಷ್ಟಿಯಿಂದ ಅವನನ್ನು ಹೊಡೆಯಹತ್ತಿದನು. ಹೀಗೆ ಶತ್ರುವಿನಾ ಶಕ ಅರ್ಜುನನು ತನ್ನ ಧನುಷ್ಯದ ಅಗ್ರದಿಂದ ಕಿರಾತನೊಡನೆ ಯುದ್ಧಮಾಡುತ್ತಿರಲು, ಆ ಪರ್ವತವಾಸಿಯಾದ ಕಿರಾತನು ಆತನ ಗಾಂಡೀವ ಧನುಷ್ಯವನ್ನೂ ಭಕ್ಷಣಮಾಡಿ ಬಿಟ್ಟನು. ಬಳಿಕ ಅರ್ಜುನನು ಕೈಯಲ್ಲಿ ಖಡ್ಗವನ್ನು ಹಿಡಕೊಂಡು ಯುದ್ಧದ ಕಡೆ ಯನ್ನು ಕಾಣುವದಕ್ಕಾಗಿ ಶಬರನಮೇಲೆ ದುಮುಕಿದನು. ಆ ಕುರುನಂದನನು ತನ್ನ ಬಾಹುಬಲದ ಪರಾಕ್ರಮವನ್ನು ಪ್ರಕಟಮಾಡಿ, ಪರ್ವತಕ್ಕೆ ಹೊಡೆದರೂ ಭಂಗವಾಗದ ತನ್ನ ತೀಕ್ಷ್ಣ ಖಡ್ಗದಿಂದ ಕಿರಾತನ ತಲೆಗೆ ಹೊಡೆದನು; ಆದರೆ ಆ ಉತ್ಕೃಷ್ಟಖಡ್ಗವು ಶಂಕರನ ತಲೆಗೆ ತಾಕಿದ ಕೂಡಲೆ ಮುರಿದುಹೋಯಿತು. ಆಗ ಅರ್ಜುನನು ವೃಕ್ಷ ಪಾಷಾಣಗಳ ಯೋಗದಿಂದ ಯುದ್ಧ ಮಾಡತೊಡಗಿದನು; ಆದರೆ ಆ ಭವ್ಯಾಕಾರದ ಕಿರಾತನು ಅವಕ್ಕೂ ತನ್ನ ಮೈಕೊಟ್ಟನು. ಆಗ ಶ್ವಾಸೋಚ್ಛ್ವಾಸದಿಂದ ಜ್ವಾಲೆ ಯನ್ನು ಹೊರಡಿಸುವ ಅರ್ಜುನನು ಕಿರಾತನ ಮೇಲೆ ಮುಷ್ಟಿಪ್ರಹಾರ ಮಾಡಹತ್ತಿದನು. ಆಗ ಕಿರಾತರೂಪಿಯಾದ ಶಂಕರನು ಇಂದ್ರನ ವಜ್ರಕ್ಕೆ ಸಮಾನವಾದ ತನ್ನ ಭಯಂಕರ ಮುಷ್ಟಿಯಿಂದ ಅರ್ಜುನನನ್ನು ಗಾಸಿಪಡಿಸಿಬಿಟ್ಟನು. ಈ ಮುಷ್ಟಿಯುದ್ಧವು ಆರಂಭ ವಾದಕೂಡಲೆ ಪಂಡುಪುತ್ರ ಹಾಗು ಕಿರಾತ ಇವರ ಮುಷ್ಟಿಗಳ "ಚಟ್‌ಚಟ್" ಎಂಬ ಭಯಂಕರಶಬ್ದವು ಆಗತೊಡಗಿತು. ಈ ಮೇರೆಗೆ ಇಂದ್ರ—ವೃತ್ರರ ಯುದ್ಧದಂತೆ ಮೈಮೇಲಿನ ಕೂದಲುಗಳು ನೆಟ್ಟಗಾಗುವಂಥ ಅವರ ಮುಷ್ಟಿಯುದ್ಧವು ಎರಡು ಗಳಿಗೆ ಗಳ ವರೆಗೆ ಆಯಿತು. ಆಗ ಬಲಾಢ್ಯನಾದ ಅರ್ಜುನನು ತನ್ನ ವಕ್ಷಸ್ಥಳದಿಂದ ಕಿರಾತ ನನ್ನು ಕಸುವಿನಿಂದ ಹಾಯ್ದನು. ಆಗ ಕಿರಾತನಾದರೂ ತಡಬಡಿಸುವ ಅರ್ಜುನನನ್ನು ತಿರುಗಿ ವಕ್ಷಸ್ಥಳದಿಂದ ಹಾಯ್ದನು. ಬಾಹುಪ್ರಹಾರ ಮಾಡುವಲ್ಲಿ ಮಗ್ನರಾದ, ಹಾಗು ವಕ್ಷಸ್ಥಳದ ತಿಕ್ಕಾಟದಲ್ಲಿ ಆವೇಶಗೊಂಡ ಅವರ ಆ ಭಯಂಕರ ವ್ಯಾಪಾರದಿಂದ

ಆ ಉಭಯರ ಅವಯುವಗಳಿಂದ ಕಿಡಿಗಳು ಉತ್ಪನ್ನವಾಗಿ ಹೊಗೆಹಾಯುಹತ್ತಿತು! ಆಮೇಲೆ ಮಹಾದೇವನು ಕ್ರುದ್ಧನಾಗಿ ಮೊದಲೇ ಪೀಡಿತನಾದ ಅರ್ಜುನನಿಗೆ ಮೋಹವನ್ನು ಉತ್ಪನ್ನಮಾಡುವದಕ್ಕಾಗಿ ತನ್ನ ಅವಯುವಗಳಿಂದ ಅವನನ್ನು ಬಿಗಿದು ಅವನು ಉಲುಕಾಡದಂತೆ ಮಾಡಿ ತನ್ನ ತೇಜಸ್ಸನ್ನು ಪ್ರಕಟಮಾಡಿದನು. ವಿವೇಕಶೀಲನೇ, ಅರ್ಜುನನ ಅವಯುವಗಳನ್ನು ಒಳಿತಾಗಿ ಬಿಗಿದುಬಿಟ್ಟದ್ದರಿಂದ ಆ ಪಂಡುಪುತ್ರನು ಮುದ್ದೆಯಾದಹಾಗೆ ತೋರಹತ್ತಿದನು; ಆತನಿಗೆ ಉಸುರಾಡಿಸಲಿಕ್ಕೂ ಬಾರದ ಹಾಗಾಯಿತು. ಅದರಿಂದ ಗತಪ್ರಾಣನಾದಂತೆ ಅರ್ಜುನನು ನಿಶ್ಚೇಷ್ಟನಾಗಿ ಭೂಮಿಯಮೇಲೆ ಬಿದ್ದನು.

ವಿವೇಕಶೀಲಾ, ಹೀಗೆ ಒಂದುಕ್ಷಣವು ಕ್ರಮಿಸಿದಬಳಿಕ ಆ ಪಂಡುಪುತ್ರನು ಪುನಃ ಎಚ್ಚತ್ತು ಎದ್ದನು. ಆಗ ಅವನ ಮೈಯು ರಕ್ತಮಯವಾಗಿ ಹೋಗಿ ಅವನು ಅತ್ಯಂತ ದುಃಖಿತನಾಗಿದ್ದನು. ಆ ಮೇಲೆ ಆತನು ತನ್ನನ್ನು ಸಂರಕ್ಷಿಸುವದಕ್ಕಾಗಿ ಭಗವಾನ್ ಶಂಕರನಿಗೆ ಶರಣುಹೋದನು. ಆತನು ಪಾರ್ಥಿವಲಿಂಗವನ್ನು ಮಾಡಿ ಪುಷ್ಪಮಾಲೆಯಿಂದ ಅದನ್ನು ಪೂಜಿಸುತ್ತಿರಲು, ತಾನು ಏರಿಸಿದ ಹೂವಿನ ಮಾಲೆಯು ಕಿರಾತನ ಮಸ್ತಕದಲ್ಲಿರುವದು ಅವನಕಣ್ಣಿಗೆ ಬಿದ್ದಿತು. ಆಗ ಪಾಂಡವಶ್ರೇಷ್ಠನ ಕ್ರೋಧಾದಿ ವಿಕಾರಗಳೆಲ್ಲ ನಷ್ಟವಾಗಿ ಹೋಗಿ ಆತನು ಆ ಕಿರಾತನ ಚರಣಕ್ಕೆರಗಿದನು. ಅದರಿಂದ ಶಂಕರನು ಸಂತುಷ್ಟನಾಗಿ, ತಪಶ್ಚರ್ಯದಯೋಗದಿಂದ ಸರ್ವಾವಯುವಗಳೂ ಕ್ಷೀಣವಾಗಿ ಹೋಗಿರುವ ಅರ್ಜುನನು ವಿಸ್ಮಯಪಡುತ್ತಿರುವದನ್ನು ನೋಡಿ ಮೇಘವಂಥ ಗಂಭೀರಧ್ವನಿಯಿಂದ ಆತನನ್ನು ಕುರಿತು—ಅರ್ಜುನಾ, ನಾನು ನಿನ್ನ ಈ ಅದ್ವಿತೀಯಕೃತ್ಯದಿಂದಲೂ, ಶೌರ್ಯ-ಧೈರ್ಯಗಳಿಂದಲೂ ಸಂತುಷ್ಟನಾಗಿದ್ದೇನೆ. ನಿಜವಾಗಿಯೆಂದರೆ ನಿನ್ನಂಥ ಕ್ಷತ್ರಿಯನಿಲ್ಲವು. ಎಲೈ ನಿಷ್ಪಾಪಾ, ಇಂದು ನಿನ್ನ ಹಾಗು ನನ್ನ ಶೌರ್ಯವೂ, ತೇಜಸ್ಸೂ ಸಮಾನವಾಗಿರುವವು. ಎಲೈ ಮಹಾಬಾಹುವೇ, ನಾನು ನಿನಗೆ ಪ್ರಸನ್ನನಾಗಿದ್ದೇನೆ. ನೀನು ನನ್ನಕಡೆಗೆ ನೋಡು, ದಿವ್ಯದೃಷ್ಟಿಯನ್ನು ಕೊಡುವೆನು. ನೀನು ಮೊದಲಿಗೆ ಋಷಿ ಇರುವೆ; ಆದ್ದರಿಂದ ಯಾವತ್ತೂ ದೇವತೆಗಳೂ ನಿನಗೆ ಶತ್ರುಗಳಾದರೂ ನೀನು ಸಂಗ್ರಾಮದಲ್ಲಿ ಅವರನ್ನು ಪರಾಜಯಗೊಳಿಸಬಹುದು; ಆದರೂ ನಿನಗೆ ನಾನು ಪ್ರೇಮದಿಂದ ಒಂದು ಅಕುಂಠಿತವಾದ ಅಸ್ತ್ರವನ್ನು ಕೊಡುವೆನು; ಯಾಕಂದರೆ ಆ ಅಸ್ತ್ರವನ್ನು ಒಂದು ಕ್ಷಣದಲ್ಲಿ ಗ್ರಹಣಮಾಡುವ ಶಕ್ತಿಯು ನಿನ್ನಲ್ಲಿರುತ್ತದೆ. ಎಂದು ಹೇಳಿದನು. ಬಳಿಕ ಅಲ್ಲಿ ಆತನಿಗೆ ತ್ರಿಶೂಲಧಾರಿಯಾದ ದೇದೀಪ್ಯಮಾನ ದೇವಾಧಿದೇವ ಶಂಕರನ, ಹಾಗು ಮಹಾಕಾಂತಿಸಂಪನ್ನ ದೇವೀ ಪಾರ್ವತಿಯ ದರ್ಶನವಾಯಿತು. ಅವರನ್ನು ನೋಡಿದ ಕೂಡಲೆ ಅರ್ಜುನನು ಮೊಣಕಾಲೂರಿ ತಲೆಬಾಗಿ ನಮಸ್ಕರಿಸಿ ಆ ಭಗವಾನ್ ಶಂಕರನನ್ನು ಪ್ರಾರ್ಥಿಸತೊಡಗಿದನು—ಹೇ ಕಪರ್ದಿನ್, ಸರ್ವದೇವೇಶ್ವರಾ, ಹೇ ಭಗನೇತ್ರನಾಶಕಾ, ದೇವಾಧಿದೇವಾ, ಮಹಾದೇವಾ, ಸರ್ವಕಾರಣಗಳಲ್ಲಿ ಶ್ರೇಷ್ಠನಾದ ಪ್ರಭು ಶಂಕರನು ನೀನಿರುವೆಯೆಂದು ನಾನು ತಿಳಿಯುವೆನು. ಎಲೈ ದೇವನೇ, ನೀನು ದೇವತೆಗಳ ಆಧಾರವಾಗಿರುತ್ತೀ. ಈ ಜಗತ್ತು ನಿನ್ನಿಂದಲೇ ಉತ್ಪನ್ನವಾಗಿರುವದು. ದೇವ, ದೈತ್ಯ,

ಮನುಷ್ಯರಿಂದ ಯುಕ್ತವಾದ ತ್ರೈಲೋಕ್ಯಕ್ಕೂ ನೀನು ಅಜೇಯನಾಗಿರುತ್ತೀ. ಕಲ್ಯಾಣಮಯನೂ, ವಿಶ್ವವ್ಯಾಪಕಶರೀರಯುಕ್ತನೂ, ಸುದರ್ಶನ ಚಕ್ರಾದಿಗಳನ್ನು ಕೊಟ್ಟು ವಿಷ್ಣುವಿನ ಕಲ್ಯಾಣಮಾಡಿದವನೂ, ದಕ್ಷಯಜ್ಞಧ್ವಂಸಕನೂ ಆದ ಜಗತ್ಸಂಹಾರಕ ರುದ್ರನೆನಿಸುವ ನಿನಗೆ ನಾನು ನಮಸ್ಕರಿಸುವೆನು. ಲಲಾಟಭಾಗದಲ್ಲಿ ನೇತ್ರವುಳ್ಳವನೂ, ಸರ್ವಸ್ವರೂಪನೂ, ವೃಷ್ಟಿದಾಯಕನೂ, ತ್ರಿಶೂಲಧಾರಿಯೂ, ಪಿನಾಕಧನುಸ್ಸಿನಿಂದ ಜಗತ್ತನ್ನು ರಕ್ಷಿಸುವವನೂ, ಸೂರ್ಯಸ್ವರೂಪನೂ, ಜಗದುತ್ಪಾದಕನೂ ಆದ ಕಿರಾತರೂಪದ ನಿನಗೆ ನನ್ನ ನಮಸ್ಕಾರವು. ಹೇ ಭಗವನ್, ಸರ್ವಭೂತಾಧಿಪತಿಯೂ, ಪ್ರಮಥಗಣದ ಒಡೆಯನೂ, ಜಗತ್ತಿನ ಕಲ್ಯಾಣಕರ್ತೃವೂ, ಲೋಕೋತ್ಪತ್ತಿಯ ಕಾರಣವಾದ ಮಾಯೆಯ ಕಾರಣನೂ, ಪ್ರಕೃತಿ-ಪುರುಷರಿಂದ ಬೇರೆಯಲ್ಲಿರುವವನೂ, ಶ್ರೇಷ್ಠನೂ, ಜಿತೇಂದ್ರಿಯನೂ, ಸಂಹಾರಕಾರಕನೂ ಆದ ನಿನ್ನನ್ನು ನಾನು ಪುನಃ ಪುನಃ ನಮಸ್ಕರಿಸುವೆನು. ಭಗವನ್ ಶಂಕರಾ, ನಿನ್ನ ಮರ್ಯಾದೆಯ ಉಲ್ಲಂಘನಮಾಡಿದ್ದಕ್ಕಾಗಿ ನನ್ನನ್ನು ಕ್ಷಮಿಸು. ತಪಸ್ವಿಗಳ ಉತ್ಕೃಷ್ಟಸ್ಥಾನವೂ, ನಿನಗೆ ಪ್ರಿಯವೂ ಆದ ಈ ಇಂದ್ರಕೀಲಪರ್ವತಕ್ಕೆ ನಿನ್ನ ದರ್ಶನೇಚ್ಛೆಯಿಂದ ನಾನು ಬಂದಿರುವೆನು. ಭಗವನ್, ಸರ್ವಲೋಕವಂದ್ಯನಾದ ನಿನ್ನನ್ನು ನಾನು ಬೇಡಿಕೊಳ್ಳುತ್ತೇನೆ, ಎಲೈ ಮಹಾದೇವಾ, ಅತ್ಯಂತ ಸಾಹಸದಿಂದ ಘಟಿಸಿದ ನನ್ನ ಅಪರಾಧವು ನಷ್ಟವಾಗಿಹೋಗಲಿ. ಹೇ ಶಂಕರಾ, ನಾನು ನಿನಗೆ ಶರಣುಬಂದಿರುವದರಿಂದ, ಅಜ್ಞಾನಮೂಲಕ ನಿನ್ನೊಡನೆ ನಾನು ಹಾಕಿದ ಗುದ್ದುಮುರಿಗೆಗಾಗಿ ನನ್ನನ್ನು ಕ್ಷಮಿಸು.

**ಅರ್ಜುನನಿಗೆ ಪಾಶುಪತಾಸ್ತ್ರ ಪ್ರಾಪ್ತಿ:**—ವಿವೇಕಶೀಲಾ, ಈ ಮೇರೆಗೆ ಅರ್ಜುನನು ಮಾಡಿದ ಪ್ರಾರ್ಥನೆಯನ್ನು ಕೇಳಿ ಮಹಾ ತೇಜಸ್ವಿಯಾದ ಶಂಕರನು ಆತನ ಸುಂದರ ಹಸ್ತವನ್ನು ಹಿಡಿದು ನಕ್ಕು— "ಕ್ಷಮಿಸಿದೆನು" ಎಂದು ನುಡಿದನು; ಮತ್ತು ಸಂತುಷ್ಟಾಂತರಂಗನಾದ ಶಂಕರನು ಅರ್ಜುನನನ್ನು ಬಾಹುಗಳಿಂದ ಬಿಗಿಯಾಗಿ ಅಪ್ಪಿಕೊಂಡು ಸಮಾಧಾನ ಪಡಿಸುತ್ತ ಅವನನ್ನು ಕುರಿತು—ಅರ್ಜುನಾ, ಪೂರ್ವಜನ್ಮದಲ್ಲಿ ನೀನು ನರನಿದ್ದು ಆಗ ನಿನಗೆ ನಾರಾಯಣನ ಸಹಾಯವಿತ್ತು. ನೀನು ಹಲವು ಅಯುತ ವರ್ಷಗಳ ವರೆಗೆ ಬದರಿಕಾಶ್ರಮದಲ್ಲಿ ಉಗ್ರ ತಪಶ್ಚರ್ಯವಮಾಡಿದೆ. ಶ್ರೇಷ್ಠವಾದ ತೇಜಸ್ಸು ನಿನ್ನಲ್ಲಿ, ಹಾಗು ಪುರುಷೋತ್ತಮನಾದ ವಿಷ್ಣುವಿನಲ್ಲಿ ಮಾತ್ರ ಇರುತ್ತದೆ. ಪುರುಷಶ್ರೇಷ್ಠನಾದ ನೀವಿಬ್ಬರೇ ನಿಮ್ಮ ತೇಜಸ್ಸಿನಿಂದ ಜಗತ್ತನ್ನು ಪಾಲಿಸುವಿರಿ. ಎಲೈ ಸಾಮರ್ಥ್ಯಸಂಪನ್ನನೇ, ಇಂದ್ರನಿಗೆ ರಾಜ್ಯಾಭಿಷೇಕವಾದಾಗ, ಮೇಘದಂತೆ ಗಂಭೀರಧ್ವನಿ ಮಾಡುವ ಅತ್ಯಂತ ಉನ್ನತವಾದ ಧನುಸ್ಸನ್ನು ತಕ್ಕೊಂಡು ನೀನು, ಹಾಗು ಶ್ರೀಕೃಷ್ಣನು ಇಬ್ಬರೇ ದೈತ್ಯರನ್ನು ಶಿಕ್ಷಿಸಿದಿರಿ. ಅರ್ಜುನಾ, ಅದೇ ಆ ಗಂಡೀವವೆಂಬ ಧನುಸ್ಸಿದು! ಎಲೈ ಪುರುಷಶ್ರೇಷ್ಠನೇ, ಮಾಯೆಯ ಅವಲಂಬನಮಾಡಿ ನಾನು ಇದನ್ನು ನುಂಗಿಬಿಟ್ಟಿದ್ದೆನು. ಅರ್ಜುನಾ, ಇಕೋ, ಇವೆರಡು ನಿನ್ನ ಆ ಬತ್ತಳಿಕೆಗಳು ಮೊದಲಿನಂತೆ ಅಕ್ಷಯ್ಯಗಳಾಗುವವು ನೋಡು. ಅದರಂತೆ ಕುರುನಂದನಾ, ನಿನ್ನ ಶರೀರವೂ ನಿರೋಗಿಯಾಗುವದು. ನಾನು ನಿನಗೆ ಪ್ರಸನ್ನ

ನಾಗಿದ್ದೇನೆ. ಅರ್ಜುನಾ, ನೀನು ನಿಜವಾದ ಪರಾಕ್ರಮಿಯು- ನಿನಗೆ ಬೇಕಾದ ವರವನ್ನು ಬೇಡಿಕೋ. ಎಲೈ ಸಮ್ಮಾನದಾಯಕನೇ, ಮೃತ್ಯುಲೋಕದಲ್ಲಿ, ಅಥವಾ ಸ್ವರ್ಗಲೋಕದಲ್ಲಿ ನಿನಗೆ ಸರಿಯಾದಪುರುಷನು ಯಾವನೂ ಇಲ್ಲ; ಕ್ಷತ್ರಿಯರಲ್ಲಿ ನೀನೇ ಮುಖ್ಯನಾಗಿರುವೆ!

ಈ ವೇಳೆಗೆ ಭಕ್ತವತ್ಸಲನಾದ ಶಂಕರನು ಆಡಿದ ಮಾತುಗಳನ್ನು ಕೇಳಿ ಅರ್ಜುನನು—ಭಗವನ್ ವೃಷಭಧ್ವಜಾ, ನನಗೆ ತಾವು ಪ್ರೇಮಪೂರ್ವಕವಾಗಿ ಅಭೀಷ್ಟವಸ್ತುವನ್ನು ಕೊಡುತ್ತಿದ್ದರೆ, ಹೇಪ್ರಭೋ, ಬ್ರಹ್ಮಶಿರಸ್ಸೆಂಬ ಹೆಸರುಳ್ಳದ್ದೂ, ಭಯಂಕರವೂ, ಪ್ರಳಯಕಾಲದಲ್ಲಿ ಸರ್ವಜಗತ್ತನ್ನು ಸಂಹರಿಸುವಂತಹದೂ, ರುದ್ರ ದೇವತೆಯುಳ್ಳದ್ದೂ ಆದ ಮಹಾಘೋರ ದಿವ್ಯ ಪಾಶುಪತಾಸ್ತ್ರವನ್ನು ನಾನು ಇಚ್ಛಿಸುವೆನು; ಯಾಕಂದರೆ ಎಲೈ ಮಹಾದೇವನೇ, ಅದು ಸಿಕ್ಕರೆ ಕರ್ಣ, ಭೀಷ್ಮ, ಕೃಪ, ದ್ರೋಣ ಇವರೊಡನೆ ನಾನು ಯುದ್ಧ ಮಾಡುವಾಗ ನಿನ್ನ ಕೃಪೆಯಿಂದ ಯಥಾ ಸಾಂಗವಾಗಿ ಅವರನ್ನು ಸೋಲಿಸುವೆನು; ಆದ್ದರಿಂದ ಯಾವದರ ಯೋಗದಿಂದ ಸಂಗ್ರಾಮದಲ್ಲಿ ದಾನವ, ರಾಕ್ಷಸ, ಭೂತ, ಪಿಶಾಚ, ಗಂಧರ್ವ, ಸರ್ಪ ಇವನ್ನು ಸುಟ್ಟುಬಿಟ್ಟೇನೋ, ಯಾವದನ್ನು ಅಭಿಮಂತ್ರಿಸಿದ ಕೂಡಲೆ ಸಾವಿರಾರು ಶೂಲಗಳು, ಭಯಂಕರಾಕಾರದ ಗದೆಗಳು, ಭುಜಂಗಸದೃಶಬಾಣಗಳು ನಿರ್ಮಾಣವಾಗುವವೋ, ಯಾವದರ ಯೋಗದಿಂದ ಭೀಷ್ಮ–ದ್ರೋಣ–ಕೃಪ–ಯಾವಾಗಲೂ ಕಠೋರ ಭಾಷಣಮಾಡುವ ಕರ್ಣ ಇವರೊಡನೆ ಕಾದಲು ನಾನು ಸಮರ್ಥನಾಗುವೆನೋ ಅಂಥ ಪಾಶುಪತಾಸ್ತ್ರವು ದೊರೆಯಬೇಕೆಂದು, ಹೇ ಭಗವನ್, ಭಗನೇತ್ರನಾಶಕಾ, ನನ್ನ ಮುಖ್ಯವಾದ ಇಚ್ಛೆಯಿರುವದು. ಅದು ನಿನ್ನ ಪ್ರಸಾದದಿಂದ ಸಫಲವಾದರೆ ನಾನು ಸಾಮರ್ಥ್ಯಸಂಪನ್ನನಾಗುವೆನು, ಎಂದು ಬೇಡಿಕೊಂಡನು. ಅದಕ್ಕೆ ಶಂಕರನು—ಎಲೈ ಅರ್ಜುನಾ, ನನಗೆ ಪ್ರಿಯವಾಗಿರುವ ಈ ಪಾಶುಪತಾಸ್ತ್ರವನ್ನು ನಿನಗೆ ಕೊಡುವೆನು. ಯಾಕಂದರೆ, ಇದನ್ನು ತಿಳಿಯಲಿಕ್ಕೆ, ಇದನ್ನು ಪ್ರಯೋಗಿಸಲಿಕ್ಕೆ, ಇದನ್ನು ಪುನಃ ಆಕರ್ಷಿಸಲಿಕ್ಕೆ ನೀನು ಸಮರ್ಥನಿರುವೆ. ದೇವೇಂದ್ರ, ಯಮ, ಕುಬೇರ, ವರುಣ, ವಾಯು ಇವರಿಗೂ ಈ ಅಸ್ತ್ರದ ಜ್ಞಾನವಿರುವದಿಲ್ಲ; ಅಂದ ಬಳಿಕ ಅದರ ಜ್ಞಾನವು ಮನುಷ್ಯರಿಗೆ ಎಲ್ಲಿಂದ ಇದ್ದೀತು? ಅರ್ಜುನಾ, ವಿಚಾರ ಮಾಡದೆ ಒಮ್ಮೆಲೆ ಒಬ್ಬರ ಮೇಲೆ ಇದನ್ನು ಬಿಡಬಾರದು; ಯಾಕಂದರೆ ಕಡಿಮೆ ತೇಜಸ್ಸಿನವರ ಮೇಲೆ ಇದನ್ನು ಬಿಟ್ಟರೆ ಇದು ಜಗತ್ತಿನ ನಾಶವನ್ನು ಮಾಡಿ ಬಿಟ್ಟೀತು. ಈ ಸ್ಥಾವರಜಂಗಮಾತ್ಮಕ ತ್ರೈಲೋಕ್ಯದಲ್ಲಿ ಇದಕ್ಕೆ ವಧಿಸಲಿಕ್ಕೆ ಬಾರದ ಯಾವ ಪ್ರಾಣಿಯೂ ಇರುವದಿಲ್ಲ. ಕೇವಲ ಅಂತಃಕರಣದ ಯೋಗದಿಂದಾಗಲಿ, ಬರಿಯ ದೃಷ್ಟಿಯ ಯೋಗದಿಂದಾಗಲಿ, ಧನುಷ್ಯದ ಯೋಗದಿಂದಾಗಲಿ ಇದರ ಪ್ರಹಾರ ಮಾಡಲಿಕ್ಕೆ ಬರುತ್ತದೆ- ಎಂದು ಹೇಳಿದನು. ಇದನ್ನು ಕೇಳಿದ ಕೂಡಲೆ ಅರ್ಜುನನು ಶುಚಿರ್ಭೂತನಾಗಿ, ಅಂತಃಕರಣವನ್ನು ಏಕಾಗ್ರವಾಗಿಮಾಡಿ ಶಂಕರನ ಕಡೆಗೆ ಹೋಗಿ "ಅಸ್ತ್ರೋಪದೇಶ ಮಾಡಬೇಕು" ಎಂದು ಬೇಡಿಕೊಂಡನು. ಆಗ ಭಗವಾನ್ ಶಂಕರನು ರಹಸ್ಯ–ಉಪಸಂಹಾರಗಳೊಡನೆ ಮೂರ್ತಿಮಂತ ಯಮಸ್ವರೂಪವಾದ ಆ ಅಸ್ತ್ರದ ಉಪದೇಶವನ್ನು ಪಾಂಡವಶ್ರೇಷ್ಠನಾದ ಅರ್ಜುನನಿಗೆ ಮಾಡಿದನು. ಅಷ್ಟರಲ್ಲಿ ಆ ಅಸ್ತ್ರವು

ಪಾರ್ವತೀಪತಿಯಾದ ಶ್ರೀ ಶಂಕರನಂತೆಯೇ ಅರ್ಜುನನ ಸಮೀಪಕ್ಕೆ ಬಂದು ನಿಂತುಕೊಂಡಿತು ! ಆಗ ಅರ್ಜುನನು ಪ್ರೇಮಪೂರ್ವಕವಾಗಿ ಅದನ್ನು ಸ್ವೀಕರಿಸಲು, ಪರ್ವತ, ವನ, ವೃಕ್ಷ, ಸಮುದ್ರ, ಗ್ರಾಮ, ನಗರ, ಋಷಿಗಳೊಡನೆ ಯಾವತ್ತು ಪೃಥ್ವಿಯು ಕಂಪಿಸತೊಡಗಿತು. ಅದೇಕ್ಷಣದಲ್ಲಿ ಶಂಖ, ದುಂದುಭಿ, ಸಾವಿರಾರು ಭೇರಿಗಳು ಇವುಗಳ ಧ್ವನಿಯಾಗಹತ್ತಿತು. ಆಮೇಲೆ ಆ ಜಾಜ್ವಲ್ಯವೂ, ಭಯಂಕರವೂ ಆದ ಅಸ್ತ್ರವು ಮೂರ್ತಿಮಂತವಾಗಿ ನಿಸ್ಸೀಮ ತೇಜಸ್ವಿಯಾದ ಅರ್ಜುನನ ಬಳಿಯಲ್ಲಿ ಬಂದು ನಿಂತಿರುವದು ದೇವತೆಗಳಿಗೂ. ದೈತ್ಯರಿಗೂ ಕಾಣಿಸಿತು. ಅತ್ಯಂತ ತೇಜಸ್ವಿಯಾದ ಅರ್ಜುನನನ್ನು ಶಂಕರನು ಸ್ಪರ್ಶಮಾಡಿದ್ದರಿಂದ ಆತನ ಶರೀರದಲ್ಲಿದ್ದ ಕೆಲವು ಪಾತಕಗಳು ನಷ್ಟವಾಗಿ ಹೋದವು. ಆಮೇಲೆ ಶಂಕರನು ಅರ್ಜುನನಿಗೆ—"ನೀನು ಸ್ವರ್ಗಕ್ಕೆ ಹೋಗು" ಎಂದು ಅಪ್ಪಣೆಕೊಡಲು, ಅರ್ಜುನನು ಮಸ್ತಕದಿಂದ ನಮಸ್ಕಾರ ಮಾಡಿ ಕೈಜೋಡಿಸಿ ಆತನ ಕಡೆಗೆ ನೋಡಹತ್ತಿದನು; ಆಗ ದೇವಾಧಿಪತಿಯೂ, ಸ್ವತಂತ್ರನೂ, ಮಹಾತೇಜಸ್ವಿಯೂ, ಕೈಲಾಸವಾಸಿಯೂ ಆದ ಪಾರ್ವತೀಪತಿಶಂಕರನು ಆಪುರುಷಶ್ರೇಷ್ಠ ಅರ್ಜುನನಿಗೆ ಗಾಂಡೀವಧನುಸ್ಸನ್ನು ಕೊಟ್ಟು, ಶುಭ್ರವರ್ಣದ ಆ ಹಿಮಾಲಯ ಪರ್ವತವನ್ನು ಬಿಟ್ಟು ಅರ್ಜುನನ ಸಮಕ್ಷ ಪಾರ್ವತಿಯೊಡನೆ ಆಕಾಶದಲ್ಲಿ ಹೊರಟು ಹೋದನು.

**ಲೋಕಪಾಲರಿಂದ ಅರ್ಜುನನಿಗೆ ಅಸ್ತ್ರಪ್ರಾಪ್ತಿಯು:**—ಹೀಗೆ ಪರಮೇಶ್ವರನು ಹೊರಟು ಹೋಗಿ ಕಣ್ಣಿಗೆ ಕಾಣದ ಹಾಗಾಗಲು, ಅರ್ಜುನನು ತನಗೆ ಮಹಾದೇವನ ದರ್ಶನವಾದದ್ದಕ್ಕಾಗಿ ಅತ್ಯಂತ ಆಶ್ಚರ್ಯಪಡತೊಡಗಿದನು. ಆತನು ಮನಸ್ಸಿನಲ್ಲಿ—ನಾನು ವರದಾಯಕನಾದ ಪಿನಾಕಧಾರಿ ತ್ರಿಲೋಚನ ಶ್ರೀ ಶಂಕರನನ್ನು ಪ್ರತ್ಯಕ್ಷ ನೋಡಿದ್ದರಿಂದಲೂ, ಆತನು ತನ್ನ ಹಸ್ತಸ್ಪರ್ಶ ಮಾಡಿದ್ದರಿಂದಲೂ ನಾನು ನಿಜವಾಗಿಯೇ ಧನ್ಯನು. ನನ್ನ ಮೇಲೆ ಪರಮೇಶ್ವರನು ಅನುಗ್ರಹ ಮಾಡಿದ್ದರಿಂದ ನನ್ನ ಆತ್ಮವು ಅತ್ಯಂತ ಕೃತಾರ್ಥವಾಗಿರುವದು. ಇನ್ನು ನಾನು ಎಲ್ಲ ಶತ್ರುಗಳನ್ನು ಜಯಿಸಿಯೇ ಬಿಟ್ಟೆನೆಂತಲೂ, ನನ್ನ ಹೇತುವೂ ಕೊನೆಗಂಡಿತೆಂತಲೂ ನನಗೆ ತೋರುವದು. ಎಂದು ವಿಚಾರ ಮಾಡುತ್ತಿರುವಷ್ಟರಲ್ಲಿ, ವೈಡೂರ್ಯ ರತ್ನದಂತೆ ಶರೀರ ಕಾಂತಿಯುಳ್ಳವನೂ, ಜಲಚರ ಸಮುದಾಯದಿಂದ ಸುತ್ತುಗಟ್ಟಿದವನೂ ಆದ ಶ್ರೀಮಾನ್ ಜಲಚರಪಾಲಕ–ಜಲಾಧಿಪತಿ–ಸ್ವತಂತ್ರ ವರುಣನು ತನ್ನ ಕಾಂತಿಯಿಂದ ಯಾವತ್ತು ದಿಕ್ಕುಗಳನ್ನು ಪ್ರಕಾಶಿತವಾಗಿ ಮಾಡುತ್ತ ನಾಗರು, ನದಗಳು, ನದಿಗಳು, ದೈತ್ಯರು, ಸಾಧ್ಯರು, ದೇವತೆಗಳು ಇವರೊಡನೆ ಅರ್ಜುನನಿದ್ದಲ್ಲಿಗೆ ಬಂದನು. ಅವನು ಬಂದ ಮೇಲೆ ಸುವರ್ಣ ಕಾಂತಿಯು ಶರೀರವೂ, ಅದ್ಭುತರಸದ ಪ್ರತ್ಯಕ್ಷ ಉದಾಹರಣವಾದ ಸ್ವರೂಪವೂ ಉಳ್ಳ ಶ್ರೀಮಾನ್ ಧನಪತಿ ಪ್ರಭು ಕುಬೇರನು ಅರ್ಜುನನನ್ನು ನೋಡುವದಕ್ಕಾಗಿ ಅತ್ಯಂತ ಪ್ರಕಾಶಮಾನವಾದ ವಿಮಾನದಲ್ಲಿ ಕುಳಿತು ಆ ಸ್ಥಳಕ್ಕೆ ಬಂದನು. ಆತನ ಹಿಂದಿನಿಂದ ಯಕ್ಷರು ಸಾಗಿಬರುತ್ತಲಿದ್ದು, ಅವರ ಕಾಂತಿಯಿಂದ ಆಕಾಶವು ದೇದೀಪ್ಯಮಾನವಾಗಿತ್ತು. ಆ ಮೇಲೆ ತ್ರೈಲೋಕ್ಯಸಂಹಾರಕರ್ತೃವಾದ ಪ್ರತಾಪಶಾಲಿ ಯಮನು ದಂಡಧಾರಿಯಾಗಿ ತ್ರೈಲೋ

ಕ್ಯಗಳನ್ನು ಪ್ರಕಾಶಿಸುತ್ತ ಅಲ್ಲಿಗೆ ಬಂದನು. ಈ ಮೂವರಿಗೂ ತಪಸ್ವಿಯಾದ ಅರ್ಜುನನ ದರ್ಶನವಾಯಿತು. ಅವರು ಬಂದ ಒಂದು ಕ್ಷಣದ ಮೇಲೆ ಐರಾವತದ ಮಸ್ತಕದ ಬಳಿಯಲ್ಲಿ ಕುಳಿತಿರುವ, ಹಾಗು ದೇವಸೈನ್ಯದಿಂದ ಸುತ್ತುಗಟ್ಟಿದ ಭಗವಾನ್ ಇಂದ್ರನು ಶಚಿಯಿಂದ ಸಹಿತನಾಗಿ ಆ ಸ್ಥಳಕ್ಕೆ ಪ್ರಾಪ್ತನಾದನು. ಆತನ ತಲೆಯ ಮೇಲೆ ಶ್ವೇತಛತ್ರವಿದ್ದದ್ದರಿಂದ, ಶುಭ್ರಮೇಘದ ಕೆಳಗಡೆಯಲ್ಲಿರುವ ಚಂದ್ರನಂತೆ ಆತನು ಕಾಣುತ್ತಿದ್ದನು. ತಪೋಧನರಾದ ಋಷಿಗಳೂ, ಗಂಧರ್ವರೂ ಆತನನ್ನು ಸ್ತುತಿಸುತ್ತಿದ್ದರು. ಹೀಗೆ ವರುಣ, ಕುಬೇರ, ಯಮ, ಇಂದ್ರರು ಅಲ್ಲಿಗೆ ಬಂದು ಅರ್ಜುನನ ದರ್ಶನಮಾಡಿಕೊಳ್ಳುತ್ತಿರಲು, ಮೇಘಧ್ವನಿಯಂತೆ ಗಂಭೀರಧ್ವನಿಯುಳ್ಳ, ಹಾಗು ಉತ್ಕೃಷ್ಟ ಧರ್ಮವೇತ್ತೃವಾದ ಯಮನು ಅರ್ಜುನನನ್ನು ಕುರಿತು—ಎಲೈ ಅರ್ಜುನಾ, ಅರ್ಜುನಾ, ಇತ್ತನೋಡು, ನಾವೆಲ್ಲರೂ ಲೋಕಪಾಲರು ಬಂದಿದ್ದು ನಿನಗೆ ದರ್ಶನ ಕೊಡುತ್ತಿರುವೆವು; ಯಾಕಂದರೆ ನೀನು ದರ್ಶನಕ್ಕೆ ಯೋಗ್ಯನಾಗಿರುತ್ತೀ. ಅರ್ಜುನಾ, ನೀನು ಮೊದಲೇ ಅಚಿಂತ್ಯ ಸ್ವರೂಪಿಯಾದ ಮಹಾಬಲಾಢ್ಯ ನರನಾಮಕ ಋಷಿಯಿದ್ದು, ಬ್ರಹ್ಮದೇವನ ಅಪ್ಪಣೆಯಿಂದ ಈಗ ಮನುಷ್ಯತ್ವವನ್ನು ಹೊಂದಿರುತ್ತೀ. ಎಲೈ ನಿಷ್ಪಾಪನೇ, ವಸುದೇವತೆಗಳಿಂದ ಉತ್ಪನ್ನನಾದ, ಮಹಾವೀರ್ಯವಂತನಾದ, ಅತ್ಯಂತ ಧರ್ಮನಿಷ್ಠ ಪಿತಾಮಹ ಭೀಷ್ಮನನ್ನು ನೀನು ಸಂಗ್ರಾಮದಲ್ಲಿ ಸೋಲಿಸುವೆ. ಅದರಂತೆ ಎಲೈ ಕುರುನಂದನಾ, ಅಗ್ನಿಯಂತೆ ದುಸ್ಸಹನಾದ ದ್ರೋಣಾಚಾರ್ಯನಿಂದ ರಕ್ಷಿಸಲ್ಪಟ್ಟ ಕ್ಷತ್ರಿಯರನ್ನೂ, ಮನುಷ್ಯಯೋನಿಯಲ್ಲಿ ಅವತರಿಸಿದ ದೈತ್ಯರನ್ನೂ, ನಿವಾತಕವಚನಾಮಕ ದಾನವರನ್ನೂ ನೀನು ಸಂಹರಿಸುವೆ. ಅದರಂತೆಯೇ ಎಲೈ, ಧನಂಜಯಾ, ಸರ್ವರನ್ನು ಸಂತಾಪಗೊಳಿಸುವ, ಹಾಗು ದೇದೀಪ್ಯನಾದ ನನ್ನ ತಂದೆ–ಸೂರ್ಯನ ಅಂಶದಿಂದ ಹುಟ್ಟಿದ್ದ ಮಹಾವೀರ್ಯವಂತ ಕರ್ಣನ ವಧೆಯೂ ನಿನ್ನ ಕೈಯಿಂದಲೇ ಆಗುವದು. ಹಾಗೆಯೇ ಎಲೈ ಶತ್ರುನಾಶಕಾ ಕುಂತೀಪುತ್ರಾ, ಭೂಮಿಯಲ್ಲಿ ಅವತರಿಸಿದ್ದ ದೇವ, ದಾನವ, ರಾಕ್ಷಸರ ಅಂಶಭೂತರೂ ನಿನ್ನಿಂದ ಸಂಹರಿಸಲ್ಪಟ್ಟು, ತಮ್ಮ ತಮ್ಮ ಕರ್ಮಗಳಿಗೆ ಅನುರೂಪವಾದ ಗತಿಯನ್ನು ಹೊಂದಲು, ನಿನ್ನ ಅಕ್ಷಯ್ಯ ಕೀರ್ತಿಯು ಜಗತ್ತಿನಲ್ಲಿ ಹಬ್ಬುವದು; ಯಾಕಂದರೆ ನೀನು ಇದೇ ಈಗ ಮಹಾಯುದ್ಧಮಾಡಿ ಅದರಲ್ಲಿ ಸಾಕ್ಷಾತ್ ಮಹಾದೇವನನ್ನೂ ಪ್ರಸನ್ನೀಕರಿಸಿಕೊಂಡಿರುವೆ! ಇನ್ನು ನೀನು ಶ್ರೀ ಕೃಷ್ಣನ ಸಹಾಯದಿಂದ ಪೃಥ್ವಿಯ ಭಾರವನ್ನು ಕಡಿಮೆಮಾಡಬೇಕಾಗಿದೆ; ಆದ್ದರಿಂದ ಎಲೈ ಮಹಾಬಾಹೋ, ನನ್ನ ಈ ದಂಡಸಂಜ್ಞಕವಾದ ಅಕುಂಠಿತ ಅಸ್ತ್ರವನ್ನು ನೀನು ಗ್ರಹಣಮಾಡು. ಈ ಅಸ್ತ್ರದಿಂದ ನಿನಗೆ ಬಹುದೊಡ್ಡ ಕಾರ್ಯವನ್ನು ಸಾಧಿಸಲಿಕ್ಕೆ ಬರುವದು. ಎಂದು ಹೇಳಲು, ಅರ್ಜುನನು ಮಂತ್ರ, ಉಪಚಾರ, ಮೋಕ್ಷ (ಬಿಡುವಕ್ರಮ), ಉಪಸಂಹಾರ ಇವುಗಳೊಡನೆ, ಆ ಅಸ್ತ್ರವನ್ನು ಯಥಾವಿಧಿಯಾಗಿ ಸ್ವೀಕರಿಸಿದನು.

ಆ ಮೇಲೆ ಪಶ್ಚಿಮದಿಕ್ಕಿಗೆ ವಾಸಿಸುವ ಜಲಚರಾಧಿಪತಿಯಾದ ಮೇಘ ನೀಲವರ್ಣದ ವರುಣನು ಅರ್ಜುನನನ್ನು ಕುರಿತು—"ಎಲೈ ಆರಕ್ತವಿಶಾಲನೇತ್ರನೇ, ಇನ್ನು ನನ್ನಕಡೆಗೆ

ನೋಡು. ನಾನು ಜಲಾಧಿಪತಿ ವರುಣನಿರುವೆನು. ಅರ್ಜುನಾ, ನೀನು ಕ್ಷತ್ರಿಯರಲ್ಲಿ ಮುಖ್ಯನಿದ್ದು, ಕ್ಷಾತ್ರಧರ್ಮನಿಷ್ಠನಿರುತ್ತೀ; ಆದ್ದರಿಂದ ವರುಣದೇವತಾತ್ಮಕವಾದ ಈ ಅಕುಂಠಿತ ಪಾಶವನ್ನು ನೀನು ಅದರ ರಹಸ್ಯ-ಉಪಸಂಹಾರಗಳೊಡನೆ ಸ್ವೀಕರಿಸು. ಇದನ್ನು ತಕ್ಕೊಂಡು ನೀನು ಶತ್ರುಗಳನ್ನು ಸಂಹರಿಸತೊಡಗಿದರೆ ಪ್ರತ್ಯಕ್ಷ ಯಮನೂ ನಿನ್ನ ಕೈಯೊಳಗಿಂದ ಪಾರಾಗಿ ಹೋಗಲಾರನು. ಈ ಶಸ್ತ್ರವನ್ನು ತಕ್ಕೊಂಡು ಯುದ್ಧದಲ್ಲಿ ನೀನು ಸಂಚರಿಸಹತ್ತಿದೆಯೆಂದರೆ ಪೃಥ್ವಿಯು ನಿಃಕ್ಷತ್ರಿಯವಾಗಿ ಹೋಗುವದರಲ್ಲಿ ಸಂಶಯುವಿಲ್ಲ." ಎಂದು ಹೇಳಲು, ಅರ್ಜುನನು ವರುಣನ ಆ ಪಾಶವನ್ನು ಆದರದಿಂದ ಸ್ವೀಕರಿಸಿದನು. ತರುವಾಯು ಕುಬೇರನು ಅರ್ಜುನನನ್ನು ಕುರಿತು—ಎಲೈ ಜ್ಞಾನಸಂಪನ್ನಾ, ಮಹಾಬಲಾಢ್ಯ ಪಂಡುಪುತ್ರಾ, ಶ್ರೀಕೃಷ್ಣನ ದರ್ಶನವಾಗುವಂತೆ ನನಗೆ ನಿನ್ನ ದರ್ಶನವಾಗಿರುತ್ತದೆ. ನಿನ್ನ ಅಲಭ್ಯ ಸಮಾಗಮವಾದದ್ದರಿಂದ ನಾನು ನಿನಗೆ ಪ್ರಸನ್ನನಾಗಿದ್ದೇನೆ. ಎಲೈ ಮಹಾ ಬಾಹೋ—ಪೂರ್ವಜನ್ಮದ ದೇವನೆ—ಸನಾತನಅರ್ಜುನಾ, ಪೂರ್ವಕಲ್ಪದಲ್ಲಿ ನಮ್ಮೊಡನೆ ನೀನು ಇದ್ದದ್ದರಿಂದ ಪ್ರತಿದಿನದಲ್ಲಿಯೂ ನಿನಗೆ ಶ್ರಮವಾಗಿರುತ್ತದೆ. ಎಲೈ ಪಾರ್ಥಾ, ನಿನ್ನ ಆಕಾರದ ಮೇಲಿಂದ ನಾನು ಪ್ರತಿಜ್ಞಾಪೂರ್ವಕವಾಗಿ ಹೇಳುವದೇನೆಂದರೆ—ನೀನು ಮನುಷ್ಯರ ಹೊರತು ಬೇರೆ ಅಜಿಂಕ್ಯ ಪ್ರಾಣಿಗಳನ್ನೂ ಸೋಲಿಸುವೆ; ಆದರೂ ಈ ಉತ್ಕೃಷ್ಟವಾದ ಅಂತರ್ಧಾನವೆಂಬ ಹೆಸರಿನ ನನ್ನ ಅಸ್ತ್ರವನ್ನು ನೀನು ಸ್ವೀಕರಿಸು. ಇದರ ಯೋಗದಿಂದ ನೀನು ಧೃತರಾಷ್ಟ್ರನ ಸೈನ್ಯವನ್ನು ಸುಟ್ಟುಬಿಡಬಹುದು. ಎಲೈ ಸತ್ಯಪರಾಕ್ರಮಾ, ನಿನಗೇ ಕೊಡಬೇಕೆಂದು ಈ ಅಸ್ತ್ರವನ್ನು ನಾನು ಹೊರಗೆ ತೆಗೆದಿದ್ದೇನೆ. ಇದು ಬಲ-ತೇಜಸ್ಸು-ಕಾಂತಿ ಇವನ್ನು ಕೊಡತಕ್ಕದ್ದಾಗಿದ್ದು, ಶತ್ರುಗಳನ್ನು ನಿದ್ರಿತರನ್ನಾಗಿ ಮಾಡುವಂತಹದೂ, ಅವರನ್ನು ನಾಶಮಾಡುವದೂ ಆಗಿರುತ್ತದೆ. ನೀನು ಮೇರುವಿನಂತೆ ಗೌರವಸಂಪನ್ನನಾಗಿರುವದರಿಂದ ಈ ಅಸ್ತ್ರವನ್ನು ಧರಿಸಲು ಯೋಗ್ಯನಾಗಿರುತ್ತೀ" ಎಂದು ಹೇಳಿದಕೂಡಲೆ ಮಹಾಬಾಹು ಕುರುನಂದನ ಅರ್ಜುನನು, ಕುಬೇರದೇವತಾಕವಾದ ಆ ಅಂತರ್ಧಾನನಾಮಕ ಅಸ್ತ್ರವನ್ನು ಯಥಾವಿಧಿಯಾಗಿ ಸ್ವೀಕರಿಸಿದನು. ಆ ಮೇಲೆ ಮೇಘ ಅಥವಾ ದುಂದುಭಿಯಂತೆ ಗಂಭೀರಧ್ವನಿಯುಳ್ಳ ದೇವಾಧಿದೇವ ಇಂದ್ರನು, ಕ್ಲೇಶವಾಗದೆ ಕರ್ಮಮಾಡುವ ಅರ್ಜುನನನ್ನು ಕುರಿತು ಆತನಿಗೆ ಹಿತವಾಡುವದಕ್ಕಾಗಿ ಸೌಮ್ಯವಾಣಿಯಿಂದ—ಎಲೈ ಮಹಾಬಾಹೋ ಕುಂತೀಪುತ್ರಾ, ನೀನು ಪೂರ್ವಜನ್ಮದ ಈಶ್ವರನಿದ್ದು, ಸಾಂಪ್ರತದಲ್ಲಿಯೂ ನಿನಗೆ ಉತ್ಕೃಷ್ಟಪ್ರಕಾರದ ಸಿದ್ಧಿಯು ಪ್ರಾಪ್ತವಾಗಿರುವದಲ್ಲದೆ, ನೀನು ಸಾಕ್ಷಾತ್ ದೇವಸ್ವರೂಪನೇ ಆಗಿಹೋಗಿರುತ್ತೀ. ಎಲೈ ಶತ್ರುನಾಶಕಾ, ನೀನು ದೇವತೆಗಳ ಬಹುದೊಡ್ಡ ಕಾರ್ಯವನ್ನು ಮಾಡಲೇಬೇಕಾಗಿರುವದರಿಂದ ಅದಕ್ಕಾಗಿ ನೀನು ಸ್ವರ್ಗಕ್ಕೆ ಬರಬೇಕಾಗುವದು; ಆದ್ದರಿಂದ ನೀನು ಹಾಗೆಮಾಡಲು ಸಿದ್ಧನಾಗು. ನಿನ್ನ ಸಲುವಾಗಿ ಮಾತಲಿನಾಮಕ ಸಾರಥಿಯುಳ್ಳ ರಥವು ಪೃಥ್ವಿಯುಮೇಲೆ ಬರುವದು. ಅದರೊಳಗಿಂದ ನೀನು ಸ್ವರ್ಗಕ್ಕೆ ಬಂದೆಯೆಂದರೆ, ಎಲೈ ಕುರುಕುಲೋತ್ಪನ್ನಾ, ನಾನು ಅಲ್ಲಿ ನಿನಗೆ ದಿವ್ಯಾಸ್ತ್ರಗಳನ್ನು ಕೊಡುವೆನು; ಎಂದು

ಹೇಳಿದನು. ಹೀಗೆ ಪರ್ವತಶಿಖರದಮೇಲೆ ಆದ ಲೋಕಪಾಲರದರ್ಶನಕ್ಕಾಗಿ ಅರ್ಜುನನು ಆಶ್ಚರ್ಯಪಡುತ್ತ, ವಾಣಿ, ಜಲ, ಪುಷ್ಪ ಇವುಗಳ ಯೋಗದಿಂದ ಆ ದೇವತೆಗಳನ್ನು ಯಥಾವಿಧಿಯಾಗಿ ಸತ್ಕರಿಸಿದನು. ಆಗ ಇಚ್ಛಾಭಿಗಾಮಿಗಳಾದ ಆ ಜ್ಞಾನಸಂಪನ್ನ ದೇವತೆಗಳೆಲ್ಲ ಅರ್ಜುನನನ್ನು ಸತ್ಕರಿಸಿ ತಮ್ಮ ತಮ್ಮ ಮಾರ್ಗಗಳಿಂದ ಹೊರಟುಹೋದರು. ಆ ಮೇಲೆ ಪುರುಷಶ್ರೇಷ್ಠ ಅರ್ಜುನನು ತನ್ನನ್ನು ಕೃತಕೃತ್ಯನೆಂದು ಭಾವಿಸಿ, ತನ್ನ ಮನೋರಥವು ಸಫಲವಾಯಿತೆಂದು ಸಂತೋಷಪಟ್ಟನು. ಮುಂದೆ ಇಂದ್ರನ ಸಾರಥಿಯಾದ ಮಾತಲಿಯು ರಥವನ್ನು ತರಲು, ಅರ್ಜುನನು ಅದರಲ್ಲಿ ಕುಳಿತು ಸ್ವರ್ಗಕ್ಕೆಹೋಗಿ ನಿವಾತಕವಚರನ್ನು ಸಂಹರಿಸಿ, ಇಂದ್ರನಿಂದ ದಿವ್ಯಾಸ್ತ್ರಗಳನ್ನು ಸಂಪಾದಿಸಿದನು. ಇದಕ್ಕೆಲ್ಲ ಸರ್ವೋತ್ತಮನಾದ ಭಗವಾನ್ ಸದಾಶಿವನ ಕೃಪೆಯೇ ಕಾರಣವಾಯಿತು.

ಈ ಮೇರೆಗೆ ಸಿದ್ಧಮುನಿಗಳು ವಿವೇಕಶೀಲನನ್ನು ಕುರಿತು ಶಬರಶಂಕರವಿಲಾಸವನ್ನು ಹೇಳಲು, ವಿವೇಕಶೀಲನು ಸಂತೋಷಪಟ್ಟು ಸಿದ್ಧಮುನೀಶ್ವರನನ್ನು ಕುರಿತು— ಗುರುವರ್ಯಾ, ಭಗವಾನ್ ಸದಾಶಿವನ ಭಕ್ತವಾತ್ಸಲ್ಯದ ಚರಿತ್ರವನ್ನು ಕೇಳಿ ಪರಮಾನಂದವಾಯಿತು; ಆದರೆ ದೇವೇಂದ್ರನು ಅರ್ಜುನನ ದೃಢನಿಶ್ಚಯಕ್ಕೆ ಮೆಚ್ಚಿದ್ದಲ್ಲದೆ, ಅವನು ತನ್ನ ಅಂಶಸಂಭವನಿದ್ದು, ತಾನು ಮೊದಲು ಅಸ್ತ್ರವನ್ನು ಕೊಡದೆ ಭಗವಾನ್ ಶಂಕರನನ್ನು ಪ್ರಸನ್ನೀಕರಿಸಿಕೊಳ್ಳೆಂದು ಅರ್ಜುನನಿಗೆ ಯಾಕೆ ಹೇಳಿದನು? ಪೂರ್ವ ಜನ್ಮದಲ್ಲಿ ಅರ್ಜುನನು ದೇವತೆಯಾಗಿದ್ದರೂ ಈಗ ಮನುಷ್ಯನಾಗಿ ಹುಟ್ಟಿರಲು, ಸಾಕ್ಷಾತ್ ಪರಮೇಶ್ವರನ ಹಾಗು ಇಂದ್ರಾದಿ ಲೋಕಪಾಲರ ದರ್ಶನ ಹೊಂದಲು ಆತನು ಹ್ಯಾಗೆ ಪಾತ್ರನಾದನು? ಅರ್ಜುನನಿಗಿಂತಲೂ ಧರ್ಮ–ಭೀಮರು ಕಡಿಮೆ ಯೋಗ್ಯತೆಯವರಾಗಿರದಿದ್ದರೂ ಅರ್ಜುನನಿಗೇ ಈ ಈಶ್ವರ ದರ್ಶನ ಯೋಗವು ಯಾಕೆ ಪ್ರಾಪ್ತವಾಯಿತು? ಮತ್ತು ಮನುಷ್ಯದೇಹದಿಂದ ಆತನು ಸ್ವರ್ಗಕ್ಕೆ ಹೋದಬಗೆಹೇಗೆ? ಎಂಬದನ್ನು ವಿವರಿಸಿ ಹೇಳುವ ಕೃಪೆಯಾಗಬೇಕು. ಸದ್ಗುರುನಾಥಾ, ಈ ರಹಸ್ಯವನ್ನು ಬಿಚ್ಚಿ ಹೇಳಲು ನಿನ್ನಹೊರತು ಅನ್ಯರು ಸಮರ್ಥರಲ್ಲವು, ಎಂದು ಕೇಳಿಕೊಳ್ಳಲು ಸಿದ್ಧಮುನೀಶ್ವರನು— ವಿವೇಕಶೀಲಾ, ಇಂದ್ರನು ಅರ್ಜುನನ ದೃಢನಿಶ್ಚಯಕ್ಕೆ ಮೆಚ್ಚಿದ್ದರೂ, ಹಾಗು ಅರ್ಜುನನು ತನ್ನ ಮಗನಾಗಿದ್ದರೂ ಸರ್ವಾಧಾರನಾದ ಭಗವಾನ್ ಸದಾಶಿವನ ಪ್ರಸನ್ನತೆಯಹೊರತು ಅನ್ಯರು ಪ್ರಸನ್ನರು ಹ್ಯಾಗಾದಾರು ಹೇಳು? ಇಂದ್ರಾದಿ ದೇವತೆಗಳೆಲ್ಲ ಭಗವಾನ್ ಶಂಕರನ ಆಧೀನರು. ಅವರೆಲ್ಲರೂ ಆ ಪಿನಾಕಪಾಣಿಯ ಶಾಸನಕ್ಕೊಳಗಾಗಿಯೇ ತಮ್ಮ ತಮ್ಮ ಅಧಿಕಾರಗಳನ್ನು ನಡಿಸುತ್ತಿರುವರು. ಗಿಡದ ಬಡ್ಡೆಗೆ ನೀರು ಹಾಕಿದರೆ ಅದರ ಹರಿಕೆಟೊಂಬೆಗಳಿಗೆಲ್ಲ ನೀರು ತಾನೇ ಮುಟ್ಟುವಂತೆ, ತಪಸ್ಸಿನಿಂದ ಸರ್ವಾಧಾರನಾದ ಭಗವಾನ್ ಶಂಕರನ ಪ್ರಸನ್ನತೆ ಒಂದು ಪಡೆದರೆ ಎಲ್ಲರೂ ಪ್ರಸನ್ನರಾಗುವದುಸ್ವಾಭಾವಿಕವು. ಅಂತೇ ಸರ್ವಾಧಾರನಾದ ಶಂಕರನು ಪ್ರಸನ್ನನಾಗಿ ಪಾಶುಪತಾಸ್ತ್ರವನ್ನು ಕೊಟ್ಟಕೂಡಲೆ, ವರುಣ, ಕುಬೇರ, ಯಮ, ಇಂದ್ರರು ಬಡೆ

ಬಡ ತಮ್ಮ ತಮ್ಮ ಅಸ್ತ್ರಗಳನ್ನು ಅರ್ಜುನನಿಗೆ ತಾವಾಗಿ ಕೊಟ್ಟುಬಿಟ್ಟರು. ಸರ್ವೋತ್ತಮನೂ, ಸರ್ವಾಧಾರನೂ ಆದ ಭಗವಾನ್ ರುದ್ರನ ಕೃಪೆ ಸಂಪಾದಿಸಿದ ಬಳಿಕ ಅನ್ಯರ ಕೃಪೆಯು ಆಗದೆ ಹ್ಯಾಗಿದ್ದೀತು? ವಿವೇಕಶೀಲಾ, ಅರ್ಜುನನು ಮನುಷ್ಯನಾಗಿದ್ದು ಪ್ರತ್ಯಕ್ಷ ದೇವತೆಗಳ ದರ್ಶನ ಹೊಂದಲು, ಹ್ಯಾಗೆ ಪಾತ್ರನಾದನೆಂದು ನೀನು ಕೇಳುವೆ; ಆದರೆ, ಭಗವಾನ್ ವ್ಯಾಸರ ಮಂತ್ರೋಪದೇಶದ ಪ್ರಭಾವದಿಂದ ಅಂಥ ಸಾಮರ್ಥ್ಯವು ಅರ್ಜುನನಲ್ಲಿ ಬಂದಿತೆಂದು ತಿಳಿದುಕೋ. ದೇವತೆಗಳು ಮಂತ್ರಾಧೀನರು. ಮಂತ್ರಗಳು ಬ್ರಾಹ್ಮಣಾಧೀನಗಳು; ಆದ್ದರಿಂದ ವ್ಯಾಸರ ಮಂತ್ರ ಸಾಮರ್ಥ್ಯದಿಂದ ಅರ್ಜುನನಿಗೆ ಅಂಥ ಯೋಗ್ಯತೆಯು ಪ್ರಾಪ್ತವಾಯಿತು. "**दैवाधीनं जगत्सर्वं मंत्राधीनं तु दैवतं । तन्मंत्रा ब्राह्मणाधीना ब्राह्मणो मम दैवतं॥**" ಎಂಬ ಉಕ್ತಿಯನ್ನು ಲಕ್ಷ್ಯದಲ್ಲಿಡು. ವಿವೇಕಶೀಲಾ, ಬ್ರಾಹ್ಮಣರೆಂದರೆ ನಿಜವಾದ ಬ್ರಾಹ್ಮಣರಲ್ಲದೆ ಜಾತಿಮಾತ್ರ ಬ್ರಾಹ್ಮಣರಲ್ಲ. ಆಯಾ ಮತಗಳ ಸದ್ಗುರೂತ್ತಮರ ಮಂತ್ರಗಳಲ್ಲಿ ದೇವತೆಗಳನ್ನು ಪ್ರತ್ಯಕ್ಷಗೊಳಿಸುವ ಸಾಮರ್ಥ್ಯವಿರುತ್ತದೆಂಬದನ್ನು ಮರೆಯಬೇಡ. ಅಂಥ ಮಂತ್ರಸಿದ್ಧಿಯೇ ಅರ್ಜುನನಲ್ಲಿ ವಿಲಕ್ಷಣ ಸಾಮರ್ಥ್ಯವನ್ನುಂಟುಮಾಡಿತು! ಇನ್ನು ಧರ್ಮ-ಭೀಮರನ್ನು ಬಿಟ್ಟು ಅರ್ಜುನನಿಗೇ ಈ ಯೋಗವು ಯಾಕೆ ಒದಗಿತೆಂದು ನೀನು ಕೇಳುವೆ? ಆದರೆ ಮಹಾತ್ಮರ ಇಚ್ಛೆಯು! ಶ್ರೀ ವೇದವ್ಯಾಸರು ಆತನಿಂದಲೇ ಈ ಕಾರ್ಯವಾಗುವದೆಂದು ಬೆರಳುಮಾಡಿ ತೋರಿಸಿದ್ದರಿಂದ ಆತನೇ ಅದಕ್ಕೆ ಸತ್ಪಾತ್ರನೆಂದು ಹೇಳಬೇಕಾಗುವದು. ಅದರಂತೆ, ಅರ್ಜುನನು ಪೂರ್ವದಲ್ಲಿ "ನರ" ಎಂಬ ಋಷಿಶ್ರೇಷ್ಠನಿದ್ದನೆಂಬ ಮಾತು ನಿನಗೆ ಗೊತ್ತಿರುತ್ತದೆ. ಅರ್ಜುನನು ಮನುಷ್ಯ ದೇಹದಿಂದ ಸ್ವರ್ಗಕ್ಕೆ ಹೋಗಲಿಕ್ಕೆ ಭಗವಾನ್ ಶಂಕರನ ಆಜ್ಞೆಯೇ ಕಾರಣವು. "ನೀನು ಸ್ವರ್ಗಕ್ಕೆ ಹೋಗು." ಎಂದು ಶಂಕರನು ಅಜ್ಞಾಪಿಸಿದ್ದರಿಂದ ಅರ್ಜುನನು ಸ್ವರ್ಗಕ್ಕೆ ಹೋಗಲು ಸಮರ್ಥನಾದನು. ಭಗವದಿಚ್ಛೆಯಿಂದ ಜಗತ್ತಿನ ಸೃಷ್ಟಿ-ಸ್ಥಿತಿ-ಲಯಗಳಾಗುತ್ತಿರುವಾಗ ಅಂಥ ಭಗವದಿಚ್ಛೆಯಿಂದ ಅರ್ಜುನನು ಮನುಷ್ಯ ದೇಹದಿಂದ ಸ್ವರ್ಗಕ್ಕೆ ಹೋದದ್ದೇನಾಶ್ಚರ್ಯವು! ವಿವೇಕಶೀಲಾ, ಈ ಜಗತ್ತಿನ ಕಾರ್ಯಗಳೆಲ್ಲ ಈಶ್ವರೀತಂತ್ರದಿಂದಲೇ ಆಗುತ್ತವೆಂಬದನ್ನೂ, ಜಗತ್ತಿನ ಕಲ್ಯಾಣಕ್ಕಾಗಿ ಈಶ್ವರನೇ ಸಿದ್ಧರೂಪತಾಳಿ ಸದ್ಗುರುರೂಪದಿಂದ ಸಂಚರಿಸುವನೆಂಬದನ್ನೂ ಗಟ್ಟಿಮುಟ್ಟಿಯಾಗಿ ತಿಳಿದುಕೊಂಡು ಅಂಥವರ ಸಮಾಗಮಕ್ಕಾಗಿ ನೀನು ಯಾವಾಗಲೂ ಆತುರಪಡುತ್ತಿರು.



# ೮ ನೆ ಯ ಸುಧಾತರಂಗ.



## ಜಗತ್ಕಂಟಕ ಹರಲೀಲೆ!

### ಹಾಲಾಹಲ ವಿಷಪಾನ.

(ಭಾಗವತ—ಭಾರತ.)

ಈ ಮೇರೆಗೆ ಸಿದ್ಧ ಮುನೀಶ್ವರರು ಶಬರಶಂಕರಲೀಲೆಯನ್ನು ರಹಸ್ಯದೊಡನೆ ನಿರೂಪಿಸಿದ್ದರಿಂದ ವಿವೇಕಶೀಲಾದಿ ಶಿಷ್ಯರು ಸಂತೋಷಪಟ್ಟರು. ಅವರು ಮತ್ತೆ ಮುನೀಶ್ವರನನ್ನು ಕುರಿತು—ಗುರುದೇವಾ, ಹೀಗೆ ಸರ್ವೋತ್ತಮನಾದ ಭಗವಾನ್ ಸದಾಶಿವನು ಭಕ್ತರ ಇಷ್ಟಾರ್ಥಗಳನ್ನು ಪೂರಯಿಸಲು ಪರಮ ಸಮರ್ಥನಾಗಿದ್ದರೂ ತಾನು ಅತ್ಯಂತ ವೈರಾಗ್ಯಶೀಲನಾಗಿ, ಯಾತಕ್ಕೂ ಗತಿಯಿಲ್ಲದವನಂತೆ ಶ್ಮಶಾನವಾಸಿಯಾಗಿರುವನಲ್ಲ! ಇದರ ರಹಸ್ಯವೇನು? ಬ್ರಹ್ಮಾದಿ ದೇವತೆಗಳ ನಿಯಾಮಕನೂ, ಸರ್ವತಂತ್ರಸ್ವತಂತ್ರನೂ ಆದ ಪ್ರಭುವಿಗೆ ಈ ಕಠಿಣತರ ವೈರಾಗ್ಯವೇಕೆ? ಎಂದು ಕೇಳಲು, ಸಿದ್ಧಮುನೀಶ್ವರರು—ಶಿಷ್ಯೋತ್ತಮರೇ, ಭಗವಾನ್ ಸದಾಶಿವನ ಕಠಿಣತರ ವೈರಾಗ್ಯವು, ಜಗತ್ತಿಗೆ ನಿಜವಾದ ವೈರಾಗ್ಯದ ಸ್ವರೂಪವನ್ನು ತೋರಿಸುವದಕ್ಕಾಗಿಯೇ ಇರುತ್ತದೆಂದು ತಿಳಿದುಕೊಳ್ಳಿರಿ. ಸದಾ ಸ್ವಾನಂದ ಸಾಮ್ರಾಜ್ಯದಲ್ಲಿ ರಮಮಾಣನಾದ ಆ ಭಗವಂತನಿಗೆ ಕ್ಷುದ್ರ ವಿಷಯವ್ಯವಹಾರವು ಯಾತಕ್ಕಿದ್ದೀತು? ಆತನ ಈ ವೈರಾಗ್ಯವು ಆತನ ಆತ್ಮನಿಷ್ಠೆಯ ನಿರಂತರತೆಯನ್ನು ತೋರಿಸುವದು. "ಯಾಕೊಲ್ಲ, ಇಲ್ಲದಕ್ಕೊಲ್ಲ" ಎಂಬ ಲೋಕೋಕ್ತಿಯಂತೆ, ಅಭಾವ ವೈರಾಗ್ಯವು ವೈರಾಗ್ಯವೇ ಅಲ್ಲ. ಜಗತ್ಕಾರಣನಾದ ಪರಮೇಶ್ವರನ ವೈರಾಗ್ಯವೇ ವೈರಾಗ್ಯವು. ದೇವತೆಗಳಲ್ಲಿಯೇ ಆಗಲಿ, ಮನುಷ್ಯರಲ್ಲಿಯೇ ಆಗಲಿ, ಕೆಲವರು ಒಳಗೆ ವಿಷಯಾಸಕ್ತರಿದ್ದು ಹೊರಗೆ ವೈರಾಗ್ಯವನ್ನು ನಟಿಸಬಹುದು; ಕೆಲವರು ಒಳಗೆ ವಿರಾಗಿಗಳಾಗಿದ್ದು ಹೊರಗೆ ವಿಷಯಾಸಕ್ತರಂತೆ ತೋರಿಸಬಹುದು ; ಆದರೆ ಹೊರಗೂ ಒಳಗೂ ವೈರಾಗ್ಯವನ್ನು ತಾಳಿರುವ ವಿರಾಗಿಶ್ರೇಷ್ಠನೆಂದರೆ ಭಗವಾನ್ ಶಂಕರನೊಬ್ಬನೇ ಸರಿ! ಹೀಗಿದ್ದರೂ ಆ ಪರಮಾತ್ಮನು ಅಪಾರವಾದ ದಯಾಸಾಗರನು. ಅಲ್ಪಕ್ಕಾಗಿ ಮಹತ್ಫಲವನ್ನು ಕೊಡುವ ಕೊಡಗೈಧೊರೆಯು ಈತನೊಬ್ಬನೇ ಸರಿ. ಕೊಡುವ ಭರದಲ್ಲಿ ಈ ದಯಾಸಾಗರನು ಪಾತ್ರಾಪಾತ್ರತೆಯನ್ನೂ ನೋಡದವನಾಗಿರುವನು. ಅದಕ್ಕಾಗಿಯೇ ಈತನಿಗೆ ಭೋಲಾನಾಥನೆಂದು ಭಕ್ತರು ಅನ್ನುವರು. ಹೀಗೆ ಭಕ್ತರ ಭಕ್ತಿಗೆ ಹುಚ್ಚನಾಗಿ ಅವರ ಇಷ್ಟಾರ್ಥಗಳನ್ನು ಪೂರಯಿಸುವನಲ್ಲದೆ, ಶರಣು ಹೋದವರ ಸಂಕಟಗಳನ್ನು ಪರಿಹರಿಸುವಲ್ಲಿಯಂತು ಈತನು ಅತ್ಯಂತ ಧುರೀಣನಾಗಿರುವನು! ವಿವೇಕಶೀಲಾ, ಹಿಂದಕ್ಕೆ ದೇವದೈತ್ಯರು ಅಮೃತಪ್ರಾಪ್ತಿಗಾಗಿ ಸಮುದ್ರಮಥನಮಾಡಿದಾಗ ಹುಟ್ಟಿದ ಜಗತ್ಸಂಹಾರಕ

ಹಾಲಾಹಲ ವಿಷವನ್ನು ಸ್ವೀಕರಿಸಿ, ಜಗತ್ತಿನ ಸಂಕಟವನ್ನು ಪರಿಹರಿಸಲು ಭಗವಾನ್ ಶಂಕರನಲ್ಲದೆ ಯಾರು ಸಮರ್ಥರಾದರು? ಸಮುದ್ರಮಥನಕಾಲದಲ್ಲಿ ಐರಾವತ, ಕಾಮಧೇನು, ಕಲ್ಪವೃಕ್ಷ, ಚಿಂತಾಮಣಿ, ಮಹಾಲಕ್ಷ್ಮಿ, ಪಾರಿಜಾತ ಮೊದಲಾದ ಉತ್ತಮೋತ್ತಮ ಪದಾರ್ಥಗಳು ಹುಟ್ಟಿದಾಗ ನನಗೆ ನಿನಗೆಂದು ಮುಗಿಬಿದ್ದ ದೇವತೆಗಳು, ಹಾಲಾಹಾಲ ವಿಷವು ಹುಟ್ಟಿದಾಗ ದಿಕ್ಕುಗೆಟ್ಟು ಓಡಿಯೇಕೆ ಹೋದರು? ನಮ್ಮ ಪ್ರಭು ಸದಾಶಿವನು ಕೊಡುಗೈಯ ಹುಚ್ಚುದೊರೆಯಷ್ಟೇ ಅಲ್ಲ, ಜಗತ್ಸಂಕಟಹರಣದ ವಿಷಯದಲ್ಲಿ ಮೈಮರೆತ ಪರಮಸಮರ್ಥನಾಗಿರುವನು. ಸ್ವಾರ್ಥದೃಷ್ಟಿಯಿಂದ ವಿಷಕ್ಕೆ ವಿಷವೆಂದೂ, ಅಮೃತಕ್ಕೆ ಅಮೃತವೆಂದೂ ತಿಳಿದು, ವಿಷವನ್ನು ಪರಿತ್ಯಜಿಸಿ ಅಮೃತವನ್ನು ಪರಿಗ್ರಹಿಸುವ ಜಾಣತನವು ಎಲ್ಲಿಯಾದರೂ ಕಣ್ಣಿಗೆ ಬೀಳಬಹುದು; ಆದರೆ ಅಮೃತ–ವಿಷಗಳೆಂಬ ತಾರತಮ್ಯಕ್ಕೊಳಗಾಗದೆ ಲೋಕಕಲ್ಯಾಣವನ್ನಷ್ಟು ನೋಡುವ ನಿಸ್ವಾರ್ಥ ಬುದ್ಧಿಯ ಕಾರುಣ್ಯವು ಮಹಾಸಮರ್ಥನಾದ ನಮ್ಮ ಮಹಾದೇವನಲ್ಲಲ್ಲದೆ ಮತ್ತೊಬ್ಬರಲ್ಲಿಲ್ಲ, ಎಂದು ಹೇಳಲು, ವಿವೇಕಶೀಲನು—ಸದ್ಗುರುನಾಥಾ, ನಮಗೆ ಆ ಭಗವಂತನ ವಿಷಪಾನಲೀಲೆಯನ್ನು ಕೇಳುವ ಇಚ್ಛೆಯಾಗಿರುವದರಿಂದ ಅದನ್ನು ನಿರೂಪಿಸಿ ನಮ್ಮನ್ನು ಕೃತಾರ್ಥರನ್ನಾಗಿ ಮಾಡಬೇಕು, ಎಂದು ಪ್ರಾರ್ಥಿಸಿದನು.

ಶಿಷ್ಯನ ಈ ಪ್ರಶ್ನವನ್ನು ಕೇಳಿ ಸಿದ್ಧಮುನಿಗಳು ಆತನನ್ನು ಕುರಿತು—ವಿವೇಕಶೀಲಾ, ನಿನ್ನ ಪ್ರಶ್ನದಿಂದ ಶಿವಚರಿತ್ರ ಕಥನಕ್ಕೆ ಆಸ್ಪದವು ದೊರೆಯಿತು; ಬಹಳಸಂತೋಷವು-ಆರನೆಯ ಚಾಕ್ಷುಷ ಮನ್ವಂತರದಲ್ಲಿ ಒದಗಿದ ಸಮುದ್ರಮಂಥನದ ವೃತ್ತಾಂತವನ್ನು ಹೇಳುವೆನು ಕೇಳು. ದುರ್ವಾಸರ ಶಾಪದಿಂದ ಇಂದ್ರನು ಐಶ್ವರ್ಯಹೀನನಾಗಲು, ದೈತ್ಯರು ಅವನಮೇಲೆ ದಂಡೆತ್ತಿಬಂದರು. ಆ ಯುದ್ಧದಲ್ಲಿ ದೈತ್ಯರು ಎಷ್ಟೋಜನ ದೇವತೆಗಳ ಪ್ರಾಣಹರಣಮಾಡಿದರು. ಆಗ ಇಂದ್ರನು ಅವರನ್ನು ಬದುಕಿಸುವ ಉಪಾಯವನ್ನು ಕಾಣದೆ ಉಳಿದ ದೇವತೆಗಳನ್ನು ಕೂಡಿಕೊಂಡು ಬ್ರಹ್ಮದೇವನಬಳಿಗೆ ಹೋದನು. ಆಗ ಬ್ರಹ್ಮದೇವನು ಆಲೋಚಿಸಿ, ವಿಷ್ಣುವಿಗೆ ಶರಣು ಹೋಗಬೇಕೆಂದು ನಿಶ್ಚಯಿಸಿ ಎಲ್ಲ ದೇವತೆಗಳನ್ನು ಕುರಿತು—ದೇವತೆಗಳಿರಾ, ಈಗಿನ ಪ್ರಸಂಗದಲ್ಲಿ ಪ್ರಾಣಿಗಳ ಉತ್ಕರ್ಷಕ್ಕಾಗಿ ಭಗವಂತನು ಸತ್ವಗುಣದ ಸ್ವೀಕಾರಮಾಡಿ ಸೃಷ್ಟಿಯನ್ನು ರಕ್ಷಿಸಬೇಕಾಗಿರುವದರಿಂದ ನಾವು ಆತನಿಗೇ ಶರಣುಹೋಗೋಣ, ಎಂದು ಹೇಳಲು, ಅವರೆಲ್ಲರೂ ಕ್ಷೀರಸಮುದ್ರಕ್ಕೆ ಹೋಗಿ ಭಗವಂತನ ಸ್ತೋತ್ರಮಾಡಿದರು. ದೇವತೆಗಳ ಸ್ತೋತ್ರದಿಂದ ಸಂತುಷ್ಟನಾದ ಭಗವಂತನು ಪ್ರತ್ಯಕ್ಷನಾಗಲು, ಬ್ರಹ್ಮದೇವನು ಕೈಜೋಡಿಸಿ—ಭಗವಂತಾ, ನಿನ್ನ ಅಚಿಂತ್ಯಶಕ್ತಿಸ್ವರೂಪಕ್ಕೆ ನಮ್ಮ ಅನಂತ ನಮಸ್ಕಾರಗಳು. ಘಟದ ಆದಿ, ಮಧ್ಯ, ಅಂತಗಳು ಮೃತ್ತಿಕೆಯಾಗಿರುವಂತೆ, ಈ ಬ್ರಹ್ಮಾಂಡದ ಆದಿ–ಮಧ್ಯ–ಅಂತವು ನೀನೇ ಆಗಿರುತ್ತೀ. ಅಗ್ನಿಯಿಂದ ಕಿಡಿಗಳು ಉತ್ಪನ್ನವಾಗುವಂತೆ, ನಾನು, ಶಂಕರನು, ಬೇರೆ ದೇವತೆಗಳು, ಪ್ರಜಾಪತಿಗಳು ನಿನ್ನ ಅಂಶದಿಂದಲೇ ಉತ್ಪನ್ನರಾಗಿರುವೆವು; ಅದ್ದರಿಂದ ಪ್ರಾಣಿಗಳಾದ ನಮ್ಮ ಕಲ್ಯಾಣದ ಮಾರ್ಗವನ್ನು ನೀನೇ ತೋರಿಸು, ಎಂದು ಸ್ತೋತ್ರ

ಮಾಡಲು, ಭಗವಂತನು ಅವರನ್ನು ಕುರಿತು ಗಂಭೀರವಾಣಿಯಿಂದ—ದೇವತೆಗಳಿರಾ, ನಿಮ್ಮ ಕಲ್ಯಾಣಕ್ಕಾಗಿ ನಾನೊಂದು ಹಂಚಿಕೆಯನ್ನು ಹೇಳುವೆನು, ಅದರಂತೆ ಸಂಶಯ ರಹಿತರಾಗಿ ಮಾಡಿರಿ; ಅಂದರೆ ನಿಮ್ಮ ಕಲ್ಯಾಣವಾಗುವದು. ಈಗ ದೈತ್ಯ-ದಾನವರ ಮೇಲೆ ಕಾಲನ ಪೂರ್ಣಕೃಪೆಯಿರುವದರಿಂದ ನೀವು ಮಹತ್ಕಾರ್ಯವನ್ನು ಸಾಧಿಸಬೇಕಾದರೆ ಅವರೊಡನೆ ಸ್ನೇಹಬೆಳಸಿರಿ; ಆ ಮೇಲೆ ಅವರನ್ನು ಕೂಡಿಕೊಂಡು ಮೃತರನ್ನೂ ಸಜೀವಗೊಳಿಸುವ ಅಮೃತವನ್ನು ಸಂಪಾದಿಸುವ ಯತ್ನಮಾಡಿರಿ- ಮೊದಲು ವಲ್ಲಿ, ತೃಣ, ಲತಾ, ಓಷಧಿಗಳನ್ನು ತಂದು ಕ್ಷೀರಸಮುದ್ರದಲ್ಲಿ ಹಾಕಿರಿ. ಆ ಮೇಲೆ ಮಂದರ ಪರ್ವತದ ಕಡಗೋಲುಮಾಡಿ, ವಾಸುಕಿ ಸರ್ಪದ ಹಗ್ಗದಿಂದ, ದೇವತೆಗಳು ಒತ್ತಟ್ಟಿಗೆ, ದೈತ್ಯರು ಒತ್ತಟ್ಟಿಗೆ ಹಿಡಿದು ನಿಂತು ಮಂಥನಮಾಡಿರಿ; ಅಂದರೆ ದೈತ್ಯರು ಕ್ಲೇಶಪಡುವವರೂ, ನೀವು ಫಲಗ್ರಾಹಿಗಳೂ ಆಗುವಿರಿ. ದೇವತೆಗಳಿರಾ, ಈ ಕಾಲದಲ್ಲಿ ದೈತ್ಯರು ಹೇಳಿದಹಾಗೆ ನೀವು ಕೇಳಿರಿ; ಅವರಮಾತು ಒಂದೂ ತೆಗೆದುಹಾಕಬೇಡಿರಿ; ಅವರ ವಿರುದ್ಧ ಯಾವ ಮಾತೂ ಆಡಬೇಡಿರಿ. ಸಮುದ್ರಮಂಥನಮಾಡುತ್ತಿರುವಾಗ ಕಾಲಕೂಟ ವಿಷವು ಹೊರಡಬಹುದು, ಅದಕ್ಕೆ ಹೆದರಬೇಡಿರಿ; ಮತ್ತು ಬೇರೆ ವಸ್ತುಗಳಿಗಾಗಿ ಕಾಮ-ಕ್ರೋಧ-ಲೋಭಗಳನ್ನು ಪ್ರಕಟಮಾಡಬೇಡಿರಿ; ಅಂದರೆ ನಿಮ್ಮ ಮನೋರಥವು ಪೂರ್ಣವಾಗುವದು, ಎಂದು ಹೇಳಿ ಭಗವಂತನು ಗುಪ್ತನಾದನು.

ಬಳಿಕ ಬ್ರಹ್ಮದೇವನ ಹೊರತು ಉಳಿದ ಇಂದ್ರಾದಿ ದೇವತೆಗಳು ನಿಶ್ಶಸ್ತ್ರರಾಗಿ ದೈತ್ಯರಾಜನಾದ ಬಲಿಯ ಬಳಿಗೆ ಹೋದರು. ಆಗ ದೈತ್ಯರು ಅವರೊಡನೆ ಕಾದಲನುವಾಗಲು, ಧರ್ಮಜ್ಞನೂ, ಉದಾರನೂ ಆದ ಬಲಿಯು ತಮ್ಮವರನ್ನು ತಡೆದು ಇಂದ್ರಾದಿದೇವತೆಗಳನ್ನು ಬರಮಾಡಿಕೊಂಡನು. ಆಗ ಇಂದ್ರನು ಭಗವಂತನ ಹೇಳಿಕೆಯಂತೆ ಆದರಯುಕ್ತ ಮಧುರಭಾಷಣದಿಂದ ಅಮೃತಪ್ರಾಪ್ತಿಯ ಪ್ರಸಕ್ತಿಯನ್ನು ದೈತ್ಯರಮುಂದೆ ತೆಗೆದನು. ಆ ಮಾತು ಬಲಿಯೇ ಮೊದಲಾದ ಯಾವತ್ತು ದೈತ್ಯವೀರರಿಗೆ ಒಪ್ಪಿಗೆಯಾಯಿತು. ಆ ಮೇಲೆ ಅವರೆಲ್ಲರೂ ಕೂಡಿ ಮಂದರಪರ್ವತವನ್ನು ಬಲಾತ್ಕಾರದಿಂದ ಕಿತ್ತುಕೊಂಡು ಕ್ಷೀರಸಮುದ್ರದಕಡೆಗೆ ಹೊತ್ತುಕೊಂಡು ಬರುತ್ತಿರಲು, ನಡುವೇ ಕೈಸೋತು ಅವರು ಮುಂದಕ್ಕೆ ಒಂದು ಹೆಜ್ಜೆಯನ್ನೂ ಇಡಲಾರದೆ ಪರ್ವತವನ್ನು ಕೆಳಗೆ ಇಟ್ಟು ಬಿಟ್ಟರು. ಆಗ ಎಷ್ಟೋ ದೇವ-ದೈತ್ಯರು ಪರ್ವತದ ಬುಡದಲ್ಲಿ ಸಿಕ್ಕು ಸತ್ತರು. ಹೀಗೆ ಇವರು ಹತಬಲರೂ, ಉತ್ಸಾಹಹೀನರೂ ಆದದ್ದನ್ನು ತಿಳಿದು ಭಗವಂತನು ಗರುಡಾರೂಢನಾಗಿ ಅಲ್ಲಿಗೆ ಬಂದು, ಸತ್ತವರನ್ನು ಕೃಪಾವಲೋಕನದಿಂದ ಎಬ್ಬಿಸಿದನು; ಮತ್ತು ಆ ಪರ್ವತವನ್ನು ಸಹಜವಾಗಿ ಎತ್ತಿ ಗರುಡನ ಮೇಲೆ ಇಟ್ಟುಕೊಂಡು ಕ್ಷೀರಸಮುದ್ರಕ್ಕೆ ಹೋದನು. ವಾಸುಕಿಯು ಹಗ್ಗವಾಗತಕ್ಕವನಾದ್ದರಿಂದ ಗರುಡನಿದ್ದರೆ ಅವನು ಅಲ್ಲಿ ಬರಲಿಕ್ಕಿಲ್ಲವೆಂದು ತಿಳಿದು ಭಗವಂತನು ಗರುಡನನ್ನು ವೈಕುಂಠಕ್ಕೆ ಕಳಿಸುತ್ತಿರಲು, ಅಷ್ಟರಲ್ಲಿ ದೇವದೈತ್ಯರೂ ಅಲ್ಲಿಗೆ ಬಂದರು. ಅವರು ಅಮೃತದ ಕೆಲವು ಭಾಗ ಕೊಡುವದನ್ನು ಗೊತ್ತುಮಾಡಿ ಹಗ್ಗವಾಗಲಿಕ್ಕೆ ವಾಸುಕಿಯ ಮನಸ್ಸನ್ನು ಒಲಿಸಿಕೊಂಡರು.

ಆ ಮೇಲೆ ವಾಸುಕಿಯನ್ನು ಪರ್ವತಕ್ಕೆ ಸುತ್ತಿ ಸಮುದ್ರಮಂಥನ ಮಾಡಲು ಉದ್ಯುಕ್ತ ರಾದರು. ದೈತ್ಯರಿಗೆ ಪ್ರಾಣಕ್ಕಿಂತಲೂ ಮಾನದಯೋಗ್ಯತೆಯು ಹೆಚ್ಚಿರುವದೆಂದು ತಿಳಿದು, ಭಗವಂತನು ವಾಸುಕಿಯ ಮುಖವನ್ನು ಹಿಡಿದನು; ಕೂಡಲೆ ಎಲ್ಲ ದೇವತೆಗಳೂ ಅತ್ತಕಡೆಗೇ ಹಿಡಿದರು; ಆದರೆ ಬಾಲದ ಅಮಂಗಲ ಭಾಗವು ತಮಗೆ ಸಲ್ಲದೆಂದು ತಿಳಿದು, ಆ ಮಾನವಂತರೂ, ಅಧ್ಯಯನ ಸಂಪನ್ನರೂ, ವಿಖ್ಯಾತರೂ, ಶೂರರೂ ಆದ ದೈತ್ಯರು ತಾವೇ ಮುಖದಕಡೆಗೆ ಹಿಡಿಯುವೆವೆಂದು ಹೇಳಿದರು. ತಮ್ಮ ಪ್ರಯತ್ನವು ಸಫಲವಾದದ್ದರಿಂದ ದೇವತೆಗಳು ದೈತ್ಯರ ಮನಸ್ಸು ನೋಯಿಸದೆ, ತಾವೇ ಬಾಲದ ಕಡೆಗೆ ಹಿಡಿದರು. ಮುಂದೆ ಮಂಥನ ಮಾಡತೊಡಗಲು, ಮಂದರಪರ್ವತವು ಸಮುದ್ರದೊಳಗೆ ಇಳಿಯ ಹತ್ತಿತು. ಆಗ ಕೆಳಗೆ ಇಳಿಯಬಾರದೆಂದು ದೇವತೆಗಳು ಮಾಡಿದ ಯತ್ನವೆಲ್ಲ ನಿಷ್ಫಲವಾದದ್ದರಿಂದ ಭಗವಂತನು ಕೂರ್ಮಾವತಾರ ತಾಳಿ, ಪರ್ವತದ ಬುಡಕ್ಕೆ ಬೆನ್ನು ಕೊಟ್ಟನು

ಈ ಕಾಲದಲ್ಲಿ ಭಗವಂತನು ಧರಿಸಿದ ಕೂರ್ಮಾವತಾರದ ರೂಪವು ಬಹು ದೊಡ್ಡ ದಾಗಿತ್ತು. ಆ ಕೂರ್ಮರೂಪ ಭಗವಂತನ ಬೆನ್ನಿನ ಸುತ್ತಳತೆಯು ಒಂದು ಲಕ್ಷ ಯೋಜನ! ಅದೊಂದು ಮಹಾದ್ವೀಪದಂತೆ ಇತ್ತು. ಮಂದರಪರ್ವತವು ಮೇಲೆ ಬಂದದ್ದರಿಂದ ದೇವತೆಗಳು ಭರದಿಂದ ಸಮುದ್ರವನ್ನು ಕಡೆಯ ಹತ್ತಿದರು; ಆದರೆ ಇಷ್ಟುದೊಡ್ಡ ಪರ್ವತವು ಭರದಿಂದ ಬೆನ್ನಮೇಲೆ ತಿರುಗುವಾಗ ಕೂರ್ಮರೂಪ ಭಗವಂತನ ಬೆನ್ನು ತುರಿಸಿದಂತಾಯಿತು! ಆಗ ಭಗವಂತನು ದೇವ-ದೈತ್ಯರ ಬಲ-ಉತ್ಸಾಹಗಳು ಹೆಚ್ಚಬೇಕೆಂತಲೂ, ವಾಸುಕಿಯು ಘರ್ಷಣವನ್ನು ಸಹನಮಾಡಬೇಕೆಂತಲೂ ಸೂಕ್ಷ್ಮರೂಪದಿಂದ ಅವರೆಲ್ಲರ ದೇಹದಲ್ಲಿ ಪ್ರವೇಶಿಸಿದನು. ಭರದಿಂದ ಮಂಥನಕಾರ್ಯವು ನಡೆಯಲು, ಮಂದರಪರ್ವತವು ಜೋಲಿಯ ಹೊಡೆಯಹತ್ತಿತು. ಆಗ ಪುನಃ ಭಗವಂತನು ಸಹಸ್ರಬಾಹು ಪುರುಷನ ಅಜಸ್ರ ರೂಪವನ್ನು ಧರಿಸಿ, ಮಂದರಪರ್ವತದಮೇಲೆ ಕುಳಿತು ತನ್ನ ಕೈಗಳಿಂದ ಅದನ್ನು ಒತ್ತಿ ಹಿಡಿದನು. ಭಗವನ್ಮೂರ್ತಿಯು ಮಂದರ ಪರ್ವತದಮೇಲೆ ಅಧಿಷ್ಠಿತವಾದಾಗ ಬ್ರಹ್ಮಾದಿ ದೇವತೆಗಳು ಹೂ ಮಳೆಗರೆದರು! ಹೀಗೆ ಕೆಳಗೆ ಮೇಲೆ ಆಶ್ರಯವು ಚನ್ನಾಗಿ ದೊರೆತದ್ದರಿಂದ, ಪರ್ವತವು ಕೆಳಗೆ ಇಳಿಯುವದೂ, ಜೋಲಿ ಹೊಡೆಯುವದೂ ಇಲ್ಲದಂತಾಗಿ ಮಂಥನ ಕಾರ್ಯವು ಭರದಿಂದ ಸಾಗಿತು. ಆದರ ಅಬ್ಬರಕ್ಕೆ ಜಲಚರಪ್ರಾಣಿಗಳು ಬೆಸೆಗೆಟ್ಟವು. ವಾಸುಕಿಯ ಮುಖ-ನೇತ್ರಗಳಿಂದ ಭಯಂಕರ ವಿಷಜ್ವಾಲೆಗಳು ಹೊರಟು ಅದರಿಂದ ಎಷ್ಟೋಜನ ದೈತ್ಯರು ಮರಣ ಹೊಂದಿದರು. ಉಳಿದವರು ದುಸ್ಸಹ ತಾಪದಿಂದ ತಳಮಳಿಸಹತ್ತಿ ಸುಟ್ಟ ಮರದಂತೆ ಕಮರಿ ನಿಸ್ತೇಜರಾದರು. ದೇವತೆಗಳು ಬಾಲದ ಕಡೆಗೆ ಹಿಡಿದಿದ್ದರೂ, ಅವರು ಬರಿಯ ವಿಷಜ್ವಾಲೆಯ ಜಳತಾಕಿ ತೇಜೋಹೀನರಾಗಿ ಹೌಹಾರಿದರು. ಆಗ ಭಗವಂತನು ಮಳೆಗರೆಯಲಿಕ್ಕೆ ಮೇಘಗಳಿಗೆ ಆಜ್ಞಾಪಿಸಲು ಸುರಿಯುವ ಮಳೆಯಿಂದಲೂ, ಸಮುದ್ರದ ತುಂತುರ ಹನಿಗಳಿಂದಲೂ ದೇವ ದೈತ್ಯರ ತಾಪವು ಕೆಲಮಟ್ಟಿಗೆ ಶಾಂತವಾಯಿತು

ಇಷ್ಟು ಕಷ್ಟಪಟ್ಟು ಪ್ರಾಣಹಾನಿ ಮಾಡಿಕೊಂಡರೂ ಅಮೃತವು ಹೊರಡದ್ದನ್ನು

ನೋಡಿ, ಭಗವಂತನು ತಾನೇ ಪ್ರಚಂಡ ರೂಪವನ್ನು ಧರಿಸಿ ಸಮುದ್ರ ಮಂಥನ ಮಾಡ ತೊಡಗಿದನು; ಆಗ ಸಮುದ್ರವು ಅಲ್ಲೋಲ ಕಲ್ಲೋಲವಾಯಿತು. ಒಳಗಿನ ಜಲಚರಗಳ ಜೀವನದ ಆಶೆಯು ನಷ್ಟವಾಯಿತು ಅಷ್ಟರಲ್ಲಿ ಸಮುದ್ರದೊಳಗಿಂದ "ಹಾಲಾಹಲ" ವೆಂಬ ಭಯಂಕರ ವಿಷವು ಉತ್ಪನ್ನವಾಗಿ, ಅದರಿಂದ ತ್ರೈಲೋಕ್ಯಗಳು ಸುಡತೊಡಗಿದವು. ಈ ಮಹಾಸಂಕಟದಿಂದ ರಕ್ಷಿಸುವವರು ಯಾರೂ ಇಲ್ಲದಾಯಿತು. ಆಗ ಎಲ್ಲದೇವತೆಗಳೂ, ಪ್ರಜಾಪತಿಗಳೂ, ಪ್ರಜೆಗಳೂ ಕೈಲಾಸಕ್ಕೆ ಹೋಗಿ ಭಗವಾನ್ ಶಂಕರನನ್ನು ಮೊರೆಬಿದ್ದು ನಮಸ್ಕರಿಸಿ— "ಹೇ, ದೇವಾಧಿದೇವಾ ಮಹಾದೇವಾ, ನೀನೇ ಸರ್ವಭೂತಗಳ ಆತ್ಮನಾ ಗಿದ್ದು, ಅವುಗಳ ಸಂರಕ್ಷಣವನ್ನೂ ನೀನೇಮಾಡುವೆ. ದೇವದೈತ್ಯರು ಅಮೃತದ ಆಶೆ ಯಿಂದ ಆರಂಭಿಸಿದ ಸಮುದ್ರಮಂಥನದಿಂದ ಅವರಿಗೆ ಅಮೃತಪ್ರಾಪ್ತಿಯಾಗುವದು ಒತ್ತ ಟ್ಟಿಗುಳಿದು, ತ್ರೈಲೋಕ್ಯಗಳನ್ನು ಸುಡುವಂಥ ಹಾಲಾಹಲ ವಿಷವು ಮಾತ್ರ ಉತ್ಪನ್ನ ವಾಗಿರುವದು. ಈ ಮಹತ್ಸಂಕಟವನ್ನು ದೂರಮಾಡಲು, ನಿನ್ನ ಹೊರತು ಯಾರೂ ಸಮರ್ಥರಿಲ್ಲವು. ನೀನು ಇಂಥ ಸಮರ್ಥನಾದ್ದರಿಂದಲೇ ವಿದ್ವಾಂಸರೂ, ಜ್ಞಾನಿಗಳೂ ನಿನ್ನ ಆರಾಧನೆಯನ್ನೇ ಮಾಡುವರು. ಸಮರ್ಥಾ, ಈ ಜಗತ್ತಿನ ಉತ್ಪತ್ತಿ—ಸ್ಥಿತಿ—ಲಯ ಗಳನ್ನು ಮಾಡುವ ಇಚ್ಛೆಯಾದಾಗ, ನೀನೇ ಬ್ರಹ್ಮ—ವಿಷ್ಣು—ಮಹೇಶ್ವರರೂಪವನ್ನು ಧರಿಸುತ್ತೀ. ನೀನೇ ಸ್ವತಸ್ಸಿದ್ಧಜ್ಞಾನವಂತನಿರುತ್ತೀ. ಎಲೈ ಜಗದೀಶನೇ, ನಾನಾಶಕ್ತಿ ಗಳಿಂದ ಜಗದ್ರೂಪವಾಗಿ ಭಾಸಮಾನವಾಗುವ ಬ್ರಹ್ಮವು ನೀನೇ ಇರುತ್ತೀ. ನಿನ್ನ ಈ ಬ್ರಹ್ಮರೂಪವನ್ನು ತಿಳಿಯಲು ಯಾವನೂ ಸಮರ್ಥನಲ್ಲವು. ಸಕಲಲೋಕಪಾಲರು, ವಿಷ್ಣುವು, ಬ್ರಹ್ಮದೇವನು, ಇಂದ್ರನು ಇವರೆಲ್ಲರೂ ನಿನ್ನ ವ್ಯಾಪಕರೂಪದ ವಿಚಾರಮಾಡಿ ವಿಸ್ಮಿತರಾಗುವರು. ಮದನ, ದಕ್ಷಯಜ್ಞ, ತ್ರಿಪುರಾಸುರ, ಮುಂತಾದ ಹಲವು ಅರಿಷ್ಟ ಗಳನ್ನು ನೀನು ನಾಶಮಾಡಿರುತ್ತೀ. ನಿನ್ನ ಯಥಾರ್ಥಜ್ಞಾನವನ್ನು ಪಡೆಯಲು, ಬ್ರಹ್ಮಾದಿ ದೇವತೆಗಳೂ ಅಸಮರ್ಥರಾಗಿರುವಾಗ, ನಮ್ಮ ಪಾಡೇನು? ನಮ್ಮ ಯೋಗ್ಯತೆಯಂತೆ ನಾವು ನಿನ್ನ ಸ್ತೋತ್ರಮಾಡಿರುವೆವು; ಯಾಕಂದರೆ, ನಿನ್ನ ಈ ದೃಶ್ಯರೂಪವು ಮಾತ್ರ ನಮ್ಮ ಕಣ್ಣಿಗೆ ಕಾಣುತ್ತದಲ್ಲದೆ, ಸರ್ವಕಾರಣಭೂತವಾದ ನಿನ್ನ ಅತಿಸೂಕ್ಷ್ಮರೂಪವು ನಮಗೆ ಕಾಣುವದಿಲ್ಲವು. ದೇವಾ, ನಾವು ನಿನ್ನ ದರ್ಶನದಿಂದಲೇ ಕೃತಾರ್ಥರಾಗಿರುವೆವು, ನಮ್ಮನ್ನು ನೀನು ರಕ್ಷಿಸು.

ವಿವೇಕಶೀಲಾ, ಪ್ರಜಾಪತಿಗಳ ಈ ದೀನವಾಣಿಯ ಸ್ತೋತ್ರವನ್ನು ಕೇಳಿ, ಭೋಲಾ ನಾಥ ಶಂಕರನ ಮನಸ್ಸು ಕರಗಿತು. ಆಗ ಆತನು ಪಾರ್ವತಿಯನ್ನು ಕುರಿತು—"ಪ್ರಿಯೆ, ಜನರ ಈ ದೈನ್ಯವನ್ನು ನೋಡಿದೆಯಾ? ಅವರಿಗೆ ಅಭಯವೀಯುವದು ನನ್ನ ಕರ್ತವ್ಯವಾ ಗಿರುವದು. ತಾವು ಕಷ್ಟವನ್ನು ಸಹಿಸಿ ಎರಡನೆಯವರ ಹಿತ ಸಾಧಿಸುವದೇ ಸಜ್ಜನರಿಗೆ ಭೂಷಣವು. ನಾನು ಈ ಹಾಲಾಹಲ ವಿಷಪ್ರಾಶನ ಮಾಡುವದರಿಂದ ಇವರೆಲ್ಲರೂ ಸುಖಿ ಗಳಾಗುವರು" ಎಂದು ಹೇಳಲು, ಶಂಕರನ ಸಾಮರ್ಥ್ಯವನ್ನು ಬಲ್ಲವಳಾದ ಸತಿಯು ಅದಕ್ಕೆ ಒಪ್ಪಿಕೊಂಡಳು. ಕೂಡಲೆ ಭಗವಾನ್ ಶಂಕರನು ಆ ವಿಷವನ್ನು ಅಂಗೈಯಲ್ಲಿ ಹಿಡಿದು

ಪ್ರಾಶನಮಾಡಲು, ವಿಷಪ್ರಭಾವದಿಂದ ಆತನ ಕಂಠವು ನೀಲವರ್ಣದ್ದಾಗಿ, ನೀಲಕಂಠನೆಂಬ ಗೌರವದ ನಾಮವು ಆತನಿಗೆ ಪ್ರಾಪ್ತವಾಯಿತು. ದೇವಾಧಿದೇವನಾದ ಶಂಕರನು ಮಾಡಿದ ಈ ಅದ್ಭುತ ಕರ್ಮವನ್ನು ನೋಡಿ ಯಾವತ್ತು ದೇವತೆಗಳೂ, ಪ್ರಜಾಜನರೂ ಆತನಸ್ತೋತ್ರ ಮಾಡಿದರು. ಶಂಕರನು ವಿಷಗ್ರಹಣ ಮಾಡುವಾಗ ಕೆಳಗೆ ಬಿದ್ದ ಅದರಕಿಂಚಿದ್ಭಾಗವನ್ನು ಚೇಳು, ಹಾವು, ವಿಷೌಷಧಿಗಳು, ಬೇರೆ ವಿಷಉಳ್ಳ ಪ್ರಾಣಿಗಳು ಸ್ವೀಕರಿಸಿದವು. ವಿವೇಕ ಶೀಲರಾ, ಶಿವಾಜ್ಞೆಯಿಲ್ಲದೆ ಮಾಡಿದಕಾರ್ಯವು ಸಫಲವಾಗಬಹುದೇ? ಶಿವನ ಒಪ್ಪಿಗೆ ಪಡೆದು, ಪ್ರಥಮಫಲವನ್ನು ಶಿವಗೆ ಅರ್ಪಿಸಿ ಸಮುದ್ರಮಂಥನಕಾರ್ಯವನ್ನು ನಡಿಸಿದ್ದರೆ ಹೀಗೆ ಅಮೃತದ ಬದಲು ವಿಷವು ಯಾಕೆ ಉತ್ಪನ್ನವಾಗುತ್ತಿತ್ತು? ಆದರೆ ಕರುಣಾಳುವೂ, ಮಾತ್ಸರ್ಯ ರಹಿತನೂ ಆದ ಶಂಕರನು ಹುಟ್ಟಿದ ವಿಷವನ್ನೇ ಜಗತ್ಕಲ್ಯಾಣಕ್ಕಾಗಿ ಪ್ರಾಶನ ಮಾಡಲು, ಅದೇ ಶಿವಾರ್ಪಿತವಾಗಿ ಅದರ ಫಲದಿಂದ ಮುಂದೆ ಅಮೃತಾದಿ ದಿವ್ಯವಸ್ತುಗಳು ದೇವತೆಗಳಿಗೆ ಪ್ರಾಪ್ತವಾದವು! ಇದಕ್ಕಿಂತ ಅಲ್ಪಸಂತುಷ್ಟತೆಯೂ, ಕರುಣಾಶಾಲಿತ್ವವೂ ಎಲ್ಲಿಯಾದರೂ ಕಣ್ಣಿಗೆ ಬೀಳಬಹುದೆ?

ಈ ಮೇರೆಗೆ ಶಂಕರನು "ಹಾಲಾಹಲ" ವಿಷಪ್ರಾಶನ ಮಾಡಿದ್ದರಿಂದ ದೇವದೈತ್ಯರಿಗೆ ಸಂತೋಷವಾಗಿ, ಅವರು ಪುನಃ ಉತ್ಸಾಹದಿಂದ ಸಮುದ್ರಮಥನ ಮಾಡತೊಡಗಿದರು. ಆಗ ಕ್ಷೀರಸಾಗರದಿಂದ ಕಾಮಧೇನು, ಉಚ್ಚೈಶ್ರವ ಎಂಬ ಬಿಳಿಯ ಕುದುರೆ, ಐರಾವತ ವೆಂಬ ಬಿಳಿಯಆನೆ, ಪದ್ಮರಾಗಜಾತಿಯ ಕೌಸ್ತುಭರತ್ನ, ಪಾರಿಜಾತವೃಕ್ಷ, ಅಪ್ಸರೆಯರ ಉತ್ಪನ್ನರಾದರು. ಆ ಉತ್ತಮೋತ್ತಮ ವಸ್ತುಗಳನ್ನು ಕ್ರಮವಾಗಿ ಋಷಿಗಳು, ಬಲಿಯು ಇಂದ್ರನು, ವಿಷ್ಣುವು, ದೇವತೆಗಳು ಸ್ವೀಕಾರಮಾಡಿದರು. ಆಮೇಲೆ ಭಗವತೀಲಕ್ಷ್ಮಿಯು, ಉತ್ಪನ್ನಳಾಗಿ ಸರ್ವೋತ್ತಮನಾದ ವಿಷ್ಣುವಿನ ಕೊರಳಲ್ಲಿ ಮಾಲೆ ಹಾಕಿ ಆತನ ವಕ್ಷಸ್ಥಳ ದಲ್ಲೂ ವಾಸಿಸಿದಳು. ಈ ಎಲ್ಲ ಶ್ರೇಷ್ಠ ಪದಾರ್ಥಗಳು ಹೊರಟಬಳಿಕ ಧನ್ವಂತರಿಯೆಂಬ ದಿವ್ಯಪುರುಷನು ಅಮೃತಕಲಶವನ್ನು ಹಿಡಕೊಂಡು ಸಮುದ್ರದಿಂದ ಬಂದನು. ಅದನ್ನು ನೋಡಿ ಬಲಿಷ್ಠರಾದ ದೈತ್ಯರು ಮುಗಿಬಿದ್ದು ಆ ಕಲಶವನ್ನು ಧನ್ವಂತರಿಯು ಕೈಯಿಂದ ಕಸಿದುಕೊಂಡು ಹೋದರು! ಅದರಿಂದ ದೇವತೆಗಳ ಮೋರೆಗಳು ಒಣಗಿದವು. ಹೀಗೆ ದೇವತೆಗಳು ದೀನರಾಗಿರುವದನ್ನು ನೋಡಿ ವಿಷ್ಣುವು—" ದೇವತೆಗಳಿರಾ, ನೀವು ನೊಂದು ಕೊಳ್ಳಬೇಡಿರಿ. ನಾನು ನನ್ನ ಮಾಯೆಯಿಂದ ದೈತ್ಯರಲ್ಲಿ ಪರಸ್ಪರ ಕಲಹಉತ್ಪನ್ನ ಮಾಡಿ ನಿಮ್ಮ ಕಾರ್ಯ ಮಾಡಿಕೊಡುವೆನು" ಎಂದು ಹೇಳಿದನು. ಇತ್ತ ದೈತ್ಯರಿಗೆ ಅಮೃತವು ಪ್ರಾಪ್ತವಾದರೂ ಅದನ್ನು ಕುಡಿಯುವ ಸಂಬಂಧದಿಂದ, ನಾನು ಮೊದಲು ನೀನು ಮೊದಲು ಎಂದು ಅವರು ಪರಸ್ಪರ ಕಲಹ ಬೆಳಿಸಹತ್ತಿದರು. ಅವರಲ್ಲಿ ದುರ್ಬಲರಾದವರು—"ಈ ಪೆಂಡಗರ ಮುಂದೆ ನಮ್ಮ ಆಟವೇನು ನಡೆಯುವದಿಲ್ಲ; ಕಡೆಗೆ ನಮಗೆ ಅಮೃತವೂ ಸಿಗು ವದಿಲ್ಲ" ಎಂದು ಯೋಚಿಸಿ, ಅವರು ಧರ್ಮಶಾಸ್ತ್ರದನಿರ್ಣಯ ಹೇಳತೊಡಗಿದರು. ಅವರು ಆ ಬಲಿಷ್ಠ ದೈತ್ಯರನ್ನು ಕುರಿತು—" ಅಪ್ಪಗಳಿರಾ, ಸುಮ್ಮನೆ ಕಲಹ ಬೆಳೆಸಬೇಡಿರಿ. ನಾವೂ ದೇವತೆಗಳೂ ಕೂಡಿಯೇ ಶ್ರಮಬಟ್ಟು ಅಮೃತವನ್ನು ಸಂಪಾದಿಸಿರುವದರಿಂದ,

ಅದು ಎಲ್ಲರಿಗೂ ಸರಿಯಾಗಿ ದೊರೆಯತಕ್ಕದ್ದು. ಸನಾತನ ಧರ್ಮವಾದರೂ ಹೀಗೆಯೇ ಹೇಳುತ್ತದೆ; ಆದ್ದರಿಂದ ಸತ್ರಯಾಗದಲ್ಲಿ ಸರ್ವರಿಗೆ ಸಮಭಾಗವು ದೊರೆಯುವಂತೆ, ನಮ್ಮಲ್ಲಿ ಎಲ್ಲರಿಗೂ ಸರಿಯಾಗಿಯೇ ಅಮೃತವು ದೊರೆಯಬೇಕಾಗುವದು, ಎಂದು ಹೇಳುತ್ತಿರಲು. ವಿಷ್ಣುವು ಮೋಹಿನಿಯ ರೂಪವನ್ನು ಧರಿಸಿ ದೈತ್ಯರ ಮುಂದೆ ಸುಳಿದಾಡ ಹತ್ತಿದನು. ವಿವೇಕಶೀಲಾ, ಯಾವ ಭಗವಂತನ ಮಾಯೆಯಿಂದ ಜಗತ್ತು ಮೋಹಿಸಿರುವದೋ, ಆ ಭಗವಂತನೇ ಮೋಹಿನಿಯ ರೂಪಧಾರಣ ಮಾಡಿದ ಬಳಿಕ, ಆ ರೂಪದ ಮೋಹಕತೆಯನ್ನು ವರ್ಣಿಸುವ ಯೋಗ್ಯತೆಯು ಯಾರಿಗೆ ಬರಬಹುದು?

ವಿವೇಕಶೀಲಾ, ಈ ಮೇರೆಗೆ, ಪೂರ್ವದ ತಮ್ಮ ಮಿತ್ರಭಾವವನ್ನು ಬಿಟ್ಟು ಅಮೃತಕ್ಕಾಗಿ ಪರಸ್ಪರ ಕಲಹ ಬಳಿಸಿ ಸಿಕ್ಕಸಿಕ್ಕಹಾಗೆ ಬೈದಾಡುತ್ತಿದ್ದ ದೈತ್ಯರ ಕಣ್ಣಿಗೆ ಮೋಹಿನಿಯು ಬಿದ್ದಕೂಡಲೆ ಅವರು ಮೋಹಿತರಾಗಿ ಆಕೆಯನ್ನು ಹೊಗಳುತ್ತ ಆಕೆಯ ಹತ್ತರ ಬಂದು—ಸುಂದರೀ, ನಿನ್ನನ್ನು ನೋಡಿ ನಾವು ಮೋಹಿಸಿದೆವು. ನೀನು ಯಾರು? ಎಲ್ಲಿಂದ ಬಂದೆ? ನಿನ್ನ ಕೆಲಸವೇನಿರುವದು? ನೀನು ಮೂಸಿ ನೋಡದೆಯಿದ್ದ ಹೂವಿನಂತೆ ಶುದ್ಧಳಾಗಿರುವಹಾಗೆ ತೋರುತ್ತದೆ. ಕಶ್ಯಪನ ಮಕ್ಕಳಾದ ದೇವದೈತ್ಯರು ನಾವು ಪರಸ್ಪರ ಬಂಧುಪ್ರೇಮವನ್ನು ಮರೆತು ಒಂದೇ ವಸ್ತುವಿನ ಸಲುವಾಗಿ ಪರಸ್ಪರ ಕಲಹ ಮಾಡುತ್ತಿರುವಾಗ ನೀನು ಪ್ರಾಪ್ತಳಾಗಿರುವದರಿಂದ, ಪರಮೇಶ್ವರನೇ ನಿನ್ನನ್ನು ಇಲ್ಲಿಗೆ ಕಳಿಸಿರುವನು ನಿಶ್ಚಯವು; ಆದ್ದರಿಂದ ಅಮೃತಪ್ರಾಪ್ತಿಗಾಗಿ ಸರಿಯಾಗಿ ಶ್ರಮಬಟ್ಟಿರುವ ನಮ್ಮ ಬಾಂಧವರಲ್ಲಿ ವಿರೋಧವು ಉತ್ಪನ್ನವಾಗದಂತೆ ನಮ್ಮಲ್ಲಿ ಅಮೃತವನ್ನು ನೀನು ಹಂಚು, ಎಂದು ಹೇಳಲು, ಮೋಹಿನೀ ರೂಪದ ಶ್ರೀ ಹರಿಯು ಸ್ವಲ್ಪ ನಕ್ಕು ಮನೋಹರವಾದ ನೇತ್ರ ಕಟಾಕ್ಷಗಳಿಂದ ದೈತ್ಯರನ್ನು ನೋಡುತ್ತ—ಎಲೈ ಕಶ್ಯಪಪುತ್ರರೇ, ಇಂಥ ಮಹತ್ವದ ಕೆಲಸವನ್ನು ನನಗೆ ಒಪ್ಪಿಸುವದು ಯೋಗ್ಯವಲ್ಲ; ಯಾಕಂದರೆ ನಾವು ಜಾರಸ್ತ್ರೀಯರು ದಿನಾಲು ಹೊಸಹೊಸ ಪುರುಷರನ್ನು ಪ್ರೀತಿಸುವವರೂ, ಸವಿಸವಿ ಮಾತುಗಳಿಂದ ಎರಡನೆಯವರ ಮನಸ್ಸನ್ನು ಎಳೆದುಕೊಳ್ಳುವವರೂ, ನಮ್ಮ ಅಂತಃಕರಣದ ನೆಲೆಯನ್ನು ಯಾರಿಗೂ ಹತ್ತಗೊಡದವರೂ ಆಗಿರುವೆವು; ಆದ್ದರಿಂದ ನಾವು ಯಾರ ವಿಶ್ವಾಸಕ್ಕೂ ಪಾತ್ರರಲ್ಲವು! ಸುಜ್ಞ ಪುರುಷರು ಕಾಮಿನಿಯರಾದ ನಮ್ಮ ಮೇಲೆ ಸರ್ವಥಾ ವಿಶ್ವಾಸವಿಡುವದಿಲ್ಲ. ಎಲೈ ದೈತ್ಯರೆ, ತೋಳದ, ಹಾಗು ಜಾರಿಣೀಸ್ತ್ರೀಯರ ಸಖ್ಯದ ಪರಿಣಾಮವು ಅನಿಷ್ಟಕರವಾಗಿರುವದು, ಎಂದು ಹೇಳಿದಳು. ವಿವೇಕಶೀಲಾ, ಮೋಹಿನಿಯ ಈ ಪಾತಾಳಯಂತ್ರದ ಮಾತಿನಿಂದ ಆಕೆಯ ಮೇಲೆ ದೈತ್ಯರ ವಿಶ್ವಾಸವು ಕಡಿಮೆಯಾಗದೆ ಮತ್ತಿಷ್ಟು ಹೆಚ್ಚಿತು. ಅವರು ನಗುತ್ತ ನಗುತ್ತ ಅಮೃತದ ಕಲಶವನ್ನು ಆಕೆಯ ಕೈಯಲ್ಲಿ ಕೊಟ್ಟರು. ಮೋಹಿನಿಯು ಆ ಕಲಶವನ್ನು ತನ್ನ ಕೈಯಲ್ಲಿ ತೆಗೆದುಕೊಂಡು ದೈತ್ಯರನ್ನು ಕುರಿತು—ದೈತ್ಯರೆ, ನಾನು ಬೇಡಬೇಡೆಂದರೂ ಅಮೃತ ಹಂಚುವ ಕೆಲಸವನ್ನು ನೀವು ನನಗೇ ಒಪ್ಪಿಸುತ್ತಿರುವಿರಿ; ಆದರೆ ಅದನ್ನು ಹಂಚುವಾಗ ನಾನು ಏನಾದರೂ ಒಳಿತು-ಕೇಡು ಮಾಡಿದರೆ ನೀವು ಸಿಟ್ಟಿಗೆಂದು ಮಾತಾಡಲಾಗದು

...ನೀವು ಇದಕ್ಕೆ ಒಪ್ಪಿಕೊಳ್ಳುತ್ತಿದ್ದರೆ ನಾನು ಈ ಕೆಲಸ ಮೊಡುವೆನು, ಎಂದು ಹೇಳಲು. ... ತಮೋಗುಣಿಗಳಾದ ದೈತ್ಯರು ಆಕೆಯ ಮಾತಿನೊಳಗಿನ ಕೊಂಕು ತಿಳಿಯದೆ ಒಮ್ಮೆಲೆ—"ಒಳ್ಳೇದು! ಒಪ್ಪಿಕೊಂಡೆವು!" ಎಂದು ನುಡಿದರು.

ಆ ಮೇಲೆ ಎಲ್ಲ ದೈತ್ಯರು ಸ್ನಾನಮಾಡಿ ಅಗ್ನಿಯಲ್ಲಿ ಹವಿರ್ದ್ರವ್ಯಗಳ ಹೋಮ ಮಾಡಿದರು. ಅಂದು ಅವರು ಉಪವಾಸಮಾಡಿ ಬ್ರಾಹ್ಮಣರಿಗೂ, ಆಕಳುಗಳಿಗೂ, ನಾವತ್ತು ಪ್ರಾಣಿಗಳಿಗೂ ಅನ್ನದಾನ ಮಾಡಿದರು. ಬ್ರಾಹ್ಮಣರು ಪ್ರಸ್ಥಾಹವಾಡಿದ ನಂತರ ದೈತ್ಯರು ಪ್ರೀತಿಯ ವಸ್ತ್ರಾಲಂಕಾರಗಳಿಂದ ಅಲಂಕೃತರಾಗಿ ಪುಷ್ಪ-ಧೂಪಾದಿಗಳಿಂದ ಸುವಾಸಿತವಾದ ಮಂಟಪದಲ್ಲಿ ಪೂರ್ವಾಭಿಮುಖವಾಗಿ ದರ್ಭೆಗಳನ್ನು ಹಾಕಿ ಕುಳಿತುಕೊಂಡರು. ಅಷ್ಟರಲ್ಲಿ ದೇವತೆಗಳೂ ಅಲ್ಲಿಗೆ ಬಂದರು. ಹೀಗೆ ಎಲ್ಲರು ನೆರೆಯಲು, ಮೋಹಿನಿಯು ಅಮೃತಕಲಶವನ್ನು ಹಿಡಿದುಕೊಂಡು ಬಂದು ದೇವತೆಗಳನ್ನೂ, ದೈತ್ಯರನ್ನೂ ಬೇರೆ ಬೇರೆ ಪಂಕ್ತಿಯಲ್ಲಿ ಕುಳ್ಳಿರಿಸಿದಳು. ನಾನು ಏನುಮಾಡಿದರೂ ಮಾತಾಡಲಿಕ್ಕಿಲ್ಲವೆಂದು ಆಕೆಯು ದೈತ್ಯರಿಂದ ಮೊದಲೇ ವಚನ ತಕ್ಕೊಂಡಿದ್ದಳು. ಅವರೂ ಆಕೆಗೆ ಯಥಾನ್ಯಾಯವಾಗಿ ಅಮೃತ ಹಂಚಬೇಕೆಂದು ಹೇಳಿದ್ದರು. ಮೋಹಿನಿಯು ಇವೆರಡೂ ಮಾತಿನ ಉಪಯೋಗವನ್ನು ತನಗೆ ಬೇಕಾದಹಾಗೆ ಮಾಡಿಕೊಂಡಳು. ಹಾವಿಗೆ ಹಾಲೆರೆದಂತೆ ದುಷ್ಟದೈತ್ಯರಿಗೆ ಅಮೃತವೆರೆದರೆ ಹಿತವಾಗದೆಂದು ತಿಳಿದು ಆಕೆಯು ದೇವತೆಗಳಿಗೇ ಅಮೃತ ಬಡಿಸಿಬಿಡುವದನ್ನು ನಿಶ್ಚಯಿಸಿದಳು. ಆಕೆಯು ದೈತ್ಯರನ್ನು ಕುರಿತು— ದಿತಿಪುತ್ರರೇ, ಈ ದೇವತೆಗಳು ಆಶೆಬುರುಕರಾದ್ದರಿಂದ ಇವರಿಗೆ ಮೊದಲು ಬಡಿಸಿ ಸಮಾಧಾನಪಡಿಸಿ ಆ ಮೇಲೆ ನಿಮಗೆ ಬಡಿಸುವೆನೆಂದು ಹೇಳಿ, ದೇವತೆಗಳಿಗೆ ಅಮೃತ ಬಡಿಸ ಹತ್ತಿದಳು. ದೈತ್ಯರಿಗೆ ಆಕೆಯ ಕಪಟವು ತಿಳಿದರೂ, ವಚನಕ್ಕೆ ಮಹತ್ವಕೊಡುವ ಆ ಮಾನಿಗಳಾದ ದೈತ್ಯರು ಪಿಟ್ಟೆಂದು ಮಾತಾಡಲಿಲ್ಲ. ಇದಲ್ಲದೆ ಏನಾದರೂ ಮಾತಾಡಿದರೆ ಮೋಹಿನಿಗೆ ಅಸಮಾಧಾನವಾಗಿ ಪ್ರೇಮದಲ್ಲಿ ಅಂತರವಾದೀತೆಂಬ ಭಯವೂ ಅವರನ್ನು ಬಾಧಿಸುತ್ತಿತ್ತು. ಹೀಗಿರುವಾಗ ರಾಹು ಎಂಬ ದೈತ್ಯನು ಎದ್ದುಹೋಗಿ ದೇವತೆಗಳ ಸೋಗಿನಿಂದ ಅವರ ಪಂಕ್ತಿಯಲ್ಲಿ ಕುಳಿತುಕೊಂಡನು. ಮೋಹಿನಿಯು ಬಡಿಸಿದ ಅಮೃತವು ಅವನ ಹೊಟ್ಟೆಯೊಳಗೆ ಇಳಿಯುವದರೊಳಗಾಗಿ ಚಂದ್ರ--ಸೂರ್ಯರ ಸೂಚನೆಯಿಂದ ವಿಷ್ಣುವಿನ ಚಕ್ರವು ಅವನ ಶಿರಸ್ಸನ್ನು ಧಡದಿಂದ ಹಾರಿಸಿತು; ಆದರೆ ರಾಹುವಿನ ದೇಹವು ಬಿದ್ದರೂ, ಅಮೃತವು ಹೊಕ್ಕ ಆತನ ತಲೆಯು ಅಮರವಾಯಿತು. ಆ ರಾಹುವು ಗ್ರಹಗಳಲ್ಲಿ ಸೇರಿಸಲ್ಪಟ್ಟನು. ಆತನು ಸೂರ್ಯ-ಚಂದ್ರರ ಮೇಲಿನ ದ್ವೇಷದಿಂದ ಈಗಲೂ ಅಮಾವಾಸ್ಯಾ-ಪೂರ್ಣಿಮೆಗಳಲ್ಲಿ ಧಾವಿಸಿ ಹೋಗುವನು. ಗ್ರಹಣಕಾಲದಲ್ಲಿ ಇದರ ಅನುಭವವು ನಮಗೆ ಬರುತ್ತದೆ. ದೇವತೆಗಳಿಗೆ ಬಡಿಸುತ್ತ ಬಡಿಸುತ್ತ ಅಮೃತವು ತೀರಲು, ವಿಷ್ಣುವು ಮೋಹಿನಿಯ ರೂಪವನ್ನು ಬಿಟ್ಟು ನಿಜರೂಪದಿಂದ ದೈತ್ಯರ ಸಮಕ್ಷ ಪ್ರಕಟವಾದನು. ವಿವೇಕಶೀಲಾ, ಈ ಮೇರೆಗೆ ಸ್ಥಳ, ಕಾಲ, ಹೇತು, ಸಾಹಿತ್ಯ, ಇಚ್ಛಾ, ಪ್ರಯತ್ನ ಇವೆಲ್ಲ ದೇವತೆಗಳಿಗೂ, ದೈತ್ಯರಿಗೂ ಸಮಾನವಾಗಿ ಇದ್ದರೂ.

ಫಲವೆಲ್ಲ ದೇವತೆಗಳಿಗೇ ದೊರೆತದ್ದರ ಕಾರಣವು, ಅವರು ಈಶ್ವರನ ಆಶ್ರಯವಮಾಡಿದ್ದೆ ಆಗಿರುವದು. ದೈತ್ಯರು ಆ ಆಶ್ರಯವನ್ನು ಪಡೆಯದ್ದರಿಂದ ಅವರ ಶ್ರಮವು ವ್ಯರ್ಥವಾಯಿತು; ಆದ್ದರಿಂದ ಕಲ್ಯಾಣೇಚ್ಛುವು ಈಶ್ವರನ ಚರಣ ಕಮಲಗಳ ಆಶ್ರಯವಮಾಡಿದರೆ, ಎಷ್ಟು ವಿಘ್ನಗಳೊದಗಿದರೂ ಭಗತ್ಕೃಪೆಯಿಂದ ಅವು ದೂರವಾಗಿ, ಇಷ್ಟಸಿದ್ಧಿಯಾಗುವದು. ಪ್ರಾಣಿಗಳು ಮಾಡುವ ನಾನಾ ವಿಧ ಕರ್ಮಗಳು ಈಶ್ವರಪ್ರೀತ್ಯರ್ಥವಾಗಿ ಇರದೆ, ಶರೀರ–ಪುತ್ರಾದಿಕರ ಪ್ರೀತ್ಯರ್ಥವಾಗಿ ಇರುವವು. ಆದ್ದರಿಂದ ಆ ಕರ್ಮಗಳು ಗಿಡಗಳ ಹರಿಗಳ ಮೇಲೆ ನೀರು ಹಾಕಿದಂತೆ ವ್ಯರ್ಥವಾಗುವವು. ಅದೇ ಈಶ್ವರ ಪ್ರೀತ್ಯರ್ಥವಾಗಿ ಮಾಡಿದ ಕರ್ಮಗಳು ಗಿಡದ ಬೊಡ್ಡೆಗೆ ನೀರು ಹಾಕಿದಂತೆ ಸಫಲವಾಗುವವು.

ಈ ಮೇರೆಗೆ ವಿಷ್ಣುವು ದೇವತೆಗಳಿಗೆ ಅಮೃತಪಾನಮಾಡಿಸಿ, ಗರುಡಾರೂಢನಾಗಿ ಹೋಗಲು, ಇತ್ತ ಆ ಸಮುದ್ರತೀರದಲ್ಲಿ ದೇವದೈತ್ಯರ ಭಯಂಕರ ಯುದ್ಧವಾಯಿತು. ದೇವತೆಗಳು ಮೋಸಮಾಡಿ ಅಮೃತಪಾನಮಾಡಿದ್ದರಿಂದ ದೈತ್ಯರು ಸಿಟ್ಟಾಗಿದ್ದರು. ಆಗಿನ ಭಯಂಕರಯುದ್ಧವು "ದೇವಾಸುರಯುದ್ಧ"ವೆಂಬ ಹೆಸರಿನಿಂದ ಪ್ರಸಿದ್ಧವಾಗಿರುವದು. ಆಗ ದೇವತೆಗಳು ಅಮೃತಪಾನದಿಂದ ಬಲಿಷ್ಠರಾದದ್ದರಿಂದಲೂ, ಅವರ ಮೇಲೆ ಈಶ್ವರನ ಕೃಪೆಯಿದ್ದದ್ದರಿಂದಲೂ ಅವರು ದೈತ್ಯರನ್ನು ಸೋಲಿಸಿದರು. ಈ ಪ್ರಸಂಗದಲ್ಲಿ ಇಂದ್ರನು ಬಲಿಯನ್ನು ತಿರಸ್ಕರಿಸಲು, ಜ್ಞಾನಸಂಪನ್ನನಾದ ಬಲಿಯು ಇಂದ್ರನನ್ನು ಕುರಿತು— ಇಂದ್ರಾ, ಯುದ್ಧಕ್ಕಾಗಿ ಸಮರಭೂಮಿಯಲ್ಲಿ ಪ್ರಾಪ್ತರಾದವರಿಗೆ ಕೀರ್ತಿ, ಜಯ, ಪರಾಜಯ, ಮೃತ್ಯು ಇವುಗಳಲ್ಲಿ ಒಂದಿಲ್ಲೊಂದು ಪ್ರಾಪ್ತವಾಗತಕ್ಕವೇ. ಇವು ಕಾಲಾಧೀನವಾಗಿದ್ದು ಆ ಕಾಲನ ಪ್ರೇರಣೆಯಿಂದಲೇ ಜನರು ಕರ್ಮಮಾಡುತ್ತಿರುವರು; ಅಂತೇ ತಿಳಿದವರು ಜಯವು ಪ್ರಾಪ್ತವಾದರೆ ಆನಂದಪಡುವದಿಲ್ಲ; ಪರಾಜಯವಾದರೆ ದುಃಖಪಡುವದಿಲ್ಲ; ಆದರೆ ಮೂರ್ಖರಾದ ನಿನ್ನಂಥವರಿಗೆ ಈ ವಿಚಾರವೆಲ್ಲಿಯದು! ನಾವು ಕರ್ತೃತ್ವಶಾಲಿಗಳೆಂಬ ಅಭಿಮಾನವು ನಿಮಗಿರುವದರಿಂದ ಎರಡನೆಯವರಿಗೆ ಮರ್ಮಭೇದಕ ಮಾತುಗಳನ್ನಾಡುವಿರಿ; ಆದರೆ ನಿಮ್ಮ ಈ ಕೃತಿಗಾಗಿ ವಿದ್ವಾಂಸರು ಮರುಗುವರು. ಎಂದು ಉತ್ತರಕೊಡಲು, ಇಂದ್ರನು ನಾಚಿದನು. ಆ ಭಯಂಕರಯುದ್ಧದಲ್ಲಿ ಬಲಿಯನ್ನು ಇಂದ್ರನು ಕೊಲ್ಲಲು, ದೈತ್ಯರು ದೇವತೆಗಳಿಂದ ಪರಾಜಿತರಾಗಬೇಕಾಯಿತು. ಆದರೆ ಶುಕ್ರಾಚಾರ್ಯರು ಶಿರಚ್ಛೇದವಾಗದೆಯಿದ್ದ ಬಲಿಯೇ ಮೊದಲಾದವರನ್ನು ತಮ್ಮ ಸಂಜೀವಿನೀ–ಮಂತ್ರದಿಂದ ಬದುಕಿಸಿದರು. ಬಳಿಕ ಯಾವತ್ತೂ ದೈತ್ಯರು ತಮ್ಮ ಸ್ಥಾನವಾದ ರಸಾತಳಕ್ಕೆ ಹೋದರು. ವಿವೇಕಶೀಲಾ, ಈ ಮೇರೆಗೆ ವಿಷ್ಣುವು ಮೋಹಿನೀರೂಪದಿಂದ ದೇವತೆಗಳಿಗೆ ಅಮೃತಪಾನಮಾಡಿಸಿದ ಸುದ್ದಿಯನ್ನು ಭಗವಾನ್ ಶಂಕರನು ಕೇಳಿ, ಆ ಮೋಹಿನೀರೂಪವನ್ನು ನೋಡುವದಕ್ಕಾಗಿ ಭವಾನಿಯೊಡನೆ ವಿಷ್ಣುವಿನ ಬಳಿಗೆ ಬಂದನು. ಆಗ ಶ್ರೀ ವಿಷ್ಣುವು ಮೋಹಿನೀಯರೂಪವನ್ನು ಆತನಿಗೆ ತೋರಿಸಲು, ಮೊದಲಿಗೆ ಶಂಕರನು ಮೋಹಿಸಿದರೂ, ಹಿಂದುಗಡೆ ಜಾಗರೂಕನಾಗಿ ವಿಷ್ಣುವಿಸೆ

ಮಾಯೆಯನ್ನು ಅರಿತು, ಸ್ವಸ್ವರೂಪದಲ್ಲಿ ಇದ್ದನು. ಇದಕ್ಕಾಗಿ ವಿಷ್ಣುವು ಶಂಕರನ ಸ್ತೋತ್ರಮಾಡಿದನು. ವಿವೇಕಶೀಲಾ, ಸಮುದ್ರಮಂಥನದ ಈ ಅದ್ಭುತ ಚರಿತ್ರದ ಶ್ರವಣ-ಪಠನಮಾಡುವವರು ಶಿವಕೃಪೆಯಿಂದ ದುಸ್ತರ ಮಾಯಾ ಸಮುದ್ರವನ್ನು ದಾಟುವರು!

ಈ ಮೇರೆಗೆ ಸಿದ್ಧಮುನೀಶ್ವರನು ನಿರೂಪಿಸಲು, ವಿವೇಕಶೀಲನು ತನ್ನ ಗುರುವನ್ನು ಕುರಿತು—ಸದ್ಗುರೋ, ನೀನು ಹೇಳಿದ ಈ ದೇವಾಸುರರ ಸಮುದ್ರಮಥನವ್ಯಾಪಾರವು ನನಗೆ ಒಳ್ಳೇ ರಹಸ್ಯಯುಕ್ತವಿದ್ದದ್ದಾಗಿ ಕಾಣುತ್ತದೆ; ಯಾಕಂದರೆ ಸುರಾಸುರರು ಅಮೃತದ ಇಚ್ಛೆಯಿಂದ ಸಮುದ್ರವನ್ನು ಕಡೆಯಲು, ವಿಷ ಹುಟ್ಟಿದ್ದು ನನಗೆ ವಿಲಕ್ಷಣವಾಗಿ ತೋರುವದು. ಹೀಗೆ ಸಂಕಲ್ಪವೊಂದು, ಫಲವು ಮತ್ತೊಂದು ಆಗುವದು ಮನುಷ್ಯ ವ್ಯವಹಾರದಲ್ಲಿ ಕಣ್ಣಿಗೆ ಬೀಳುವದುಂಟು; ಆದರೆ ಬ್ರಹ್ಮಾದಿ ದೇವತೆಗಳು ವಿಷ್ಣುವಿನ ಅಪ್ಪಣೆಯಂತೆ ಸಮುದ್ರವನ್ನು ಕಡೆಯಹೋಗಿರಲು, ವಿಷವು ಯಾಕೆ ಹುಟ್ಟಬೇಕು? "ಮನುಷ್ಯಸಂಕಲ್ಪವು ಅಸತ್ಯವು, ದೈವ ಸಂಕಲ್ಪವು ಸತ್ಯವು" ಎಂದು ಹೇಳುವದುಂಟು, ಅಂದಬಳಿಕ ಈಗ ದೈವಸಂಕಲ್ಪವೇ ವಿಪರೀತವು ಯಾಕಾಯಿತು? ಭಗವಾನ್ ಶಂಕರನು ಕರುಣಾಳುವಾಗಿ ವಿಷಪಾನ ಮಾಡಿ ಜಗತ್ತಿನ ಸಂಕಟದ ನಿವಾರಣ ಮಾಡದಿದ್ದರೆ, ದೈವ ಸಂಕಲ್ಪವೂ ಭ್ರಷ್ಟವಾಗುವ ಪ್ರಸಂಗ ಒದಗುತ್ತಿತ್ತಲ್ಲ! ಅದರಂತೆ ಇನ್ನೊಂದು ಶಂಕೆಯು "नदेवादंडमादायरक्षंतिपशूपालवत् ॥ यस्यानुग्रहमिच्छंति बुध्यासंयोजयंतितं ॥" ಎಂಬ ನಿಯಮದಂತೆ, ಬುದ್ಧಿಯೋಜನೆಯ ಸಾಮರ್ಥ್ಯವುಳ್ಳ ವಿಷ್ಣುದೈವತವು ದೈತ್ಯರಿಗೆ ಸದ್ಬುದ್ಧಿಯನ್ನು ಪ್ರೇರಿಸಿಬಿಟ್ಟಿದ್ದರೆ ಕೆಲಸವಾಗಬಹುದಾಗಿರಲು, ಆ ವಿಷ್ಣುವು ಮೋಹಿನೀ ರೂಪ ಧರಿಸುವ ಆಯಾಸವನ್ನು ಯಾಕೆ ಮಾಡಿಕೊಂಡನು? ಇನ್ನು ಇಚ್ಛಾಮಾತ್ರದಿಂದ ಕಾರ್ಯ ಮಾಡುವ ಶಕ್ತಿಯುಳ್ಳ ಆ ಪರಮಾತ್ಮನಿಗೆ ಆಯಾಸವಾಗದಿದ್ದರೆ ಆತನು ರೂಪಾಂತರದ ಇಚ್ಛೆಯನ್ನಾದರೂ ಸುಮ್ಮನೆ ಯಾಕೆ ತಾಳಬೇಕಾಯಿತು? ಅದರಂತೆ ಮತ್ತೊಂದು ಶಂಕೆಯು—ಮಹಾಸಮರ್ಥನಾದ ವಿಷ್ಣುವು ಪ್ರಸಂಗ ಒದಗಲು, ತಾನೇ ಮಂದರಪರ್ವತವನ್ನು ತಂದಿಟ್ಟನು; ಪ್ರಸಂಗ ಒದಗಲು ತಾನೇ ಕೂರ್ಮನಾಗಿ ಮಂದರಪರ್ವತವನ್ನು ಎತ್ತಿಹಿಡಿದನು; ಪ್ರಸಂಗ ಒದಗಲು ತಾನೇ ಸಹಸ್ರಬಾಹು ಪುರುಷನ ಅಜಸ್ರರೂಪವನ್ನು ಧರಿಸಿ ಮಂದರಪರ್ವತದಮೇಲೆ ಕುಳಿತನು; ಪ್ರಸಂಗಒದಗಲು ದೇವದೈತ್ಯರ ಬಲವು ಹೆಚ್ಚುವದಕ್ಕಾಗಿ ತಾನೇಸೂಕ್ಷ್ಮರೂಪದಿಂದ ಅವರ ಶರೀರದಲ್ಲಿ ಪ್ರವೇಶಿಸಿದನು; ಪ್ರಸಂಗ ಒದಗಲು, ತಾನೇ ಪ್ರಚಂಡ ರೂಪಧರಿಸಿ ಸಮುದ್ರಮಥನ ಮಾಡತೊಡಗಿದನು. ಅಂದಬಳಿಕ ಇಂಥವನು ತನ್ನ ಪಕ್ಷಪಾತಿಗಳಾದ ದೇವತೆಗಳನ್ನು ಅವರ ಶತ್ರುಗಳಾದ ದೈತ್ಯರ ಕಡೆಗೆ ಅವರ ಸಹಾಯವನ್ನು ಸಂಪಾದಿಸುವದಕ್ಕಾಗಿ ಯಾಕೆ ಕಳಿಸಿದನು ? ತಮ್ಮ ಶತ್ರುಗಳಾದ ದೈತ್ಯರ ಬಳಿಗೆ ಸಂಧಾನಾರ್ಥವಾಗಿ ಹೋಗುವಾಗ ದೇವತೆಗಳಿಗೆ ಎಷ್ಟು ವ್ಯಥೆಯಾಗಿರಬಹುದಲ್ಲ! ಹೀಗೆ ತನ್ನ ಪಕ್ಷಪಾತಿಗಳಿಗೆ ವ್ಯಥೆಯನ್ನೂ, ಅಪಮಾನವನ್ನೂ ಉಂಟುಮಾಡುವದು ಮಹಾ ಸಮರ್ಥನಾದ ವಿಷ್ಣು-

ವಿನ ಭಕ್ತಪಕ್ಷಪಾತಿತ್ವಕ್ಕೆ ಒಪ್ಪುವದೇ? ಗುರುದೇವಾ, ಅದರಂತೆ, ವಿಷ್ಣುವಿನ ಮೋಹಿನೀ ರೂಪಕ್ಕೆ ಸರ್ವೋತ್ತಮನಾದ ಶಂಕರನೂ ಮೋಹಿಸಿದನೆಂದು ಹೇಳಿ, ಆ ಭಗವಾನ್ ಸದಾಶಿವನ ಸರ್ವಜ್ಞತ್ವಕ್ಕೆ ಭಂಗ ಉಂಟಾದಂತೆ ಮಾಡಿದ್ದರ ರಹಸ್ಯವು ಅಜ್ಞಾನಿಗಳಾದ ನಮಗೆ ತಿಳಿಯಲೊಲ್ಲದು! ಆಹಹ! ಸಮುದ್ರಮಥನದ ಕಥೆಯು ಹೇಳಲಿಕ್ಕೆ ಸುಲಭವಾಯಿತು, ಕೇಳಲಿಕ್ಕೆ ಮನೋರಂಜನವೂ ಆಯಿತು; ಆದರೆ ಅದರೊಳಗಿನ ಗೂಢಗಳನ್ನು ಹೀಗೆಯೇ ಹುಡುಕಹತ್ತಿದರೆ, ನಮ್ಮ ಅಜ್ಞಾನವು ಇನ್ನೂ ಎಷ್ಟು ಹೊರಬೀಳುವದೋ ತಿಳಿಯದು! ಆದರೆ ಸದ್ಗುರುನಾಥಾ, ನಿನ್ನ ಕೃಪಾಕಟಾಕ್ಷದಿಂದ ನಮಗೆ ವಿವೇಕವನ್ನು ದಯಪಾಲಿಸಿ, ನಮ್ಮನ್ನು ಸಂಶಯರಹಿತರಾಗಮಾಡು. ಹೀಗೆ ಇಲ್ಲದ ಅಡ್ಡತಿಡ್ಡ ಪ್ರಶ್ನಗಳನ್ನು ಮಾಡಿ ನಿನಗೆ ತೊಂದರೆ ಕೊಡುವದು ಉಚಿತವಲ್ಲದಿದ್ದರೂ, ನಿನ್ನಂಥ ಶಿಷ್ಯವತ್ಸಲನ ಮುಂದೆಯಲ್ಲದೆ ನಮ್ಮ ಅಜ್ಞಾನವನ್ನು ಇನ್ನು ಯಾರ ಮುಂದೆ ದೂರಿಕೊಳ್ಳಬೇಕು! ಸದ್ಗುರೋ, ನಾವು ನಿನಗೆ ಶರಣು ಹೊಕ್ಕಿದ್ದೇವೆ, ನಮ್ಮ ಯಾವ ಕೊಂಕುಕೊರತೆಗಳನ್ನೂ ಎಣಿಸದೆ, ನಮ್ಮ ಪಾಮರತ್ವವನ್ನು ಲಕ್ಷಿಸಿ, ನಮ್ಮ ಸಂಶಯಗಳ ನಿವಾರಣ ಮಾಡು. ಅನಿಮಿತ್ತಬಂಧುವೇ, ನೀನು ತಾಯಿಯು, ನಾವು ಅಜ್ಞಾನಿಗಳಾದ ಮಕ್ಕಳು!

ವಿವೇಕಶೀಲನ ಈ ಪ್ರಶ್ನಗಳನ್ನು ಕೇಳಿ ಸಿದ್ಧಮುನೀಶ್ವರನು ಪರಮಾನಂದಪಟ್ಟು— ವಿವೇಕಶೀಲಾ, ನಿನ್ನ ಪ್ರಶ್ನಗಳು ಅಡ್ಡತಿಡ್ಡಪ್ರಶ್ನಗಳಲ್ಲ; ಜ್ಞಾನಾಭಿವೃದ್ಧಿಗೆ ಸಾಧನಗಳಾದಂಥವು! ಶ್ರೀ ಶಿವಚರಿತ್ರ ಶ್ರವಣದ ಪುಣ್ಯದಿಂದ ನಿನ್ನ ಬುದ್ಧಿಯಲ್ಲಿ ಉಂಟಾಗಿರುವ ತೀವ್ರತೆಯನ್ನು ನೋಡಿ ನನಗೆ ಬಹಳ ಸಂತೋಷವಾಗುತ್ತದೆ. ನಿನ್ನ ಅರ್ಥಪೂರ್ಣವಾದ ಗಂಭೀರ ಪ್ರಶ್ನಗಳಿಗೆ ಉತ್ತರ ಕೊಡುವಾಗ ನನ್ನ ವಿಚಾರಶಕ್ತಿಗೂ ಚಾಲನೆಯುಂಟಾಗಿ, ಭಗವಾನ್ ಸದಾಶಿವನ ಲೀಲೆಯ ಮಹಿಮೆಯು ನನಗೆ ಹೆಚ್ಚು ಹೆಚ್ಚಾಗಿ ತಿಳಿಯಲಿಕ್ಕೆ ಆಸ್ಪದವಾಗುತ್ತದೆ; ಅಂದಬಳಿಕ ನನಗಾಗುವ ಈ ಲಾಭವು ಸಾಮಾನ್ಯವಾದದ್ದಲ್ಲ. ಬಹಳ ಸಂತೋಷವು, ನೀನು ಕೇಳಿದ ಪ್ರಶ್ನಗಳಿಗೆ ಕ್ರಮವಾಗಿ ಉತ್ತರಗಳನ್ನು ಹೇಳುವೆನು ಕೇಳು. ದೇವತೆಗಳು ಅಮೃತದಸಲುವಾಗಿ ಯತ್ನಿಸುವಾಗ ವಿಷವು ಹೊರಟದ್ದರಿಂದ ದೈವೀಸಂಕಲ್ಪಕ್ಕೆ ವ್ಯತ್ಯಾಸವಾಯಿತೆಂದು ನೀನು ಶಂಕಿಸಿದೆಯಲ್ಲವೆ? ಆ ಮಹತ್ವದ ಶಂಕೆಯ ಸಮಾಧಾನವನ್ನು ಮೊದಲು ಮಾಡುವೆನು ಕೇಳು. ಷಡ್ಗುಣೈಶ್ವರ್ಯಸಂಪನ್ನನಾದ ಭಗವಾನ್ ಸದಾಶಿವನು ಸರ್ವೋತ್ತಮನಾಗಿದ್ದು, ಆತನ ಮಾಯೆಯ ಸತ್ವ-ರಜಸ್ತಮೋ ಗುಣಗಳ ಯೋಗದಿಂದ ಕ್ರಮವಾಗಿ ವಿಷ್ಣು-ಬ್ರಹ್ಮ-ರುದ್ರರು ಆ ಸದಾಶಿವರೂಪದ ಬ್ರಹ್ಮನಿಂದ ಉತ್ಪನ್ನರಾದದ್ದನ್ನು ಈ ಮೊದಲು ನಾನು ಹೇಳುತ್ತ ಬಂದಿರುವೆನಷ್ಟೆ! ರಜೋಗುಣಿಯಾದ ಬ್ರಹ್ಮನ ಕೆಲಸವು ಸದಾಶಿವನ ಕೃಪೆಯಿಂದ ಸೃಷ್ಟಿ ಮಾಡುವದು, ಸತ್ವಗುಣಿಯಾದ ವಿಷ್ಣುವಿನ ಕೆಲಸವು ಸದಾಶಿವನು ಕರುಣಿಸಲು, ಉಪಾಯದಿಂದ ಸೃಷ್ಟಿಯ ಪಾಲನಮಾಡುವದು; ತಮೋಗುಣಿಯಾದ ರುದ್ರನ ಕೆಲಸವು ಸದಾಶಿವಾಧೀನತೆಯಿಂದ ಸೃಷ್ಟಿಯ ಸಂಹಾರಮಾಡುವದು. ಹೀಗೆ ತ್ರಿಮೂರ್ತಿಗಳ ಕೆಲಸಗಳು ನಿರ್ಧರವಾಗಿರುವವಷ್ಟೆ! ದುರ್ವಾಸಶಾಪದಿಂದ ತನ್ನ ಪದವಿಯನ್ನು ಕಳೆದು

ಕೊಂಡ ಇಂದ್ರನು, ತಾವು ದೇವತೆಗಳೆಲ್ಲರೂ ಅಮರರಾಗುವ ಉಪಾಯವನ್ನು ಕೇಳಿಕೊಳ್ಳಬೇಕೆಂದು ಬ್ರಹ್ಮದೇವನನ್ನು ಕೇಳಲಿಕ್ಕೆ ಹೋದದ್ದು ಸ್ವಾಭಾವಿಕವು. ಯಾಕಂದರೆ, ಅಮರತ್ವದ ಸಂಪಾದನೆಗೆ ಬೇಕಾಗುವ ಸಾಧನವನ್ನು ಒದಗಿಸಿ ಕೊಡುವದು ಸೃಷ್ಟಿಕರ್ತೃವಾದ ಬ್ರಹ್ಮನ ಕೆಲಸವು; ಆದರೆ ಬ್ರಹ್ಮನಿಗೆ ತಕ್ಕ ಉಪಾಯವು ತೋಚದ್ದರಿಂದ ಆತನು ಉಪಾಯಕೋವಿದನಾದ ವಿಷ್ಣುವಿನಬಳಿಗೆ ಯಾವತ್ತು ದೇವತೆಗಳನ್ನು ಕಟ್ಟಿಕೊಂಡು ಹೋದನು; ಅದರಂತೆ ವಿಷ್ಣುವು—"ನೀವು ಸಮುದ್ರಮಥನ ಮಾಡಿರಿ, ಅದರಿಂದ ಅಮೃತವು ಉಂಟಾಗುವದು" ಎಂದು ಉಪಾಯವನ್ನು ಹೇಳಿದನು; ಆದರೆ ಎಲ್ಲ ದೇವತೆಗಳಿಗೆ ದೇವತ್ವವನ್ನು ಕೊಟ್ಟಿರುವ ಭಗವಾನ್ ಸದಾಶಿವನಿಗೆ ಶರಣುಹೋಗಿ ತಪಶ್ಚರ್ಯಮಾಡಿ ಆತನ ಅನುಗ್ರಹಪಡೆಯಬೇಕೆಂಬ ವಿಚಾರವು ಆ ಸದಾಶಿವನ ಮಾಯೆಯ ಪ್ರಭಾವದಿಂದ ಸೃಷ್ಟಿಕರ್ತೃವಾದ ಬ್ರಹ್ಮನಿಗೂ ಹುಟ್ಟಲಿಲ್ಲ, ಉಪಾಯ ಕೋವಿದನಾದ ಸ್ಥಿತಿಕರ್ತೃವಿಷ್ಣುವಿಗೂ ಹುಟ್ಟಲಿಲ್ಲ; ಅಂದಬಳಿಕ ಸ್ವಾರ್ಥಪರರಾದ ಇಂದ್ರಾದಿ ದೇವತೆಗಳಿಗೆ ಈ ವಿಚಾರವು ಹ್ಯಾಗೆ ಹುಟ್ಟಬೇಕು? ವಿವೇಕಶೀಲರೇ, ಅಹಂಕಾರರಹಿತ ತಪಶ್ಚರ್ಯದಿಂದ ಭಗವಂತನ ಕೃಪೆಯನ್ನು ಸಂಪಾದಿಸಿದ್ದರೆಯೇ ಕಲ್ಯಾಣಪ್ರದವಾದ ಕಾರ್ಯಸಿದ್ಧಿಯಾಗುವದು; ಹಾಗೆ ಸಿದ್ಧಿಸಿದ ಕಾರ್ಯದಿಂದಲೇ ಕರ್ತೃವಿನ ಶಾಶ್ವತಕಲ್ಯಾಣವಾಗುವದು. ಅಹಂಕಾರದ ತಪಶ್ಚರ್ಯದಿಂದ ಒಂದು ಪಕ್ಷದಲ್ಲಿ ಫಲಪ್ರಾಪ್ತಿಯಾದರೂ ಅಂಥ ಫಲದಿಂದ ಶಾಶ್ವತ ಕಲ್ಯಾಣವಾಗುವದಿಲ್ಲ; ಅದು ಕರ್ತೃವಿನ ನಾಶಕ್ಕೆ ಕಾರಣವಾಗುವದು. ಆದ್ದರಿಂದ ಅಹಂಕಾರವು ನಾಶದ ಕಾರಣವೆಂಬದನ್ನು ಲಕ್ಷದಲ್ಲಿಡು. ಅಹಂಕಾರಿಗಳಾದ ದೈತ್ಯರು ತಪಶ್ಚರ್ಯದಿಂದ ಮಹತ್ಫಲಗಳನ್ನು ಬ್ರಹ್ಮಾದಿದೇವತೆಗಳಿಂದ ಸಂಪಾದಿಸಿದರೂ, ಅವರ ಅಹಂಕಾರದ ನಾಶವಾಗದ್ದರಿಂದ ಕಡೆಗೆ ಅವರು ಸಂಪಾದಿಸಿದ ಮಹತ್ಫಲಗಳೇ ಅವರ ನಾಶಕ್ಕೆ ಕಾರಣವಾದವು. ಒಟ್ಟಿಗೆ ಅಹಂಕಾರಯುಕ್ತರೇ ಇರಲಿ, ಅಹಂಕಾರ ರಹಿತರೇ ಇರಲಿ, ಕಾರ್ಯಸಿದ್ಧಿಗೆ ಈಶ್ವರೋಪಾಸನಾಮೂಲವಾದ ತಪಶ್ಚರ್ಯವು ಅವಶ್ಯವಾಗಿರುವದೆಂದು ದೇವ–ದೈತ್ಯ–ಮನುಷ್ಯರ ಉದಾಹರಣಗಳಿಂದ ಕಂಡುಬರುವದು.

ಹೀಗಿದ್ದು, ವಿವೇಕಶೀಲರೇ, ಬ್ರಹ್ಮಾದಿದೇವತೆಗಳು ಮಾಯಾಮೋಹಿತರಾಗಿ ಭಗವಾನ್ ಸದಾಶಿವನನ್ನು ಶರಣುಹೋಗಿ ತಪಶ್ಚರ್ಯಮಾಡದೆ, ಸಮುದ್ರಮಂಥನದ ಕಾರ್ಯಕ್ಕೆ ತಮ್ಮ ತಮ್ಮ ಬಲದ ಹೆಮ್ಮೆಯಿಂದ ಕೈಹಾಕಿ ಹೆಣಗಿದರು; ಅಂದಬಳಿಕ ಸರ್ವಕಾರಣನಾದ ಸದಾಶಿವ ಪರಮಾತ್ಮನನ್ನು ಮರೆತ ದೇವತೆಗಳ ಕಲ್ಯಾಣವು ಹ್ಯಾಗಾಗಬೇಕು? ಅಂತೇ ದೇವತೆಗಳ ಅಹಂಕಾರ ನಿವೃತ್ತಿಗಾಗಿ ಶಿವಸಂಕಲ್ಪದಿಂದ ಶಿವಕೃಪಾರೂಪವಾದ ಹಾಲಾಹಲವಿಷವು ಉತ್ಪನ್ನವಾಯಿತು! ಆಗ ಬ್ರಹ್ಮಾದಿದೇವತೆಗಳ ಅಹಂಕಾರ ನಿವೃತ್ತಿಯಾಗಿ ಅವರೆಲ್ಲರು ಭಗವಾನ್ ಶಂಕರನಿಗೆ ಶರಣುಹೋಗಲು, ಆ ವಿರಾಗಿಶಿಖಾಮಣಿಯಾದ ಭಕ್ತವಾತ್ಸಲ್ಯದ ಭೋಲಾನಾಥನು, ಹುಟ್ಟಿದ ಆ ವಿಷವೇ ತನಗೆ ದೇವತೆಗಳಿಂದ ಅರ್ಪಿಸಲ್ಪಟ್ಟ ವಸ್ತುವೆಂದು ಪರಿಗ್ರಹಿಸಿ, ಮುಂದೆ ಅಮೃತಾದಿ ದೈವೀವಸ್ತು

ಗಳು ದೇವತೆಗಳಿಗೆ ಪ್ರಾಪ್ತವಾಗುವಂತೆ ಕರುಣಿಸಿದನು! ವಿವೇಕಶೀಲಾ, "ಪತ್ರಂ, ಪುಷ್ಪಂ, ಫಲಂ, ತೋಯಂ, ಯೋಮೇಭಕ್ತ್ಯಾ ಪ್ರಯಚ್ಛತಿ" ಅನ್ನುವಂತೆ, ಭಕ್ತಿಯಿಂದ ಪತ್ರ-ಪುಷ್ಪ-ಹಣ್ಣು-ನೀರು ಎಂಬ ಪ್ರಾಣಹಾರಕವಲ್ಲದ ಪದಾರ್ಥಗಳನ್ನು ಕೊಟ್ಟರೆ ಕರುಣಿಸುವ ದೇವತೆಗಳು ಇರಬಹುದು; ಆದರೆ ಹಾಲಾಹಲ ವಿಷದ ತಾಪದಿಂದ ಮೈಮರೆತು ಶರಣು ಹೋಗಿರುವ ದೇವತೆಗಳು ಭಕ್ತಿಯ ಮಾತಂತು ಇರಲಿ, ಏನು ಕೊಡಲಿಕ್ಕೂ ಶಕ್ತರಾಗದಿರಲು, ಆ ಹುಟ್ಟಿದ ವಿಷವನ್ನೇ ಅವರು ಕೊಟ್ಟ ವಸ್ತುವೆಂದು ಪರಿಗ್ರಹಿಸಿ ಕರುಣಿಸಿದ ಕರುಣಾಲುಶಿಖಾಮಣಿಯು ನಮ್ಮ ಚಂದ್ರಶೇಖರನಲ್ಲದೆ ಮತ್ತೆ ಯಾರಿರುವರು ಹೇಳು! ಆದ್ದರಿಂದ ವಿವೇಕಶೀಲಾ, ದೇವತೆಗಳ ಮಾಯಾನಿವಾರಣಕ್ಕಾಗಿಯೇ ಭಗವಾನ್ ಶಂಕರನ ಕೃಪೆಯಿಂದ ಹಾಲಾಹಲವು ಉತ್ಪನ್ನವಾಯಿತು. ಮೊದಲಿಗೇ ದೇವತೆಗಳು ಅಹಂಕಾರರಹಿತರಾಗಿ ಸದಾಶಿವನಿಗೆ ಶರಣು ಹೋಗಿದ್ದರೆ ಅವರು ಸತ್ಯಸಂಕಲ್ಪರೇ ಆಗುತ್ತಿದ್ದರು; ಅಹಂಕಾರದಿಂದ ಮಾಡಿದ ಸಂಕಲ್ಪವು ಸತ್ಯಸಂಕಲ್ಪವಲ್ಲ; ಮಾಯಾಮೋಹಿತ ಸಂಕಲ್ಪವು; ಆದ್ದರಿಂದ, ನೀನು ದೈವವೆಂದರೆ ಭಗವಾನ್ ಸದಾಶಿವನೆಂತಲೂ, ದೈವಸಂಕಲ್ಪವೆಂದರೆ ಶಿವಸಂಕಲ್ಪವೆಂತಲೂ ತಿಳಿದುಕೋ. ಎಲ್ಲ ದೇವತೆಗಳು ಸದಾಶಿವ ದೈವತದಲ್ಲಿಯೂ, ಯಾವತ್ತು ದೇವತೆಗಳ ಅಹಂಕಾರರಹಿತ ಸಂಕಲ್ಪಗಳು ಸದಾಶಿವನ ಸಂಕಲ್ಪದಲ್ಲಿಯೂ ಅಂತರ್ಭೂತವಾಗುವವೆಂಬದನ್ನು ಮರೆಯಬೇಡ. ಪರಾತ್ಪರನಾದ ಸದಾಶಿವನಲ್ಲಿ ಬುದ್ಧಿಯಿಲ್ಲದವರು ದೇವತೆಗಳೇ ಇರಲಿ, ದೈತ್ಯರೇ ಇರಲಿ, ಮನುಷ್ಯರೇ ಇರಲಿ ಅವರೆಲ್ಲ ದ್ವಿಪಾದ ಪಶುಗಳೆಂದು ತಿಳಿದುಕೊಳ್ಳಬೇಕು; ಅಂಥವರನ್ನು ಅನುಗ್ರಹಿಸುವದಕ್ಕಾಗಿ ಅವರ ಹೃದಯವನ್ನು ಪ್ರವೇಶಿಸುವದರಿಂದಲೇ ಭಗವಾನ್ ಸದಾಶಿವನಿಗೆ ಪಶುಪತಿಯೆಂಬ ಹೆಸರು ಪ್ರಾಪ್ತವಾಗಿರುವದು! ಅಂದಬಳಿಕ ನಾನಾಗಲಿ, ನೀನಾಗಲಿ, ಜಗತ್ತಾಗಲಿ, ಅಹಂಕಾರರಹಿತವಾಗುವದಕ್ಕಾಗಿ ಭಗವಾನ್ ಸದಾಶಿವನಿಗೆ ಶರಣು ಹೋಗಿ ತಪಶ್ಚರ್ಯ ಮಾಡದಿದ್ದರೆ ಕಲ್ಯಾಣಕಾರಕವಾದ ಫಲವು ದೊರೆಯದು; ತಪಶ್ಚರ್ಯದ ಫಲವು ಅಹಂಕಾರ ನಿವೃತ್ತಿಯೇ ಆಗಿರುವದು! ಅಹಂಕಾರ ನಿವೃತ್ತಿಯಾಗಬೇಕಾದರೆ ದುರ್ಗುಣಗಳ ನಾಶವಾಗಿ ಚಿತ್ತಶುದ್ಧಿಯಾಗಬೇಕು. ಆ ಚಿತ್ತಶುದ್ಧಿಗಾಗಿ ಭಗವಾನ್ ಸದಾಶಿವನನ್ನು ಚಿತ್ತದಲ್ಲಿರಿಸಿಕೊಳ್ಳುವದೇ ಉಪಾಯವು. ವಿವೇಕಶೀಲಾ, ಲೌಕಿಕದಲ್ಲಿ ಇಂಥ ಚಿತ್ತ ಶುದ್ಧಿಯನ್ನು ಪಡೆಯದೆ ಬರಿಯ ತಪೋಬಲದಿಂದಾಗಲಿ, ಶರೀರ ಬಲದಿಂದಾಗಲಿ, ದ್ರವ್ಯಬಲದಿಂದಾಗಲಿ ಕಾರ್ಯವನ್ನು ಸಾಧಿಸಹೋಗುವ ವಾಡಿಕೆಯಿರುವದರಿಂದ ಕಾರ್ಯಹಾನಿಯಾಗುವದೇ ಬಹಳ; ಒಂದು ಪಕ್ಷದಲ್ಲಿ ಕಾರ್ಯವಾದಂತೆ ತೋರಿದರೂ ಅದು ಕಲ್ಯಾಣಕಾರಿಯಾಗುವದಿಲ್ಲ; ಆದ್ದರಿಂದ ಕಲ್ಯಾಣಕಾರಕಕಾರ್ಯವು ಅಹಂಕಾರದ ತಪೋಬಲದಿಂದಾಗಲಿ, ಶರೀರಬಲದಿಂದಾಗಲಿ, ದ್ರವ್ಯಬಲದಿಂದಾಗಲಿ ಆಗದೆ, ಚಿತ್ತ ಶುದ್ಧಿಯ ಆತ್ಮಬಲದಿಂದಾಗುವದೆಂಬದನ್ನು ಗಟ್ಟಿಮುಟ್ಟಿಯಾಗಿ ತಿಳಿದುಕೋ. ಅದರಂತೆ ವಿವೇಕಶೀಲಾ, "ಶ್ರೇಯಾಂಸಿ ಬಹುವಿಘ್ನಾನಿ ಎಂಬಂ"ತೆ ಕರ್ತೃವಿನ ದಾರ್ಢ್ಯವೃದ್ಧಿಗಾಗಿ ಶ್ರೇಯಃಕರವಾದ ಮಹಾಕಾರ್ಯಕ್ಕೆ ವಿಘ್ನಗಳು ಬರತಕ್ಕವೇ. ಅದರಂತೆ

ದೇವ-ದೈತ್ಯರಿಗೆ ಹಲವು ವಿಘ್ನಗಳೊದಗಿದರೂ ಅವರು ದೃಢ ನಿಶ್ಚಯದಿಂದ ಪ್ರಯತ್ನ ಮಾಡಿ ಕಡೆಗೆ ಈಶ್ವರನ ಕೃಪೆಯಿಂದ ಫಲ ಹೊಂದಿದ್ದು ನೆನಪಿಡತಕ್ಕ ಮಾತಾಗಿದೆ.

ಇನ್ನು ನಿನ್ನ ಎರಡನೆಯ ಶಂಕೆಯನ್ನು ಕುರಿತು ಹೇಳುವೆನು ಕೇಳು- ಭಗವಾನ್ ವಿಷ್ಣುವು ದೈತ್ಯರಿಗೆ ಸದ್ಬುದ್ಧಿಯನ್ನು ಪ್ರೇರಿಸದೆ ಮೋಹಿನಿಯ ರೂಪವನ್ನು ತಾಳಿ ಯಾಕೆ ಆಯಾಸಪಟ್ಟನೆಂದು ಕೇಳುವೆಯಲ್ಲವೆ? ನಿನಗೆ ಹಿಂದಕ್ಕೆ ಬಲಿಯ ಸತ್ವಹರಣದ ರಹಸ್ಯದಲ್ಲಿ ದೈವೀಧರ್ಮವನ್ನು, "ಯೇಯಥಾಮಾಂಪ್ರಪದ್ಯಂತೆ ತಾಂಸ್ತಥೈವ ಭಜಾಮ್ಯಹಂ" ಎಂಬ ಉಕ್ತಿಯಂತೆ "ಯಾರು ನನ್ನ ಸಂಗಡ ಹ್ಯಾಗೋ, ಹಾಗೆ ಅವರ ಸಂಗಡ ನಾನು ನಡೆದುಕೊಳ್ಳುವೆನು." ಎಂಬದಾಗಿ ಹೇಳಿರುವದನ್ನು ನೀನು ಮರೆತಿರಲಿಕ್ಕಿಲ್ಲ- "ಯಸ್ಯಾನುಗ್ರಹಮಿಚ್ಛಂತಿ ಬುಧಾ ಸ್ಸಂಯೋಜಯಂತಿತಂ" ಎಂಬ ಉಕ್ತಿಯಂತೆ, ದೇವರು ಯಾರಿಗೆ ಅನುಗ್ರಹ ಮಾಡಬೇಕೆಂದು ಇಚ್ಛಿಸುವನೋ ಅವರಿಗೆ ಮಾತ್ರ ಸದ್ಬುದ್ಧಿಯನ್ನು ಕೊಡುವನು; ದೇವರ ಅನುಗ್ರಹವನ್ನು ಸಂಪಾದಿಸಲಿಚ್ಛಿಸುವವರು "ಸರ್ವಕರ್ಮಾನ್‌ಪರಿತ್ಯಜ್ಯಮಾಮೇಕಂಶರಣಂವ್ರಜ" ಎಂಬಂತೆ ತಮ್ಮ ಕರ್ತೃತ್ವಾಭಿಮಾನವಯಾವತ್ತು ಕರ್ಮಗಳನ್ನು ಬಿಟ್ಟು ಅಂದರೆ ಅಹಂಕಾರರಹಿತರಾಗಿ ನನಗೆ ಶರಣುಬರಬೇಕೆಂದು ಭಗವಂತನು ಗೀತೆಯಲ್ಲಿ ಹೇಳಿರುವನು; ಅಂದಬಳಿಕ ದೈತ್ಯರು ಸಂಪೂರ್ಣ ಅಹಂಕಾರಾವೃತರಾಗಿರಲು, ಅವರಿಗೆ ಈಶ್ವರನು ಸದ್ಬುದ್ಧಿಯನ್ನು ಹ್ಯಾಗೆ ಪ್ರೇರಿಸಬೇಕು? ಅವರ ಬುದ್ಧಿಯು ಅವರ ಪೂರ್ವ ಕರ್ಮವನ್ನು ಅನುಸರಿಸುವದು. ನಾವು ಮಹಾಬಲಶಾಲಿಗಳೆಂದು ಅಹಂಕಾರಪಡುವ ದೈತ್ಯರ ಅಹಂಕಾರವನ್ನು "ನಾನು ಎಂಥ ಬಲಿಷ್ಠರನ್ನಾದರೂ ಮೋಹಿಸಬಲ್ಲೆನೆಂ"ಬ ಅಹಂಕಾರದ ಮೋಹಿನಿಯರೂಪದಿಂದಲೇ ಶ್ರೀ ವಿಷ್ಣು ಪರಮಾತ್ಮನು ದೈತ್ಯರ ಅಹಂಕಾರದ ಶ್ರಮವನ್ನು ವಿಫಲವಾಗಿ ಮಾಡಿದನು! ಆ ಅಹಂಕಾರಿಗಳಾದ ದೈತ್ಯರು ಕಲ್ಯಾಣಕಾರಕ ಫಲಕ್ಕೆ ಭಾಗಿಗಳೇ ಆಗದಿರುವಾಗ, ಪರಮಾತ್ಮನು ಅವರಿಗೆ ಸದ್ಬುದ್ಧಿಯನ್ನು ಕೊಟ್ಟು ಅವರಿಗೂ ಅಮೃತಪ್ರಾಶನವನ್ನು ಹ್ಯಾಗೆ ಮಾಡಿಸುವನು? ಅಮೃತವು ಹೊರಟಕೂಡಲೆ ತಮ್ಮಲ್ಲಿರುವ ಬಲದ ಹೆಮ್ಮೆಯಿಂದ ದೇವತೆಗಳ ಮೋರೆಯ ಮೇಲೆ ಹೊಡೆದು ಅಮೃತಕಲಶವನ್ನು ಕಸಿದುಕೊಂಡ ದೈತ್ಯರು, ಅಮೃತಪ್ರಾಶನ ಮಾಡಿ ಅಮರರಾದರೆ ಜಗತ್ತಿನಲ್ಲಿ ನ್ಯಾಯನೀತಿಗಳು ಎಷ್ಟರಮಟ್ಟಿಗೆ ಉಳಿಯಬಹುದು? ವಿವೇಕಶೀಲಾ, ನ್ಯಾಯತಃ ಅಮೃತದಲ್ಲಿ ದೇವತೆಗಳ ಭಾಗವಿದ್ದು, ಅದನ್ನು ದೈತ್ಯರು ಬಲಾತ್ಕಾರದಿಂಥ ಹರಣಮಾಡಿದರು; ಮತ್ತು ಪರಸ್ತ್ರೀಯಾದ ಮೋಹಿನಿಯ ದರ್ಶನವಾದಕೂಡಲೆ ಆಕೆಯ ರೂಪಕ್ಕೆ ಮೋಹಿಸಿ "ನೀನು ಮೂಸಿನೋಡದ ಹೂವಿನಂತೆ ಇರುವೆ" ಎಂದು ಹುಚ್ಚುಹುಚ್ಚು ಮಾತಾಡುತ್ತ ಆಕೆಯನ್ನು ಅಪಹರಿಸುವ ಯತ್ನ ಮಾಡಿದರು. ಹೀಗೆ ಪರಧನ-ಪರಕಾಮಿನಿಯರ ಅಪಹಾರಕ್ಕೆ ಮನಸ್ಸು ಮಾಡುವ ವಿವೇಕಶೂನ್ಯ ದೈತ್ಯರು ಅಮೃತಪ್ರಾಶನ ಮಾಡಿ ಅಮರರಾದರೆ ಅವರಿಗಾಗಲಿ, ಜಗತ್ತಿಗಾಗಲಿ ಹಿತವಾಗಬಹುದೊ? ಲೀಲಾನಾಟಕಿಯಾದ ಪರಮಾತ್ಮನು ತನ್ನ ಲೀಲೆಗಾಗಿ ಈ ಸೃಷ್ಟಿಯನ್ನು ರಚಿಸಿರಲು, ಇಂಥ ದೈತ್ಯರು ಅಮರರಾಗುವದರಿಂದ ಆತನ ಲೀಲೆಯಾದರೂ

ಸರಿಯಾಗಿ ಸಾಗಬಹುದೊ? ವಿವೇಕಶೀಲಾ, ನೀನು ಯಾರೊಬ್ಬರ ಬರಿಯ ತಪೋಬಲವನ್ನಾಗಲಿ, ಶರೀರಬಲವನ್ನಾಗಲಿ, ದ್ರವ್ಯಬಲವನ್ನಾಗಲಿ ನೋಡಬೇಡ. ಅವರ ಆತ್ಮಬಲವನ್ನು ನೋಡು. ಅವರ ಆತ್ಮ ಬಲದ ಮಾನವನ್ನು ಅವರ ಚಿತ್ತಸುದ್ಧಿಯ ಮಾನದಿಂದ ಅಳೆಯಬೇಕಾಗುವದು. ಶುದ್ಧ ಚಿತ್ತರಲ್ಲದವರ ತಪೋಬಲ-ಶರೀರಬಲ-ದ್ರವ್ಯಬಲಗಳು ವಿಷಮಿಶ್ರಿತ ಕ್ಷೀರದಂತೆ ಸರ್ವಥಾತ್ಯಾಜ್ಯವಾಗಿರುವವು! ಅಂತೇ ಅಹಂಕಾರಿಗಳಾದ ದೈತ್ಯರಲ್ಲಿಯ ಈ ಮೂರು ಬಲಗಳೂ ಅಹಂಕಾರದಿಂದ ದೂಷಿತವಾಗಿದ್ದದ್ದರಿಂದ ಶ್ರೀ ವಿಷ್ಣುಪರಮಾತ್ಮನು ಅಹಂಕಾರದ ಮೋಹಿನಿಯ ರೂಪದಿಂದಲೇ ಆ ದುಷ್ಟರ ಅಮರತ್ವಕ್ಕೆ ವಿಘ್ನವನ್ನುಂಟುಮಾಡಿದನು!

ವಿಷ್ಣುವು ಮಹಾ ಸಮರ್ಥನಿದ್ದು, ತನ್ನ ಪಕ್ಷದವರಾದ ದೇವತೆಗಳನ್ನು ದೈತ್ಯರ ಬಳಿಗೆ ಸಂಧಾನಕ್ಕೆ ಕಳಿಸದೆ, ತಾನೇ ದೇವತೆಗಳಿಗೆ ಅಮೃತವನ್ನು ಯಾಕೆ ಒದಗಿಸಿ ಕೊಡಲಿಲ್ಲವೆಂದು ನೀನು ಕೇಳುವೆಯಷ್ಟೆ? ಆದರೆ ಸೃಷ್ಟಿಕರ್ತನಾದ ದೇವರು ಮೂಲತಃ ದೈತ್ಯರನ್ನು ಉತ್ಪನ್ನ ಮಾಡದೆ ಬರಿಯ ದೇವತೆಗಳನ್ನೇ ಉತ್ಪನ್ನ ಮಾಡಿದ್ದರೆ ನೆಟ್ಟಗಾಗುತ್ತಿತ್ತಲ್ಲವೆ? ಆದರೆ ಈಶ್ವರೀ ಸಂಕೇತವು ಹಾಗಿರುವದಿಲ್ಲ; ದೇವರು ಈ ಸೃಷ್ಟಿಯನ್ನು ತನ್ನ ಕ್ರೀಡೆಗಾಗಿ ರಚಿಸಿರುವನೆಂದು ಜ್ಞಾನಿಗಳು ಹೇಳುವರು. ಅಂದಬಳಿಕ ಕ್ರೀಡೆಯಲ್ಲಿ ವಿವಿಧತ್ವವಿದ್ದರೆಯೇ ಅದಕ್ಕೆ ರಂಗು ಬರುವದರಿಂದ, ಒಳಿತು ಕೆಡಕಿನದೇವರು ಸೃಷ್ಟಿಯನ್ನುಮಿಶ್ರಣದ ವಿವಿಧತ್ವದಿಂದ ಉಂಟುಮಾಡಿರುವನು. ಈಶ್ವರನ ಲೀಲಾನಾಟಕವಾದ ಈ ಸೃಷ್ಟಿಯಲ್ಲಿ ಒಮ್ಮೆ ದೇವತೆಗಳು ಪ್ರಬಲರಾಗುವರು, ಒಮ್ಮೆ ದೈತ್ಯರು ಪ್ರಬಲರಾಗುವರು; ಒಮ್ಮೆ ಧರ್ಮವು ಜಯ ಹೊಂದುವದು, ಒಮ್ಮೆ ಅಧರ್ಮಕ್ಕೆ ಜಯ ಬಂದಂತೆ ತೋರುವದು.; ಒಮ್ಮೆ ಈಶ್ವರನು ದೇವತೆಗಳ ಪಕ್ಷ ಕಟ್ಟುವನು, ಒಮ್ಮೆ ದೈತ್ಯರ ಪಕ್ಷಕಟ್ಟುವನು. ಇದಲ್ಲದೆ ಈಶ್ವರನ ಈ ವಿಲಕ್ಷಣವಾದ ಲೀಲಾ ನಾಟಕದಲ್ಲಿ ನಾಟಕದ ಪಾತ್ರಗಳಾದ ದೇವ-ದೈತ್ಯ-ಮನುಷ್ಯ-ತಿರ್ಯಾಗಾದಿ ಚೇತನ ಕೋಟಿಗಳೂ, ಆ ಚೇತನ ಕೋಟಿಯ ಉಪಕರಣಗಳಾದ ಅಚೇತನ ಪದಾರ್ಥಗಳೂ, ಈಶ್ವರನೇ ಅಥವಾ ಈಶ್ವರನವೇ ಆಗಿದ್ದು, ನಾಟಕ ನೋಡುವವನೂ ಈಶ್ವರನೇ ಆಗಿರುವನು! ವಿವೇಕಶೀಲಾ, ನಾಟಕವು ನವರಸಭರಿತವಾಗಿದ್ದರೆಯೇ ಉತ್ತಮವೆಂದು ಹೇಳಲ್ಪಡುವದರಿಂದ, ಪರಮೇಶ್ವರನು ಕೃತಯುಗದಿಂದ ಆಟವನ್ನು ಆರಂಭಿಸಿ ಲೀಲಾಮಗ್ನನಾಗುತ್ತಾಗುತ್ತ ಕಲಿಯುಗದಲ್ಲಿ ನಾಟಕವು ಒಳ್ಳೇ ಭರಕ್ಕೆ ಬರಬೇಕೆಂದು ಉತ್ತರೋತ್ತರ ಜೀವಕೋಟಿಗಳ ಸ್ವಭಾವದಲ್ಲಿ ವೈಚಿತ್ರ್ಯವನ್ನು ಹೆಚ್ಚಿಸುತ್ತ ನಾಟಕಕ್ಕೆ ರಂಗು ಏರಿಸುತ್ತ ಬಂದಿರುವನು. ಹೀಗೆ ಆಟಮಾಡುವ ಭಗವಂತನಿಗೆ ಆಟವು ಸಾಕಾಯಿತೆಂದರೆ, ಮತ್ತೆ ಕೃತಯುಗವನ್ನುಂಟುಮಾಡುವ ನೆವದಿಂದ ಹೊಸ ಆಟವನ್ನು ಆರಂಭಿಸುವನು. ಹೀಗೆ ಸಾವಿರಾರುಸಾರೆ ಹೊಸಆಟಮಾಡಿ ಆಡಿ, ಆಟವನ್ನು ಮುರಿದುಬಿಡಬೇಕೆಂಬ ಇಚ್ಛೆಯಾದಕೂಡಲೆ, ಎಲ್ಲವೂ ತಾನೇ ಆಗಿ ಏಕರೂಪವನ್ನು ತಾಳುವದೊಂದು ಭಗವಂತನ ಲೀಲಾನಾಟಕದ ಪರಿಸಮಾಪ್ತಿಯ ಲಕ್ಷಣವಾಗಿರುವದು! ವಿವೇಕಶೀಲಾ, ಮಕ್ಕಳ ಯೋಗದಿಂದ ತಾನೇ ಬಹುರೂಪ

ತಾಳಿದ ತಂದೆಯು, ತನ್ನ ಮಕ್ಕಳ ಆಟವು ಭರಕ್ಕೆ ಬಂದು, ಬಹಳಹೊತ್ತು ತನ್ನ ಮನೋರಂಜನವಾಗಬೇಕೆಂದು ತಿಳಿದು, ಆಟವಾಡುತ್ತಿದ್ದ ತನ್ನ ಮಕ್ಕಳನ್ನು ಉಪಾಯಬೋಧದಿಂದ ಆಟವಾಡಲು ಉತ್ತೇಜನಗೊಳಿಸುತ್ತ, ಆಟದಲ್ಲಿ ಮಕ್ಕಳಿಗೆ ನೀಗಲಾರದ ವಿಘ್ನ ಒದಗಿದರೆ ಆಟವು ಮುಂದಕ್ಕೆ ಸಾಗಬೇಕೆಂದು ಆ ವಿಘ್ನವನ್ನಷ್ಟು ತಾನು ಕೈಮುಟ್ಟಿ ನಿವಾರಣ ಮಾಡುತ್ತ ತಾನೂ ಒಂದುಬಗೆಯ ಆಟವನ್ನೇ ಆಡುವಂತೆ, ಭಗವಾನ್ ಸದಾಶಿವನ ರೂಪವಾದ ವಿಷ್ಣುವು, ಬಲಿಷ್ಠರಾದ ದೈತ್ಯರೊಡನೆ ಒಕ್ಕಟ್ಟಿನಿಂದ ಕಾರ್ಯ ಮಾಡಬೇಕೆಂಬ ಉಪಾಯವನ್ನು ದೇವತೆಗಳಿಗೆ ಸೂಚಿಸಿ, ದೇವದೈತ್ಯರಿಂದ ನೀಗದ ಕೆಲಸವನ್ನಷ್ಟುಮಾತ್ರ ತಾನೇ ನೀಗಿಸಿ ತಾನೂ ಒಂದು ಬಗೆಯ ಆಟವನ್ನೇ ಆಡಿದನು! ದೇವರು ಬರಿಯ ದೈತ್ಯರ ಸೃಷ್ಟಿಯನ್ನಾಗಲಿ, ಬರಿಯ ದೇವತೆಗಳ ಸೃಷ್ಟಿಯನ್ನಾಗಲಿ ಮಾಡಿದ್ದರೆ ಈ ಏಕರೂಪ ಸೃಷ್ಟಿಯು ಮೂಲ ಏಕರೂಪ ವಸ್ತುವಿನಂತೆಯೇ ಆಗಿಹೋಗಿ ಕ್ರೀಡೆಗೆ ಆಸ್ಪದವು ಉಳಿಯದೆ ಹೋಗುತ್ತಿತ್ತು! ವಿವೇಕಶೀಲಾ, ಇನ್ನು ಸದಾ ತೃಪ್ತನಾದ ಈಶ್ವರನಿಗೆ ಲೀಲೆಯಿಂದ ತೃಪ್ತಿಪಡುವ ಅವಶ್ಯವೇನೆಂದು ನೀನು ಕೇಳಬಹುದು; ಆದರೆ "ಕರ್ತುಮಕರ್ತುಮನ್ಯಥಾಕರ್ತುಂ" ಸಮರ್ಥನಾದ ಪರಮೇಶ್ವರನಿಗೆ ಹೀಗೆ ಕೇಳುವ ಅಧಿಕಾರವು ಯಾರಿಗಿರುವದು? ಆ ಸರ್ವತಂತ್ರಸ್ವತಂತ್ರನು ಲೀಲೆಯಾಡಲಿಕ್ಕೂ ಸ್ವತಂತ್ರನು, ಲೀಲೆಯಾಡದಿರಲಿಕ್ಕೂ ಸ್ವತಂತ್ರನು. ಒಟ್ಟಿಗೆ ಭಗವದಿಚ್ಛೆಯಮುಂದೆ ಅನ್ಯರ ಆಟವೇನು! ಮೇಲಾಗಿ ಭಗವಂತನ ಲೀಲೆಯ ಯೋಗ್ಯತೆಯು ಭಗವಂತನ ಮಹಾಮಹಿಮೆಗೆ ಸಮ್ಬಂಧಿಸಿ ಇದ್ದದರಿಂದ,ನಾವು ಕ್ಷುದ್ರರು ಆಡಿದ ಆಟದಿಂದ ನಮ್ಮ ಮನೋರಂಜನವಾಗುವಂತೆ ಮಹಾಮಹಿಮನಾದ ಭಗವಂತನ ಆಟದಿಂದ ಆ ಭಗವಂತನ ಮನೋರಂಜನವೂ ಯಾಕಾಗಬಾರದು? ದೊಡ್ಡವರ ಆಟವೂ ದೊಡ್ಡದೇ ಇರುವದೆಂಬುದನ್ನು ಮರೆಯಬೇಡ; ಆದ್ದರಿಂದ ನಾವು ಭಗವಂತನ ಲೀಲೆಯ ಕಾರಣವನ್ನು ಕಂಡುಹಿಡಿಯುವ ನೀಗದಕೆಲಸಕ್ಕೆ ಕೈ ಹಾಕಿ ಮುಂದುಗಾಣದೆ ಕುಳಿತುಕೊಳ್ಳುವದಕ್ಕಿಂತ, ಆ ಭಗವಂತನ ಗುರುತಿರುವ ಪುಣ್ಯವಂತರ ಕೃಪೆಯಿಂದ ನಾವೂ ಭಗವಂತನ ಗುರುತು ಮಾಡಿಕೊಂಡು ಕೃತಾರ್ಥರಾಗುವದು ಜನ್ಮಧಾರಣಮಾಡಿದ್ದರ ಸಾರ್ಥಕತೆಯು! ಇದಲ್ಲದೆ, ಮಹಾಕಾರ್ಯವು ಮಹಾಜನದ ಒಕ್ಕಟ್ಟಿನಿಂದಲೇ ಸಾಧಿಸತಕ್ಕದ್ದಾದ್ದರಿಂದ ಕಾರ್ಯಸಾಧಕರಾದ ದೇವತೆಗಳಿಗೆ, ದೈತ್ಯರು ಶತ್ರುಗಳಾದರೂ ಅವರೊಡನೆ ಸಂಧಾನ ಮಾಡಿ ಕಾರ್ಯಸಾಧಿಸಲು ಭಗವಂತನು ಹೇಳಿದನು. ಈ ವ್ಯಾವಹಾರಿಕ ಮಹತ್ವದ ನೀತಿಯನ್ನು ಯಾವಾಗಲೂ ಲಕ್ಷ್ಯದಲ್ಲಿಡತಕ್ಕದ್ದು. ಯಾಕಂದರೆ ಕಾರ್ಯಸಾಧನದಲ್ಲಿ ಒಕ್ಕಟ್ಟಿನ ಮಹತ್ವವು ವಿಶೇಷವಾಗಿರುವದು.

ವಿವೇಕಶೀಲಾ, ಇನ್ನು ನಿನ್ನ ಕಟ್ಟಕಡೆಯ ಶಂಕೆಯ ಸಮಾಧಾನವನ್ನು ಹೇಳುವೆನು ಕೇಳು. ಸರ್ವೋತ್ತಮನಾದ ಶ್ರೀ ಸದಾಶಿವನು ವಿಷ್ಣುವಿನ ಮೋಹಿನೀರೂಪಕ್ಕೆ ಮೋಹಿಸಿದನೆಂದು ಹೇಳಿದ್ದರಿಂದ, ಶ್ರೀ ಸದಾಶಿವನ ಸರ್ವಜ್ಞತ್ವಕ್ಕೆ ಬಾಧೆಬರುವದೆಂದು ನೀನು ಶಂಕಿಸುವೆ; ಆದರೆ ಹೀಗೆ ಶಂಕಿಸಲು ಕಾರಣವಿಲ್ಲ. ಭಗವಾನ್ ಸದಾಶಿವನ

ಪ್ರೇರಣೆಯಿಂದಲೇ ವಿಷ್ಣುವು ಮೋಹಿನಿಯರೂಪದಿಂದ ದೈತ್ಯರನ್ನು ಮೋಹಿಸಿದನು. ಈಗ ಆ ಮೋಹಿನೀರೂಪವನ್ನು ನನಗೆ ತೋರಿಸೆಂದು ಹೇಳಿದ್ದರಿಂದಲೇ ಆ ಸದಾಶಿವನ ಅಪ್ಪಣೆಯಂತೆ ವಿಷ್ಣುವು ಮೋಹಿನೀರೂಪವನ್ನು ಧರಿಸಿದ್ದನು. ಈ ಪ್ರಸಂಗದಲ್ಲಿ ಭಗವಾನ್ ವಿಷ್ಣುವಿನ ಮೋಹಿನೀರೂಪವನ್ನು ಪ್ರಶಂಸಿಸುವದು ಭಕ್ತವತ್ಸಲ ಪ್ರಭು ಶಂಭುವಿಗೆ ಅವಶ್ಯವಲ್ಲವೆ? ಭಗವಾನ್ ಶಂಕರನೂ ಮೋಹಿನೀಯರೂಪವನ್ನು ನೋಡಿ ಮೋಹಿತನಾದನೆಂದು ಹೇಳುವದು, ವಿಷ್ಣುವಿನ ಯೋಗಮಾಯೆಯನ್ನು ಶಂಕರನು ಪ್ರಶಂಸಿಸಿದ್ದರ ಲಕ್ಷಣವಾಗಿರುವದು. ಯಾವಮಾಯೆಗೂ ಮೋಹಿಸದ, ಅರ್ಥಾತ್ ಮಾಯಾತೀತನಾದ ಭಗವಾನ್ ಶಂಕರನೂ ಒಂದುಕ್ಷಣ ಮೋಹಿನಿಯರೂಪಕ್ಕೆ ಮೋಹಿಸಿದನೆಂದು ಹೇಳುವದರಿಂದಲೇ ಮೋಹಿನೀರೂಪದ ಮೋಹಕತ್ವದ ಉತ್ಕರ್ಷವನ್ನು ವರ್ಣಿಸಿದಹಾಗಾಗುವದು. ವಿವೇಕಶೀಲಾ, ಇದೊಂದು ವರ್ಣನೆಯ ಶೈಲಿಯೆಂದು ತಿಳಿ. ಅಗ್ನಿಯಿಂದ ಕಿಡಿಗಳು ಉತ್ಪನ್ನವಾಗುವಂತೆ, ಭಗವಾನ್ ಸದಾಶಿವನಿಂದ ಬ್ರಹ್ಮ-ವಿಷ್ಣುಗಳು ಉತ್ಪನ್ನವಾಗಿರುವರು; ಅಂದಬಳಿಕ ತನ್ನ ಅಂಶವಾದ ವಿಷ್ಣುವಿನ ಮಾಯೆಗೆ ಶಂಕರನು ಕ್ಷಣಹೊತ್ತು ಮೋಹಿಸಿದನೆಂದು ಹೇಳುವದರಲ್ಲಿ ಔಪಚಾರಿಕತ್ವವಲ್ಲದೆ, ಭಗವಾನ್ ಸದಾಶಿವನ ಸರ್ವಜ್ಞತ್ವಕ್ಕೆ ಬಾಧೆಯೇನು ಬರಲಾರದು.

## ೯ನೆಯ ಸುಧಾತರಂಗ !

## ಭಕ್ತೋದ್ಧರಣಲೀಲೆಗಳು !

ಈ ಮೇರೆಗೆ ಸಿದ್ಧಮುನಿಗಳು ಹೇಳಿದ ಶ್ರೀ ಸದಾಶಿವನ ವಿವಿಧಲೀಲೆಗಳನ್ನು ಕೇಳಿ ವಿವೇಕಶೀಲನು—ಸದ್ಗುರುವೇ, ಸುರಾಸುರರಿಗೂ ಪೂಜ್ಯನಾದವನೆಂದರೆ ಒಬ್ಬ ಭಗವಾನ್ ಶಂಕರನೆಂದು ಕೇಳಿದ್ದೇನೆ. ಸತ್ವಮೂರ್ತಿಯಾದ ಶ್ರೀ ವಿಷ್ಣುವು ದೇವಪಕ್ಷಪಾತಿಯೂ, ಅಸುರಮರ್ದನನೂ ಎನಿಸುವನು; ಆದರೆ ಸುರಾಸುರರೆಂಬ ಯಾವ ಭೇದವನ್ನೂ ಎಣಿಸದೆ ಭಕ್ತರ ಅಭೀಷ್ಟಗಳನ್ನು ಅನಿರ್ಬಂಧವಾಗಿ ಪೂರಯಿಸುವವನು, ಸರ್ವೋತ್ತಮನಾದ ಸದಾಶಿವನೊಬ್ಬನೇ ಎಂದು ಹೇಳುವರು. ಆದ್ದರಿಂದ ಆ ಭಗವಾನ್ ಶಂಕರನ ಕೆಲವು ಭಕ್ತೋದ್ಧರಣ ಲೀಲೆಗಳನ್ನು ಹೇಳಬೇಕು, ಎಂದು ಕೇಳಿಕೊಳ್ಳಲು, ಸಿದ್ಧಮುನಿಗಳು—ವಿವೇಕಶೀಲಾ, ಭಗವಂತನ ಭಕ್ತೋದ್ಧರಣ ಲೀಲೆಗಳನ್ನು ವರ್ಣಿಸಲು ಆದಿಶೇಷನೂ ಸಮರ್ಥನಲ್ಲವು; ಆದರೆ ಒಂದೆರಡು ಲೀಲೆಗಳನ್ನು ವರ್ಣಿಸುವೆನು ಕೇಳು. ಹಿಂದಕ್ಕೆ ನಾನು ನಿನಗೆ ಹೇಳಿರುವ ಭೂಕೈಲಾಸದ ವೃತ್ತಾಂತವು ನಿನ್ನ ಸ್ಮರಣದಲ್ಲಿರಬಹುದು. ಆ ವೃತ್ತಾಂತದಲ್ಲಿ ಶಿವಭಕ್ತಾಗ್ರೇಸರನಾದ ರಾವಣಾಸುರನ ಅತಕ್ಯ

ಬೇಡಿಕೆಗಳನ್ನೂ ಶ್ರೀಶಂಕರರನು ಪೂರಯಿಸಿದ್ದರ ವರ್ಣನವಿರುವದು. ವಿವೇಕಶೀಲಾ, ತನ್ನ ಅರ್ಧಾಂಗವೆನಿಸುವ ಹೆಂಡತಿಯನ್ನೂ, ತನ್ನ ಸತ್ವಸಾರವಾದ ಆತ್ಮಲಿಂಗವನ್ನೂ ಭಕ್ತರಿಗೆ ಕೊಡುವಂಥ ಮಹಾಸಮರ್ಥನಾದ ಭಕ್ತೋದ್ಧರಣಶೀಲದೇವನು ದೇವಕೋಟಿಯಲ್ಲಿ ಶ್ರೀ ಸದಾಶಿವನಲ್ಲದೆ ಮತ್ತೊಬ್ಬನಿಲ್ಲವು! ಹೀಗೆ ಶ್ರೀ ಶಂಕರನು ಅಸುರಭಕ್ತರ ಬೇಡಿಕೆಗಳನ್ನು ಪೂರಯಿಸಿದ್ದಲ್ಲದೆ, ಶಿವಭಕ್ತವರಿಷ್ಠ ಬ್ರಾಹ್ಮಣೋತ್ತಮನಾದ ಮಾರ್ಕಾಂಡೇಯನ ಬೇಡಿಕೆಯನ್ನೂ, ಸುರಶ್ರೇಷ್ಠನಾದ ಭಗವಾನ್ ವಿಷ್ಣುವಿನ ಬೇಡಿಕೆಯನ್ನೂ ಪೂರಯಿಸಿರುವನು. ಒಟ್ಟಿಗೆ ಶಿವಭಕ್ತಿಯಿಂದ ಉದ್ಧೃತರಾಗದ ದೇವತೆಗಳಾಗಲಿ, ದೈತ್ಯರಾಗಲಿ ಇಲ್ಲವೆಂದು ಹೇಳಬಹುದು. ವಿವೇಕಶೀಲಾ, ಈಗ ನಿನಗೆ ಶಿವಭಕ್ತಶಿಖಾಮಣಿಗಳಾದ ಋಷಿಶ್ರೇಷ್ಠ ಮಾರ್ಕಾಂಡೇಯನೂ, ದೇವಶ್ರೇಷ್ಠ ಭಗವಾನ್ ವಿಷ್ಣುವೂ ಉದ್ಧೃತರಾದ ಸಂಗತಿಗಳನ್ನು ಹೇಳುವೆನು ಕೇಳು-

## ೧ ಮಾರ್ಕಾಂಡೇಯಚರಿತ್ರ.

ಪೂರ್ವದಲ್ಲಿ ಮೃಕಂಡುವೆಂಬ ಒಬ್ಬ ಮಹಾತಪಸ್ವಿಯು ಮರುದ್ವತಿಯೆಂಬ ತನ್ನ ಪತ್ನಿಯೊಡನೆ ತನ್ನ ಆಶ್ರಮದಲ್ಲಿ ವಾಸಮಾಡುತ್ತಿರಲು, ಎಷ್ಟು ದಿವಸಗಳಾದರೂ ಆತನಿಗೆ ಮಕ್ಕಳಾಗದೆ ಹೋದವು. ಆಗ ಆತನು—ಪುತ್ರನಿಲ್ಲದ ಜನ್ಮವು ವ್ಯರ್ಥವಾಗಿದ್ದು "ಅಪುತ್ರಸ್ಯ ಗತಿರ್ನಾಸ್ತಿ" ಅಂದರೆ ಪುತ್ರನಿಲ್ಲದವನಿಗೆ ಯಾವ ಗತಿಯೂ ಆಗುವದಿಲ್ಲವೆಂದು ಶ್ರುತಿ-ಸ್ಮೃತಿಗಳು ಹೇಳುತ್ತವೆ; ಆದ್ದರಿಂದ ನಮಗೆ ಮುಂದೆ ಗತಿಯೇನು? ಎಂದು ವಿಚಾರಮಾಡುತ್ತ, ಪುತ್ರನನ್ನು ಸಂಪಾದಿಸಲು ಏನು ಉಪಾಯಮಾಡಬೇಕೆಂದು ವಿಚಾರಿಸುತ್ತ ಕೊನೆಗೆ ಅವನು ಭಗವಾನ್ ಸದಾಶಿವನನ್ನು ಆರಾಧಿಸಿ ಅವನ ಕೃಪೆಯಿಂದ ಪುತ್ರನನ್ನು ಪಡೆಯಬೇಕೆಂದು ನಿಶ್ಚಯಿಸಿ ತಪಸ್ಸಿಗಾಗಿ ಹೆಂಡತಿಯೊಡನೆ ಅರಣ್ಯಕ್ಕೆ ಹೊರಟನು. ಅಲ್ಲಿ ಅವನು ಶೀತೋಷ್ಣ ಸುಖದುಃಖಾದಿ ದ್ವಂದ್ವಗಳನ್ನು ಸಹಿಸಿ ಧ್ಯಾನಧಾರಣಾದಿ ಅಷ್ಟಾಂಗಯೋಗಗಳೊಂದಿಗೆ ಪರಮಪವಿತ್ರವಾದ ಶಿವಷಡಕ್ಷರೀ ಮಹಾಮಂತ್ರವನ್ನು ಜಪಿಸಹತ್ತಿದನು. ಅನೇಕವಿಧವಾದ ಅತ್ಯಂತ ಕಠೋರಗಳಾದ ವ್ರತಗಳಿಂದಲೂ, ನಿಯಮೋಪವಾಸಾದಿಗಳಿಂದಲೂ, ಧ್ಯಾನಯೋಗಾದಿಸಾಧನಗಳಿಂದಲೂ ಪರಮೇಶ್ವರನನ್ನು ಅನೇಕ ವಿಧವಾಗಿ ಬಹುದಿನಗಳವರೆಗೆ ಆರಾಧಿಸಿದನು. ಆಗ ಇವನ ಅತ್ಯಂತ ನಿಸ್ಸೀಮವಾದ ತಪಸ್ಸಿಗೆ ಪರಮೇಶ್ವರನು ಮೆಚ್ಚಿ—"ಎಲೈ ಮೃಕಂಡುವೇ, ನೀನು ಮಾಡಿರುವ ಉಗ್ರ ತಪಸ್ಸಿಗಾಗಿ ಮೆಚ್ಚಿರುವೆನು. ನೀನು ಯಾವವರವನ್ನು ಬೇಡುವೆಯೋ ಬೇಡು, ಎಂದು ಹೇಳಲು, ಆಗ ಮೃಕಂಡುವು ಕಣ್ದೆರೆದು ಮುಂದುಗಡೆಯಲ್ಲಿ ಮೂರ್ತಿಮಂತನಾಗಿ ನಿಂತಿರುವ ಇಷ್ಟಾರ್ಥಪ್ರದನಾದ ಶಂಕರನನ್ನು ಕಂಡು ಬೆರಗಾಗಿ ಹೋದನು.

ವಿವೇಕಶೀಲಾ, ಆ ಪರಮೇಶ್ವರನ ತೇಜೋಮಯ ಮೂರ್ತಿಯನ್ನು ನೋಡುವಾಗ ಆ ಮೃಕಂಡುವಿಗೆ ಎಷ್ಟು ಆನಂದವಾಗಿರಬಹುದೆಂಬದನ್ನು ಬಣ್ಣಿಸುವನು ಪಾಮರರಾದ

ನಮ್ಮಯೋಗ್ಯತೆಯೆ! ಆ ಕಗ್ಗತ್ತಲೆಯ ಅರಣ್ಯವೆಲ್ಲವೂ ತೇಜೋಮಯವಾಗಿ ಹೋಯಿತು. ಆ ಭಗವಾನ್ ಸದಾಶಿವನ ಮಸ್ತಕದಲ್ಲಿ ಶೋಭಿಸುತ್ತಿರುವ ಗಂಗಾ ಚಂದ್ರರು, ಇಂಥಮಹಾ ತಪಃಶಾಲಿಯಾದ ಮೃಕಂಡುವನ್ನು ಯಥೇಚ್ಛವಾಗಿ ನೋಡಿನೋಡಿ ಸಾಲದೆ, ಮತ್ತೂ ಎವೆ ಯಿಕ್ಕದೆ ಆತನನ್ನು ನೋಡುತ್ತಿರುವರೆಂಬಂತೆ ತೋರುತ್ತಿತ್ತು. ಆ ಭಗವಾನ್ ಶಂಕರನ ಅರ್ಧಾಂಗಿಯಾದ ಪಾರ್ವತೀದೇವಿಯು ಅತ್ಯಂತ ಪ್ರೇಮಭಾವದಿಂದ ಆ ಮುನಿ ದಂಪತಿಗ ಳನ್ನು ನೋಡುತ್ತಿದ್ದಳು. ಆ ವಿರೂಪಾಕ್ಷನ ಕಂಠದಲ್ಲಿಯೂ, ಕೈಗಳಲ್ಲಿಯೂ ಅಲಂಕಾರ ಗಳಾಗಿದ್ದ ಸರ್ಪಗಳು ಕಕ್ಕಾ ವಿಕ್ಕಿಯಾಗಿ ಅತ್ತಿತ್ತ ನೋಡುತ್ತಿದ್ದವು. ಹೀಗೆ ನಾನಾ ಪ್ರಕಾರ ದಿಂದ ಶೋಭಿಸುತ್ತಿರುವ ಆ ಹಸನ್ಮುಖನಾದ ಪರಮಾತ್ಮನ ಪ್ರೇಮಲಮೂರ್ತಿಯನ್ನು ನಿಶ್ಚಲ ಮನಸ್ಸಿನಿಂದ ನೋಡುತ್ತಿರುವ ಮೃಕಂಡು ಮುನಿಯ ಕಂಠವು ಬಿಗಿದು ಆತನ ಕಣ್ಣು ಗಳಲ್ಲಿ ಆನಂದ ಬಾಷ್ಪಗಳು ಸುರಿಯಹತ್ತಿದವು. ಆಗ ಆತನು ಸಾವಕಾಶವಾಗಿ ಮೇಲಕ್ಕೆ ಎದ್ದು ಪಾರ್ವತೀಪರಮೇಶ್ವರರನ್ನು ಸಾಷ್ಟಾಂಗವಾಗಿ ವಂದಿಸಿ, ಗದ್ಗದಕಂಠದಿಂದ— ಭವಾ ನೀಪತೇ, ಭಕ್ತರ ಮನೋಭೀಷ್ಟವನ್ನು ಕ್ಷಣಮಾತ್ರದಲ್ಲಿ ಪೂರಯಿಸುವ ನೀನು ಈ ಮೃಕಂ ಡುವಿನ ಅಭೀಷ್ಟವನ್ನು ಪೂರಯಿಸಬೇಕು, ಎಂದು ಅನನ್ಯಭಾವದಿಂದ ಪ್ರಾರ್ಥಿಸುವೆನು- ದೇವನೇ, ಜಗತ್ತಿನಲ್ಲಿ ಪುತ್ರವಿಹೀನನು ಅತ್ಯಂತ ನಿಂದ್ಯನಲ್ಲವೆ? ಪುತ್ರವಿಹೀನನಿಗೆ ಯಾವ ಉತ್ತಮ ಗತಿಯೂ ಇಲ್ಲವೆಂದು ಶ್ರುತಿಸ್ಮೃತಿಗಳು ಹೇಳುತ್ತಿರುವವು. ಎಷ್ಟು ದಿವಸ ಗಳಾದರೂ ಮಕ್ಕಳಾಗದೆ ಇದ್ದದರಿಂದ ಈಗ ನಿನ್ನನ್ನೇ ನಾನು ಮರೆ ಹೊಕ್ಕಿರುವೆನು. ದಯ ಮಾಡಿ ಈ ಭಕ್ತನ ಮನೋಭೀಷ್ಟವನ್ನು ಸಿದ್ಧಿಗೊಳಿಸಬೇಕೆಂದು ಬೇಡಿಕೊಳ್ಳುವೆನು, ಎಂದು ಪ್ರಾರ್ಥಿಸಿದನು.

ಮೃಕಂಡುವಿನ ಈ ಪ್ರಾರ್ಥನೆಯನ್ನು ಕೇಳಿ ಪರಮೇಶ್ವರನು ಅಮೃತಧಾರೆಯನ್ನು ಸುರಿಸುವ ತನ್ನ ಕೋಮಲವಾಣಿಯಿಂದ—ಮುನಿಯೇ, ನಿನ್ನ ಇಷ್ಟಾರ್ಥವು ಕೈಗೂಡು ವದು; ಆದರೆ, ನೀನು ಚಿರಜೀವಿಯಾದ ನಿರ್ಗುಣಪುತ್ರನನ್ನು ಅಪೇಕ್ಷಿಸುವೆಯೋ, ಅಥವಾ ಸರ್ವಶಾಸ್ತ್ರವಿಶಾರದನಾಗಿಯೂ, ಸರ್ವಜ್ಞನಾಗಿಯೂ, ರೂಪವಂತನಾಗಿಯೂ, ಹದಿ ನಾರುವರ್ಷದ ಆಯುಷ್ಯವುಳ್ಳವನಾಗಿಯೂ ಇರುವ ಪುತ್ರನನ್ನು ಇಚ್ಛಿಸುವೆಯೋ? ಎಂದು ಕೇಳಲು, ಮೃಕಂಡುವು—ಮಹಿಮಾಶಾಲಿಯಾದ ಲೀಲಾಮೂರ್ತಿಯೇ, ನಿನ್ನ ಅಗಾಧಲೀಲೆಯನ್ನು ಯಾರು ತಿಳಿಯಬಲ್ಲರು? ಏನೇ ಆಗಲಿ, ನಮ್ಮ ವ್ಯವಹಾರದೃಷ್ಟಿ ಯಿಂದ ನೋಡುತ್ತಿರಲು, ನಿರ್ಗುಣಪುತ್ರನ ವ್ಯಥೆಯನ್ನು ಯಾರು ತಾಳಿಕೊಂಡಾರು! ಅಂಥ ಗುಣಹೀನ ಪುತ್ರರಿಂದ ದುಃಖಪಡುತ್ತಿರುವ ಎಷ್ಟೋ ಜನರನ್ನು ನಾವು ಕಣ್ಣೆದು ರಿಗೇ ಸ್ಪಷ್ಟವಾಗಿ ನೋಡುತ್ತಿರುವೆವಲ್ಲವೆ? ಅಂಥ ಪುತ್ರನನ್ನು ಹಡೆಯುವದಕ್ಕಿಂತ ಮಕ್ಕ ಳಿಲ್ಲದೆ ಇರುವದೇ ಒಳಿತು. ಆಗಲಿ, ಅಲ್ಪಾಯುವಾದರೂ ಚಿಂತೆಯಿಲ್ಲ; ಸದ್ಗುಣಪರಿ ಪೂರ್ಣನೂ, ಸರ್ವಜ್ಞನೂ ಆದ ಪುತ್ರನನ್ನೇ ನಾನು ಅಪೇಕ್ಷಿಸುವೆನು. ಇದೇವರ ವನ್ನೇ ನನಗೆ ದಯಪಾಲಿಸಬೇಕು, ಎಂದು ಬೇಡಿಕೊಂಡನು. ಆಗ ಪರಮೇಶ್ವರನು— ಮೃಕಂಡುಮುನಿಯೇ, ನಿನ್ನ ಅಭೀಷ್ಟದಂತೆಯೇ ಎಲ್ಲವೂ ಸಿದ್ಧಿಸುವದು. ಆ ಮಹಿಮಾ

ಶಾಲಿಯಾದ ಪುತ್ರನಿಂದ ನಿನ್ನ ವಂಶವೇ ಉದ್ಧಾರವಾಗುವದು. ಹೆಚ್ಚಿಗೆ ಹೇಳುವದೇನು ನಾನೇ ನಿನ್ನ ಪುತ್ರನಾಗಿ ಜನಿಸುವೆನು, ಸಂಶಯಬೇಡ. ಮೊದಲಿನಂತೆ ನಿನ್ನ ಪೂರ್ವ ಸ್ಥಳಕ್ಕೆ ಹೋಗಿ ಸುಖವಾಗಿವಾಸಮಾಡು. ಎಂದು ಹೇಳುತ್ತಿರುವಷ್ಟರಲ್ಲಿಯೇ ಅರಣ್ಯ ದಲ್ಲಿ ಕಗ್ಗತ್ತಲೆ ಮುಸುಕಿಹೋಯಿತು. ಅಲ್ಲಿದ್ದ ವೃಕ್ಷಲತೆಗಳು ಅತ್ಯಂತ ಭೀತಿಯುನ್ನುಂಟು ಮಾಡುತ್ತಿದ್ದವು. ಹುಲಿ, ಕರಡಿ, ಸಿಂಹ ಮುಂತಾದ ಕ್ರೂರಮೃಗಗಳಕೂಗಿಗಂತೂ ಅಳತೆಯೇ ಇದ್ದಿಲ್ಲ. ಇಂಥ ಭಯಂಕರ ಅರಣ್ಯದಲ್ಲಿ ಮೃಕಂಡುವು ಸಪತ್ನೀಕನಾಗಿ ತಪಸ್ಸುಮಾಡುತ್ತಿದ್ದರೂ ಆ ದಂಪತಿಗಳಿಗೆ ಆ ಕ್ರೂರಮೃಗಗಳು ಅತ್ಯಂತ ಸಹಾಯಕಾರಿ ಗಳಾಗಿದ್ದವು. ಪರಮಾತ್ಮನ ಮಹಿಮೆಯೇ ಅಂತಹದು!

ಹೀಗೆ ಆ ಮೃಕಂಡುಮರುದ್ವತಿಯರು ಅಂದಿನ ದಿವಸ ಅಲ್ಲಿಯೇ ಇದ್ದು ಮರುದಿವಸ ಪ್ರಾತಃಕಾಲದಲ್ಲಿ ತಮ್ಮ ಪ್ರಾತರ್ವಿಧಿಗಳನ್ನು ತೀರಿಸಿಕೊಂಡು ತಮ್ಮ ಪೂರ್ವಾಶ್ರಮಕ್ಕೆ ಪರಮೇಶ್ವರನ ಅಪ್ಪಣೆಯಿಂದ ಹೊರಡಲಿಕ್ಕೆ ಸಿದ್ಧರಾದರು. ಇದನ್ನು ನೋಡಿಆ ಮೃಗ ಗಳು ಇವರ ಹತ್ತಿರವೇ ಬಂದು ಒಂದೇಸವನೆ ಇವರನ್ನು ನೋಡುತ್ತನಿಂತವು. ಆಗಅವರು ಆ ಮೃಗಗಳ ಮೇಲೆ ಅತ್ಯಂತ ಕನಿಕರಪಟ್ಟು ಅವುಗಳ ಮೈಮೇಲೆ ಕೈಯ್ಯಾಡಿಸಿ ತಮ್ಮ ಹತ್ತರವಿದ್ದ ಕಂದಮೂಲಗಳನು. ಅವಕ್ಕೆ ತಿನಿಸಿ—ಎಲೈ ಉಪಕಾರಿಗಳಾದ ಮೃಗಗಳೇ, ಇನ್ನು ನಾವು ನಮ್ಮ ಪೂರ್ವದ ಆಶ್ರಮಕ್ಕೆ ತೆರಳುವೆವು, ನೀವು ಸುಖವಾಗಿ ಇರ್ರಿ. ಎಂದು ನುಡಿದು ತಮ್ಮ ಆಶ್ರಮದ ಕಡೆಗೆ ಹೊರಟುಹೋದರು. ಅವರು ಹೋಗುವಾಗ ದಾರಿಯಲ್ಲಿ ಪರಮೇಶ್ವರನಸಂಬಂಧವಾದ ಅನೇಕ ವಿಚಿತ್ರಲೀಲೆಗಳನ್ನು ವರ್ಣಿಸುತ್ತ ತಮ್ಮ ಆಶ್ರಮವನ್ನು ಮುಟ್ಟಿದರು.

ಹೀಗೆ ಅವರು ತಮ್ಮ ಪೂರ್ವದ ಆಶ್ರಮಕ್ಕೆ ಹೋದಮೇಲೆಯೂ ಪರಮೇಶ್ವರನ ಅಗಾಧ ಮಹಿಮೆಯನ್ನು ಸ್ಮರಿಸುತ್ತ, ಅವನಲ್ಲಿಯೇ ಆಸಕ್ತರಾಗಿದ್ದರು. ಹೀಗೆ ಅವರು ಕೆಲವು ದಿವಸಗಳನ್ನು ಕಳೆಯುತ್ತಿರಲು, ಮರುದ್ವತೀದೇವಿಯು ಬಸುರಿನ ಚಿಹ್ನಗಳು ತೋರಹತ್ತಿದವು. ಹಾಗೆಯೇ ಸ್ವಲ್ಪ ದಿವಸಗಳು ಕಳೆಯುತ್ತಿರಲು, ಆಕೆಯ ಬಸರು ಸ್ಪಷ್ಟವಾಗಿ ತೋರಿತು. ಆಗ ಆ ಸಹೃದಯರಾದ ದಂಪತಿಗಳಿಗೆ ಆದ ಆನಂದವನ್ನು ವರ್ಣಿಸಲಸಾಧ್ಯವು. ಹೆಚ್ಚಿಗೆ ಹೇಳುವದೇನು ? ಆ ದಂಪತಿಗಳು ಆನಂದಸಾಗರದಲ್ಲಿ ಮಗ್ನರಾಗಿಹೋದರು. ಬರಬರುತ್ತ ಮರುದ್ವತೀದೇವಿಗೆ ಮೂರುತಿಂಗಳು ತುಂಬುತ್ತಿ ರಲು, ಆ ಶಿಶುವಿನ ಅಭಿವೃದ್ಧಿಗಾಗಿ ಆ ಮುನಿಯು ಪುಂಸವನವನ್ನು ಮಾಡಿದನು. ಮರುದ್ವತಿಗೆ ಬಯಕೆಗಳಾಗಹತ್ತಿದವು. ಎಂಟನೇತಿಂಗಳು ತುಂಬಲು, ಗರ್ಭದ ಅಭಿ ವೃದ್ಧಿಗಾಗಿಯೂ, ಸುಖಪ್ರಸವದಸಲುವಾಗಿಯೂ ಯಥಾವಿಧಿಯಾಗಿ ಸೀಮಂತಕಾ ರ್ಯವನ್ನು ಮಾಡಿದನು. ಬರಬರುತ್ತ ಅವಳ ದೇಹವು ಜಡವಾಗಹತ್ತಲು, ಅವಳು ಅತ್ಯಂತ ಮಂದಗಮನೆಯಾದಳು. ಅವಳ ಆಗಿನ ಮೋಹಕರೂಪವು ನೋಡುವವರ ಮನಸ್ಸನ್ನು ಆಕರ್ಷಿಸದೆ ಇರಲಿಲ್ಲ. ಇಂಥ ಮನಮೋಹಿನಿಯಾದ ಆ ಮರುದ್ವತೀದೇವಿಗೆ ಒಂಬತ್ತುತಿಂಗಳು ತುಂಬಿದವು. ಆ ತಪೋಧನದಂಪತಿಗಳ ಆಶ್ರಮದಬಳಿಯಲ್ಲಿದ್ದ ಪ್ರತಿ

ಯೊಬ್ಬ ಋಷಿಪತ್ನಿಯರೂ, ಅವಳ ಸೇವೆಯಲ್ಲಿ ತತ್ಪರರಾಗಿದ್ದರು. ಇವರು ತಪಸ್ಸಿಗೆ ಹೋಗುವದಕ್ಕಿಂತಲೂ ಮೊದಲೆಯೇ ಮರುದ್ವತಿಯ ಸದ್ಗುಣಗಳಿಗಾಗಿ ಯಾವತ್ತು ಋಷಿಪತ್ನಿಯರು ಆಕೆಯನ್ನು ಬಹಳವಾಗಿ ಮನ್ನಿಸುತ್ತಿದ್ದರು. ಈಗಂತೂ ಕೇಳುವ ದೇನು? ದೇವತಾವರದಿಂದ ಅತ್ಯಂತ ಪವಿತ್ರಳಾದ ಮರುದ್ವತಿಯನ್ನು ಸಾಕ್ಷಾದ್ಭವಾನಿ ಯೆಂದೇ ಅವರು ಭಾವಿಸುತ್ತಿದ್ದರು. ಇವಳು ಗರ್ಭವತಿಯಾದಂದಿನಿಂದ ಯಾರೂ ಇವಳ ಕೈಯಿಂದ ಸ್ವಲ್ಪ ಕೆಲಸವನ್ನೂ ಮಾಡಗೊಡುತ್ತಿದ್ದಿಲ್ಲ. ಪ್ರತಿಯೊಂದು ಕೆಲಸವನ್ನು ತಾವೇ ಮಾಡಿಕೊಟ್ಟು, ಅವಳ ಸೇವೆಯಲ್ಲಿ ನಿರತರಾಗಿದ್ದರು. ಆ ಪತಿವ್ರತಾಶಿಖಾಮಣಿಯ ಭಾಗ್ಯವನ್ನೆಷ್ಟೆಂದು ಹೇಳಬೇಕು!

ಒಂಬತ್ತು ತಿಂಗಳು ಸಂಪೂರ್ಣವಾಗಿ ತುಂಬಿಹೋಗಿವೆ. ಅವತ್ತೇ ದಶಮಿಯ ತಿಥಿಯು, ಮಧ್ಯರಾತ್ರಿಯಾಗಿದೆ. ಆಶ್ರಮದ ಸುತ್ತಲೂ ಸುಗಂಧಯುಕ್ತವಾದ ಮಂದ ಮಾರುತವು ಬೀಸುತ್ತಲಿದೆ. ಎಲ್ಲಕಡೆಯಲ್ಲಿಯೂ ನಿಶ್ಶಬ್ದವಾಗಿದೆ. ಅಧಿಕಕಾಂತಿಯುಕ್ತನಾದ ಚಂದ್ರಮನು ಶೋಭಿಸುತ್ತಲಿದ್ದಾನೆ. ಮಲ್ಲಿಗೆ, ಸಂಪಗೆ, ಸೇವಂತಿಗೆ, ಇರುವಂತಿಗೆ, ಪುನ್ನಾಗ, ಜಾಜಿ ಮೊದಲಾದ ಸುಗಂಧಪುಷ್ಪಗಳು ಮೆಲ್ಲಗೆ ಅರಳತೊಡಗಿವೆ. ಇಂಥ ಸಮಾಧಾನಕಾರಕವಾದ ಪವಿತ್ರ ಸಮಯದಲ್ಲಿ ಅತ್ಯಂತ ಪವಿತ್ರಳಾದ ಮರುದ್ವತೀದೇವಿಯು ಬೇನೆಯನ್ನು ತಿನ್ನಲಾರಂಭಿಸಿದಳು. ಆಗ ಯಾವತ್ತು ಋಷಿಪತ್ನಿಯರೂ ಬಂದು ಮರುದ್ವತೀದೇವಿಯ ಸೇವೆಯಲ್ಲಿ ಆಸಕ್ತರಾದರು. ಪ್ರತಿಯೊಬ್ಬರೂ ಬಂದು ಮೃಕಂಡುವಿನ ಭಾಗ್ಯಕ್ಕೆ ಎಣೆಯಿಲ್ಲವೆಂದು ಅನ್ನಹತ್ತಿದರು. ಬ್ರಾಹ್ಮಣರೆಲ್ಲರೂ ವೇದಸೂಕ್ತಗಳನ್ನು ಜಪಿಸಹತ್ತಿದರು. ಜ್ಯೋತಿಷಿಯು ಮುಹೂರ್ತ ನಕ್ಷತ್ರಗಳನ್ನು ಬರೆಯುವದಕ್ಕಾಗಿ ಬಂದು ಕುಳಿತನು. ಇಷ್ಟಾಗುವಷ್ಟರಲ್ಲಿಯೇ ಮರುದ್ವತೀದೇವಿಯು ಗಂಡುಶಿಶುವನ್ನು ಹಡೆದಳು. ಶಿಶುವು ಜನಿಸಿದ್ದೊಂದೇತಡ, ಪ್ರತಿಯೊಬ್ಬರ ಕಣ್ಣುಗಳು ಮುಚ್ಚಿಹೋದವು. ಆ ಶಿಶುವಿನ ತೇಜಸ್ಸಿನ ಎದುರಿಗೆ ಸೂರ್ಯ ಚಂದ್ರಾಗ್ನಿಗಳ ತೇಜಸ್ಸು, ಹಗಲು ಹೊತ್ತಿನಲ್ಲಿ ದೀಪಹಚ್ಚಿದ ಹಾಗಾಯಿತು. ಮಹಾತ್ಮರು ಅವತರಿಸಬೇಕಾದರೆ ಅತ್ಯಂತ ಸುಲಕ್ಷಣಗಳೂ, ಉತ್ತಮೋತ್ತಮ ನಕ್ಷತ್ರಾದಿಗಳೂ ಇರುವವೆಂದು ನಾವು ಯಾಕೆಬರೆಯಬೇಕು?

ಇಂಥ ಅಧಿಕ ತೇಜಸ್ವಿಯಾದ ಆ ಶಿಶುವು ಶಿವಾವತಾರವೆಂಬದನ್ನು ವ್ಯಾಸಾದಿ ಮಹರ್ಷಿಗಳು ತಮ್ಮ ಜ್ಞಾನ ದೃಷ್ಟಿಯಿಂದ ತಿಳಿದು, ಆ ಶಿಶುವಿನ ಶಾಂತ್ಯರ್ಥವಾಗಿ ಮೃಕಂಡುವಿನ ಆಶ್ರಮಕ್ಕೆ ಬಂದರು. ಕೂಡಲೆ ಮೃಕಂಡುವು ಸ್ವಾಗತಪೂರ್ವಕವಾಗಿ ಅವರನ್ನು ಬರಮಾಡಿಕೊಂಡು, ಅರ್ಘ್ಯಪಾದ್ಯಾದಿಗಳಿಂದ ಅವರನ್ನು ಪೂಜಿಸಿ—ಮಹಾತ್ಮರೆ, ನಮ್ಮ ಮನೆಗೆ ಸಾಕ್ಷಾತ್ಪರಮೇಶ್ವರನೇ ಬಂದಹಾಗಾಯಿತು. ನನ್ನ ವಂಶವೇ ಉದ್ಧೃತವಾಯಿತು. ಎಂದನು. ಆಗ ವ್ಯಾಸರು—ಮೃಕಂಡುವೇ, ಪರಮೇಶ್ವರನು ನಿನ್ನ ಉದರದಿಂದ ಜನಿಸಿರುವನು. ಭಕ್ತರ ಅಭೀಷ್ಟವನ್ನು ಪೂರಯಿಸುವದಕ್ಕಾಗಿ ಬೇಕಾದ ವೇಷವನ್ನು ತಾಳಿ, ಬೇಕಾದ ಲೀಲೆಯನ್ನು ತೋರಿಸುವ ಆ ಮಹಾ

ತ್ಮನು ಭಕ್ತನಾದ ನಿನ್ನ ಅಭೀಷ್ಟವನ್ನು ಪೂರಯಿಸುವದಕ್ಕಾಗಿ ನಿನ್ನ ಮಗನ ವೇಷವನ್ನು ತಾಳಿ ಅಗಾಧ ಲೀಲೆಯನ್ನು ತೋರಿಸುವನು, ಎಂದು ಹೇಳಿ, ಆ ಬಾಲಕನನ್ನು ನೋಡುವದಕ್ಕಾಗಿ ಹತ್ತಿರಕ್ಕೆ ಬಂದು—ಅಹಾ, ಈ ಬಾಲಕನೇನು ಸೂರ್ಯನೋ, ಚಂದ್ರನೋ, ಅಗ್ನಿಯೋ! ಅಲ್ಲ ಅಲ್ಲ. ಸೂರ್ಯಚಂದ್ರಾಗ್ನಿಗಳೇ ನೇತ್ರಗಳಾಗಿ ಉಳ್ಳ ಪರಮೇಶ್ವರನು. ಎಂದಂದು ಆನಂದಬಾಷ್ಪಗಳನ್ನು ಸುರಿಸುತ್ತ ಸ್ವತಃ ಜಾತಕರ್ಮವನ್ನು ಮಾಡಿದರು. ತರುವಾಯ ಆ ಬಾಲಕನಿಗೆ ಹನ್ನೊಂದನೆಯ ದಿವಸವು ಪ್ರಾಪ್ತವಾಗಲು, ಮೃಕಂಡುವು ಆತನಿಗೆ ಮಾರ್ಕಂಡೇಯನೆಂಬ ನಾಮಧೇಯವನ್ನು ಮಾಡಿದನು. ಆಗ ವ್ಯಾಸಾದಿ ಮಹರ್ಷಿಗಳು ಅತ್ಯಂತ ಸಂತುಷ್ಟರಾಗಿ ಆ ಬಾಲಕನಿಗೆ ರಕ್ಷಾವಿಧಿಯನ್ನು ಮಾಡಿದರು. ತರುವಾಯ ಎಲ್ಲರಿಗೂ ಮೃಕಂಡುವು ನಾನಾವಿಧ ಪಕ್ವಾನ್ನ ಭೋಜನದಿಂದ ತೃಪ್ತಿಪಡಿಸಿದನು. ಆಗ ಆ ಮಹರ್ಷಿಗಳು ಚತುರ್ವೇದಗಳಿಂದಲೂ, ಉಪನಿಷತ್ತುಗಳಿಂದಲೂ ನಾನಾವಿಧವಾಗಿ ಶಿಶುವನ್ನು ಆಶೀರ್ವದಿಸಿ ತಮ್ಮ ಸ್ಥಳಕ್ಕೆ ಹೊರಟು ಹೋದರು.

ಹೀಗೆಯೇ ಆ ಬಾಲಕನು ಸಕಲಜನಮನೋಹರನಾಗಿ ಬರಬರುತ್ತ ಅಷ್ಟಮಿಯ ಚಂದ್ರನಂತೆ ದಿನದಿನಕ್ಕೆ ಅಭಿವೃದ್ಧನಾಗತೊಡಗಿದನು. ಪ್ರತಿಯೊಂದು ಪಟ್ಟಣದವರೂ ಆಬಾಲಕನ ದರ್ಶನಕ್ಕಾಗಿ ಬಂದು—"ಈ ಬಾಲಕನಸೌಂದರ್ಯವೆಷ್ಟು! ಈ ಬಾಲಕನೇನು ಮನ್ಮಥನೋ, ಬ್ರಹ್ಮನೋ, ವಿಷ್ಣುವೋ, ಮಹೇಶ್ವರನೋ ಯಾರಾಗಿರಬಹುದು. ಈ ಬಾಲಕನನ್ನು ಹೆತ್ತ ಮೃಕಂಡು-ಮರುದ್ವತಿಯರ ಧನ್ಯತೆಯನ್ನು ಎಷ್ಟೆಂದುಹೇಳಬೇಕು. ಇವರ ಪೂರ್ವಜನ್ಮದ ಪುಣ್ಯಾತಿಶಯಕ್ಕೆ ಪಾರವೇ ಇಲ್ಲವು, ಎಂದು ಶ್ಲಾಘಿಸುತ್ತಲಿದ್ದರು. ಬರಬರುತ್ತ ಆ ಬಾಲಕನಿಗೆ ನಾಲ್ಕುತಿಂಗಳು ತುಂಬಿದವು. ಆಗ ಮೃಕಂಡುವು ವಿಧಿಪೂರ್ವಕವಾಗಿ ನಿಷ್ಕ್ರಮಣಕರ್ಮವನ್ನು ಮಾಡಿದನು. ಆರು ತಿಂಗಳು ತುಂಬುತ್ತಿರಲು, ಅನ್ನಪ್ರಾಶನವನ್ನುಮಾಡಿದನು. ಎರಡು ವರ್ಷಗಳು ತುಂಬಿದ ಮೇಲೆ ಚೂಡಾಕರ್ಮವನ್ನು ಮಾಡಿದನು. ಶ್ರವಣನಕ್ಷತ್ರದಲ್ಲಿ ಕರ್ಣವೇಧವನ್ನೂ ಮಾಡಿದನು. ಎಂಥ ದುಃಖಾವಿಷ್ಟರೇ ಆಗಲಿ, ಆ ಬಾಲಕನ ದರ್ಶನಮಾತ್ರದಿಂದ ದುಃಖಮುಕ್ತರಾಗುತ್ತಿದ್ದರು. ತಂದೆತಾಯಿಗಳಿಗಂತು ಆ ಬಾಲಕನ ಕ್ಷಣದ ವಿಯೋಗವೂ ಸಹನವಾಗುತ್ತಿದ್ದಿಲ್ಲ. ಇಂಥ ಮಹಿಮಾಶಾಲಿಯಾದ ಆ ಬಾಲಕನಿಗೆ ಐದು ವರ್ಷಗಳು ತುಂಬಿದವು. ಆ ಬಾಲಕನ ಆಟಗಳೆಂದರೆ ದೇವತಾ ಸಮ್ಬಂಧಿಯಾದವುಗಳು! "ಮುಂದೆ ಫಲವಾಗುವದು ಹೀಚಿನಲ್ಲಿಯೇ ತೋರುವದು" ಎಂಬಂತೆ. ಮುಂದೆ ಆ ಬಾಲಕನು ಪರಮೇಶ್ವರನ ಪ್ರಿಯಭಕ್ತನಾಗುವನೆಂಬದು ಬಾಲ್ಯದಿಂದಲೇ ಸ್ಪಷ್ಟವಾಗಿ ತೋರುತ್ತಿತ್ತು. ಆಗ ಮೃಕಂಡುವು ಬ್ರಹ್ಮತೇಜಃ ಪ್ರಾಪ್ತಿಗೆ ಯೋಗ್ಯನಾದ ಐದು ವರ್ಷದ ಪುತ್ರನನ್ನು ನೋಡಿ ವ್ಯಾಸರೇ ಮುಂತಾದ ಅನೇಕ ಋಷಿವರ್ಯರನ್ನು ಕರೆಸಿ ಯಥಾವಿಧಿಯಾಗಿ ಅತಿ ಮನ್ನಣೆಯಿಂದ ಮಾರ್ಕಂಡೇಯನಿಗೆ ಮೌಂಜೀಬಂಧನವನ್ನು ಮಾಡಿದನು. ಮೊದಲೇ ಒಂಬತ್ತು ತೇಜಃಶಾಲಿಯು, ಅವರಲ್ಲಿ ಬ್ರಹ್ಮತೇಜಸ್ಸು ಜೋಡಾದದ್ದರಿಂದ ಬಂಗಾರಕ್ಕೆ

ಕುಂದಣ ಹಾಕಿದ ಹಾಗಾಯಿತು- ಇಂಥ ಆ ಬಾಲಕನಿಗೆ ಉಪಾಕರ್ಮವನ್ನು ಮಾಡಿ ಷಡಂಗಗಳಿಂದಲೂ, ಪದಕ್ರಮಗಳಿಂದಲೂ ಸಹಿತವಾದ ಚತುರ್ವೇದಗಳನ್ನೂ, ಸಮಸ್ತ ಉಪನಿಷತ್ತುಗಳನ್ನೂ ಕಲಿಸಿದನು. ಮತ್ತು ಷಟ್‌ಶಾಸ್ತ್ರಗಳನ್ನೂ, ಅಷ್ಟಾದಶಪುರಾಣಗಳನ್ನೂ, ಅನೇಕ ಸ್ಮೃತಿಗಳನ್ನೂ, ಅನೇಕ ನೀತಿತತ್ವಗಳನ್ನೂ ಮೃಕಂಡುವು ಆತನಿಗೆ ಕಲಿಸಿದನು-

ಹೀಗೆ ಸಮಸ್ತ ವಿದ್ಯಾಪರಿಪೂರ್ಣನಾಗಿಯೂ, ಷಡ್ರಿಪುಗಳನ್ನು ಜಯಿಸಿದವನಾಗಿಯೂ, ಶಾಂತಮೂರ್ತಿಯಾಗಿಯೂ, ಜ್ಞಾನಿಯಾಗಿಯೂ, ಪ್ರತ್ಯಕ್ಷ ಶಿವಾವತಾರನೇ ಆಗಿ ಶೋಭಿಸುವ ಆ ಬಾಲಕನನ್ನು ವರ್ಣಿಸುವದು ಯಾರಯೋಗ್ಯತೆಯೂ ಅಲ್ಲ. ಇಂಥ ಆ ಬಾಲಕನು ತನ್ನ ಗೌರವದ ತೇಜಸ್ಸಿನಿಂದ ಜಗತ್ತಿನಲ್ಲಿ ಪ್ರಕಾಶಿಸುತ್ತಿರಲು, ಅವನಿಗೆ ಹದಿನಾರನೆಯ ವರ್ಷವು ಪ್ರಾಪ್ತವಾಯಿತು. ಅದನ್ನರಿತು ಮೃಕಂಡುವು ಒಮ್ಮಿಂದೊಮ್ಮೆಲೆ ಶೋಕಾಕುಲನಾಗಿ ಮೂರ್ಛೆಯನ್ನು ಹೊಂದಿ ನೆಲಕ್ಕೆಬಿದ್ದನು- ಅದನ್ನು ನೋಡಿ ಎಲ್ಲರ ಎದೆಯು ಒಡೆದು ಹೋಗಿ, ಎಲ್ಲರೂ ಅಳುವದಕ್ಕೆ ಪ್ರಾರಂಭಿಸಿದರು. ಆಗ ಮಾರ್ಕಂಡೇಯನು ಸಮಾಧಾನದಿಂದ ತಂದೆಯನ್ನು ಅನೇಕ ಶೀತೋಪಚಾರಗಳಿಂದ ಸಂತಯಿಸಿದನು. ಆಗ ಮೃಕಂಡುವು ಮೂರ್ಛೆಯಿಂದೆದ್ದು ಒಂದು ದೊಡ್ಡ ನಿಟ್ಟುಸುರನ್ನು ಬಿಟ್ಟನು. ಆಗ ಮಾರ್ಕಾಂಡೇಯನು—ತಾತನೇ, ಒಮ್ಮಿಂದೊಮ್ಮೆಲೆ ಹೀಗೇಕೆ ಮಾಡುವಿರಿ? ಇದರ ಕಾರಣವೇನು? ಎಂದು ಕೇಳಲು, ಮೃಕಂಡುವು ಮೆಲ್ಲಗೆ ಆರ್ತಧ್ವನಿಯಿಂದ—ಹಾ, ಪುತ್ರನೇ ಏನು ಹೇಳಲಿ! ಸಮೀಪಿಸಿತು !! ಎಂದು ಅಂದನು. ಆಗ ಮಾರ್ಕಾಂಡೇಯನು— ಏನು ಸಮೀಪಿಸಿರುವದು? ಜನಕನೇ, ಬೇಗನೆ ಹೇಳು; ಅದನ್ನು ದೂರಮಾಡುವೆನು, ಅನ್ನಲು, ಆಗ ಮೃಕಂಡುವು—ಮಗನೇ, ಹೇಳಲಾರೆನು! ಏನು ಹೇಳಲಿ!! ವರಪುರುಷನಾದ ನಿನಗೆ ಶಿವನು ಹದಿನಾರು ವರ್ಷವೇ ಆಯುಷ್ಯವನ್ನು ಕೊಟ್ಟಿರುವನು. ಅದು ಇಂದಿಗೆ ಒಂದೇ ವರ್ಷವು ಮಾತ್ರ ಉಳಿದಿರುವದು. ಆರ್ತರಿಗೆ ಕಲ್ಪವೃಕ್ಷಸ್ವರೂಪವಾದ ಈ ನಿನ್ನ ಸುಕುಮಾರ ದೇಹವನ್ನುಕಾಣದೆ ನಾವು ಹ್ಯಾಗೆ ಬದುಕೋಣ? ಪುತ್ರನನ್ನು ಪಡೆದೂ ವ್ಯರ್ಥವಾದಂತಾಯಿತು. ಪುತ್ರನು ಹುಟ್ಟದೆಯೇ ಇರುವಾಗ ತಾಯಿತಂದೆಗಳಿಗೆ ಅಷ್ಟು ದುಃಖವಾಗುವದಿಲ್ಲ. ಆದರೆ, ಸುಪುತ್ರನು ಹುಟ್ಟಿ ಆತನು ಅಲ್ಪಾಯುಷಿಯಾದರೆ ಆತನು ಹುಟ್ಟದೆ ಇರುವಾಗ ಆಗುವದುಃಖಕ್ಕಿಂತಲೂ, ಎಷ್ಟೋಪಟ್ಟು ಹೆಚ್ಚು ದುಃಖವಾಗುತ್ತದೆಂಬದರಲ್ಲಿ ಸಂಶಯವಿಲ್ಲ. ಸುಪುತ್ರನು ಅಲ್ಪಾಯುಷಿಯಾಗಲಿ, ದರಿದ್ರನಾಗಲಿ, ಅನಪತ್ಯನಾಗಲಿ ಆಗುವನೆಂಬ ಮಾತು ಸುಳ್ಳಲ್ಲ. ಪುತ್ರನೇ, ನಿನ್ನಂಥ ಪುತ್ರನನ್ನು ಕಳೆದುಕೊಂಡು ನಾವು ಹ್ಯಾಗೆ ಜೀವಿಸೋಣ.

ಈ ಮೇರೆಗೆ ತಂದೆಯು ದುಃಖದಿಂದ ನುಡಿದದ್ದನ್ನು ಕೇಳಿ ಮಾರ್ಕಾಂಡೇಯನು—ತಾತನೇ, ನನ್ನ ಸಲುವಾಗಿ ಇಷ್ಟೇಕೆ ಚಿಂತಿಸುವಿರಿ? ಸಾಕ್ಷಾದ್ಭವಾನೀಪತಿಯೇ ನಮ್ಮ ಸರ್ವದುಃಖವನ್ನೂ ದೂರಮಾಡುವನು. ನನ್ನ ಸಲುವಾಗಿ ಇನ್ನು ಮೇಲೆ ಕಿಂಚಿತ್ತಾದರೂ ವ್ಯರ್ಥವಾಗಿ ದುಃಖಮಾಡಬೇಡಿರಿ. ಮೃತ್ಯುಂಜಯನಾಗಿಯೂ, ಸರ್ವದುಃಖಾಪಹಾರಕ

ಶನಾಗಿಯೂ, ವಾಂಛಿತಾರ್ಥಪ್ರದನಾಗಿಯೂ, ದೇವಾಧೀಶ್ವರನಾಗಿಯೂ ಇರುವ ಮಹಾ ದೇವನನ್ನೇ ಮರೆಹೊಕ್ಕು ನಾನು ಮೃತ್ಯುವನ್ನು ದೂರಮಾಡಿಕೊಳ್ಳುವೆನು. ನೀವು ಸರ್ವಥಾ ಚಿಂತಿಸಬೇಡಿರಿ, ಎಂದು ಅನೇಕವಿಧವಾಗಿ ಮಾತಾಪಿತೃಗಳನ್ನು ಸಂತಯಿಸಿದನು. ಅತ್ಯಂತ ಮಧುರಗಳಾಗಿಯೂ, ಸರ್ವದುಃಖೋಪಶಾಮಕಗಳಾಗಿಯೂ ಇರುವ ಆ ಮುದ್ದು ಬಾಲಕನ ಮಾತುಗಳನ್ನು ಕೇಳಿ ಮಾತಾಪಿತೃಗಳು ಮಾರ್ಕಾಂಡೇಯನನ್ನು ಕುರಿತು— ಕುಮಾರಾ, ಮೃತ್ಯುಪರಿಹಾರಕನಾಗಿಯೂ, ಇಚ್ಛಾಗೋಚರನಾಗಿಯೂ ಇರುವ ಆ ಪರಮೇಶ್ವರನನ್ನೇ ಮರೆಹೊಗು! ಆತನೇ ನಿನ್ನ ಮೃತ್ಯುವನ್ನು ಪರಿಹರಿಸುವನು. ಜಗತ್ತಿನಲ್ಲಿ ಅವನಿಗಿಂತ ಹೆಚ್ಚಿನ ಹಿತಕರ್ತೃಗಳು ಯಾರೂ ಇರುವದಿಲ್ಲಕಂಡೆಯಾ? ತನ ಯನೆ, ಆ ನೀಲಕಂಠನು ತನ್ನ ಭಕ್ತರ ಆಪನ್ನಿವಾರಣವನ್ನು ನಿಶ್ಚಯವಾಗಿ ಮಾಡುವನು. ಹಿಂದಕ್ಕೆ ಶ್ವೇತಕೇತುವೆಂಬ ಮಹಾತ್ಮನು ಶ್ರೀ ಶಂಕರನ ಅತ್ಯಂತ ಪ್ರಿಯಭಕ್ತನಾಗಿ ರಲು, ಕಾಲಯೋಗದಿಂದ ಅಂಥವನೂ ಮೃತ್ಯುಗ್ರಸ್ತನಾದನು. ಆಗ ಶಂಕರನು ನಿಮಿ ಷಾರ್ಧದಲ್ಲಿ ಅವನನ್ನು ಮೃತ್ಯುವಿನ ಬಾಯಿಂದ ತಪ್ಪಿಸಿ ಸಂರಕ್ಷಿಸಿದನು. ಮತ್ತು ಮಹಾತ್ಮನೂ, ಜ್ಞಾನಿಯೂ ಆದ ಶಿಲಾದಋಷಿಯ ಪುತ್ರನಾದ ಎಂಟು ವರುಷದ ನಂದಿ ಯು ಶಿವಧ್ಯಾನಪರನಾಗಿರಲು, ಆ ಎಂಟು ವರುಷದ ಬಾಲಕನನ್ನೇ ಮೃತ್ಯುವು ಅಪಹ ರಿಸುವದಕ್ಕಾಗಿ ಯತ್ನಿಸಿದನು. ಆಗ ಶಂಕರನು ಅಂಥ ಮೃತ್ಯುವನ್ನು ನಿಮಿಷಾರ್ಧದಲ್ಲಿ ದೂರಮಾಡಿ ಆ ನಂದಿಗೆ ಎಂದೆಂದೂ ಮೃತ್ಯುವು ಬರಬಾರದೆಂಬ ಹೇತುವಿನಿಂದ ಆತನನು ತನ್ನ ಪ್ರೀತಿಯ ವಾಹನವನ್ನು ಮಾಡಿಕೊಂಡನು. ಪುತ್ರನೇ, ಇನ್ನೂ ಕೇಳು. ಹಿಂದಕ್ಕೆ ಅಮೃತದ ಸಲುವಾಗಿ ದೇವದಾನವರು ಕೂಡಿ ವಾಸುಕಿಯೆಂಬ ಮಹಾಶೇಷನನ್ನೇ ಹಗ್ಗ ವನ್ನಾಗಿಯೂ, ಮಂದರಪರ್ವತವನ್ನೇ ಕಡಗೋಲನ್ನಾಗಿಯೂ ಮಾಡಿ ಕ್ಷೀರಸಮುದ್ರವನ್ನು ಕಡೆಯುಹತ್ತಲು, ಅದರಿಂದ ಉತ್ಪನ್ನವಾದ ಲೋಕಸಂಹಾರಕ ಹಾಲಾಹಲವೆಂಬ ವಿಷವು ಸಮಸ್ತ ಜಗತ್ತನ್ನೂ ಸುಡುವದಕ್ಕೆ ಪ್ರಾರಂಭ ಮಾಡಿತು. ಆ ವಿಷದ ಮಾಹಾ ತ್ಮ್ಯೆಯಿಂದ ಸಪ್ತಮಹಾಸಮುದ್ರಗಳೂ ಕೂಡ ಉಕ್ಕೇರತೊಡಗಿದವು. ಅಸಂಖ್ಯಾತದೇವ ದಾನವರು ಆ ವಿಷದ ಎದುರಿಗೆ ನಿಲ್ಲಲಾರದೆ ಪ್ರಾಣಬಲಿಯನ್ನು ಕೊಟ್ಟರು. ಆಗ ಸಮಸ್ತ ದೇವದಾನವರೂ ಕೂಡಿ ಬ್ರಹ್ಮನನ್ನು ಮರೆಹೊಕ್ಕರು. ಆಗ ಬ್ರಹ್ಮನು— ಎಲೈ ದೇವದಾನವರಿರಾ, ಈ ವಿಷವನ್ನು ನಾಶಮಾಡುವದು ನಮ್ಮಿಂದ ಅಸಾಧ್ಯವು. ನಾವೆಲ್ಲರೂ ವಿಷ್ಣುವನ್ನು ಶರಣುಹೋಗೋಣ! ಎಂದು ಹೇಳಲಾಗಿ ಆಗ ಎಲ್ಲರೂ ಸೇರಿ ವಿಷ್ಣುವಿನ ಬಳಿಗೆ ಹೋಗಲು, ಆಗ ವಿಷ್ಣುವು—ಇದು ನಮ್ಮಿಂದಲೂ ಅಸಾಧ್ಯವೇ ಸರಿ. ನಾವೆಲ್ಲರೂ ಸೇರಿ ಮಹೇಶ್ವರನ ಹತ್ತರವೇ ಹೋಗತಕ್ಕದ್ದು, ಎಂದು ಹೇಳಲು, ಅವರಂತೆ ಎಲ್ಲರೂ ಸೇರಿ ಮಹೇಶ್ವರನ ಹತ್ತರಕ್ಕೆ ಬಂದು—ಮಹೇಶ್ವರಾ, ನೀನೇ ನಮ್ಮನ್ನು ಸಂರಕ್ಷಿಸಬೇಕು. ನಿನ್ನ ಹೊರತು ಯಾರೂ ನಮಗೆ ಗತಿಯಿಲ್ಲ. ಎಂದು ನಾನಾ ಪ್ರಕಾರವಾಗಿ ಪ್ರಾರ್ಥಿಸಲು, ಆಗ ಪರಮೇಶ್ವರನು ಎಲೈ ದೇವದಾನವರುಗಳಿರಾ, ಭಯಪಡಬೇಡಿರಿ. ನಿಮ್ಮಮೇಲೆ ಅಂಥ ಪ್ರಸಂಗವಾದರೂ ಏನು ಬಂದಿರುವದು? ಎಂದು

ಕೇಳಲು, ಆಗ ದೇವದಾನವರು—ಮಹಾದೇವನೇ, ನಾವೆಲ್ಲರೂ ಸೇರಿ ಅಮೃತವನ್ನು ದೊರಕಿಸಬೇಕೆಂಬ ಹೇತುವಿನಿಂದ ಕ್ಷೀರಸಮುದ್ರವನ್ನು ಮಥನಮಾಡಲು, ಅತಿಭಯಂಕರವಾದ ಹಾಲಾಹಲವೆಂಬ ವಿಷವು ಭುಗಿಭುಗಿಸುತ್ತ ಮೇಲಕ್ಕೆ ಹೊರಟಿತು. ಆ ಮಹಾ ವಿಷದ ಜ್ವಾಲೆಗಳಿಂದ ಚತುರ್ದಶಭುವನಗಳೂ ದಗ್ಧವಾಗತೊಡಗಿರುತ್ತವೆ; ಸಪ್ತಸಮುದ್ರಗಳು ಉಕ್ಕೇರತೊಡಗಿರುತ್ತವೆ; ನಮ್ಮೊಳಗಿನ ಎಷ್ಟೋ ಜನರು ಆ ವಿಷದ ಜ್ವಾಲೆಗೆ ಆಹುತಿಯಾದರು. ಇಂಥ ಸಮಯದಲ್ಲಿ ನಿನ್ನನ್ನೇ ಶರಣು ಬಂದಿರುವೆವು, ನಮ್ಮನ್ನು ಸಂರಕ್ಷಿಸಬೇಕು. ನಿನ್ನನ್ನು ಬಿಟ್ಟರೆ ನಮಗೆ ಗತಿಯೇ ಇಲ್ಲವೆಂದು ಪರಿಪರಿಯಾಗಿ ಬೇಡಿಕೊಳ್ಳಲು, ಆಗ ಪರಮೇಶ್ವರನು—ರಕ್ಷಿಸುವೆನು. ಭಯಪಡಬೇಡಿರಿ! ಎಂದು ಹೇಳಿ ಆ ಮಹಾ ವಿಷವನ್ನು ಕಂಠದಲ್ಲಿರಿಸಿಕೊಂಡು ಭಕ್ತರ ಕಷ್ಟವನ್ನು ದೂರ ಮಾಡಿದನು. ಆ ಹೊತ್ತಿನಿಂದ ಆತನಿಗೆ ನೀಲಕಂಠನೆಂಬ ಹೆಸರು ಬಂದಿತು. ಪ್ರಿಯಪುತ್ರನೇ, ಹೀಗೆ ಭಗವಾನ್ ಶಂಕರನು ಭಕ್ತರ ಕಷ್ಟವನ್ನು ತಾನು ಸ್ವೀಕರಿಸಿ ಅವರ ಕಷ್ಟವನ್ನು ದೂರ ಮಾಡುವನು. ಅಂದಮೇಲೆ ಆ ಪರಮೇಶ್ವರನ ಅಗಾಧಲೀಲಾಮಹಿಮೆಯನ್ನು ಎಷ್ಟೆಂದು ವರ್ಣಿಸಬೇಕು?

ಪ್ರಿಯಬಾಲಕ, ಇನ್ನು ಶಂಕರನು ದುಷ್ಟರನ್ನು ಹ್ಯಾಗೆ ಶಿಕ್ಷಿಸಿದನೆಂಬದನ್ನು ಕೇಳು. ಹಿಂದಕ್ಕೆ ಜಲಂಧರನೆಂಬ ದೈತ್ಯನು ತ್ರೈಲೋಕ್ಯವನ್ನು ಜಯಿಸಿ, ಅಲ್ಲಿಯ ಸರ್ವಸಂಪತ್ತನ್ನೂ ಅಪಹರಿಸಿ ದೇವತೆಗಳಿಗೆ ತೊಂದರೆಯನ್ನುಂಟುಮಾಡುತ್ತಿರಲು, ಶಂಕರನು ತನ್ನ ಪಾದಾಂಗುಷ್ಠದ ಚಕ್ರರೇಖೆಯಿಂದ ಅವನನ್ನು ಸಂಹರಿಸಿದನು. ತ್ರಿಪುರಾಸುರನೆಂಬ ಅತ್ಯಂತ ಬಲಾಢ್ಯ ಮಹಾದೈತ್ಯನು ಸಮಸ್ತ ದೇವತೆಗಳನ್ನೂ ಜಯಿಸಿ ಸರ್ವಲೋಕಗಳ ಸಮಸ್ತ ಸಂಪತ್ತನ್ನೂ ಅಪಹರಿಸಿ ಮೂರುಪಟ್ಟಣಗಳನ್ನು ಕಟ್ಟಿಕೊಂಡು ವಾಸಿಸುತ್ತಿರಲು, ಆ ಮದಾಂಧನಾದ ದೈತ್ಯನನ್ನು, ಈ ಭೂಮಿಯನ್ನೇ ರಥವನ್ನುಮಾಡಿ, ಸೂರ್ಯಚಂದ್ರರನ್ನೇ ಚಕ್ರಗಳನ್ನುಮಾಡಿ, ಮೇರುಪರ್ವತವನ್ನೇ ಧನುಸ್ಸನ್ನು ಮಾಡಿ, ಶ್ರೀಮಹಾವಿಷ್ಣುವನ್ನೇ ಬಾಣವನ್ನು ಮಾಡಿ ಆ ತ್ರಿಪುರಾಸುರನನ್ನು ಸಂಹರಿಸಿದನು. ಮತ್ತು ಅಂಧಕಾಸುರನೆಂಬ ಮಹಾದೈತ್ಯನು ಅಜೇಯನಾಗಿ ತ್ರೈಲೋಕ್ಯ ಸಂಪತ್ತನ್ನು ಅಪಹರಿಸಲು, ಅವನನ್ನು ತನ್ನ ತ್ರಿಶೂಲದ ತುದಿಯಲ್ಲಿ ಎಂಭತ್ತುವರ್ಷಗಳವರೆಗೆ ಚುಚ್ಚಿ ಅನಂತರದಲ್ಲಿ ಅವನನ್ನು ಸೂರ್ಯನಿಂದ ಸುಡಿಸಿದನು. ಮನ್ಮಥನು ತ್ರೈಲೋಕ್ಯವನ್ನು ಗೆದ್ದು ಅಹಂಕಾರಯುಕ್ತನಾಗಿ ಸಾಕ್ಷಾತ್ ಪರಮೇಶ್ವರನ ಮೇಲೆಯೂ ತನ್ನ ದುಶ್ಚೇಷ್ಟೆಯನ್ನು ಮಾಡಲು, ಸಮಸ್ತದೇವತೆಗಳೂ ಇದುರಿಗೇ ನೋಡುತ್ತಿರಲು, ತನ್ನ ತೃತೀಯನೇತ್ರದಿಂದ ಅವನನ್ನು ಸುಟ್ಟು ಭಸ್ಮಮಾಡಿದನು. ಪುತ್ರನೇ, ಶಿಷ್ಟರಕ್ಷಕನೂ ದುಷ್ಟಶಿಕ್ಷಕನೂ, ಜಗದ್ರಕ್ಷಕನೂ ಆದ ಆ ಪರಮೇಶ್ವರನನ್ನೇ ನೀನು ಮರೆಹೋಗು. ಅವನೇ ನಿನ್ನನ್ನು ನಿಶ್ಚಯವಾಗಿ ಮೃತ್ಯುವಿನಿಂದ ದೂರಮಾಡುವನು. ಎಂದು ಹೇಳಲು ಆಗಆ ಬಾಲಕನು ಅತ್ಯಂತ ಸಂತುಷ್ಟನಾಗಿ ಮಾತಾಪಿತೃಗಳ ಅಪ್ಪಣೆಯಿಂದ ದಕ್ಷಿಣಸಮುದ್ರತೀರಕ್ಕೆ ಹೋಗಿ ಮಹಾದೇವನನ್ನು ಕುರಿತು ಅತ್ಯಂತ ಕಠೋರತಪಸ್ಸನ್ನಾಚರಿಸಲು ಪ್ರಾರಂಭಿಸಿದನು.

ವಿವೇಕಶೀಲಾ, ಪ್ರತಿದಿನ ಮಾರ್ಕಾಂಡೇಯನು ಸಮುದ್ರತೀರದಲ್ಲಿ ಮಳಲ ಲಿಂಗವನ್ನು ಮಾಡಿ ಅಲ್ಲಿ ಶಂಭುವನ್ನು ಭಾವಿಸಿ ತ್ರಿಕಾಲದಲ್ಲಿಯೂ ತಪ್ಪದೆ ಅತಿಭಕ್ತಿಪೂರ್ವಕವಾಗಿ ಆತನನ್ನು ಅರ್ಚಿಸುತ್ತಿದ್ದನು. ಶಿವಪೂಜೆಯು ಮುಗಿದಬಳಿಕ ಶಿವಭಜನೆಯನ್ನು ಮಾಡಹತ್ತುವನು, ಪ್ರತಿದಿನ ಅರ್ಧನಿಮಿಷವನ್ನಾದರೂ ವ್ಯರ್ಥ ಕಳೆಯದೆ ಶಿವಪೂಜೆಯು ಮುಗಿಯುತ್ತಿರಲು, ಶಿವಭಜನೆ, ಶಿವಭಜನೆ ಮುಗಿಯುತ್ತಿರಲು ಶಿವಧ್ಯಾನವು, ಹೀಗೆ ಒಂದಿಲ್ಲೊಂದು ತರದಿಂದ ಸದಾಶಿವನಲ್ಲಿಯೇ ಆಸಕ್ತನಾಗಿದ್ದನು. ಹೀಗೆ ಶಿವಾರಾಧನೆಯಲ್ಲಿಯೇ ಆಸಕ್ತನಾಗಿ ಪ್ರತಿದಿನದಲ್ಲಿ ತಿಲಮಾತ್ರವೂ ತಪ್ಪದೆ ಏಕಚಿತ್ತದಿಂದಿರುತ್ತಿರಲು, ಆತನ ಆಯುಷ್ಯದ ಕೊನೆಯದಿವಸವು ಪ್ರಾಪ್ತವಾಯಿತು. ಆಗ ಮಾರ್ಕಾಂಡೇಯನು ಪ್ರಾತಃಕಾಲದಲ್ಲಿ ಆ ಪವಿತ್ರೋದಧಿಯಲ್ಲಿ ಸ್ನಾನಮಾಡಿ, ಮಡಿಯವಸ್ತ್ರವನ್ನುಟ್ಟು, ರುದ್ರಾಕ್ಷಮಾಲೆಯನ್ನು ಹಾಕಿಕೊಂಡು, ಮೈತುಂಬ ಚಿತಾಭಸ್ಮವನ್ನು ಹಚ್ಚಿಕೊಂಡು, ಕೃಷ್ಣಾಜಿನವನ್ನು ಹಾಕಿಕೊಂಡು, ಕೇವಲ ನಿರಾಹಾರಿಯಾಗಿ, ಮನಸ್ಸನ್ನು ತಿಲಮಾತ್ರವೂ ಚಲವಿಚಲವಾಗಗೊಡದೆ ಶ್ರೀ ಶಂಕರನನ್ನು ಕುರಿತು—ಹೇ ದೀನಬಂಧೋ, ದಯಾಳೋ, ಕರುಣಾಶಾಲಿಯೇ, ಭಕ್ತರಕ್ಷಕಾ—ಭವಾನೀಪತೇ, ನಿನ್ನನ್ನೇ ಶರಣುಬಂದಿರುವ ಈ ದೀನಭಕ್ತನ ಕಷ್ಟವನ್ನು ಪರಿಹರಿಸು! ಪರಿಹರಿಸು!! ಎಂದು ಅನೇಕ ವಿಧವಾಗಿ ಸ್ತುತಿಸುವದಕ್ಕೆ ಪ್ರಾರಂಭಿಸಿದನು. ಹಿಂದಕ್ಕೆ ಶ್ರೀಮನ್ನಾರಾಯಣನು ದುಷ್ಟ ಹಿರಣ್ಯಕಶಿಪುವನ್ನು ನಾಶಮಾಡುವದಕ್ಕಾಗಿ ಆತನ ಮನೆಯೊಳಗಿನ ಸ್ತಂಭದಲ್ಲಿ ಕುಳಿತಂತೆ ಈಗ ಪರಮೇಶ್ವರನು ಯಮಶಾಸನವನ್ನು ಮಾಡುವದಕ್ಕಾಗಿ ಭಕ್ತಶ್ರೇಷ್ಠ ಮಾರ್ಕಾಂಡೇಯನ ಆ ಮಳಲ ಲಿಂಗದಲ್ಲಿಯೇ ಬಂದು ಕುಳಿತಿದ್ದನು. ಇಂಥ ಸಮಯದಲ್ಲಿ ಮಾರ್ಕಾಂಡೇಯನು ಕುಳಿತ ಸ್ಥಳದ ಸುತ್ತಮುತ್ತಲೂ ಮೆಲ್ಲಮೆಲ್ಲನೆ ಭಯಂಕರವಾದ ಕತ್ತಲೆಯು ಬೀಳತೊಡಗಿತು. ಸ್ವಲ್ಪಹೊತ್ತಿನಲ್ಲಿಯೇ ಆ ಸುತ್ತಮುತ್ತಲಿನ ಸ್ಥಳದಲ್ಲಿ ಒಬ್ಬರಮೋರೆಯು ಮತ್ತೊಬ್ಬನಿಗೆ ಕಾಣದಹಾಗಾಗಿಹೋಯಿತು- ಆದರೂ, ಪರಮೇಶ್ವರನಲ್ಲಿಯೇ ತಲ್ಲೀನನಾಗಿಹೋಗಿದ್ದ ಮಾರ್ಕಾಂಡೇಯನಿಗೆ ಅನ್ಯ ವಿಷಯಗಳ ಚಿಂತನವಿದ್ದಿಲ್ಲ; ಅಂದಮೇಲೆ ಆತನ ನಿಶ್ಚಲಭಕ್ತಿಯಾದರೂ ಎಷ್ಟಿರಬಹುದು? ಇರಲಿ, ಬರಬರುತ್ತ ಅತ್ಯಂತ ಕ್ರೂರನಾಗಿಯೂ, ಕೆಂಪಡರಿದ ಕಣ್ಣುಗಳುಳ್ಳವನಾಗಿಯೂ, ಸರ್ಪವೃಶ್ಚಿಕಗಳೇ ಕೂದಲುಗಳುಳ್ಳವನಾಗಿಯೂ, ಕಾಡಿಗೆಯನ್ನೂ ಧಿಕ್ಕರಿಸುವ ಮೈಕಾಂತಿಯುಳ್ಳವನಾಗಿಯೂ, ದೊಡ್ಡ ದೊಡ್ಡ ಕೋರೆಗಳುಳ್ಳವನಾಗಿಯೂ, ಪರ್ವತಾಕಾರವಾದ ಮಹಿಷಾರೂಢನಾಗಿಯೂ ಇರುವ ಯಮನು ಮಾರ್ಕಾಂಡೇಯನ ಇದುರಿಗೆ ಬಂದು ನಿಂತುಕೊಂಡನು. ರಾತ್ರಿಯೊಳಗಿನ ಮಿಂಚಿನಂತೆ ಅವನ ಭಯಂಕರ ರೂಪದೊಳಗಿನ ಕೋರೆಯಹಲ್ಲುಗಳು ಒಮ್ಮೊಮ್ಮೆ ಹೊಳೆಯುತ್ತಿದ್ದವು- ಇಂಥ ಭಯಂಕರರೂಪವು ಇದುರಿಗೆ ಬಂದು ನಿಂತರೂ ಆ ಬಾಲಕನ ದೃಷ್ಟಿಯು ಯತ್ಕಿಂಚಿತ್ತಾದರೂ ಅತ್ತಕಡೆಗೆ ಹೋಗಲಿಲ್ಲ. ಆಗ ಆ ಭಯಂಕರರೂಪ ಮಾದ ಕೃತಾಂತನು ತನ್ನ ಪ್ರಾಣಹಾರಕ ಪಾಶವನ್ನು ಆ ಮುದ್ದುಬಾಲಕನಮೇಲೆ ಎಸೆದನು. ಆಗ ಆ ಬಾಲಕನು ಕಂಠದಲ್ಲಿ ಪ್ರಾಣಹಾರಕ ಪಾಶಉಳ್ಳವನಾಗಿಯೇ ಸುತ್ತು

ಮುತ್ತು ನೋಡಹತ್ತಿದನು. ಆಗ ಭಯಂಕರ ಕೋರೆಯಿಂದ ಪ್ರಕಾಶಿಸುತ್ತಲಿರುವ ಯಮನು ಕಣ್ಣಿಗೆ ಬೀಳಲು, ಆ ಭಕ್ತಶ್ರೇಷ್ಠ ಮಾರ್ಕಾಂಡೇಯನು ಆ ಕಾಲನನ್ನು ಕುರಿತು—ಎಲೈ ಕಾಲನೇ, ಈಗ ನಾನು ಜಗತ್ಪತಿಯೂ, ಅನಾಥರಕ್ಷಕನೂ ಆದ ಪರಮೇಶ್ವರನ ಪೂಜೆಯನ್ನು ಮಾಡುತ್ತಿರುವೆನು. ಅದು ಪೂರ್ಣವಾಗುವವರೆಗೆ ಸ್ವಲ್ಪತಾಳು. ಮಹಾಮಹಿಮಾಶಾಲಿಯಾದ ನೀಲಕಂಠನ ಪೂಜೆಯನ್ನು ಮುಗಿಸದೆ ಎಲ್ಲಿಗೂ ಹೋಗಲಿಕ್ಕೆ ಬರುವಹಾಗಿಲ್ಲ. ಹೆಚ್ಚಿಗೆ ಹೇಳುವದೇನು? ಉಣ್ಣಲಿಕ್ಕೂ ಬರುವಹಾಗಿಲ್ಲ. ತಿನ್ನಲಿಕ್ಕೂ ಬರುವಹಾಗಿಲ್ಲ. ಮಲಗಲಿಕ್ಕೂ ಬರುವಹಾಗಿಲ್ಲ. ಎಲ್ಲವೂ ಶ್ರೀ ಪರಮೇಶ್ವರನ ಅನುಗ್ರಹವಾದಬಳಿಕೇ ಸರಿ! ಈ ಜಗತ್ತಿನಲ್ಲಿ ನನಗೆ ಅತ್ಯಂತ ಪ್ರಿಯಕರವಸ್ತುವೆಂದರೆ—ಶಿವಸ್ತುತಿಯು! ಅದಕ್ಕಿಂತಲೂ ನನಗೆ ಈ ಪಂಚಪ್ರಾಣಗಳು ಕೂಡ ಪ್ರಿಯವಲ್ಲ. ಅಂದಬಳಿಕ ಉಳಿದ ವೈಭವಗಳ ಪಾಡೇನು! ಆ ಪವಿತ್ರಶಿವಸ್ತುತಿಗಳೇ ನನ್ನನ್ನು ಉದ್ಧರಿಸುತ್ತವೆ. ಇದರಲ್ಲಿ ಏನೂ ಸಂಶಯವಿಲ್ಲ, ಎಂದು ನುಡಿಯಲು, ಆಗ ಯಮನು ತನ್ನ ಭಯಂಕರವಾಣಿಯಿಂದ—ಎಲೈ ಬಾಲಕ, ಪ್ರತಿಯೊಬ್ಬರೂ ತಮ್ಮ ಉತ್ತರವಯಸ್ಸಿನಲ್ಲಿಯೇ ದಾನಧರ್ಮಾದಿಗಳನ್ನು ಮಾಡಬೇಕೆಂದು ತಿಳಿದಿರುತ್ತಾರೆ. ಅವರು ತಮ್ಮ ಪೂರ್ವವಯಸ್ಸಿನಲ್ಲಿ ಮಾಡದೆ ಹೋದರೆ, ಕಡೆಗೆ ಧನವಿಲ್ಲದ ಮಾರ್ಗಸ್ಥರಂತೆ ವ್ಯರ್ಥವಾಗಿ ದುಃಖಪಡುತ್ತಾರೆ. ತಾನು ಸುಖಿಯಾಗಿರಬೇಕೆಂದು ಇಚ್ಛಿಸುವವನು ವರ್ಷಕ್ಕೆ ಎಂಟು ತಿಂಗಳವರೆಗಾದರೂ ಪರಮೇಶ್ವರನನ್ನು ಸೇವಿಸಬೇಕು. ಆಜನ್ಮಸುಖಿಯಾಗಿರಬೇಕೆಂದು ಇಚ್ಛಿಸುವವನು ಸದಾ ಪರಮೇಶ್ವರನಲ್ಲಿ ಚಿತ್ತವನ್ನಿರಿಸಬೇಕು. ನಾಳಿನ ಕಾರ್ಯವನ್ನು ಇವತ್ತೇ ಮಾಡಬೇಕು; ಮಧ್ಯಾಹ್ನದ ಕಾರ್ಯವನ್ನು ಪ್ರಾತಃಕಾಲದಲ್ಲಿಯೇ ಮಾಡಬೇಕು. ಮೃತ್ಯುವು ಸಮಯಾಸಮಯ ಕಾರ್ಯಾಕಾರ್ಯ ಮೊದಲಾದವನ್ನು ನೋಡುವದಿಲ್ಲ. ಒಂದು ಕಾರ್ಯವನ್ನು ಮಾಡಬೇಕೆಂದು ಉದ್ಯೋಗ ನಡಿಸಿರುವ ಮನುಷ್ಯನ ಕಾರ್ಯವು ಪೂರ್ಣವಾಗಲಿ, ಆಗದೆ ಇರಲಿ, ಅವನಿಗೆ ಯಾವಸಮಯಕ್ಕೆ ಮೃತ್ಯುವು ಒದಗಬೇಕೆಂದು ನಿಶ್ಚಯವಿರುವದೋ, ಆ ಸಮಯಕ್ಕೆ ಅದು ಒದಗಿಯೇ ತೀರುವದು. ಮರಣಕಾಲವು ಪ್ರಾಪ್ತವಾಗದಿರುವಾಗ ನೂರಾರು ಬಾಣಗಳಿಂದ ಹೊಡೆದರೂ ಪ್ರಾಣಹರಣವಾಗುವದಿಲ್ಲ. ಮರಣಸಮಯ ಒದಗಿದವನು ಒಂದು ಹುಲ್ಲುಕಡ್ಡಿಯ ನೆವದಿಂದಾದರೂ ಪ್ರಾಣವನ್ನು ಬಿಡುತ್ತಾನೆ. ಮಾರ್ಕಾಂಡೇಯನೇ, ಇದನ್ನು ಮುಖ್ಯವಾಗಿ ಹೇಳುವದಕ್ಕೆ ಕಾರಣವೇನಂದರೆ, ನೀನು ನಿನ್ನ ಪೂರ್ವವಯಸ್ಸಿನಲ್ಲಿಯೇ ಇಂಥ ಶ್ರೇಷ್ಠವಾದ ಕೆಲಸವನ್ನು ಮಾಡುತ್ತಿರುವೆಯೆಂಬದೇನೋ ನಿಜ; ಎಂಥ ಮನುಷ್ಯನೇ ಇರಲಿ, ಅವನು ಯಾವಸಮಯಕ್ಕೆ ಮೃತ್ಯುಗ್ರಸ್ತನಾಗಬೇಕೆಂಬ ಸಂಕಲ್ಪವಿರುವದೋ ಅದರಂತೆ ಆಗದೆ ಎಂದಿಗೂ ತಪ್ಪದು. ಆದ್ದರಿಂದ ಈಗ ನಿನಗೆ ಮೃತ್ಯುವು ಪ್ರಾಪ್ತವಾಗಿರುತ್ತದೆ ಏಳು. ಮಾರ್ಕಾಂಡೇಯನೇ, ನಿನ್ನನ್ನೇ ಈಗ ಹೊಸದಾಗಿ ಒಯ್ಯುತ್ತಿರುವೆನೆಂದು ತಿಳಿಯಬೇಡ. ಅನೇಕ ಸಹಸ್ರಚಕ್ರವರ್ತಿಗಳನ್ನೂ, ಸಾವಿರಾರು ಜನ ಇಂದ್ರರನ್ನೂ ನಾನು ಒಯ್ದಿರುವಾಗ ನಿನ್ನಂಥ ಮನುಷ್ಯರನ್ನು ಎಷ್ಟು ಒಯ್ದಿರಬಹು

ದೆಂಬುದನ್ನು ನೀನೇ ಕಲ್ಪಿಸು. ಇಷ್ಟರಿಂದ ವ್ಯರ್ಥವಾಗಿ ನನ್ನ ಮೇಲೆ ಸಿಟ್ಟಾಗಬೇಡ- ನನ್ನ ಕರ್ತವ್ಯವನ್ನು ನಾನು ತಪ್ಪದೆ ಮಾಡಲೇಬೇಕಾಗಿರುವದು. ಎಂದು ನುಡಿದನು.

ಆಗ ಶಿವಸ್ತೋತ್ರ ಪರಾಯಣನಾದ ಮಾರ್ಕಂಡೇಯನು:—ಎಲೈ ಕಾಲನೇ, ಯಾರು ಶಿವಭಕ್ತಸಮುದಾಯಗಳಿಗೆ ವಿಘ್ನವನ್ನುಂಟುಮಾಡುವರೋ, ಅವರು ಕ್ಷಣಮಾತ್ರದಲ್ಲಿ ನಾಶಹೊಂದುವರು. ಶಿವಪೂಜೆಗೆ ವಿಘ್ನಮಾಡುವ ನಿನ್ನ ಯೋಗ್ಯತೆಯಾದರೂ ಎಷ್ಟು? ನಿನಗೆ ಧಿಕ್ಕಾರವಿರಲಿ! ಎಲೈ ಯಮನೇ, ದುರಾಚಾರಿಗೆ ರಾಜನೇ ಹ್ಯಾಗೆ ಶಾಸಕನೋ, ಅದರಂತೆ ಶಿವಭಕ್ತರಿಗೆ ಶಿವನೇ ಶಾಸಕನಲ್ಲವೆ? ಅನ್ಯರು ಶಾಸನ ಮಾಡಲು ಎಷ್ಟರವರು? ಶಿವಭಕ್ತರ ಯೋಗ್ಯತೆಯನ್ನು ನೀನೇನು ಬಲ್ಲೆ? ಮನಸ್ಸಿಗೆ ಬಂದರೆ ಅವರು ಪರ್ವತಗಳನ್ನು ಚೂರುಚೂರು ಮಾಡಬಲ್ಲರು. ಸಮುದ್ರಗಳನ್ನು ನುಂಗಿಬಿಡುವರು. ಭೂಮ್ಯಾಕಾಶಗಳನ್ನು ಕಲಕಿ ಬಿಡಬಲ್ಲರು. ಹೆಚ್ಚಿಗೆ ಹೇಳುವದೇನು! ಬ್ರಹ್ಮೇಂದ್ರಾದಿಗಳನ್ನು ತೃಣಪ್ರಾಯನ್ನಾಗಿ ಬಗೆಯುವ ಶಂಕರಕಿಂಕರರಿಗೆ ಯಾವದು ತಾನೆ ಅಸಾಧ್ಯವು! ಸಾಕ್ಷಾತ್ ಮೃತ್ಯುವೇ ಆಗಲಿ, ಬ್ರಹ್ಮನೇ ಆಗಲಿ, ವಿಷ್ಣುವೇ ಆಗಲಿ, ಶಿವನ ಹೊರತು ಬೇರೆ ಯಾರೇ ಆಗಲಿ ಶಿವಭಕ್ತರ ಮೇಲೆ ತಮ್ಮ ಪ್ರಭಾವವನ್ನು ನಡಿಸಲಾಗದು. ಅಪ್ರತಿಹತಶಾಸನರಿಗೆ ವಿಘ್ನಗಳ ಸಂಭವವುಂಟೇ? ಕಾಲದೇವನೇ, ಸಿಟ್ಟಿಗೆದ್ದ ಶಿವಭಕ್ತರನ್ನು ಶಮನವು ಬ್ರಹ್ಮಾದಿ ದೇವತೆಗಳಿಗೂ ಅಸಾಧ್ಯವೆಂದು ಜ್ಞಾನಿಗಳು ಹೇಳುವದನ್ನು ನೀನು ಕೇಳಿಲ್ಲವೆ! ಅಂದಮೇಲೆ ನೀನು ಬಿಟ್ಟು ನಿನ್ನಂಥ ಸಾವಿರಾರು ಜನ ಕಾಲರು ಬಂದರೂ ನನ್ನನ್ನು ಏನು ಮಾಡಬಲ್ಲರು! ವ್ಯರ್ಥವಾಗಿ ಪ್ರಯಾಸವನ್ನು ಹೊಂದಬೇಡ ಹೊರಟುಹೋಗು; ಎಂದು ಗದರಿಸಲು. ಆಗ ಸಿಟ್ಟಿಗೆದ್ದ ಆ ಮೃತ್ಯುದೇವನನ್ನು ವರ್ಣಿಸುವದು ಅಸಾಧ್ಯವೇ ಸರಿ! ಆಗ ಆತನ ನೇತ್ರಗಳು ಪ್ರಳಯಾಗ್ನಿಯನ್ನು ಕಾರುತ್ತ ಚತುರ್ದಶಭುವನಗಳನ್ನೂ ಸುಟ್ಟುಬಿಡುವವೋ ಏನೋ ಎಂಬಂತೆ ತೋರುತ್ತಿದ್ದವು. ಹೆಚ್ಚಿಗೆ ಹೇಳುವದೇನು! ಆಗಿನ ಅವನ ಘೋರ ರೂಪದಮುಂದೆ ಬ್ರಹ್ಮಾದಿ ಸಮಸ್ತ ದೇವತೆಗಳಾದರೂ ನಿಲ್ಲಲಾರರು. ಇಂಥ ಭಯಂಕರ ರೂಪವನ್ನು ತಾಳಿದ ಯಮನು ಮಾರ್ಕಂಡೇಯನನ್ನು ಕುರಿತು—ಎಲೈ ದುಷ್ಟ ಮಾರ್ಕಂಡೇಯ, ನನ್ನನ್ನು ಯಾರೆಂದು ತಿಳಿದಿರುವೆ? ನೀನು ಹೀಗೆ ಮೈಮೇಲೆ ಎಚ್ಚರಿಲ್ಲದೆ ಬೊಗಳಬಹುದೆ? ಇನ್ನು ಮೇಲೆ ನನ್ನ ಪ್ರತಾಪವನ್ನಾದರೂ ನೋಡು! ಗಂಗಾನದಿಯಲ್ಲಿ ಎಷ್ಟು ಉಸುಬುಗಳಿರುವವೋ ಅಷ್ಟು ಜನ ಬ್ರಹ್ಮರು ನನ್ನಿಂದ ಸಂಹರಿಸಲ್ಪಟ್ಟಿರುವರು! ಇರಲಿ, ನಿನ್ನ ಸಂಗಡ ಹೆಚ್ಚಿಗೆ ಮಾತುಗಳನ್ನಾಡುವದಾದರೂ ಯಾಕೆ! ನೋಡಬೇಕಾದರೂ ನೋಡು ನನ್ನ ಪರಾಕ್ರಮವನ್ನು! ಎಲೈ ನೀಚ ಮಾರ್ಕಂಡೇಯಾ, ನೀನು ಯಾವ ಮಹಾದೇವನ ಹೆಚ್ಚಿನವನೆಂದು ತಿಳಿದು ಅವನ ದಾಸನಾಗಿರುವೆಯೋ, ಆ ಮಹಾದೇವನು ಈಗ ನಿನ್ನನ್ನು ಕಾಪಾಡಿಯಾದರೂ ಕಾಪಾಡಲಿ ನೋಡೋಣ! ಎಂದು ಗರ್ಜಿಸುತ್ತ ರಾಹುವು ಚಂದ್ರನನ್ನು ಗ್ರಹಿಸುವಂತೆ ಯಮದೇವನು ಮಾರ್ಕಂಡೇಯನನ್ನು ಗ್ರಹಿಸುವದಕ್ಕಾಗಿ ತೀರ ಅವನ ಸಮೀಪಕ್ಕೆ ಬಂದನು. ಅವನು ಇನ್ನು

ಮಾರ್ಕಾಂಡೇಯನನ್ನು ಕೈಹಿಡಿದು ಎಳೆಯುತಕ್ಕವನು. ಅಷ್ಟರಲ್ಲಿಯೇ ಅನಿರ್ದೇಶ್ಯವ ತೇಜೋರೂಪನಾಗಿಯೂ, ಚಂದ್ರಾರ್ಧಶೇಖರನಾಗಿಯೂ, ಭಸ್ಮೋದ್ಧೂಲಿತಗಾತ್ರನಾಗಿಯೂ, ಇಷ್ಟಾರ್ಥಪ್ರದನಾಗಿಯೂ ಇರುವ ಶ್ರೀ ಶಂಕರನು ಭಕ್ತಶಿರೋಮಣಿಯಾದ ಮಾರ್ಕಾಂಡೇಯನು ಪೂಜಿಸುತ್ತಿರುವ ಲಿಂಗದಿಂದಲೇ ಉದ್ಭವಿಸಿ ಮೇಘದಂತೆ ಗರ್ಜನೆ ಮಾಡುತ್ತ ಮಾರ್ಕಾಂಡೇಯನನ್ನು ಎಳೆಯುವುದಕ್ಕಾಗಿ ಪ್ರಯತ್ನಿಸುತ್ತಿರುವ ಯಮನನ್ನು ಅದೇ ಕ್ಷಣದಲ್ಲಿ ಪಾದದಿಂದ ಒದೆಯಲು, ಆಗ ಯಮನು ದೂರದಲ್ಲಿ ಹೋಗಿ ಬಿದ್ದನು. ಹೀಗೆ ದೂರದಲ್ಲಿ ಹೋಗಿ ಬಿದ್ದ ಯಮನನ್ನು ನೋಡಿ ಮಾರ್ಕಾಂಡೇಯನು ಅತ್ಯಂತ ಸಂತುಷ್ಟನಾಗಿ ಪರಮೇಶ್ವರನನ್ನು ಕುರಿತು—

ರತ್ನಸಾನುಶರಾಸನಂ ರಜತಾದ್ರಿ ಶೃಂಗನಿಕೇತನಂ ।
ಸಿಂಜಿನೀಕೃತ ಪನ್ನಗೇಶ್ವರಮಚ್ಯುತಾನನಸಾಯಕಮ್ ॥
ಕ್ಷಿಪ್ರದಗ್ಧಪುರತ್ರಯಂ ತ್ರಿದಶಾಲಯೈರಭಿವಂದಿತಂ ।
ಚಂದ್ರಶೇಖರಮಾಶ್ರಯೇ ಮಮ ಕಿಂ ಕರಿಷ್ಯತಿ ವೈ ಯಮಃ ॥ ೧ ॥
ಪಂಚಪಾದಪಪುಷ್ಪಗಂಧಪದಾಂಬುಜದ್ವಯಶೋಭಿತಂ ।
ಭಾಲಲೋಚನಜಾತಪಾವಕದಗ್ಧಮನ್ಮಥವಿಗ್ರಹಮ್ ॥
ಭಸ್ಮದಿಗ್ಧಕಲೇವರಂ ಭವನಾಶನಂ ಭವಮವ್ಯಯಂ ।
ಚಂದ್ರಶೇಖರ... ॥ ೨ ॥
ಮತ್ತವಾರಣಮುಖ್ಯಚರ್ಮಕೃತೋತ್ತರೀಯಮನೋಹರಂ ।
ಪಂಕಜಾಸನಪದ್ಮಲೋಚನಪೂಜಿತಾಂಘ್ರಿಸರೋರುಹಂ ॥
ದೇವಸಿಂಧುತರಂಗಶೀಕರಸಿಕ್ತಶುಭ್ರಜಟಾಧರಂ ।
ಚಂದ್ರಶೇಖರ... ॥ ೩ ॥
ಕುಂಡಲೀಕೃತಕುಂಡಲೇಶ್ವರಕುಂಡಲಂ ವೃಷವಾಹನಂ ।
ನಾರದಾದಿಮುನೀಶ್ವರಸ್ತುತವೈಭವಂ ಭುವನೇಶ್ವರಂ ॥
ಅಂಧಕಾಂಧಕಮಾಶ್ರಿತಾಮರಪಾದಪಂ ಶಮನಾಂತಕಂ ।
ಚಂದ್ರಶೇಖರ... ॥ ೪ ॥
ಯಕ್ಷರಾಜಸಖಂ ಭಗಾಕ್ಷಹರಂ ಭುಜಂಗವಿಭೂಷಣಂ ।
ಶೈಲರಾಜಸುತಾಪರಿಷ್ಕೃತಚಾರುವಾಮಕಲೇವರಂ ॥
ಕ್ಷ್ವೇಡನೀಲಗಲಂ ಪರಶ್ವಧಧಾರಿಣಂ ಮೃಗಧಾರಿಣಂ ।
ಚಂದ್ರಶೇಖರ... ॥ ೫ ॥
ಭೇಷಜಂ ಭವರೋಗಿಣಾಮಖಿಲಾಪದಾಮಪಹಾರಿಣಂ ।
ದಕ್ಷಯಜ್ಞವಿನಾಶನಂ ತ್ರಿಗುಣಾತ್ಮಕಂ ತ್ರಿವಿಲೋಚನಂ ॥
ಮುಕ್ತಿಭುಕ್ತಿಫಲಪ್ರದಂ ಸಕಲಾಘಸಂಘನಿಬರ್ಹಣಂ ।
ಚಂದ್ರಶೇಖರ... ॥ ೬ ॥

ಭಕ್ತವತ್ಸಲಮರ್ಚಿತಂ ನಿಧಿಮಕ್ಷಯಂ ಹರಿದಂಬರಂ ।
ಸರ್ವಭೂತಪತಿಂ ಪರಾತ್ಪರಮಪ್ರಮೇಯಮನುತ್ತಮಂ ॥
ಸೋಮವಾರಿನಭೋಹುತಾಶನಸೋಮಪಾನಿಲಖಾಕೃತಿಂ ।
ಚಂದ್ರಶೇಖರ... ॥ ೭ ॥
ವಿಶ್ವಸೃಷ್ಟಿವಿಧಾಯಿನಂ ಪುನರೇವಪಾಲನತತ್ಪರಂ ।
ಸಂಹರಂತಮಪಿ ಪ್ರಪಂಚಮಶೇಷಲೋಕನಿವಾಸಿನಂ ॥
ಕ್ರೀಡಯಂತಮಹರ್ನಿಶಂ ಗಣನಾಥಯೂಥಸಮಾವೃತಂ ।
ಚಂದ್ರಶೇಖರ ಚಂದ್ರಶೇಖರ ಚಂದ್ರಶೇಖರ ಪಾಹಿಮಾಂ ॥ ೮ ॥

ಈ ರೀತಿಯಾಗಿ ಅನೇಕ ಪ್ರಕಾರಗಳಿಂದ ಶಂಕರನನ್ನು ಸ್ತುತಿಸುತ್ತ—ಎಲೈ ಭಕ್ತ ರಕ್ಷಕನಾದ ಚಂದ್ರಶೇಖರನೇ, ನಿನ್ನನ್ನೇ ಮರೆಹೊಕ್ಕಿರುವೆನು! ರಕ್ಷಿಸು ರಕ್ಷಿಸು ಮರೆಯ ಬೇಡ ಕಂಡೆಯಾ, ಎಂದು ಅವನ ಪಾದಗಳ ಮೇಲೆ ಬೀಳಲು, ಆಗ ಶ್ರೀ ಶಂಕರನು ಮಾರ್ಕಾಂಡೇಯನನ್ನು ಕುರಿತು—ಎಲೈ ಮಾರ್ಕಾಂಡೇಯನೇ, ನಿನ್ನಭಕ್ತಿಗೂ, ಸ್ತೋತ್ರ ಕ್ಕೂ ಮೆಚ್ಚಿರುವೆನು. ನಿನಗೆ ಅಗಣಿತವಾಗಿಯೂ, ಉದ್ದಂಡವಾಗಿಯೂ, ಅನೇಕ ಪ್ರಳಯ ಗಳವರೆಗೆ ಆಯುಷ್ಯವನ್ನು ಕೊಟ್ಟಿರುವೆನು. ಇನ್ನುಮೇಲೆ ಸುಖದಿಂದ ವಾಸಮಾಡು, ಎಂದು ಹೇಳಲು, ಆಗ ಮಾರ್ಕಾಂಡೇಯನು—"ಪರಮೇಶ್ವರನೇ, ನಿನ್ನ ದರ್ಶನದಿಂದ ಧನ್ಯನಾದೆನು. ಕಡೆತನಕ ನನ್ನ ಮನಸ್ಸು ನಿನ್ನಲ್ಲಿಯೇ ಲೀನವಾಗುವಂತೆ ಅನುಗ್ರಹಿಸು"ಎಂದು ಪ್ರಾರ್ಥಿಸಿ ದನು. ಆಗ ಶಂಕರನು—ನಿನ್ನ ಇಷ್ಟವಿದ್ದಂತೆಯೇ ಆಗಲಿ! ಪ್ರಿಯಭಕ್ತಬಾಲಕ, ನಿನ್ನ ಮಾತಾ ಪಿತೃಗಳು ನಿನ್ನ ದಾರಿಯನ್ನೇ ನೋಡುತ್ತಲಿರುವರು. ಬೇಗನೆ ಹೋಗಿ ದರ್ಶನಕೊಡು,ಎಂದು ಹೇಳಲು, ಆಗಮಾರ್ಕಾಂಡೇಯನು ಬಾಷ್ಪಪೂರ್ಣನೇತ್ರಗಳುಳ್ಳವನಾಗಿ ಪರಮೇಶ್ವರನಪಾದ ಗಳನ್ನುನಮಸ್ಕರಿಸಿ ಶಿವಾಜ್ಞೆಯಂತೆ ತಡಮಾಡದೆ ತನ್ನ ಆಶ್ರಮಕ್ಕೆ ಹೊರಟು ಹೋದನು. ಇತ್ತಯಮನಾದರೂ ಎದ್ದು ಬಂದು ಪರಮೇಶ್ವರನ ಪಾದಗಳನ್ನು ನಮಸ್ಕರಿಸಿ, ನನ್ನ ಅಪ ರಾಧವನ್ನು ಕ್ಷಮಿಸಬೇಕೆಂದು ಪ್ರಾರ್ಥಿಸಿದನು. ಆಗ ಪರಮೇಶ್ವರನು—ಎಲೈ ಅಂತಕನೇ, ನಿನ್ನ ಅಪರಾಧವನ್ನು ಕ್ಷಮಿಸಿರುವೆನು. ನಿನ್ನ ಸ್ವಸ್ಥಳಕ್ಕೆ ಹೊರಟು ಹೋಗು. ಎಂದು ಹೇಳಿ, ಆ ಮಳಲ ಲಿಂಗದಲ್ಲಿಯೇ ಅದೃಶ್ಯನಾಗಿ ಕೈಲಾಸಕ್ಕೆ ಹೊರಟು ಹೋದನು, ಮಾರ್ಕಾಂಡೇಯನು ಮಾರ್ಗವನ್ನು ಕ್ರಮಿಸುತ್ತ ತನ್ನ ತಂದೆ ತಾಯಿಗಳಿರುವ ಆಶ್ರಮಕ್ಕೆ ಬಂದು ಅವರನ್ನು ನಮಸ್ಕರಿಸಲು, ಆಗ ಅವರಿಗಾದ ಆನಂದವನ್ನು ಎಷ್ಟುವರ್ಣಿಸಿದರೂ ಸ್ವಲ್ಪವೇ ಇರುವದು! ಮುಂದೆ ಮಾರ್ಕಾಂಡೇಯನು ಗೃಹಸ್ಥಾಶ್ರಮಿಯಾಗದೆ ಪರಮೇಶ್ವ ರನ ಸೇವೆಯಲ್ಲಿಯೇ ಆಸಕ್ತನಾಗಿ ಆಜನ್ಮ ಬ್ರಹ್ಮಚಾರಿಯಾಗಿ ತೀರ್ಥಯಾತ್ರೆಗಳನ್ನು ಮಾಡಹತ್ತಿದನು. ಈ ಪುಣ್ಯಾತ್ಮನ ಚರಿತ್ರಶ್ರವಣವಂತೂ ಒತ್ತಟ್ಟಿಗಿರಲಿ; ಈ ಮಹಾ ತ್ಮನ ನಾಮೋಚ್ಚರಣದಿಂದಲೂ ಮನುಷ್ಯರು ಆಯುಃಶಾಲಿಗಳಾಗುವರೆಂದಬಳಿಕ ಈ ಮಹಾತ್ಮನ ಮಹಿಮೆಯನ್ನೇನು ಹೇಳುವದು! ವಿವೇಕಶೀಲಾ, ಪರಮೇಶ್ವರನು ಮಾರ್ಕಾಂಡೇಯನಂತೆ ಸರ್ವರಿಗೂ ಉದ್ದಂಡಾಯುಷ್ಯವನ್ನೀಯಲಿ !

## ೨ ಭಗವಾನ್ ವಿಷ್ಣುವು ಚಕ್ರವನ್ನು ಸಂಪಾದಿಸಿದ್ದು!

ವಿವೇಕಶೀಲೆ, ಕ್ಷುಪನೆಂಬ ರಾಜನು ಬ್ರಹ್ಮದೇವನ ಮಗನು. ಆತನಿಗೂ ಚ್ಯವನಮುಷಿಯ ಮಗನಾದ ದಧೀಚನಿಗೂ ಬಹಳ ಮಿತ್ರತ್ವವಿತ್ತು. ಕೆಲಕಾಲದ ಮೇಲೆ ಬ್ರಾಹ್ಮಣ-ಕ್ಷತ್ರಿಯರಲ್ಲಿ ಶ್ರೇಷ್ಠರಾರೆಂಬ ವಿಷಯುವಾಗಿ ವಾದವುಂಟಾಯಿತು. ಆಗ ಕ್ಷುಪನು ದಧೀಚನನ್ನು ಕುರಿತು—"ನಾನು ರಾಜನಿರುವೆನು. ಇಂದ್ರ, ಅಗ್ನಿ, ಯಮ ಮೊದಲಾದ ಅಷ್ಟ ದಿಕ್ಪಾಲಕ-ದೇವತೆಗಳ ಅಂಶವು ರಾಜನಲ್ಲಿರುವದರಿಂದ ನಾನು ಸಾಕ್ಷಾತ್ ವಿಷ್ಣುವಿನ ಅವತಾರವಾಗಿರುವೆನು; ಆದ್ದರಿಂದ ಚ್ಯಾವನೇಯಾ, ನೀನು ಎಂದೂ ನನ್ನ ಅಪಮಾನಮಾಡಲಾಗದು. ಯಾವಾಗಲೂ ನನ್ನನ್ನು ಪೂಜಿಸಬೇಕು." ಎಂದು ಹೇಳಿದನು. ದಧೀಚನಲ್ಲಿ ಸ್ವಾಭಿಮಾನವೂ ಸ್ವವಿಷಯದ ಗೌರವವೂ ವಿಶೇಷವಾಗಿದ್ದದ್ದರಿಂದ ಕ್ಷುಪನ ಈ ಮಾತುಗಳನ್ನು ಕೇಳಿದ ಕೂಡಲೆ ಅವನು ಕ್ಷುಪನ ತಲೆಯ ಮೇಲೆ ಗುದ್ದಿದನು. ಕೂಡಲೆ ಕ್ಷುಪನು ತನ್ನ ವಜ್ರದಿಂದ ದಧೀಚನ ದೇಹವನ್ನು ತುಂಡು ತುಂಡಾಗಿ ಮಾಡಿದನು. ಆಗ ದಧೀಚನು ಭಾರ್ಗವಮುನಿಯನ್ನು (ಶುಕ್ರ) ಸ್ಮರಿಸಿದ್ದರಿಂದ, ಆ ಶುಕ್ರನು ದಧೀಚನ ಅವಯವಗಳನ್ನು ಹೊಂದಿಸಿ ಸಂಜೀವನೀ ವಿದ್ಯೆಯ ಬಲದಿಂದ ಅವನನ್ನು ಬದುಕಿಸಿ ಆತನನ್ನು ಕುರಿತು—ದಧೀಚಾ, ಶಿವಭಕ್ತಿಯಿಂದ ನನಗೆ ಈ ವಿದ್ಯೆಯು ಪ್ರಾಪ್ತವಾಯಿತು; ಆದ್ದರಿಂದ ಬ್ರಹ್ಮಾದಿದೇವಪೂಜ್ಯನಾದ ನಿರಂಜನ ಮಹಾದೇವನನ್ನು ಭಕ್ತಿಯಿಂದ ಪೂಜಿಸಿ ಅಮರನಾಗು. ತ್ರ್ಯಂಬಕನ ಪ್ರಸಾದದಿಂದ ಅವಧ್ಯತ್ವವು ಪ್ರಾಪ್ತವಾಗುವದು. ಶಿವಭಕ್ತನಿಗೆ ಮೃತ್ಯುವಿನ ಭಯವಿಲ್ಲವು. ಈಗ ನಿನಗೆ ನಾನು ಸಂಜೀವನೀ ಮಂತ್ರವನ್ನು ಉಪದೇಶಿಸುವೆನು, ಎಂದು ಹೇಳಿ ದಧೀಚನಿಗೆ **"त्र्यंबकं यजामहे"** ಎಂಬ ಮೃತ್ಯುಂಜಯ ಮಂತ್ರವನ್ನು ಉಪದೇಶಿಸಿದನು. ಬಳಿಕ ದಧೀಚನು ಉಗ್ರತಪಶ್ಚರ್ಯದಿಂದ ಶಂಕರನನ್ನು ಪ್ರಸನ್ನೀಕರಿಸಿಕೊಂಡು ಆತನಿಂದ ವಜ್ರಾಸ್ಥಿತ್ವವನ್ನೂ, ಅವಧ್ಯತ್ವವನ್ನೂ, ಅಧೀನತ್ವವನ್ನೂ ಸಂಪಾದಿಸಿಕೊಂಡನು. ಬಳಿಕ ಆತನು ಕ್ಷುಪನ ಬಳಿಗೆ ಹೋಗಿ ಆತನ ತಲೆಗೆ ಒದೆದನು. ಆಗ ಕ್ಷುಪನು ದಧೀಚನ ಮೇಲೆ ವಜ್ರವನ್ನು ಪ್ರಯೋಗಿಸಲು, ಅದರ ಆಟವೇನೂ ನಡೆಯದಾಯಿತು. ದಧೀಚನ ಈ ಪ್ರಭಾವವನ್ನು ನೋಡಿ ಕ್ಷುಪನು ವಿಷ್ಣುವಿನ ಆರಾಧನೆಯನ್ನು ಮಾಡಿದನು. ಅದರಿಂದ ದೇವದೇವನಾದ ವಿಷ್ಣುವು ಕ್ಷುಪನಿಗೆ ಪ್ರಸನ್ನನಾಗಿ ಆತನಿಗೆ ದರ್ಶನ ಕೊಟ್ಟನು. ಆಗ ಕ್ಷುಪನು ದಿವ್ಯದೃಷ್ಟಿಯಿಂದ ವಿಷ್ಣುವನ್ನು ನೋಡಿ ಆತನನ್ನು ಸ್ತುತಿಸಿ ಸಾಷ್ಟಾಂಗವಾಗಿ ವಂದಿಸಿ—ಭಗವನ್, ದಧೀಚನೆಂಬ ಹೆಸರಿನ ಬ್ರಾಹ್ಮಣನು ನನ್ನ ಜೀವದ ಗೆಳೆಯನಿರುವನು. ಆತನು ಶಂಕರನಿಂದ ಅವಧ್ಯ ವರವನ್ನು ಸಂಪಾದಿಸಿ ನನ್ನ ತಲೆಗೆ ಒದೆದು "ನಿನಗೆ ನಾನು ಅಂಜುವದಿಲ್ಲ" ಎಂದು ತಿರಸ್ಕರಿಸಿದನು. ದೇವಾ, ದಧೀಚನನ್ನು ಗೆಲ್ಲುವ ಇಚ್ಛೆಯು ನನಗಿರುವದು; ಆದ್ದರಿಂದ ನೀನು ನನಗೆ ಸಹಾಯ ಮಾಡಬೇಕು.

ಕ್ಷುಪನ ಈ ಮಾತುಗಳನ್ನು ಕೇಳಿದ ವಿಷ್ಣುವಿಗೆ ದಧೀಚನು ಶಿವನಿಂದ ಸಂಪಾದಿಸಿದ ವರದ ನೆನಪಾಯಿತು. ಆಗ ಆತನು ಕ್ಷುಪನಿಗೆ—ಎಲೈ ಬ್ರಹ್ಮಪುತ್ರಾ, ಶಿವಭಕ್ತ

ರಿಗೆ ಯಾರಿಂದಲೂ ಅಂಜಿಕೆಯಿಲ್ಲವು; ಆದ್ದರಿಂದ ನೀನು ದಧೀಚನನ್ನು ಗೆಲ್ಲಲಾರೆ. ಈ ದಧೀಚಋಷಿಯ ಶಾಪದಿಂದಲೇ ದಕ್ಷಯಜ್ಞದಲ್ಲಿ ನನ್ನ ಹಾಗು ಯಾವತ್ತು ದೇವತೆಗಳ ನಾಶವಾಗಬೇಕಾಗಿರುವದು. ಮುಂದೆ ನಾವು ಸಜೀವರಾಗೇ ಆಗುವೆವು; ಅದಿರಲಿ, ಈಗ ದಧೀಚನನ್ನು ಜಯಿಸುವ ವಿಷಯದಲ್ಲಿ ನನ್ನಿಂದಾದಷ್ಟು ಯತ್ನಮಾಡುವೆನು, ಎಂದು ಹೇಳಿ, ಬ್ರಾಹ್ಮಣನ ವೇಷದಿಂದ ವಿಷ್ಣುವು ದಧೀಚನ ಆಶ್ರಮಕ್ಕೆ ಹೋದನು. ವಿವೇಕಶೀಲಾ, ಭಕ್ತರ ಅಭೀಷ್ಟವನ್ನು ಪೂರಯಿಸುವ ವಿಷಯವಾಗಿ ದೇವತೆಗಳು ಅಸಾಧ್ಯಕಾರ್ಯದಲ್ಲಿಯೂ ಹ್ಯಾಗೆ ಯತ್ನಮಾಡುವರೆಂಬದನ್ನು ನೋಡು. ಹೀಗೆ ಭಕ್ತರ ಅಭೀಷ್ಟವನ್ನು ಪೂರಯಿಸುವದೇ ದೇವತೆಗಳ ಧರ್ಮವಾಗಿರುವದು. ಬ್ರಾಹ್ಮಣ ವೇಷಧಾರಿಯಾದ ವಿಷ್ಣುವು ದಧೀಚಋಷಿಯನ್ನು ಕುರಿತು—ಬ್ರಹ್ಮರ್ಷಿಯಾದ ದಧೀಚನೇ, ನಿನ್ನ ಬಳಿಗೆ ವರವನ್ನು ಬೇಡಿಕೊಳ್ಳುವದಕ್ಕಾಗಿ ನಾನು ಬಂದಿರುವೆನು; ಆದ್ದರಿಂದ ಕರುಣಿಸಿ ನನಗೆ ವರಪ್ರದಾನ ಮಾಡಬೇಕು, ಎಂದು ಬೇಡಿಕೊಂಡನು. ಆಗ ದಧೀಚನು ವಿಷ್ಣುವಿನ ಗುರುತುಹಿಡಿದು—"ಎಲೈ ಜನಾರ್ದನಾ, ಈಶಪ್ರಸಾದದಿಂದ ನನಗೆ ತ್ರಿಕಾಲಜ್ಞಾನವಾಗಿರುವದು. ನೀನು ಕ್ಷುಪನ ವಿಜ್ಞಾಪನೆಯಂತೆ ಬ್ರಾಹ್ಮಣವೇಷದಿಂದ ನನ್ನ ಬಳಿಗೆ ಬಂದಿರುತ್ತೀ. ಭಗವನ್, ನಿನ್ನ ಭಕ್ತವಾತ್ಸಲ್ಯಕ್ಕೆ ಇದು ಸ್ತುತ್ಯವೇ ಇರುವದು. ಶಿವಭಕ್ತರಿಗೆ ಯಾರಿಂದಾದರೂ ಅಂಜಿಕೆಯಿದ್ದರೆ ನನಗೆ ಹೇಳಬೇಕು. ಮುಕುಂದಾ, ನಾನು ನಿನಗೆ ನಿಜವಾಗಿ ಹೇಳುವೆನೇನಂದರೆ, ಈ ಜಗತ್ತಿನಲ್ಲಿ ನನಗೆ ಯಾರ ಅಂಜಿಕೆಯೂ ಇಲ್ಲವು. ನೀನು ಈ ಬ್ರಾಹ್ಮಣರೂಪವನ್ನು ತ್ಯಜಿಸಿ ಬಿಡು" ಎಂದು ಹೇಳಲು, ನಿಜರೂಪದಿಂದ ವಿಷ್ಣುವು ದಧೀಚನನ್ನು ಕುರಿತು—ದಧೀಚನೇ, ನೀನು ಶಂಕರನ ಭಕ್ತನಿರುವದರಿಂದ ನಿನಗೆ ಯಾರ ಭಯವೂ ಇಲ್ಲವೆಂಬದನ್ನು ನಾನು ಬಲ್ಲೆನು; ನೀನು ಸರ್ವಜ್ಞನಿರುವೆಯೆಂಬದೂ ನನಗೆ ಗೊತ್ತಿರುತ್ತದೆ; ಆದರೆ ನಾನು ಹೇಳುವದರಿಂದ ನೀನು ಒಮ್ಮೆ ಕ್ಷುಪರಾಜನಿಗೆ—"ನಾನು ನಿನಗೆ ಅಂಜುವೆನು, ನಿನಗೆ ನಮಸ್ಕಾರ ಮಾಡುವೆನು" ಎಂದು ಹೇಳು, ಎಂದು ಹೇಳಿದನು. ಅದಕ್ಕೆ ದಧೀಚನು—"ನಾನು ಯಾರಿಗೂ ಹೆದರುವದಿಲ್ಲ" ಎಂದು ಸ್ಪಷ್ಟವಾಗಿ ಹೇಳಿದನು. ಅದನ್ನು ಕೇಳಿ ವಿಷ್ಣುವು ಸಿಟ್ಟಾಗಿ ದಧೀಚನನ್ನು ಹೊಡೆಯುವದಕ್ಕಾಗಿ ಸುದರ್ಶನಚಕ್ರವನ್ನು ಎತ್ತಿದನು; ಆದರೆ ಸುದರ್ಶನದ ಗತಿಯು ಅಲ್ಲಿಂದಲ್ಲಿಯೇ ಕುಂಠಿತವಾಯಿತು. ಆಗ ದಧೀಚನು ವಿಷ್ಣುವಿಗೆ—"ಭಗವನ್, ಈ ಚಕ್ರವು ನಿನಗೆ ಶಿವನಿಂದ ಪ್ರಾಪ್ತವಾಗಿರುವದರಿಂದ ಶಿವಭಕ್ತನಾದ ನನ್ನನ್ನು ಇದು ಕೊಲ್ಲಲಾರದು; ಆದ್ದರಿಂದ ಬ್ರಹ್ಮಾದಿ ಉಳಿದ ಅಸ್ತ್ರಗಳನ್ನು ನನ್ನ ಮೇಲೆ ಪ್ರಯೋಗಿಸಬೇಕು," ಎಂದು ಹೇಳಲು, ವಿಷ್ಣುವು ದಧೀಚನ ಮೇಲೆ ಯಾವತ್ತು ಅಸ್ತ್ರಗಳನ್ನು ಪ್ರಯೋಗಿಸಿದನು. ಆಗ ಯಾವತ್ತು ದೇವತೆಗಳು ವಿಷ್ಣುವಿನ ಸಹಾಯಕ್ಕಾಗಿ ಬಂದರು. ಅವರೆಲ್ಲರೊಡನೆ ದಧೀಚಋಷಿಯೊಬ್ಬನೇ ಕಾದತೊಡಗಿದನು. ಆತನು ಶಿವನನ್ನು ಧ್ಯಾನಿಸಿ ಒಂದು ದರ್ಭಮುಷ್ಟಿಯನ್ನು ಪ್ರಯೋಗಿಸಿದನು. ಆಗ ಆ ದರ್ಭಗಳೆಲ್ಲ ತ್ರಿಶೂಲಗಳಾಗಿ ಯಾವತ್ತು ದೇವತೆಗಳ ಬೆನ್ನು ಹತ್ತಿದವು. ದೇವತೆಗಳು ಬಿಟ್ಟ ಅಸ್ತ್ರಗಳು ಬಗ್ಗಿ ದಧೀಚನ

ಮುಂದುಗಡೆಯಲ್ಲಿ ಬೀಳುತ್ತಿದ್ದವು. ಆಗ ವಿಷ್ಣುವು ತನ್ನ ಶರೀರದಿಂದ ತನ್ನಂಥ ಲಕ್ಷಾವಧಿ ಗಣಗಳನ್ನು ಉತ್ಪನ್ನ ಮಾಡಿದನು. ಅವರನ್ನೆಲ್ಲ ದಧೀಚನು ಸುಟ್ಟುಬಿಟ್ಟನು. ಆ ಮೇಲೆ ವಿಷ್ಣುವು ದಧೀಚನಿಗೆ ವಿಶ್ವರೂಪವನ್ನು ತೋರಿಸಿದನು. ಆಗ ಆ ಭಗವಂತನ ಮುಖದಲ್ಲಿ ಕೋಟ್ಯವಧಿ ದೇವತೆಗಳು, ರುದ್ರರು, ಕಾಣಹತ್ತಿದರು. ಆಗ ದಧೀಚನು—"ಭಗವನ್, ಇದೆಲ್ಲ ಮಾಯೆಯು. ಇದನ್ನು ಬಿಟ್ಟುಬಿಡು. ನಿನ್ನಂತೆ ನನ್ನ ಮುಖದಲ್ಲಿಯೂ ಯಾವತ್ತು ಜಗತ್ತು ಇರುವದನ್ನು ನೋಡು." ಎಂದು ಹೇಳಿ, ವಿಶ್ವರೂಪತಾಳಿದ ವಿಷ್ಣುವಿನ ಮೇಲೆ ಜಲಪ್ರೋಕ್ಷಣ ಮಾಡಿ ತನ್ನ ಮುಖವನ್ನು ತೆರೆದನು. ಅದರಲ್ಲಿಯೂ ಬ್ರಹ್ಮ, ವಿಷ್ಣು, ರುದ್ರ, ಯಾವತ್ತು ಜಗತ್ತು ಕಂಡಿತು! ದಧೀಚನ ಈ ಮಾಹಾತ್ಮ್ಯವನ್ನು ನೋಡಿ ದೇವತೆಗಳೆಲ್ಲರೂ ಓಡಿಹೋದರು. ಬ್ರಹ್ಮದೇವನು ವಿಷ್ಣುವಿಗೆ ಯುದ್ಧಮಾಡಬಾರದೆಂದು ಹೇಳಿದನು. ಆಗ ವಿಷ್ಣುವು ಆ ಮಹಾಮುನಿಯನ್ನು ನಮಸ್ಕರಿಸಿ ತನ್ನ ಲೋಕಕ್ಕೆ ಹೊರಟು ಹೋದನು. ಇದರಿಂದ ಕ್ಷುಪನಿಗೆ ಬಹಳ ದುಃಖವಾಯಿತು. ಆತನು ದಧೀಚನನ್ನು ಪೂಜಿಸಿ, ಬಗೆಬಗೆಯಾಗಿ ಪ್ರಾರ್ಥಿಸಿ—"ಎಲೈ ಮಿತ್ರಾ, ದಧೀಚಾ, ಅಜ್ಞಾನದಿಂದ ನಾನು ನಿನ್ನ ಅಪಮಾನಮಾಡಿದ್ದಕ್ಕಾಗಿ ಕ್ಷಮಿಸು. ದೇವಾದಿಕರೂ ಶಿವಭಕ್ತರನ್ನು ಅಳುಕಿಸಲಾರರು. ಇಂಥ ಶಿವಭಕ್ತಿಯು ನಮ್ಮಂಥವರಿಗೆ ದುರ್ಲಭವಾಗಿರುವದು; ನನ್ನನ್ನು ಅನುಗ್ರಹಿಸು" ಎಂದು ಪ್ರಾರ್ಥಿಸಿದನು. ಆಗ ದಧೀಚನು ಕ್ಷುಪನನ್ನು ಅನುಗ್ರಹಿಸಿ, ದೇವತೆಗಳಿಗೆ—"ದಕ್ಷಪ್ರಜಾಪತಿಯ ಯಜ್ಞದಲ್ಲಿ ರುದ್ರನ ಕ್ರೋಧದಿಂದ ನಿಮ್ಮೆಲ್ಲರ ನಾಶವಾಗುವದು" ಎಂದು ಶಾಪಕೊಟ್ಟನು.

ವಿವೇಕಶೀಲಾ, ಹೀಗೆ ಭಕ್ತಾಭಿಮಾನಿಯಾದ ಶ್ರೀ ವಿಷ್ಣುವು ಕ್ಷುಪನ ಪ್ರಾರ್ಥನೆಯಂತೆ ದಧೀಚನೊಡನೆ ಕಾದುವಾಗ ಆತನ ಸುದರ್ಶನ ಚಕ್ರದ ಗತಿಯು ಕುಂಠಿತವಾಗಲು, ಜಾಲಂಧರ ದೈತ್ಯನನ್ನು ಸಂಹರಿಸುವದಕ್ಕಾಗಿ ಭಗವಾನ್ ಶಂಕರನು ನಿರ್ಮಿಸಿದ ಸುದರ್ಶನ ಚಕ್ರವನ್ನು ಸಂಪಾದಿಸಬೇಕೆಂದು ಆ ಭಗವಂತನು ಶಂಕರನನ್ನು ಆರಾಧಿಸುವದಕ್ಕಾಗಿ ಹೊರಟನು. ಆತನು ವಿಶ್ವಕರ್ಮನಿರ್ಮಿತ ಶಿವಲಿಂಗವನ್ನು ಹಿಮಾಲಯದ ಮೇಲೆ ಸ್ಥಾಪಿಸಿ, ರುದ್ರಾವರ್ತನದಿಂದ ಅದಕ್ಕೆ ಅಭಿಷೇಕ ಮಾಡತೊಡಗಿದನು. ಆತನು ಭವಾದಿ ಸಹಸ್ರನಾಮುಗಳಿಂದ ಸವಿಧಗಳ ಹವನಮಾಡಿದನು. ನಾಮಕ್ಕೊಂದರಂತೆ ಕಮಲವನ್ನು ಏರಿಸುತ್ತ ಸಹಸ್ರನಾಮುಗಳಿಂದ ಶಿವನಿಗೆ ಪುಷ್ಪಗಳನ್ನು ಸಮರ್ಪಿಸತೊಡಗಿದನು. ಆಗ ಶಂಕರನು ವಿಷ್ಣುವಿನ ಭಕ್ತಿಯನ್ನು ಪರೀಕ್ಷಿಸುವದಕ್ಕಾಗಿ ಆತನ ಕಮಲಗಳಲ್ಲಿ ಒಂದು ಕಮಲವನ್ನು ಇಲ್ಲದಂತೆ ಮಾಡಿದನು. ಒಂದು ಕಮಲವು ಕಡಿಮೆಯಿರುವದನ್ನು ನೋಡಿ ವಿಷ್ಣುವು ತನ್ನದೊಂದು ಕಣ್ಣನ್ನು ಕಿತ್ತಿ ಲಿಂಗಕ್ಕೆ ಅರ್ಪಿಸಿದನು. ಇದನ್ನು ನೋಡಿ ಶಂಕರನಿಗೆ ಪರಮಾನಂದವಾಯಿತು. ಆಗ ಆ ಭಗವಾನ್ ಸದಾಶಿವನು ವಿಷ್ಣುವಿನ ನೇತ್ರವನ್ನು ವಿಷ್ಣುವಿಗೆ ತಿರುಗಿ ಕೊಟ್ಟದ್ದಲ್ಲದೆ, ಆತನಿಗೆ ಸುದರ್ಶನ ಚಕ್ರವನ್ನು ಕೊಟ್ಟು ಆತನನ್ನು ಕುರಿತು— ಪುರುಷೋತ್ತಮಾ, ನೀನು ಭಕ್ತಿಯಿಂದ ನನ್ನನ್ನು ವಶಮಾಡಿಕೊಂಡಿರುವೆ. ಇನ್ನೇನಾದರೂ ವರಗಳನ್ನು ಕೇಳಿಕೊಳ್ಳುವದಿದ್ದರೆ ಕೇಳಿಕೊಳ್ಳು, ಎಂದು ಹೇಳಲು,

" ಈಶಭಕ್ತಿಯುಹೊರತು ನನಗೆ ಏನೂ ಬೇಡವೆಂ " ದು ವಿಷ್ಣುವು ಹೇಳಿದನು. ವಿಷ್ಣುವಿನ ಈ ಮಾತುಗಳನ್ನು ಕೇಳಿ ಭಗವಾನ್ ಶಂಕರನು ಸಂತುಷ್ಟನಾಗಿ ವಿಷ್ಣುವಿನ ಮೈಮೇಲೆ ಕೈಯಾಡಿಸಿ—" ನೀನು ಯಾವತ್ತು ದೇವಾಸುರರಿಗೆ ವಂದ್ಯನಾಗುವೆ " ಎಂದು ವರಪ್ರದಾನ ಮಾಡಿದನು. ಇವಲ್ಲದೆ ಭಗವಾನ್ ವಿಷ್ಣುವನ್ನು ಕುರಿತು— ಪುರುಷೋತ್ತಮಾ, ಸತಿಯು ತನ್ನ ತಂದೆಯಾದ ದಕ್ಷನೊಡನೆ ಜಗಳಾಡಿ ಪುನಃ ಉಮಾ ಎಂಬ ಹೆಸರಿನಿಂದ ಜನ್ಮ ತಾಳುವಳು. ಬ್ರಹ್ಮದೇವನ ಹೇಳಿಕೆಯಂತೆ ನೀನು ಆಕೆಯನ್ನು ತಂಗಿಯೆಂದು ತಿಳಿದು, ನನ್ನೊಡನೆ ಆಕೆಯ ಲಗ್ನವನ್ನು ನೀನು ಮಾಡಿಕೊಡುವೆ. ಆಮೇಲೆ ನಾವಿಬ್ಬರೂ ಪರಮಮಿತ್ರರಾಗುವೆವು. " ಎಂದು ಹೇಳಿ ಅಲ್ಲಿಯೇ ಅಂತರ್ಧಾನ ಹೊಂದಿದನು. ಬಳಿಕ ವಿಷ್ಣುವು ಬ್ರಹ್ಮದೇವನನ್ನು ಕುರಿತು— " ನನ್ನ ಈ ಶಿವಸಹಸ್ರನಾಮಗಳಿಂದ ಶಿವನನ್ನು ಪೂಜಿಸುವವನಿಗೆ ಯಜ್ಞ ಫಲವು ಪ್ರಾಪ್ತವಾಗಬೇಕು, ಮತ್ತು ಈ ನಾಮಗಳ ಶ್ರವಣ–ಪಠಣ ಮಾಡುವವರಿಗೆ ಸುವರ್ಣದಾನದ ಪುಣ್ಯವು ಪ್ರಾಪ್ತವಾಗಿ ಅವರು ಪೂಜ್ಯರಾಗಬೇಕು " ಎಂದು ಹೇಳಲು, ಬ್ರಹ್ಮನು " ತಥಾಸ್ತು " ಎಂದು ನುಡಿದು, ವಿಷ್ಣುವನ್ನು ನಮಸ್ಕರಿಸಿ ತನ್ನಲೋಕಕ್ಕೆ ಹೊರಟು ಹೋದನು; ಆದ್ದರಿಂದ ವಿವೇಕಶೀಲಾ, ಭಕ್ತರ ಅಭೀಷ್ಟವನ್ನು ಪೂರಯಿಸುವಲ್ಲಿ ಭಗವಾನ್ ಶಂಕರನಿಗೆ ಸರಿಯಾದವರು ಯಾರೂ ಇಲ್ಲವು. ಶಂಕರನ ಇಂಥ ಭಕ್ತೋದ್ಧರಣ ಲೀಲೆಗಳು ಅನಂತವಾಗಿರುವವು !

ಸಿದ್ಧಮುನಿಗಳ ಈ ನಿರೂಪಣವನ್ನು ಕೇಳಿ ವಿವೇಕಶೀಲನಿಗೆ ಪರಮಾನಂದವಾಯಿತು; ಆತನು ಶಿವಮಹಿಮೆಯ ರಹಸ್ಯವನ್ನು ತಿಳಿದುಕೊಳ್ಳುವದಕ್ಕಾಗಿ ತನ್ನ ಗುರುವನ್ನು ಕುರಿತು—ಸದ್ಗುರೋ, ಭಕ್ತೋದ್ಧರಣಶೀಲನಾದ ಮಹಾದೇವನ ಚರಿತ್ರವನ್ನು ಕೇಳಿ ನಮಗೆ ಬಹಳ ಸಂತೋಷವಾಯಿತು. ಆ ಚರಿತ್ರದಲ್ಲಿ ವಿಚಾರಿಸತಕ್ಕ ರಹಸ್ಯಗಳು ಹಲವು ಇರುವಂತೆ ತೋರುತ್ತದೆ. ಕ್ಷುಪ–ದಧೀಚರ ಜಗಳವು ನನಗೆ ವಿಲಕ್ಷಣವಾಗಿ ತೋರುತ್ತದೆ; ಯಾಕಂದರೆ ಜಗಳಾಡಲಿಕ್ಕೆ ಇಬ್ಬರೂ ಸಾಮಾನ್ಯ ಪುರುಷರಲ್ಲ. ಕ್ಷತ್ರಿಯನಾದ ಕ್ಷುಪನು ಬ್ರಹ್ಮಪುತ್ರನಿದ್ದು, ತನ್ನ ತಂದೆಯಾದ ಬ್ರಹ್ಮನು ಭಗವಾನ್ ಸದಾಶಿವನ ಆಜ್ಞೆಯಂತೆ ವರ್ಣಾಶ್ರಮ ಧರ್ಮಗಳನ್ನು ಗೊತ್ತುಪಡಿಸಿರಲು, ಆ ಕ್ಷುಪನು "ಬ್ರಾಹ್ಮಣೋಸ್ಯಮುಖಮಾಸೀತ್, ಬಾಹೂರಾಜ್ಯನ್ಯಃಕೃತಃ" ಎಂಬ ಶ್ರುತಿವಚನವನ್ನೂ "ವರ್ಣಾನಾಂ ಬ್ರಾಹ್ಮಣೋಗುರುಃ" ಎಂಬ ಸ್ಮೃತಿವಚನವನ್ನೂ ಲಕ್ಷಿಸದೆ ಕ್ಷತ್ರಿಯರೇ ಶ್ರೇಷ್ಠರೆಂದು ಯಾಕೆ ವಾದಿಸಿದನು! ಅದರಂತೆ ತಪೋಧನರಾದ ಬ್ರಾಹ್ಮಣರು ಶಮಪ್ರಧಾನರಿದ್ದು, ದಧೀಚ ಬ್ರಾಹ್ಮಣನು ಅಭಿಮಾನದಿಂದ ಸಿಟ್ಟಿಗೆದ್ದು ಕ್ಷುಪನನ್ನು ಯಾಕೆ ಹೊಡೆದನು? ಹಾಗೆಯೇ ಶ್ರೀ ವಿಷ್ಣುವು ಭಗವಾನ್ ಸದಾಶಿವನ ಮಹಿಮೆಯನ್ನು ಅರಿತವರೂ, ಶಿವಕೃಪೆಯಿಂದ ಧನ್ಯನಾದ ದಧೀಚನನ್ನು ಅಜ್ಞಾನಿಯಂತೆ ಸೋಲಿಸಹೋಗಿ ದಧೀಚನಿಂದ ಯಾಕೆ ಪರಾಜಿತನಾದನು! ಸದ್ಗುರೋ, ಇನರಂತೆ, ಮಾರ್ಕಾಂಡೇಯು ಚರಿತ್ರದಲ್ಲಿ ಯಮನು ಭಗವಾನ್ ಸದಾಶಿವನಿಂದ ನಿಯಮಿಸಲ್ಪಟ್ಟದ್ದ ಒಬ್ಬ ಲೋಕಪತಿಯಲ್ಲವೆ? ಅಂಪಬಳಿಕ ಮಾರ್ಕಾಂಡೇಯನು ಪರಮ ಶಿವಭಕ್ತನೆಂದರಿತೂ ಭಗವಾನ್

ಸದಾಶಿವನ ಭಕ್ತವಾತ್ಸಲ್ಯವನ್ನು ಲೆಕ್ಕಿಸದೆ ಅಜ್ಞಾನಿಯಂತೆ ಯಮನು ಮಾರ್ಕಾಂಡೇಯನನ್ನು ಯಮಪಾಶದಿಂದ ಬಂಧಿಸಹೋಗಿ ಶಿವನಿಂದ ಯಾಕೆ ಶಿಕ್ಷಿಸಲ್ಪಟ್ಟನು? ಇನ್ನು, ಶಿವನು ಮೃಕಂಡುವಿಗೆ "ನಾನೇ ನಿನ್ನ ಉದರದಲ್ಲಿ ಹುಟ್ಟಿ ಬರುವೆನು" ಎಂದು ಹೇಳಿ, ಮಾರ್ಕಾಂಡೇಯನರೂಪದಿಂದ ತಾನು ಹುಟ್ಟಿ ಬಂದಿದ್ದು, ಹದಿನಾರು ವರ್ಷ ತುಂಬಲು, ಮೃತ್ಯುಭಯವಿರುವದೆಂದು ತಿಳಿದು ತಪಶ್ಚರ್ಯದಿಂದ ಶಿವನನ್ನು ಪ್ರಸನ್ನೀಕರಿಸಿಕೊಂಡು ಮರಣಭಯವನ್ನು ತಪ್ಪಿಸಿಕೊಂಡನಲ್ಲ! ಇದರಿಂದ ಶಿವಾಂಶಸಂಭೂತರಿಗೂ ಪ್ರಾರಬ್ಧಭೋಗವು ಬಿಡುವದಿಲ್ಲವೆಂದಹಾಗಾಗುವದಿಲ್ಲವೆ? ಸದ್ಗುರೋ, ನನ್ನ ಈ ನಾಲ್ಕು ಶಂಕೆಗಳನ್ನು ಕರುಣಿಸಿ ಪರಿಹರಿಸಬೇಕು, ಎಂದು ಪ್ರಾರ್ಥಿಸಿದನು. ಆಗ ಸಿದ್ಧಮುನಿಗಳು ಸಂತೋಷಬಟ್ಟು ವಿವೇಕಶೀಲನನ್ನು ಕುರಿತು—ಶಿಷ್ಯೋತ್ತಮನೆ, ನಿನ್ನ ಪ್ರಶ್ನಗಳನ್ನು ಕೇಳಿ ಬಹಳ ಸಂತೋಷವಾಯಿತು. ಆ ಪ್ರಶ್ನಗಳ ರಹಸ್ಯವನ್ನು ಹೇಳುವ ವಿಷಯದಲ್ಲಿ ನನ್ನ ಮನಸ್ಸು ಉತ್ಸಾಹಪಡುತ್ತದೆ; ಯಾಕಂದರೆ ನಿನ್ನ ಪ್ರಶ್ನಗಳಿಂದ ನನ್ನ ಹೃದಯಸ್ಥಾನದ ಭಗವಾನ್ ಸದಾಶಿವನು ಪರಮ ಸಂತುಷ್ಟನಾಗಿದ್ದಾನೆ. ಆದ್ದರಿಂದ ಆತನು ಪ್ರೇರಿಸಿದಂತೆ ನಾನು ಹೇಳುವ ರಹಸ್ಯವನ್ನು ಲಕ್ಷ್ಯಪೂರ್ವಕವಾಗಿ ಕೇಳು.

ವಿವೇಕಶೀಲಾ, ನೀನು ಕ್ಷುಪ-ದಧೀಚರ ಕಲಹವನ್ನು ಕುರಿತು ಕೇಳಿದೆಯಷ್ಟೆ? ಅದರ ರಹಸ್ಯವನ್ನು ಹೇಳುವೆನು ಕೇಳು. ಬ್ರಾಹ್ಮಣನಾದರೇನು, ಕ್ಷತ್ರಿಯನಾದರೇನು? ತಮ್ಮ ತಮ್ಮ ಧರ್ಮಪಾಲನದಲ್ಲಿ ತಮ್ಮ ತಮ್ಮಷ್ಟಕ್ಕೆ ತಾವು ಶ್ರೇಷ್ಠರಿದ್ದು, ಶ್ರೇಷ್ಠತ್ವದ ಸಲುವಾಗಿ ಅವರು ಪರಸ್ಪರ ಹೊಡೆದಾಡುವದು ಕೇವಲ ಅಭಿಮಾನದ ಮಾತಾಗಿರುವದು; ಆದ್ದರಿಂದ ಕ್ಷುಪ-ದಧೀಚರ ಕಲಹವು ಅವರಲ್ಲಿ ಅಭಿಮಾನವಿದ್ದದ್ದರ ಲಕ್ಷಣವಾಗಿರುವದು. ವಿವೇಕಶೀಲಾ, ಬ್ರಾಹ್ಮಣನ ಕರ್ತವ್ಯಗಳೇ ಬೇರೆ, ಕ್ಷತ್ರಿಯನ ಕರ್ತವ್ಯಗಳೇ ಬೇರೆಯಾಗಿರಲು, ಈ ಭಿನ್ನಕರ್ತವ್ಯಗಳ ಯೋಗದಿಂದ ಬ್ರಾಹ್ಮಣ-ಕ್ಷತ್ರಿಯರು ವಿಜಾತೀಯ ವರ್ಗದವರಾದರು. ಅಂದಬಳಿಕ ರುಚಿಭಿನ್ನವಾಗಿರುವ ಬಾಳೆಯ ಹಣ್ಣಿಗಿಂತ ಮಾವಿನಹಣ್ಣು ಶ್ರೇಷ್ಠವೆಂಬ ಅಶಾಸ್ತ್ರೀಯವಾದಂತೆ ಭಿನ್ನಕರ್ತವ್ಯದವರಾದ ಬ್ರಾಹ್ಮಣ-ಕ್ಷತ್ರಿಯರ ಶ್ರೇಷ್ಠತ್ವದವಾದವು ಅವರ ಕರ್ತವ್ಯಭಿನ್ನತೆಯ ಮೂಲಕ ಅಶಾಸ್ತ್ರೀಯವಾಗಿರುವದು. ಈ ಜಗತ್ತಿನಲ್ಲಿ ಯಾವ ಜಾತಿಯವನೇ ಇರಲಿ, ಯಾವ ಪಂಥದವನೇ ಇರಲಿ, ದೇವರ ಕೃಪೆಗೆ ಪಾತ್ರನಾದರೆ ಮಾತ್ರ, ಅಂಥ ಕೃಪೆಗೆ ಪಾತ್ರರಾಗದ ಪಾಮರರಿಗಿಂತ ಶ್ರೇಷ್ಠನೆಂದು ಹೇಳಬಹುದು; ಯಾಕಂದರೆ ಸರ್ವಶ್ರೇಷ್ಠನಾದ ಪರಮಾತ್ಮನ ಅನುಗ್ರಹಕ್ಕೆ ಪಾತ್ರರಾದವರು ಶ್ರೇಷ್ಠನ ಸಂಬಂಧಿಕರಾದದ್ದರಿಂದ ಶ್ರೇಷ್ಠರೆನಿಸಬಹುದು. ಆದ್ದರಿಂದ ಭಗವತ್ಕೃಪೆಗೆ ಪಾತ್ರರಾಗದವರು ಶ್ರೇಷ್ಠತ್ವದ ಸಲುವಾಗಿ ಬಡಿದಾಡುವದು ಅಜ್ಞಾನದ ಲಕ್ಷಣವಾಗಿರುವದೆಂದು ತಿಳಿಯಬೇಕು. ಇನ್ನು ಭಗವತ್ಕೃಪೆಗೆ ಪಾತ್ರರಾದವರಲ್ಲಿಯಂತು ಶ್ರೇಷ್ಠ ಕನಿಷ್ಠಭಾವವು ಉಳಿಯುವದೇ? ಇಲ್ಲ. ವಿಷ್ಣುಭಕ್ತನಾದ ಕ್ಷುಪನೂ, ಶಿವಭಕ್ತನಾದ ದಧೀಚನೂ ಅಭಿಮಾನಪೀಡಿತರಾದದ್ದರಿಂದ ಅವರಿಬ್ಬರ ಅಭಿಮಾನ ಹೋದಹೊರತು ಅವರಿಗೆ ಜ್ಞಾನೋದಯಕ್ಕೆ ಮಾರ್ಗವಿದ್ದಿಲ್ಲವು. ವಿವೇ

ಕಶೀಲಾ. ಅಭಿಮಾನಿಯಾದ ಕ್ಷುಪನು ಅಭಿಮಾನಿಯಾದ ದಧೀಚನನ್ನು ಮೊದಲು ಸಂಹ ಸಿದನು; ಆ ಮೇಲೆ ಶುಕ್ರಾಚಾರ್ಯರಂಥ ಶಿವಭಕ್ತಶ್ರೇಷ್ಠರ ಕೃಪೆಯಿಂದ ದಧೀಚನೂ ಶಿವೋಪಾಸನೆಯಿಂದ ವಜ್ರಮಯ ಅಸ್ಥಿಗಳುಳ್ಳವನಾಗಿ ಅಜಿಂಕ್ಯನಾದನು. ಆಗ ಆ ದಧೀಚನು ಕ್ಷುಪನ ಅಭಿಮಾನವನ್ನು ನಾಶಮಾಡುವದಕ್ಕಾಗಿ ಅವನನ್ನು ಒದೆಯಲು ಕ್ಷುಪನು ತನ್ನ ಉಪಾಸ್ಯದೈವತವಾದ ವಿಷ್ಣುವಿಗೆ ಶರಣುಹೋಗಿ ಆತನನ್ನು ಪ್ರಸನ್ನೀಕರಿಸಿಕೊಂಡನು. ಆಗ ಭಕ್ತವತ್ಸಲನಾದ ಶ್ರೀ ವಿಷ್ಣುವು ಭಗವಾನ್ ಸದಾಶಿವನ ಹಾಗು ಸದಾಶಿವದಭಕ್ತರ ಶ್ರೇಷ್ಠತ್ವವನ್ನು ಸ್ಥಾಪಿಸುವದಕ್ಕಾಗಿಯೂ, ಚತುರ್ವರ್ಣಗಳಲ್ಲಿ ಈಶ್ವರದತ್ತ ಷಟ್ಕರ್ಮಾಧಿಕಾರದಿಂದ ಬ್ರಾಹ್ಮಣರ ಗುರುತ್ವವನ್ನು ಸ್ಥಾಪಿಸುವದಕ್ಕಾಗಿಯೂ, ತಾನು ಈಶ್ವರಾಂಶನಾದರೂ ದಧೀಚನಿಂದ ಸೋತು ಕ್ಷುಪನ ಅಭಿಮಾನವನ್ನು ದೂರಮಾಡಿ ಆತನ ಹೃದಯದಲ್ಲಿ ವಿವೇಕಯುಕ್ತ ಪಶ್ಚಾತ್ತಾಪವನ್ನು ಹುಟ್ಟಿಸಿ ಕ್ಷತ್ರಿಯೋಚಿತವಾದ ಬ್ರಾಹ್ಮಣ ಶರಣ್ಯಧರ್ಮವನ್ನು ಆತನಲ್ಲಿ ಉಂಟುಮಾಡಿದನು! ವಿವೇಕಶೀಲಾ, ಬ್ರಾಹ್ಮಣ್ಯವು(ಬ್ರಾಹ್ಮಣವರ್ಣವಲ್ಲ)ಜಗತ್ತಿನ ಜ್ಞಾನಸಾರವೂ, ಕ್ಷತ್ರಿಯತ್ವವು (ಕ್ಷತ್ರಿಯವರ್ಣವಲ್ಲ) ಜಗತ್ತಿನ ಸತ್ವಸಾರವೂ ಆಗಿರುವದರಿಂದ ಜ್ಞಾನ–ಸತ್ವ ರೂಪಗಳಾದ ಇವೆರಡೂ ವರ್ಗಗಳು ತಮ್ಮತಮ್ಮಷ್ಟಕ್ಕೆ ಸ್ವತಂತ್ರ್ಯವಾಗಿದ್ದು, ಪ್ರಸಂಗವಶಾತ್ ಅಂದರೆ ಜ್ಞಾನಕ್ಕೆ ಪ್ರಾಧಾನ್ಯವಿದ್ದಾಗ ಅಂದರೆ ಮಾರ್ಗಪ್ರದರ್ಶನಪ್ರಸಂಗವಿದ್ದಾಗ ಬ್ರಾಹ್ಮಣವರ್ಣವೂ, ಸತ್ವಕ್ಕೆ ಪ್ರಾಧಾನ್ಯವಿದ್ದಾಗ ಅಂದರೆ ಮಾರ್ಗಕ್ರಮಣ ಪ್ರಸಂಗವಿದ್ದಾಗ ಕ್ಷತ್ರಿಯವರ್ಣವೂ ಶ್ರೇಷ್ಠವಾಗಿರುವವು. ಇವೆರಡರ ಸಂಬಂಧವಿಲ್ಲವೆ. ಸ್ವಸ್ವಕರ್ತವ್ಯಪಾಲನದ ದೃಷ್ಟಿಯಿಂದಲೂ, ಆತ್ಮದೃಷ್ಟಿಯಿಂದಲೂ ಬ್ರಾಹ್ಮಣ ಕ್ಷತ್ರಿಯವರ್ಣಗಳೇ ಆಗಲಿ, ಬೇರೆ ಯಾವವರ್ಣಗಳೇ ಆಗಲಿ ತಮ್ಮತಮ್ಮಷ್ಟಕ್ಕೆ ಶ್ರೇಷ್ಠವಾಗಿರುವವೆಂದೂ, ಪರಸ್ಪರ ಹೋಲಿಸುವಾಗ ಅವವುಗಳ ಸ್ಥಿತಿಗತಿಗಳಿಗನುಸರಿಸಿ ಅವು ಸಮಾನವಾಗಿರುವವೆಂದೂ ತಿಳಿಯಬೇಕು. ವಿವೇಕಶೀಲಾ, ಒಟ್ಟಿಗೆ ಜಾತಿದ್ವೇಷವು ಕೇವಲ ಅಜ್ಞಾನದ, ಅರ್ಥಾತ್ ನಾಶದ ಲಕ್ಷಣವಾಗಿರುವದೆಂಬದನ್ನು ಚನ್ನಾಗಿ ಲಕ್ಷವಿಡು. ಇಂಥ ದ್ವೇಷವು ಕಂಡುಬಂದಲ್ಲೆಲ್ಲ ಅಜ್ಞಾನವು ಮುಸುಕಿದ್ದು, ಆ ಅಜ್ಞಾನದಫಲವಾದ ನಾಶವು ಅವರವರ ಪಾಲಿಗೆ ಕಟ್ಟಿ ಇಟ್ಟ ಗಂಟೆಂದು ತಿಳಿದುಕೋ. ಕ್ಷುಪ–ದಧೀಚರಂಥ ಮಹಾತ್ಮರಾದ ವಿಷ್ಣೂಪಾಸಕ–ಶಿವೋಪಾಸಕರಲ್ಲದ ದೇಹಾತ್ಮವಾದಿಗಳಾದ ಪಾಮರರಿಗೆ ಕಡೆಗೆ ಭಗವತ್ಕೃಪೆಯಿಂದ ಕ್ಷುಪ–ದಧೀಚರಂತೆ ಶಾಂತಿಯನ್ನು ಪಡೆಯುವದು ಅಶಕ್ಯವಾಗಿರುವದರಿಂದ, ಆ ಕಲಹಲಂಪಟರು ದುಃಖಪರಂಪರೆಯಿಂದ ತೊಳಲಬೇಕಾಗುವದು.

ಇನ್ನು ಭಗವಾನ್ ವಿಷ್ಣುವು ಅಜ್ಞಾನಿಯಂತೆ ದಧೀಚನೊಡನೆ ಯುದ್ಧಮಾಡಿ ಯಾಕೆ ಸೋತನೆಂದು ನೀನು ಕೇಳುವೆಯಲ್ಲವೆ? ಅದರೆ ಭಕ್ತವಾತ್ಸಲ್ಯದ ಮೂಲಕ ವಿಷ್ಣುರೂಪದ ಅಥವಾ ಶಿವರೂಪದ ಪರಮಾತ್ಮನು ಭಕ್ತರಉದ್ಧಾರದ ಸಲುವಾಗಿ ಮಾಡಬಾರದ್ದನ್ನು ಮಾಡಿರುವನೆಂಬದನ್ನು ಪುರಾಣಾಂತರಗಳಿಂದ ನೀನು ಅರಿತುಕೊಳ್ಳಬಹುದು.

ವಿಷ್ಣುವು ತನ್ನ ಭಕ್ತನಾದ ಬಲಿಯ ಬಾಗಿಲವನ್ನು ಕಾದಂತೆ, ಶಿವನು ತನ್ನ ಭಕ್ತನಾದ ಬಾಣನ ಬಾಗಿಲನ್ನು ಕಾದಿರುವನು. ರಾವಣ–ಕುಂಭಕರ್ಣರೂಪದ ಜಯ–ವಿಜಯರೆಂಬ ತನ್ನ ಭಕ್ತರ ಉದ್ಧಾರಕ್ಕಾಗಿ ವಿಷ್ಣುವು ರಾಮನೆಂಬ ಕ್ಷತ್ರಿಯಾವತಾರವನ್ನು ಧರಿಸಿದರೆ, ಇದೇ ಈಗ ನಾನು ನಿನಗೆ ಹೇಳಿರುವಂತೆ ತನ್ನ ಭಕ್ತನಾದ ಅರ್ಜುನನ ಉದ್ಧಾರಕ್ಕಾಗಿ, ಭಗವಾನ್ ಸದಾಶಿವನು ಶಬರರೂಪವನ್ನು ತಾಳಿದನು. ಕೃಷ್ಣಾವತಾರತಾಳಿದ ಭಗವಾನ್ ವಿಷ್ಣುವು ಮುಚಕುಂದನ ಉದ್ಧಾರಕ್ಕಾಗಿ ಕಾಲಯವನನ ಭಯದಿಂದ ಓಡಿಹೋದಂತೆ, ಭಗವಾನ್ ಸದಾಶಿವನು ತನ್ನ ಭಕ್ತನಾದ ವೃಕಾಸುರನ(ಭಸ್ಮಾಸುರನ) ತಾಮಸವೃತ್ತಿಯ ನಾಶಕ್ಕಾಗಿ ಅವನಿಗೆ ಅಂಜಿ ವಿಷ್ಣುವಿನ ಬಳಿಗೆ ಓಡಿಹೋಗಿರುವನು. ವಿವೇಕಶೀಲಾ, ಪರಮಾತ್ಮನು ಸೋತು ಕಳಕೊಳ್ಳುವದೇನು? ಆತನು ಗೆದ್ದು ಸಂಪಾದಿಸಿಕೊಳ್ಳುವದೇನು? ಆದ್ದರಿಂದ ಭಕ್ತರ ಕಲ್ಯಾಣಕ್ಕಾಗಿ ಸೋಲು–ಗೆಲವುಗಳ ಕ್ರೀಡೆತೋರಿಸುವ ಪರಮಾತ್ಮನ ಸೋಲು ಗೆಲವುಗಳಿಗೆ ಮಹತ್ವವಿಲ್ಲ. ಹೀಗೆ ಜಗತ್ಕಲ್ಯಾಣಕ್ಕಾಗಿ ಆದ ಪರಮಾತ್ಮನ ಲೀಲಾವತಾರಗಳು ಹಿಂದಕ್ಕೆ ಹಲವು ಆಗಿರುವವು–ಹೋಗಿರುವವು, ಈಗ ಹಲವು ಆಗುತ್ತಿರುವವು–ಹೋಗುತ್ತಿರುವವು; ಮುಂದೆ ಹಲವು ಆಗುವವು–ಹೋಗುವವು. ಒಟ್ಟಿಗೆ ಶಿವನಾಗಲಿ, ವಿಷ್ಣುವಾಗಲಿ ತಮ್ಮ ಭಕ್ತರ ಕಲ್ಯಾಣವು ತಾವು ಸೋಲುವದರಿಂದಾಗುವ ಹಾಗಿದ್ದರೆ ಸೋತಿರುವರು; ಗೆಲ್ಲುವದರಿಂದಾಗುವಹಾಗಿದ್ದರೆ ಗೆದ್ದಿರುವರು; ಓಡಿಹೋಗುವದರಿಂದಾಗುವಹಾಗಿದ್ದರೆ ಓಡಿಹೋಗಿರುವರು! ಒಟ್ಟಿಗೆ ದ್ವಂದ್ವಾತೀತನಾದ ಪರಮಾತ್ಮನಿಗೆ ಜೀವಾತ್ಮರ ಕಲ್ಯಾಣದಲ್ಲಿ ದೃಷ್ಟಿಯಿರುವದಲ್ಲದೆ ತನ್ನ ಸೋಲು–ಗೆಲವುಗಳಲ್ಲಿ ದೃಷ್ಟಿಯಿರುವದಿಲ್ಲ! ವಿವೇಕಶೀಲಾ, ಈಶ್ವರೀತಂತ್ರವನ್ನು ಅಥವಾ ಆತನ ಮಾಯೆಯನ್ನು ತಿಳಿದವರಾರು? ಭಗವಾನ್ ಸದಾಶಿವನು ತನ್ನ ಆತ್ಮಲಿಂಗವನ್ನೇ ಭಕ್ತಶ್ರೇಷ್ಠರಾವಣನಿಗೆ ಕೊಟ್ಟು, ತಾನು ತೇಜೋಹೀನನೂ, ತನ್ನ ಅರ್ಧಾಂಗವಾದ ಪಾರ್ವತಿಯನ್ನೇ ಆತನಿಗೆ ಕೊಟ್ಟು ತಾನು ಶಕ್ತಿಹೀನನೂ ಆಗಿರಲು, ವಿಷ್ಣುವು ಉಪಾಯಾಂತರದಿಂದ ಆ ಭಗವಾನ್‌ಸದಾಶಿವನ ತೇಜಸ್ಸು ಶಕ್ತಿಗಳನ್ನು ತಿರುಗಿ ಆತನಿಗೆ ಸಂಪಾದಿಸಿಕೊಟ್ಟಂತೆ ನಟಿಸಿದನು! ಒಟ್ಟಿಗೆ "ಮಮಮಾಯಾ ದುರತ್ಯಯಾ" ಎಂಬಂತೆ ಭಗವಂತನಿಗೇ ಆತನ ಮಾಯೆಯ ಜ್ಞಾನವಾಗುವದು ಅದರ ಅನಂತತ್ವದ ಮೂಲಕ ಅಶಕ್ಯವಾಗಿರಲು, ನಮ್ಮಂಥ ಪಾಮರರ ಪಾಡೇನು? ಅನಂತನಾದ ಭಗವಂತನ ಮಾಯೆಯು ಅನಂತವಾದದ್ದೇ ಸರಿ. ಆದ್ದರಿಂದ ವಿವೇಕಶೀಲಾ, ಭಗವಂತನ ಅಥವಾ ಆತನ ಮಾಯೆಯ ಸ್ವರೂಪವನ್ನು ಅರಿಯುವದು ನಮಗೆ ಅಶಕ್ಯವಾಗಿದ್ದರೂ, ನಮ್ಮನಮ್ಮ ಉಪಾಸ್ಯದೇವತೆಗಳಲ್ಲಿ ದೃಢಭಕ್ತಿಯುಳ್ಳವರಾಗಿ ಸದ್ಗುರು ಕೃಪೆಯಿಂದ ಭಗವತ್ಕೃಪೆಯನ್ನು ಸಂಪಾದಿಸುವದು ಶಕ್ಯವಾಗಿರುತ್ತದೆಂದು ಜ್ಞಾನಿಗಳು ಹೇಳುವರು; ಆದ್ದರಿಂದ ಮಾತ್ಸರ್ಯರಹಿತರಾಗಿ ನಮ್ಮನಮ್ಮ ಉಪಾಸ್ಯದೈವತಗಳ ಆರಾಧನೆಯಲ್ಲಿ ತತ್ಪರರಾಗಿ ನಾವು ನಮ್ಮ ಕಲ್ಯಾಣವನ್ನು ಮಾಡಿಕೊಳ್ಳತಕ್ಕದ್ದು. ಹಾಗೆ ಮಾಡದೆ ಭಗವದ್ದ್ವೈತಪಾರದ ನೆಲೆ ಹಚ್ಚುವ ಮಬ್ಬಿಗೆ ಬಿದ್ದು, ನಾವು ಅಂಧಂತಮನಸ್ಸಿನಲ್ಲಿ ಬೀಳದಂತೆ ಜಾಗರೂಕರಾಗಿರತಕ್ಕದ್ದು. ಹಾಗೆ ಜಾಗರೂಕರಾಗಿರದಿದ್ದರೆ ದೇವತೆಗಳ ಶ್ರೇಷ್ಠತ್ವದ

ನಿರ್ಣಯ ಮಾಡುವಭರದಲ್ಲಿ ನಾವು ಮಾತ್ಸರ್ಯಾಗ್ನಿಯಿಂದ ಬೆಂದು ನಾಶಹೊಂದಬೇಕಾದೀತು. ಕ್ಷುಪ-ದಧೀಚರೆಂಬ ಶಿವ-ವಿಷ್ಣು ಭಕ್ತರಿಬ್ಬರೂ ತಮ್ಮತಮ್ಮ ಉಪಾಸ್ಯದೇವತೆಗಳ ಕೃಪೆಯಿಂದ ಸ್ವಸ್ವರೂಪಜ್ಞಾನಮಾಡಿಕೊಂಡು, ದುರಭಿಮಾನಮೂಲವಾದ ಮಾತ್ಸರ್ಯವನ್ನು ಬಿಟ್ಟುಕೊಟ್ಟು ಪರಸ್ಪರ ಪುನಃ ನಿಜವಾದ ಪ್ರೇಮಭಾವವುಳ್ಳವರಾದದ್ದರ ರಹಸ್ಯವನ್ನು ನಾವು ಮರೆಯಲಾಗದು.

ಇನ್ನು ಧರ್ಮಜ್ಞನಾದ ಯಮನು ಶಿವನ, ಹಾಗು ಶಿವಭಕ್ತರ ಮಹಿಮೆಯನ್ನು ಅರಿತಿದ್ದರೂ, ತಾನು ಶಿವನ ಅಧೀನನೆಂಬದರ ಅರಿವಿಲ್ಲದೆ ಮಾರ್ಕಾಂಡೇಯನ ಪ್ರಾಣಹರಣಕ್ಕಾಗಿ ಯತ್ನಿಸಿ ಶಿವನಿಂದ ಯಾಕೆ ಶಿಕ್ಷಿಸಲ್ಪಟ್ಟನೆಂದು ಕೇಳುವೆ! ಆದರೆ, ಇದಕ್ಕೆ ಎರಡು ಕಾರಣಗಳಿರುವವು. ಆಯುಷ್ಯತೀರಿದವರನ್ನು, ಅವರು ಯಾರೇ ಇರಲಿ ತನ್ನ ಪಾಶದಿಂದ ಬಂಧಿಸಿಕೊಂಡು ಒಯ್ಯುವದು ತನ್ನ ಈಶ್ವರದತ್ತ ಕರ್ತವ್ಯವಿದ್ದು, ತನ್ನ ಆ ಕರ್ತವ್ಯವನ್ನು ನಿಸ್ಪೃಹದಿಂದ ಪಾಲಿಸುವದು ಏಕನಿಷ್ಠ-ಶಿವಸೇವಕ ಯಮನ ಕರ್ತವ್ಯವೇ ಆಗಿರುವದರಿಂದ ಅದರಂತೆ ಆತನು ಮಾಡಿದನು ; ಕರ್ತವ್ಯನಿಷ್ಠರು ಒಮ್ಮೆ ಲತ್ತೆಗೂ ಗುರಿಯಾಗಬೇಕಾಗುವದು, ಒಮ್ಮೆ ಬುತ್ತಿಗೂ ಗುರಿಯಾಗಬೇಕಾಗುವದು ; ಅದರಂತೆಯೇ ಯಮನು ಭಕ್ತರ ವ್ಯವಹಾರದಲ್ಲಿ ಶಿವನಿಂದ ಲತ್ತೆಯನ್ನು ತಿನ್ನಬೇಕಾಯಿತು. ವಿವೇಕಶೀಲಾ, ಭಕ್ತರಿಗೂ, ಸೇವಕರಿಗೂ ಇರುವ ಭೇದವನ್ನು ಯಾವಾಗಲೂ ಲಕ್ಷದಲ್ಲಿಡು. ಸ್ಪೃಹರಾದ ಸೇವಕರು ಸೇವ್ಯರಿಂದ ದೊರೆತ ಪ್ರತಿಫಲದಿಂದ ಸಂತುಷ್ಟರಾಗುವರು; ಆದರೆ ನಿಸ್ಪೃಹರಾದ ಭಕ್ತರು ಅಂಥ ಒಣ ಫಲ-ಗಿಲದಿಂದ ಸಂತುಷ್ಟರಾಗದೆ ತಮ್ಮ ಭಜ್ಯನ ಪ್ರಾಪ್ತಿಯಾದರೆ ಮಾತ್ರ ಸಂತುಷ್ಟರಾಗುವರು! ಶಿವನ ಸೇವಕರಾದ ಇಂದ್ರಾದಿ ಲೋಕಪಾಲಕರು ಶಿವನಿಂದ ತಮಗೆ ದೊರೆತಿರುವ ತಮ್ಮ ತಮ್ಮ ಲೋಕಗಳ ಭೋಗಗಳು ತಮಗೆ ಅವ್ಯಾಹತವಾಗಿ ನಡೆದರೆ ಸಂತುಷ್ಟರಾಗುವರು; ಆದರೆ ಮಾರ್ಕಾಂಡೇಯಾದಿ ಶಿವಭಕ್ತರ ಮಾತು ಹಾಗಲ್ಲ; ಅವರು ಯಮಲೋಕದ ಭೋಗವನ್ನಾದರೂ ಶಿವನ ಒಲುಮೆಯು ಮುಂದೆ ಕನಡೆಗಿಂತ ಕಡೆಯೆಂದು ತಿಳಿದು, ಶಿವನ ಒಲುಮೆಯಾದ ಹೊರತು ಅವರು ಯಾತರಿಂದಲೂ ತೃಪ್ತರಾಗುವದಿಲ್ಲ! ವಿವೇಕಶೀಲಾ, ಇಂದ್ರಾದಿ ಶಿವನ ಸೇವಕರೂ, ಮಾರ್ಕಾಂಡೇಯಾದಿ ಶಿವನ ಭಕ್ತರೂ ಶಿವೋಪಾಸನೆಯಿಂದಲೇ ಇಚ್ಛಿತಫಲವನ್ನು ಹೊಂದತಕ್ಕವರಾಗಿದ್ದರೂ, ಆ ಶಿವನಸೇವಕರ ಫಲವು ಮಾಯಿಕವೂ, ಶಿವನ ಭಕ್ತರ ಫಲವು ಮಾಯಾರಹಿತವೂ ಆಗಿರುವದರಿಂದ ಶಿವನಸೇವಕರು ಭವಮಾಲಿಗೆ ಒಳಗಾದವರಾಗಿರುವರು; ಶಿವಭಕ್ತರು ಭವಮಾಲೆಯಿಂದ ಮುಕ್ತರಾದವರಾಗಿರುವರು ! ಅಂತೇ ಭವಮಾಲೆಗೀಡಾದ ಯಮನು ಕರ್ತವ್ಯಾಕರ್ತದ ಕಣ್ಣಿಯಿಂದ ಕಟ್ಟಲ್ಪಟ್ಟವನಾದ್ದರಿಂದ ಪ್ರಸಂಗವಶಾತ್ ಶಿವನ ಲತ್ತೆಗೆ ಗುರಿಯಾಗಲೇಬೇಕಾಗುವದು! ಇನ್ನು ಎರಡನೆಯ ಕಾರಣವೇನಂದರೆ, ಸೇವ್ಯನಿಂದ ಅಧಿಕಾರಪಡೆದ ಸೇವಕನು ಬರಬರುತ್ತ ತನ್ನ ಅಧಿಕಾರದ ಮದದಿಂದ ವಿವೇಕಶೂನ್ಯನಾಗಿ ಕೃತಘ್ನತೆಯಿಂದ ತನ್ನ ಸೇವ್ಯನನ್ನು ಮರೆತು ಮನಬಂದರಿತೆ ನಡೆದು ಅನ್ಯರಿಗೆ ಅನ್ಯಾಯದಿಂದ ತಾಪವನ್ನುಂಟುಮಾಡುವನು; ಅಂಥವನನ್ನು ಸೇವ್ಯನು

ಅವಶ್ಯವಾಗಿ ದಂಡಿಸಲೇಬೇಕಾಗುವದು; ಆದರೆ ವಿವೇಕಶೀಲಾ, ಭಗವಾನ್ ಯಮಧರ್ಮನಂಥ ದೇವತೆಗೆ ಕೃತಘ್ನತಾದೋಷವನ್ನು ಆರೋಪಿಸುವದು ಸರಿಯಲ್ಲ; ಅಂಥದೋಷಕ್ಕೆ ಪಾಮರರಾದ ಮಾನವರು ನಾವು ಪಾತ್ರರು; ಆದ್ದರಿಂದ ಕರ್ತವ್ಯ ತಪ್ಪಿದರೆ ಶಿವನು ತನ್ನ ಪದವನ್ನು ಕಸಿದುಕೊಂಡಾನೆಂಬ ಅಂಜಿಕೆಯಿಂದಲೇ ಯಮನು ತನ್ನ ಕರ್ತವ್ಯವನ್ನು ಸ್ಮರಿಸಿ ಮಾರ್ಕಾಂಡೇಯನಂಥ ಭಕ್ತರ ಗೊಡವೆಗೆ ಹೋಗಿ ಶಿವನಿಂದ ಶಿಕ್ಷಿಸಲ್ಪಟ್ಟನೆಂದು ತಿಳಿದುಕೋ.

ಇನ್ನು ಮಾರ್ಕಾಂಡೇಯನಂಥ ಶಿವಭಕ್ತನಿಗೂ ಪ್ರಾರಬ್ಧವು ಬಿಡಲಿಲ್ಲವೇನೆಂದು ನೀನು ಕೇಳುವೆ; ಆದರೆ ಈಶ್ವರಕೃಪೆಯಾಗುವವರೆಗೆ ಪ್ರಾರಬ್ಧವು ಯಾರಿಗೂ ಬಿಡದೆಂಬದನ್ನು ಲಕ್ಷ್ಯದಲ್ಲಿಡು. ಪರಮೇಶ್ವರನು ಮೃಕಂಡು ಋಷಿಯ ತಪಶ್ಚರ್ಯಕ್ಕೆ ಪ್ರಸನ್ನನಾಗಿ—“ನಿನಗೆ ಜ್ಞಾನಿಯಾದ ಅಲ್ಪವಯುಸ್ಸಿನಮಗನು ಬೇಕೋ, ಮೂಢನಾದ ಚಿರಾಯು ಮಗನು ಬೇಕೋ” ಎಂದು ಕೇಳಿದ್ದು ನಿನ್ನ ನೆನಪಿನಲ್ಲಿರಬಹುದು; ಅಂದಬಳಿಕ ಪರಮೇಶ್ವರನು ಭಕ್ತರ ಇಚ್ಛೆಯಂತೆ ಜ್ಞಾನಿಯಾದ ಅಲ್ಪವಯುಸ್ಸಿನ, ಅಂದರೆ ಹದಿನಾರು ವರ್ಷದ ಆಯುಷ್ಯದವನಾಗಿ ಅವತರಿಸಿದನು. ಮುಂದೆ ಆ ಮೃಕಂಡುಪುತ್ರನಾದ ಮಾರ್ಕಾಂಡೇಯನು ತನ್ನ ಶಿವಭಕ್ತಿಯ ಬಲದಿಂದ ಶಿವಕೃಪೆಯನ್ನು ಸಂಪಾದಿಸಿ ದೀರ್ಘಾಯುಷ್ಯವನ್ನು ಪಡೆದನು! ಈಶ್ವರಾವತಾರಗಳು ಮುಮುಕ್ಷುಗಳಿಗೆ ಉದ್ಧಾರವಾಗುವ ಆಚರಣೆಗಳ ಮೇಲುಪಂಗ್ತಿಯನ್ನು ಹಾಕಿಕೊಡುವದಕ್ಕಾಗಿಯೇ ಇರುತ್ತವೆಂದು ಹೇಳುವ ಕಾರಣವಿಲ್ಲ. ಧರ್ಮವನ್ನು ದೇವರೇ ರಕ್ಷಿಸಬೇಕಾಗಿರುವದರಿಂದ, ಅದಕ್ಕಾಗಿ ಆತನು ದೇಶ-ಕಾಲ-ಪರಿಸ್ಥಿತಿಗಳಿಗನುಸರಿಸಿ ಆಗಾಗ್ಗೆ ಅವತಾರಗಳನ್ನು ತಾಳುತ್ತಿರುವನು. ಆದ್ದರಿಂದ ಶಿವ-ಭಕ್ತಿಯಪ್ರಭಾವವನ್ನು ತೋರಿಸುವದಕ್ಕಾಗಿ ಪರಮೇಶ್ವರನು ಮಾರ್ಕಾಂಡೇಯನ ಲೀಲಾವತಾರವನ್ನು ತಾಳಿದನು.

---

## ೧೦ ನೆ ಯ ಸುಧಾತರಂಗ.

## ಸರ್ವೋತ್ತಮತ್ವಪ್ರದರ್ಶನಲೀಲೆ !

ಈ ಮೇರೆಗೆ ಸಿದ್ಧಮುನೀಶ್ವರನು ಹೇಳಿದ ಭಗವಾನ್ ಸದಾಶಿವನ ಭಕ್ತೋದ್ಧರಣಲೀಲೆಗಳನ್ನು ಕೇಳಿ ವಿವೇಕಶೀಲಾದಿ ಶಿಷ್ಯರು ಪರಮಾನಂದಪಟ್ಟರು. ಅವರು ಸಿದ್ಧಮುನಿಯನ್ನು ಕುರಿತು—ಗುರುದೇವಾ, ವಿಷ್ಣುವು ಪುರುಷೋತ್ತಮನೆಂತಲೂ, ಭಗವಾನ್ ಸದಾಶಿವನು ಸರ್ವೋತ್ತಮನೆಂತಲೂ ಕರೆಸಿಕೊಳ್ಳುವರೆಂದು ಕೇಳಿದ್ದೇನೆ; ಆದರೆ ಶಿವನು ಸರ್ವೋತ್ತಮನು ಹ್ಯಾಗೆ? ಆತನ ಸರ್ವೋತ್ತಮತ್ವವನ್ನು ಯಾರು ಸಿದ್ಧಮಾಡಿ

ವರು? ಎಂದು ಕೇಳಲು, ಸಿದ್ಧಮುನೀಶ್ವರನು—ವಿವೇಕಶೀಲಾ, ಶಿವನ ಸರ್ವೋತ್ತಮ ತ್ವವನ್ನು ಬ್ರಹ್ಮ-ವಿಷ್ಣು-ಇಂದ್ರ ಮೊದಲಾದ ಸಮಸ್ತದೇವತೆಗಳೂ, ಬಣಾಸುರ, ರಾವಣ ಮೊದಲಾದ ಸಮಸ್ತದೈತ್ಯರೂ, ದಧೀಚ, ವಾಮದೇವ, ವಸಿಷ್ಠ, ಅಗಸ್ತ್ಯ ಮೊದಲಾದ ಸಮಸ್ತಋಷಿಗಳೂ, ಸನಕ-ಸನಂದನಾದಿ ಸಿದ್ಧರೂ ಅದರಂತೆ ಗಂಧರ್ವರು ಯಕ್ಷರು, ಅಪ್ಸರರು, ಪಿಶಾಚಗಳು ಒಟ್ಟಿಗೆ ಸರ್ವರೂ ಶಿವೋಪಾಸನೆಮಾಡಿ ಧನ್ಯರಾಗಿರು ವವರಿಂದ ಹೀಗೆ ಸರ್ವರಿಂದ ಸೇವ್ಯನಾದ ಭಗವಾನ್ ಸದಾಶಿವನನ್ನು ಸರ್ವೋತ್ತಮ ನೆಂದು ಬೇರೆಯಾಕೆ ಹೇಳಬೇಕು? ಹಾಗೆ ಬೇರೆಹೇಳಿದ್ದನ್ನು ಕೇಳಬೇಕೆಂಬ ನಿನ್ನ ಇಚ್ಛೆಯಿದ್ದರೆ ಶ್ರೀ ವೇದವ್ಯಾಸರು ಶಿವಪ್ರಸಾದದಿಂದ ರಚಿಸಿದ ಹದಿನೆಂಟು ಪುರಾಣಗಳಲ್ಲಿ ಸ್ಕಂದ, ಶೈವ, ಲೈಂಗ್ಯ, ಕೂರ್ಮ, ವಾಮನ, ವರಾಹ, ಭವಿಷ್ಯತ್, ಮತ್ಸ್ಯ, ಮಾರ್ಕಾಂ ಡೇಯ, ಬ್ರಹ್ಮಾಂಡ ಎಂಬ ಹತ್ತು ಶಿವಪುರಾಣಗಳೂ, ನಾರದೀಯ, ಭಾಗವತ, ಗರುಡ, ವಿಷ್ಣು ಎಂಬ ನಾಲ್ಕು ವಿಷ್ಣುಪುರಾಣಗಳೂ, ಬ್ರಹ್ಮ, ಪದ್ಮ ಎಂಬವೆರಡು ಬ್ರಹ್ಮಪು ರಾಣಗಳೂ, ಬ್ರಹ್ಮವೈವರ್ತವೆಂಬದೊಂದೇ ಸೂರ್ಯಪುರಾಣವೂ, ಅಗ್ನೇಯವೆಂಬ ದೊಂದು ಅಗ್ನಿಪುರಾಣವೂ ಇರುವದರ ತಾರತಮ್ಯದಿಂದ ಶಿವನ ಸರ್ವೋತ್ತಮತ್ವವನ್ನು ತಿಳಿದುಕೋ. ಇದಲ್ಲದೆ, ಕಾಶಿಯೇ ಮೊದಲಾದ ಮಹಾಶಿವ-ಕ್ಷೇತ್ರಗಳಲ್ಲಿ ಸುರಾಸುರನರೋ ರಗಾದಿಕರಿಂದ ಸ್ಥಾಪಿಸಲ್ಪಟ್ಟ ಲಿಂಗಗಳು ಈವರೆಗೂ ಅವರವರ ಹೆಸರಿನಿಂದ ಇರುವವು. ಇದರಿಂದಲೂ ಶಿವನ ಸರ್ವೋತ್ತಮತ್ವವು ನಿಚ್ಚಳವಾಗಿ ಕಾಣುವಹಾಗಿರುವದು; ಇವಲ್ಲದೆ ಶ್ರುತಿಗಳ ವಿಭಾಗಮಾಡಿದವರೂ, ಸರ್ವಪುರಾಣಗಳಿಗೆ ಪ್ರಮಾಣಪುರುಷರೂ-ಕರ್ತೃ ಗಳೂ,ಐದನೆಯ ವೇದವೆನಿಸಿದ ಮಹಾಭಾರತವನ್ನು ರಚಿಸಿದವರೂ, ಬ್ರಹ್ಮಸೂತ್ರಕಾರರೂ, ಅಂತೇ ಯಾವತ್ತು ವೈದಿಕಮತದವರಿಗೆ ಪ್ರಮಾಣಪುರುಷರೂ ಆದ ವೇದವ್ಯಾಸಋಷಿ ಗಳು ಕಂಠರವದಿಂದ ಶಿವನ ಸರ್ವೋತ್ತಮತ್ವವನ್ನು ಪ್ರತಿಪಾದಿಸಿರುವರಲ್ಲದೆ, ತಮ್ಮ ಆ ಪ್ರತಿಪಾದನವು ಸತ್ಯವಾದದ್ದೆಂಬದನ್ನು ಜಗತ್ತಿಗೆ ಕೈಯೆತ್ತಿಹೇಳುವದಕ್ಕಾಗಿ, ಕಾಶಿಗೆ ಹೋಗಿ "ಹರಿಸರ್ವೋತ್ತಮನೆಂದು" ನುಡಿದು ಅಜ್ಞಾನಿಗಳಂತೆ ಹಸ್ತಸ್ತಂಭನವನ್ನು ಹೊಂದಿದರು! ಎಂದು ಹೇಳಲು, ವಿವೇಕಶೀಲನು—ಗುರುದೇವಾ, ವೇದವ್ಯಾಸರು ಶಿವಸ ರ್ವೋತ್ತಮತ್ವವನ್ನು ಪ್ರತಿಪಾದಿಸಿದ ಬಗೆಯನ್ನೂ, ಅವರ ಹಸ್ತಸ್ತಂಭನವಾದ ರೀತಿ ಯನ್ನೂ ನಮಗೋಸ್ಕರ ನಿರೂಪಿಸುವ ಕೃಪೆಮಾಡಬೇಕು. ಜ್ಞಾನಿಗಳು ಜಗತ್ತಿನ ಕಲ್ಯಾಣಕ್ಕಾಗಿ ಯಾವ ಯಾವ ಆಟವಾಡುವರೆಂಬದನ್ನು ಹೇಳಲಾಗುವದಿಲ್ಲ. ಸರ್ವತತ್ವ ಗಳನ್ನು ಬಲ್ಲ ವೇದವ್ಯಾಸರು ಶಿವತತ್ವದ ಮಹಾಮಹಿಮೆಯನ್ನರಿಯದವರಂತೆ ಹಸ್ತಸ್ತಂ ಭನಹೊಂದಿದ ರಹಸ್ಯವನ್ನು ನಮಗೋಸ್ಕರ ಹೇಳಲೇಬೇಕು, ಎಂದು ಕೇಳಲು, ಸಿದ್ಧ ಮುನೀಶ್ವರನು—ವಿವೇಕಶೀಲಾ, ಬಹುಯೋಗ್ಯಪ್ರಶ್ನೆಮಾಡಿದೆ. ಜ್ಞಾನಿಗಳ ಇಂಥ ಗೂಢವಾದ ಆಚರಣೆಗಳ ರಹಸ್ಯ ತಿಳಿಯದ್ದರಿಂದ ವ್ಯವಹಾರದಲ್ಲಿ ವಿತುಷ್ಟತೆಗಳುಂಟಾಗಿ ಶಿವನ ಅವಕೃಪೆಗೆ ಪಾತ್ರರಾಗಬೇಕಾಗುತ್ತದೆ! ಆದ್ದರಿಂದ ಶಿವನು ಪ್ರೇರಿಸಿದಂತೆ ನಿನ್ನ ಪ್ರಶ್ನೆಗಳ ಉತ್ತರಗಳನ್ನು ಹೇಳುವೆನು ಕೇಳು. ಮೊದಲು ಶ್ರೀ ವೇದವ್ಯಾಸರು ದ್ರೋಣ

ಪರ್ವದಲ್ಲಿ ಅಶ್ವತ್ಥಾಮ-ಅರ್ಜುನರನ್ನು ಕುರಿತು ಹೇಳಿದ ಶಿವಮಹಿಮೆಯನ್ನೂ, ಶತ ರುದ್ರೀಯದ ವಿವೇಚನವನ್ನೂ ಹೇಳಿ, ಆ ಮೇಲೆ ವ್ಯಾಸರ ಹಸ್ತಸ್ತಂಭನವಾದದ್ದನು ಹೇಳುವೆನು.

## ೧ ಶತರುದ್ರೀಯ

ವಿವೇಕಶೀಲಾ, ಧನುರ್ಧರಾಗ್ರೇಸರನಾದ ದ್ರೋಣಾಚಾರ್ಯನು, ತನ್ನ ಮಗ ಅಶ್ವ ತ್ಥಾಮನು ಸತ್ತನೆಂಬ ಸುಳ್ಳು ಸುದ್ದಿಯನ್ನು ಧರ್ಮರಾಜನು ಹೇಳಿದ್ದರಿಂದ ಸತ್ಯವೆಂದು ತಿಳಿದು ದುಃಖದಿಂದ ಧನುಸ್ಸನ್ನಿಟ್ಟು ಸುಮ್ಮನೆ ಕುಳಿತಿರಲು, ಧೃಷ್ಟದ್ಯುಮ್ನನು ಆತನನ್ನು ಕೊಂದನು; ಆದ್ದರಿಂದ ಆ ಆಚಾರ್ಯನ ಪುತ್ರನಾದ ಮಹಾಪ್ರತಾಪಿ ಅಶ್ವ ತ್ಥಾಮನು ಸಂತಪ್ತನಾಗಿ ಯುದ್ಧದಲ್ಲಿ ಧೃಷ್ಟದ್ಯುಮ್ನ, ಸಾತ್ಯಕಿ, ಭೀಮ ಮೊದ ಲಾದವರನ್ನು ಸೋಲಿಸಿ, ಸುದರ್ಶನಾದಿಕರನ್ನು ಸಂಹರಿಸಿ ಕೃಷ್ಣಾರ್ಜುನರನ್ನು ಸಂಹರಿ ಸುವದಕ್ಕಾಗಿ ತನ್ನ ಅಮೋಘವಾದ ಆಗ್ನೇಯಾಸ್ತ್ರವನ್ನು ಬಿಟ್ಟನು. ಅದರಿಂದ ಪಾಂಡ ವರ ಒಂದು ಅಕ್ಷೋಹಿಣೀ ಸೈನ್ಯದ ಸಂಹಾರವು ಮಾತ್ರ ಆಗಿ, ಕೃಷ್ಣಾರ್ಜುನರ ಮೈಗೆ ಗಾಯಕೂಡ ಆಗದೆ ಅವರು ಬದುಕಿ ಉಳಿದರು! ಅದನ್ನು ನೋಡಿ ಅಶ್ವತ್ಥಾಮನಿಗೆ ಬಹಳ ದುಃಖವಾಯಿತು. ಆತನು—"ಹೀಗೆ ಹ್ಯಾಗಾಯಿತು?" ಎಂದು ವಿಚಾರಮಾಡ ತೊಡಗಿದನು. ವಿಚಾರಾಂತದಲ್ಲಿ ಚಿಂತೆ-ದುಃಖಗಳಲ್ಲಿ ಆತನು ಮಗ್ನನಾದನು. ಆತನು ನಿಟ್ಟುಸಿರುಬಿಟ್ಟು ಮನಸ್ಸು ತೀರ ಅಸ್ವಸ್ಥವಾಗಲು ಧನುಸ್ಸನ್ನು ಚಲ್ಲಿಕೊಟ್ಟು ತಟ್ಟನೆ ರಥದಿಂದಿಳಿದು—"ಧಿಕ್! ಧಿಕ್! ಎಲ್ಲವೂ ಸುಳ್ಳು!" ಎಂದು ನುಡಿದು ರಣ ಭೂಮಿಯಿಂದ ಅತಿವೇಗವಾಗಿ ಹೋಗತೊಡಗಿದನು. ಆಗ ವೇದದ ಹಾಗು ಸರಸ್ವ ತಿಯ ನಿವಾಸಸ್ಥಾನವಾದ, ಹಾಗು ವೇದವಿಭಾಗಮಾಡಿದ, ನಿರ್ವಿಕಾರರಾದ, ಮೋಕ್ಷ ಶ್ಯಾಮ ವ್ಯಾಸಮುನಿಗಳು ಆತನ ಕಣ್ಣಿಗೆ ಬಿದ್ದರು. ಕುರುಕುಲಪ್ರವರ್ತಕರಾದ ಆ ಮಹಾಮುನಿಗಳು ಎದುರಿಗೆ ನಿಂತದ್ದನ್ನು ನೋಡಿ ಅಶ್ವತ್ಥಾಮನು ಸದ್ಗದಿತನಾಗಿ ಅತ್ಯಂತ ದೀನವಾಣಿಯಿಂದ ಅವರನ್ನು ಕುರಿತು—ಮಹಾರಾಜ, ಇದೇನು ಮಾಯೆಯೋ, ಅಥವಾ ಅಸ್ತ್ರಶಕ್ತಿಯದೇ ಅನಿಯಮಿತತನವೋ? ಇದೇನಿರುತ್ತದೆಂಬದು ನನಗೆ ತಿಳಿಯು ಲೊಲ್ಲದು! ನನ್ನ ಈ ಅಸ್ತ್ರವು ವಿಫಲವಾಯಿತಾದರೂ ಹೇಗೆ? ಇದನ್ನು ಪ್ರಯೋಗಿಸು ವಾಗ ನನ್ನಿಂದ ಏನು ತಪ್ಪಾಯಿತು? ಅಥವಾ ಇದೊಂದು ವಿಪರೀತ ಸಂಗತಿಯೇ ಒದಗಿ ರುವದೊ? ಇಲ್ಲವೆ ಸೃಷ್ಟಿಯ ನಿಯಮದ ಅತಿಕ್ರಮಣವೇ ಆಯಿತೆನ್ನಬೇಕೋ? ಈ ಕೃಷ್ಣಾರ್ಜುನರು ಜೀವದಿಂದಿರುವದರಿಂದ "ಕಾಲೋಹಿದುರತಿಕ್ರಮಃ" ಎಂಬದೇ ನಿಜವು! ನಾನು ಬಿಟ್ಟಿರುವ ಈ ಅಸ್ತ್ರವನ್ನು ವಿಫಲವಾಗಮಾಡುವ ಧೈರ್ಯವು ಅಸುರ, ಗಂಧರ್ವ, ಪಿಶಾಚ್ಚ, ರಾಕ್ಷಸ, ಸರ್ಪ, ಯಕ್ಷ, ಪಕ್ಷಿ, ಮನುಷ್ಯ ಇವರಲ್ಲಿ ಯಾರಿಗೂ ಇರುವದಿ ಲ್ಲವು- ಅದೇ ಆ ನನ್ನ ಪ್ರದೀಪ್ತ ಅಸ್ತ್ರವು ಒಂದೇ ಒಂದು ಅಕ್ಷೋಹಿಣೀಸೈನ್ಯವನ್ನು ಸಂಹರಿಸಿ ಶಾಂತವು ಹ್ಯಾಗಾಗಿದ್ದೀತು? ನಾನು ಬಿಟ್ಟಿರುವ ಈ ಅತ್ಯಂತ ದಾರುಣವಾದ ಅಸ್ತ್ರವು ಎಲ್ಲರನ್ನು ನಿಃಪಾತಮಾಡುವದಾಗಿದ್ದು, ಅದು ಈ ಮರ್ತ್ಯರಾದ ಕೃಷ್ಣಾರ್ಜು

ವದನ್ನೇಕೆ ಸಂಹರಿಸಲಿಕ್ಕಿಲ್ಲ? ಭಗವನ್, ನಾನು ಕೇಳಿದ್ದನ್ನು ಇದ್ದಕ್ಕಿದ್ದಹಾಗೆ ಹೇಳಿ ರಿ. ಮಹಾರಾಜ, ಇದನ್ನೆಲ್ಲ ತತ್ವತಃ ಕೇಳುವ ಇಚ್ಛೆಯು ನನಗಾಗಿದೆ.

ನಾರಾಯಣನ ಪೂರ್ವವೃತ್ತ:—ಅಶ್ವತ್ಥಾಮನ ಈ ಮಾತುಗಳನ್ನು ಕೇಳಿ ವ್ಯಾಸರು—ವತ್ಸಾ, ನೀನು ವಿಸ್ಮಯದಿಂದ ನನ್ನನ್ನು ಕೇಳುವ ಮಾತು ಬಹು ಮಹ ತ್ವದ್ದಾಗಿರುವದು. ಈಗ ನಾನು ಹೇಳುವದನ್ನು ಸ್ವಸ್ಥಮನಸ್ಸಿನಿಂದ ಕೇಳು. ನಾರಾ ಯಣನೆಂದು ಕರೆಸಿಕೊಳ್ಳುವವನು ನಮ್ಮ ಪೂರ್ವಜನು. ಜಗತ್ಕರ್ತನಾದ ಈ ನಾರಾ ಯಣನು ಕೆಲವೊಂದು ಕಾರ್ಯಕ್ಕಾಗಿ ಧರ್ಮನ ಹೊಟ್ಟೆಯಲ್ಲಿ ಹುಟ್ಟಿದನು. ಆಮೇಲೆ ಆತನು ಹಿಮಾಲಯದಲ್ಲಿ ಕುಳಿತು ಉಗ್ರತಪಶ್ಚರ್ಯವನ್ನು ಮಾಡಿದನು. ಸೂರ್ಯಾ ಗ್ನಿಗಳಂತೆ ಮಹಾ ತೇಜಸ್ವಿಯಾದ ಆ ಮುನಿಯು ಆ ಹಿಮಾಲಯದಲ್ಲಿ ಕೈಗಳನ್ನು ಮೇಲಕ್ಕೆತ್ತಿಕೊಂಡು ಕುಳಿತಿದ್ದನು. ಆತನು ಅರವತ್ತಾರು ಸಹಸ್ರ ವರ್ಷಗಳವರೆಗೆ ಕೇವಲ ವಾಯುಭಕ್ಷಣಮಾಡಿ ಶರೀರವನ್ನು ಸೊರಗಿಸಿದನು; ಆಮೇಲೆ ಅದರ ಇಮ್ಮಡಿ ಕಾಲಗಳವರೆಗೆ ಪುನಃ ಅದಕ್ಕಿಂತಲೂ ಕಠಿಣ ತಪಶ್ಚರ್ಯಮಾಡಿ ಆತನು ತನ್ನ ತೇಜಸ್ಸಿ ನಿಂದ ಭೂಮ್ಯಾಕಾಶಗಳ ನಡುವಿನ ಯಾವತ್ತು ಅವಕಾಶವನ್ನು ತುಂಬಿ ಬಿಟ್ಟನು! ವತ್ಸಾ, ಈ ತಪಸ್ಸಿನಿಂದ ಆ ನಾರಾಯಣನು ಬ್ರಹ್ಮದಂತೆ ಅತ್ಯಂತ ನಿರ್ವಿಕಾರನಾದಾಗ, ಜಗತ್ತಿನ ಈಶ್ವರನೂ, ಉತ್ಪತ್ತಿಸ್ಥಾನನೂ, ಪಾಲನಕರ್ತೃವೂ ಆದ ಪ್ರಭುವು, ಆ ನಾರಾಯಣ ಋಷಿಗೆ ದರ್ಶನ ಕೊಟ್ಟನು. ಆ ಪ್ರಭುವು ಅತ್ಯಂತ ದುರ್ಧರ್ಷಣನಿದ್ದು, ಯಾವತ್ತು ದೇವತೆಗಳು ಆತನನ್ನು ಸ್ತುತಿಸುವರು. ಆತನು ಪರಮಾಣುವಿಗಿಂತ ಸೂಕ್ಷ್ಮನೂ, ಎಲ್ಲಕ್ಕೂ ದೊಡ್ಡದಾದ ಪದಾರ್ಥಕ್ಕಿಂತಲೂ ದೊಡ್ಡವನೂ ಇರುವನು! ಆತನಿಗೆ ರುದ್ರ, ಹರ, ಶಂಭು ಎಂತಲೂ ಅನ್ನುವರು. ಆತನು ಬ್ರಹ್ಮಾದಿದೇವತೆಗಳಿಗೂ ಅಧಿದೇವನಾಗಿ ರುವನು. ಆತನ ಮಸ್ತಕದಲ್ಲಿ ಬಹುದೊಡ್ಡದಾದ ಜಡೆಯಿರುವದು. ಆತನೇ ಯಾವತ್ತು ಪ್ರಾಣಿಗಳಲ್ಲಿ ಚೇತನವನ್ನುಂಟುಮಾಡುವನು. ಯಾವತ್ತು ಸ್ಥಾವರ ಜಂಗಮ ಪದಾ ರ್ಥಗಳು ಆತನಿಂದಲೇ ಉತ್ಪನ್ನವಾಗುವವು. ಇತರರಿಂದ ಆತನ ನಿವಾರಣವಾಗುವದು ಅಶಕ್ಯವಾಗಿದ್ದು, ಆತನು ಸಾಮಾನ್ಯಜನರ ಕಣ್ಣಿಗೆ ಬೀಳುವದೂ ಅಶಕ್ಯವಾಗಿರುವದು. ಆತನ ಕ್ರೋಧವು ಬಹಳ ಪ್ರಖರವಾಗಿದ್ದು. ಆತನೇ ಎಲ್ಲ ಪ್ರಾಣಿಗಳ ಸಂಹಾರಮಾಡುವನು. ಆತನ ಆತ್ಮವೂ, ಮನಸ್ಸೂ ಬಹು ವಿಶಾಲವಿದ್ದು, ಆತನು ದಿವ್ಯವಾದ ಬಿಲ್ಲು–ಬತ್ತಳಿಕೆಗ ಳನ್ನು ಧರಿಸುವನು. ಆತನ ವೀರ್ಯವೂ ಆತನಂತೆಯೇ (ನಾಶವಾಗದೆ) ಇರುವದು. ಆತನು ಮೈಯಲ್ಲಿ ಸುವರ್ಣಕವಚವನ್ನು ಹಾಕುವನು. ಪಿನಾಕವೆಂಬ ಧನುಸ್ಸು, ವಜ್ರ, ಪರಶು, ಪ್ರದೀಪ್ತಶೂಲ, ಗದೆ, ಬಹುದೊಡ್ಡದಾದದ್ದೊಂದು ಖಡ್ಗ ಇವನ್ನು ಆತನು ಧರಿ ಸುವನು. ಆತನ ಮಸ್ತಕದಲ್ಲಿ ಶುಭ್ರವರ್ಣದ ಜಡೆಯಿದ್ದು, ಹಣೆಯಲ್ಲಿ ಚಂದ್ರನಿರುವನು. ಆತನು ವ್ಯಾಘ್ರಚರ್ಮವನ್ನುಟ್ಟುಕೊಳ್ಳುವನು; ಕೈಯಲ್ಲಿ ಮುಸಲ, ದಂಡ, ಪರಿಘಗಳನ್ನು ಧರಿಸುತ್ತಿರುವನು. ಆತನ ಬಾಹುಭೂಷಣಗಳು ಉಜ್ವಲವಾಗಿದ್ದು, ಆತನ ಕೊರಳಲ್ಲಿ ಸರ್ಪದ ಯಜ್ಞೋಪವೀತವಿರುವದು. ಜಗತ್ತಿನೊಳಗಿನ ನಾನಾಪ್ರಕಾರದ ಪ್ರಾಣಿಗಳೂ.

ಭೂತಪಿಶಾಚಗಳೂ ಅವನ ಸುತ್ತುಮುತ್ತು ಇರುತ್ತಿದ್ದು, ಅವುಗಳ ಮಧ್ಯದಲ್ಲಿ ಆತನು ಶೋಭಿಸುತ್ತಿರುವನು. ಆ ಒಬ್ಬನೇ ಈಶ್ವರನು ಯಾವತ್ತು ಜಗತ್ತನ್ನು ವ್ಯಾಪಿಸಿ ಉಳಿದಿರುವನು. ಆತನೇ ಯಾವತ್ತು ತಪಶ್ಚರ್ಯದ ನಿಧಾನವಾಗಿರುವನು. ವಯೋವೃದ್ಧ ಮುನಿಗಳು ಇಷ್ಟವಾದ ಶಬ್ದಗಳಿಂದ ಅವನ ಸ್ತೋತ್ರಮಾಡುವರು. ಅವನೇ ಉದಕ, ದಿಕ್ಕು, ಆಕಾಶ, ಪೃಥ್ವಿ, ಚಂದ್ರ, ಸೂರ್ಯ, ವಾಯು, ಅಗ್ನಿ ಇವೆಲ್ಲ ಆಗಿದ್ದು, ಜಗತ್ತಿನ ಕಾಲಮರ್ಯಾದೆಯು ಮಾಪೂ ಆತನೇ ಆಗಿರುವನು. ಆತನು ಬ್ರಹ್ಮದ್ವೇಷಿಗಳ ಕಾಲನಾಗಿದ್ದು, ಮುಕ್ತಿಯಕಾರಣನಾದದ್ದರಿಂದ ಆತನು ದುರಾಚಾರಿಗಳ ಕಣ್ಣಿಗೆ ಬೀಳುವದಿಲ್ಲ. ಸದಾಚಾರಿಗಳಾದ ಬ್ರಾಹ್ಮಣರ ಪಾತಕದನಾಶವಾಗಿ ಅವರು ಶೋಕಾತೀತರಾಗಲು, ಅವರುಮಾತ್ರ ಅಂತರ್ದೃಷ್ಟಿಯಿಂದ ಆತನನ್ನು ನೋಡಲು ಸಮರ್ಥರಾಗುವರು. ಅಂಥ ಆ ಪ್ರಶಂಸನೀಯ ಧರ್ಮಮೂರ್ತಿ ಪರಮಾತ್ಮನೇ, ನಾರಾಯಣನ ತಪಶ್ಚರ್ಯದಿಂದ ಹಾಗು ಭಕ್ತಿಯಯೋಗದಿಂದ ವಿಶ್ವರೂಪತಾಳಿ ಪ್ರಕಟವಾದನು. ಕೊರಳಲ್ಲಿಅಕ್ಷಮಾಲೆ ಹಾಕಿಕೊಂಡಿರುವ, ಹಾಗು ಯಾವತ್ತು ತೇಜಸ್ಸಿನ ನಿಧಿಯಾದ ಆ ಮೂರ್ತಿಯನ್ನು ನೋಡಿ ವಾಸುದೇವನ ಅಂತಃಕರಣವು ಹರ್ಷಭರಿತವಾಗಿ ಆತನ ವಾಣಿ, ಮನಸ್ಸು, ಬುದ್ಧಿ, ಶರೀರ ಇವುಗಳದ್ವಾರದಿಂದ ಆ ಹರ್ಷವು ವ್ಯಕ್ತವಾಗತೊಡಗಿತು. ಜಗದುತ್ಪತ್ತಿಕರ್ತೃವೂ, ವರಪ್ರದನೂ, ಸರ್ವಾಂಗ ಸುಂದರನೂ, ಪಾರ್ವತಿಯೊಡನೆ ಕ್ರೀಡಿಸುವವನೂ, ಪಿಶಾಚಗಣ ಪರಿವೇಷ್ಟಿತನೂ, ಮಹಾತ್ಮನೂ, ಅಜನೂ, ಸರ್ವಶಕ್ತಿಮಾನ್ ಪ್ರಭುವೂ, ಕಾರಣಾತ್ಮನೂ, ಅವ್ಯಕ್ತನೂ, ಅಚ್ಯುತನೂ ಆದ ಆ ಪ್ರಭುವನ್ನು ನೋಡಿದಕೂಡಲೆ ನಾರಾಯಣನ. ಆತನನ್ನು ನಮಸ್ಕರಿಸಿದನು. ಮತ್ತು ಆ ಭಕ್ತಿವಂತನಾದ ಕಮಲಾಕ್ಷ ನಾರಾಯಣನು, ಅಂಧಕನನ್ನು ತತ್‌ಕ್ಷಣ ಸಂಹರಿಸಿದ ಆ ರುದ್ರನನ್ನು ಅಭಿವಂದಿಸಿ ಅವನನ್ನು ಸ್ತುತಿಸತೊಡಗಿದನು.

ನಾರಾಯಣಕೃತಈಶಸ್ತುತಿ:—ಎಲೈ ವರೇಣ್ಯ, ಆದಿದೇವಾ, ಪೂರ್ವದಲ್ಲಿ ಯಾವನು ಮೊದಲು ಪೃಥ್ವಿಯ ಮೇಲೆ ಬಂದು ನಿನ್ನ ಹಳೇ ದೇವಸೃಷ್ಟಿಯನ್ನು ಸಂರಕ್ಷಿಸಿದನೋ, ಆ ಜಗದ್ರಕ್ಷಕ ಪ್ರಜಾಪತಿಯೂ ನಿನ್ನಿಂದಲೇ ಉತ್ಪನ್ನನಾದನು. ಸುರ, ಅಸುರ, ನಾಗ, ರಾಕ್ಷಸ, ಪಿಶಾಚ್ಚ, ಮನುಷ್ಯ, ಪಕ್ಷಿ, ಗಂಧರ್ವ, ಯಕ್ಷ ಬೇರೆ ನಾನಾಪ್ರಕಾರದ ಪ್ರಾಣಿಸಂಘ, ಹಾಗು ಅದರಂತೆಯೇ ಎಲ್ಲ ವಿಶ್ವ ಇವೆಲ್ಲವೂ ನಿನ್ನಿಂದಲೇ ಉತ್ಪನ್ನವಾಗಿರುವವೆಂಬದನ್ನು ನಾನು ತಿಳಿಯುವೆನು. ಇಂದ್ರ, ಯಮ, ವರುಣ, ಕುಬೇರ, ತ್ವಷ್ಟಾ, ಸೋಮ ಇವರ ಹೆಸರಿನಿಂದ ಮಾಡುವ ಕರ್ಮಗಳೆಲ್ಲ ವಾಸ್ತವವೆಂದರೆ ನಿನ್ನ ಸಲುವಾಗಿಯೇ ಇರುವವು. ರೂಪ ಹಾಗು ತೇಜಸ್ಸು, ಶಬ್ದ ಹಾಗು ಆಕಾಶ, ವಾಯು ಹಾಗು ಸ್ಪರ್ಶ, ರಸ ಹಾಗು ಉದಕ, ಗಂಧ ಹಾಗು ಪೃಥ್ವೀ, ಅದರಂತೆಯೇ ಕಾಲ, ಬ್ರಹ್ಮದೇವ, ವೇದ, ಬ್ರಾಹ್ಮಣ. ಯಾವತ್ತು ಸ್ಥಾವರಜಂಗಮ ಜಗತ್ತು ಇವೆಲ್ಲ ನಿನ್ನಿಂದಲೇ ಉತ್ಪನ್ನವಾಗಿರುವವು. ಸಮುದ್ರದಿಂದಲೇ ಜಲಬಿಂದುಗಳು ಬೇರೆಯಾಗುವವು; ಆರೆ ಪ್ರಲಯಕಾಲದಲ್ಲಿ ಅವೆಲ್ಲ ಜಲಬಿಂದುಗಳು ಸಮುದ್ರದಲ್ಲಿಯೇ

ಐಕ್ಯವಾಗುವವು; ಅದರಂತೆ ಪ್ರಾಣಿಮಾತ್ರಗಳ ಉತ್ಪತ್ತಿ-ಲಯಗಳೂ ನಿನ್ನಲ್ಲಿಯೇ ಇರುವವೆಂಬದನ್ನು ಮನಸ್ಸಿನಲ್ಲಿ ತಂದು ವಿದ್ವಾಂಸರು ನಿನ್ನ ಏಕತ್ವವನ್ನು ತಿಳಿಯುವರು. ಚಿತ್ಪ್ರತಿಬಿಂಬರೂಪವಾದ ಎರಡು ಹೃದಯಸ್ಥ ಪಕ್ಷಿಗಳನ್ನೂ (ಈಶ ಹಾಗು ಜೀವ); ಶಬ್ದರೂಪಶಾಖೆಗಳ ಏಳು ಅಶ್ವತ್ಥ ವೃಕ್ಷಗಳನ್ನೂ, ದಶೇಂದ್ರಿಯ ರೂಪದ್ವಾರಗಳಲ್ಲಿ ನಿಂತುಕೊಂಡು ದೇಹನಗರವನ್ನು ರಕ್ಷಿಸುವ ಹತ್ತುಜನ ಕಾವಲುಗಾರರನ್ನೂ ನೀನೇ ನಿರ್ಮಾಣಮಾಡಿರುವೆ; ಆದರೂ ನೀನು ಅವರಿಂದ ಬೇರೆಯಿದ್ದು ಸ್ವತಂತ್ರನಿರುತ್ತೀ. ಯಾರ ಅಧಿಕಾರವೂ ನಡೆಯದಿರುವ ಆ ಭೂತ, ಭವಿಷ್ಯ, ವರ್ತಮಾನಗಳೂ, ಅದರಂತೆ ಚತುರ್ದಶಭುವನಗಳೂ, ವಿಶ್ವಗಳೂ ನಿನ್ನಿಂದಲೇ ಉತ್ಪನ್ನವಾಗಿರುವವು. ನಾನು ನಿನ್ನನ್ನು ಮನೋಭಾವದಿಂದ ಸೇವಿಸುವ ಭಕ್ತನಿರುವೆನು; ನನಗೆ ಪ್ರಸನ್ನನಾಗಿ, ಕಾಮಕ್ರೋಧಾದಿ ವಿಕಾರಗಳನ್ನು ನನ್ನ ಅಂತಃಕರಣದಲ್ಲಿ ಸೇರಿಸಿ ನನ್ನನ್ನು ನಾಶಗೊಳಿಸಬೇಡ. ದೇವಾ, ನೀನು ಆತ್ಮನಿಗೂ ಆತ್ಮನಾಗಿರುವೆ; ಮತ್ತು ನಿನ್ನ ಸ್ವರೂಪವು ತೀರ ನಿರ್ವಿಕಾರವಿರುವದು. ಇಂಥ ನಿನ್ನ ನಿರ್ವಿಕಾರ ಸ್ವರೂಪವನ್ನು ತಿಳಿಯುವವನು ನಿರ್ವಿಕಾರವಾದ ಬ್ರಹ್ಮಪದವಿಗೆ ಹೋಗಿ ಮುಟ್ಟುವನು; ಆದರೆ ದೇವಾ, ನನ್ನಲ್ಲಿ ಅಹಂಕಾರಾದಿ ವಿಕಾರಗಳು ಬಹಳ ಇರುವವು; ಆದರೂ ನಿನ್ನಲ್ಲಿ ಭಕ್ತಿಯನ್ನು ಮಾಡಬೇಕೆಂಬ ಇಚ್ಛೆಯು ನನಗಾಗಿ ನಿನ್ನ ಪ್ರಾಪ್ತಿಗೋಸ್ಕರ ಸ್ತುತಿಗೆ ಸರ್ವಥಾ ಯೋಗ್ಯನಾದ ನಿನ್ನನ್ನು ನಾನು ಯಥಾಮತಿ ಸ್ತುತಿಸುತ್ತಿರುವೆನು; ಆದ್ದರಿಂದ ಎಲೈ ದೇವಾಧಿದೇವನೇ, ನನ್ನ ಸ್ತುತಿಯಿಂದ ಪ್ರಸನ್ನನಾಗಿ ನೀನು ನನಗೆ ಅತ್ಯಂತ ದುರ್ಲಭವಾದ ಇಷ್ಟವರಗಳನ್ನು ಕೊಟ್ಟು ನಿನ್ನ ಮಾಯೆಯ ಆವರಣವನ್ನು ದೂರಮಾಡು.

ನಾರಾಯಣನಿಗೆ ವರಪ್ರಾಪ್ತಿಯು:—ಅಶ್ವತ್ಥಾಮಾ, ಈ ಮೇರೆಗೆ ನಾರಾಯಣಋಷಿಯು ಸ್ತೋತ್ರಮಾಡಲು, ಆ ಅಚಿಂತ್ಯಸ್ವರೂಪದ ಭಗವಾನ್ ಪಿನಾಕಪಾಣಿ ನೀಲಕಂಠನು ವರಗಳಿಗೆ ಅರ್ಹನಾದ ದೇವಾಧಿದೇವ ನಾರಾಯಣನಿಗೆ ವರಗಳನ್ನು ಕೊಡುವದಕ್ಕಾಗಿ ಆತನನ್ನು ಕುರಿತು—ನಾರಾಯಣಾ, ನನ್ನ ಪ್ರಸಾದದಿಂದ ನೀನು ಮಹಾಬಲಿಷ್ಠನಾಗುವೆ; ಮನುಷ್ಯರಲ್ಲಿಯೂ, ದೇವ ಗಂಧರ್ವಾದಿಕೋಟಿಗಳಲ್ಲಿಯೂ ಯಾರೂ ನಿನ್ನನ್ನು ಸರಿಗಟ್ಟಲಾರರು. ನಿನ್ನ ಪರಾಕ್ರಮವನ್ನು ಸಹಿಸಲು ದೇವತೆಗಳು, ಅಸುರರು, ಮಹೋರಗರು, ಪಿಶಾಚರು, ಗಂಧರ್ವರು, ಯಕ್ಷರು, ರಾಕ್ಷಸರು, ಪಕ್ಷಿಗಳು, ಆನೆ-ಸಿಂಹ ಮೊದಲಾದ ಪಶುಗಳು ಇವೆಲ್ಲವೂ ಅಸಮರ್ಥವಾಗಿರುವವು. ರಣಾಂಗಣದಲ್ಲಿ ನಿನ್ನನ್ನು ಯಾವನೂ-ಅವನು ದೇವತೆಯಿದ್ದರೂ-ಸೋಲಿಸಲಾರನು. ನನ್ನ ಪ್ರಸಾದದಿಂದ ಯಾವಶಸ್ತ್ರಗಳಿಂದಲೂ ವಜ್ರ, ಅಗ್ನಿ, ವಾಯು, ಒಣ-ಹಸಿ ಪದಾರ್ಥಗಳು, ಸ್ಥಾವರಜಂಗಮ ವಸ್ತುಗಳು ಇವುಗಳಲ್ಲಿ ಯಾವದರಿಂದಲೂ ಯಾರೂ ನಿನ್ನನ್ನು ಅಳುಕಿಸಲು ಸಮರ್ಥರಾಗಲಾರರು. ಬಹಳ ಹೇಳುವದೇನು? ರಣದಲ್ಲಿ ನನಗೂ ನಿನಗೂ ಗಂಟುಬಿದ್ದರೆ ನೀನು ನನ್ನನ್ನೂ ಮೀರಬಹುದು! ಎಂದು ವರಪ್ರದಾನಮಾಡಿದನು; ಆದ್ದರಿಂದ ಅಪ್ಪಾ ಅಶ್ವತ್ಥಾಮಾ, ಶೌರಿ ಶ್ರೀ ಕೃಷ್ಣನು ಪೂರ್ವದಲ್ಲಿ ಇಂಥವರವ ಸಂಪಾ

ದಿಸಿದ್ದನ್ನು ನೀನು ತಿಳಿದುಕೊಳ್ಳು. ಎಲಾ, ಅದೇ ನಾರಾಯಣಪ್ರಭುವು ಮಾಯೆಯ ಯೋಗದಿಂದ ಈಗ ಜಗತ್ತನ್ನು ಮೋಹಿಸುತ್ತ, ಕೃಷ್ಣರೂಪದಿಂದ ಸಂಚರಿಸುತ್ತಿರುವನು. ಆತನ ತಪಃಪ್ರಭಾವದಿಂದಲೇ ನರ ಎಂಬ ಹೆಸರಿನವನು ದೊಡ್ಡ ಮುನಿಯ ಯೋಗ್ಯತೆಯುಳ್ಳವನಾಗಿ ಅವನಿಗೆ ಸಮಾನನಾಗಿ ಹುಟ್ಟಿರುವನು ಅವನೇ ಅರ್ಜುನನು. ಈ ಮಾತನ್ನು ಯಾವಾಗಲೂ ನೆನಪಿನಲ್ಲಿಡು. ಬ್ರಹ್ಮಾದಿ ಆದ್ಯ ದೇವತೆಗಳಿಗಿಂತಲೂ ಅಧಿಕಶ್ರೇಷ್ಠರೂ, ತಪಸ್ಸಂಪನ್ನರೂ ಆದ ಈ ನರನಾರಾಯಣ ಮುನಿಗಳು, ಲೋಕಯಾತ್ರೆಯು ಚನ್ನಾಗಿ ನಡೆಯುವದಕ್ಕಾಗಿ ಯುಗಯುಗದಲ್ಲಿ ಅವತರಿಸುತ್ತಿರುವರು.

**ಲಿಂಗಮಹಿಮಾ:**—ಎಲೈ ಮಹಾಜ್ಞಾನಿಯಾದ ಅಶ್ವತ್ಥಾಮನೇ, ರುದ್ರಾಂಶದಿಂದ ನಿನ್ನ ಉತ್ಪತ್ತಿಯಾಗಿದ್ದು, ನೀನು ಮಾಡಿರುವ ಸಂಪೂರ್ಣವಾದ ಧರ್ಮಕೃತ್ಯಗಳಿಂದಲೂ, ತಪಶ್ಚರ್ಯದಿಂದಲೂ ಇವರಿಬ್ಬರಂತೆ ನಿನ್ನಲ್ಲಿಯೂ ದೊಡ್ಡ ತೇಜಸ್ಸೂ, ಕ್ರೋಧವೂ ವಾಸಿಸುತ್ತಿರುವವು. ನೀನು ಪೂರ್ವಜನ್ಮದಲ್ಲಿ ಮಹಾಜ್ಞಾನಿಯಿದ್ದು, ಈ ಸಂಪೂರ್ಣಜಗತ್ತು ಶಿವಮಯವೆಂದು ತಿಳಿದು ನಾರಾಯಣನಂತೆಯೇ ಶಂಕರನ ಪ್ರೀತಿಗಾಗಿ ನಿಯಮವ್ರತಗಳಿಂದ ನಿನ್ನ ಶರೀರವನ್ನು ಶುಷ್ಕಮಾಡಿರುವೆ. ಮತ್ತು ಹವಿರ್ದ್ರವ್ಯದ ಆ ಮಹಾ ಪುರುಷನ ಆಕಾರದ ದೇದೀಪ್ಯಮಾನಮೂರ್ತಿಯನ್ನು ಮಾಡಿ ನೀನು ಜಪ, ಹೋಮ, ಉಪಹಾರಗಳ ಯೋಗದಿಂದ ಆ ಪ್ರಭುವನ್ನು ಪೂಜಿಸಿರುವೆ. ಅಪ್ಪಾ ಮಾನವಾ, ಹೀಗೆ ನೀನು ಪೂರ್ವಜನ್ಮದಲ್ಲಿ ಶಂಕರನಲ್ಲಿ ಭಕ್ತಿಯನ್ನಿಟ್ಟು ಆತನನ್ನು ಒಲಿಸಿಕೊಂಡದ್ದರಿಂದ ಎಲೈ ವಿದ್ವಾಂಸನೇ, ಆ ಶಂಕರನು ನಿನ್ನ ಮನಸ್ಸಿನಲ್ಲಿರುವ ಬಹಳ ದೊಡ್ಡ ದೊಡ್ಡ ವರಗಳನ್ನು ನಿನಗೆ ಕೊಟ್ಟನು. ಹೀಗೆ ಕೃಷ್ಣಾರ್ಜುನರಂತೆ ನಿನ್ನ ಜನ್ಮ, ಕರ್ಮ, ಯೋಗ, ತಪ ಇವು ಬಹುದೊಡ್ಡವಿದ್ದು, ಅವರಿಗೂ ನಿನಗೂ ಅಂತರವಾಗಲಿಕ್ಕೆ ಕಾರಣವೇನೆಂಬದನ್ನು ಹೇಳುವೆನು ಕೇಳು. ಪ್ರತಿ ಒಂದು ಯುಗದಲ್ಲಿ ಅವರು ಲಿಂಗರೂಪ ಶಂಕರನ ಉಪಾಸನೆಯನ್ನು ಮಾಡಿದರು; ನೀನು ಪ್ರತಿಮೆಯನ್ನು ಮಾಡಿ ಪೂಜಿಸಿದೆ; ಆದ್ದರಿಂದ ಅವರಿಗೂ ನಿನಗೂ ಅಂತರವಾಯಿತು. ಈಶ್ವರನು ಸರ್ವತ್ರದಲ್ಲಿರುವನೆಂದು ತಿಳಿದು ಆ ಪ್ರಭುವನ್ನು ಲಿಂಗರೂಪದಿಂದ ಪೂಜಿಸುವವನಿಗೆ ಆತ್ಮಯೋಗವು, ಅಂದರೆ ಜೀವ–ಬ್ರಹ್ಮದ ಐಕ್ಯವಿಷಯದ ಅಪರೋಕ್ಷಜ್ಞಾನವೂ, ಶಾಸ್ತ್ರಯೋಗವು, ಅಂದರೆ ಜೀವ–ಬ್ರಹ್ಮೈಕ್ಯದ ಪರೋಕ್ಷಜ್ಞಾನವೂ ಉಂಟಾಗುವವು; ಆದ್ದರಿಂದ ಯಜನಮಾಡುವ ದೇವತೆಗಳೂ, ಸಿದ್ಧರೂ, ದೊಡ್ಡ ದೊಡ್ಡ ಋಷಿಶ್ರೇಷ್ಠರೂ ಇಂಥ ಶಂಕರನನ್ನು ಲಿಂಗರೂಪದಿಂದಲೇ ಪೂಜಿಸುವರು; ಯಾಕಂದರೆ ಆತನೇ ಎಲ್ಲರ ಉತ್ಪಾದಕನಾಗಿರುವನು. ಕೇಶವನು ರುದ್ರನ ಭಕ್ತನಿದ್ದು, ಆತನು ರುದ್ರನಿಂದಲೇ ಉತ್ಪನ್ನವಾಗಿರುವದರಿಂದ ಇಬ್ಬರ ಐಕ್ಯವಿರುವದು; ಆದ್ದರಿಂದ ಆ ಸನಾತನ ಕೃಷ್ಣಪ್ರಭುವನ್ನು ಯಜ್ಞದಿಂದ ಪೂಜಿಸಬೇಕು; ಈಶ್ವರನು ಸರ್ವರ ಉಗಮವಾಗಿರುವನೆಂದು ತಿಳಿದು, ಲಿಂಗವನ್ನು ಪೂಜಿಸುವವನಮೇಲೆ ವೃಷಧ್ವಜ ಶಂಕರನು ಹೆಚ್ಚು ಪ್ರೇಮ ಮಾಡುವನು.

ಈ ಮೇರೆಗೆ ವ್ಯಾಸರುಅಶ್ವತ್ಥಾಮನನ್ನು ಬೋಧಿಸಲು, ಅಶ್ವತ್ಥಾಮನು ಭಗವಾನ್ ರುದ್ರನನ್ನು ನಮಸ್ಕರಿಸಿದನು. ಆತನು ಕೃಷ್ಣನನ್ನೂ ದೊಡ್ಡವನೆಂದು ತಿಳಿಯ ಹತ್ತಿದನು. ಆತನ ಶರೀರದಲ್ಲಿ ರೋಮಾಂಚಗಳು ಉತ್ಪನ್ನವಾದವು. ಆತನ ಅಂತಃಕರಣವು ಶಾಂತವಾಯಿತು. ಇತ್ತ ವೇದವ್ಯಾಸರು ಅರ್ಜುನನನ್ನು ಕಾಣಲು, ಆ ಧನುರ್ಧರ ಶ್ರೇಷ್ಠನು ಆ ಮಹಾಮುನಿಯನ್ನು ಕುರಿತು—ಭಗವನ್, ನಾನು ಸಮರಾಂಗಣದಲ್ಲಿ ಲಕಲಕಿಸುವ ಬಾಣಗಳಿಂದ ಶತ್ರುಗಳನ್ನು ಸಂಹರಿಸುತ್ತಿರುವಾಗ, ನನ್ನ ಮುಂದುಗಡೆಯಲ್ಲಿ ಅಗ್ನಿಯಂತೆ ದೇದೀಪ್ಯಮಾನನಾದ ಒಬ್ಬ ಪುರುಷನು, ಪ್ರಕಾಶಮಾನವಾದ ಶೂಲವನ್ನು ಹಿಡಿದು ಸಾಗಿಹೋಗುತ್ತಿರುವಂತೆ ಯಾವಾಗಲೂ ನನಗೆ ಕಾಣುತ್ತಿರುವನು. ಎಲೈ ಮಹಾಮುನಿಯೇ, ಆ ಪುರುಷನು ಯಾವ ಯಾವ ದಿಕ್ಕಿಗೆ ಹೋಗುವನೋ ಆಯಾ ದಿಕ್ಕಿಗೆ ನನ್ನ ಶತ್ರುಗಳ ಸಂಹಾರವು ಭರದಿಂದ ಆಗುವದು. ವಾಸ್ತವವಾಗಿ ಆ ದಿವ್ಯ ಪುರುಷನೇ ಸೋಲಿಸಿದ ಶತ್ರುಗಳನ್ನು ನಾನು ಸೋಲಿಸಿದೆನೆಂದು ಜನರು ತಿಳಿಯುವರು. ನಿಜವಾಗಿಯೆಂದರೆ ಆ ಪುರುಷನೇ ಸೈನ್ಯವನ್ನು ಸೋಲಿಸುತ್ತಿದ್ದು, ನಾನು ಸುಮ್ಮನೆ ಆತನ ಬೆನ್ನಹಿಂದೆ ಹೋಗುತ್ತಿರುವೆನು. ಭಗವನ್, ಸೂರ್ಯನಂತೆ ಪ್ರಖರ ತೇಜಸ್ವಿಯಾದ ಆ ಶೂಲಪಾಣಿ ಪುರುಷೋತ್ತಮನನ್ನು ನಾನು ನೋಡುತ್ತಿರುವೆನಲ್ಲ, ಅವನು ಯಾರು ನನಗೆ ಹೇಳಿರಿ. ಮಹಾರಾಜ, ಅವನ ಪಾದಗಳು ಭೂಮಿಯನ್ನು ಸ್ಪರ್ಶಿಸುತ್ತಿದ್ದಿಲ್ಲ; ಮತ್ತು ಆತನು ಒಮ್ಮೆಯೂ ಶೂಲವನ್ನು ಪ್ರಯೋಗಿಸಲಿಲ್ಲ; ಆದರೂ ಆತನ ವಿಲಕ್ಷಣ ಪ್ರತಾಪದಮೂಲಕ ಆತನ ಒಂದ ಶೂಲದಿಂದ ಸಾವಿರಾರು ಶೂಲಗಳು ಹೊರಬೀಳುತ್ತಿದ್ದವು, ಎಂದು ಹೇಳಿದನು.

ರುದ್ರಸ್ತುತಿ:—ಈ ಮೇರೆಗೆ ಆಡಿದ ಅರ್ಜುನನ ಮಾತುಗಳನ್ನು ಕೇಳಿ ವ್ಯಾಸರು ಆತನನ್ನು ಕುರಿತು—ಪಾರ್ಥಾ, ಬ್ರಹ್ಮ-ವಿಷ್ಣು-ರುದ್ರ ಎಂಬ ಪ್ರಜಾಪತಿಗಳನ್ನು ಉತ್ಪನ್ನಮಾಡಿದವನು ಚಿತ್ಸ್ವರೂಪನಿದ್ದು, ಆತನು ಯಾವತ್ತು ಶರೀರಗಳಲ್ಲಿ ಶಯನಮಾಡಿ ಅವುಗಳ ಸತ್ತೆಯನ್ನು ನಡಿಸುವನು. ಆಕಾಶ, ಭೂಮಿ, ಅಂತರಿಕ್ಷ ಇವೆಲ್ಲ ಶರೀರವಾಗಿ ಉಳ್ಳವನೂ, ಯಾವತ್ತು ಲೋಕಗಳ ಸ್ವಾಮಿಯಾದವನೂ, ಸರ್ವಶಕ್ತಿವಂತನೂ, ಸರ್ವೋತ್ತಮನೂ, ಸರ್ವಾಧಿಪತಿಯೂ ಆದ ಆ ಭುವನೇಶ್ವರ ಶಂಕರನ ದರ್ಶನವೇ ನಿನಗೆ ಆಗಿರುವದು. ನೀನು ನೋಡಿದವನು ಸಾಕ್ಷಾತ್ ಶಂಕರನೇ ಆಗಿರುವನು. ಪಾರ್ಥಾ, ಆ ಭುವನಾಧಿಪತಿಯಾದ ಶ್ರೇಷ್ಠ ಶಂಕರನಿಗೆ ನೀನು ಶರಣುಹೋಗು. ಆ ಜಟಾಧಾರಿಯಾದ ಪ್ರಭು ಈಶಾನನು ಜಗತ್ತಿಗೆ ಒಬ್ಬನೇ ಅಧಿಪತಿಯಾಗಿದ್ದು, ಆಮಹಾತ್ಮನಿಗೆ ಮಹಾದೇವನೆನ್ನುವರು. ಆತನು ಮೂರು ಕಣ್ಣುಗಳುಳ್ಳವನೂ, ಮಸ್ತಕದಲ್ಲಿ ಜಡೆಯುಳ್ಳವನೂ ಇರುವನು. ಆತನ ಬಾಹುಗಳು ಒಳ್ಳೇ ಬಲಿಷ್ಠವಾಗಿದ್ದು, ಆತನು ವಲ್ಕಲಗಳನ್ನು ಧರಿಸುತ್ತಿರುವನು. ಆತನಿಗೆ ರುದ್ರನೆನ್ನುವರು. ಅದರಂತೆಯೇ ಆ ವರದನೂ, ಭುವನೇಶ್ವರನೂ ಆದ ಮಹಾದೇವನಿಗೆ ಹರನೆಂತಲೂ, ಸ್ಥಾಣುವೆಂತಲೂ ಅನ್ನುವರು. ಜಗತ್ತಿನಲ್ಲೆಲ್ಲ ಆತನೇ ಪ್ರಧಾನಪುರುಷನಾಗಿದ್ದು, ಆತನು ಯಾವಾಗಲೂ

ಅಜಿತನಾಗಿರುವನು. ಆತನು ಜಗತ್ತಿಗೆ ಆನಂದವನ್ನು ಕೊಡುವನಲ್ಲದೆ, ಅಧೀಶ್ವರನೆಂದರೆ, ಉಪಾಧಿರಹಿತನೂ, ಚಿತ್ಸ್ವರೂಪನೂ ಆಗಿರುವನು. ಆತನೇ ಜಗತ್ತಿನ ಉತ್ಪತ್ತಿಯ ಸ್ಥಾನವೂ, ಕಾರಣವೂ ಆಗಿದ್ದು, ಜಗತ್ತಿನ ಲಯವೂ ಆತನಲ್ಲಿಯೇ ಆಗುತ್ತಿರುತ್ತದೆ. ಆತನು ಯಾವಾಗಲೂ ವಿಜಯಿಯಾಗಿರುವನು. ಆತನು ವಿಶ್ವಾತ್ಮನೂ, ವಿಶ್ವೋತ್ಪಾದಕನೂ, ವಿಶ್ವರೂಪನೂ, ಯಶಸ್ವಿಯೂ ಆಗಿರುವನು. ಆತನು ವಿಶ್ವದಈಶ್ವರನೂ, ಅದನ್ನು ನಡಿಸುವವನೂ ಇದ್ದು, ಯಾವತ್ತು ಕರ್ಮಗಳ ಅಧಿಪತಿಯೂ ಆತನೇಆಗಿರುವನು. ಸ್ವಯಂಭುವಾದ ಆ ಪ್ರಭುವು ಸರ್ವಭೂತಗಳ ಸ್ವಾಮಿಯೂ, ವರ್ತಮಾನ-ಭೂತ-ಭವಿಷ್ಯಗಳ ಉಗಮವೂ ಆಗಿರುವನು. ಆತನಿಗೇ ಶಂಭುವೆನ್ನುವರು. ಆತನು ಸ್ವತಃ ಯೋಗರೂಪನಿರುವನು; ಯೋಗಿಗಳಿಗೆ ಫಲಕೊಡುವ ಯೋಗೀಶ್ವರನೂ ಆತನೇ ಆಗಿರುವನು. ಯಾವತ್ತು ಜಗತ್ತು ಆತನ ರೂಪವೇ ಇದ್ದು, ಆತನು ಯಾವತ್ತು ಲೋಕಪಾಲರ ಈಶ್ವರನೂ ಆಗಿರುವನು. ಆತನು ಎಲ್ಲರ ಅಧಿಪತಿಯು, ಜಗತ್ತಿನಿಂದ ಪರನು, ಸರ್ವಶ್ರೇಷ್ಠನು ಇರುವದರಿಂದ ಆತನಿಗೆ ಪರಮೇಷ್ಠಿ ಎಂದು ಅನ್ನುವರು. ಮೂರು ಲೋಕಗಳನ್ನು ಆತನೇ ಉತ್ಪನ್ನಮಾಡಿರುವನು. ಆ ಲೋಕಗಳಿಗೆ ಆಧಾರವೂ ಆತನದೇ ಇರುವದು. ಆತನೊಬ್ಬನೇ ಯಾವತ್ತು ವಿಶ್ವವನ್ನು ವ್ಯಾಪಿಸಿ ಉಳಿದಿರುವನು. ಆತನಿಗೆ "ಸರ್ವ" ಎಂದು ಅನ್ನುವರು. ಆತನ ಶರೀರವು ಅತ್ಯಂತ ಶುದ್ಧವಾಗಿದ್ದು, ಆತನ ಮಸ್ತಕದಲ್ಲಿ ಚಂದ್ರನಿರುವನು. ಆತನಿಗೆ "ಭವ" "ಭೀಮ" ಎಂದು ಅನ್ನುವರು. ಆ ಸನಾತನನಾದ ದೇವನು ಭೂಮಿಗೆ ಆಧಾರನೂ, ಸರ್ವವಾಗೀಶ್ವರರ ಈಶ್ವರನೂ ಆಗಿರುವನು. ಆತನು ಅತ್ಯಂತ ದುರ್ಜಯನು, ಜಗತ್ತಿನನಾಥನು, ಜನ್ಮ-ಮೃತ್ಯು-ಜರೆಗಳನ್ನು ಮೀರಿದವನು ಇರುವನು. ಆತನು ಜ್ಞಾನಸ್ವರೂಪನಿದ್ದು, ಜ್ಞಾನದಿಂದಲೇ ಆತನು ತಿಳಿಯಲಾಗುವನು. ಆತನು ಜ್ಞಾನಸ್ವರೂಪನಿರುವದರಿಂದ ಅತ್ಯಂತ ಸ್ತುತ್ಯನಾಗಿದ್ದು, ಆತನನ್ನು ತಿಳಿಯುವದು ಅತ್ಯಂತ ಕಠಿಣವಾಗಿರುವದು. ಆತನು ತನ್ನ ಭಕ್ತರಿಗೆ ಪ್ರಸನ್ನನಾಗಿ ಯೋಗ್ಯವರಗಳನ್ನು ಕೊಡುವನು. ಆ ಪ್ರಭುವಿನ ದಿವ್ಯಗಣವು ನಾನಾಪ್ರಕಾರದ ಸ್ವರೂಪದ್ದಾಗಿರುವದು. ಯಾರು ಜಟಾಧಾರಿಗಳು; ಯಾರು ಮುಂಡರು, ಯಾರು ಕುಬ್ಜರು, ಯಾರು ಭವ್ಯಶರೀರಿಗಳು, ಯಾರು ಕುಗ್ಗಿದ ಗೋಣಿನವರು, ಯಾರು ಡೊಳ್ಳಹೊಟ್ಟೆಯುವರು, ಯಾರು ಬಹುದೊಡ್ಡ ಕಿವಿಯವರು ಇರುವರು! ಯಾವತ್ತು ಶಿವಗಣವು ಒಳ್ಳೇ ಉತ್ಸಾಹಶಾಲಿಯಾಗಿರುವದು. ಪಾರ್ಥ, ಹೀಗೆ ಸೊಟ್ಟಪಟ್ಟ ಮೋರೆ, ಸೊಟ್ಟಪಟ್ಟ ಕಾಲು, ಚಮತ್ಕಾರದ ವೇಷಗಳು ಉಳ್ಳ ಆ ಗಣವು ಯಾವಾಗಲೂ ಮಹೇಶ್ವರಮಹಾದೇವನನ್ನು ಸೇವಿಸುತ್ತಿರುವದು. ಅಪ್ಪಾ ಅರ್ಜುನಾ, ಆ ತೇಜಸ್ವಿಯಾದ ಶಂಕರನು ಪ್ರಸನ್ನನಾಗಿ, ಮೈಮೇಲಿನ ಕೂದಲು ನೆಟ್ಟಗಾಗುವಂಥ ಆ ಘೋರಸಂಗ್ರಾಮದಲ್ಲಿ ದಿನಾಲು ನಿನ್ನ ಅಗ್ರಭಾಗದಲ್ಲಿ ಸಾಗಿಹೋಗುತ್ತಿರುವನು. ಪಾರ್ಥಾ, ಕೃಪಾಚಾರ್ಯ, ಅಶ್ವತ್ಥಾಮಾ, ಕರ್ಣರಂಥ ವೀರಾಧಿವೀರರು ರಕ್ಷಿಸುತ್ತಿರುವ ಸೈನ್ಯದ ಪರಾಭವ ಮಾಡುವವನ್ನು ಮನಸ್ಸಿನಲ್ಲಿ ತರಲು, ಆ ಮಹಾಧನು-

ರ್ಧರನಾದ ಬಹುರೂಪಿ ಪರಮೇಶ್ವರನದಲ್ಲದೆ ಅನ್ಯರ ಎದೆಯಾಗಬಹುದೆ? ಆ ರುದ್ರನು ಮಾತ್ರ ಅಗ್ರಭಾಗದಲ್ಲಿ ನಿಂತನೆಂದರೆ ಆತನೆದುರಿಗೆ ನಿಲ್ಲಲು ಯಾವನೂ ಧೈರ್ಯಗೊಳ್ಳಲಾರನು; ಯಾಕಂದರೆ ಆತನನ್ನು ಸರಿಗಟ್ಟುವವರು ತ್ರೈಲೋಕ್ಯದಲ್ಲಿಯೂ ಯಾರೂ ಇಲ್ಲವು. ಬಹಳವೇಕೆ! ಆತನು ಕ್ರುದ್ಧನಾದರೆ ಸಮರಾಂಗಣದಲ್ಲಿ ಆತನ ಮೈಗಂಧಕ್ಕೇ ಬಹು ಜನರು ಸತ್ತುಬೀಳುವರು; ಮತ್ತು ಬದುಕಿ ಉಳಿದವರು ತರತರ ನಡುಗಿ ಪಟಪಟ ನೆಲಕ್ಕೆ ಬೀಳುವರು! ಇಷ್ಟು ಆತನು ಸಿಟ್ಟಿನವನಾಗಿದ್ದರೂ ಆತನ ಪ್ರಸಾದವು ಅಂತಹ ಮಹತ್ವದ್ದೇ ಆಗಿರುವದು. ಆತನನ್ನು ನಮಿಸುವ ದೇವತೆಗಳು ಸ್ವರ್ಗ ಲೋಕದಲ್ಲಿ ವಾಸಿಸುವರು; ಮತ್ತು ಭೂಮಿಯಲ್ಲಿ ಆ ವರದ-ಸರ್ವೇಶ್ವರ-ಕಲ್ಯಾಣಕಾರಕ ಉಮಾಪತಿ ರುದ್ರನ ಔಪಾಸನೆ ಮಾಡುವ ಪುಣ್ಯಶಾಲಿಗಳಾದ ಭಕ್ತರು ಇಹಲೋಕದಲ್ಲಿ ಸುಖವನ್ನು ಸಂಪಾದಿಸಿ ಅಂತ್ಯದಲ್ಲಿ ಪರಮಗತಿಯನ್ನು ಹೊಂದುವರು; ಆದ್ದರಿಂದ ಕೌಂತೇಯಾ, ಆ ಶಾಂತನನ್ನು ನೀನು ಯಾವಾಗಲೂ ನಮಸ್ಕರಿಸುತ್ತ ಹೋಗು. ಆ ರುದ್ರ ನೀಲಕಂಠನು ಅತಿಶಯ ಸೂಕ್ಷ್ಮವೂ, ವಿಲಕ್ಷಣವೂ ಆದ ರೂಪವುಳ್ಳವನಿರುವನು. ಆತನನ್ನು ನೀನು ನಮಸ್ಕರಿಸು. ಆತನು ಜಟಾಧಾರಿಯೂ, ಅಕ್ರಾಳವಿಕ್ರಾಳನೂ ಇದ್ದು, ಕುಬೇರನಿಗೆ ವರಪ್ರದಾನಮಾಡುವವನು ಆತನೇ ಇರುವನು. ಪ್ರಹರ, ಘಟಿಕಾದಿಗಳನ್ನು ಉತ್ಪನ್ನ ಮಾಡುವ ಕಾಲನು ಆತನೇ ಆಗಿದ್ದು, ಮಾಯೋಪಾಧಿಕವಾದ ಯಾವತ್ತು ದೃಶ್ಯ ಜಗತ್ತಿನಲ್ಲಿ ಸೂತ್ರಾತ್ಮರೂಪದಿಂದ ಆತನೇ ವಾಸಿಸುತ್ತಿರುವನು. ಆತನು ಸದಾಚಾರಿಗಳ ಕಲ್ಯಾಣಮಾಡುವನು. ಆತನು ಕಾಮ್ಯನೆಂದರೆ ಇಚ್ಛೆಯ ಲಕ್ಷ್ಯನಾಗಿದ್ದು, ಪಿಂಗಾಕ್ಷನೂ, ಆದಿಪುರುಷನೂ, ಸ್ಥಾಣುವೂ ಆಗಿರುವನು. ಪಾರ್ಥಾ, ಆತನನ್ನು ನೀನು ನಮಸ್ಕರಿಸು. ಆತನ ಕೇಶಗಳು ಹಸರು ಬಣ್ಣದವಾಗಿರುವವು; ತಿರುಗಿ ಆತನು ಮುಂಡನೂ ಇರುವನು. ಆತನು ತಪೋನಿಷ್ಠನಾಗಿರುವದರಿಂದ ಕೃಶನಾಗಿರುವನು; ಹಾಗು ಸಂಸಾರಸಾಗರದಿಂದ ದಾಟಿಸುವವನು ಆತನೇ ಆಗಿರುವನು. ಆತನು ಭಾಸ್ಕರನು, ಅಂದರೆ ಪ್ರಕಾಶದ ಜನಕನು. ಸುತೀರ್ಥನು ಅಂದರೆ ಅತಿಪವಿತ್ರನು ಆಗಿದ್ದು, ದೇವರಿಗೂ ದೇವನಾಗಿರುವನಲ್ಲದೆ ಮಹಾ ವೇಗಶಾಲಿಯಾಗಿರುವನು. ಅಂಥ ಆತನನ್ನು ನೀನು ನಮಸ್ಕರಿಸು. ಆತನು ಹಲವು ರೂಪದವನಿದ್ದು, ಶುಭಕಾರಕಕ್ರಿಯೆಗಳ ಪ್ರಿಯನಾಗಿರುವನು; ಮತ್ತು "ಪ್ರಿಯವಾಸಾ" ಅಂದರೆ ಚಂದ್ರನೂ ಆತನೇ ಆಗಿರುವನು; ಆದ್ದರಿಂದ ಅಪ್ಪಾ ಅರ್ಜುನಾ, ಇಂಥ ಆತನನ್ನು ನೀನು ವಂದಿಸುತ್ತ ಹೋಗು. ಆತನು ತಲೆಗೆ ಕಿರೀಟವನ್ನು ಹಾಕಿಕೊಳ್ಳುವನು, ಆತನ ಮುಖವು ಬಹು ಮನೋಹರವಾಗಿರುವದು. ಸಹಸ್ರಾಕ್ಷನಾದ ಇಂದ್ರನು ಆತನೇ ಇದ್ದು, ಮಳೆಯನ್ನೂ ಆತನೇ ಸುರಿಸುವನು. ಆತನು ಪರ್ವತದ ಮೇಲೆ ಶಯನ ಮಾಡುವವನೂ, ಅತ್ಯಂತ ಶಾಂತನೂ, ಪಾಲನಕರ್ತನೂ, ವಲ್ಕಲಧಾರಿಯೂ ಆಗಿದ್ದು ಕೈಗಳಲ್ಲಿ ಸುವರ್ಣದ ಅಲಂಕಾರಗಳನ್ನು ಇಟ್ಟುಕೊಳ್ಳುವನು; ಅರ್ಜುನಾ, ನೀನು, ಆ ಉಗ್ರನಿಗೆ ನಮಸ್ಕಾರ ಮಾಡು. ದಿಶಾಧಿಪತಿಯೂ, ಪರ್ಜನ್ಯದ ಸ್ವಾಮಿಯೂ, ಭೂತಗಳ ಅಧಿಪತಿಯೂ ಆದ ಆ ಶಂಕರನಿಗೆ ನೀನು ನಮಸ್ಕಾರಮಾಡು. ಅರ್ಜುನಾ,

ಆತನು ವೃಕ್ಷಗಳ, ಹಾಗು ಆಕಳುಗಳ ಅಧಿಪತಿಯೂ ಆಗಿರುವನು. ಆತನಿಗೆ ನಿತ್ಯದಲ್ಲಿ ನೀನು ನಮಸ್ಕಾರ ಮಾಡುತ್ತ ಹೋಗು. ಅಪ್ಪಾ ಪಾರ್ಥಾ, ಆತನ ದೇಹವು ವೃಕ್ಷಗಳಿಂದ ಆಚ್ಛಾದಿತವಾಗಿದ್ದು, ಆತನು ಉತ್ತಮ ಸೇನಾನಾಯಕನೂ, ಸರ್ವಾಂತರ್ಯಾಮಿ ದಲ್ಲಿ ವಾಸಿಸುವವನೂ ಆಗಿರುವನು. ಆತನಿಗೆ ನೀನು ಶರಣು ಹೋಗು. ಯಜ್ಞದಲ್ಲಿ ಆತನೇ ಅಧ್ವರ್ಯುರೂಪದಿಂದ ಕೈಯಲ್ಲಿ ಸ್ರುವವನ್ನು ತಕ್ಕೊಳ್ಳುವನು; ಮತ್ತು ಧನುರ್ಧಾರಿ ಭಾರ್ಗವ ರಾಮನರೂಪವಾದರೂ ಆತನದೇ ಇರುವದು. ಹೀಗೆ ನಾನಾರೂಪಗಳನ್ನು ತಾಳುವ ಆ ವಲ್ಕಲಧಾರಿಯಾದ ಜಗತ್ಪತಿಯನ್ನು ನೀನು ನಮಸ್ಕರಿಸು. ಅಪ್ಪಾ ಅರ್ಜುನಾ, ಸಾವಿರ ಕೈಗಳು, ಸಾವಿರ ಕಾಲುಗಳು ಇರುವ ಆ ವರದಾಯಕ ಭುವನೇಶ್ವರನಿಗೆ ನೀನು ಶರಣು ಹೋಗು. ಆತನು ಉಮೆಯ ಪತಿಯೂ, ವಿರೂಪಾಕ್ಷನೂ, ದಕ್ಷಯಜ್ಞವವಿಧ್ವಂಸ ಮಾಡಿದವನೂ, ಪ್ರಜಾಪತಿಯೂ, ಭೂತಪತಿಯೂ, ಅವ್ಯಗ್ರನೂ, ಅವಿನಾಶನೂ ಆಗಿರುವನು. ಈ ಕಪರ್ದಿಯು ದೊಡ್ಡದೊಡ್ಡವರನ್ನೂ ಮಾಯೆಯ ಯೋಗದಿಂದ ಭ್ರಮಣ ಮಾಡಿಸುತ್ತಿರುವನು. ಆತನ ನಾಭಿಯು ಬಹುದೊಡ್ಡದಿದ್ದು, ಆತನ ಧ್ವಜದಲ್ಲಿ ವೃಷ, ಅಂದರೆ ಎತ್ತು ಇರುವದು. ಆತನು ಧರ್ಮದ ಪತಿಯೆಂದರೆ ಫಲದಾತೃವು ಆಗಿರುವನು. ಆತನು ಧರ್ಮಶೃಂಗನು ಅಂದರೆ ವಿಶ್ವರೂಪದೇಹದ ಧರ್ಮರೂಪವಾದ ಉನ್ನತಶೃಂಗವುಳ್ಳವನು ಆಗಿರುವನು; ಮತ್ತು ಇಂದ್ರಾದಿಫಲದಾತೃಗಳಾದ ದೇವತೆಗಳಲ್ಲಿ ಆತನು ಶ್ರೇಷ್ಠನಿರುವನು. ಆತನು ವೃಷಾಂಕನೂ, ಧರ್ಮಪರರಾದವರಲ್ಲಿ ಔದಾರ್ಯ ತಾಳುವವನೂ, ಧರ್ಮದ ಯೋಗದಿಂದ ತಿಳಿಯಲಾಗುವವನೂ ಆಗಿರುವನು. ಆತನ ಕಣ್ಣುಗಳು ಎತ್ತಿನ ಹಾಗಿರುವವು. ಆತನ ಆಯುಧಗಳು ಬಹು ಶ್ರೇಷ್ಠವಾಗಿದ್ದು, ಸಾಕ್ಷಾತ್ ವಿಷ್ಣುವೇ ಆತನ ಬಾಣವಾಗಿರುವನು. ಆತನು ಧರ್ಮಸ್ವರೂಪನಿದ್ದು ಯಜ್ಞದ ಸ್ವಾಮಿಯಾಗಿರುವನು. ಅರ್ಜುನಾ, ಅಂಥ ಆತನಿಗೆ ನೀನು ಶರಣು ಹೋಗು. ಅಪ್ಪಾ ಪಾರ್ಥಾ, ಅನಂತಕೋಟಿ ಬ್ರಹ್ಮಾಂಡಗಳು ಹೊಟ್ಟೆಯಲ್ಲಿ ಹಿಡಿಸಿರುವ ತ್ರೈಲೋಕ್ಯವೇ ಶರೀರವಾಗಿಉಳ್ಳ ಆ ಪ್ರಭುವಿಗೆ ನೀನುಶರಣು ಹೋಗು. ಆತನು ವ್ಯಾಘ್ರಚರ್ಮವನ್ನು ಹೊದ್ದುಕೊಳ್ಳುವವನೂ, ತ್ರೈಲೋಕ್ಯದ ಸ್ವಾಮಿಯೂ, ವರದಾತೃವೂ, ಮುಂಡನೂ, ಬ್ರಹ್ಮನಿಷ್ಠನೂ, ಬ್ರಾಹ್ಮಣರನ್ನು ಪ್ರೀತಿಸುವವನೂ ಆಗಿರುವನು. ಆ ವರದಾಯಕ ಪ್ರಭುವು ಯಾವಾಗ ಪಿನಾಕ ಧನುಷ್ಯವನ್ನು, ಯಾವಾಗ ಬರಿಯ ಖಡ್ಗವನ್ನು ಕೈಯಲ್ಲಿ ಧರಿಸುವನು. ಆತನು ಮೂರುಲೋಕಗಳ ಸ್ವಾಮಿಯೂ, ಸರ್ವಶಕ್ತಿಮಂತನೂ ಆದ ಈಶ್ವರನಾಗಿರುವನು. ಆ ವಲ್ಕಲಧಾರಿಯಾದ ಶರಣ್ಯಪ್ರಭುವಿಗೆ ನಾನು ಶರಣು ಹೋಗಿರುವೆನು. ಕುಬೇರನ ಮಿತ್ರನಾಗಿರುವ ಆ ದೇವಾದಿದೇವನಿಗೆ ನನ್ನ ನಮಸ್ಕಾರಗಳಿರಲಿ; ಎಲೈ ದೇವನೇ, ನಿನ್ನ ವಸ್ತ್ರಗಳು ನಿರ್ಮಲವಾಗಿದ್ದು, ನಿನ್ನ ಚರಣಗಳೂ ಪವಿತ್ರವಾಗಿರುವವು. ನಿನ್ನ ಬಳಿಯಲ್ಲಿ ಬಹು ದೊಡ್ಡ ಧನುರ್ಧರಗಣವಿದ್ದು, ನೀನೂ ಉತ್ತಮ ಧನುರ್ಧರನಿರುತ್ತೀ. ಆದ್ದರಿಂದ ನಿನಗೆ ಧನುಸ್ಸು ಪ್ರಿಯವಾಗಿದ್ದು, ನೀನು ಸ್ವತಃ ಬಾಣನಾಗಿರುವೆ, ಇಂಥ ನಿನಗೆ ನನ್ನ ನಮಸ್ಕಾರಗಳಿರಲಿ. ದೇವಾ, ಬತ್ತಳಿಕೆಯೂ ನಿನ್ನ

ರೂಪವೇ ಆಗಿದ್ದು, ನೀನು ಧನುಷ್ಯವೂ ಧನುರ್ವೇದದ ಆದಿಗುರುವೂ ಆಗಿರುತ್ತೀ. ಇಂಥ ನಿನಗೆ ನನ್ನ ನಮಸ್ಕಾರಗಳು. ದೇವಾ, ನಿನ್ನ ಆಯುಧಗಳು ಭಯಂಕರವಾಗಿರುವವು. ನೀನು ಯಾವತ್ತು ದೇವತೆಗಳಲ್ಲಿ ವರಿಷ್ಠನಾಗಿರುತ್ತೀ. ಇಂಥ ನಿನಗೆ ನನ್ನ ನಮಸ್ಕಾರಗಳು. ದೇವಾ, ಬಹುರೂಪಿಯೂ, ಅನೇಕ ಧನುರ್ಧರಗಣವುಳ್ಳವನೂ ಆದ ನಿನಗೆ ನನ್ನ ನಮಸ್ಕಾರಗಳು. ಆ ಸ್ಥಾಣುವಿಗೆ ನನ್ನ ನಮಸ್ಕಾರವು, ಆ ತಪಸ್ಸಂಪನ್ನನಿಗೆ ನನ್ನ ನಮಸ್ಕಾರವು, ಆ ತ್ರಿಪುರನಾಶಕ ಭಗನೇತ್ರಹರ ದೇವನಿಗೆ ನನ್ನ ನಮಸ್ಕಾರವು. ವನಸ್ಪತಿಗಳಪತಿಯೂ, ನರರಪತಿಯೂ, ಮಾತೃಗಳಪತಿಯೂ, ಗಣಗಳಪತಿಯೂ, ಪಶುಗಳಪತಿಯೂ, ಯಜ್ಞಗಳಪತಿಯೂ, ಉದಕದಪತಿಯೂ, ದೇವತೆಗಳ ಪತಿಯೂ ಆದ ಶಂಕರನಿಗೆ ನಿತ್ಯದಲ್ಲಿ ನನ್ನ ನಮಸ್ಕಾರಗಳಿರಲಿ. ಪೂಷಾಖ್ಯಋತ್ವಿಜನ ಹಲ್ಲುಮುರಿಯುವ, ತ್ರಿನೇತ್ರಧಾರಿ-ವರದಾಯಕ ಪ್ರಭುವಿಗೆ ನನ್ನ ನಮಸ್ಕಾರಗಳಿರಲಿ. ನೀಲಕಂಠನೂ, ಪಿಂಗಟವರ್ಣದ ಶರೀರವುಳ್ಳವನೂ, ಸುವರ್ಣವರ್ಣದ ಕೇಶಗಳುಳ್ಳವನೂ ಆದ ರುದ್ರನಿಗೆ ನನ್ನ ನಮಸ್ಕಾರಗಳು.

ಅಪ್ಪಾ ಅರ್ಜುನಾ, ನನಗೆ ಕೇಳಿ ಗೊತ್ತಿರುವ ಆ ಜ್ಞಾನಘನ ಮಹಾದೇವನ ದಿವ್ಯಕರ್ಮಗಳನ್ನು ನನ್ನ ಧ್ಯಾನದಲ್ಲಿದ್ದಂತೆ ನಿನಗೆ ಹೇಳುವೆನು ಕೇಳು. ಪ್ರಾಚೀನಕಾಲದಲ್ಲಿ ಒಮ್ಮೆ ದಕ್ಷಪ್ರಜಾಪತಿಯು ವಿಧಿಪೂರ್ವಕ ಯಜ್ಞಮಾಡಲುದ್ಯುಕ್ತನಾಗಲು, ಕ್ಷುಬ್ಧನಾದ ಮಹಾದೇವನು ಅದನ್ನು ವಿಧ್ವಂಸ ಮಾಡಿಬಿಟ್ಟನು. ನಿಜವಾಗಿಯೆಂದರೆ ಆ ಕಾಲದಲ್ಲಿ ಮಹಾದೇವನು ಒಳ್ಳೇ ನಿಷ್ಠುರನಾಗಿದ್ದನು. ಮಹಾದೇವನು ಧನುಸ್ಸಿಗೆ ಬಾಣವನ್ನು ಹೂಡಲು, ಸಾಕ್ಷಾತ್ ಯಜ್ಞನಾರಾಯಣನು ಓಡಹತ್ತಿದನು. ಆಗ ದೇವತೆಗಳೆಲ್ಲ ಅಂಜಿ ಓಡತೊಡಗಿದರು. ಆಗ ಮಹಾದೇವನು ದೇವತೆಗಳ ಮೇಲೆ ಬಾಣಗಳ ಮಳೆಸುರಿಸಲು, ಯಾವತ್ತು ದೇವತೆಗಳು ಗತಿಗಾಣದೆ ಪರಮೇಶ್ವರನ ಕಾಲಮೇಲೆ ಉರುಳಾಡಿ ಆತನ ಪ್ರಸನ್ನತೆ ಪಡೆದು ಆ ಮಹಾದೇವನಿಗೆ ವಿಶಿಷ್ಟಯಜ್ಞಭಾಗ ಕೊಡುವದನ್ನು ನಿರ್ಧರಿಸಿ ಯಜ್ಞವನ್ನು ಪೂರ್ಣಮಾಡಿಸಿಕೊಂಡರು. ಪಾರ್ಥಾ, ಈಗಲೂ ಯಾವತ್ತು ದೇವತೆಗಳು ರುದ್ರನಿಗೆ ಅಂಜುತ್ತಿರುವರು. ಇದರಂತೆಯೇ ಭಗವಾನ್ ಶಂಕರನ ತ್ರಿಪುರಸಂಹಾರಕಾರ್ಯವೂ ಅತ್ಯದ್ಭುತವಾಗಿರುವದು. ಆ ಪ್ರಸಂಗದಲ್ಲಿ ಬ್ರಹ್ಮದೇವನು ಮಹಾದೇವನ ಸಾರಥಿಯೂ, ಪ್ರತ್ಯಕ್ಷ ವಿಷ್ಣುವು ಮಹಾದೇವನ ಬಾಣವೂ ಆಗಿದ್ದರು. ಹೀಗೆ ರುದ್ರನು ತ್ರಿಪುರ ಸಂಹಾರ ಮಾಡುವದನ್ನು ನೋಡುತ್ತಿದ್ದ ಪಾರ್ವತಿಯು ಐದು ಜಡೆಗಳುಳ್ಳ ಒಂದು ಕೂಸನ್ನು ನಿರ್ಮಿಸಿ ತನ್ನ ತೊಡೆಯ ಮೇಲೆ ಮಲಗಿಸಿಕೊಂಡು ಇಂದ್ರಾದಿ ದೇವತೆಗಳಿಗೆ—“ಇವನು ಯಾರು!” ಎಂದು ಕೇಳಲು, ದೇವತೆಗಳು ಜ್ಞಾನಶೂನ್ಯರಾದರು; ಇಂದ್ರನು ಮಾತ್ಸರ್ಯದಿಂದ ಆ ಶಿಶುವನ್ನು ಸಂಹರಿಸುವದಕ್ಕಾಗಿ ತನ್ನ ವಜ್ರವನ್ನು ಎತ್ತಲು, ಅಲ್ಲಿಯೇ ಅವನ ಹಸ್ತವು ಸ್ತಂಭಿತವಾಯಿತು! ಆಗ ಇಂದ್ರಾದಿ ದೇವತೆಗಳು ಬ್ರಹ್ಮನಿಗೆ ಶರಣುಹೋಗಿ ಹಸ್ತಸ್ತಂಭನದ ಕಾರಣವನ್ನು ಕೇಳಲು, ಬ್ರಹ್ಮನು ಜ್ಞಾನದೃಷ್ಟಿಯಿಂದ ನೋಡಿ, ದೇವತೆಗಳಿಗೆ—ಆ ಬಾಲಕನು

ಪಾರ್ವತಿಯ ಸಂತೋಷಕ್ಕಾಗಿ ಕೂಸಾದ ಭಗವಾನ್ ಶಂಕರನು. ಇಂದ್ರಾ, ನೀನು ಅಜ್ಞಾನದಿಂದ ಆತನ ದ್ರೋಹಮಾಡಹೋಗಿರುವದರಿಂದ ನಿನ್ನ ಹಸ್ತವು ಸ್ತಂಭಿತವಾಗಿರುವದು; ಆದ್ದರಿಂದ ಆ ಭಗವಂತನಿಗೆ ಶರಣುಹೋಗಿ ಆತನ ಪ್ರಸನ್ನತೆ ಪಡೆದ ಹೊರತು ನಿನ್ನ ಹಸ್ತವು ಅಲ್ಲಾಡಲಾರದು, ಎಂದು ಹೇಳಿ ಬ್ರಹ್ಮನು ಇಂದ್ರಾದಿ ದೇವತೆಗಳೊಡನೆ ಪರಮೇಶ್ವರನಿಗೆ ಶರಣುಹೋಗಿ ಸ್ತೋತ್ರದಿಂದ ಆತನನ್ನು ಪ್ರಸನ್ನೀಕರಿಸಿಕೊಳ್ಳಲು, ಇಂದ್ರನ ಹಸ್ತಸ್ತಂಭನವು ದೂರವಾಯಿತು. ಪಾರ್ಥಾ, ಇಂಥ ಸರ್ವೋತ್ತಮಪ್ರಭುಶಂಕರನೇ ರುದ್ರನು, ಅವನೇ ಶಿವನು, ಆತನೇ ಅಗ್ನಿಯು, ಯಾವತ್ತು ಪದಾರ್ಥಗಳು ಅವನ ರೂಪವೇ ಆಗಿದ್ದು, ಆತನು ಸರ್ವಜ್ಞನಿರುವನು. ಅವನೇ ಇಂದ್ರನು, ಅವನೇ ವಾಯುವು, ಅವನೇ ಅಶ್ವಿನೀಕುಮಾರನು, ವಿದ್ಯುತ್ತೂ ಆ ಪರಮೇಶ್ವರನೇ ಆಗಿರುವನು. ಆ ಭವನು ಪರ್ಜನ್ಯನಿದ್ದು, ಆತನೇ ಸನಾತನ ಮಹಾದೇವನಿರುವನು. ಅವನೇ ಚಂದ್ರನುನೂ, ಈಶಾನನೂ ಆಗಿದ್ದು, ಸೂರ್ಯನೂ, ವರುಣನೂ ಆತನೇ ಆಗಿರುವನು. ಕಾಲ—ಅಂತಕ—ಯಮ—ಮೃತ್ಯು ಇವೆಲ್ಲ ಅವನ ರೂಪಗಳೇ ಆಗಿದ್ದು, ರಾತ್ರಿಯೂ, ದಿವಸವೂ ಆತನೇ ಆಗಿರುವನು. ಅದರಂತೆ ಮಾಸ, ಪಕ್ಷ, ಋತು, ಎರಡೂ ಸಂಧಿಕಾಲಗಳಾದರೂ (ಸೂರ್ಯೋದಯ—ಸೂರ್ಯಾಸ್ತಸಮಯ ಕಾಲಗಳು) ಆತನೇ ಆಗಿರುವನು. ಅವನೇ ಧಾತೃವು, ಅವನೇ ವಿಧಾತೃವು, ಅವನೇ ವಿಶ್ವಾತ್ಮನು ಆಗಿರುವನು. ವಿಶ್ವಕರ್ಮನೂ ಅವನೇ ಇದ್ದು, ವಿಶ್ವಕರ್ಮನು ಮಾಡಿರುವ ಜಗತ್ತೂ ಅವನೇ ಇರುವನು. ಆತನು ಸ್ವತಃ ದೇಹಾತೀತನಾಗಿದ್ದರೂ ಆತನೇ ಯಾವತ್ತು ದೇವತೆಗಳ ರೂಪಗಳನ್ನು—ಶರೀರಗಳನ್ನು ಧಾರಣ ಮಾಡಿರುವನು. ಯಾವತ್ತು ದೇವತೆಗಳು ಆತನನ್ನು ಸ್ತುತಿಸುವರು. ಆ ದೇವನು ಒಬ್ಬನೇ ಇದ್ದು, ತಿರುಗಿ ಆತನೇ ಅನೇಕವಾಗಿರುವನು. ನೂರುಪ್ರಕಾರದವನು, ಸಾವಿರಪ್ರಕಾರದವನು, ಪುನಃ ಲಕ್ಷಪ್ರಕಾರದವನು ಆತನೇ ಆಗಿರುವನು. ವೇದಜ್ಞ ಬ್ರಾಹ್ಮಣರು ಆತನನ್ನು ಎರಡು ಮೂರ್ತಿಗಳಾಗಿ ತಿಳಿಯುವರು. ಒಂದನೆಯದು ಘೋರವು, ಮತ್ತೊಂದು ಸೌಮ್ಯವು. ಆ ಮೂರ್ತಿಗಳು ಪುನಃ ಅನೇಕಪ್ರಕಾರದವಾಗಿರುವವು. ಅಗ್ನಿ, ವಿಷ್ಣು, ಸೂರ್ಯ ಇವರು ಆತನ ಘೋರ ಮೂರ್ತಿಗಳು. ಉದಕ, ನಕ್ಷತ್ರಗಳು, ಚಂದ್ರ ಇವರು ಆತನ ಸೌಮ್ಯ ಮೂರ್ತಿಗಳು; ವೇದಗಳು, ವೇದಾಂಗಗಳು, ಉಪನಿಷದಗಳು, ಪುರಾಣಗಳು, ಅಧ್ಯಾತ್ಮ ವಿಷಯದ ಗ್ರಂಥಗಳು, ಜಗತ್ತಿನೊಳಗಿನ ಪ್ರತಿಒಂದು ಪರಮಗುಹ್ಯವು ಇವು ಅದೇ ಪರಮೇಶ್ವರನ ಸ್ವರೂಪಗಳಾಗಿರುವವು. ಪಾರ್ಥಾ, ಈ ಮೇರೆಗೆ ಆ ಮಹೇಶನು ಇರುತ್ತಿದ್ದು, ಆ ಭಗವಂತನು ಅಜ ಅಂದರೆ ಉತ್ಪತ್ತಿರಹಿತನು ಇರುವನು. ಅಪ್ಪಾ ಪಂಡುಪುತ್ರಾ, ನಾನು ಸಾವಿರ ವರ್ಷ ಒಟಗುಟ್ಟುತ್ತ ಕುಳಿತುಕೊಂಡರೂ ನನಗೆ ಆ ಭಗವಂತನ ಯಾವತ್ತು ಗುಣಗಳನ್ನು ಹೇಳಲಿಕ್ಕೆ ಬರಲಾರದು, ಮನುಷ್ಯನು ಎಲ್ಲಬಗೆಯ ದುರಾಗ್ರಹಗಳಿಂದ ಪೀಡಿತನಾಗಿರಲಿ, ಅಥವಾ ಎಲ್ಲ ಪಾತಕಗಳ ಮೂರ್ತಿಯಾಗಿರಲಿ, ಆತನು ಆ ಭಗವಂತನಿಗೆ ಶರಣು ಹೋದರೆ, ಆ ಶರಣ್ಯಪ್ರಭುವು ಅತ್ಯಂತ ಪ್ರಸನ್ನನಾಗಿ ಆತನನ್ನು ಮುಕ್ತನಾಗಮಾಡುವನು. ಆಯು

ಷ್ಯವನ್ನೂ, ಆರೋಗ್ಯವನ್ನೂ, ಅದರಂತೆ ಐಶ್ವರ್ಯವನ್ನೂ, ದ್ರವ್ಯವನ್ನೂ, ನಾನಾಪ್ರಕಾರದ ಭೋಗಗಳನ್ನೂ ಆತನೇ ಮನುಷ್ಯರಿಗೆ ಕೊಡುವನು; ಮತ್ತು ಪುನಃ ಆತನೇ ಅವನ್ನು ಹರಣಮಾಡುವನು ! ಇಂದ್ರಾದಿ ದೇವತೆಗಳಲ್ಲಿರುವ ಐಶ್ವರ್ಯವೂ ಈತನದೇ ಇರುವದು. ಈಜಗತ್ತಿನಲ್ಲಿ ಮನುಷ್ಯನ ಶುಭಾಶುಭಗಳನ್ನು ಮಾಡುವಲ್ಲಿ ಈತನು ಮಗ್ನನಾಗಿದ್ದು, ಈತನ ಐಶ್ವರ್ಯದ ಮೂಲಕವಾಗಿ (ಈತನು ಎಲ್ಲರ ಈಶ್ವರನಿರುವದರಿಂದ) ಈತನಿಗೆ ಇಚ್ಛೆಯು ಈಶ್ವರನೆಂತಲೂ ಅನ್ನುವರು. ಆತನು ಮಹೇಶ್ವರನು, ಅಂದರೆ ಇಂದ್ರ ಬ್ರಹ್ಮಾದಿ ದೊಡ್ಡ ದೊಡ್ಡವರಿಗೂ ಈಶ್ವರನಾಗಿರುವನು. ಆತನೇ ನಾನಾಪ್ರಕಾರದ ಅನೇಕ ರೂಪಗಳನ್ನು ಧರಿಸಿ ಜಗತ್ತನ್ನು ವ್ಯಾಪಿಸಿ ಬಿಡುವನು. ಆ ದೇವನ ಮುಖವು ಸಮುದ್ರದಲ್ಲಿರುವದು. ಆತನಿಗೆ ವಡವಾಮುಖನೆನ್ನುವರು. ಆ ಮುಖವು ಉದಕಮಯ ಹವಿಸ್ಸನ್ನು ಪ್ರಾಶನಮಾಡುವದು. ಈ ದೇವನು ನಿತ್ಯದಲ್ಲಿ ಕಾಶಿಯಲ್ಲಿ ವಾಸಿಸುವನು. ಷಡ್ವರ್ಗಗಳನ್ನು ಜಯಿಸಿದ್ಧ ಸನ್ಯಾಸಿಗಳಿರುವ ಕಾಶೀಕ್ಷೇತ್ರದಲ್ಲಿಯೇ ಜನರು ಈ ಈಶ್ವರನನ್ನು ಪೂಜಿಸುವರು. ಜಗತ್ತಿನಲ್ಲಿ ಜನರು ಈತನ ತೇಜಃ ಪುಂಜವೂ, ಉಗ್ರವೂ ಆದ ಹಲವುರೂಪಗಳನ್ನು ಕಲ್ಪಿಸಿ ಅವುಗಳನ್ನು ಪೂಜಿಸಿ ಅವನ್ನು ಹಲವು ಹೆಸರುಗಳಿಂದ ಕರೆಯುವರು. ಜನರಲ್ಲಿ ಪ್ರಸಿದ್ಧವಾಗಿರುವ ಈತನ ಹೆಸರುಗಳು ಯಥಾರ್ಥವಾಗಿರುವವು; ಯಾಕಂದರೆ ಅವು ಆತನ ಮಹತ್ವದಿಂದ, ವಿಭುತ್ವದಿಂದ, ಕೆಲವು ಆತನ ಕೃತ್ಯಗಳಿಂದ ಬಂದಂಥವಾಗಿರುತ್ತವೆ. ವೇದದಲ್ಲಿಯೂ ಅದರ ವಿಷಯವಾಗಿ ಒಂದು ಶತರುದ್ರೀಯ ಪ್ರಪಾಠಕವು ಹೇಳಲ್ಪಟ್ಟದ್ದಾಗಿದ್ದು, ಅದಕ್ಕೆ ಅನಂತರುದ್ರನೆಂತಲೂ ಅನ್ನುವರು. ಆ ಪ್ರಪಾಠಕವೆಂದರೆ, ಈ ಮಹಾತ್ಮನ ಉಪಸ್ಥಾನವಾಗಿರುವದು. ಆ ದೇವನು, ದಿವ್ಯ ಹಾಗು ಮಾನವೀ ಇಚ್ಛೆಗಳನ್ನು ಪೂರ್ಣಮಾಡುವ ಪ್ರಭುವಾಗಿರುವನು. ಆತನು ವಿಭುವು, ಅಂದರೆ ವ್ಯಾಪಕನು, ಪ್ರಭುವು ಅಂದರೆ ಸತ್ತಾಧೀಶನು ಆಗಿರುವನು. ಬಂಗಾರದ ಕುಂಡಲದಲ್ಲೆಲ್ಲ ಬಂಗಾರವೇ ತಂಬಿರುವಂತೆ, ಈ ವಿಸ್ತೀರ್ಣವಿಶ್ವವು ಆತನಿಂದ ವ್ಯಾಪಿಸಿರುವದು. ಬ್ರಾಹ್ಮಣರೂ, ಮುನಿಗಳೂ ಆತನಿಗೆ ಮಹಾಭೂತನೆನ್ನುವರು. ಆತನೇ ದೇವತೆಗಳ ಜನಕನೂ, ಆದ್ಯ ಪ್ರಜಾಪತಿಯೂ ಆಗಿರುವನು. ಆತನ ಮುಖದಿಂದ ಅಗ್ನಿಯ ಉತ್ಪತ್ತಿಯಾಗಿರುವದು. ಆತನು ಪಶುಗಳ, ಅಂದರೆ ಜೀವರ ಸರ್ವಪ್ರಕಾರದ ಪಾಲನಮಾಡುವನು. ಅವರೊಡನೆ ರಮಮಾಣನಾಗುವನು. ಆತನು ಅವರ ಅಧಿಪತಿಯೂ ಆಗಿರುವನು. ಆದ್ದರಿಂದ ಆತನಿಗೆ ಪಶುಪತಿಯೆನ್ನುವರು. ಬ್ರಹ್ಮಚರ್ಯದ ಮೂಲಕವಾಗಿ ಆತನ ದಿವ್ಯಲಿಂಗವು ಯಥಾಯೋಗ್ಯವಾಗಿರುವದು. ಈತನು ತ್ರೈಲೋಕ್ಯಕ್ಕೆ ಮಹತ್ವವನ್ನು ಕೊಡುವವನಾದದ್ದರಿಂದ ಈತನಿಗೆ ಮಹೇಶ್ವರನೆನ್ನುವರು. ಋಷಿಗಳೂ, ದೇವತೆಗಳೂ, ಗಂಧರ್ವರೂ, ಅಪ್ಸರಸರೂ ಆತನ ಊರ್ಧ್ವಭಾಗದಲ್ಲಿರುವ ಲಿಂಗವನ್ನು ಪೂಜಿಸುವರು. ಆ ಪೂಜೆಯಿಂದ ಮಹೇಶ್ವರಶಂಕರನು ಆನಂದಪಡುವನಲ್ಲದೆ, ಸುಖಿಯೂ, ಸಂತುಷ್ಟನೂ, ಪರಮಹರ್ಷಭರಿತನೂ ಆಗುವನು. ಆತನ ಹಲವು ಪ್ರಕಾರದ ರೂಪಗಳು ವರ್ತಮಾನ, ಭೂತ, ಭವಿಷ್ಯ ಕಾಲಗಳಲ್ಲಿ ಸ್ಥಿರವಾಗಿರುವವು.

ಇವರಿಂದಲೂ, ಸ್ಥಾವರಜಂಗಮವಾದ ಹಲವು ಪ್ರಕಾರದ ಆತನ ಸ್ವರೂಪವಿರು ವದರಿಂದಲೂ ಆತನಿಗೆ ಬಹುರೂಪನೆನ್ನುವರು. ಆತನು ಏಕಾಕ್ಷನಿದ್ದು, ಒಳ್ಳೇ ಜಾಜ್ವಲ್ಯನಾಗಿರುವನು; ಆತನಿಗೆ ಎಲ್ಲ ಮಗ್ಗಲಿಗೂ ಕಣ್ಣುಗಳಿರುವವು. ಆತನು ಕ್ರುದ್ಧನಾಗಿ ಯಾವತ್ತು ಜಗತ್ತಿನಲ್ಲಿ ಸಂಚರಿಸುವದರಿಂದ ಆತನಿಗೆ ಸರ್ವನೆನ್ನುವರು. ಮತ್ತು ಹೊಗೆಯಂತೆ ಆತನ ರೂಪವಿರುವದರಿಂದ ಆತನಿಗೆ ಧೂರ್ಜಟಿಯೆನ್ನುವರು. ವಿಶ್ವೇದೇವತೆಗಳು ಆತನಲ್ಲಿಯೇ ಅಂತರ್ಭೂತವಾಗಿರುವದರಿಂದ ಆತನಿಗೆ ವಿಶ್ವರೂಪ ನೆಂಬ ಹೆಸರು ಬಿದ್ದಿರುವದು. ಆ ಭುವನೇಶ್ವರನು, ಸ್ವರ್ಗದೇವತಾ, ಜಲದೇವತಾ, ಪೃಥ್ವಿ ಈ (ತ್ರೈಲೋಕ್ಯರೂಪ) ಮೂವರು ಅಂಬೆಯರನ್ನು ಪಾಲಿಸುವದರಿಂದ ಆತನಿಗೆ ತ್ರ್ಯಂಬಕನೆನ್ನುವರು. ಆತನು ಯಾವಾಗಲೂ ಎಲ್ಲ ಪ್ರಕಾರದ ಸಂಪತ್ತನ್ನು ಅಭಿ ವೃದ್ಧಿಗೊಳಿಸುವದರಿಂದಲೂ, ಯಾವಾಗಲೂ ಮನುಷ್ಯರ 'ಶಿವ' ಅಂದರೆ ಕಲ್ಯಾಣ ವನ್ನು ಇಚ್ಛಿಸುವದರಿಂದಲೂ ಆತನಿಗೆ 'ಶಿವ' ಎಂಬ ಸಂಜ್ಞೆಯು ಪ್ರಾಪ್ತವಾಗಿರು ವದು. ಆತನಿಗೆ ಸಾವಿರ ಕಣ್ಣುಗಳಿರುವವು; ಮತ್ತು ಪುನಃ ಆತನು ನಾಲ್ಕೂ ಕಡೆ ಯಿಂದ ನೇತ್ರುಮಯನಿರುವನು! ಈ ಮಹತ್ ವಿಶ್ವವನ್ನು ಆತನು ಪಾಲಿಸುವದರಿಂದ ಆತನಿಗೆ ಮಹಾದೇವನೆನ್ನುವರು. ಈ ವಿಸ್ತೀರ್ಣ ವಿಶ್ವದ ಉತ್ಪತ್ತಿಯ ಪೂರ್ವದಲ್ಲಿ ಆತನು ನಿರುಪಾಧಿಕ ಸ್ವರೂಪದಿಂದ ಇದ್ದು, ಸೃಷ್ಟಿಯ ಕಾಲದಲ್ಲಿ ದೇಹಾಭಿಮಾನವನ್ನು ವಹಿಸಿ ಪ್ರಾಣರೂಪದಿಂದ ಇರುವನು. ಸಾರಾಂಶ, ಸರ್ವ ಅವಸ್ಥೆಗಳಲ್ಲಿ ಆತನು, ನಿರ್ವಿಕಾರನಿರುವದರಿಂದ ಅವನಿಗೆ ಸ್ಥಾಣುವೆನ್ನುವರು. ಜಗತ್ತಿನಲ್ಲಿ ಪ್ರಕಾಶಿಸುವ ಸೂರ್ಯ-ಚಂದ್ರರ ಕಿರಣಗಳು ಈ ತ್ರಿನೇತ್ರುಧಾರಿ ಶಂಕರನ ಕೇಶಗಳಾದ್ದರಿಂದ ಆತನಿಗೆ ವ್ಯೋಮಕೇಶನೆಂಬ ಸಂಜ್ಞೆಯಿರುವದು. ಭೂತ, ವರ್ತಮಾನ, ಭವಿಷ್ಯಗಳ ಸಂಪೂರ್ಣ ಜಗತ್ತು ಆತನ ಸ್ವರೂಪವಿದ್ದು, ಭೂತ-ವರ್ತಮಾನ-ಭವಿಷ್ಯಗಳ ಉಗ ಮವೂ ಈತನಿಂದಲೇ ಆಗಿರುವದರಿಂದ ಈತನಿಗೆ ಭವನೆನ್ನುವರು. "ಕಪಿ" ಎಂದರೆ ಶ್ರೇಷ್ಠ "ವೃಷ" ಅಂದರೆ ಧರ್ಮ, ಇದರ ಮೇಲಿಂದ ಆ ಭಗವಾನ್ ದೇವದೇವನಿಗೆ "ವೃಷಾಕಪಿ" ಅಂದರೆ "ಶ್ರೇಷ್ಠ ಧರ್ಮ" ಎಂಬ ಸಂಜ್ಞೆಯು ಪ್ರಾಪ್ತವಾಗಿರುವದು. ಬ್ರಹ್ಮ, ಇಂದ್ರ, ವರುಣ, ಯಮ, ಕುಬೇರ ಇವರನ್ನು ಅಧೀನದಲ್ಲಿ ಇಟ್ಟುಕೊಂಡು ಆ ದೇವನು ಅವರನ್ನು ಹರಣಮಾಡುವನಾದ್ದರಿಂದ ಆತನಿಗೆ "ಹರ"ನೆನ್ನುವರು. ಆ ಮಹೇಶ್ವರನು ತನ್ನವೆರಡೂ ಕಣ್ಣುಗಳನ್ನು ಗಟ್ಟಿಯಾಗಿ ಮುಚ್ಚಿಕೊಂಡು ಹಣೆಯಲ್ಲಿ ಮೂರನೆಯ ಕಣ್ಣನ್ನು ಉತ್ಪನ್ನ ಮಾಡಿರುವದರಿಂದ ಆತನಿಗೆ ತ್ರ್ಯಕ್ಷನೆಂಬ ಹೆಸರು ಉಂಟಾ ಯಿತು. ಆತನು ಪ್ರಾಣಿಗಳ ಶರೀರಗಳಲ್ಲಿ ಅನೇಕ ರೂಪಗಳಿಂದ ಇರುತ್ತಿದ್ದರೂ, ಎಲ್ಲ ರಿಗೂ ಆತನು ಸರಿಯಾಗಿಯೇ ಪ್ರಿಯನಾಗಿರುವನು. ಆತನು ಒಳ್ಳೆಯ ಕೆಡಕು ಎಲ್ಲ ಪ್ರಕಾರದ ಪ್ರಾಣಿಗಳ ಶರೀರಗಳಲ್ಲಿ ಪ್ರಾಣ, ಅಪಾನ, ಇತ್ಯಾದಿ ವಾಯುಗಳ ರೂಪದಿಂದ ಇರುವನು. ಆ ಮಹಾತ್ಮನ ಪ್ರತಿಮೆಯನ್ನು ಅಥವಾ ಲಿಂಗವನ್ನು, ವಿಶೇಷವಾಗಿ ಲಿಂಗ ವನ್ನೇ ಪೂಜಿಸುವವನಿಗೆ ಸರ್ವದಾ ಮಹದೈಶ್ವರ್ಯವು ಪ್ರಾಪ್ತವಾಗುವದು. ಆತನ

ತೊಡೆಯಿಂದ ಕೆಳಗಿನ ಅರ್ಧಭಾಗವು ಅಗ್ನಿಯಿದ್ದು, ಮೇಲಿನ ಭಾಗವು ಮಂಗಲಕಾರಕ ಚಂದ್ರನಿರುವನು. ಅದರಂತೆ ಆತನ ಆತ್ಮನಲ್ಲಿಯೂ ಅಗ್ನಿ, ಸೋಮ ಎಂಬ ಎರಡು ಭಾಗಗಳನ್ನು ತಿಳಿಯುವರು. ಆತನ ಸೋಮರೂಪವಾದ "ಶಿವ" ಅಂದರೆ ಕಲ್ಯಾಣಕಾರಕ ಮೂರ್ತಿಯು ಸ್ವರ್ಗದಲ್ಲಿ ದೇವತೆಗಳ ಕಡೆಯಲ್ಲಿರುತ್ತಿದ್ದು, ಅದು ಬಹು ವಿಶಾಲವೂ, ತೇಜೋಮಯವೂ, ಪ್ರದೀಪ್ತವೂ ಆಗಿರುವದು. ಆತನ ಎರಡನೆಯ ಪ್ರಖರವೂ, ಘೋರವೂ ಆದ ಮೂರ್ತಿಯು ಮನುಷ್ಯ ಲೋಕದಲ್ಲಿರುತ್ತಿದ್ದು, ಅದಕ್ಕೆ ಅಗ್ನಿಯೆನ್ನುವರು. ಮೊದಲನೆಯ ಶಿವಮೂರ್ತಿಯು ಯಾವಾಗಲೂ ಬ್ರಹ್ಮಚರ್ಯವ್ರತವನ್ನು ಆಚರಿಸುತ್ತಿರುವದು; ಆತನ ಎರಡನೆಯ ವಿಶೇಷಮೂರ್ತಿಯು, ಅಂದರೆ ಅಗ್ನಿಯು ಯೋಗದಿಂದ ಈ ಈಶ್ವರನು ಎಲ್ಲರನ್ನು ಸಂಹರಿಸುವನು. ಆತನು ತೀಕ್ಷ್ಣನೂ, ಉಗ್ರನೂ, ಪ್ರತಾಪಿಯೂ ಇದ್ದು, ರಕ್ತಮಾಂಸಗಳನ್ನು ಭಕ್ಷಿಸುವನು; ಮತ್ತು ಯಾವ ಪದಾರ್ಥವನ್ನಾದರೂ ಸುಟ್ಟು ಬಿಡುವನು. ಆತನ ಆ ಗುಣದಿಂದ ಆತನಿಗೆ ರುದ್ರನೆನ್ನುವರು. ಅಪ್ಪಾ ಅರ್ಜುನಾ, ಸಂಗ್ರಾಮದೊಳಗೆ ನಿನ್ನ ಅಗ್ರಭಾಗದಲ್ಲಿ ಶತ್ರುಗಳ ಸಂಹಾರ ಮಾಡುವವನನ್ನು ನೀನು ನೋಡಿದೆಯಲ್ಲ, ಆತನು ಈ ಪಿನಾಕಪಾಣಿಯಾದ ಮಹಾದೇವನೇ ಇರುವನು. ಎಲೈ ನಿಷ್ಪಾಪನೇ, ನೀನು ಜಯದ್ರಥನನ್ನು ಕೊಲ್ಲಲು ಪ್ರತಿಜ್ಞೆಮಾಡಿದಮೇಲೆ ಆ ದಿನ ರಾತ್ರಿ ಕೃಷ್ಣನು ಸ್ವಪ್ನದಲ್ಲಿ ನಿನಗೆ ಹಿಮಾಲಯಪರ್ವತದ ಮೇಲೆ ಒಬ್ಬ ಪುರುಷನ ದರ್ಶನ ಮಾಡಿಸಿದನಷ್ಟೆ ? ಆತನೇ ಈ ಭಗವಾನ್ ಶಂಕರನು ಸಮರಾಂಗಣದಲ್ಲಿ ನಿನ್ನ ಅಗ್ರಭಾಗದಲ್ಲಿ ಹೋಗುತ್ತಿರುವನು. ಎಲಾ, ನೀನು ದಾನವರನ್ನು ಸಂಹರಿಸಿದ ಅಸ್ತ್ರಗಳನ್ನು ನಿನಗೆ ಕೊಟ್ಟ ಪ್ರಭು ಮಹಾದೇವನೇ ಈತನು.

ಪಾರ್ಥಾ, ದೇವಾಧಿದೇವಶಂಕರನ ಈ ಧನ್ಯವೂ, ಯಶಸ್ಕರವೂ, ಆಯುಷ್ಯಪ್ರದವೂ, ಪುಣ್ಯಕಾರಕವೂ, ವೇದತುಲ್ಯವೂ ಆದ ಶತರುದ್ರೀಯವೆಂಬ ಹೆಸರಿನ ಸ್ತೋತ್ರವನ್ನು ನಿನಗೆ ಹೇಳಿದೆನು. ಇದು ಮಹಾಪುಣ್ಯಕಾರಕವಾಗಿದ್ದು, ಇದರ ಯೋಗದಿಂದ ಯಾವತ್ತು ಮನೋರಥಗಳು ಪರಿಪೂರ್ಣವಾಗುವವು. ಇದು ಯಾವತ್ತು ವಿಕಾರಗಳನ್ನು ನಾಶಮಾಡುವದು; ಯಾವತ್ತು ಪ್ರಕಾರದ ದುಃಖಗಳನ್ನೂ, ಭಯವನ್ನೂ ದೂರಮಾಡುವದು. ಈ ಪ್ರಕಾರದ ಈ ಚತುರ್ವಿಧಪುರುಷಾರ್ಥಪ್ರದ ಸ್ತೋತ್ರವನ್ನು ನಿತ್ಯದಲ್ಲಿ ಶ್ರವಣಮಾಡುವವನು ಯಾವತ್ತು ಶತ್ರುಗಳನ್ನು ಜಯಿಸಿ ಅಂತ್ಯದಲ್ಲಿ ರುದ್ರಲೋಕದೊಳಗೆ ಮಹತ್ವವನ್ನು ಪಡೆಯುವನು. ಈ ಮಹಾದೇವನ ಸ್ತೋತ್ರವನ್ನು ನಿತ್ಯದಲ್ಲಿಯೂ ಸಮರಾಂಗಣದಲ್ಲಿ ಅವಶ್ಯ ಪಠಣಮಾಡಬೇಕೆಂದು ಹೇಳಿರುವದು. ವಿಶ್ವೇಶ್ವರ ಶಂಕರನ ಭಕ್ತನಾದವನು ಯಾವಾಗಲೂ ಒಳ್ಳೇ ತತ್ಪರತೆಯಿಂದ ಈ ಶತರುದ್ರೀಯ ಸ್ತೋತ್ರವನ್ನು ಶ್ರವಣ ಮಾಡಿದರೆ, ಪಠಣಮಾಡಿದರೆ ಆತನಿಗೆ ಭಗವಾನ್ ತ್ರ್ಯಂಬಕನು ಪ್ರಸನ್ನನಾಗುವನು; ಮತ್ತು ಆತನ ದೊಡ್ಡ ದೊಡ್ಡ ಮನೋರಥಗಳು ಪರಿಪೂರ್ಣಗಳಾಗುವವು.

ಈ ಮೇರೆಗೆ ಸಿದ್ಧಮುನೀಶ್ವರರು ಹೇಳಿದ ಶ್ರೀ ವೇದವ್ಯಾಸೋಕ್ತ ಶತರುದ್ರೀಯದ ಶ್ರವಣಮಾಡಿ ಭಗವಾನ್ ಸದಾಶಿವನ ಸರ್ವೋತ್ತಮತ್ವವನ್ನು ಮನಸ್ಸಿನಲ್ಲಿ ತಂದು

ವಿವೇಕಶೀಲನೇ ಮೊದಲಾದ ಶಿಷ್ಯರು ಆನಂದ ಭರಿತರಾದರು! ಅವರಿಗೆ ಯಾವತ್ತು ಜಗತ್ತು ಸದಾಶಿವಮಯವಾಗಿ ತೋರಹತ್ತಿತು. ಅವರು ತಮ್ಮ ಗುರುಗಳಾದ ಸಿದ್ಧ ಮುನೀಶ್ವರರನ್ನು ಕುರಿತು—ಸದ್ಗುರುನಾಥಾ, ಇಂದಿನ ನಿನ್ನ ಬೋಧದಿಂದ ನಾವು ಪರಮ ಧನ್ಯರಾದೆವು. ಶ್ರೀ ವೇದವ್ಯಾಸರು ಹೀಗೆ ಶಿವನೇ ಸರ್ವೋತ್ತಮನೂ, ಸರ್ವಮಯನೂ ಆಗಿರುವನೆಂಬದನ್ನು ಅರಿತವರಾಗಿದ್ದು, ಅವರು ಕಾಶೀಕ್ಷೇತ್ರದಲ್ಲಿ ಶ್ರೀ ವಿಶ್ವೇಶ್ವರ ದೇವಾಲಯದಲ್ಲಿ "ಹರಿಸರ್ವೋತ್ತಮ"ನೆಂದು ಕೈಯೆತ್ತಿ ನುಡಿದು, ನಂದಿಕೇಶ್ವರನಿಂದ ಹಸ್ತ ಸ್ತಂಭನವನ್ನು ಹೊಂದಿದರಂತಲ್ಲ; ಅದರ ವೃತ್ತಾಂತವೇನು? ಹಾಗು ಅದರ ರಹಸ್ಯವೇನು? ವ್ಯಾಸರು ಸಾಮಾನ್ಯರಲ್ಲ, ಅವರು ವೇದವಿಭಾಗ ಮಾಡಿದವರು; ಸರ್ವ ಪುರಾಣಕರ್ತೃಗಳು; ಐದನೆಯ ವೇದವೆನಿಸಿದ ಮಹಾಭಾರತವನ್ನು ರಚಿಸಿದವರು. ಇದಲ್ಲದೆ ಎಲ್ಲ ಧರ್ಮಪಂಥಗಳ ಮೂಲಾಧಾರಗಳಾದ ಬ್ರಹ್ಮಸೂತ್ರಗಳನ್ನು ರಚಿಸಿದವರೂ ಅವರೇ! ಇಂಥವರು ಶಿವಾಲಯಕ್ಕೆ ಹೋಗಿ ಶಿವನನ್ನು ಕೊಂಡಾಡಬೇಕೆಂಬ ಲೌಕಿಕ ವ್ಯವಹಾರವನ್ನು ಕೂಡ ಅರಿಯದವರಂತೆ "ಹರಿಸರ್ವೋತ್ತಮನೆ"ಂದು ಯಾಕೆ ನುಡಿದರು? ನಮ್ಮಂಥ ಸಾಮಾನ್ಯ ಜನರು ಒಬ್ಬರ ಮನೆಗೆ ಹೋದರೆ ಮನೆಯ ಯಜಮಾನನಿಗೆ ದೊಡ್ಡಿಸ್ತನ ಕೊಡಬೇಕೆಂಬ ವ್ಯಾವಹಾರಿಕ ತತ್ವವನ್ನು ಅರಿತಿರುವೆವು; ಈ ಸರ್ವ ಸಾಮಾನ್ಯ ತತ್ವವು ವೇದವ್ಯಾಸರಿಗೆ ಗೊತ್ತಿರಲಿಲ್ಲವೆ? ಅಷ್ಟು ವ್ಯವಹಾರಗೊತ್ತಿಲ್ಲದವರು ಜಗತ್ತಿನ ವ್ಯವಹಾರವನ್ನೆಲ್ಲ ವಿಶದವಾಗಿ ವಿವರಿಸಿದ ಮಹಾಭಾರತ ಗ್ರಂಥವನ್ನು ಹ್ಯಾಗೆ ರಚಿಸಿದರು? ಗುರುದೇವಾ, ನಮಗೆ ಈ ಭಗವಾನ್ ವೇದವ್ಯಾಸ–ಚರಿತ್ರವು ಬಹು ವಿಲಕ್ಷಣವಾಗಿ ತೋರಿ, ನಮ್ಮ ಮನಸ್ಸು ವ್ಯಗ್ರವಾಗಿರುವದು; ಆದ್ದರಿಂದ ವ್ಯಾಸರಂಥ ಮಹಾತ್ಮರ ಮಹಾ ಮಹಿಮೆಯ ವಿಷಯವಾಗಿ ಚಂಚಲವಾಗಿರುವ ನಮ್ಮ ಮನಸ್ಸನ್ನು ಸ್ಥಿರಪಡಿಸಿ, ನಮ್ಮನ್ನು ಸಮಾಧಾನಗೊಳಿಸು, ಎಂದು ಪ್ರಾರ್ಥಿಸಲು, ಸಿದ್ಧಮುನೀಶ್ವರರು ಶಿಷ್ಯನ ಪ್ರಶ್ನೆಗಳ ಅಭಿನಂದನಮಾಡಿ ಮೊದಲು ವ್ಯಾಸಭುಜ ಸ್ತಂಭನದ ವೃತ್ತಾಂತವನ್ನು ಹೇಳತೊಡಗಿದರು.

## ವ್ಯಾಸ–ಭುಜ–ಸ್ತಂಭನ!

(ಸ್ಕಂದಪುರಾಣಾಂತರ್ಗತ–ಕಾಶೀಖಂಡದ ೯೫ ನೆಯ ಅಧ್ಯಾಯ)

ಹೀಗೆ ಸಿದ್ಧಮುನೀಶ್ವರರು ವಿವೇಕಶೀಲಾದಿ ತಮ್ಮ ಶಿಷ್ಯರಿಗೆ ಶಿವಸರ್ವೋತ್ತಮತ್ವಪ್ರತಿಪಾದಕ ಹಲವು ಹೃದಯಂಗಮ ಶಿವಲೀಲೆಗಳನ್ನು ಹೇಳಿ ಸುಮ್ಮನಾಗಲು, ಮಹಾಬುದ್ಧಿಶಾಲಿಯಾದ ವಿವೇಕಶೀಲನು ಸಂತೋಷದ ಭರದಲ್ಲಿ ಮತ್ತೆ ತನ್ನ ಗುರುಗಳನ್ನು ಕುರಿತು ವಿನಯದಿಂದ ಆತುರದಿಂದ—ಸದ್ಗುರೋ, ಈವರೆಗೆ ತಾವು ನಿರೂಪಿಸಿದಂತೆ ಭಗವಾನ್ ಶಂಕರನು ಸರ್ವೋತ್ತಮನೂ, ಸರ್ವಮಯನೂ, ಸರ್ವಾಧಾರನೂ ಆಗಿರುವನೆಂಬದನ್ನು ಕೇಳಿ ನಮಗೆ ಅತ್ಯಂತ ಸಮಾಧಾನವಾಯಿತು. ಆದರೆ, ಈ ವಿಷಯದಲ್ಲಿ ನನಗೆ ಒಂದು ಸಂಶಯವು ಮಾತ್ರ ಉಳಿಯಿತು. ಅದೇನಂದರೆ, ಮಹಾತ್ಮರಾದ ವೇದವ್ಯಾಸರು ವೇದಾರ್ಥಸಾರಭೂತವಾದ ಹದಿನೆಂಟು ಪುರಾಣಗಳಲ್ಲಿ ಶಿವ ಪುರಾಣಗಳನ್ನೇ ಅಧಿಕವಾಗಿ ಬರೆದು, ತದ್ವಾರಾ ಲೋಕದಲ್ಲಿ ಶಿವಭಕ್ತಿಯನ್ನು ಹೆಚ್ಚಿಸಿದರಲ್ಲವೆ? ಅಂದಮೇಲೆ

ಅಂಥ ಶಿವಭಕ್ತಿಧುರೀಣರಾದ ವ್ಯಾಸರೇ ಕುಳಿತು ಅಜ್ಞರಂತೆ ಹರಿ–ಹರರಲ್ಲಿ ಭೇದವೆಣಿಸಿ ಹರನಿಗಿಂತಲೂ ಹರಿಯೇ ಶ್ರೇಷ್ಠನೆಂದು ಯಾಕೆ ಪ್ರತಿಪಾದಿಸಿದರು ? ಮತ್ತು ಇವರು ಹೀಗೆ ಪ್ರತಿಪಾದಿಸುವಾಗ ಒಮ್ಮೆಲೇ ಅವರ ಬಲಭುಜವು ಸ್ತಂಭಿತವಾಯಿತೆಂಬದನ್ನೂ ನಾನು ಯಾವದೋ ಒಂದು ಪುರಾಣದಲ್ಲಿ ಕೇಳಿದ್ದೇನೆ. ಆದರೆ ಗುರುವರಾ, ಸಕಲ ಶಾಸ್ತ್ರಕೋವಿದರಾದ ಆ ಬ್ರಹ್ಮಜ್ಞ ಋಷೀಶ್ವರರ ಬುದ್ಧಿಯು ಹೀಗೆ ಭ್ರಂಶವಾಗ ಲಿಕ್ಕೂ, ಒಮ್ಮೆಲೇ ಅವರ ಭುಜವು ಸ್ತಂಭಿತವಾಗಲಿಕ್ಕೂ ಮೂಲಕಾರಣವೇನೆಂಬದರ ರಹಸ್ಯವನ್ನಿಷ್ಟು ನಮಗೆ ಹೇಳಿ ಅಜ್ಞರಾದ ನಮ್ಮ ಈ ಸಂಶಯವನ್ನು ದೂರಮಾಡ ಬೇಕೆಂ”ದು ಪ್ರಾರ್ಥಿಸಲು, ಹೀಗೆ ಪುನಃ ಪುನಃ ಪ್ರಶ್ನ ಮಾಡುವ ಶಿಷ್ಯನನ್ನು ನೋಡಿ ಸಿದ್ಧಮುನೀಶ್ವರರು ಸಂತೋಷದ ಮೃದುಹಾಸ್ಯದಿಂದ ಅವನನ್ನು ಕುರಿತು—ಪ್ರಿಯ ಶಿಷ್ಯ–ಶಿಖಾಮಣೇ ವಿವೇಕಶೀಲಾ, ಬಹುಯೋಗ್ಯವಾದ ಪ್ರಶ್ನ ಮಾಡಿದೆ; ಇದೇ ವಿಷಯದ ಭವಿಷ್ಯವನ್ನು ಹಿಂದಕ್ಕೆ ಭಗವಾನ್ ಸ್ಕಂದನು ಅಗಸ್ತ್ಯನನ್ನು ಕುರಿತು ಸ್ಕಂದಪುರಾಣದ ಕಾಶೀಖಂಡದ ೯೫ನೆಯ ಅಧ್ಯಾಯದಲ್ಲಿ ಹೇಳಿರುವನು. ಅದೇ ಕಥಾಭಾಗವನ್ನು ಈಗ ನಿನಗೆ ಇದ್ದಕ್ಕಿದ್ದಹಾಗೆ ಕನ್ನಡಿಸಿ ಹೇಳುವೆನು ಕೇಳು.

ಶಿವಪುತ್ರನಾದ ಸ್ಕಂದನು ಒಂದುದಿನ ಸುಪ್ರಸನ್ನಚಿತ್ತನಾಗಿ ಕುಳಿತಾಗ ಅಗಸ್ತ್ಯ ನನ್ನು ಕುರಿತು—ಎಲೈ ಮೈತ್ರಾವರುಣೇ, ಕೇಳು; ಯಾವ ಮಹಾತ್ಮನು ಬಹು ವಿಧ ಶಾಖಾಪ್ರಭೇದದಿಂದ ಅನಂತವಾದ ಈ ವೇದರಾಶಿಯ ವಿಭಾಗಮಾಡಿ ಲೋಕಕಲ್ಯಾಣಮಾ ಡಿದನೋ, ಯಾವಾತನು ತನ್ನ ಅಸದೃಶವಾದ ಬುದ್ಧಿಪ್ರಭಾವದಿಂದ ವೇದಾರ್ಥಸಾರಶೋ ಧನರೂಪಗಳಾದ ಶಾರೀರಕ ಸೂತ್ರಗಳೊಂದಿಗೆ ಅಷ್ಟಾದಶ ಪುರಾಣಗಳನ್ನುರಚಿಸಿ ಕೀರ್ತಿ ಶಾಲಿಯಾದನೋ, ಸರ್ವಲೋಕಮನೋಹರವೂ, ಸರ್ವಪಾಪಪ್ರಶಮನವೂ, ಶಾಂತಿದಾ ಯಕವೂ, ಶ್ರುತಿ ಸ್ಮೃತಿ ಪುರಾಣಗಳ ಸಾರಭೂತವೂ ಆದಮಹಾಭಾರತವನ್ನು ಯಾವನು ಅತ್ಯಂತ ಭಕ್ತಿಯಿಂದರಚಿಸಿ ಜನರ ಮೋಹಪಟಲವನ್ನು ದೂರಗೊಳಿಸಿದನೋ, ಅಂಥ ಬುದ್ಧಿಶಾಲಿಯಾದ ವೇದವ್ಯಾಸನು ಹೇಗೆ ಮೋಹಹೊಂದುವನೆಂಬದನ್ನು ನಿನಗೆ ಹೇಳುವೆನು ಕೇಳು. ಒಂದಾನೊಂದು ಸಮಯ ಆ ಮುನೀಶ್ವರನು ಭೂಮಿಯಮೇಲೆ ಸಂಚರಿಸುತ್ತ ಎಷ್ಟೋ ದಿವಸಗಳಮೇಲೆ ಪರಮ ಪವಿತ್ರವಾದ ನೈಮಿಷಾರಣ್ಯಕ್ಕೆ ಬಂದು ತಲುಪುವನು. ಅಲ್ಲಿ ಅವನು ಭಸ್ಮರುದ್ರಾಕ್ಷಧಾರಿಗಳೂ, ಶಿವಾರಾಧನತತ್ಪ ರರೂ, ರುದ್ರಸೂಕ್ತಜಪಪ್ರಿಯರೂ, ಶಿವಸರ್ವೋತ್ತಮ ವಾದಿಗಳೂ ಆದ ೮೮ ಸಹಸ್ರ ಜನ ಶೌನಕಾದಿ ಋಷಿಗಳನ್ನು ಕಾಣುವನು. ಅವರೆಲ್ಲರೂ ಒಟ್ಟುಗೂಡಿ ಮಾಡುತ್ತಿರುವ ದೃಢನಿಶ್ಚಯದ ಶಿವಾರಾಧನೆಯನ್ನು ನೋಡಿ ವಾಸುದೇವ ಪರಾಯಣನಾದ ವ್ಯಾಸನಿಗೆ ಸಹನವಾಗುವದಿಲ್ಲ; ಆಗ ಅವನು ಅತ್ಯಂತ ಆಢ್ಯತೆಯಿಂದ ತನ್ನ ತರ್ಜನೀ ಬೆರಳನ್ನು ಮೇಲಕ್ಕೆ ನೆಗಹಿ, ಎಲ್ಲ ಋಷಿವೃಂದವು ಕೇಳುವಂತೆ ಉಚ್ಚಸ್ವರದಿಂದ—ಎಲಾ, ಸರ್ವೇ ಶನಾದ ಶ್ರೀ ಹರಿಯೊಬ್ಬನೇ ಸಕಲ ಪ್ರಾಣಿಗಳಿಗೆ ಮುಕ್ತಿಪ್ರದನೂ. ಮಾನ್ಯನೂ ಆಗಿ ರಲು, ಅಂಥವನನ್ನು ಬಿಟ್ಟು ನೀವು ಅನ್ಯ ದೇವತೆಯನ್ನು ಆರಾಧಿಸುವಿರಲ್ಲ! ಇದಕ್ಕೆ ನಿಮಗೆ ಏನೆನ್ನಬೇಕು? ಸಕಲ ವಾಗ್ಜಾಲಗಳನ್ನು ಮಥಿಸಲಾಗಿ. ಸಕಲ ಶಾಸ್ತ್ರಗಳನ್ನು

ನಿವಾರಿಸಲಾಗಿ ಕಟ್ಟಕಡೆಗೆ ಸರ್ವೇಶ್ವರನಾದ ಶ್ರೀ ಹರಿಯೊಬ್ಬನೇ ಸೇವ್ಯನೆಂಬದು ಸಿದ್ಧವಾಗಿರಲು, ಅಂಥ ಸ್ವಯಂಪ್ರಕಾಶನಾದ ಶ್ರೀನಿವಾಸನನ್ನೇ ನೀವು ಮರೆತುಬಿಟ್ಟಿ ರಲ್ಲ; ವೇದ, ರಾಮಾಯಣ, ಪುರಾಣ, ಭಾರತಾದಿ ಗ್ರಂಥ ಇವುಗಳ ಆದಿಯಲ್ಲಿಯೂ, ಮಧ್ಯದಲ್ಲಿಯೂ, ಅಂತ್ಯದಲ್ಲಿಯೂ ಸಕಲ ಫಲದಾತೃವಾದ ಶ್ರೀ ಹರಿಯೊಬ್ಬನೇ ಧ್ಯೇಯನಾಗಿರುವನೆಂಬದನ್ನು ನೀವು ಮರೆತಿರುವಿರೋ? ಅನಂತ ಕಲ್ಯಾಣ ಗುಣಾಭಿರಾಮನಾದ ಈ ಅಚ್ಯುತನಿಗೆ ಸಮಾನರಾದ ದೇವತೆಗಳೂ, ಅಪೌರುಷೇಯಗಳಾದ ವೇದ ಗಳಿಗೆ ಸಮಾನವಾದ ಶಾಸ್ತ್ರವೂ ಇಲ್ಲವೇ ಇಲ್ಲವೆಂಬದನ್ನು ನಾನು ಅತ್ಯಂತ ಆಭಿಮಾನದಿಂದ ಹೇಳುವೆನು- ನಾನು ಹೇಳುವ ಈ ಮಾತು ಪುನಃ ಪುನಃ ಸತ್ಯವಾಗಿರುವದೆಂಬದನ್ನು ನೀವು ಪೂರ್ಣವಾಗಿ ಲಕ್ಷದಲ್ಲಿಡಿರಿ. ಮುರವೈರಿಯಾದ ಮುಕುಂದನ ಹೊರತು ಸ್ವರ್ಗಮೋಕ್ಷಾದಿ ಪದಗಳನ್ನು ಒದಗಿಸಿಕೊಡುವ ಯೋಗ್ಯತೆಯು ಅನ್ಯಯಾವ ದೇವತೆಗಳಲ್ಲಿಯೂ ಇಲ್ಲದ್ದರಿಂದ, ಸುಖೇಚ್ಛುಗಳಾದ ಸದ್ಭಕ್ತರು ಶಂಖ ಚಕ್ರ ಪೀತಾಂಬರಧಾರಿಯಾದ ಆ ದೈತ್ಯಾರಿಯ ದಿವ್ಯಪಾದಾರವಿಂದಗಳನ್ನೇ ಸರ್ವಕಾಲದಲ್ಲಿ ಸೇವಿಸಬೇಕು. ಮುಕ್ತಿಪ್ರದವಾದ ಮುರಹರನ ಪಾದಾರವಿಂದವನ್ನು ಬಿಟ್ಟು ಯಾವ ಮಂದಮತಿಯು ಅಲ್ಪಯೋಗ್ಯತೆಯ ಅನ್ಯ ದೇವತೆಯನ್ನು ಆರಾಧಿಸುವನೋ, ಅವನು ದುಃಖಮಯವಾದ ಈ ಸಂಸಾರಚಕ್ರದಲ್ಲಿ ಪುನಃ ಪುನಃ ಪ್ರವೇಶಿಸುವನು. ಪರಮೋತ್ಕೃಷ್ಟನೂ, ಪರಾತ್ಪರನೂ, ಪರಮೋದಾರನೂ ಆದ ಪುಂಡರೀಕಾಕ್ಷನನ್ನು ಪರಮಭಕ್ತಿಯಿಂದ ಭಜಿಸಿದ ಭಕ್ತನು ಆ ಭಗವಂತನ ಕೃಪೆಯಿಂದ ತ್ರಿಭುವನ ಪೂಜ್ಯನಾಗುವನೆಂಬದನ್ನು ನೀವು ಮರೆಯಬೇಡಿರಿ- ಧರ್ಮಾರ್ಥ–ಕಾಮ–ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳನ್ನು ಅಲ್ಪಸೇವೆಯಿಂದ ಅಲ್ಪ ಕಾಲದಲ್ಲಿಯೇ ಒದಗಿಸಿಕೊಡುವ ದೇವಾಧಿದೇವ ಭಗವಾನ್ ಶ್ರೀ ವಾಸುದೇವನನ್ನು ಮರೆತು ಅನ್ಯರನ್ನು ಆರಾಧಿಸುವ ಮೂಢರು ಲೋಕದಲ್ಲಿ ನಿಂದ್ಯರಾಗುವರಲ್ಲದೆ, ವೇದಹೀನರಾದ ದ್ವಿಜಾಧಮರಿಗಿದ್ದಂತೆ ಇವರಿಗೆ ಶಾಸ್ತ್ರತಃ ಬಹಿಷ್ಕಾರ್ಯತ್ವವೂ ಇರುವದು.

ಹೀಗೆ ವ್ಯಾಸರು ಅತ್ಯಂತ ಆಢ್ಯತೆಯಿಂದ ಅಸ್ಖಲಿತವಾಗಿ ಭಾಷಣ ಮಾಡುವದನ್ನು ಕೇಳಿ ನೈಮಿಷಾರಣ್ಯವಾಸಿಗಳಾದ ಋಷಿಗಳು ಚಕಿತರಾಗುವರು- ಭೀತಿಯಿಂದ ಅವರ ಹೃದಯವು ಒಂದೇ ಸವನೆ ಕಂಪಿಸಹತ್ತುವದು. ಆಗ ಅವರು ನಯ ಭಯದಿಂದ ವ್ಯಾಸರನ್ನು ಕುರಿತು—ಋಷೀಶ್ವರಾ, ಸಕಲಶಾಸ್ತ್ರ ಪಾರಂಗತನಾದ ನಿನ್ನ ಗ್ರಂಥಗಳು ನಮಗೆ ಮಾನ್ಯವಿದ್ದಂತೆ ನೀನೂ ನಮಗೆ ಮಾನ್ಯನಾಗಿರುವೆ; ಯಾಕಂದರೆ ವೇದ ಧರ್ಮಗಳನ್ನೂ, ಶಾಸ್ತ್ರಧರ್ಮಗಳನ್ನೂ, ಅಷ್ಟಾದಶಪುರಾಣಗಳನ್ನೂ, ಮಹಾಭಾರತವನ್ನೂ ರಚಿಸಿದ ನಿನ್ನ ಯೋಗ್ಯತೆಯು ಸಾಧಾರಣವಾದದ್ದಲ್ಲ. ವೇದಾರ್ಥಸಾರ ಸರ್ವಸ್ವಗಳಾದ ಬ್ರಹ್ಮಸೂತ್ರಗಳನ್ನು ರಚಿಸಿ ಲೋಕೋಪಕಾರಮಾಡಿದ ತತ್ವಜ್ಞ ಮಹಾಮುನಿಯು ನಿನ್ನ ಹೊರತು ಅನ್ಯರಾರಿರುವರು ? ಹೀಗಿದ್ದು, ನೀನು ನಮ್ಮನ್ನು ಬೆದರಿಸುವದಕ್ಕಾಗಿ ಮೇಲಿಂದ ಮೇಲೆ ಬೆರಳು ನೆವರಿ ಹರಿಸರ್ವೋತ್ತಮತ್ವವನ್ನು ಹೇಳುವೆಯಲ್ಲ? ಅಜ್ಞಜನೋಚಿತವಾದ ಈ ದೈನ್ಯತ

ಬುದ್ಧಿಯು ತತ್ವಜ್ಞನಾದ ನಿನಗೆ ಉಚಿತವಲ್ಲವೆಂಬದನ್ನು ನೀನು ಪೂರ್ಣ ಲಕ್ಷದಲ್ಲಿಡು. ಮತ್ತು ನೀನು ಹೀಗೆ ಬಾಯಿಂದ ಹೇಳಿದಮಾತ್ರದಿಂದ ನಮಗೆ ಈ ಮಾತಿನ ವಿಶ್ವಾಸವು ಎಂದಿಗೂ ಆಗುವ ಹಾಗಿಲ್ಲ; ಆದ್ದರಿಂದ ನಾವೆಲ್ಲರೂ ಒಪ್ಪಿಕೊಳ್ಳುವಂತೆ ನಿನ್ನ ಪ್ರತಿಜ್ಞಾ ವಚನವು ಸತ್ಯವಾಗಬೇಕಾಗಿದ್ದರೆ, ನೀನು ಇಲ್ಲಿಂದ ನೆಟ್ಟಗೆ ವಿಶ್ವೇಶ್ವರನ ಆವಾಸಸ್ಥಾನ ವಾದ ವಾರಾಣಸೀ ಕ್ಷೇತ್ರಕ್ಕೆ ಹೋಗು. ಅಲ್ಲಿ ನೀನು ನಮ್ಮ ಮುಂದೆ ಈಗ ಹರಿಸರ್ವೋ ತ್ತಮತ್ವವನ್ನು ಪ್ರಸ್ಥಾಪಿಸಿದಂತೆ ವಿಶ್ವೇಶ್ವರನ ಸಾನ್ನಿಧ್ಯದಲ್ಲಿಯೂ ಪ್ರಸ್ಥಾಪಿಸಬೇಕು; ಆನಂದವನವಿಹಾರನಾದ ಆ ಭಗವಾನ್ ಸದಾಶಿವನಿಗೆ ನಿನ್ನ ಈ ವಚನವು ಒಪ್ಪಿಗೆಯಾದರೆ ಮಾತ್ರ ನಾವೆಲ್ಲರೂ ನಿರ್ವಿವಾದವಾಗಿ ಇದಕ್ಕೆ ಒಪ್ಪಿಕೊಳ್ಳುವೆವು. ಹೀಗೆ ಮಾಡದೆ ಸುಮ್ಮನೆ ನೀನು ವಾಕ್ ಚಾಪಲ್ಯದಿಂದ ನಮ್ಮನ್ನು ಬೆದರಿಸ ಬಂದರೆ ನಾವು ಸರ್ವಥಾ ಒಪ್ಪಲಾರೆವು. ಇನ್ನು ಆ ಸ್ಥಳದಲ್ಲಿ ಪಕ್ಷಪಾತವಿರಬಹುದೆಂಬ ಶಂಕೆಯು ನಿನ್ನನ್ನು ಬಾಧಿ ಸಬಹುದು; ಆದ್ದರೆ ಅತ್ಯಂತಪುಣ್ಯತರನಾದ ಆ ಕ್ಷೇತ್ರವು ಜನ್ಮಮರಣ–ಸುಖದುಃಖ–ಸತ್ಯಾ ಸತ್ಯಾದಿ ಗುಣದೋಷ ಸಮ್ಮಿಶ್ರಣದ ಈ ಕರ್ಮ ಭೂಮಿಗೆ ಒಂದು ಗೋದಿಯ ಕಾಳಷ್ಟು ಬಿಟ್ಟಿರುವದರಿಂದಲೂ, ಯಾವಯುಗಧರ್ಮಗಳೂ ಅಲ್ಲಿ ಇಲ್ಲದ್ದರಿಂದಲೂ, ಸರ್ವ ದರ್ಶನನೂ, ಸತ್ಪಕ್ಷಪಾತಿಯೂ ಆದ ಆ ಸದಾಶಿವನ ಮುಂದೆ ನಿನ್ನ ಈ ವಚನದ ಸತ್ಯವಿ ಥ್ಯಾತ್ವದನಿರ್ಣಯವು ಸ್ಪಷ್ಟವಾಗಿ ಆಗುವದಾದ್ದರಿಂದ ನೀನುಈಗಲೇ ಇಲ್ಲಿಂದ ಹೊರ ಟುಹೋಗು.

ಹೀಗೆ ಶಿವಭಕ್ತಶಿಖಾಮಣಿಗಳಾದ ಶೌನಕಾದಿಕರು ಸ್ಪಷ್ಟವಾಗಿ ನುಡಿದು ಸುಮ್ಮ ನಾಗಲು, ಪರಾಶರ ಪುತ್ರನಾದ ವ್ಯಾಸನು ತುಸು ಸಿಟ್ಟಿಗೆದ್ದು, ಈ ಮಾತಿನ ನಿಷ್ಕರ್ಷ ವನ್ನು ಮಾಡಿಯೇ ತೀರುವೆನೆಂದು ನಿರ್ಧರಿಸಿ ಹಾಗೆಯೇ ಹಿಂತಿರುಗಿ ಶಿಷ್ಯರೊಡನೆ ಕಾಶೀಕ್ಷೇತ್ರಕ್ಕೆ ಬರುವನು. ಅಲ್ಲಿ ಆವನು ಭಾಗೀರಥಿಯ ಪುಣ್ಯೋದಕದಲ್ಲಿ ಸ್ನಾನಮಾಡಿ ಎಲ್ಲ ವೈಷ್ಣವರೊಂದಿಗೆ ಪಂಚರಾತ್ರಾಗಮವಿಧಿಯಿಂದ ಬಿಂದುಮಾಧವನ ಭವ್ಯತರವಾದ ಮೂರ್ತಿಯನ್ನು ಭಕ್ತಿಯಿಂದ ಪೂಜಿಸಿ, ತೀರ್ಥಪ್ರಸಾದವನ್ನು ತಕೊಂಡಮೇಲೆ ತನ್ನ ಪ್ರತಿಜ್ಞಾವಚನದ ಸತ್ಯತೆಗಾಗಿ ವಿಶ್ವೇಶ್ವರನ ದೇವಸ್ಥಾನಕ್ಕೆ ಹೊರಡುವನು. ಆಗ ಅವನ ಸುತ್ತಲೂ ಶಂಖ, ತುತೂರಿ ಮೊದಲಾದ ಮಂಗಲವಾದ್ಯಗಳು ಮೊಳಗಹತ್ತುವವು. ತುಲಸೀ ಮಾಲೆಗಳನ್ನು ಧರಿಸಿದ ಎಷ್ಟೋಜನ ವೀರ ವೈಷ್ಣವರು ಅವನ ಶಿಷ್ಯರೊಡನೆ ಶ್ರೀಹ ರಿಯ ನಾಮಗಳನ್ನು ಉದ್ಘೋಷಿಸಹತ್ತುವರು. ಆಗ ವ್ಯಾಸನು ಆನಂದಭರದಲ್ಲಿ ಕೈಗಳ ನ್ನೆತ್ತಿ ಉಚ್ಚಸ್ವರದಿಂದ—“ಜಯ ವಿಷ್ಣೋ ಹೃಷೀಕೇಶ ಗೋವಿಂದ ಮಧುಸೂದನ । ಅಚ್ಯು ತಾನಂತ ವೈಕುಂಠ ಮಾಧವೋಪೇಂದ್ರ ಕೇಶವ ॥ ತ್ರಿವಿಕ್ರಮ ಗದಾಪಾಣೇ ಶಾರ್ಙ್ಗಪಾಣೇ ಜ ನಾರ್ದನ । ಶ್ರೀವತ್ಸವಕ್ಷಃ ಶ್ರೀಕಾಂತ ಪೀತಾಂಬರ ಮುರಾಂತಕ ॥ ಕೈಟಭಾರೇ ಬಲಿಧ್ವಂಸಿನ್ ಕಂ ಸಾರೇ ಕೇಶಿಸೂದನ, ನಾರಾಯಣಾಸುರರಿಪೋ ಕೃಷ್ಣ ಶೌರೇ ಚತುರ್ಭುಜ ॥ ದೇವಕೀಹೃದ ಯಾನಂದ ಯಶೋದಾನಂದವರ್ಧನ ॥ ಪುಂಡರೀಕಾಕ್ಷ ದೈತ್ಯಾರೇ ದಾಮೋದರ ಬಲಿಪ್ರಿಯ ॥ ಗೋಪೀಪತೇ ಗುಣಾತೀತ ಗರುಡಧ್ವಜಸು ಗೋತ್ರಭೃತ್ ॥ ಜಯಚಾಣೂರಮಥನ ಜಯತ್ರೈ

ಲೋಕ್ಯರಕ್ಷಣ ॥ ಜಯಾನಘ ಜಯಾನಂದ ಜಯನೀಲೋತ್ಪಲದ್ಯುತೇ ॥ ಕೌಸ್ತುಭೋದ್ಭಾಸಿತೋರಸ್ಕ ಪೂತನಾಧಾತುಶೋಷಣ ॥ ರಕ್ಷರಕ್ಷ ಜಗದ್ರಕ್ಷದ್ಯುಮಣೇ ನರಕಹಾರಕ॥"

ಎಂಬಿವೇ ಮೊದಲಾದ ನಾಮಗಳಿಂದ ಭಗವಂತನನ್ನು ಸ್ತುತಿಸುತ್ತ ಎಲ್ಲರೊಂದಿಗೆ ವಿಶ್ವೇಶ್ವರನ ದೇವಾಗಾರಕ್ಕೆ ಬಂದು ಜ್ಞಾನವಾಪಿಯ ಮುಂದುಗಡೆಯ ಬೈಲಿನಲ್ಲಿ ವೀಣಾಪಾಣಿಯಾಗಿ ಒಂದೇಸವನೆ ಕುಣಿಯಹತ್ತುವನು- ಹೀಗೆ ಬಹಳಹೊತ್ತು ಕುಣಿದು ಕುಣಿದುದಣಿದಮೇಲೆ ಮತ್ತೆ ಅವನು ಅಭಿಮಾನದಿಂದ ತನ್ನ ಬಲಭುಜವನ್ನು ಮೇಲಕ್ಕೆನೆಗಹಿ ಮೊದಲಿನಂತೆ "परिनिर्मथ्यवाग्जालंसुनिश्चित्यासकृद्वहु । इदमेकंपरिज्ञातं सेव्यःसर्वेश्वरोहरिः" ಯೆಂಬಿವೇಮೊದಲಾದ ಹರಿಸರ್ವೋತ್ತಮತ್ವಪ್ರದಿಪಾದಕ ಪದ್ಯಗಳನ್ನು ಸಂಗೀತದ ಉಚ್ಚಸ್ವರದಲ್ಲಿ ವಿಶ್ವೇಶ್ವರನ ಗರ್ಭಾಲಯದವರೆಗೆ ಕೇಳುವಂತೆ ಪಠಿಸಹತ್ತುವನು. ಹೀಗೆ ವೇದವ್ಯಾಸನು ಸ್ವಾತ್ಮ ಪ್ರತಿಜ್ಞಾಪ್ರಬೋಧನಪರ ಪದ್ಯಗಳನ್ನು ಅತ್ಯಂತ ಅಭಿಮಾನದಿಂದ ಪಠಿಸಹತ್ತಲು, ಶಿಲಾದಪುತ್ರನಾದ ನಂದಿಕೇಶ್ವರನಿಗೆ ಇದು ಸಹನವಾಗುವದಿಲ್ಲ; ಆಗ ಅವನು ತತ್‌ಕ್ಷಣದಲ್ಲಿ ಪ್ರಕಟನಾಗಿ ವ್ಯಾಸನು ಎತ್ತಿದ ಬಲಭುಜವನ್ನು ಮೇಲಿಂದಮೇಲೆಯೇ ಗಟ್ಟಿಯಾಗಿ ಹಿಡಿದುಬಿಡುವನು. ಅಷ್ಟರಲ್ಲಿ ಸದಾಶಿವನ ಕ್ಷೋಭದಿಂದ ವ್ಯಾಸನವಾಣಿಯೂ ಸ್ತಂಭಿತವಾಗುವದು. ಹೀಗೆ ಒಂದೇಕಾಲಕ್ಕೆ ವಾಣಿಯ ಹಾಗು ಭುಜದಸ್ತಂಭನವಾದದ್ದನ್ನು ನೋಡಿ ವ್ಯಾಸನು ಗಾಬರಿಗೊಂಡು ಕಿಂಕರ್ತವ್ಯತಾಮೂಢನಾಗಿ ಸುಮ್ಮನೆ ನಿಂತುಬಿಡುವನು. ಆಗ ಗದಾಪಾಣಿಯಾದ ಶ್ರೀ ಹರಿಯು ಗುಪ್ತವಾಗಿ ಆ ಸ್ಥಳಕ್ಕೆ ಬಂದು ವ್ಯಾಸನನ್ನು ಕುರಿತು ಅಸಮಾಧಾನದಿಂದ— ಎಲೈ ಸತ್ಯವತೀಸುತಾ ವ್ಯಾಸಾ, ಇಂದು ನಿನ್ನಿಂದ ದೊಡ್ಡ ಅಪರಾಧವಾಯಿತು- ನೀನು ಮಾಡಿದ್ದ ಈ ಅಪರಾಧದಿಂದ ನನಗೂ ನನ್ನ ಭಕ್ತರಿಗೂ ಸಹ ಭೀತಿಯುಂಟಾಗಿದೆ. ಎಲಾ, ಸಾಕ್ಷಾತ್ ವಿಶ್ವೇಶ್ವರನ ಬಳಿಯಲ್ಲಿ ನೀನು ಹೀಗೆ ಶಿವಭಕ್ತರನ್ನು ನಿಂದಿಸಬಹುದೆ? ಸಚ್ಚಿದಾನಂದಘನನಾದ ಈ ಸದಾಶಿವನೊರ್ವನೇ ಸರ್ವೋತ್ತಮನಾಗಿರಲು, ಇವನಿಗಿಂತ ಹೆಚ್ಚಿನ ದೇವತೆಗಳು ಅನ್ಯರಾರಿರುವರು? ಯಾವ ಸರ್ವೇಶ್ವರನ ಅನುಗ್ರಹದಿಂದ ನಾನು ತ್ರೈಲೋಕ್ಯರಕ್ಷಾಸಾಮರ್ಥ್ಯವನ್ನು ಹೊಂದಿ ಲೋಕಪಾಲಕನೆಂಬ ಗೌರವದ ಹೆಸರು ಪಡೆದಿರುವೆನೋ, ಯಾವ ಕಾಲಾಂತಕನ ವರಪ್ರಸಾದದಿಂದ ನನಗೆ ದುಷ್ಟಶಾಸನ ಪಟುವಾದ ಈ ಸುದರ್ಶನದ ಲಾಭವಾಯಿತೋ, ಯಾವ ಮಂಗಲಪ್ರದನ ಆಶೀರ್ವಾದದಿಂದ ಲೋಕಸುಂದರಿಯಾದ ಮಹಾಲಕ್ಷ್ಮಿಯು ನನಗೆ ಪ್ರಾಪ್ತಳಾದಳೋ, ಯಾವ ಭಗವಂತನ ಭಕ್ತಿಯೋಗದಿಂದ ನನಗೆ ಷಡ್ಗುಣೈಶ್ವರ್ಯವು ಸಿದ್ಧಿಸಿತೋ ಅಂಥ ಭಗವಾನ್ ಶಂಕರನನ್ನು ನೀನು ನಿಂದಿಸಿದೆಯಲ್ಲ, ಇದರಿಂದ ನನಗೆ ಸಂತೋಷವಾಗುವದರ ಬದಲು ವಿಶೇಷತಃ ಸಂತಾಪವಾಗುತ್ತದೆ. ಆದ್ದರಿಂದ ಮಹರ್ಷೇ, ಇನ್ನಾದರೂ ನನಗೆ ಕಲ್ಯಾಣವಾಗಬೇಕೆಂಬ ಇಚ್ಛೆಯು ನಿನ್ನ ಮನಸ್ಸಿನಲ್ಲಿದ್ದರೆ, ಕರುಣಾಳುವಾದ ಈ ಸದಾಶಿವನಿಗೆ ಶರಣುಹೋಗಿ ಶಿವಸರ್ವೋತ್ತಮಪರವಾದ ಪದ್ಯಗಳಿಂದ ಪರಮಭಕ್ತಿಯುತನಾಗಿ ಈತನನ್ನು ಸ್ತುತಿಸು. ಇನ್ನುಮುಂದೆ ನೀನು ಹೀಗೆ ಶಿವನನ್ನು—ಹಾಗು ಶಿವಭಕ್ತರನ್ನು ಸರ್ವಥಾ ನಿಂದಿಸ

ಬೇಡ''ೆಂದು ಬೋಧಿಸಲು, ವ್ಯಾಸರು ಕೈಸನ್ನೆಯಿಂದ ಶ್ರೀಪತಿಯನ್ನು ಕುರಿತು—ದೇವಾ, ನಂದಿಕೇಶ್ವರನಿಂದ ನನ್ನ ಭುಜವು ಸ್ತಂಭಿತವಾದಂತೆ ನನ್ನ ಈ ವಾಣಿಯೂ ಸ್ತಂಭಿತವಾಗಿರುವದರಿಂದ ಭಗವಾನ್ ಶಂಕರನನ್ನು ನಾನು ಹೇಗೆ ಸ್ತುತಿಸಲಿ? ಆದ್ದರಿಂದ ದಯಾಳೋ, ಈಗಲೇ ನೀನು ನಿನ್ನ ಅಮೃತಹಸ್ತದಿಂದ ನನ್ನ ಕಂಠವನ್ನು ಸ್ಪರ್ಶಿಸಿ ಭಗವಾನ್ ಶಂಕರನನ್ನು ಸ್ತುತಿಸಬರುವಂತೆ ನನ್ನ ಮೇಲೆ ಅನುಗ್ರಹಿಸೆ"ಂದು ಬೇಡಿಕೊಳ್ಳಲು, ಭಗವಂತನು ಹಾಗೆಯೇ ಆಗಲೆಂದು ಅವನ ಕಂಠವನ್ನು ಸ್ಪರ್ಶಿಸಿ ಅಲ್ಲಿಯೇ ಗುಪ್ತನಾಗುವನು.

ಇತ್ತ ಶ್ರೀ ಹರಿಯ ಕರಸ್ಪರ್ಶದಿಂದ ಸತ್ಯವತೀ ಸುತನಾದ ವ್ಯಾಸನಿಗೆ ವಾಕ್ ಸಿದ್ಧಿಯಾಗಲು, ಅವನು ಕೃತಾಪರಾಧಕ್ಕಾಗಿ ಪಶ್ಚಾತ್ತಾಪಪಟ್ಟು ತನ್ನ ಎರಡೂ ಕೈಗಳನ್ನು ಮೇಲಕ್ಕೆ ನೆಗಹಿ ಅತ್ಯಂತ ಭಕ್ತಿಯಿಂದ ವಿಶ್ವೇಶ್ವರನನ್ನು ಕುರಿತು—

ಏಕೋರುದ್ರೋ ನ ದ್ವಿತೀಯಾಯ ತಸ್ಥೇ ।
ತದ್ಬ್ರಹ್ಮೈಕಂ ನೇಹ ನಾನಾಸ್ತಿ ಕಿಂಚಿತ್ ॥
ಯದ್ಯಸ್ತ್ಯನ್ಯಃಕೋಪಿವಾ ಕುತ್ರಚಿದ್ವಾ ।
ವ್ಯಾಚಷ್ಟಾಂತತ್ ಯಸ್ಯ ಶಕ್ತಿಃ ಸಮಗ್ರಾ ॥ ೧ ॥
ಯಃಕ್ಷೀರಾಬ್ಧೇ ರ್ಮಂದರಾಘಾತ ಜಾತೋ ।
ಜ್ವಾಲಾಮಾಲಃ ಕಾಲಕೂಟೋತಿ ಭೀಮಃ ॥
ತಂ ಸೋಢುಂ ಕೋಪುರೋ ಭೂನ್ಮಹೇಶಾತ್ ।
ಯಜ್ವಾಲಾಭಿಃಕೃಷ್ಣತಾಮಾಪ ವಿಷ್ಣುಃ ॥ ೨ ॥
ಯದ್ಬಾಣೋಭೂತ್ ಶ್ರೀಪತಿರ್ಯಸ್ಯ ಯಂತಾ ।
ಲೋಕೇಶೋ ಯಸ್ಸ್ಯಂದನಂ ಭೂಃಸಮಸ್ತಾ ॥
ವಾಜಾ ವೇದಾ ಯಸ್ಯವೈ ಕೇಷುಪಾತಾತ್ ।
ದಗ್ಧಾಗ್ರಾಮಾಸ್ತ್ರೈ ಪುರಾಸ್ತ್ವಸ್ಸಮುಃಕಃ ॥ ೩ ॥
ಯಂ ಕಂದರ್ಪೋ ವೀಕ್ಷ್ಯಮಾಣಃ ಸಮಾನಂ ।
ದೇವೈರನ್ಯೈರ್ಭಸ್ಮಜಾತಃ ಸ್ವಯಂ ಹಿ ॥
ಪೌಷ್ಪೈರ್ಬಾಣೈಃಶರ್ವ ವಿಶ್ವೈಕ ಜೇತಾ ।
ಕೋವಾ ಸ್ತುತ್ಯಃಕಾಮಜೇತುಸ್ತ್ವತೋನ್ಯಃ ॥ ೪ ॥
ಯಂ ವೈ ವೇದೋ ವೇದ ನೋ ನೈವ ವಿಷ್ಣುಃ ।
ನೋ ವೈ ವೇಧಾ ನೋ ಮನೋ ನೈವ ವಾಣೀ ॥
ತಂ ದೇವೇಶಂ ಮಾದೃಶಃ ಕೋಲ್ಪಮೇಧಾ ।
ಯಾಥಾರ್ಥ್ಯಾದ್ವೈ ವೇತ್ಯಹೋ ವಿಶ್ವನಾಥಂ ॥ ೫ ॥
ಯಸ್ಮಿನ್ ಸರ್ವಂ ಯಸ್ತು ಸರ್ವತ್ರ ಸರ್ವೋ ।
ಯೋ ವೈ ಹರ್ತಾ ಯೋऽವಿತಾ ಯೋ ವಿಧಾತಾ ॥
ನೋ ಯಸ್ಯಾದಿಃ ಯಃಸಮಸ್ತಾದಿರೇಕೋ ।

ನೋ ಯಸ್ಯಾಂತೋ ಯೋಂತಕೃತ್ತ್ವಂ ನತೋಸ್ಮಿ ॥ ೬ ॥
ಯಸ್ಯೋಪಾಸ್ಯಾ ವಾಜಿಮೇಧೇನ ತುಲ್ಯಾ ।
ಯಸ್ಯಾನತ್ಯಾ ಚೈಕಯಾಽಲ್ಪೇಂದ್ರ ಲಕ್ಷ್ಮೀಃ ॥
ಯಸ್ಯಸ್ತುತ್ಯಾ ಲಭ್ಯತೇ ಸತ್ಯಲೋಕಃ ।
ತಸ್ಯಾಪ್ಯಂತೇ ಮೋಕ್ಷ ಲಕ್ಷ್ಮೀರದೂರಾ ॥ ೭ ॥
ನಾನ್ಯಂ ದೇವಂ ವೇದ್ಮ್ಯಹಂ ಶ್ರೀ ಮಹೇಶಾತ್ ।
ನಾನ್ಯಂ ದೇವಂ ಸ್ತೌಮಿ ಶಂಭೋರ್ಋತೇಹಂ ॥
ನಾನ್ಯಂ ದೇವಂ ವಾ ನಮಾಮಿ ತ್ರಿನೇತ್ರಾತ್ ।
ಸತ್ಯಂ ಸತ್ಯಂ ಸತ್ಯಮೇತನ್ಮೃಷಾ ನ ॥ ೮ ॥



ವ್ಯಾಸಾಷ್ಟಕ—ದೇವಾಧಿದೇವಾ ಶಂಕರಾ, ಸಕಲ ಪ್ರಾಣಿಗಳ ಕರ್ಮ ಫಲ ಪ್ರವರ್ತಕನು ನೀನುಒಬ್ಬನೇ ಒಬ್ಬನಾಗಿರಲು, ನಿನ್ನ ಹೊರತು ನನಗೆ ಅನ್ಯಯಾವ ಪದಾರ್ಥಗಳೂ ತೋರುವದಿಲ್ಲವು. ಅಜ್ಞಾನ ಮೂಲಕ ಒಂದು ಪಕ್ಷದಲ್ಲಿ ತೋರಿದರೂ, ಅವೆಲ್ಲ ನಿನ್ನ ಶಕ್ತಿಯ ಕಾರ್ಯಗಳೇ ಆಗಿರುವದರಿಂದ ನಿನ್ನ ಸ್ವರೂಪದಿಂದ ಅವು ಭಿನ್ನವಾಗಿರುವದಿಲ್ಲ. ಹೀಗೆ, ನೀನು ಚರಾಚರವಾದ ಈ ವಿಶ್ವದ ಅಂತರ್ಬಾಹ್ಯದಲ್ಲಿ ಸಮವಾಗಿ ತುಂಬಿಕೊಂಡಿರುವದರಿಂದ ವಿಶ್ವಂಭರನೂ, ವಿಶ್ವೋದ್ಧಾರಕನೂ ಆಗಿರುವೆ- ದೇವಾ, ನೀನು ವಿಶ್ವೋದ್ಧಾರಕನೆಂಬುದಕ್ಕೆ ವಿಶ್ವಾತಿಕವಾದ ನಿನ್ನ ಕೃತಿಗಳೇ ಕಾರಣವಾಗಿರುವವು. ಹಿಂದಕ್ಕೆ ದೇವದೈತ್ಯರು ನಿನ್ನಿಂದ ಕೂಡಿ ಮಂದರಪರ್ವತವೆಂಬ ಮಂಥನ ದಂಡದಿಂದ ಕ್ಷೀರಾಬ್ಧಿಯನ್ನು ಮಥಿಸಿದಾಗ ಹೊರಟ ಆ ಭಯಂಕರವಾದ ಕಾಲಕೂಟ ವಿಷದ ತಾಪವನ್ನು ನಿನ್ನ ಹೊರತು ಅನ್ಯ ಯಾವ ದೇವತೆಗಳು ಸಹಿಸಿಕೊಂಡರು ? ಅಸಹ್ಯವಾದ ಆ ವಿಷದ ಉಷ್ಣತೆಯನ್ನು ಸಹಿಸಲಾರದೆ ಸಕಲ ದೇವತೆಗಳು ಹಾದಿ ಸಿಕ್ಕಕಡೆಗೆ ಓಡಹತ್ತಲು, ಶ್ರೀ ಹರಿಯು ಅಭಿಮಾನದ ಆಧ್ಯತೆಯಿಂದ ಮುಂದುವರೆದಾಗ, ಅತ್ಯಂತಜಾಜ್ವಲ್ಯಮಾನವಾದ ಆ ವಿಷ ಜ್ವಾಲೆಯ ಹೊಯ್ತದಿಂದ ಈವೊತ್ತಿಗೂ ಕೃಷ್ಣತ್ವವನ್ನು ಹೊಂದಿರುವನು. ಪರಮಾತ್ಮನ್, ದೇವತಾಸಾರ್ವಭೌಮನಾದ ನಿನ್ನ ಗುಣಗಳನ್ನು ನಾನು ಎಷ್ಟೆಂದು ವರ್ಣಿಸಲಿ ? ತ್ರಿಭುವನ ವಿಜಯಿಯಾದ ಆ ಪುಷ್ಪ ಧನ್ವನನ್ನು ಧಗಧಗಿಸುವ ನೇತ್ರಾಗ್ನಿಯಿಂದ ಸಕಲ ದೇವತೆಗಳು ನೋಡ ನೋಡುವಷ್ಟರಲ್ಲಿ ಸುಟ್ಟು ಬೂದೆಗೊಳಿಸಿದಾಗ ವ್ಯಕ್ತವಾದ ನಿನ್ನ ಅಸದೃಶ ವೈರಾಗ್ಯವನ್ನೂ, ಶ್ರೀ ಹರಿಯು ಬಾಣವಾಗಿ, ಭೂಮಿಯು ರಥವಾಗಿ, ಬ್ರಹ್ಮನು ಸಾರಥಿಯಾಗಿ, ವೇದಗಳು ರಥಾಶ್ವಗಳಾಗಿ ತ್ರಿಪುರಾಸುರ ಸಂಹಾರದೀಕ್ಷೆಯನ್ನು ವಹಿಸಿದಾಗ ಕಂಡು ಬಂದ ನಿನ್ನ ಅಸಮ ಭುಜ ಪರಾಕ್ರಮವನ್ನೂ, ನೋಡಿದರೆ ವೈರಾಗ್ಯ ವಿಕ್ರಮಗಳಲ್ಲಿ ನಿನ್ನನ್ನು ಸರಿಗಟ್ಟುವ ಯೋಗ್ಯತೆಯು ಅನ್ಯ ಯಾವ ದೇವತೆಗಳಲ್ಲಿಯೂ ಇಲ್ಲವೆಂಬದು ಸ್ಪಷ್ಟವಾಗುವದು. ಇದರಂತೆಯೇ ನೀನು ಅನಂತ ಕಲ್ಯಾಣ ಗುಣಗಣಗಳಿಂದ ಪರಿಪೂರ್ಣನಾಗಿ ಅಮೋಘವಾದ ನಿನ್ನ ಮಾಯೆಯಿಂದ ಯಾವಾಗಲೂ ಕ್ರೀಡಿಸುತ್ತಿರುವ

ಹೀಗೆ ನೀನು ಯೋಗಮಾಯಾಸಮಾವೃತನಾಗಿ ಸ್ವಾನಂದ ಸಾಮ್ರಾಜ್ಯದಲ್ಲಿ ಸಂಚರಿಸು ತಿರುವೆಯಾದ್ದರಿಂದಲೇ ನಿನ್ನ ಮಹಿಮೆಯು ವೇದಗಳಿಗೂ, ವಿಷ್ಣುವಿಗೂ, ಬ್ರಹ್ಮನಿಗೂ, ವಾಣಿಗೂ, ಮನಸ್ಸಿಗೂ ಸಹ ನಿಲುಕದೆ, ಈವೊತ್ತಿಗೂ ಹಾಗೆಯೇ ಉಳಿದಿರುವದು. ಹೀಗಿರಲು, ವಿಶ್ವಾಧಾರನೂ, ವಿಶ್ವಂಭರನೂ, ಅನಾದ್ಯಂತನೂ, ಅಪ್ರಮೇಯನೂ ಆದ ನಿನ್ನನ್ನು ಪಾಮರನಾದ ನಾನು ಏನೆಂದು ಸ್ತುತಿಸಲಿ! ದೇವಾ, ಯಾವಾತನ ಉಪಾಸನೆಯಿಂದ ಅಶ್ವಮೇಧ ಯಾಗದ ಮಹಾಫಲವು ಪ್ರಾಪ್ತವಾಗುವದೋ, ಯಾವಾತನ ನಮಸ್ಕಾರದಿಂದ ಅಖಂಡ ವೈಭವವು ಲಭಿಸುವದೋ, ಯಾವಾತನ ಸ್ತುತಿಯಿಂದ ಸತ್ಯಲೋಕದಶ್ರೇಷ್ಠಸುಖವು ಸಿದ್ಧಿಸುವದೋ ಅಂಥ ದಯಾಘನನಾದ ನಿನ್ನನ್ನು ನಾನು ಕೇವಲವಾಗಿ ವಂದಿಸುವೆನು. ಪರಮಾತ್ಮಾ, ಇಂದು ನಿನ್ನ ಕೃಪೆಯಿಂದ ನನ್ನ ಪೂರ್ವದ ಅಜ್ಞಾನವು ನಷ್ಟವಾಯಿತು- ಇನ್ನು ನಾನು ಸರ್ವೋತ್ತಮನಾದ ನಿನ್ನ ಹೊರತು ಅನ್ಯ ಯಾವ ದೇವತೆಗಳನ್ನೂ ಕಣ್ಣೆತ್ತಿ ನೋಡುವದಿಲ್ಲ; ಯಾವದೇವರನ್ನೂ ಸ್ತುತಿಸುವದಿಲ್ಲ; ಯಾವ ದೇವರನ್ನೂ ನಮಿಸುವದಿಲ್ಲ; ಸರ್ವದೇವಮಯನೂ, ಸರ್ವಾಧಾರನೂ, ಸರ್ವ ತಂತ್ರಸ್ವತಂತ್ರನೂ ನೀನೇಆಗಿರುವದರಿಂದ ನಿನ್ನಹೊರತು ನನಗೆ ಅನ್ಯ ಯಾವದೇವತೆಗಳೂ ಇಲ್ಲವು- ಇದು ಮೂರು ಮೂರು ಸಾರೆಯೂ ಸತ್ಯವು; ಸುಳ್ಳಲ್ಲ!

ಈಪ್ರಕಾರ ವೇದವ್ಯಾಸನು ಅತ್ಯಂತ ಲೀನಭಾವದಿಂದ ಭಗವಾನ್ ಶಂಕರನನ್ನು ಸ್ತುತಿಸಹತ್ತಲು, ಭಕ್ತಿಪ್ರಿಯನಾದ ಸದಾಶಿವನು ಸುಪ್ರಸನ್ನನಾಗಿ ಅವನ ಭುಜಸ್ತಂಭವನ್ನು ಕೆಳಗಿಳಿಸುವದಕ್ಕಾಗಿನಂದಿಕೇಶ್ವರನ ಅಂತರದಲ್ಲಿ ಪ್ರೇರಿಸುವನು. ಆಗ ಅವನು ಕೂಡಲೇ ತಾನು ಸ್ತಂಭಿಸಿದ ವ್ಯಾಸರ ಭುಜವನ್ನು ಕೆಳಗಿಳಿಸಿ ಮೃದುಹಾಸ್ಯದೊಂದಿಗೆ ಸಕಲ ಬ್ರಹ್ಮವೃಂದಕ್ಕೆ ನಮಸ್ಕರಿಸಿದಮೇಲೆ ಭಕ್ತಿಪರವಶನಾಗಿ ನಿಂತುಕೊಂಡಿದ್ದ ವ್ಯಾಸನನ್ನು ಕುರಿತು ನುಡಿಯುವನೆಂತೆಂದರೆ—ಎಲೈ ವ್ಯಾಸಮಹರ್ಷೆ, ಅಕಲಂಕವಾದ ನಿನ್ನ ಈ ಭಕ್ತಿಗಾಗಿ ಸದಾಶಿವನು ಸಂತುಷ್ಟನಾಧನು- ನೀನು ಮಾಡಿದ ಈ ಮಂಗಲಕರ ಸ್ತೋತ್ರವನ್ನು ಯಾವನು ಭಕ್ತಿಯಿಂದ ಪಠಿಸುವನೋ ಅವನಿಗೆ ಸದಾಶಿವನು ಸುಪ್ರಸನ್ನನಾಗಿ ಸಕಲ ಸಮೀಹಿತಾರ್ಥಗಳನ್ನು ಒದಗಿಸಿಕೊಡುವನು. ನಿನ್ನ ವಾಣಿಯಿಂದ ಹೊರಟ ಈ ಸ್ತೋತ್ರದ ಯೋಗ್ಯತೆಯು ಸಾಧಾರಣವಾದದ್ದಲ್ಲ; ಶಿವಸಾಮೀಪ್ಯವನ್ನುಂಟುಮಾಡಿ ಕೊಡುವಂಥಾದ್ದು, ಎಂದು ಹೇಳಲು, ವೇದವ್ಯಾಸರಿಗೆ ಬಹು ಸಮಾಧಾನವಾಗುವದು. ಅಂದಿನಿಂದಲೇ ಅವರು ಶಿವಭಕ್ತಿ ಪರಾಯಣರಾಗಿ, ಭಸ್ಮರುದ್ರಾಕ್ಷಾದಿ ಶೈವ ಚಿನ್ಹಗಳನ್ನು ಧರಿಸಿ, ನಿತ್ಯದಲ್ಲಿ ಶಿವಪಂಚಾಕ್ಷರೀ ಮಂತ್ರಪಠಣ ಪೂರ್ವಕವಾಗಿ ಲಿಂಗಾರಾಧನೆಗೆ ಪ್ರಾರಂಭಿಸುವರು. ಮುಂದೆ ಕೆಲಕಾಲದಮೇಲೆ ಅವರು. ತಾವು ವಾಸಿಸಿರುವ ಘಂಟಾಕರ್ಣವೆಂಬ ತೀರ್ಥದ ದಂಡೆಯಲ್ಲಿ ತಮ್ಮ ಹೆಸರಿನ ಒಂದು ಲಿಂಗವನ್ನು ಸ್ಥಾಪಿಸಿ, ತಾವು ವೈರಾಗ್ಯದಿಂದ ಕ್ಷೇತ್ರ ಸನ್ಯಾಸ ದೀಕ್ಷೆಯನ್ನು ವಹಿಸುವರು. ಮುಕ್ತಿಪ್ರದವಾದ ಆ ವಾರಾಣಸೀ ಕ್ಷೇತ್ರದಲ್ಲಿ ಇವರು ಎಂದಿಗೂ ಚಿರಂಜೀವಿಯಾಗಿ ವಾಸಿಸಿರುವರು- ಇವರು ವಾಸಿಸಿರುವ ಆ ಸ್ಥಳವು ವ್ಯಾಸಕಾಶಿಯೆಂಬ ನಾಮದಿಂದ ಸುಪ್ರಸಿದ್ಧ

ವಾಗಿರುವದು. ಇರಲಿ, ವಿವೇಕಶೀಲಾ, ಹೀಗೆ ಸ್ಕಂದನು ಅಗಸ್ತ್ಯರನ್ನು ಕುರಿತು ಹೇಳಿದ ಈ ಭವಿಷ್ಯದ ಕಥಾಭಾಗವನ್ನು ಯಾವಭಕ್ತರು ಭಕ್ತಿಯಿಂದ ಕೇಳುವರೋ, ಯಾರು ಕಾಶೀಕ್ಷೇತ್ರದಲ್ಲಿ ನಾನು ಹೇಳಿದ ಘಂಟಾಕರ್ಣವೆಂಬ ತೀರ್ಥದಲ್ಲಿ ಸ್ನಾನಮಾಡಿ ವ್ಯಾಸೇಶ್ವರನನ್ನು ಭಕ್ತಿಯಿಂದ ಪೂಜಿಸುವರೋ ಅವರ ಮೃತ್ಯುಭಯವು ದೂರವಾಗಿ ಅವರು ದೇಹಾಂತದಲ್ಲಿ ಶಿವಸಾಯುಜ್ಯವನ್ನು ಪಡೆದು ಧನ್ಯರಾಗುವರು.

ವಿವೇಕಶೀಲಾ, ಹೀಗೆ ಭಗವಾನ್ ಸ್ಕಂದನು ಹೇಳಿದ ಮೋಹಗ್ರಸ್ತ ವೇದವ್ಯಾಸರ ಈ ಕೌತುಕದ ಚರಿತ್ರವನ್ನು ಕೇಳಿ ನಿನಗೆ ಆಶ್ಚರ್ಯವಾಗಿರಬಹುದು. ಅಷ್ಟಾದಶ ಪುರಾಣಪ್ರವರ್ತಕರೂ, ಮಹಾಭಾರತದ ಕರ್ತೃಗಳೂ, ಬ್ರಹ್ಮಸೂತ್ರಕಾರರೂ, ಅದರಲ್ಲಿಯೂ ಹತ್ತುಪುರಾಣಗಳಿಂದ ಶಿವಸರ್ವೋತ್ತಮತ್ವವನ್ನು ಪ್ರತಿಪಾದಿಸಿದವರೂ ಆದ ವೇದವ್ಯಾಸರಿಗೆ ಮೋಹವು ಆವರಿಸಿದ್ದರ ಸತ್ಯತೆಯನ್ನು ಕುರಿತು ನೀನು ಶಂಕಿಸುತ್ತಿದ್ದರೂ ಶಂಕಿಸುತ್ತಿರಬಹುದು; ಆದರೆ ಶಿಷ್ಟೋತ್ತಮಾ, ಷಡ್ಗುಣೈಶ್ವರ್ಯಸಂಪನ್ನನಾದ ಭಗವಾನ್ ಸದಾಶಿವನು ಜಗತ್ಕಲ್ಯಾಣಕ್ಕಾಗಿ ಶಬರನಾಗಿ ನಟಿಸಿ ಅರ್ಜುನನ ಸತ್ವಪರೀಕ್ಷೆಯನ್ನು ಮಾಡಿರಲು, ಅದರಂತೆ, ಉಪಾಸಕರು ತಮ್ಮ ಔಪಾಸ್ಯದೈವತವನ್ನೇ ಸರ್ವೋತ್ತಮತ್ವದಿಂದ ಭಜಿಸಬೇಕೆಂಬ ದೃಢತೆಯನ್ನು ಜಗತ್ತಿನಲ್ಲಿ ಸ್ಥಾಪಿಸುವದಕ್ಕಾಗಿಯೂ, ಆಯಾ ದೇವತೆಗಳ ಸ್ಥಾನಕ್ಕೆ ಹೋದಾಗ ಆಯಾ ದೇವತೆಗಳನ್ನು ಸ್ತುತಿಸದೆ ಅಲ್ಲಿ ಅನ್ಯದೇವತೆಗಳ ಸ್ತೋತ್ರಮಾಡುವದು ಅಯೋಗ್ಯವೆಂಬದನ್ನು ತೋರಿಸುವದಕ್ಕಾಗಿಯೂ ಸರ್ವಪ್ರೇರಕನಾದ ಶ್ರೀ ಸದಾಶಿವನ ಪ್ರೇರಣೆಯಿಂದ ಶ್ರೀ ವೇದವ್ಯಾಸರು ಮೋಹಗ್ರಸ್ತರಂತೆ ಆಚರಿಸಿದ್ದರೆ, ಅಥವಾ ಮೋಹಗ್ರಸ್ತರಾಗಿದ್ದರೆ ಆಶ್ಚರ್ಯವಲ್ಲ! ಜಗತ್ಕಲ್ಯಾಣಕ್ಕಾಗಿ ಶ್ರೀ ವಿಷ್ಣುವು ಮತ್ಸ್ಯ—ಕೂರ್ಮಾದಿ ತಿರ್ಯಗ್ ಯೋನಿಗಳಲ್ಲಿ ಜನಿಸಿರುವನು; ಅದರಂತೆ ಪ್ರತ್ಯಕ್ಷ ಸದಾಶಿವನೂ ಮೇಲೆ ಹೇಳಿದಂತೆ ಶಬರಾದಿ ರೂಪಗಳನ್ನು ಧರಿಸಿರುವನು. ಅಂದಬಳಿಕ ಮಹಾ ಜ್ಞಾನಿಗಳಾದ ವೇದವ್ಯಾಸರು ಔಪಾಸನೆಯೊಂದು ಸರ್ವೋತ್ತಮತ್ವದ ಮಹತ್ವದ ಸಿದ್ಧಾಂತವನ್ನು ಸ್ಥಾಪಿಸುವದಕ್ಕಾಗಿ ಶಿವಪುರಾಣದಲ್ಲಿ ತಾವು ಸ್ವತಃ ಮೋಹಗ್ರಸ್ತರಾಗಿ ಶಿವಸರ್ವೋತ್ತಮತ್ವವನ್ನು ಶಿವೋಪಾಸಕರಿಗೆ ಸಿದ್ಧಮಾಡಿ ತೋರಿಸಿದ್ದರಲ್ಲಿ ವಿಶೇಷವೇನು? ಪಾಮರರನ್ನು ಶಿಕ್ಷಿಸುವಾಗ ಒಮ್ಮೊಮ್ಮೆ ಶಿಕ್ಷಕನೂ ಪಾಮರನಾಗಬೇಕಾಗುತ್ತದೆ; ಅದರಂತೆ ಮೋಹಗ್ರಸ್ತವಾದ ಜಗತ್ತನ್ನು ಶಿಕ್ಷಿಸುವಾಗ ಶ್ರೀ ವೇದವ್ಯಾಸರೂ ಮೋಹಗ್ರಸ್ತರಾಗಿದ್ದರೆ, ಅದರಿಂದ ಅವರ ಗೌರವಕ್ಕೆ ಹ್ಯಾಗೆ ಕೊರತೆಬರುವದು? ಭಗವಾನ್ ಶಂಕರನು ಪ್ರಸಂಗವಶಾತ್ ಶಬರರೂಪತಾಳಿದ್ದರಿಂದ ಆತನ ಗೌರವಕ್ಕೆ ಹಾನಿಬಂದಿರುವದೋ? ಅದರಂತೆಯೇ ಜಗತ್ತಿಗಾಗಿ ಜ್ಞಾನಭಾಂಡಾರವನ್ನೊದಗಿಸಿಕೊಟ್ಟಿದ್ದ ವೇದವ್ಯಾಸರು, ತಮ್ಮ ಸಿದ್ಧಾಂತವನ್ನು ಸ್ಥಾಪಿಸುವದಕ್ಕಾಗಿ ತಾವೂ ಮೋಹಗ್ರಸ್ತರಾಗಿ ಅದರ ದುಷ್ಪರಿಣಾಮವನ್ನು ಜಗತ್ತಿಗೆ ತೋರಿಸಿದ್ದರೆ, ಅದರಿಂದ ಅವರ ಗೌರವಕ್ಕೆ ಹ್ಯಾಗೆ ಕೊರತೆಬರುವದು? ವ್ಯಾಸಭುಜಸ್ತಂಭನದಿಂದ ಶಿವಸರ್ವೋತ್ತಮತ್ವಕ್ಕೆ ದೃಢತೆಬಂದದ್ದರಿಂದಲೇ ಎಷ್ಟೋ ಶೈವರು ಆ ಕಾರಣವನ್ನೇ ಶಿವಸ

ರ್ವೋತ್ತಮತ್ವದ ಉತ್ತಮೋತ್ತಮ ಸಾಕ್ಷಿಯೆಂದು ತಿಳಿದು "ವ್ಯಾಸನತೋಳು ಮುರಿಸುವದನ್ನು" ಅತ್ಯಂತ ಮಹತ್ವದ ಸಂಗತಿಯೆಂದು ತಿಳಿಯುವರು; ಯಾಕಂದರೆ ಶ್ರೀ ವೇದವ್ಯಾಸರು ಸರ್ವಾಂಗದಿಂದಲೂ ಪ್ರಮಾಣಪುರುಷರಾಗಿರುವರು. ಹಾಗಿಲ್ಲದಿದ್ದರೆ, ವೈದಿಕರು ಯಾವಪಂಥದವರೇ ಇರಲಿ, ಯಾವ ಮತದವರೇ ಇರಲಿ‘ ವ್ಯಾಸಕೃತ ಹದಿನೆಂಟು ಪುರಾಣಗಳ ವಚನಗಳನ್ನು ಉತ್ಸಾಹದಿಂದ ಮುಂದೆಮಾಡಲಿಕ್ಕೂ, ವ್ಯಾಸಕೃತ ಮಹಾಭಾರತವನ್ನು ಮಾರ್ಮಿಕರೀತಿಯಿಂದ ಅವಲೋಕಿಸಲಿಕ್ಕೂ, ವ್ಯಾಸಕೃತ ಬ್ರಹ್ಮಸೂತ್ರಗಳಿಗೆ ತಮ್ಮ ತಮ್ಮ ಮತಾನುಸಾರವಾಗಿ ಭಾಷ್ಯಬರೆಯಲಿಕ್ಕೂ ಮುಗಿಬೀಳುತ್ತಿದ್ದಿಲ್ಲ. ವಿವೇಕಶೀಲಾ, ಇಂಥ ಲೋಕೋಪಕಾರಿಯಾದ ಋಷಿಶ್ರೇಷ್ಠನ ಉಪಕಾರವನ್ನು ಯಾವತ್ತು ವೈದಿಕಮತದವರು ಕೃತಜ್ಞತೆಯಿಂದ ಸ್ಮರಿಸದೆ ಇರಬಹುದು? ವ್ಯಾಸರತೋಳನ್ನು ಮುರಿಸುವದರಲ್ಲಿ ವ್ಯಾಸರ ಅಪಮಾನವಿರುವದೆಂದು, ಮೆರೆಸುವವರೂ, ಆ ಮೆರವಣಿಗೆಯನ್ನು ನೋಡಲಾರದ ವ್ಯಾಸಾಭಿಮಾನಿಗಳೂ ತಿಳಿಯುವದು ತೀರ ಅಸಮಂಜಸವು! ಈ ಜಗತ್ತಿನಲ್ಲಿ ಧರ್ಮಧ್ವಜವನ್ನು ಸ್ಥಿರಗೊಳಿಸಿದ ತೋಳು ಯಾರದಾದರೂ ಇದ್ದರೆ ಅದು ಶ್ರೀ ವೇದವ್ಯಾಸರದೇ ಎಂಬದನ್ನು ಸ್ಪಷ್ಟಮಾಡುವದಕ್ಕಾಗಿ ಅದನ್ನು ಮೆರೆಸುವರೆಂದು ನಾನಂತು ತಿಳಿದುಕೊಳ್ಳುವೆನು. ವ್ಯಾಸರಂಥ ಮಹಾತ್ಮರು ಮಾನಾಪಮಾನಾದಿ ದ್ವಂದ್ವಾತೀತರಾಗಿರಲು, ಅವರು ಮಾನ ಹೊಂದುವದೂ ಜಗತ್ತಿನ ಹಿತಕ್ಕಾಗಿಯೇ, ಅಪಮಾನಹೊಂದುವದೂ ಜಗತ್ತಿನ ಹಿತಕ್ಕಾಗಿಯೇ ಎಂದು ತಿಳಿಯಬೇಕು, ಶ್ರೀ ವ್ಯಾಸರು ಅಂಥ ನಿಸ್ಪೃಹರಾಗಿರದಿದ್ದರೆ ತಾವು ಬರೆದ ಗ್ರಂಥಗಳಲ್ಲಿ ತಮ್ಮ ಕೈಯಿಂದ ತಮ್ಮ ಅಪಮಾನವನ್ನು ಮಾಡಿಕೊಳ್ಳುತ್ತಿದ್ದಿಲ್ಲ. ವ್ಯಾಸರು ತಮ್ಮ ಸ್ಕಂದಪುರಾಣದಲ್ಲಿ ತಮ್ಮ ಭುಜಸ್ತಂಭನವಾದದ್ದನ್ನು ಬರೆಯದಿದ್ದರೆ, ಅದು ಯಾರಿಗೆ ಗೊತ್ತಾಗುತ್ತಿತ್ತು? ಹೀಗೆ ತಮ್ಮ ಅಪಮಾನವನ್ನು ತಾವೇ ನಿಸ್ಪೃಹದಿಂದ ಬರೆಯುವ ವ್ಯಾಸರಂಥ ನಿರಭಿಮಾನಿಗಳಾದ ಮಹಾತ್ಮರು, ಮಹಾಪ್ರಯತ್ನದಿಂದ ವ್ಯಾಸನ ತೋಳು ಮುರಿಸಿ ತಾವೇ ಒಂದು ರೀತಿಯಿಂದ ಜಗತ್ತಿನಲ್ಲಿ ದುರಭಿಮಾನದಿಂದ ಮೆರೆಯುವ ಶೈವರಲ್ಲಿ, ಅಥವಾ ಅದನ್ನು ನೋಡಲಾರದೆ ದುರಭಿಮಾನದ ಮೂಲಕ ಮಾಡಬಾರದ ಅನನ್ವಿತ ಕೃತ್ಯಗಳನ್ನು ಮಾಡಿ ಅದನ್ನು ಪ್ರತಿಬಂಧಿಸಿ, ನಾವು ಮಹಾ ಪೌರುಷಮಾಡಿದೆವೆಂದು ಮೆರೆಯುವ ವೈಷ್ಣವರಲ್ಲಿ ಎಷ್ಟು ಜನರಿರುವರು? ಕುಂಟ ದಾಸಯ್ಯನಿಗೇಕೆ ವೈಕುಂಠದ ಸುದ್ದಿಯೆಂಬಂತೆ, ಧರ್ಮದ ದುರಭಿಮಾನದಿಂದ ಮೆರೆಯುವವರಿಗೆ, ಮಾಡಬಾರದ್ದನ್ನು ಮಾಡಿ, ವಹಿಸಲಾಗದ ಕಷ್ಟವನ್ನು ವಹಿಸಿ ಜಗತ್ತಿನ ಕಲ್ಯಾಣ ಮಾಡಿರುವ ವೇದವ್ಯಾಸರಂಥ ಜಗತ್ಪಾಪ–ವಿಧ್ವಂಸಕರ ಗೊಡವೆಯೇಕೆ? ವಿವೇಕಶೀಲಾ, ಭಗವಾನ್ ವೇದವ್ಯಾಸರ ಯೋಗ್ಯತೆಯರಿತ ಶೈವನು ಅವರ ತೋಳನ್ನು ತಿರಸ್ಕಾರಬುದ್ಧಿಯಿಂದ ಮುರಿಸಲಿಕ್ಕಿಲ್ಲ, ಅದರಂತೆ ಅಜ್ಞಾನದಿಂದ ಯಾರಾದರೂ ಆ ಪವಿತ್ರ ತೋಳನ್ನು–ಜಗತ್ಕಲ್ಯಾಣಕ್ಕಾಗಿ ಸವೆದ ತೋಳನ್ನು ಹಾಗೆ ಮುರಿಸಿದರೆ, ಅದಕ್ಕಾಗಿ ಶ್ರೀ ವೇದವ್ಯಾಸರಯೋಗ್ಯತೆ ಯರಿತ ವ್ಯಾಸಾಭಿಮಾನಿಯು ವಿಕಾರವಶನಾಗದೆ ಉದಾಸೀನನಾಗದೆಯಿರಲಿಕ್ಕಿಲ್ಲ!

ವಿವೇಕಶೀಲಾ, ಈ ಕಲಿಯುಗದಲ್ಲಿ ಅಜ್ಞಾನದ ಕಾರ್ಯಗಳಿಗೇ ಮಹತ್ವ ಹೆಚ್ಚು; ಯಾಕಂದರೆ ಕಲಿಯುಗವು ಲೋಕದ ನಾಶದ ಪಂಥವಾಗಿರುವದು. ಈ ಯುಗದಲ್ಲಿ ಸ್ವಾರ್ಥಪರರಾದ ದುರಭಿಮಾನಿಗಳು. ಹಡೆದ ತಾಯಿತಂದೆಗಳನ್ನೂ, ಉಪದೇಶಮಾಡಿದ ಗುರುವನ್ನೂ, ಉಪಾಸ್ಯ ದೈವತವನ್ನೂ ಪ್ರಸಂಗವಶಾತ್ ನಿರಾಕರಿಸಲಿಕ್ಕೆ ಹಿಂದೆ ಮುಂದೆ ನೋಡುವದಿಲ್ಲ. ಅಂದಬಳಿಕ ವ್ಯಾಸರಂಥ ಅವತಾರಿಕ ಪುರುಷರನ್ನು ಅಪಮಾನಗೊಳಿಸುವ ಅಂಥವರ ಧರ್ಮಬುದ್ಧಿಯು ಜಾಗ್ರತವಾಗಿರುವದೆಂದು ಹ್ಯಾಗೆ ಹೇಳಬೇಕು! ವೈದಿಕರೆನಿಸಿಕೊಳ್ಳುವವರಿಗೆ ತಮ್ಮ ಮತಕ್ಕೆ ವ್ಯಾಸರು ವಿಭಾಗಿಸಿದ ವೇದಗಳು ಆಧಾರವಾಗಿ ಬೇಕು; ಅದರಂತೆ ಅವರು ಬರೆದ ಪುರಾಣಗಳೂ, ಮಹಾಭಾರತವೂ, ಬ್ರಹ್ಮಸೂತ್ರವೂ ಆಧಾರವಾಗಿ ಬೇಕು; ಅವರ ಗ್ರಂಥಗಳ ಆಧಾರವಿಲ್ಲದಿದ್ದರೆ ಮತಕ್ಕೆ ಗೌರವ ಕಡಿಮೆಯಾಗುವದು; ಆದರೆ ಅವನ್ನೆಲ್ಲ ಬರೆದ ವ್ಯಾಸರ ತೋಳನ್ನು ತಿರಸ್ಕಾರದಿಂದ ಮೆರಿಸಲಿಕ್ಕೆ ಎಷ್ಟು ಹಾನಿಯಾದರೂ ಚಿಂತೆಯಿಲ್ಲ, ಮೆರಿಸಿಯೇ ತೀರಬೇಕು! ಹೀಗೆ ಮೆರಿಸುವವರಿಗೆ ಇಲ್ಲದ ಮಹತ್ವಕೊಟ್ಟು ಅವರಷ್ಟೇ ಅಯೋಗ್ಯರಾದ ವ್ಯಾಸಶಿಷ್ಯರೆಂದು ಅಭಿಮಾನಪಡುವವರು ಅನರ್ಥಮಾಡಿಯಾದರೂ ಆ ಮೆರವಣಿಗೆ ನಿಲ್ಲಿಸಬೇಕು. ಹರಹರ!! ವಿವೇಕಶೀಲಾ, ಇಂಥ ಅಯೋಗ್ಯವ್ಯವಹಾರವು ನಿಂತು ಹೋಗುವವರೆಗೆ ಧಾರ್ಮಿಕ ಜಾಗ್ರತಿಯು ಇರುತ್ತದೆಂದು ಹ್ಯಾಗೆ ಅನ್ನಬೇಕು? "ವ್ಯಾಸೋಚ್ಛಿಷ್ಟಂ ಜಗತ್ಸರ್ವಂ" ಎಂಬ ಉಕ್ತಿಯು ಹೊರಡುವಷ್ಟು ವ್ಯಾಸರು ಜಗತ್ಕಲ್ಯಾಣಮಾಡಿರಲು, ಜಗತ್ಕಲ್ಯಾಣಕ್ಕಾಗಿಯಾಗಲಿ, ಪ್ರಸಂಗವಶಾತ್ತಾಗಿಯಾಗಲಿ ಅವರು ಮೋಹವಶರಾದದ್ದರ ಮರ್ಮವರಿಯದೆ ಅದನ್ನು ಇಷ್ಟು ಕೂಗಿ ಕೂಗಿ ಹೇಳುವದು ಸೌಜನ್ಯದ ಲಕ್ಷಣವಾಗಬಹುದೇ? ಈ ಅಪ್ರಶಸ್ತ ವ್ಯವಹಾರವನ್ನು ನೋಡಿ ಮಹಾತ್ಮರಾದ ವ್ಯಾಸರು ನಗುತ್ತಿರಬಹುದೆನ್ನುವದಕ್ಕಿಂತ, ಜಗತ್ತಿನ ಅಧಃಪತನಕ್ಕಾಗಿ ಕನಿಕರಪಡುತ್ತಿರಬಹುದು; ಆದ್ದರಿಂದ ವಿವೇಕಶೀಲಾ, ಇಂಥ ಅಜ್ಞಾನದ ಬಲೆಯಲ್ಲಿ ನೀನು ಸಿಕ್ಕಿಕೊಳ್ಳಬೇಡ. ಬ್ರಹ್ಮಾದಿದೇವತೆಗಳು ಪ್ರಸಂಗವಶಾತ್ ತಪ್ಪು ಮಾಡಿರುವದನ್ನು ಪುರಾಣಗಳು ಹೇಳುವವು. ತಮ್ಮ ಆಪ್ತರ ತಪ್ಪುಗಳನ್ನು ಪ್ರಸಿದ್ಧೀಕರಿಸುವದು ಅಲೌಕಿಕವೆಂದು ನಾವು ತಿಳಿಯುತ್ತಿರಲು, ಭಗವಾನ್ ವೇದವ್ಯಾಸರಂಥ ಮಹಾಜ್ಞಾನಿಗಳಾದ ಪರಮಾಪ್ತರ ಒಂದಿಷ್ಟು ತಪ್ಪೂ ಹೊಟ್ಟೆಯಲ್ಲಿ ಹಿಡಿಸದೆಯಿರಲಿಕ್ಕೆ, ನಮ್ಮ ಹೊಟ್ಟೆಯು ತಪ್ಪುಗಳಿಂದ ತುಂಬಿ ಹೊರಸೂಸುವದೇ ಕಾರಣವಾಗಿರಬಹುದಲ್ಲವೆ! ಆದ್ದರಿಂದ "ವಿವೇಕಿಯಾಗುವದಕ್ಕಿಂತ ಪಾಂಡಿತ್ಯವಿಲ್ಲೆ"ಂಬದನ್ನು ಲಕ್ಷ್ಯದಲ್ಲಿಟ್ಟು ಪುರಾಣಾದಿಗಳನ್ನು ವಿವೇಕದಿಂದ ಶ್ರವಣಮಾಡುತ್ತಿರು. ಪುರಾಣಗಳ ಉದ್ದೇಶವರಿಯದ ಮೂಢರಿಗೆ ಪುರಾಣಗಳೇ ಶಸ್ತ್ರಪ್ರಾಯವಾಗಿ, ಅವರ ನಾಶವು ನಿಶ್ಚಯವಾಗಿ ಆಗುವದೆಂಬದನ್ನು ಗಟ್ಟಿಮುಟ್ಟಿಯಾಗಿ ತಿಳಿದುಕೊಂಡಿರು. ಅನ್ಯರನ್ನು ನಿಂದಿಸುವವನೇ ಚಾಂಡಾಲನಾಗಿರಲು, ಮಹಾಜನರನ್ನು ನಿಂದಿಸುವವನು ಯಾರಾಗಬಹುದು ನೀನೇ ವಿಚಾರಮಾಡು. ವ್ಯಾಸರ ಪಕ್ಷಗಟ್ಟಿ ಅವರ ಮರ್ಯಾದೆಯುಳಿಸಲಿಕ್ಕೆ, ಅಥವಾ ಶಿವನಪಕ್ಷಗಟ್ಟಿ ಆತನ ಸರ್ವೋತ್ತಮತ್ವ

ವನ್ನು ಸ್ಥಾಪಿಸಲಿಕ್ಕೆ ಪಾಮರರಾದ ನಾವು ಎಷ್ಟರವರು? ವ್ಯಾಸರ ಯೋಗ್ಯತೆಯರಿತ ಶೈವರೂ, ವೈಷ್ಣವರೂ, ಯಾವವೈದಿಕ ಪಂಥದವರೂ ವ್ಯಾಸರನ್ನು ಗೌರವಿಸದೆ ಇರಲಿಕ್ಕಿಲ್ಲ; ಯಾಕಂದರೆ ವ್ಯಾಸೋಕ್ತಿಯಿಂದ ಸಮರ್ಥಿಸದೆಯಿದ್ದ ಯಾವ ವೈದಿಕ ಮತಕ್ಕೂ ಪರಿಪುಷ್ಟಿಯೂ, ಸುದೃಢತೆಯೂ, ಅನಾದಿತ್ವವೂ ದೊರೆಯಲಾರವೆಂದು ಸಮಂಜಸ ಜನರು ಒಪ್ಪಿಕೊಳ್ಳಬೇಕಾಗುವದು; ಆದ್ದರಿಂದ ಧರ್ಮಮಾತ್ಸರ್ಯದಿಂದ ಶೈವರಾಗಲಿ, ವೈಷ್ಣವರಾಗಲಿ ವಿವೇಕವನ್ನು ಕಳಕೊಂಡು ಅಧಮಕೋಟಿಯಲ್ಲಿ ಸೇರತಕ್ಕದ್ದಲ್ಲ. ಸೂರ್ಯನ ಮೇಲೆ ಮಣ್ಣು ತೂರುವಂತೆ ವ್ಯಾಸರ ಯೋಗ್ಯತೆಯನ್ನು ಕಡಿಮೆ ಮಾಡುವದೂ, ಶಿವಸರ್ವೋತ್ತಮತ್ವಕ್ಕೆ ಬಾಧೆತರುವದೂ ನಿರರ್ಥಕ ಯತ್ನವೆಂದು ಶೈವರೂ ವೈಷ್ಣವರೂ ಕೂಡಿಯೇ ತಿಳಿದು ವ್ಯಾಸರಂಥ ಮಾನ್ಯರ ವಿಷಯವಾಗಿ ಗೌರವಭಾವವನ್ನು ತಾಳಿ ಕೃತಜ್ಞರೆನಿಸಿಕೊಳ್ಳತಕ್ಕದ್ದು. ಹಾಗೆ ಮಾಡದೆ ಹುಂಬತನಕ್ಕೆ ಇಂಬುಗೊಟ್ಟರೆ, ಜಗತ್ತೇ ವ್ಯಾಸರ ಯೋಗ್ಯತೆಗೆ ತಲೆದೂಗುತ್ತಿರುವಾಗ, ಈರ್ಷೆಯಿಂದ ತೋಳು ಮೆರಿಸುವವರಿಗೂ, ಆ ಅಯೋಗ್ಯಕೃತಿಯನ್ನು ವಿವೇಕದಿಂದ ಉದಾಸೀನಮಾಡದೆ ಈರ್ಷೆಯಿಂದ ಆ ಮೆರವಣಿಗೆ ನಿಲ್ಲಿಸ ಹೋಗುವವರಿಗೂ ಮೂರ್ಖತನದ ಆರೋಪವು ತಟ್ಟದೆ ಇರಲಿಕ್ಕಿಲ್ಲ; ಅಂಥವರು ನಿಶ್ಚಯವಾಗಿ ಇಹಪರಸುಖಕ್ಕೆ ಎರಗಾಗುವರು. ಆದ್ದರಿಂದ ವಿವೇಕಶೀಲಾ, ಇಂಥ ಅಡ್ಡಹಾದಿಯನ್ನು ಹಿಡಿಯದಂತೆ ಅನುಗ್ರಹಿಸಲು, ನಾವೆಲ್ಲರೂ ಆ ಸರ್ವೋತ್ತಮನಾದ ಸದಾಶಿವನನ್ನೇ ಪ್ರಾರ್ಥಿಸೋಣ! ವ್ಯಾಸರಂಥ ಉತ್ತಮೋತ್ತಮಪ್ರಮಾಣ ಪುರುಷರ ಭುಜಸ್ತಂಭನದಿಂದಲೇ ಶಿವಸರ್ವೋತ್ತಮತ್ವವು ಅಬಾಧಿತವಾಯಿತೆಂದು ತಿಳಿದು, ಅದಕ್ಕಾಗಿ ನಾವೆಲ್ಲರು ವ್ಯಾಸರ ಯೋಗ್ಯತೆಯ ವಿಷಯವಾಗಿ ಕೃತಜ್ಞರಾಗೋಣ!

---

## ೧೧ ನೆ ಯ ಸುಧಾತರಂಗ.

### ಲಿಂಗೋದ್ಭವ ಲೀಲೇ !

(ಶಿವಪುರಾಣ—ಲಿಂಗಪುರಾಣಗಳ ಆಧಾರದಿಂದ)

---

ಈ ಮೇರೆಗೆ ಸಿದ್ಧ ಮುನೀಶ್ವರರಿಂದ ಭಗವಾನ್ ಶಂಕರನ ಹಲವು ಮಹಿಮೆಗಳನ್ನು ಕೇಳಿ ವಿವೇಕಶೀಲಾದಿ ಶಿಷ್ಯರು ಪರಮಾನಂದಪಟ್ಟರು. ಅವರು ತಮ್ಮ ಗುರುವನ್ನು ಕುರಿತು—ಗುರುವರಾ, ಈಗ ನಾವು ಲಿಂಗೋದ್ಭವ ಲೀಲೆಯನ್ನು ಕೇಳಲಿಚ್ಛಿಸುವೆವು, ಎಂದು ಬಹುಲೀನತೆಯಿಂದ ಕೇಳಿಕೊಳ್ಳಲು, ಸದಯಹೃದಯರಾದ ಸಿದ್ಧಮುನೀಶ್ವರರು ಸುಪ್ರಸನ್ನಚಿತ್ತರಾಗಿ ಮೃದುಹಾಸ್ಯದೊಂದಿಗೆ ತಮ್ಮ ಪ್ರಿಯ ಶಿಷ್ಯನನ್ನು ಕುರಿತು—ವಿವೇಕಶೀಲಾ, “ಸರ್ವಂಲಿಂಗಮಯಂ ಜಗತ್” ಎಂಬ ವ್ಯಾಸೋಕ್ತಿಯಂತೆ ಚರಾಚರಾತ್ಮಕ

ವಾದ ಈ ಸಕಲ ಪ್ರಪಂಚವೇ ಲಿಂಗಮಯವಾಗಿ ಹೋಗಿರುವಾಗ, ಅಗಣನೀಯವಾದ ಈ ಲಿಂಗಗಳ ಸಂಖ್ಯೆಯು ಎಷ್ಟಿರುವದೆಂಬದನ್ನು ನಾನೇನು ಹೇಳಲಿ! ಅನಾದ್ಯನಂತ ನಾದ ಸ್ವಯಂಭು ಪರಮಾತ್ಮನ ಆದಿಲಿಂಗದಿಂದ ಮುಂದೆ ಎಷ್ಟೋ ಲಿಂಗಗಳ ಉತ್ಪತ್ತಿಯಾಗಿ, ಆ ಲಿಂಗಗಳಿಂದ ತ್ರಿಭುವನವೆಲ್ಲ ವ್ಯಾಪ್ತವಾಯಿತು. ವಿವೇಕಶೀಲಾ, ಸಾಕ್ಷಾತ್ ಹರಿ–ಬ್ರಹ್ಮರಿಗೂ ಅಂತಹತ್ತದ ಈ ಸ್ವಯಂಭು ಆದಿಲಿಂಗದ ಉತ್ಪತ್ತಿಯನ್ನು ಲಿಂಗಪುರಾಣಾದಿ ಗ್ರಂಥಗಳ ಆಧಾರದಿಂದ ನಿನಗೆ ಸ್ವಲ್ಪದರಲ್ಲಿಯೇ ಹೇಳುವೆನು ಕೇಳು.

ಹಿಂದಕ್ಕೆ ಅಂದರೆ, ಚರಾಚರಾತ್ಮಕವಾದ ಈ ಸೃಷ್ಟಿಯು ಉತ್ಪತ್ತಿಯಾಗುವ ಮೊದಲು, ನಿರ್ಗುಣ ನಿರ್ವಿಕಾರವಾದ ಪರಬ್ರಹ್ಮವಸ್ತುವು ಒಂದೇ ಒಂದಾಗಿದ್ದು, ಅದಕ್ಕೆ ಮುಂದೆ ಕಾಲಾಂತರದಿಂದ "ನಾನು ಬಹು ಪ್ರಕಾರವಾಗಬೇಕೆಂ''ಬ ಇಚ್ಛೆಯು ಉತ್ಪನ್ನವಾಯಿತು. ಹೀಗೆ ಇಚ್ಛಿಸಿದ ಆ ಸದ್ವಸ್ತುವಿನ ಈ ಇಚ್ಛೆಯೇ ಮುಂದೆ ಪ್ರಕೃತಿಯೆಂಬ ನಾಮಹೊಂದಿ ಲೋಕದಲ್ಲಿ ವಿಖ್ಯಾತವಾಯಿತು. ಆ ಸದ್ವಸ್ತುವು ಪುರುಷನೆನಿಸಿಕೊಂಡಿತು. ಹೀಗೆ ಪ್ರಕೃತಿ–ಪುರುಷರೀರ್ವರೂ ಒಟ್ಟುಗೂಡಿ ನಾವು ಇನ್ನು ಮಾಡಬೇಕಾದ ಕಾರ್ಯವಾವುದೆಂಬ ಬಗ್ಗೆ ವಿಚಾರಮಾಡಹತ್ತಿದರು; ಆದರೆ ಅವರಿಗೆ ಯಾವಸಂಗತಿಯೂ ತೋಚದೆ, ಅವರು ಸಂಶಯಗ್ರಸ್ತರಾಗಿ ಸುಮ್ಮನೆ ಕುಳಿತುಕೊಳ್ಳಬೇಕಾಯಿತು. ಅಷ್ಟರಲ್ಲಿ "ನೀವು ನಿಮ್ಮ ಸಂಶಯ ನಿವೃತ್ತಿಗಾಗಿ ತಪಸ್ಸು ಮಾಡಬೇಕೆಂ"ದು ಆಕಾಶವಾಣಿಯಾಯಿತು. ಆದರಂತೆಯೇ ಅವರು ಎಷ್ಟೋಕಾಲದ ವರೆಗೆ ತಪಸ್ಸು ಮಾಡಿ, ಅತ್ಯಂತ ಪರಿಶ್ರಾಂತರಾಗಲು, ಅವರ ಸರ್ವಾಂಗದಲ್ಲಿ ಬೆವರೊಡೆದು, ಆ ಬೆವರಿನಿಂದ ಸಕಲ ಬ್ರಹ್ಮಾಂಡವೇ ಜಲಮಯವಾಯಿತು. ಆಗ ತಪಸ್ಸಿನಿಂದ ಅತ್ಯಂತ ಪರಿಶ್ರಾಂತನಾದ ಆ ಪುರುಷನು ಪ್ರಕೃತಿಯೊಡನೆ ಬಹುಕಾಲದವರೆಗೆ ಆ ನೀರಿನಲ್ಲಿ ಮಲಗಿಕೊಂಡನು. ಅಂದಿನಿಂದ ಇವನಿಗೆ "ನಾರಾಯಣ ''ನೆಂತಲೂ, ಪ್ರಕೃತಿಗೆ "ನಾರಾಯಣೀ"ಯೆಂತಲೂ ಬೇರೆನಾಮಗಳು ಪ್ರಾಪ್ತವಾದವು. ಆಗ ಇವರೀರ್ವರ ಹೊರತು ಅನ್ಯ ಯಾವ ವಸ್ತುವೂ ಇದ್ದಿಲ್ಲ. ಮುಂದೆ ಬಹುಕಾಲದ ಮೇಲೆ ಈ ಪ್ರಕೃತಿಯಿಂದ ಮಹತ್ತತ್ವದ ಉತ್ಪತ್ತಿಯಾಗಿ, ಆ ಮಹತ್ತತ್ವದಿಂದ ಅಹಂಕಾರ; ಅಹಂಕಾರದಿಂದ ಪಂಚಮಹಾಭೂತಗಳು, ಇಂದ್ರಿಯ, ಮನಸ್ಸು ಇವು ಉತ್ಪನ್ನವಾದವು. ಹೀಗೆ ಒಂದರಹಿಂದೊಂದು ಉತ್ಪನ್ನವಾದ ಜಡಸೃಷ್ಟಿಯನ್ನು ನೋಡಿ ನಾರಾಯಣನು— "ಇನ್ನು ನಾನು ಚೈತನ್ಯ ಸೃಷ್ಟಿಯನ್ನು ಸೃಜಿಸಬೇಕೆ''ಂದು ಆಲೋಚಿಸಿ, ಮೊದಲು ತನ್ನ ನಾಭಿಯಿಂದ ಅನಂತ ದಲಯುಕ್ತವಾದ ಒಂದು ಭವ್ಯ ಕಮಲವನ್ನು ನಿರ್ಮಿಸಿದನು. ಆ ಕಮಲವು ಅನಂತಯೋಜನ ವಿಸ್ತೀರ್ಣವಾಗಿದ್ದು, ಅನಂತಕೋಟಿ ಸೂರ್ಯನಂತೆ ಪ್ರಕಾಶಮಯವಾಗಿತ್ತು. ಇಂಥ ದಿವ್ಯತರವಾದ ಕಮಲದಿಂದ ನಾರಾಯಣನು ಸೃಷ್ಟ್ಯುತ್ಪತ್ತಿಗಾಗಿ ಹಿರಣ್ಯಗರ್ಭನಾದ ಬ್ರಹ್ಮನನ್ನು ಸೃಜಿಸಿದನು.

ಹೀಗೆ ನಾರಾಯಣನ ನಾಭಿಕಮಲದಿಂದ ಬ್ರಹ್ಮದೇವನ ಉತ್ಪತ್ತಿಯಾಗಿರಲು,

ಅವನು ಕಮಲದಲ್ಲಿಯೇ ಎದ್ದುಕುಳಿತು ಚಕಿತ ಮುದ್ರೆಯಿಂದ ಸುತ್ತಲೂ ನೋಡಹತ್ತಿ ದನು; ಆಗ ವಿಸ್ತೀರ್ಣವಾದ ಕಮಲದ ಹೊರತು ಅನ್ಯಯಾವ ಪದಾರ್ಥಗಳೂ ಅವನಿಗೆ ತೋರಲಿಲ್ಲವು. ಪರಮಾತ್ಮನ ಅಮೋಘ ಮಾಯೆಯಿಂದ ಮೋಹಿತನಾದ ಆವನು— "ನಾನು ಯಾರು? ನನ್ನ ಕರ್ತವ್ಯವೇನು? ನಾನು ಎತ್ತಣಿಂದ ಬಂದೆನು" ಎಂಬದಾಗಿ ವಿಚಾರಿಸಹತ್ತಿದನು. ಆಗ ಅವನಿಗೆ ಸದಸದ್ವಿಚಾರಕ್ಷಮವಾದ ಬುದ್ಧಿಯು ಉತ್ಪನ್ನ ವಾಗಲು, ಆ ಬುದ್ಧಿಪ್ರಭಾವದಿಂದ ಅವನು ಕಮಲದ ಮಧ್ಯದಿಂದ ಹೊರಬಿದ್ದು, ಇದರ ಉತ್ಪತ್ತಿಯು ಯಾವ ಸ್ಥಳದಿಂದಾಗಿರುವದೆಂಬದನ್ನು ಶೋಧಿಸುವದಕ್ಕಾಗಿ ಮೆಲ್ಲಮೆಲ್ಲನೆ ಆ ಕಮಲದ ದೇಂಟಿನಿಂದ ಕೆಳಗಿಳಿಯಹತ್ತಿದನು. ಹೀಗೆ ಅವನು ಮುಂದೆ ಒಂದೇಸವನೆ ನೂರಾರುವರ್ಷಗಳವರೆಗೆ ಇಳಿದುಹೋದರೂ ಕಮಲದ ಉತ್ಪತ್ತಿಸ್ಥಾನವೇನು ಅವನಿಗೆ ದೊರೆಯಲಿಲ್ಲ. ಆಗ ಅವನು ನಿರಾಶನಾಗಿ "ನನ್ನ ಮೊದಲಿನ ಸ್ಥಳಕ್ಕೇ ನಾನು ಹೋಗಬೇಕೆ"ಂದು ಯೋಚಿಸಿ, ಮತ್ತೆ ಆ ದೇಟಸಿಂದ ಮೇಲೆ ಏರಹತ್ತಿದನು. ಮಧ್ಯ ದಲ್ಲಿ ಅವನಿಗೆ ಒಂದು ಕಮಲದ ಮೊಗ್ಗೆಯು ಸಿಗಲು, ಅದರ ಮೇಲೆ ಕುಳಿತು ತುಸು ಹೊತ್ತು ವಿಚಾರಿಸುವಷ್ಟರಲ್ಲಿ "ತಪ ತಪ" ಎಂಬ ಗಂಭೀರವಾದ ಶಬ್ದವು ಆಕಾಶ ಮಂಡಲದಿಂದ ಹೊರಬಿದ್ದಿತು. ಆಗ ಬ್ರಹ್ಮನು ಆ ಶಬ್ದದಂತೆ ಅದೇ ಸ್ಥಳದಲ್ಲಿ ಕುಳಿತು ಹನ್ನೆರಡು ವರ್ಷಗಳವರೆಗೆ ಘೋರತರವಾದ ತಪಸ್ಸು ಮಾಡಲು, ಅವನ ಉಗ್ರತಪಕ್ಕೆ ಮೆಚ್ಚಿ ಭಗವಾನ್ ಮೇಘಃಶ್ಯಾಮಸುಂದರನಾದ ಶ್ರೀ ಹರಿಯು ಶಂಖ, ಚಕ್ರ, ಪೀತಾಂ ಬರ ಧಾರಿಯಾಗಿ ಅವನ ಮುಂದುಗಡೆಗೆ ಪ್ರಕಟನಾದನು. ಆಗ ನಾರಾಯಣನ ಆ ದಿವ್ಯಮೂ ರ್ತಿಯನ್ನು ನೋಡಿ ಬ್ರಹ್ಮನು ಆಶ್ಚರ್ಯಗೊಂಡರೂ, ಪರಮಾತ್ಮನ ಅಮೋಘಮಾಯೆ ಯಿಂದ ಮೋಹಿತನಾದ ಅವನು ನಾರಾಯಣನ ನಿಜಸ್ವರೂಪವನ್ನು ಅರಿಯದೆ ಅವನನ್ನು ಕುರಿತು ಗಾಂಭೀರ್ಯದಿಂದ—"ಎಲೈ ದಿವ್ಯಪುರುಷಾ, ಕೋಟಿ ಸೂರ್ಯರ ತೇಜಸ್ಸಿ ನಂತೆ ದೇದೀಪ್ಯಮಾನವಾದ ದೇಹವುಳ್ಳ ದಿಟ್ಟ ಪುರುಷನು ನೀನಾರು? ನಿನ್ನ ನಾಮಧೇ ಯವೇನೆಂ"ದು ಕೇಳಲು, ಭಗವಂತನು ಮೃದುಹಾಸದಿಂದ ಅವನನ್ನು ಕುರಿತು—ವತ್ಸಾ, ವಿಧಾತಾ, ವಿಶ್ವದ ಉತ್ಪತ್ತಿ, ಸ್ಥಿತಿ, ಲಯಕರ್ತೃವಾದ ಆದಿನಾರಾಯನು ನಾನೇ; ಸೃಷ್ಟ್ಯುತ್ಪಾದನೆಗಾಗಿ ಈ ನಾಭಿಕಮಲದಿಂದ ನಿನ್ನನ್ನು ನಾನೇ ಹುಟ್ಟಿಸಿರುವೆನು; ನನಗೆ ವಿಶ್ವಂಭರನೆಂತಲೂ, ವಿಶ್ವಾಧಾರನೆಂತಲೂ, ವಿಶ್ವಸಂಭವನೆಂತಲೂ, ವಿಷ್ಣುವೆಂತಲೂ ಹೆಸರು; ಜಗತ್ಪ್ರವರ್ತಕನೂ, ಜಗನ್ನಿಯಾಮಕನೂ ನಾನೇ ಆಗಿರುವೆನೆಂದು ಹೇಳಲು, ಮಹಾವಿಷ್ಣುವಿನ ಮಾಯೆಯಿಂದ ಮೋಹಿತನಾದ ಪಿತಾಮಹನು ಕುಪಿತನಾಗಿ—"ಎಲಾ, ಎಂಥ ಅಸಂಬದ್ಧ ಭಾಷಣಮಾಡುವೆಯಲ್ಲ? ಲೋಕೇಶನಾದ ನನ್ನಿಂದಲೇ ಸಕಲ ಸೃಷ್ಟಿ-ಸ್ಥಿತಿ-ಲಯ ಕಾರ್ಯಗಳಾಗುತ್ತಿರಲು, ಸ್ವಯಂಭುವಾದ ನನ್ನನ್ನು ನೀನು "ವತ್ಸ ವತ್ಸ" ಎಂದು ಕರೆಯುವೆಯಲ್ಲ? ಇದಲ್ಲದೆ ವಿಶ್ವಂಭರನೂ, ವಿಶ್ವೋತ್ಪತ್ತಿ-ಸ್ಥಿತಿ-ಲಯಕರ್ತೃವೂ ನಾನೇ ಆಗಿರುವೆನೆಂದು ಅತ್ಯಂತ ಅಭಿಮಾನದಿಂದ ನನ್ನ ಮುಂದೆ ಹೇಳಿಬಿಟ್ಟೆಯಲ್ಲ; ಅದರೆ ನೀನು ಹೀಗೆ ಹೇಳಿದ ಮಾತ್ರದಿಂದ ಈ ಯೋಗ್ಯತೆಯು ನಿನ್ನಲ್ಲಿ ಬರಬಹುದೆ?

ನಿನ್ನ ಈ ಅಭಿಮಾನದ ಭಾಷಣಗಳಿಗೆ ನಾನು ಎಂದೂ ಒಪ್ಪಲಾರೆನು. ನಿನಗೆ ಯಾರಾದರೂ ಉತ್ಪಾದಕರು ಇರಲೇ ಬೇಕಲ್ಲದೆ, ನನ್ನಂತೆ ನೀನು ಸ್ವಯಂಭುವೂ, ಸರ್ವತಂತ್ರ ಸ್ವತಂತ್ರನೂ ಅಲ್ಲವೆಂಬದನ್ನು ನಾನು ನಿಶ್ಚಯವಾಗಿ ಹೇಳುವೆನು. ಹೀಗಿದ್ದು, ನೀನು ಅಪ್ರಾಕೃತನಾದ ನನ್ನನ್ನು ಮನಸ್ಸಿಗೆ ಬಂದಹಾಗೆ ಸಂಬೋಧಿಸಿ ಅಪಮಾನಗೊಳಿಸಿದೆಯಲ್ಲ! ಅದಕ್ಕಾಗಿ ಹೇಳು, ನೀನು ಯಾರಿರುವೆಯೆಂಬದನ್ನು ನಿಜವಾಗಿ ಹೇಳು. ಇಲ್ಲದೆ ಹೋದರೆ ನಿನ್ನ ಪರಿಣಾಮವು ನೆಟ್ಟಗಾಗಲಿಕ್ಕಿಲ್ಲವೆಂದು ಗರ್ಜಿಸಲು, ನಾರಾಯಣನು ಅವನ ಅಜ್ಞಾನಕ್ಕಾಗಿ ನಕ್ಕು ಸಮಾಧಾನದಿಂದ ಅವನನ್ನು ಕುರಿತು—ಎಲೈ ಅವಿಚಾರಿಯೇ, ಅನಂತ ವೈಭವಶಾಲಿಯಾದ ನನ್ನ ವಿಷಯವಾಗಿ ನೀನು ಹೀಗೆ ಅನುಚಿತ ಭಾಷಣ ಮಾಡುವದು ಉಚಿತವೇ? ನಿತ್ಯಸಿದ್ಧನೂ, ನಿರಾಮಯನೂ, ನಿಗಮಾಗಮವೇದ್ಯನೂ ಆದ ನನ್ನನ್ನು ನೀನು ಮರೆತೆಯಾ? ಆದಿನಾರಾಯಣನಾದ ನನ್ನಿಂದಲೇ ನಿನ್ನ ಉತ್ಪತ್ತಿಯಾಗಿರಲು, ಪಿತನಾದ ನನ್ನ ಯೋಗ್ಯತೆಯನ್ನು ಅರಿಯದೆ ಮೂಢನಂತೆ ನೀನು ಮನಸ್ಸಿಗೆ ಬಂದಹಾಗೆ ನುಡಿಯುವೆಯಲ್ಲ? ಇದರಿಂದ ನಿನಗೆ ಸರ್ವಥಾ ಹಿತವಾಗಲಿಕ್ಕಿಲ್ಲ; ಈಗಾದದ್ದು ಆಗಿಹೋಗಲಿ, ಇನ್ನಾದರೂ ನಾನು ಯಾರಿರುವೆನೆಂಬದನ್ನು ನೀನು ವಿಚಾರದಿಂದ ತಿಳಿದು ನೋಡು. ಹೀಗೆ ಸುಮ್ಮನೆ ಕಲಹಬೆಳಿಸಿ ನನ್ನ ಕ್ಷೋಭಕ್ಕೆ ಒಳಗಾಗಬೇಡ.

ಹೀಗೆ ನಾರಾಯಣನು ಅತ್ಯಂತ ಆಢ್ಯತೆಯಿಂದ ತನ್ನನ್ನು ಬೋಧಿಸಿದ್ದು ಬ್ರಹ್ಮನಿಗೆ ಸಹನವಾಗಲಿಲ್ಲ; ಸಿಟ್ಟಿನಿಂದ ಆತನ ಸರ್ವಾಂಗವು ಕಂಪಿಸತೊಡಗಿತು. ಅದೇ ಆವೇಶದಲ್ಲಿ ಅವನು ವಿಷ್ಣುವನ್ನು ಹೊಡೆಯಬೇಕೆಂದು ಅವನ ಮೇಲೆ ಏರಿಹೋದನು. ಆಗ ವಿಷ್ಣುವೂ ಕ್ರುದ್ಧನಾಗಿ ಅತ್ಯಂತ ಆಢ್ಯತೆಯಿಂದ ಅವನಿಗೆ ಎದುರಾಗಿ ನಿಂತನು. ಹೀಗೆ ಅವರಿಬ್ಬರೂ ಅಭಿಮಾನದ ಭರದಲ್ಲಿ ಪರಸ್ಪರ ಮೈ ಮರೆತು ಕಾದಹತ್ತಲು, ಸರ್ವೇಶ್ವರನಾದ ಭಗವಾನ್ ಸದಾಶಿವನು ಇವರ ಅಭಿಮಾನ ಮೂಲಕವಾದ ಕಲಹವನ್ನು ಹೋಗಲಾಡಿಸುವದಕ್ಕಾಗಿ ಲಿಂಗಾಕಾರನಾಗಿ ಇವರ ಮುಂದುಗಡೆಯಲ್ಲಿಯೇ ಆವಿರ್ಭವಿಸಿದನು. ದಿವ್ಯತರವಾದ ಆ ಸ್ವಯಂಭು ಆದಿಲಿಂಗವು ಸಹಸ್ರಜ್ವಾಲಾಮಾಲೆಗಳಂತೆ ಪ್ರಕಾಶಮಯವಾಗಿದ್ದು, ಆದರ ಪ್ರತಿಚ್ಛಾಯೆಯು ಪ್ರಲಯಕಾಲದ ಮೇಘಪಂಕ್ತಿಯಂತೆ ಬಹು ಭಯಾನಕವಾಗಿತ್ತು. ಹೀಗೆ ಅನಿರ್ದೇಶ್ಯ ಸ್ವರೂಪವೂ, ಅನೌಪಮ್ಯವೂ, ಆದಿಮಧ್ಯಾಂತರಹಿತವೂ, ಸ್ವಯಂಪ್ರಕಾಶಮಯವೂ ಆದ ಆ ಜ್ಯೋತಿರ್ಲಿಂಗವನ್ನು ನೋಡಿ ನಾರಾಯಣನು ಆಶ್ಚರ್ಯಚಕಿತನಾಗಿ, ಅತ್ಯಂತ ಮೋಹಿತನಾಗಿ ನಿಂತುಕೊಂಡಿದ್ದ ಬ್ರಹ್ಮನನ್ನು ಕುರಿತು—“ ಎಲೈ ಅಭಿಮಾನಿಯೇ, ಸಾಕುಮಾಡು; ನಿನ್ನ ಈ ಅಭಿಮಾನದ ಯುದ್ಧವನ್ನು ಸಾಕುಮಾಡು. ನಮ್ಮಿಬ್ಬರಿಂದಲೂ ಬೇರೆಯಾದ ಒಂದು ದಿವ್ಯ ಜ್ಯೋತಿಯು ಈಗ ಅನಾಯಾಸವಾಗಿ ಉದ್ಭವಿಸಿರುವದು; ಇದರ ಆದ್ಯಂತ ಶೋಧದಿಂದ ನಮ್ಮಿಬ್ಬರ ಪರೀಕ್ಷೆಯು ಚನ್ನಾಗಿ ಆಗುವದು; ಆದ್ದರಿಂದ ನೀನು ಈಗಲೇ ಹಂಸ ರೂಪನಾಗಿ ಈ ಸ್ವಯಂಭು ಲಿಂಗದ ಮೇಲ್ಭಾಗವನ್ನು ಶೋಧಿಸು; ನಾನು ವರಾಹ ರೂಪಹೊಂದಿ ಇದರ ಕೆಳಭಾಗವನ್ನು ಶೋಧಿಸುವೆನೆಂದು ಹೇಳಲು, ಬ್ರಹ್ಮನು ಅವನ

ಮಾತಿಗೆ ಒಡಂಬಟ್ಟು ಅದೇ ಕ್ಷಣದಲ್ಲಿ ದಿವ್ಯತರವಾದ ಒಂದು ಹಂಸರೂಪವನ್ನು ಧರಿಸಿದನು. ಆ ಹಂಸದ ರೆಕ್ಕೆಗಳು ಬಹು ವಿಸ್ತೀರ್ಣವಾಗಿದ್ದು, ಅದರ ಮೈಕಾಂತಿಯು ಸ್ಫಟಿಕದಂತೆ ಅತ್ಯಂತ ಶುಭ್ರವಾಗಿತ್ತು. ಹೀಗೆ ಬ್ರಹ್ಮನು ಬಹು ಮನೋಹರವಾದ ಹಂಸರೂಪವನ್ನು ತಾಳಿ, ಆ ಲಿಂಗದ ಅಂತ ಹಚ್ಚುವದಕ್ಕಾಗಿ ವಾಯುವೇಗದಿಂದ ಆಕಾಶಮಂಡಲದಲ್ಲಿ ಹಾರಿಹೋದನು.

ಹೀಗೆ ಹಂಸರೂಪಿಯಾದ ಹಿರಣ್ಯಗರ್ಭನು ಆತ್ಮಾವೇಶದಿಂದ ಆಕಾಶದಲ್ಲಿ ಹಾರಿಹೋಗಲು, ನಾರಾಯಣನಾದರೂ ಮೇರುಪರ್ವತದಂತೆ ವಿಸ್ತೀರ್ಣವಾದ ದೇಹವುಳ್ಳ ಒಂದು ವರಾಹರೂಪವನ್ನು ಧರಿಸಿದನು. ಅದರ ಉದ್ದಳತೆಯು ನೂರಾರು ಯೋಜನವಿದ್ದು ಅದು ಹಿಮಶೃಂಗದಂತೆ ಶುಭ್ರವಾಗಿತ್ತು. ಹಾಗು, ಅತ್ಯಂತ ತೀಕ್ಷ್ಣವಾದ ನಖಗಳಿಂದಲೂ, ಕಠಿಣತರವಾದ ಕೋರೆಹಲ್ಲುಗಳಿಂದಲೂ, ದೀರ್ಘವಾದ ಮೂಗಿನಿಂದಲೂ, ಕರ್ಕಶವಾದ ಸ್ವರದಿಂದಲೂ, ದೃಢತರವಾದ ದೇಹದಿಂದಲೂ, ಗಿಡ್ಡಗಿಡ್ಡ ಕಾಲುಗಳಿಂದಲೂ ಅದು ಅತ್ಯಂತ ಭಯಂಕರವಾಗಿ ತೋರುತ್ತಿತ್ತು. ಇಂಥ ಅದ್ಭುತ ವರಾಹರೂಪವನ್ನು ಧರಿಸಿ ನಾರಾಯಣನು ತನ್ನ ಕೋರೆಹಲ್ಲುಗಳಿಂದ ಒಂದೇ ಸವನೆ ಭೂಮಿಯನ್ನು ಬಗಿಯುತ್ತ ಅತಿ ವೇಗದಿಂದ ಆ ಲಿಂಗದ ಕೆಳಬದಿಗೆ ಸಾಗಿದನು. ಹೀಗೆ ವರಾಹ–ಹಂಸರೂಪಗಳನ್ನು ಧರಿಸಿದ ಹರಿ–ಬ್ರಹ್ಮರು ಮುಂದೆ ಸಾವಿರಾರು ವರ್ಷಗಳ ವರೆಗೆ ಆಕಾಶ ಪಾತಾಳಗಳಲ್ಲಿ ಅವಿಶ್ರಾಂತವಾಗಿ ಶೋಧಿಸಿದರು. ಆದರೂ ಅವರಿಗೆ ಶಿವನ ಸ್ವಯಂಭೂಲಿಂಗದ ಅಂತವು ಹತ್ತಲಿಲ್ಲ. ಆಗ ಅವರು ಅತ್ಯಂತ ಪರಿಶ್ರಾಂತರಾಗಿ ನಿರಾಶೆಯಿಂದ ತಮ್ಮ ಮೊದಲಿನ ಸ್ಥಳಕ್ಕೆ ಬಂದು ಬಹು ರೀತಿಯಾಗಿ ಚಿಂತಿಸಹತ್ತಿದರು. ಪರಮೇಶ್ವರನ ಮಾಯೆಯಿಂದ ಮೋಹಿತರಾದ ಅವರಿಗೆ ಯಾವ ಸಂಗತಿಯೂ ತಿಳಿಯದಾಯಿತು. ಆಗ ಅವರು ಅತ್ಯಂತ ದೈನ್ಯಯುಕ್ತ ಭಕ್ತಿಯಿಂದ ಆ ಲಿಂಗವನ್ನು ನಮಸ್ಕರಿಸಿ ಪರಮಾತ್ಮನನ್ನು ಕುರಿತು—ಭಗವನ್ ಭವಾನೀಪತೇ, ಪರಂಜ್ಯೋತಿಸ್ವರೂಪನೂ, ಪರಾತ್ಪರನೂ, ಆದ್ಯಂತ ವರ್ಜಿತನೂ, ಅನಿರ್ದೇಶ್ಯಸ್ವರೂಪನೂ, ಅನಂತನೂ, ಅಪ್ರಮೇಯನೂ ಆದ ನಿನ್ನ ಅಂತವು ಪಾಮರರಾದ ನಮಗೆ ಹತ್ತುವ ಬಗೆ ಹೇಗೆ? ಧ್ಯಾನಮಾರ್ಗಗಮ್ಯವಾದ ನಿನ್ನ ಈ ವಿಶ್ವವ್ಯಾಪಕ ರೂಪವನ್ನು ನೋಡಿ ನಾವು ಮೋಹಿತರಾದೆವು. ದೇವಾ, ನಾವು ದೊಡ್ಡವರೆಂಬ ಅಭಿಮಾನವು ಇಂದು ನಿನ್ನ ಕೃಪೆಯಿಂದ ನಷ್ಟವಾಗಿ ನಾವು ಜಾಗ್ರತರಾದೆವು. ಇನ್ನು ನಾವು ಅನಾದ್ಯನಂತನಾದ ನಿನ್ನ ಅಂತಹಚ್ಚುವ ಮೂರ್ಖತನಕ್ಕೆ ಹೋಗದೆ, ನಿನ್ನ ಈ ದಿವ್ಯ ರೂಪಕ್ಕೆ ಕೇವಲವಾಗಿ ನಮಸ್ಕರಿಸುವೆವು!

ಹೀಗೆ ಅವರು ಸ್ತುತಿ–ಸ್ತೋತ್ರ–ನಮಸ್ಕಾರಗಳಿಂದ ಮುಂದೆ ನೂರಾರು ವರ್ಷಗಳ ವರೆಗೆ ಆ ಜ್ಯೋತಿರ್ಮಯ ಲಿಂಗವನ್ನು ಆರಾಧಿಸಲು, ಲಿಂಗಾಧಿಷ್ಠಿತನಾದ ಭಗವಾನ್ ಗಂಗಾಧರನು ಸುಪ್ರಸನ್ನನಾದನು. ಆಗ ತೇಜೋಮಯವಾದ ಆ ಲಿಂಗದ ಊರ್ಧ್ವಭಾಗದಿಂದ ‘ ಓಂ , ಎಂಬ ಉಚ್ಚತರವಾದ ನಾದವು ಹೊರಬಿದ್ದಿತು. ಹೀಗೆ ಸುಸ್ಪಷ್ಟವೂ,

ಗಂಭೀರವೂ ಆದ ಆ ನಾದ–ವಿಶೇಷವನ್ನು ಕೇಳಿ ಹರಿ–ಬ್ರಹ್ಮರು ಚಕಿತರಾದರು. ಅವ ರಿಗೆ ಆ ಶಬ್ದದ ರಹಸ್ಯವು ತಿಳಿಯದೆ ಕೇವಲವಾಗಿ "ನಾದರೂಪಾಯ ತೇ ನಮಃ" ಎಂದು ಅವರು ನಾದರೂಪವಾದ ಆ ಲಿಂಗಕ್ಕೆ ನಮಸ್ಕರಿಸಿ, ಅತ್ಯಂತ ಕೃತಜ್ಞತೆ ಯಿಂದ ಅದರ ಕಡೆಗೆ ನೋಡಹತ್ತಿದರು. ಆಗ ಆ ಲಿಂಗದ ಪಶ್ಚಿಮ ಭಾಗಕ್ಕೆ ಸೂರ್ಯಮಂಡಲದಂತೆ ಪ್ರಕಾಶಮಯವಾದ 'ಅ, ಕಾರವೆಂಬ ಆದ್ಯಕ್ಷರವೂ, ಉತ್ತ ರಕ್ಕೆ ಅಗ್ನಿಜ್ವಾಲೆಯಂತೆ ಧಗಧಗಿಸುವ 'ಉ, ಕಾರವೆಂಬ ದ್ವಿತೀಯಾಕ್ಷರವೂ, ಮಧ್ಯ ದಲ್ಲಿ ಪೌರ್ಣಿಮಾ ಚಂದ್ರನಂತೆ ಪ್ರಶಾಂತವಾದ 'ಮ, ಕಾರವೆಂಬ ತೃತೀಯಾಕ್ಷರವೂ, ಇವೆಲ್ಲವುಗಳ ಮೇಲ್ಭದಿಯಲ್ಲಿ ನಿರುಪಮ ನಿರ್ವಿಕಾರವಾದ ಒಂದು ದಿವ್ಯಜ್ಯೋತಿಯೂ ಇವರ ದೃಕ್ ಪಥಕ್ಕೆ ಬಿದ್ದವು. ಅತ್ಯಂತ ವಿಸ್ಮಯಕಾರಕವಾದ ಈ ಅದ್ಭುತ ಚಮ ತ್ಕಾರವನ್ನು ನೋಡಿ ಹರಿ–ಬ್ರಹ್ಮರು ಭಕ್ತ್ಯಾಶ್ಚರ್ಯ–ಭಯೋದ್ವೇಗಾದಿ ನಾನಾ ವಿಕಾ ರಗಳಿಗೆ ಒಳಗಾಗಿ, ಅನಾದ್ಯನಂತವಾದ ಆ ಶ್ರೇಷ್ಠವಸ್ತುವನ್ನು ನಾನಾವಿಧ ಸ್ತುತಿ– ಸ್ತೋತ್ರಗಳಿಂದ ಸ್ತುತಿಸಹತ್ತಿದರು. ಹೀಗೆ ಅವರು ಬಹಳ ಹೊತ್ತಿನವರೆಗೆ ನಿರಭಿಮಾ ನದ ನಿಷ್ಕಲಂಕ ಭಕ್ತಿಯಿಂದ ಭಗವಂತನನ್ನು ಒಂದೇ ಸವನೆ ಸ್ತುತಿಸಲು, ಭಕ್ತಮಂದಾರ ಶಾಖಿಯಾದ ಭಗವಾನ್ ಶಂಕರನು ಸುಪ್ರಸನ್ನನಾಗಿ, ಮೇಘಗರ್ಜನೆಯಂತೆ ಗಂಭೀರವಾದ ತನ್ನ ವಾಣಿಯಿಂದ ಅವರನ್ನು ಕುರಿತು—"ಭಕ್ತೋತ್ತಮರೆ, ನಿಮ್ಮ ನಿಸ್ಸೀಮವಾದ ಈ ಭಕ್ತಿಯೋಗಕ್ಕೆ ನಾನು ಮೆಚ್ಚಿದೆನು. ನೀವು ನಿಮ್ಮ ಇಚ್ಛೆಯಿದ್ದಂತೆ ಬೇಕಾದ ವರ ಗಳನ್ನು ಬೇಡಿಕೊಳ್ಳಿರೆಂದು ನುಡಿಯಲು, ಹರಿಬ್ರಹ್ಮರಿಗೆ ಹಿಡಿಸಲಾರದಷ್ಟು ಸಂತೋ ಷವಾಯಿತು. ಆಗ ಅವರು ಸಂತೋಷದ ಭರದಲ್ಲಿ ಕೈಮುಗಿದು ಪರಮಾತ್ಮನನ್ನು ಕುರಿತು—"ದೇವಾಧಿದೇವಾ ಶಂಕರಾ, ನಿನ್ನ ಕಿಂಕರರಾದ ನಮಗೆ ಯಾವದಾದರೊಂದು ಕಾರ್ಯದ ಆಧಿಪತ್ಯವನ್ನು ಕೊಟ್ಟು ನಿರಂತರವಾಗಿ ನಮ್ಮನ್ನು ಕಾಪಾಡುವದಲ್ಲದೆ, ಅಮೃತೋಪಮವಾದ ನಿನ್ನ ಈ ನಾಮವು ಯಾವಾಗಲೂ ನಮಗೆ ದೊರೆಯುವಂತೆ ಅನು ಗ್ರಹಿಸೆಂದು ಪ್ರಾರ್ಥಿಸಲು, ಶಂಕರನು ಅದರಂತೆಯೇ ಅವರಿಗೆ ಅನುಕ್ರಮವಾಗಿ ಸೃಷ್ಟಿಪಾಲನ–ಸೃಷ್ಟಿಕರ್ತೃತ್ವವೆಂಬ ಮಹಾಕಾರ್ಯಗಳನ್ನು ವಹಿಸಿ, ನೀವು ನನ್ನ ಸತ್ವದಿಂದ ಜನಿಸಿರುವಿರಾದ್ದರಿಂದ ನಿಮಗೆ ನಿರಂತರ ಕಲ್ಯಾಣವಾಗಲೆಂದು ವರವಿತ್ತು ಆ ವೃಷವಾಹನು ಮತ್ತೆ ತನ್ನ ತೇಜದಲ್ಲಿ ಅಂತರ್ಧಾನ ಹೊಂದಿದನು. ಅಂದಿನಿಂದಲೇ ಈ ಹರಿ–ಬ್ರಹ್ಮರು ಸೃಷ್ಟಿಯ ಸ್ಥಿತಿ–ಉತ್ಪತ್ತಿ ಕಾರ್ಯಗಳನ್ನು ಮಾಡಹತ್ತಿ, ಮಹಾ ದೇವನಲ್ಲಿ ಭಕ್ತಿಯುಳ್ಳವರಾದರು.

---

## ಜ್ಯೋತಿರ್ಲಿಂಗಗಳು !

ವಿವೇಕಶೀಲಾ, ನೋಡು, ಸದಾಶಿವನ ಲಿಂಗೋದ್ಭವ ಮಹಿಮೆಯು ಈ ಪ್ರಕಾರ ವಾಗಿರುವದು. ಇನ್ನು ಪರಮಭಾವಿಕನಾದ ನಿನ್ನ ಆತ್ಮತುಷ್ಟಿಗಾಗಿ ಭಗವಾನ್ ಶಂಕ ರನು ಲೋಕೋದ್ಧಾರಾರ್ಥವಾಗಿ ತನ್ನ ಭಕ್ತರನಾಮಗಳಿಂದ ಲಿಂಗರೂಪಿಯಾಗಿ ಅವತ

ಜಿಸಿದ ಹಲವು ಮುಖ್ಯ ಮುಖ್ಯ ಜ್ಯೋತಿರ್ಲಿಂಗಗಳ ಮಹಾಮಹಿಮೆಯನ್ನು ನಿನಗೆ ಹೇಳುವೆನು ಕೇಳು. ನಾನು ಹೇಳುವವು ಹನ್ನೆರಡು ಜ್ಯೋತಿರ್ಲಿಂಗಗಳಿದ್ದು, ಇವು ಸೌರಾಷ್ಟ್ರ ಮೊದಲಾದ ಹನ್ನೆರಡು ಮಹಾಸ್ಥಾನಗಳಲ್ಲಿ ಸುಪ್ರಸಿದ್ಧವಾಗಿರುವವು. ಇವುಗಳ ದರ್ಶನಮಾತ್ರದಿಂದ ಪ್ರಾಣಿಗಳು ಸಕಲ ಸಂಸಾರತಾಪದಿಂದ ಮುಕ್ತರಾಗಿ, ಶಿವಾನುಗ್ರಹದಿಂದ ಶಾಶ್ವತ ಸುಖಾನಂದಸ್ಥಾನವಾದ ಶಿವಪದವನ್ನುಹೊಂದಿ ಧನ್ಯರಾಗುವರು. ಆದರೆ, ಈ ಲಿಂಗಗಳು ಯಾವ ಯಾವ ದೇಶದಲ್ಲಿ ಯಾವ ಯಾವ ಹೆಸರಿನಿಂದ ಹೇಗೆ ಹೇಗೆ ಪ್ರಸಿದ್ಧಿಹೊಂದಿದವೆಂಬ ಸಂಗತಿಯನ್ನು ಭಗವಾನ್ ವ್ಯಾಸರು ಶಿವಪುರಾಣದಲ್ಲಿ ಹೇಳಿರುವರು; ಅದನ್ನು ನಾನು ಈಗ ವಿಶದವಾಗಿ ಕನ್ನಡದಲ್ಲಿ ವರ್ಣಿಸುವೆನು ಕೇಳು.

## (೧) ಸೋಮನಾಥ-ಲಿಂಗೋತ್ಪತ್ತಿ.

**सौराष्ट्रदेशे विशदेऽतिरम्ये ज्योतिर्मयं चंद्रकलावतंसम् ॥**
**भक्तिप्रदानाय कृपावतीर्णं तं सोमनाथं शरणं प्रपद्ये ॥ १ ॥**

ವಿವೇಕಶೀಲಾ, ಹಿಂದಕ್ಕೆ ದಕ್ಷಪ್ರಜಾಪತಿಯು ಅಶ್ವಿನ್ಯಾದಿ ತನ್ನ ಇಪ್ಪತ್ತೇಳು ಜನ ಹೆಣ್ಣುಮಕ್ಕಳನ್ನು ಕಲಾನಿಧಿಯಾದ ಚಂದ್ರನಿಗೆ ಕೊಟ್ಟು ಬಹು ಸಮಾರಂಭದೊಂದಿಗೆ ವಿವಾಹಕಾರ್ಯವನ್ನು ನೆರವೇರಿಸಿದನೆಂಬ ಐತಿಹ್ಯವನ್ನು ಪುರಾಣಾಂತರಗಳಿಂದ ನೀನು ಕೇಳಿಬಲ್ಲೆಯಷ್ಟೆ? ಆದರೆ ಆ ಚಂದ್ರನು ವಿವಾಹವಾದಮೇಲೆ ಎಲ್ಲ ದಕ್ಷ-ಕನ್ನಿಕೆಯರನ್ನೂ ಸಮವಾಗಿ ಪ್ರೀತಿಸದೆ, ಅವರಲ್ಲಿ ರೋಹಿಣಿ ಎಂಬ ಹೆಸರಿನ ರೂಪವತಿಯಾದ ಒಬ್ಬಳೇ ಹೆಂಡತಿಯಲ್ಲಿ ರಮಿಸಹತ್ತಿ ಉಳಿದ ಹೆಂಡಿರನ್ನು ನಿರಾಕರಿಸಹತ್ತಿದನು. ಆಗ ಉಳಿದವರು ದುಃಖಿಸುತ್ತ ತಮ್ಮ ತಂದೆಯಬಳಿಗೆ ಬಂದು ಪತಿಯ ಈ ಅಸಮಂಜಸ ವರ್ತನೆವನ್ನು ತಿಳಿಸಿದರು. ಮಕ್ಕಳ ಈ ಮಾತು ಕೇಳಿ ದಕ್ಷನು ಅಸಮಾಧಾನಪಟ್ಟು, ವಿವೇಕಿಯಾದ ನನ್ನ ಅಳಿಯನ ಬುದ್ಧಿಯು ಒಮ್ಮೆಲೆ ಹೀಗೆ ಯಾಕೆ ತಿರುಗಿರಬಹುದೆಂಬದರ ಮೂಲಕಾರಣವನ್ನು ಅರಿತುಕೊಳ್ಳಬೇಕೆಂದು ತನ್ನ ಹೆಣ್ಣುಮಕ್ಕಳೊಂದಿಗೆ ಸ್ವತಃ ಚಂದ್ರನಬಳಿಗೆ ಹೋದನು. ಆಗ ಚಂದ್ರನು ದಕ್ಷನನ್ನು ಆದರಪೂರ್ವಕವಾಗಿ ಕರೆತಂದು ಯೋಗ್ಯಾಸನದಲ್ಲಿ ಕುಳ್ಳಿರಿಸಿದನು. ಬಳಿಕ ದಕ್ಷನು ತನ್ನ ಅಳಿಯನನ್ನು ಕುರಿತು ಸಮಾಧಾನದಿಂದ—ಕಲಾಧಿಪತಿಯೇ, ನನ್ನ ಪ್ರಿಯ ಪುತ್ರಿಯರು ಲಗ್ನವಾದಾಗಿನಿಂದ ಈ ವರೆತ್ತಿನವರೆಗೆ ನಿನ್ನನ್ನು ಸಮವಾಗಿಯೇ ಪ್ರೀತಿಸುತ್ತಿರಲು, ನೀನು ಇವರನ್ನು ತಿರಸ್ಕರಿಸಿ, ಆ ರೋಹಿಣಿಯೊಬ್ಬಳನ್ನೇ ಪ್ರೀತಿಸುತ್ತಿರುವೆಯಲ್ಲ! ಹೀಗೆ ಮಾಡುವದು ಸತ್ಕುಲೋತ್ಪನ್ನನಾದ ನಿನಗೆ ಉಚಿತವಲ್ಲವೆಂಬದನ್ನು ಯಾರಾದರೂ ಹೇಳಬಹುದು. ಇದರಿಂದ ಲೋಕದಲ್ಲಿ ನಿನ್ನ ಅಪಕೀರ್ತಿಯಾಗಿ ನಿನ್ನ ಗೌರವವು ಕಡಿಮೆಯಾಗುವದೆಂಬದನ್ನು ಚನ್ನಾಗಿ ಲಕ್ಷದಲ್ಲಿಡು. ಇನ್ನು ಮುಂದೆಯಾದರೂ ನೀನು ಹೀಗೆ ಮಾಡದೆ ನನ್ನ ಈ ಪುತ್ರಿಯರನ್ನು ಸಮವಾಗಿ ಪ್ರೀತಿಸು, ಎಂದು ಹೇಳಿ, ಅವರನ್ನು ಅಲ್ಲಿಯೇ ಬಿಟ್ಟು ತಾನು ತನ್ನ ಸ್ಥಳಕ್ಕೆ ಬಂದನು. ಆದರೆ ಚಂದ್ರನು ಮಾವನ ಮಾತನ್ನು ಲಕ್ಷಿಸದೆ ರೂಪಗರ್ವಿತನಾಗಿ ಮೊದಲಿ

ನಂತೆಯೇ ನಡೆಯುಹತ್ತಿದನು. ಹೀಗೆ ಅಳಿಯನು ತನ್ನ ಮಾತು ಲಕ್ಷಿಸದೆ ಮತ್ತೆ ಉದ್ಧಾಮತನದಿಂದ ನಡೆಯುಹತ್ತಿರುವನೆಂಬ ವರ್ತಮಾನವನ್ನು ಕೇಳಿ ದಕ್ಷನಿಗೆ ಬಹಳ ಸಿಟ್ಟು ಬಂದಿತು. ಅವನು ಒಂದುದಿನ ಸಮಯನೋಡಿ ಚಂದ್ರನನ್ನು ತಾನಿದ್ದೆಡೆಗೆ ಕರೆಯಿಸಿ ಅವನನ್ನು ಕುರಿತು ಸಂತಾಪದಿಂದ–ಎಲಾ, ನೀಚಾ, ನಾನು ಎಷ್ಟು ಹೇಳಿದರೂ ನನ್ನ ಮಾತು ಕೇಳದೆ ರೂಪಗರ್ವಿತನಾಗಿ ನಿನ್ನ ಮನಸ್ಸಿಗೆ ಬಂದಹಾಗೆ ನಡೆದುಕೊಂಡೆಯಾದ್ದರಿಂದ, ಈವೊತ್ತಿನಿಂದ ನೀನು ಕ್ಷಯರೋಗಿಯಾಗು, ಎಂದು ಶಪಿಸಿ ಸಿಟ್ಟಿನಿಂದ ಅವನನ್ನು ಹೊರಗೆ ದೂಡಿಸಿದನು. ಹೀಗೆ ದಕ್ಷನಿಂದ ಚಂದ್ರಮನಿಗೆ ಶಾಪವಾದದ್ದನ್ನು ಕೇಳಿ ಎಲ್ಲಾ ಕಡೆಗೂ ಹಾಹಾಕಾರ ಹುಟ್ಟಿತು. ಸ್ವರ್ಗದಲ್ಲಿದ್ದ ಇಂದ್ರಾದಿ ದೇವತೆಗಳೂ, ಗಂಧರ್ವರೂ, ಕಿನ್ನರರೂ, ಕಿಂಪುರುಷರೂ ಒಂದೇಸವನೆ ದುಃಖಿಸುತ್ತ ಚಂದ್ರಮನಬಳಿಗೆ ಬಂದು, ಅವನನ್ನು ಮುಂದೆಮಾಡಿ ಎಲ್ಲರೂ ಬ್ರಹ್ಮನಬಳಿಗೆ ಬಂದು, ಆದ ಎಲ್ಲಸಂಗತಿಯನ್ನೂ ಅವನಿಗೆ ಅರುಪಿ, ಶಾಪನಿವೃತ್ತಿಗಾಗಿ ಅವನನ್ನು ಪ್ರಾರ್ಥಿಸಿದರು.

ಹೀಗೆ ಅನನ್ಯಗತಿಕರಾಗಿ ಪ್ರಾರ್ಥಿಸಬಂದ ದೇವತೆಗಳನ್ನು ಕುರಿತು ಬ್ರಹ್ಮದೇವನು ಉಪಹಾಸದಿಂದ—ದೇವತೆಗಳಿರಾ, ಇದಕ್ಕೆ ಯಾರು ಏನುಮಾಡುವಹಾಗಿದೆ! “ ಅವಶ್ಯಮೇವಭೋಕ್ತವ್ಯಂ ಕೃತಂ ಕರ್ಮ ಶುಭಾಶುಭಂ ” ಎಂಬಂತೆ, ತಾನು ಮಾಡಿದ ಶುಭಾಶುಭ ಕರ್ಮ ಫಲಗಳನ್ನು ತಾನೇ ಅನುಭವಿಸಿ ತೀರಿಸಬೇಕಾಗುವದಲ್ಲವೆ! ಅಂದ ಮೇಲೆ ಭಗವದಿಚ್ಛೆಯಿಂದಾದ ಇದಕ್ಕೆ ನಾನಾದರೂ ಏನುಮಾಡುವಹಾಗಿದೆ! ಇದು ಇವನ ಘೋರಪಾಪದ ಫಲವಾದ್ದರಿಂದ ಅವಶ್ಯವಾಗಿ ಭೋಗಿಸಬೇಕಾಗಿರಲು, ಅದಕ್ಕೆ ಯಾರೂ ಅಡ್ಡಬರುವಹಾಗಿಲ್ಲ. ಹಾಗು ಈ ಚಂದ್ರನಾದರೂ ಇಂಥ ಪಾಪಫಲವನ್ನು ಭೋಗಿಸುವಷ್ಟು ಪಾಪಿಯೇ ಇರುವನಾದ್ದರಿಂದ ಇವನಿಗಾದ ಈಗಿನ ಈ ಶಿಕ್ಷೆಯು ಯೋಗ್ಯವಾದದ್ದೇ ಇರುವದೆಂದು ನನಗೆ ಕಂಡುಬರುತ್ತದೆ. ಇದೇ ಚಂದ್ರನು ಹಿಂದಕ್ಕೆ ವಿದ್ಯಾಭ್ಯಾಸಕ್ಕಾಗಿ ಬ್ರಹಸ್ಪತಿಯ ಬಳಿಯಲ್ಲಿದ್ದಾಗ ಅವನ ಧರ್ಮಪತ್ನಿಯಾದ ತಾರೆಯನ್ನು ಅಪಹರಿಸಿ ಕೃತಘ್ನರಂತೆ ಆ ದುಷ್ಟದೈತ್ಯರ ಪಕ್ಷಗಟ್ಟಿ ದೇವತೆಗಳಿಗೆ ಕೇಡುಬಗೆದನೆಂಬ ಸಂಗತಿಯನ್ನು ನೀವು ಮರೆತಿರಲಿಕ್ಕಿಲ್ಲವಷ್ಟೆ? ಅಂದಮೇಲೆ ಇಂಥವನ ವಿಷಯವಾಗಿ ಎಷ್ಟು ಮಾತ್ರವೂ ನನ್ನ ಅಂತಃಕರಣವು ಕರಗುವಹಾಗಿಲ್ಲ; ಆದರೂ ನೀವೆಲ್ಲರೂ ಇಲ್ಲಿಯವರೆಗೆ ಅನನ್ಯಗತಿಕರಾಗಿ ನನಗೆ ಶರಣುಬಂದಿರುವಿರಾದ್ದರಿಂದ ಇದಕ್ಕಾಗಿ ನಿಮಗೊಂದು ಉಪಾಯವನ್ನು ಹೇಳುವೆನು ಕೇಳಿರಿ. ನೀವು ಇಲ್ಲಿಂದ ಶಾಪಗ್ರಸ್ತನಾದ ಈ ಚಂದ್ರನನ್ನು ಕರಕೊಂಡು ಭೂತಲದಲ್ಲಿರುವ ಪ್ರಭಾಸಕ್ಷೇತ್ರಕ್ಕೆ ನೆಟ್ಟಗೆ ಹೋಗತಕ್ಕದ್ದು. ಅಲ್ಲಿ ಇವನು, ಷಣ್ಮಾಸಗಳವರೆಗೆ ಶುಚಿರ್ಭೂತನಾಗಿ ಭಗವಾನ್ ಶಂಕರನನ್ನು ಭಕ್ತಿಪೂರ್ವಕವಾಗಿ ಭಜಿಸಿದರೆ ಆ ಸದಾಶಿವನ ಕೃಪೆಯಿಂದ ಅಲ್ಪಮಟ್ಟಿಗಾದರೂ ಇವನ ಶಾಪನಿವೃತ್ತಿಯಾಗಿ ಇವನ ಮನಸ್ಸಿಗೆ ಸಮಾಧಾನವಾಗಬಹುದು. ಎಂದು ಹೇಳಲು, ಬ್ರಹ್ಮನ ಈ ಭಾಷಣದಿಂದ ಎಲ್ಲರಿಗೂ ಸಮಾಧಾನವಾಯಿತು. ಅವನ ಹೇಳಿಕೆಯಂತೆ ಇಂದ್ರಾದಿಕರು ಚಂದ್ರನೊಡನೆ ಪ್ರಭಾಸಕ್ಷೇತ್ರಕ್ಕೆ ಬಂದು, ಅಲ್ಲಿದ್ದ ಋಷೀಶ್ವರರಿಂದ

ಇವನಿಗೆ ಮೃತ್ಯುಂಜಯ ವಿಧಿಪೂರ್ವಕವಾಗಿ ಪಾರ್ಥಿವ ಪೂಜೆಯ ದೀಕ್ಷೆಯನ್ನು ಕೊಡಿಸಿ, ಅವನು ಶಿವನನ್ನು ಕುರಿತು ತಪಸ್ಸು ಮಾಡಹತ್ತಿದಮೇಲೆ ಎಲ್ಲರೂ ಸಂತೋಷದಿಂದ ತಮ್ಮ ತಮ್ಮ ಸ್ಥಳಗಳಿಗೆ ಹೊರಟುಹೋದರು. ಇತ್ತ ಚಂದ್ರನು ಮುಂದೆ ಷಣ್ಮಾಸಗಳವರೆಗೆ ಏಕಾಸನದಲ್ಲಿ ಕುಳಿತು ಒಂದೇ ಮನಸ್ಸಿನಿಂದ ಶಿವನನ್ನು ಆರಾಧಿಸಲು, ಕರುಣಾಸಾಗರನಾದ ಭಗವಾನ್ ಸದಾಶಿವನು ಸುಪ್ರಸನ್ನನಾಗಿ ತನ್ನ ದಿವ್ಯತೇಜೋವಿಶೇಷದಿಂದ ಚಂದ್ರನ ಕಣ್ಣುಗಳನ್ನು ಕುಕ್ಕುತ್ತ ಅವನ ಮುಂಭಾಗದಲ್ಲಿ ಪ್ರಕಟನಾದನು. ಹೀಗೆ ಕೈಲಾಸಪತಿಯು ಝುಗಝುಗಿಸುತ್ತ ಸುಪ್ರಸನ್ನನಾಗಿ ತನ್ನೆದುರಿಗೆ ಬಂದುನಿಂತಿರುವದನ್ನು ನೋಡಿ ಚಂದ್ರಮನು ಪರಮಾನಂದ ಭರಿತನಾಗಿ ಪರಮಾತ್ಮನ ಪಾದಗಳಿಗೆ ಸಾಷ್ಟಾಂಗವೆರಗಿ ವಿನಯದಿಂದ ಒಂದುಬದಿಗೆ ನಿಂತುಕೊಳ್ಳಲು, ಶಂಕರನು ಅಭಿನಂದಿಸಿ ವರಪ್ರಾರ್ಥನೆಗಾಗಿ ಅವನನ್ನು ಪ್ರೇರಿಸಿದನು. ಆಗ ನಿಶಾಕರನು ನಯಭಯದಿಂದ ನಮಸ್ಕರಿಸಿ ಭಗವಂತನನ್ನು ಕುರಿತು—ದೇವಾ, ದೀನಬಂಧೋ, ಸರ್ವಜ್ಞಶಿಖಾಮಣಿಯಾದ ನೀನರಿಯದ ವಿಷಯವು ಅದಾವದಿರುವದು? ಆದರೂ ನನ್ನ ಮುಖದಿಂದಲೇ ಆಡಿಸುವದು ನಿನ್ನ ಮನಸ್ಸಿನಲ್ಲಿದ್ದರೆ ಬೇಡಿಕೊಳ್ಳುವೆನು ಕೇಳು. ನನ್ನ ಶ್ವಶುರನಾದ ದಕ್ಷಪ್ರಜಾಪತಿಯ ಶಾಪದಿಂದೊದಗಿದ ನನ್ನ ಈ ಕ್ಷಯರೋಗವನ್ನು ದೂರಮಾಡಿ ಮಹಾಪಾಪಿಯಾದ ನನ್ನನ್ನು ಅನುಗ್ರಹಿಸಿ ಇಂದಿನಂತೆಯೇ ನಿರಂತರವಾಗಿ ನಿನ್ನ ಪಾದಾರವಿಂದಗಳಲ್ಲಿ ನನ್ನ ಭಕ್ತಿಯು ಅಚಲವಾಗಿ ಉಳಿಯುವಂತೆ ನೀನು ಕರುಣಿಸು, ಎಂದು ಪ್ರಾರ್ಥಿಸಲು, ಪರಮೇಶ್ವರನು ಮೃದುಸ್ಮಿತನಾಗಿ ಅವನನ್ನು ಕುರಿತು—ವತ್ಸಾ, ನಿನ್ನ ಪಾಪವು ಇನ್ನೂ ಬಲಿಷ್ಠವಾಗಿರುವದರಿಂದ ಆ ಪಾಪದ ಫಲವಾಗಿರುವ ನಿನ್ನ ಈ ರೋಗಾಂಕುರವು ಸಮೂಲವಾಗಿ ಅಳಿದು ಹೋಗದೆ, ಕೃಷ್ಣ ಪಕ್ಷದ ಪ್ರತಿಒಂದು ದಿವಸಗಳಲ್ಲಿ ಬೆಳೆಯುತ್ತಾ ಹೋಗಿ ಶುಕ್ಲಪಕ್ಷದ ಪ್ರತಿದಿವಸಗಳಲ್ಲಿ ಕ್ರಮವಾಗಿ ಕ್ಷಯವಾಗುತ್ತ ಹೋಗುವದು. ಹೀಗಿದ್ದರೂ ನಿನ್ನಲ್ಲಿ ಆಲ್ಹಾದಕತ್ವಗುಣವು ಪೂರ್ಣವಾಗಿರುವದರಿಂದ ನೀನು ಲೋಕಾದರಣೀಯನಾಗುವೆಯಲ್ಲದೆ, ನಿನ್ನ ಷೋಡಶಕಲೆಗಳೊಳಗಿನ ಒಂದು ಕಲೆಯು ನನ್ನ ಶಿರೋಭೂಷಣವಾಗಿ ಯಾವಾಗಲೂ ನನ್ನ ಮಸ್ತಕದಲ್ಲಿ ಉಳಿಯುವದು, ಎಂದು ವರವೀಯಲು, ಚಂದ್ರಮನು ಸಂತೋಷಪಟ್ಟು ಶಂಕರನನ್ನು ಬಹುವಿಧ ಸ್ತೋತ್ರಗಳಿಂದ ಸ್ತುತಿಸಹತ್ತಿದನು. ಅಷ್ಟರಲ್ಲಿ ಚಂದ್ರನು ತಪಸ್ಸಿದ್ಧನಾಗಿರುವನೆಂಬ ಸುದ್ದಿಹತ್ತಿ ಇಂದ್ರಾದಿಕರು ಅವನನ್ನು ಅಭಿನಂದಿಸುವದಕ್ಕಾಗಿ ಆ ಸ್ಥಳಕ್ಕೆ ಬಂದು, ಭಗವಾನ್ ಶಂಕರನ ಪಾದಗಳಿಗೆ ಸಾಷ್ಟಾಂಗವಾಗಿ ಎರಗಿ ಆತನನ್ನು ಕುರಿತು—ಭಗವನ್, ಕೈಲಾಸಪತೇ, ನಿನ್ನ ದಿವ್ಯದರ್ಶನದಿಂದ ನಾವೆಲ್ಲರೂ ಪುನೀತರಾದೆವು; ಆದರೆ ದೇವಾ, ಇದರಂತೆಯೇ ಭವರೋಗವೈದ್ಯನಾದ ನೀನು ಮುಂದೆಯಾದರೂ ನಮ್ಮ ಧ್ಯೇಯವಸ್ತುವಾಗಿ, ಸಕಲಪ್ರಾಣಿಗಳ ರೋಗಾದ್ಯನರ್ಥಗಳನ್ನು ದೂರಮಾಡುತ್ತ ಇದೇಸ್ಥಳದಲ್ಲಿ ವಾಸಿಸೆಂದು ಪ್ರಾರ್ಥಿಸಲು, ಅವರ ಸವಿನಯಪ್ರಾರ್ಥನೆಯಂತೆ ಕರುಣಾಳುವಾದ ಭಗವಾನ್ ಚಂದ್ರಮೌಳೀಶ್ವರನು ಲೋಕಕಲ್ಯಾಣಾರ್ಥವಾಗಿ ಸೌರಾಷ್ಟ್ರದೇಶದಲ್ಲಿರುವ ಆ ಪ್ರಭಾಸಕ್ಷೇತ್ರದಲ್ಲಿ ಲಿಂಗಾಕಾರನಾಗಿ

ಸೋಮೇಶ್ವರನೆಂಬ ಹೆಸರಿನಿಂದ ವಾಸಿಸಹತ್ತಿದನು- ಈ ಕ್ಷೇತ್ರದ ಪ್ರದಕ್ಷಿಣೆಯಿಂದ ಪ್ರಾಣಿಗಳಿಗೆ ಭೂಪ್ರದಕ್ಷಿಣೆಯ ಫಲವು ಪ್ರಾಪ್ತವಾಗುವದೆಂದು ವ್ಯಾಸರು ಹೇಳಿರುವರು. ಸೋಮಕಲೆಯನ್ನು ಶಿರಸ್ಸಿನಲ್ಲಿ ಧರಿಸಿದ್ದರಿಂದಲೂ ಇವನಿಗೆ ಸೋಮೇಶ್ವರನೆಂಬ ಹೆಸರು ಪ್ರಾಪ್ತವಾಯಿತು. ಈ ಜ್ಯೋತಿರ್ಲಿಂಗದ ಸಮೀಪದಲ್ಲಿಯೇ ಒಂದು ತೀರ್ಥವಿದ್ದು, ಅದರಲ್ಲಿ ಚಂದ್ರನು ನಿತ್ಯದಲ್ಲಿ ಸ್ನಾನಮಾಡುತ್ತಿದ್ದನಾದ್ದರಿಂದ ಇದು ಚಂದ್ರಕುಂಡವೆಂಬ ಗೌರವದ ನಾಮಹೊಂದಿ ಈವೊತ್ತಿಗೂ ಆ ಸ್ಥಳದಲ್ಲಿ ಸುಪ್ರಸಿದ್ಧವಾಗಿರುವದು. ಈ ಪವಿತ್ರ ತೀರ್ಥದ ಸ್ನಾನಮಾತ್ರದಿಂದ ಪ್ರಾಣಿಗಳ ಮಹಾನ್ ಮಹಾನ್ ರೋಗಗಳೂ ಮಹಾಪಾತಕಗಳೂ ದೂರವಾಗುವವು.

## ೨ ಮಲ್ಲಿಕಾರ್ಜುನ-ಲಿಂಗೋತ್ಪತ್ತಿ.

**श्री शैलसंगे विबुधातिसंगे तुलाद्रितुंगेऽपि मुदावसंतम्॥**
**तमर्जुनं मल्लिकपूर्वमेकं नमामि संसार समुद्रसेतुम् ॥२॥**

ವಿವೇಕಶೀಲಾ, ಇನ್ನು ನೀನು ಶ್ರೀಶೈಲವಾಸಿಯಾದ ಮಲ್ಲಿಕಾರ್ಜುನನ ಮಾಹಾತ್ಮ್ಯವನ್ನು ಕೇಳು. ಹಿಂದಕ್ಕೆ ಕೈಲಾಸಪರ್ವತದಲ್ಲಿ ಉಮಾಮಹೇಶ್ವರರು ತಮ್ಮ ಪ್ರಿಯ ಪುತ್ರರಾದ ಷಣ್ಮುಖ-ಗಜಮುಖರಿಂದ ಕೂಡಿ ವಿನೋದವಾಡುತ್ತ ಕುಳಿತಾಗ ಕ್ರಮವಾಗಿ ಅವರೀರ್ವರಲ್ಲಿ ಮಕ್ಕಳ ವಿವಾಹಪರಭಾಷಣಗಳು ನಡೆದವು. ಆಗ ಗಣಪ-ಷಣ್ಮುಖರು ತಮ್ಮ ವಿವಾಹಪ್ರಸಕ್ತಿಯ ಭಾಷಣಗಳನ್ನು ಕೇಳಿ ಸಂತೋಷದಿಂದ ನಗುತ್ತ 'ನನ್ನ ವಿವಾಹ ಮೊದಲು ನನ್ನ ವಿವಾಹ ಮೊದಲೆ, ಂದು ತಮ್ಮ ತಮ್ಮೊಳಗೆ ಕಲಹ ಬೆಳಸಹತ್ತಿದರು. ಆಗ ಶಿವಾ-ಶಂಕರರು ಪುತ್ರರ ಈ ಪ್ರೇಮಕಲಹವನ್ನು ನೋಡಿ ಮುಗುಳುನಗೆಯಿಂದ ನಕ್ಕು ಅವರೀರ್ವರ ಕಲಹಶಾಂತಿಗಾಗಿ ಒಂದು ಯುಕ್ತಿಯನ್ನು ಯೋಚಿಸಿ ಅವರನ್ನು ಕುರಿತು—ಪ್ರಿಯಪುತ್ರರೇ, ಸುಮ್ಮನೆ ನಿಮ್ಮ ನಿಮ್ಮೊಳಗೆ ಹೀಗೆ ಕಲಹಬೆಳಿಸಿ ದಣಿದುಕೊಳ್ಳಬೇಡಿರಿ. ಮೊದಲು ವಿವಾಹವಾಗಬೇಕೆಂದು ಇಚ್ಛೆಯುಳ್ಳವರು ಈ ಸ್ಥಳದಿಂದ ಒಮ್ಮೆಲೆ ಹೊರಟು, ಸಪ್ತಸಾಗರ ವಲಯಾಂಕಿತವಾದ ಈ ಭೂಮಿಯನ್ನು ಸುತ್ತುವರೆದು ಪುನಃ ಇದೇ ಸ್ಥಳಕ್ಕೆ ಬರಬೇಕು. ಇಬ್ಬರಲ್ಲಿ ಯಾವನು ಮುಂಚಿತವಾಗಿ ಬರುವನೋ ಅವನದೇ ಮೊದಲು ವಿವಾಹವು!

ಹೀಗೆ ತನ್ನ ಮಾತಾಪಿತೃಗಳು ಮಾಡಿದ ಸಂಕಲ್ಪವನ್ನು ಕೇಳಿ ಮಹಾಸತ್ವಶಾಲಿಯಾದ ಕುಮಾರನು ಉತ್ಸಾಹಗೊಂಡು ತಾನು ಕುಳಿತ ಸ್ಥಳದಿಂದ ಚಟ್ಟನೆ ಎದ್ದು ಪಿತೃಚರಣಗಳಿಗೆ ಸಾಷ್ಟಾಂಗವೆರಗಿ, ಹಾಗೆಯೇ ಭೂಪ್ರದಕ್ಷಿಣೆಯ ಮಹಾಕಾರ್ಯಕ್ಕಾಗಿ ಹೊರಟುಬಿಟ್ಟನು. ಹೀಗೆ ತನ್ನ ಬಂಧುವು ಉತ್ಸಾಹದಿಂದ ಹೊರಟದ್ದನ್ನು ನೋಡಿ ಲಂಬೋದರನು ಏಳಲಾರದೆ ಕುಳಿತಲ್ಲಿಯೇ ಕುಳಿತು ಮನಸ್ಸಿನಲ್ಲಿ—ಎಲಾ, ನನ್ನ ವಾಹನವಾದ

ಮೂಷಕದ ಸಹಾಯವಿಲ್ಲದೆ ಪಾದಚಾರಿಯಾಗಿ ನಗಾರಿಯಂಥ ಹೊಟ್ಟೆ ಹೊತ್ತುಕೊಂಡು ನಾಲ್ಕು ಹೆಜ್ಜೆ ನಡೆಯುವದು ನನಗೆ ಅಶಕ್ಯವಾಗಿರಲು, ಇಂಥ ಅವಾಧವ್ಯವಾದ ಭೂಪ್ರದಕ್ಷಿಣೆಯನ್ನು ನಾನು ಮಾಡುವ ಬಗೆಹೇಗೆ? ಎಂದು ಅಂದುಕೊಂಡು ಆ ಬುದ್ಧಿಶಾಲಿಯು ಏನೋ ಯೋಚಿಸಿ ಒಮ್ಮೆಲೇ ತಾನು ಕುಳಿತಿರುವ ಸ್ಥಳದಿಂದೆದ್ದು ಹೊರಗೆಬಂದು ಒಂದು ಪುಣ್ಯಸರೋವರದಲ್ಲಿ ಸ್ನಾನಮಾಡಿ ಶುದ್ಧ ವಸ್ತ್ರಗಳನ್ನು ಧರಿಸಿ ಪೂಜೆಯ ಸಾಮಾನುಗಳನ್ನು ತಕೊಂಡು, ಉಚ್ಚಸ್ವರದಿಂದ ಮಂತ್ರೋಚ್ಚಾರ ಮಾಡುತ್ತ ಮಾತಾಪಿತೃಗಳಿದ್ದೆಡೆಗೆ ಬಂದು ಅವರ ಪೂಜೆಯನ್ನು ಮಾಡಿ ಅವರಿಗೆ ಏಳು ಸಾರೆ ಭಕ್ತಿಯಿಂದ ಪ್ರದಕ್ಷಿಣೆಮಾಡಿ ಮಾರ್ಗಾಯಾಸದಿಂದ ದಣಿದು ಬಂದವನಂತೆ ದೀರ್ಘವಾಗಿ ನಿಟ್ಟುಸುರು ಬಿಟ್ಟು ಅವರ ಮುಂದುಗಡೆಯಲ್ಲಿ ಕುಳಿತುಕೊಂಡನು. ಆಗ ಗಿರಿಜೆಯು ಇವನ ಇಂಗಿತವನ್ನು ಅರಿತವಳಾಗಿದ್ದರೂ ಇವನ ಬುದ್ಧಿ ಪರೀಕ್ಷಣೆಗಾಗಿ ಮೃದು ಹಾಸ್ಯದಿಂದ,—ಏನಪ್ಪಾ ಲಂಬೋದರಾ, ಮೊದಲು ನಮ್ಮ ಪೂಜೆಗಾಗಿಯೇ ನಿನಗೆ ಇಷ್ಟು ವೇಳೆ ಹಿಡಿದಮೇಲೆ, ಇನ್ನು ನಿನ್ನ ಪೃಥ್ವಿಯ ಪ್ರದಕ್ಷಿಣೆಯ ಮಹಾಕಾರ್ಯವು ಎಂದಿಗಾಗಬೇಕು? ಕೇವಲ ನಮ್ಮ ಪ್ರದಕ್ಷಿಣೆಯಿಂದಲೇ ದಣಿದು ಉಸುರುಹಾಕುವ ನೀನು ಅವಾಧವ್ಯವಾದ ಭೂಮಿಯನ್ನು ಹೇಗೆ ಸುತ್ತುವರೆದು ಬರುವೆಯೋ ತಿಳಿಯದು. ಎಂದುನುಡಿದು ಸುಮ್ಮನಾಗಲು, ವಿನಾಯಕನು ವಿಕಟವಾಗಿ ನಕ್ಕು—ತಾಯಿ, ನನ್ನ ಭೂಪ್ರದಕ್ಷಿಣೆಯು ಯಾವಾಗೋ ಮುಗಿದು ಹೋಗಿದೆ. ಮುಂದೆ ನೀನು ಹೀಗೆ ತಗಲು ಮಾಡುವವಳೆಂಬದನ್ನು ಅರಿತೇ ನಾನು ಬಿಟ್ಟ ಕೆಲಸ ಬಿಟ್ಟು ನನ್ನ ಸ್ಥೂಲ ದೇಹಕ್ಕೆ ವ್ಯಥೆಯಾದೀತೆಂಬವನ್ನು ಸಹನೋಡದೆ ಒಂದೇದಿನ ಒಂದೇ ತಾಸಿನಲ್ಲಿ ಒಂದೇಸವನೆ ಒಂದೇಮನಸ್ಸಿನಿಂದ ಒಂದಲ್ಲ, ಎರಡಲ್ಲ, ಮೂರಲ್ಲ ಏಳುಸಾರೆ ಭೂಪ್ರದಕ್ಷಿಣೆ ಮಾಡಿರಲು, ಈ ಸಮರ್ಥನ ವಿಷಯವಾಗಿ ಇನ್ನೂ ನಿನ್ನ ಅವಿಶ್ವಾಸವೇ? ಎಂದು ಸ್ಪಷ್ಟವಾಗಿ ನುಡಿದು, ಅವರಮುಂದೆ ಗಟ್ಟಿಯಾಗಿ ಕುಳಿತುಬಿಟ್ಟನು. ಹೀಗೆ ತನ್ನ ಮಗನು ಯೋಚಿಸಿದ ಯುಕ್ತಿಯನ್ನು ನೋಡಿ ಪಾರ್ವತಿಯು ಸಂತೋಷಪಟ್ಟು ಅಂತರಂಗದಲ್ಲಿ ಇವನ ವಿವಾಹವನ್ನು ಮಾಡಬೇಕೆಂದು ನಿಶ್ಚಯಿಸಿಕೊಂಡಿದ್ದರೂ, ಇವನನ್ನು ರೇಗಿಗೆಬ್ಬಿಸಿ ಇವನ ಬುದ್ಧಿಪ್ರಭಾವವನ್ನು ಅರಿತುಕೊಳ್ಳಬೇಕೆಂದು ಕ್ರೋಧಮುದ್ರೆಯಿಂದ ಅವನನ್ನು ಕುರಿತು—ಎಲಾ, ಏನೂ ಅರಿಯದ ಮೂರ್ಖನಂತೆ ನೀನು ನಿನ್ನ ಬಾಯಿಗೆ ಬಂದಹಾಗೆ ಬಡಬಡಿಸುತ್ತ ಮನೆಹಿಡಿದು ಕುಳಿತರೆ, ನಿನ್ನ ಲಗ್ನವಾದಂತಾಯಿತೇ? ಇಲ್ಲಿಯೇ ಕುಳಿತು, ನಾನು ಏಳುಸಾರೆಭೂಪ್ರದಕ್ಷಿಣೆ ಮಾಡಿದೆನೆಂದು ಸುಳ್ಳುಸುಳ್ಳೇ ಹೇಳುವೆಯಲ್ಲ! ಇದಕ್ಕೆ ನಿನಗೆ ಏನನ್ನಬೇಕು? ತಮ್ಮ, ಷಣ್ಮುಖನಂತೆ ನೀನು ಮನೆಬಿಟ್ಟು ಹೊರಟಹೊರತು ನಿನ್ನ ಲಗ್ನವನ್ನು ನಾವು ಎಂದಿಗೂಮಾಡುವವರಲ್ಲ, ಎಂದು ನುಡಿಯಲು, ಗಣೇಶನು—ಅಮ್ಮಾ, ಎಂಥ ಅನುಚಿತ ಮಾತಾಡುವೆಯಲ್ಲ! ಜಗತ್ತಿಗೇ ಆದಿ ದಂಪತಿಗಳೆನಿಸಿದ ನೀವು ನನಗೆ ಪ್ರತ್ಯಕ್ಷ ಮಾತಾಪಿತೃಗಳಾಗಿದ್ದು, ನಿಮ್ಮ ಪ್ರದಕ್ಷಿಣೆಯಿಂದ ಪುತ್ರನಾದ ನನಗೆ ಭೂಪ್ರದಕ್ಷಿಣೆಯ ಫಲವು ದೊರೆಯಲಾರದೇ? ಮಾತೆ, ಸರ್ವಾಧಾರನಾದ ಆ ಸದಾಶಿವನ ಮಹಾ ಮಹಿಮೆಯನ್ನು

ನೀನು ಅರಿಯದವಳೇ? ಯಾವನ ಉದರದಲ್ಲಿ ಅಖಿಲ ಬ್ರಹ್ಮಾಂಡಗಳು ಹವೆಯೊಳಗಿನ ಕ್ಷುದ್ರಪರಮಾಣುಗಳಂತೆ ಕೇವಲವಾಗಿ ಹಾರಾಡುತ್ತಿರುವವೋ, ಚತುಃಸಮುದ್ರವಲಯಿತವಾದ ಈ ಪೃಥ್ವಿಯು ಯಾವನಿಗೆ ಕುಳಿತುಕೊಳ್ಳುವ ರಥವಾಗಿರುವದೋ, ಅಂಥ ಸಾಯುಧ ಸಶಕ್ತಿಕನಾದ ಈ ಸದಾಶಿವನ ಪ್ರದಕ್ಷಿಣೆಯಿಂದ ಭೂ ಪ್ರದಕ್ಷಿಣೆಯು ಫಲವಿಲ್ಲವೆಂಬದನ್ನು ಪ್ರತಿಪಾದಿಸುವ ಅಂಥ ಶ್ರುತಿಸ್ಮೃತಿಗಳಾದರೂ ಯಾವಿರುವವು? ಹಾಗೂ ಸಕಲ ದೇವತಾಸ್ವರೂಪರಾದ ಮಾತಾಪಿತೃಗಳು ಪ್ರತ್ಯಕ್ಷ ಮನೆಯಲ್ಲಿಯೇ ಇರಲು, ಇವರನ್ನು ಬಿಟ್ಟು, ನಿಸ್ಸಾರವಾದ ಈ ಪೃಥ್ವಿಯನ್ನು ಸುತ್ತುವರೆದು ಸುಮ್ಮಸುಮ್ಮನೆ ದಣಿದುಕೊಳ್ಳಬೇಕೆಂಬದು ಯಾವ ಶಾಸ್ತ್ರದಲ್ಲಿಯ ಮಾತು? ಆದುದರಿಂದ, ಈ ಬಗೆಯ ಕ್ಷುದ್ರ ವಿಚಾರಗಳಿಂದ ಸುಮ್ಮನೆ ವೇಳೆಗಳೆಯದೆ, ನಾಳೆ ಬೆಳಗಾಗುತ್ತಲೆ ನೀವಿಬ್ಬರೂ ನನಗೆ ಯೋಗ್ಯರಾದ ಇಬ್ಬರು ಕನ್ನಿಕೆಯರನ್ನು ಗೊತ್ತು ಮಾಡತಕ್ಕದ್ದು. ಇಲ್ಲದೆ ಹೋದರೆ ಸರ್ವಾಧಾರರೆಂಬ ನಿಮ್ಮ ನಾಮದೊಂದಿಗೆ ಅಪೌರುಷೇಯವಾದ ಈ ವೇದ ಮಾರ್ಗವೇ ಸುಳ್ಳಿರುವದೆಂತಲೂ, ಇವರನ್ನು ಯಾರೂ ಭಜಿಸಬಾರದೆಂತಲೂ ಸಕಲ ಲೋಕಗಳಲ್ಲಿ ನಾನು ಸಾರಿಬಿಡುವೆನು, ಎಂದು ದಿಟ್ಟತನದಿಂದ ಸ್ಪಷ್ಟವಾಗಿ ನುಡಿಯಲು, ಪಾರ್ವತೀಪರಮೇಶ್ವರರು ಬುದ್ಧಿಶಾಲಿಯಾದ ಪುತ್ರನ ಶಾಸ್ತ್ರಸಮ್ಮತವಾದ ಭಾಷಣಗಳಿಗೆ ಸಂತೋಷದಿಂದ ಒಡಂಬಟ್ಟು ಮರುದಿನವೇ ಶುಭಮುಹೂರ್ತವಿದ್ದದರಿಂದ ವಿಶ್ವರೂಪನ ಮಕ್ಕಳಾದ ಸಿದ್ಧಿ, ಬುದ್ಧಿ ಎಂಬ ಇಬ್ಬರು ಕನ್ನಿಕೆಯರನ್ನು ಗೊತ್ತು ಮಾಡಿ, ಅವರೊಡನೆ ದೊಡ್ಡ ಸಮಾರಂಭದಿಂದ ಮಂಗಲಮೂರುತಿಯಾದ ವಿಘ್ನೇಶ್ವರನ ವಿವಾಹವಿಧಿಯನ್ನು ಮುಗಿಸಿಬಿಟ್ಟರು. ಗಜಮುಖನು, ರೂಪಲಾವಣ್ಯವತಿಯರಾದ ತನ್ನ ಇಬ್ಬರು ಹೆಂಡಿರೊಡನೆ, ನಾನಾವಿಧ ವಿಷಯೋಪಭೋಗಗಳನ್ನು ಭೋಗಿಸಹತ್ತಿ, ಮುಂದೆ ತುಸು ದಿನಗಳಲ್ಲಿಯೇ ಸಿದ್ಧಿ, ಬುದ್ಧಿಯರಿಂದ ಕ್ರಮವಾಗಿ ಲಕ್ಷ, ಲಾಭರೆಂಬ ಇಬ್ಬರು ಗಂಡು ಮಕ್ಕಳನ್ನು ಪಡೆದು, ಅತ್ಯಂತ ಸಂತೋಷದಿಂದ ಕಾಲಕಳೆಯಹತ್ತಿದನು.

ಇತ್ತ ಮಾತಾಪಿತೃಗಳ ಸಂಕಲ್ಪವಿದ್ದಂತೆ ಪೃಥ್ವಿಯ ಪ್ರದಕ್ಷಿಣೆಗಾಗಿ ಹೊರಟಿದ್ದ ಕುಮಾರನು ಯಥಾಪ್ರಕಾರವಾಗಿ ಭೂಮಿಯನ್ನು ಸುತ್ತಿ ತಿರುಗಿ ಕೈಲಾಸಕ್ಕೆ ಹೊರಟು ಬರುತ್ತಿರಲು, ಮಾರ್ಗಮಧ್ಯದಲ್ಲಿ ಅವನಿಗೆ ಕಲಹಪ್ರಿಯನಾದ ನಾರದನ ಭೆಟ್ಟಿಯಾಯಿತು. ಆಗ ಷಣ್ಮುಖನು ತನ್ನ ಭೂಪ್ರದಕ್ಷಿಣೆಯ ವೃತ್ತಾಂತವನ್ನು ಅವರಿಗೆ ಹೇಳಲು, ನಾರದರು ನಗುತ್ತ—ಶಿವಪುತ್ರಾ, ಎಂಥ ಹುಚ್ಚನಪ್ಪಾ ನೀನು! ಸೂಕ್ಷ್ಮ ವಿಚಾರವಿಲ್ಲದ ನೀನು ಹುಂಬತನದಿಂದ ಎಂಥ ಕಾರ್ಯ ಮಾಡಿದರೂ ವ್ಯರ್ಥವೇಸರಿ; ಇದಕ್ಕಾಗಿಯೇ ನಿನಗೆ ಕುಮಾರನೆಂಬ ಹೆಸರು ಸಾರ್ಥಕವಾಗಿರುವದು. ಎಲಾ, ಎಂಥ ಬುದ್ಧಿಗೇಡಿತನವೋ ನಿನ್ನದಿದು? ಭೂಪ್ರದಕ್ಷಿಣೆಯ ನೆವದಿಂದ ತಂದೆ ತಾಯಿಗಳು ನಿನ್ನನ್ನು ಹೊರಗೆ ಹಾಕಿ ಇತ್ತ ತಮ್ಮ ಕಾರ್ಯಸಾಧಿಸಿಕೊಳ್ಳುವರೆಂಬ ಮಾತಿನ ಧೋರಣೆಯು ಸಹ ನಿನಗಿರಬಾರದೇ? ನೋಡು, ಇತ್ತ ನೀನು ಮನೆಬಿಟ್ಟು ಹೋಗುವದೊಂದೇ ತಡ ಕೂಡಲೆ ನಿಮ್ಮ ತಾಯಿತಂದೆಗಳು ನೀನರಿಯದಂತೆ ಮೊದಲೇ ನಿಶ್ಚಯಿಸಿಟ್ಟಿದ್ದ ಸಿದ್ಧಿ—

ಬುದ್ಧಿಯರೆಂಬ ಹೆಸರಿನ ವಿಶ್ವರೂಪನ ಇಬ್ಬರು ಮಕ್ಕಳೊಂದಿಗೆ ಆ ಲಂಬೋದರನ ಲಗ್ನ ಮಾಡಿದರು. ತಿರುಗಿ ನೀನು ಬರುವಷ್ಟರಲ್ಲಿ ಆ ಗಣಪನಿಗೆ ಲಕ್ಷ-ಲಾಭರೆಂಬ ಇಬ್ಬರು ಮಕ್ಕಳು ಸಹ ಹುಟ್ಟಿ, ಆತನು ಈಗ ಹೆಂಡಿರುಮಕ್ಕಳೊಂದಿಗೆ ಬೇಕಾದ ಹಾಗೆ ಸಂಸಾರ ಮಾಡಹತ್ತಿದ್ದಾನೆ. ನೀನು ಹೀಗೆಯೇ ಹೆಂಡಿರು-ಮಕ್ಕಳಿಲ್ಲದೆ, ಬಾಡಿಗೆಯ ಎತ್ತಿನಂತೆ ತೀರ್ಥ-ಕ್ಷೇತ್ರಗಳನ್ನು ತಿರುಗಿ ಒಂದು ದಿನ ಬಿದ್ದು ಹೋಗುವವನು! ಷಣ್ಮುಖಾ, ನಿನ್ನ ಈ ದೈನ್ಯಾವಸ್ಥೆಯನ್ನು ನೋಡಿ ನನಗೆ ಬಹಳೇ ಅಸಮಾಧಾನವಾಗಿದೆ, "ಮಕ್ಕಳಿಗೆ ಶತ್ರುಗಳಂತೆ ಅಕಲ್ಯಾಣ ಮಾಡುವ ಮಾತಾಪಿತೃಗಳ ಮುಖಾವಲೋಕನವನ್ನು ಸಹ ಮಾಡಬಾರದೆಂ"ದು ನೀತಿಶಾಸ್ತ್ರವಿರುವದು ; ಆದುದರಿಂದ ತಿಳಿದವನಾದರೆ ನೀನು ನಿನ್ನ ತಾಯಿತಂದೆಗಳ ಹತ್ತರಿರುವದಂತು ಒತ್ತಟ್ಟಿಗಿರಲಿ, ಅವರ ಮುಖವನ್ನು ಸಹ ನೋಡಬಾರದೆಂದು ನನಗೆ ಕಂಡುಬರುತ್ತದೆ. ಇದರ ಮೇಲೆ ನೀನು ನಿನ್ನ ಮನಸ್ಸಿಗೆ ಬಂದಹಾಗೆ ಮಾಡು, ನಾನಂತೂ ನನ್ನ ಕಾರ್ಯಕ್ಕಾಗಿ ಹೊರಟೆನು, ಎಂದು ನುಡಿದು ನಾರದರು ಎರೆಡನೆಯ ಮಾರ್ಗದಿಂದ ಎತ್ತೋ ಹೊರಟು ಹೋದರು.

ಇತ್ತ ದೀರ್ಘಕಾಲದ ಮಾರ್ಗಾಯಾಸದಿಂದ ಬಹಳವಾಗಿದಣಿದು ಹೋದ ಷಣ್ಮುಖನ ಮನಸ್ಸಿಗೆ ಮೊದಲೇ ತ್ರಾಸವಾಗಿತ್ತು. ಅವರಲ್ಲಿ ಕಲಹಪ್ರಿಯರಾದ ನಾರದರ ಕಿವಿಯೂದಿಕೆಯಿಂದ ತನ್ನ ಪ್ರಯಾಸವು ವ್ಯರ್ಥವಾಯಿತೆಂಬ ಭಾವನೆಯಾಗಿ ಆತನು ಅತ್ಯಂತ ವ್ಯಥಿತನಾದನು- ಆದರೂ ವಿಚಾರದಿಂದ ತನ್ನ ಸಿಟ್ಟನ್ನು ಕಡಿಮೆಮಾಡಿಕೊಂಡು-ನಾನು ಇಲ್ಲಿಯವರೆಗೆ ಬಂದು ಮಾತಾಪಿತೃಗಳನ್ನು ಕಾಣದೆ ಹೋಗುವದು ಅಯೋಗ್ಯವು; ಅವರು ಏನೇ ಮಾಡಲಿ, ಮಗನಾದ ನಾನು ನನ್ನ ಧರ್ಮವನ್ನು ಸರ್ವಥಾ ಬಿಡಬಾರದು, ಎಂದು ವಿಚಾರಿಸಿ ಹಾಗೆಯೇ ಕೈಲಾಸಪರ್ವತಕ್ಕೆ ಬಂದು ಮುಟ್ಟಿದನು. ಇತ್ತ ಕೈಲಾಸದಲ್ಲಿ ಪಾರ್ಷದ ಗಣಗಳಿಂದ ಸೇವೆಗೊಳ್ಳುತ್ತ ಕುಳಿತ ಪಾರ್ವತೀಪರಮೇಶ್ವರರು, ಭೂಪ್ರದಕ್ಷಿಣೆ ಮಾಡಿ ಕುಮಾರನು ತಿರುಗಿಬಂದಿರುವನೆಂಬ ಸುದ್ದಿಯನ್ನು ಕೇಳಿ ಸಂತೋಷಪಟ್ಟು, ಅವನನ್ನು ಕಾಣುವದಕ್ಕಾಗಿ ಪಾದಚಾರಿಗಳಾಗಿ ಸ್ವತಃ ಅವನ ಸಮೀಪಕ್ಕೆ ಬಂದರು- ಆಗ ಷಣ್ಮುಖನು ದೂರದಿಂದಲೇ ಅವರನ್ನು ನಮಸ್ಕರಿಸಿ ವಿಲಕ್ಷಣ ಮುದ್ರೆಯಿಂದ ಅವರನ್ನು ನೋಡುತ್ತ ನಿಂತುಕೊಳ್ಳಲು, ಶಿವಾ-ಶಂಕರರು ದೀರ್ಘಕಾಲದ ಪ್ರವಾಸದಿಂದುಂಟಾದ ಅವನ ಶಾರೀರಕ ಗ್ಲಾನಿಯನ್ನೂ, ಬಿಸಿಲಿನ ತಾಪದಿಂದ ಅತ್ಯಂತ ಮ್ಲಾನವಾಗಿದ್ದ ಅವನ ಮುಖಗಳನ್ನೂ, ಶುಷ್ಕವಾದ ಅವನ ದೇಹವನ್ನೂ ನೋಡಿ ಕನಿಕರಪಟ್ಟು ಪ್ರೇಮಾತಿಶಯದಿಂದ ಅವನನ್ನು ಅಪ್ಪಿಕೊಳ್ಳಬೇಕೆಂದು ಅವನ ಹತ್ತರ ಬರಲು, ಕುಮಾರನಿಗೆ ಇದು ಸಹನವಾಗಲಿಲ್ಲ; ಅವನು ತಾಯಿತಂದೆಗಳನ್ನು ಕುರಿತು—"ಮಹಾ ಕಪಟಿಗಳಾದ ನಿಮ್ಮ ಈ ತೋರಿಕೆಯ ಪ್ರೇಮದಿಂದ ನನಗೆ ಯಾವ ಸೌಖ್ಯವಾಗಬೇಕಾಗಿದೆ? ಇಲ್ಲದ್ದೊಂದು ನೆವ ಹೇಳಿ ನನ್ನನ್ನು ಹೊರಹೊರಡಿಸಿ, ನಾನಿಲ್ಲದಾಗ ನಿಮ್ಮ ಪ್ರೀತಿಯ ಪುತ್ರನ ವಿವಾಹಮಾಡಿ, ನನ್ನನ್ನು ವಂಚಿಸಿದ ನೀವು ನನ್ನ ತಾಯಿತಂದೆಗಳೆ? ತಿಳಿದುನೋಡಿದರೆ ಬಹಳ ಹೊತ್ತು ನಿಮ್ಮ

ಮುಖಾವಲೋಕನವನ್ನು ಸಹ ನಾನು ಮಾಡಬಾರದು! ಬೇಡ, ನನಗೆ ನಿಮ್ಮ ಲಗ್ನವೂ ಬೇಡ! ನಿಮ್ಮ ಸಹವಾಸವೂ ಬೇಡ! ಆಯಿತು, ಈಪೊತ್ತಿಗೆ ನಿಮ್ಮ ಸಂಬಂಧವು ಕಡಿದಂತಾಯಿತು, ಎಂದು ಸ್ಪಷ್ಟವಾಗಿ ನುಡಿದು, ಸಿಟ್ಟಿನಿಂದ ಕಾಲುಗಳನ್ನು ಅಪ್ಪಳಿಸುತ್ತ ಹಾಗೆಯೇ ಹಿಂತಿರುಗಿ ನಡೆದವನು ಶ್ರೀ ಶೈಲ ಪರ್ವತಕ್ಕೆ ಹೋಗಿ ಅಲ್ಲಿ ಒಂದು ಗುಪ್ತವಾದ ಗುಹೆಯಲ್ಲಿ ವಾಸಿಸಹತ್ತಿದನು. ಇತ್ತ ಶಿವ-ಪಾರ್ವತಿಯರೂ ಸಾಂಸಾರಿಕ ಧರ್ಮದಂತೆ ಮಗನನ್ನು ಹಿಂಬಾಲಿಸಿ ಆ ಗುಹೆಗೆ ಬಂದರು. ಆಗ ಗುಹನು ಗುಹೆಯಿಂದ ಹೊರಹೊರಡಬೇಕೆಂದು ಮುಂದೆ ಹೆಜ್ಜೆಯನ್ನಿಟ್ಟನು. ಆಗ ಪಾರ್ವತಿಯು ಕರುಣಾಮುದ್ರೆಯಿಂದ ಅವನನ್ನು ತಡೆದು ತನ್ನ ಹತ್ತರ ಕುಳ್ಳಿರಿಸಿಕೊಂಡು ಅತ್ಯಂತ ವಾತ್ಸಲ್ಯದಿಂದ—"ಬಾಳಾ, ನೀನು ಹೀಗೆ ನಮ್ಮನ್ನು ನಿರಾಕರಿಸಿದರೆ ನಾವು ಎತ್ತ ಹೋಗೋಣ? ಅತ್ಯಂತ ನಿರ್ದಯರಾದ ನಾವು ಮಾಡಿದ ಅಘೋರ ಸಂಕಲ್ಪದಂತೆ ನೀನು ಕಷ್ಟಬಟ್ಟು ಭೂಪ್ರದಕ್ಷಿಣೆ ಮಾಡಿಯೂ ಈಗ ನಮ್ಮ ಹೇಳಿಕೆಯಂತೆ ವಿವಾಹ ಮಾಡಿಕೊಳ್ಳದೆ, ಹೀಗೆ ಅನಾಥರಂತೆ ಈ ಗುಹೆಯಲ್ಲಿ ಕುಳಿತು ಕಾಲಹರಣ ಮಾಡುವದನ್ನು ನೋಡಿ ನಮಗೆ ದುಃಖವಾಗುತ್ತದೆ. ಆದುದರಿಂದ ವತ್ಸಾ, ಇನ್ನಾದರೂ ನಿನ್ನ ಛಂಡಿತನ ಬಿಟ್ಟು ನಮ್ಮೊಡನೆ ಕೈಲಾಸಕ್ಕೆ ಬಂದು ನಮ್ಮ ಸಂಕಲ್ಪದಂತೆ ಲಗ್ನ ಮುಹೂರ್ತಾದಿಗಳನ್ನು ಮಾಡಿಕೊಂಡು ಗಜಮುಖನಂತೆ ಗೃಹಸ್ಥಾಶ್ರಮಿಯಾಗಿ ಸೌಖ್ಯಹೊಂದು" ಎಂದು ಗಲ್ಲ ತುಟಿಗಳನ್ನು ಹಿಡಿದು ಪ್ರೇಮದಿಂದ ಹೇಳುತ್ತಿರಲು, ಷಣ್ಮುಖನು ಅಸಹ್ಯಪಡುತ್ತ ಕವಕ್ಕನೆ ತಾಯಿಯು ಮೈಮೇಲೆ ಹೋಗಿ ತಿರಸ್ಕಾರದಿಂದ ಅವಳನ್ನು ಕುರಿತು— ಎಲೌ, ಮಹಾ ಕಪಟಿಯಾದ ನೀನು ನನಗೆ ಉಪದೇಶಿಸುವ ಕಾರಣವಿಲ್ಲ; ನಾನು ನನ್ನ ಮನಸ್ಸಿಗೆ ಬಂದ ಹಾಗೆ ಮಾಡುವೆನಾದ್ದರಿಂದ ಈಗಿನ ಪ್ರಸಂಗದಲ್ಲಿ ನಾನು ಯಾರ ಮಾತನ್ನೂ ಕೇಳುವಹಾಗಿಲ್ಲ; ನೀನು ಮಾಡುವ ವಿವಾಹವಂತೂ ಒತ್ತಟ್ಟಿಗಿರಲಿ, ಇನ್ನು ನನಗೆ ನಿಮ್ಮಂಥ ಸ್ತ್ರೀಯರ ಮುಖದರ್ಶನವು ಸಹ ಆ ಜನ್ಮ ಬೇಕಾಗಿಲ್ಲ. ಇನ್ನು ನಿಮ್ಮ ಹೆಸರಿನ ಮೇಲೆ ನಾನು ಕಡೆಯ ವರೆಗೆ ಬ್ರಹ್ಮಚರ್ಯದಿಂದಲೇ ಕಾಲಕಳೆಯುವೆನು; ಆದ್ದರಿಂದ ನೀವು ನನ್ನ ಆಶೆಬಿಟ್ಟು ಬಂದಹಾದಿಯಿಂದ ಹಿಂತಿರುಗಿ ಹೊರಟುಹೋಗಿರಿ. ಇಲ್ಲವೆ ನಾನೇ ಈ ಸ್ಥಳಬಿಟ್ಟು ಹೊರಟುಹೋಗುವೆನು, ಎಂದು ಆಕ್ರೋಶದಿಂದ ನುಡಿಯುತ್ತ ತಾನು ಕುಳಿತ ಸ್ಥಳದಿಂದ ಚಟ್ಟನೆ ಎದ್ದು ಹೊರಟವನು ನೆಟ್ಟಗೆ ಕ್ರೌಂಚಪರ್ವತಕ್ಕೆ ಬಂದು ಅಲ್ಲಿ ಒಂದು ಪ್ರಶಸ್ತವಾದ ಸ್ಥಳದಲ್ಲಿ ನಿರ್ಭಯದಿಂದ ಕುಳಿತುಬಿಟ್ಟನು.

ವಿವೇಕಶೀಲಾ, ಈಪೊತ್ತಿಗೂ ಆ ಸ್ಥಳದಲ್ಲಿ ಷಣ್ಮುಖನು ಭಕ್ತರ ಮನಃಕಾಮನೆಗಳನ್ನು ಪೂರ್ಣಮಾಡುತ್ತ ಲೋಕವಿಖ್ಯಾತನಾಗಿ ವಾಸಿಸಿರುವನು. ಇವನು ವಾಸಿಸಿರುವ ಸ್ಥಳಕ್ಕೆ ಕ್ರೌಂಚಾದ್ರಿಯೆಂಬ ಹೆಸರು ಈತನ ಪರಾಕ್ರಮದಿಂದಲೇ ಪ್ರಾಪ್ತವಾಗಿರುವದು. ಇವನು ಹಿಂದಕ್ಕೆ ಒಂದಾವರ್ತಿ ಪರಶುರಾಮನಿಗೆ ತನ್ನ ಭುಜಪರಾಕ್ರಮವನ್ನು ತೋರಿಸುವದಕ್ಕಾಗಿ ಈ ಪರ್ವತದ ಮೇಲೆ ಬಾಣಪ್ರಯೋಗ ಮಾಡಿ ಸ್ವರ್ಗದವರೆಗೆ ಮಾರ್ಗವನ್ನುಂಟುಮಾಡಿದನು. ಆಗ ಸ್ವರ್ಗದೊಳಗಿನ ಕ್ರೌಂಚಪಕ್ಷಿಗಳು ಆ ದ್ವಾರದಿಂದ ಭೂಮಿಗಿಳಿಯಹ

ತ್ತಿದವು. ಹೀಗೆ ಆ ಪರ್ವತವು ಇವನ ಬಾಣಪ್ರಯೋಗದಿಂದ ಕ್ರೌಂಚಪಕ್ಷಿಗಳಿಗೆ ಮಾರ್ಗವಾದಂದಿನಿಂದ ಇದಕ್ಕೆ ಕ್ರೌಂಚಾದ್ರಿಯೆಂಬ ಹೆಸರುಬಿದ್ದಿತು. ಇದು ಇವನ ಕೀರ್ತಿಸ್ಥಾನವಾದ್ದರಿಂದ ಇವನ ಅತ್ಯಂತ ಪ್ರೀತಿಯಸ್ಥಾನವಾಗಿದೆ. ಇವನು ಆ ಜನ್ಮಬ್ರಹ್ಮಚಾರಿಯಾಗಿ ಈ ಸ್ಥಳದಲ್ಲಿ ವಾಸಿಸಿದ್ದರಿಂದ ಇವನಿಗೆ ಕುಮಾರಸ್ವಾಮಿ ಎಂಬ ಹೆಸರು, ಲೋಕದಲ್ಲಿ ಪ್ರಖ್ಯಾತವಾಯಿತು. ಹಾಗು ಇವನು ತನ್ನ ತಾಯಿಯು ತನ್ನ ವಿವಾಹ ಮಾಡಲಿಲ್ಲವೆಂಬ ಸಿಟ್ಟಿನಿಂದ, ನನಗೆ ನಿನ್ನಂಥ ಸ್ತ್ರೀಯರ ಮುಖದರ್ಶನವೇ ಬೇಡೆಂದು ಸಿಟ್ಟು ಸ್ತ್ರೀಜಾತಿಮಾತ್ರಕ್ಕೆ ಶಾಪ ಕೊಟ್ಟಿರುವದರಿಂದ ಈವೊತ್ತಿಗೂ ಆ ಕ್ರೌಂಚಾದ್ರಿಯನ್ನು ಯಾವಸ್ತ್ರೀಯರೂ ಹತ್ತಿರುವದಿಲ್ಲ. ವಿವೇಕಶೀಲಾ, ಈ ಮಹಾತ್ಮನ ಆತ್ಮಸಂಯಮನ ಸಾಮರ್ಥ್ಯವು ಅಸದೃಶವಾದದ್ದು; ಅದುದರಿಂದಲೇ ದೇವಾನುದೇವತೆಗಳು ಸಹ ಇವನ ದರ್ಶನಲಾಭವನ್ನು ಯಾವಾಗಲೂ ಅಪೇಕ್ಷಿಸುತ್ತಿರುವರು; ಇವನ ದರ್ಶನಮಾತ್ರದಿಂದ ಪ್ರಾಣಿಗಳ ಸಕಲಬಂಧನಗಳು ಕಡಿದುಹೋಗಿ ಅವರಿಗೆ ಅಪಾರವಾದ ಐಶ್ವರ್ಯವು ಪ್ರಾಪ್ತವಾಗುವದು. ಅದರಲ್ಲಿಯೂ ಕಾರ್ತಿಕದಲ್ಲಿ ಕೃತ್ತಿಕಾನಕ್ಷತ್ರದ ಯೋಗವಿದ್ದಾಗ ಇವನ ದರ್ಶನಮಾಡಲ್ಲಿ ಅನಂತ ಫಲವಿರುವದೆಂದು ಪುರಾಣಾಂತರದಲ್ಲಿ ಹೇಳಿರುವದು, ಇರಲಿ,

ಹೀಗೆ ಮಗನು ಹೋಗಿಬಿಟ್ಟದ್ದರಿಂದ ಪಾರ್ವತೀಪರಮೇಶ್ವರರಿಗೆ ಮೊದಲಿಗಿಂತಲೂ ಹೆಚ್ಚಿನ ದುಃಖವಾಗಿ ಅವರು ಅದೇ ಸ್ಥಳದಲ್ಲಿ ಪುತ್ರಾ, ಪುತ್ರಾ, ಎಂದು ಹಲಬುತ್ತ ಕುಳಿತುಕೊಂಡರು. ಹೀಗೆ ಆ ದಂಪತಿಗಳು ಒಂದೇಸಮನೆ ದುಃಖಿಸುವದನ್ನು ನೋಡಿ ಹರಿಬ್ರಹ್ಮಾದಿ ದೇವತೆಗಳು ಅವರಿದ್ದೆಡೆಗೆ ಬಂದು ಅವರು ದುಃಖಿಸುವ ಕಾರಣವನ್ನು ಕೇಳಿಕೊಳ್ಳಲು, ಶಂಕರನು ಅವರಿಗೆ ತನ್ನ ಎಲ್ಲ ವೃತ್ತಾಂತವನ್ನೂ ತಿಳಿಸಿ ಹ್ಯಾಗಾದರೂ ಮಾಡಿ ನಮಗೆ ಆ ಕುಮಾರನ ಮುಖದರ್ಶನವಾಗುವಂತೆ ಮಾಡಿರೆಂದು ಹೇಳಿಕೊಂಡನು. ಆಗ ಬ್ರಹ್ಮಾದಿಕರು ಕುಮಾರನಿಗೆ ಬುದ್ಧಿಗಲಿಸುವದಕ್ಕಾಗಿ ಕ್ರೌಂಚಪರ್ವತಕ್ಕೆ ಬಂದು, ಬಹುಪರಿಯಾಗಿ ಅವನನ್ನು ಬೋಧಿಸಿ, ಪ್ರತಿ ಒಂದು ತಿಂಗಳ ಪೌರ್ಣಿಮಾ ತಿಥಿಗೆ ಶಂಕರನೂ, ಪ್ರತಿ ತಿಂಗಳ ಅಮಾವಾಸ್ಯಾತಿಥಿಗೆ ಪಾರ್ವತಿಯೂ ಇಲ್ಲಿಯವರೆಗೆ ಬಂದು ನನ್ನ ಭೆಟ್ಟಿಯಾಗಿ ಹೋಗತಕ್ಕದ್ದೆಂಬ ಕುಮಾರನಿಂದ ವಚನಪಡೆದು ತಿರುಗಿ ಶ್ರೀಶೈಲಕ್ಕೆ ಬಂದು ಉಮಾಮಹೇಶ್ವರರಿಗೆ ಈ ಸಂಗತಿಯನ್ನು ತಿಳಿಸಿದರು. ಆಗ ಆ ದಂಪತಿಗಳ ಅಂತಃಕರಣದಲ್ಲಿ ಹಿಡಿಸಲಾರದಷ್ಟು ಆನಂದವಾಗಿ ಅವರು ಬ್ರಹ್ಮಾದಿದೇವತೆಗಳನ್ನು ಕುರಿತು ಪ್ರಸನ್ನ ಮುದ್ರೆಯಿಂದ— ದೇವತೆಗಳಿರಾ, ನೀವು ಮಾಡಿಕೊಂಡು ಬಂದ ಇಂದಿನ ಈ ಕಾರ್ಯದಿಂದ ನಮಗೆ ಅತ್ಯಂತ ಸಂತೋಷವಾಯಿತು. ಈ ಕಾರ್ಯ ಮಾಡಿದ್ದಕ್ಕಾಗಿ ನಿಮಗೆ ನಾವು ಅತ್ಯಂತ ಋಣಿಯಾಗಿರುವೆವಾದ್ದರಿಂದ ನೀವು ನಮ್ಮಿಂದ ಬೇಕಾದವರಗಳನ್ನು ಯಾಚಿಸಿ ನಮ್ಮ ಈ ಋಣಭಾರವನ್ನು ಕಡಿಮೆ ಮಾಡಿರೆಂದು ಅತ್ಯಂತ ಪ್ರೇಮಭಾವದಿಂದ ನುಡಿಯಲು, ಹರಿಬ್ರಹ್ಮಾದಿಕರು ಕೈ ಮುಗಿದು ಶಂಕರನನ್ನು ಕುರಿತು— ಭಗವನ್ ಲೋಕಬಂಧೋ, ದಯಾಸಾಗರನಾದ ನೀನು ಕರುಣಿಸಿದ ವೈಭವವೇ ನಮಗೆ ಸಮೃದ್ಧವಾಗಿರಲು, ಅನ್ಯ ಯಾವ ವರ

ಗಳನ್ನು ನಾವು ನಿನ್ನ ಬಳಿಯಲ್ಲಿ ಬೇಡಿಕೊಳ್ಳೋಣ? ಆದರೆ ನಮಗೆ ಕೊಡಬೇಕೆನ್ನುವದೇ ನಿನ್ನ ಮನಸ್ಸಿನಲ್ಲಿದ್ದರೆ, ಜಗಜ್ಜನ್ಮಾದಿಕಾರಣರಾದ ನೀವು ಸಕಲ ಪ್ರಾಣಿಗಳ ಸಂಸಾರಬಂಧನವನ್ನು ದೂರಮಾಡುತ್ತ ಇದೇ ಸ್ಥಳದಲ್ಲಿ ವಾಸಿಸಿ ನಿನ್ನ ಭಕ್ತರಾದ ನಮ್ಮನ್ನು ಅನುಗ್ರಹಿಸಬೇಕೆಂದು ಪ್ರಾರ್ಥಿಸಲು, ಕೃಪಾಳುವಾದ ಆ ಪಾರ್ವತೀಧವನು, ಬ್ರಹ್ಮಾದಿಕರ ಪ್ರಾರ್ಥನೆಯಂತೆ ಸಕಲ ಭಕ್ತರ ಮನೋರಥಗಳನ್ನು ಪೂರ್ಣಮಾಡುತ್ತ ಈವೊತ್ತಿಗೂ ಆ ಪರ್ವತದಲ್ಲಿ ವಾಸಿಸಿರುವನು. ಪರಮಾತ್ಮನ ಈ ಜ್ಯೋತಿರ್ಮಯವಾದ ಲಿಂಗವನ್ನು ಹಿಂದಕ್ಕೆ ಯೋಗೀಶ್ವರನಾದ ಕಾರ್ತವೀರ್ಯಾರ್ಜುನನು ಮಲ್ಲಿಕಾಪುಷ್ಪಗಳಿಂದ ಅರ್ಚಿಸಿದ್ದನಾದ್ದರಿಂದ ಇದಕ್ಕೆ "ಮಲ್ಲಿಕಾರ್ಜುನನೆ"ಂಬ ಗೌರವದ ನಾಮವು ಪ್ರಾಪ್ತವಾಯಿತು. ವಿವೇಕಶೀಲಾ, ಶ್ರೀಶೈಲವಾಸಿಯಾದ ಈ ಮಲ್ಲಿಕಾರ್ಜುನನ ಮಹಾ ಮಹಿಮೆಯನ್ನು ಎಷ್ಟು ವರ್ಣಿಸಿದರೂ ತೀರುವಂತಿಲ್ಲ; ಇವನ ಮಂಗಲದರ್ಶನವಾದ ಮನುಷ್ಯನು ಈ ಸಂಸಾರದಲ್ಲಿ ಧನ್ಯನೆಂತಲೇ ಹೇಳಬೇಕು. ಪ್ರತ್ಯಕ್ಷ ಇವನ ದರ್ಶನದ ಫಲವಂತೂ ಒತ್ತಟ್ಟಿಗಿರಲಿ, "ಶ್ರೀಶೈಲಶಿಖರಂ ದೃಷ್ಟ್ವಾ ಪುನರ್ಜನ್ಮ ನ ವಿದ್ಯತೇ" ಎಂಬೀಪೌರಾಣಿಕೋಕ್ತಿಯಂತೆ ಕೇವಲ ಇವನ ಆಲಯದ ಶಿಖರದರ್ಶನಮಾತ್ರದಿಂದಲೇ ಪ್ರಾಣಿಗಳು ಜನ್ಮಮರಣ ರೂಪವಾದ ಸಂಸಾರದಿಂದ ಮುಕ್ತರಾಗಿ ಹೋಗುವರು. ಅಂದಮೇಲೆ ಇವನ ಪ್ರತ್ಯಕ್ಷದರ್ಶನದಿಂದುಂಟಾದ ಮಹಾಫಲವನ್ನೇನು ಹೇಳುವದು?

———(೦)———

## ३ ಮಹಾಕಾಲೇಶ್ವರೋತ್ಪತ್ತಿ!

ಅವಂತಿಕಾಯಾಂ ವಿಹಿತಾವತಾರಂ ಮುಕ್ತಿಪ್ರದಾನಾಯ ಚ ಸಜ್ಜನಾನಾಮ್
ಅಕಾಲಮೃತ್ಯೋಃ ಪರಿರಕ್ಷಣಾರ್ಥಂ ವಂದೇ ಮಹಾಕಾಲ ಮಹಾಸುರೇಶಮ್ ॥ ३ ॥

---

ವಿವೇಕಶೀಲಾ, ಇನ್ನು ನಿನಗೆ ಮಹಾ ಮಹಿಮನಾದ ಮಹಾದೇವನು ಮಹಾಕಾಲೇಶ್ವರನೆಂಬ ನಾಮದಿಂದ ಉಜ್ಜಯಿನೀ ನಗರದಲ್ಲಿ ಹೇಗೆ ಅವತರಿಸಿದನೆಂಬ ಮನೋಹರ ಚರಿತ್ರೆಯನ್ನು ಹೇಳುವೆನು ಕೇಳು. ಹಿಂದಕ್ಕೆ ಕ್ಷಿಪ್ರಾನದಿಯ ಧಡದಲ್ಲಿರುವ ಉಜ್ಜಯನೀ ಪಟ್ಟಣದಲ್ಲಿ ವೇದಪ್ರಿಯನೆಂಬ ಒಬ್ಬ ಸತ್ವಶೀಲ ಬ್ರಾಹ್ಮಣನು ಪ್ರತಿನಿತ್ಯ ಮನೆಯಲ್ಲಿ ಅಗ್ನಿಸೇವಾ, ಅತಿಥಿಸೇವಾ, ಗೋಸೇವಾದಿ ಗಾರ್ಹಸ್ಥ್ಯೋಚಿತ ಧರ್ಮಗಳನ್ನು ಮಾಡುತ್ತ ತನ್ನ ಪತ್ನಿಯೊಡನೆ ಸುಖವಾಗಿ ವಾಸಿಸಿದ್ದನು. ವೇದ ವೇದಾಂಗಪಾರಂಗತನಾದ ಈ ಭೂಸುರನಿಗೆ ವೇದಪ್ರಿಯನೆಂಬ ನಾಮವು ಸಾರ್ಥಕವಾಗಿತ್ತು. ಹಾಗೂ ಲಕ್ಷ್ಮೀ–ಸರಸ್ವತಿಯರ ಅನುಗ್ರಹವು ಇವನಮೇಲೆ ಪೂರ್ಣವಾಗಿ ಇದ್ದದ್ದರಿಂದ, ಇವನು ದೊಡ್ಡದೊಂದು ಗುರುಕುಲವನ್ನು ಸ್ಥಾಪಿಸಿ, ಸಾವಿರಾರು ಜನ ವಿದ್ಯಾರ್ಥಿಗಳಿಗೆ ನಿರಂತರವಾಗಿ ಅನ್ನ ವಸ್ತ್ರವನ್ನು ಕೊಟ್ಟು ತಾನು ಸ್ವತಃ ಅವರಿಗೆ ವೇದ ಶಾಸ್ತ್ರಾಧ್ಯಯನವನ್ನು ಮಾಡಿಸಿ ವಿದ್ಯಾದಾನದ ಫಲವನ್ನು ಪಡೆದು ಧನ್ಯನಾಗಿದ್ದನು. ಹೀಗೆ ಆ ಬ್ರಾಹ್ಮಣನು ಎಲ್ಲ ಪ್ರಕಾರದಿಂದಲೂ ಸುಖದಿಂದ ಇದ್ದು, ಮಕ್ಕಳಿಲ್ಲವೆಂಬದೊಂದೇ ಒಂದು ಚಿಂತೆಯಿಂದ

ದಿನಾಲು ಕೊರಗಹತ್ತಿದ್ದನು. ಅವನು ಮಕ್ಕಳಸಲುವಾಗಿ ದಿನಾಲು ಶಿವಾರಾಧನೆಯನ್ನು ಮಾಡಹತ್ತಿದನು. ಹೀಗೆ ಎಷ್ಟೋ ದಿವಸಗಳು ಕ್ರಮಿಸಿದಮೇಲೆ ಶಿವ-ಪ್ರಸಾದದಿಂದ ಅವನಿಗೆ ಮುಪ್ಪಿನಲ್ಲಿ ದೇವಪ್ರಿಯ, ಪ್ರಿಯಮೇಧ, ಧರ್ಮವಾದೀ, ವ್ರತರೆಂಬ ನಾಲುಕ ಮಂದಿ ಮಕ್ಕಳಾದರು. ಉಪನಯನ ಸಂಸ್ಕಾರವಾದಮೇಲೆ ಅವರಿಗೆ ವೇದಪ್ರಿಯನು ಮನೆಯಲ್ಲಿಯೇ ವೇದಶಾಸ್ತ್ರಾಧ್ಯಯನವನ್ನು ಮಾಡಿಸಿ, ಅವರನ್ನು ಬುದ್ಧಿವಂತರನ್ನಾಗಿ ಮಾಡಿದನು. ಮುಂದೆ ಅವರು ದೊಡ್ಡವರಾಗುತ್ತ ಹೋದಂತೆ ಅವರ ಸದ್ಗುಣ-ಸತ್ಕೀರ್ತಿಯು ಶುಕ್ಲಪಕ್ಷದ ಚಂದ್ರನ ಕಲೆಗಳಂತೆ ಎಲ್ಲಕಡೆಗೂ ಹಬ್ಬಿ, ನಾಲ್ವರೂ ಲೋಕವಿಖ್ಯಾತರಾದರು. ಹೀಗೆ ತನ್ನ ಮಕ್ಕಳು ಅಧಿಕಾರಸಂಪನ್ನರೂ, ಪ್ರೌಢರೂ, ಪರಮ ಭಾವಿಕರೂ ಆಗಿ ತನಗೆ ಸಾನುಕೂಲರಾಗಿ ವರ್ತಿಸಹತ್ತಿದ್ದನ್ನು ನೋಡಿ ವೇದಪ್ರಿಯನು ಸಂತೋಷಬಟ್ಟು ಒಂದು ಶುಭದಿವಸದಲ್ಲಿ ಅವರಿಗೆ ಪಾರ್ಥಿವಪೂಜಾ-ದೀಕ್ಷೆಯನ್ನು ಕೊಟ್ಟು, ಸತ್ಕುಲಪ್ರಸೂತರಾದ ನಾಲ್ಕುಮಂದಿ ಸುಂದರ ಕನ್ನಿಕೆಯರೊಂದಿಗೆ ಅವರ ವಿವಾಹಕಾರ್ಯವನ್ನು ಮಾಡಿ ತಾನು ಕಾಲವಶನಾಗಿ ಶಿವಸಾಯುಜ್ಯವನ್ನು ಪಡೆದನು.

ಇತ್ತ ದೇವಪ್ರಿಯರೇ ಮೊದಲಾದ ಅವನ ನಾಲ್ಕುಜನ ಮಕ್ಕಳು ತಮ್ಮ ತಂದೆಯಂತೆಯೇ ಮನೆಯಲ್ಲಿ ಪ್ರತಿನಿತ್ಯ ಶಿವಾರಾಧನ, ಪಾಠಪ್ರವಚನ, ಗೋಸೇವಾ, ಅತಿಥಿಸೇವಾ ಮೊದಲಾದ ಗಾರ್ಹಸ್ಥ್ಯೋಚಿತ ಕರ್ಮಗಳನ್ನು ಮಾಡುತ್ತ ಸುಖವಾಗಿ ವಾಸಿಸಹತ್ತಿದರು. ಇವರು ತಮ್ಮ ಕುಲ-ಪರಂಪರಾಗತವಾದ ಲಿಂಗಪೂಜನ-ಸೋಮವಾರ ವ್ರತಗಳನ್ನು ಎಂದಿಗೂ ತಪ್ಪಿಸಲಿಲ್ಲ. ಈ ಪುಣ್ಯಶಾಲಿಗಳು ವಾಸಿಸಿರುವದರಿಂದ ಉಜ್ಜಯಿನಿಗೆ ಒಂದುತರದ ಶೋಭೆಯು ಪ್ರಾಪ್ತವಾಗಿತ್ತು; ಹಾಗು, ಇವರು ಆಗ್ಗೆ ಮಾಡುತ್ತಿರುವ ಯಜ್ಞಯಾಗಾದಿ ಕರ್ಮಗಳಿಂದ ಇಂದ್ರಾದಿ ದೇವತೆಗಳು ಸಂತುಷ್ಟರಾಗಿ ಕಾಲಕ್ಕೆ ಸರಿಯಾಗಿ ಮಳೆಗರಿಸುತ್ತಿರುವದರಿಂದ ಆ ಪಟ್ಟಣದ ಸುತ್ತಲಿನ ಭೂಪ್ರದೇಶಗಳು ಸಸ್ಯಸಮೃದ್ಧಿಯಿಂದ ಯಾವಾಗಲೂ ಶೋಭಿಸುತ್ತಿದ್ದವು. ಹೀಗಿರುವದರಿಂದ ಅಲ್ಲಿಯ ಪ್ರಜರು ದುರ್ಭಿಕ್ಷಾದಿ ತಾಪಗಳಿಗೆ ಎಂದೂ ಒಳಗಾಗುತ್ತಿದ್ದಿಲ್ಲ. ಹೀಗೆ ಈ ಪುಣ್ಯಪುರಿಯು ಸಕಲ ವೈಭವಗಳಿಗೆ ತವರಮನೆಯಾಗಿ ಜಗತ್ತಿನಲ್ಲಿ ಅತ್ಯಂತ ಆದರಣೀಯವಾಗಿದ್ದರೂ, ಒಬ್ಬ ದುಷ್ಟರಾಕ್ಷಸನ ಭಯದಿಂದ ಅಲ್ಲಿಯ ಜನರಿಗೆ ಎಷ್ಟು ಮಾತ್ರವೂ ಸೌಖ್ಯವಿದ್ದಿಲ್ಲ. ಮಹಾಕ್ರೂರನಾದ ಈ ರಾಕ್ಷಸನಿಗೆ ದ್ವೇಷಣ, ಎಂಬ ಹೆಸರು ಸಾರ್ಥಕವಾಗಿತ್ತು. ಇವನು ಬ್ರಹ್ಮದೇವನ ವರಪ್ರಸಾದದಿಂದ ಅತ್ಯಂತ ದರ್ಪಿತನಾಗಿ ತನ್ನ ಪರಿವಾರದೊಡನೆ ಅದೇ ಪಟ್ಟಣದ ನೆರೆಯಲ್ಲಿರುವ ರತ್ನಮಾಲಪೆಂಬ ಹೆಸರಿನ ಪರ್ವತದ ಒಂದು ಗುಹೆಯಲ್ಲಿ ಬಹುದಿವಸಗಳಿಂದ ವಾಸಿಸಿದ್ದನು. ಆ ಲೋಕಕಂಟಕನು ಆಗಾಗ್ಗೆ ಪರಿವಾರದೊಡನೆ ಈ ರಾಜಧಾನಿಯಮೇಲೆ ಸಾಗಿಬಂದು ಪುರಜನರ ಧರ್ಮಕಾರ್ಯಗಳನ್ನು ನಡೆಯಗೊಡದೆ, ಅವರ ಒಂದೊಂದೇ ದೇವಾಲಯಗಳನ್ನೂ, ಮಠಗಳನ್ನೂ, ಗುರುಕುಲಗಳನ್ನೂ ನಾಶಗೊಳಿಸಿ ಅವರನ್ನು ಬಹುಪರಿಯಾಗಿ ಪೀಡಿಸುತ್ತಿದ್ದನು. ಹೀಗೆ ಇವನು ತಮ್ಮನ್ನು ಪೀಡಿಸ ಬಂದ ಬಂದಾಗೆಲ್ಲ ಅಲ್ಲಿಯ ಜನರು ತಮ್ಮ ರಾಜನಿಗೆ ಹೇಳಿ, ಆತನಿಂದ ಆ ರಾಕ್ಷ

ಷನ ಹಾವಳಿಯನ್ನು ಕಡಿಮೆಮಾಡುತ್ತ ಬಂದಿದ್ದರು. ಹೀಗಿರಲು, ಒಂದುದಿನ ಆ ದುಷ್ಟನು ಈ ಉಜ್ಜಯನೀ ನಗರವನ್ನು ತನ್ನ ಸ್ವಾಧೀನ ಪಡಿಸಿಕೊಂಡೇ ತೀರಬೇಕೆಂದು ನಿರ್ಧರಿಸಿ, ತನ್ನ ದೊಡ್ಡ ಸೈನ್ಯದೊಡನೆ ಬಂದು ಆ ಪಟ್ಟಣಕ್ಕೆ ಮುತ್ತಿಗೆ ಹಾಕಿದನು. ಆಗ ಅಲ್ಲಿಯ ರಾಜನಿಗೂ ಅವನಿಗೂ ದೊಡ್ಡ ಕಾಳಗವಾಗಿ, ಕಡೆಗೆ ಆ ದೈತ್ಯನು ರಾಜನನ್ನು ಸಕುಟುಂಬವಾಗಿ ಸೆರೆಹಿಡಿದು ಉಳಿದ ಪುರಜನರನ್ನು ತನ್ನ ಕೈಖಡ್ಗದಿಂದ ತುಂಡರಿಸಹತ್ತಿದನು. ಆಗ ಆ ಪುರಜನರು ದೆಶೆಗೆಟ್ಟು ತಮ್ಮ ತಮ್ಮ ಪ್ರಾಣರಕ್ಷಣೆಗಾಗಿ ಹಾದಿಸಿಕ್ಕಕಡೆಗೆ ಓಡಹತ್ತಿದರು. ಕೆಲವರು ನಿರುಪಾಯರಾಗಿ ಆ ದುಷ್ಟನಿಗೆ ಮೊರೆಹೊಕ್ಕು ಜೀವದಾನ ಕೊಡುವದಕ್ಕಾಗಿ ಅವನನ್ನು ಪ್ರಾರ್ಥಿಸತೊಡಗಿದರು; ಹಲವರು ಇವನ ಪೀಡೆಯನ್ನು ತಾಳಲಾರದೆ, ಕ್ಷಿಪ್ರಾನದಿಯ ಪುಣ್ಯೋದಕದಲ್ಲಿ ಬಿದ್ದುಪ್ರಾಣಕೊಟ್ಟರು.

ಹೀಗೆ ಎಲ್ಲ ಕಡೆಗೂ ಒಂದೇಕಾಲಕ್ಕೆ ಹಾಹಾ ಕಾರವೆದ್ದು, ಆ ಪಟ್ಟಣವು ಅತ್ಯಂತ ಭಯಪ್ರದವಾಗಿ ತೋರಹತ್ತಿತು. ಇಷ್ಟಾದರೂ ಶಿವಧ್ಯಾನಾಸಕ್ತರಾದ ನಮ್ಮ ದೇವಪ್ರಿಯಾದಿ ಬಂಧುಗಳಿಗೆ ಇದರ ಸುದ್ದಿಯೇ ಹತ್ತಿದ್ದಿಲ್ಲ; ಅಷ್ಟರಲ್ಲಿ ಹಲವು ಜನ ಬ್ರಾಹ್ಮಣರು ಆ ದುಷ್ಟನಿಗೆ ಕಾಣದಹಾಗೆ ಓಡಿಬಂದು ಆ ಬಂಧುಗಳಿಗೆ ಪಟ್ಟಣದೊಳಗಿನ ಈ ಅನರ್ಥವನ್ನು ತಿಳಿಸಿ ಪ್ರಾಣಸಂರಕ್ಷಣೆಗಾಗಿ ಅವರನ್ನು ಬೇಡಿಕೊಳ್ಳಹತ್ತಿದರು. ಆಗ ಆ ಬಂಧುಗಳು ತಮ್ಮ ನಿತ್ಯದ ಶಿವಾರಾಧನೆಯಲ್ಲಿ ತೊಡಗಿಕೊಂಡಿದ್ದರೂ, ಅತ್ಯಂತ ಭಯಾತುರರಾಗಿ ಬಂದ ಈ ಬ್ರಾಹ್ಮಣರ ಸಲುವಾಗಿ ತಮ್ಮ ಪೂಜೆಯನ್ನು ಬಿಟ್ಟುಕೊಟ್ಟು ಪ್ರೇಮಲಾಂತಃಕರಣದಿಂದ ಅವರನ್ನು ಕುರಿತು—"ಪ್ರಿಯ ಬಾಂಧವರೇ, ಶಸ್ತ್ರಾಸ್ತ್ರಗಳ ಸಹಾಯವಿಲ್ಲದ ನಾವು ಆ ದುರ್ಧರ್ಷನಾದ ರಾಕ್ಷಸನಿಗೆ ಏನು ಮಾಡುವಹಾಗಿದ್ದೇವೆ! ಇನ್ನು ಆ ದುಷ್ಟನನ್ನು ದಂಡಿಸುವಷ್ಟು ತಪೋಬಲವು ನಿಮ್ಮೆಲ್ಲರ ಆನುಗ್ರಹದಿಂದ ನಮ್ಮ ನಾಲ್ವರಲ್ಲಿಯೂ ಇರುವದು; ಆದರೆ ಇವನಿಗೆ ಸಾಕ್ಷಾತ್ ಶಂಕರನಿಂದಲೇ ಮರಣವಾಗಬೇಕೆಂದು ಬ್ರಹ್ಮದೇವನ ಸಂಕೇತವಿರುವದರಿಂದ, ಆ ದುಷ್ಟನನ್ನು ನಿಗ್ರಹಿಸಲು ಸಮರ್ಥನಾದ ಭಗವಾನ್ ಸದಾಶಿವನಿಗೇ ನಾವು ಈ ಪ್ರಸಂಗದಲ್ಲಿ ಮೊರೆಹೋಗುವದು ಉಚಿತವು." ಎಂದು ನುಡಿದು ಮತ್ತೆ ಅವರು ತಮ್ಮ ಶಿವಪೂಜೆಯಲ್ಲಿ ತೊಡಗಿಕೊಂಡರು. ಅಷ್ಟರಲ್ಲಿ ಆ ದುಷ್ಟ ದೈತ್ಯನು ತನ್ನ ಪರಿಮಿತ ಪರಿವಾರದೊಡನೆ ಜನರ ರುಂಡಗಳನ್ನು ಚಂಡಾಡುತ್ತ ಇವರು ಕುಳಿತಿರುವಲ್ಲಿಗೇ ಬಂದು ಮಹಾ ಮೃತ್ಯುವಿನಂತೆ ಅರ್ಭಟಿಸುತ್ತ ಭೀತಿಯಿಂದ ಓಡಹತ್ತಿರುವ ಬ್ರಾಹ್ಮಣರನ್ನು ಹಿಡಿಹಿಡಿದು ತುಂಡರಿಸಹತ್ತಿದನು. ಇಷ್ಟಾದರೂ ಆ ಪ್ರಿಯವ್ರತಾದಿ ಬ್ರಾಹ್ಮಣ ಬಂಧುಗಳ ಚಿತ್ತವೃತ್ತಿಯು ಶಿವಧ್ಯಾನದಿಂದ ಚಲಿಸಿದ್ದಿಲ್ಲ. ಅವರು ನಮ್ಮನ್ನು ಸರ್ವಸಾಕ್ಷಿಕನಾದ ಸರ್ವೇಶನೇ ಸಂರಕ್ಷಿಸಬೇಕೆಂದು ತಮ್ಮ ಯೋಗಕ್ಷೇಮದ ಎಲ್ಲ ಭಾರವನ್ನು ಸದಾಶಿವನಿಗರ್ಪಿಸಿ, ನಿಶ್ಚಲವೃತ್ತಿಯಿಂದ ಕುಳಿತುಬಿಟ್ಟರು. ಹೀಗೆ ಆ ಬ್ರಾಹ್ಮಣರು ತನಗೆ ಹೆದರದೆ ನಿಶ್ಚಿಂತರಾಗಿ ಕುಳಿತಿರುವದನ್ನು ನೋಡಿ, ರಾಕ್ಷಸನು ಸಂತಾಪಗೊಂಡು ತನ್ನ ಅನುಚರರೊಡನೆ ಅವರಮೇಲೆ ದುಮುಕಲು, ಅವರ ಮುಂದುಗಡೆಯ ಭೂಪ್ರದೇಶವು ನಡುಗಹತ್ತಿ, ಭಯಂಕರವಾದ ಶಬ್ದದೊಂದಿಗೆ

ಒಂದು ಆಳವಾದ ತಗ್ಗು ಬಿದ್ದು ಆ ತಗ್ಗಿನೊಳಗಿಂದ ಭಕ್ತಸಂಕಟಹಾರಕನಾದ ಭವಾನೀ ಪತಿಯು ಗಡಗಡನೆ ಗರ್ಜಿಸುತ್ತ ಆವಿರ್ಭವಿಸಿದನು. ಹೀಗೆ ಭೂಗರ್ಭದಿಂದ ಒಮ್ಮೆಲೆ ಅರ್ಭಟಿಸುತ್ತ ಉದ್ಭವಿಸಿದ ಶಂಕರನ ಈ ಉಗ್ರಮೂರ್ತಿಯನ್ನು ನೋಡಿ ದೈತ್ಯೇಂದ್ರನಿಗೆ ಸಹನವಾಗದೆ ತನ್ನ ಗಡುತರವಾದ ಗದೆಯನ್ನು ಮೇಲಕ್ಕೆ ನೆಗಹಿ, ಅವನನ್ನು ಹೊಡೆಯ ಹೋದನು. ಆಗ ಶಂಕರನು ಹುಂಕಾರಮಾತ್ರದಿಂದ ಆ ರಾಕ್ಷಸನನ್ನು ಅವನ ಸಕಲ ಸೈನ್ಯದೊಂದಿಗೆ ಸುಟ್ಟು ಭಸ್ಮ ಮಾಡಿ, ತನ್ನ ಭಕ್ತರಿಗೆ ಅಭಯವಿತ್ತನು. ಆಗ ನಾಲ್ವರೂ ಬಂಧುಗಳು ಭಗವಂತನ ಆ ಭವ್ಯರೂಪವನ್ನೂ, ಅವನ ಅಲೌಕಿಕ ಸಾಮರ್ಥ್ಯವನ್ನೂ ನೋಡಿ ಬೆರಗಾಗಿನಿಂತರು. ಅವರು ಭಯಭಕ್ತಿಯಿಂದ ಶಿವನ ಪಾದಗಳಿಗೆ ಸಾಷ್ಟಾಂಗವೆರಗುವಾಗ ಭಕ್ತಿಯ ಉದ್ರೇಕದಿಂದ ಅವರ ಕಂಠಗಳು ಬಿಗಿದು ಬರಲು ಅವರು ಮಹಾದೇವನನ್ನು ಕುರಿತು—ಹೇ, ಮೃತ್ಯುಂಜಯಾ, ಮಾರ್ಕಾಂಡೇಯವರದಾ, ಕಾಲಕಾಲಾಂತಕನಾದ ನೀನು ದುಷ್ಟನಿಗ್ರಹ ಶಿಷ್ಟಪರಿಪಾಲನೆಯ ಮಹಾ ಕಾರ್ಯಗಳನ್ನು ವಹಿಸಿ ಅಖಿಲ ಬ್ರಹ್ಮಾಂಡಗಳ ಸಂರಕ್ಷಣೆಗಾಗಿ ಯಾವಾಗಲೂ ಜಾಗ್ರತನಾಗಿರಲು, ನಿನ್ನ ಭಕ್ತರಾದ ನಮಗೆ ಏತರಿಂದ ಭಯವು! ದೇವಾ, ನಿನ್ನ ದರ್ಶನದಿಂದ ನಾವು ಇಂದು ಕೃತಾರ್ಥರಾದೆವು; ಇಂದಿನವರೆಗೆ ಮಾಡುತ್ತ ಬಂದ ನಮ್ಮ ಪೂಜನ, ಅರ್ಚನ, ಧ್ಯಾನ, ಸಂಕೀರ್ತನಾದಿ ಕರ್ಮಗಳು ಈಹೊತ್ತು ನಿನ್ನ ದರ್ಶನದಿಂದ ಸಫಲವಾದವು" ಎಂದು ಬಹು ವಿಧ ಸ್ತುತಿಸ್ತೋಮಗಳಿಂದ ಶಿವನನ್ನು ಸ್ತುತಿಸಹತ್ತಲು, ಕರುಣಾಳುವಾದ ಶಂಕರನು ಸಂತುಷ್ಟನಾಗಿ ವರಯಾಚನೆಗಾಗಿ ಅವರನ್ನು ಪ್ರೇರಿಸಿದನು. ಆಗ ಆ ನಾಲ್ವರೂ ಬಂಧುಗಳು ಸಂತೋಷಬಟ್ಟು ಪರಿತುಷ್ಟನಾದ ಸದಾಶಿವನಲ್ಲಿ ಕ್ರಮವಾಗಿ ಸಾಯುಜ್ಯ, ಸಾಲೋಕ್ಯ, ಸಾಮೀಪ್ಯ, ಸಾರೂಪ್ಯಗಳೆಂಬ ನಾಲ್ಕು ವಿಧ ಮುಕ್ತಿಗಳನ್ನು ಯಾಚಿಸಿ, ಲೋಕಕಂಟಕಹಾರಕನಾದ ನೀನು ಭಕ್ತೋದ್ಧಾರಾರ್ಥವಾಗಿ ಯಾವಾಗಲೂ ಇದೇ ಗರ್ತದಲ್ಲಿ ವಾಸಿಸೆಂದು ಪ್ರಾರ್ಥಿಸಿದರು. ವಿವೇಕಶೀಲಾ, ಅಂದಿನಿಂದಲೇ ಮಹಾದೇವನು ಮಹಾಪಾಪಿಗಳಿಗೆ ಮಹಾ ಕಾಲಸ್ವರೂಪನಾಗಿ, ಮಹಾಕಾಲೇಶ್ವರನೆಂಬ ಗೌರವದ ಹೆಸರಿನಿಂದ ಆ ಉಜ್ಜಯಿನೀ ನಗರದಲ್ಲಿ ವಾಸಿಸಹತ್ತಿದನು.

## ೪ ಓಂಕಾರೇಶ ಲಿಂಗೋತ್ಪತ್ತಿ.

ಕಾವೇರಿಕಾನರ್ಮದಯೋಃ ಪವಿತ್ರೇಸಮಾಗಮೇ ಸಜ್ಜನತಾರಣಾಯ ॥
ಸದೈವ ಮಾಂಧಾತೃಪುರೇ ವಸಂತಮೋಂಕಾರಮೀಶಂ ಶಿವಮೇಕಮೀಡೇ ॥ ೪ ॥

ವಿವೇಕಶೀಲಾ, ಪರಮಶಿವಭಕ್ತನಾದ ನಿನಗೆ ಇನ್ನು ಓಂಕಾರೇಶನ ಮಹಿಮೆಯನ್ನು ಹೇಳುವೆನು ಕೇಳು. ಹಿಂದಕ್ಕೆ ಒಂದಾನೊಂದು ಕಾಲದಲ್ಲಿ ಬ್ರಹ್ಮಪುತ್ರರಾದ ನಾರದರು ತೀರ್ಥಯಾತ್ರೆಯ ನೆವದಿಂದ ಈ ಪೃಥ್ವಿಯಲ್ಲಿ ಸಂಚರಿಸುತ್ತ ಅವರು ಕ್ರಮವಾಗಿ ಭೂಕೈಲಾಸವೆನಿಸಿದ ಗೋಕರ್ಣ ಮಹಾಕ್ಷೇತ್ರಕ್ಕೆ ಬಂದರು. ಅವರು ಮಹಾಪಾಪಹರನಾದ

ಮಹಾಬಲೇಶನನ್ನು ಪೂಜಿಸಿ, ಅಲ್ಲಿಂದ ಹೊರಟು ವಿಂಧ್ಯ ಪರ್ವತಕ್ಕೆ ಬರಲು, ವಿಂಧ್ಯಾ
ಚಲನು ಮಾನವದೇಹ ಧರಿಸಿ ಅವರನ್ನು ಆದರಪೂರ್ವಕವಾಗಿ ಬರಮಾಡಿಕೊಂಡು ಉಚ್ಚಾ
ಸನದಲ್ಲಿ ಕುಳ್ಳಿರಿಸಿ ಷೋಢಶೋಪಚಾರಗಳಿಂದ ಸತ್ಕರಿಸಿದಮೇಲೆ ಅವರನ್ನು ಕುರಿತು
ಅಭಿಮಾನದಿಂದ—“ಋಷೀಶ್ವರಾ ನಾರದಾ, ನನ್ನ ಈ ರಾಜೋಪಚಾರಗಳಿಂದ ನಿನಗೆ
ಸಂತೋಷವಾಗಿರಬಹುದಲ್ಲವೆ? ನಿನ್ನಂಥ ಋಷಿಗಳು ದಿನಾಲು ಎಷ್ಟೋಜನರು ನನ್ನಲ್ಲಿ
ಬಂದು ಸಂತುಷ್ಟರಾಗಿ ನನ್ನ ಈ ವೈಭವವನ್ನು ನೋಡಿ ದಂಗುಬಡೆದು ಹೋಗುವರು.
ವೈಭವ, ವಿದ್ಯಾ, ಔನ್ನತ್ಯಾದಿಗಳಿಂದ ನನ್ನನ್ನು ಸರಿಗಟ್ಟುವ ಯೋಗ್ಯತೆಯುವನು
ಈ ಜಗತ್ತಿನಲ್ಲಿ ಅನ್ಯನು ಯಾವನಿರುವನು? ನನ್ನಲ್ಲಿರುವಷ್ಟು ಪಾವನತೀರ್ಥಗಳೂ, ದಿವ್ಯ
ತರವಾದ ಓಷಧಿಗಳೂ, ಚಿನ್ನದಖನಿಗಳೂ ಅನ್ಯ ಯಾವಪರ್ವತರಾಜನಲ್ಲಿಯೂ ದೊರೆಯ
ಲಾರವೆಂಬದನ್ನು ನಾನು ಪ್ರಮಾಣಪೂರ್ವಕವಾಗಿ ಹೇಳುವೆನು! ಅದೇಕೆ, ಇಂದು ನೀವು
ಪ್ರತ್ಯಕ್ಷವಾಗಿ ನೋಡಿಯೇ ಇರುವಿರಲ್ಲ; ಹೇಳಿರಿ, ನನ್ನ ವೈಭವಕ್ಕೂ ಅನ್ಯಪರ್ವತಗಳ
ವೈಭವಕ್ಕೂ ಅಂತರವೆಷ್ಟಿರುವದೆಂಬದನ್ನು ನಿರ್ಮಾತ್ಸರ್ಯ ಬುದ್ಧಿಯಿಂದ ನೀವೇ
ಹೇಳಿರಿ! ಯಾಕಂದರೆ, ನೀವು ತ್ರಿಭುವನ ಸಂಚಾರಿಗಳಾದುದರಿಂದ ನಿಮಗೆ ಎಲ್ಲ ಸಂಗ
ತಿಯೂ ಅವಗತವಿರುವದು” ಎಂದು ಕೇಳಲು, ಕಲಹಪ್ರಿಯರಾದ ನಾರದರಿಗೆ ಇವನ
ಅಹಂಭಾವದ ಭಾಷಣಗಳು ಎಷ್ಟುಮಾತ್ರವೂ ಸಹನವಾಗಲಿಲ್ಲ. ಅವರು ಉಪಹಾಸ್ಯ
ದೊಂದಿಗೆ ಅವನನ್ನು ಕುರಿತು—ಭೂಧರನೇ, ಅನ್ಯಸ್ಥಳಗಳಿಗೆ ಹೋಗದೆ, ಅನ್ಯರ
ಯೋಗ್ಯತೆಯನ್ನು ತಿಳಿಯದೆ ಕೂಪಮಂಡೂಕ ನ್ಯಾಯದಂತೆ ಕುಳಿತಲ್ಲಿಯೇ ಕುಳಿತು
ನಾನೇ ದೊಡ್ಡವನು, ನಾನೇ ವೈಭವಶಾಲಿಯು, ನಾನೇ ಪೂಜ್ಯನೆಂದು, ನಿನ್ನಷ್ಟಕ್ಕೆ
ನೀನೇ ಬಡಬಡ ಹೊಗಳಿಕೊಳ್ಳಹತ್ತಿದರೆ, ನಾವು ಏನೆಂದು ಹೇಳೋಣ? ಔನ್ನತ್ಯ,
ಹಾಗೂ ವೈಭವಗಳಲ್ಲಿ ಲೋಕವಿಖ್ಯಾತನಾಗಿ ಪರ್ವತರಾಜನೆಂಬ ಗೌರವದ ಹೆಸರಿನಿಂದ
ಸುಪ್ರಸಿದ್ಧನಾದ ಆ ಮೇರುಪರ್ವತವನ್ನು ಒಂದಾವರ್ತಿಯಾದರೂ ನೋಡಿದ್ದರೆ, ನೀನು
ಹೀಗೆ ಎಂದೂ ನುಡಿಯುತ್ತಿದ್ದಿಲ್ಲ. ಆ ಗಿರಿವರನು ಹರಿ ಬ್ರಹ್ಮಾದಿದೇವತೆಗಳಿಗೆ ಸಹ ಆಶ್ರ
ಯನಾಗಿದ್ದು, ಸೂರ್ಯಚಂದ್ರಮರು ಇವನನ್ನು ನಿತ್ಯದಲ್ಲಿ ತಪ್ಪದೆ ಪ್ರದಕ್ಷಿಣೆ ಮಾಡಿ
ತಮ್ಮ ದೇಹಕಾಂತಿಯ ನೀರಾಂಜನಗಳನ್ನು ಇವನ ಪಾದಾರವಿಂದಗಳಿಗೆ ಹೆಜ್ಜೆಹೆಜ್ಜೆಗೆ
ಬೆಳಗುತ್ತಿರುವರು. ಎಲಾ, ಔನ್ನತ್ಯ—ವೈಭವಗಳಲ್ಲಿ ನಿನ್ನನ್ನು ತಲೆ ಮೆಟ್ಟಿಹಾರುವ ಅವ
ನಮುಂದೆ ದುರಭಿಮಾನಿಯಾದ ನಿನ್ನ ಈ ಕ್ಷುದ್ರವೈಭವವು ಏತಕ್ಕೆ ಮುಟ್ಟಬೇಕು! ಅಥವಾ
ನಿಮ್ಮ ವೈಭವ ಸಂಪದಗಳನ್ನು ತೆಗೆದುಕೊಂಡು ನಾನೇನು ಮಾಡಬೇಕಾಗಿದೆ! ಅತಿಥಿಯಾಗಿ
ಬಂದಿದ್ದ ನನ್ನ ಕಾರ್ಯವು ನೀನು ಮಾಡಿದ ಈ ಸತ್ಕಾರದಿಂದ ಮುಗಿದಂತಾಯಿತು.
ಇನ್ನು ನಾನು ಬಹಳ ಹೊತ್ತು ನಿನ್ನಲ್ಲಿ ಮಾತಾಡುತ್ತ ನಿಂತುಕೊಳ್ಳುವಹಾಗಿಲ್ಲ ಸಹ”
ಎಂದು ನುಡಿದು ನಾರದರು ದ್ರುತ ಗತಿಯಿಂದ ಹೊರಟುಹೋದರು.

ಇತ್ತ ಮೊದಲೇ ಅಹಂಕಾರ ಗರ್ವಿತನಾದ ವಿಂಧ್ಯನಿಗೆ ನಾರದರ ಈ ಮಾತುಗ
ಳಿಂದ ಅತ್ಯಂತ ಅಪಮಾನವಾದಂತಾಗಿ ಅದೇ ಕ್ಷಣಕ್ಕೆ ಆ ಮಾನಿಯು, ಮನಸ್ಸಿನೊ

ಳಗೆ "ಔನ್ನತ್ಯದಲ್ಲಿ ನಾನು ಆ ಮೇರು ಭೂಧರನನ್ನು ಮೀರಿಯೇ ತೀರಬೇಕೆ"ಂದು ನಿರ್ಧರಿಸಿ ಅಲ್ಲಿಂದ ಹೊರಟು ಓಂಕಾರಕ್ಷೇತ್ರಕ್ಕೆ ಬಂದು ಭಗವಾನ್ ಶಂಕರನನ್ನು ಕುರಿತು ತಪಸ್ಸು ಮಾಡತೊಡಗಿದನು. ಮುಂದೆ ಅವನು ಷಣ್ಮಾಸಗಳವರೆಗೆ ಕೇವಲವಾಯು ಭಕ್ಷಣದಿಂದಿದ್ದು, ಏಕಾಗ್ರಚಿತ್ತದಿಂದ ಶಂಕರನನ್ನು ಆರಾಧಿಸಲು, ಭಕ್ತಿಪ್ರಿಯನಾದ ಭವಾನೀವಲ್ಲಭನು ಸಂತುಷ್ಟನಾಗಿ ತನ್ನ ದಿವ್ಯತರದ ದೇಹಕಾಂತಿಯಿಂದ ದಶದಿಕ್ಕುಗಳನ್ನು ಬೆಳಗುತ್ತ ಅವನ ಮುಂದುಗಡೆಗೆ ಪ್ರಕಟನಾಗಿ ಅವನನ್ನು ಕುರಿತು—ಗಿರಿವರಾ, ನಿನ್ನ ತಪಸ್ಸಿಗಾಗಿ ನಾನು ಮೆಚ್ಚಿದೆನು; ಆದರೆ, ನೀನು ಮಾಡಿದ ಈ ತಪಕ್ಕಾಗಿ ನಿನಗೆ ಯಾವ ಫಲವು ಸಿದ್ಧಿಸಬೇಕೆಂಬದನ್ನು ಹೇಳು? ಎಂದು, ಕೇಳಲು, ಭಕ್ತಿಪರವಶನಾದ ವಿಂಧ್ಯಾಚಲನು ಪರಮಾತ್ಮನ ಪಾದಗಳಿಗೆ ಸಾಷ್ಟಾಂಗವೆರಗಿ ಮಹಾದೇವನನ್ನು ಕುರಿತು—ಭಗವನ್, ಸರ್ವಜ್ಞಶಿಖಾಮಣಿಯಾದ ನಿನ್ನಮುಂದೆ ನಾನು ಬೇಡಿಕೊಳ್ಳುವದೇನದೆ? ದಯಾಸಾಗರನಾದ ನೀನು ನನ್ನನ್ನು ಅನುಗ್ರಹಿಸಿದ್ದೇ ನಿಜವಾದರೆ, ಆಕಾಶದಲ್ಲಿ ನನಗೆ ಯಥೇಚ್ಛವಾಗಿ ಬೆಳೆಯುಬರುವಂತೆ ನೀನು ಕರುಣಿಸು" ಎಂದು ಪ್ರಾರ್ಥಿಸಿದನು. ಆಗ ಶಂಕರನು ಇವನ ಮನೊಭಾವವನ್ನರಿತು, ಕೇವಲ ಪರಪೀಡೆಗಾಗಿ ಈತನಿಗೆ ವರವೀಯುವದು ಅನುಚಿತವೆಂದು ಭಾವಿಸಿದರೂ, ಅವನ ಉಗ್ರವಾದ ತಪಸ್ಸಿನ ಕಡೆಗೆ ನೋಡಿ, ಅವನು ಬೇಡಿದ ವರವನ್ನು ಸಂತೋಷದಿಂದ ಕೊಟ್ಟುಬಿಟ್ಟನು. ಆಗ ಆ ಭೂಧರನಿಗೆ ಭೂಮಿಯಿಂದ ಆಕಾಶವು ಮೂರೇಗೇಣು ಉಳಿದಂತಾಗಿ ಅವನು ಸಂತೋಷದಿಂದ ಕುಣಿಯುಹತ್ತಿದನು. ಅಷ್ಟರಲ್ಲಿ ಬ್ರಹ್ಮಾದಿದೇವತೆಗಳು ಋಷಿಸಮೇತರಾಗಿ ಆ ಸ್ಥಳಕ್ಕೆ ಬಂದು ತಪಃಸಿದ್ಧನಾದ ಆ ವಿಂಧ್ಯನನ್ನು ಅಭಿನಂದಿಸಿದಮೇಲೆ, ಮಹಾದೇವನಿಗೆ ಸಾಷ್ಟಾಂಗವೆರಗಿ ಬಹು ಪ್ರಕಾರವಾಗಿ ಅವನನ್ನು ಸ್ತುತಿಸಹತ್ತಿದರು. ಆಗ ಶಂಕರನು ಸಂತುಷ್ಟನಾಗಿ ಅವರನ್ನು ವರಪ್ರಾರ್ಥನೆಗಾಗಿ ಪ್ರೇರಿಸಲು, ಬ್ರಹ್ಮಾದಿ ದೇವತೆಗಳು ಸಂತೋಸಪಟ್ಟು ಅವನನ್ನು ಕುರಿತು—ದಯಾನಿಧೇ ಶಂಕರಾ, ನಿನ್ನ ದಿವ್ಯ ದರ್ಶನದಿಂದಲೇ ನಾವು ಸಂತುಷ್ಟರಾಗಿ ಹೋಗಿರುವದರಿಂದ ನಮಗೆ ಯಾವ ಇಚ್ಛೆಯೂ ಉಳಿದಿರುವದಿಲ್ಲ. ಆದರೆ ಭಕ್ತಜನರ ಉದ್ಧಾರಕ್ಕಾಗಿ ಭಕ್ತಮಂದಾರ ಶಾಖೆಯಾದ ನೀನು ನಿರಂತರವಾಗಿ ಇದೇ ಕ್ಷೇತ್ರದಲ್ಲಿ ವಾಸಿಸೆ"ಂದು ಪ್ರಾರ್ಥಿಸಿದರು. ಹೀಗೆ ಬ್ರಹ್ಮಾದಿಕರು ಬಹು ಲೀನತೆಯಿಂದ ಪ್ರಾರ್ಥಿಸಲು, ಅವರ ಪ್ರಾರ್ಥನೆಯಂತೆ ಮೃಡನು ಅದೇಕ್ಷಣಕ್ಕೆ ಲಿಂಗರೂಪಿಯಾಗಿ ಝುರ್ರನೆ ಭೂಮಿಗಿಳಿದನು. ಆಗ ಆ ಸ್ವಯಂಭುಲಿಂಗದ ಮಧ್ಯದಿಂದ ಒಮ್ಮೆಲೆ 'ಓಂ, ಎಂಬ ಗಂಭೀರವಾದ ಧ್ವನಿಯು ಹೊರಟು ಆ ಧ್ವನಿಯೊಂದಿಗೆ ಜ್ಯೋತಿರ್ಮಯವಾದ ಒಂದು ದಿವ್ಯ ಲಿಂಗವು ದೇವತೆಗಳು ಸಾಶ್ಚರ್ಯ ಮುದ್ರೆಯಿಂದ ನೋಡ ನೋಡುವಷ್ಟರಲ್ಲಿ ಅವರ ಕಣ್ಣುಗಳನ್ನು ಕುಕ್ಕುತ್ತ ಆಕಾಶಮಾರ್ಗವಾಗಿ ಹೊರಟುಹೋಯಿತು. ಅದೇ ಜ್ಯೋತಿರ್ಲಿಂಗವನ್ನು ಹರಿಬ್ರಹ್ಮಾದಿಕರು ಈವೊತ್ತಿಗೂ ಆರಾಧಿಸುತ್ತಿರುವರು. ಇತ್ತ ಪರಮಾತ್ಮನ ಸ್ಥಿರಲಿಂಗವು ಓಂಕಾರ ಕ್ಷೇತ್ರದಲ್ಲಿ ಸ್ಥಿರವಾಗಿನಿಂತು ಸ್ಥಿರಚಿತ್ತದಿಂದ ಭಜಿಸುವ ಭಕ್ತರಿಗೆ ಸ್ಥಿರಸ್ಥಾನವನ್ನೀಯುತ್ತ ಲೋಕದಲ್ಲಿ ಪ್ರಖ್ಯಾತವಾಯಿತು.. ಹೀಗೆ

ಸದಾಶಿವನು ಭಕ್ತೋದ್ಧಾರಾರ್ಥವಾಗಿ ಬ್ರಹ್ಮಾದಿ ಅಮರವರರ ಪ್ರಾರ್ಥನೆಯಂತೆ ಅವರಿಗೆ ಸ್ವಾಮಿಯಾಗಿ ಆ ಸ್ಥಳದಲ್ಲಿ ಲಿಂಗಾಕಾರನಾಗಿ ವಾಸಿಸಿದ್ದರಿಂದ ಇವನಿಗೆ ಅಮರೇಶ್ವರನೆಂಬ ನಾಮವೂ ಪ್ರಾಪ್ತವಾಯಿತು !

## ೫ ವೈದ್ಯನಾಥ ಲಿಂಗೋತ್ಪತ್ತಿ!

ಪೂರ್ವೋತ್ತರೇ ಪ್ರಜ್ವಲಿಕಾನಿಧಾನೇ ಸದಾ ವಸಂತಂ ಗಿರಿಜಾಸಮೇತಂ ॥
ಸುರಾಸುರಾರಾಧಿತ ಪಾದ ಪದ್ಮಂ ಶ್ರೀ ವೈದ್ಯನಾಥಂ ತಮಹಂ ನಮಾಮಿ ॥ ೫ ॥

ವಿವೇಕಶೀಲಾ, ಇನ್ನು ನೀನು ವೈದ್ಯನಾಥನ ವಿಚಿತ್ರಲೀಲೆಯನ್ನು ಕೇಳು. ಹಿಂದೆ ಕೊಮ್ಮೆ ರಾಕ್ಷಸರಾಜನಾದ ರಾವಣನು ತಾನು ಲೋಕೋತ್ತರ ಸಾಮರ್ಥ್ಯವನ್ನು ಪಡೆದು ಲೋಕತ್ರಯಗಳ ರಾಜ್ಯವನ್ನು ಒಮ್ಮೆಲೆ ಭೋಗಿಸಬೇಕೆಂಬ ಮಹತ್ವಾಕಾಂಕ್ಷೆಯಿಂದ ಕೈಲಾಸಕ್ಕೆ ಹೋಗಿ ಅಲ್ಲಿ ಕೈಲಾಸಪತಿಯಾದ ಶಂಕರನನ್ನು ಕುರಿತು, ಘೋರತರವಾದ ತಪಸ್ಸು ಮಾಡಹತ್ತಿದನು. ಆದರೆ ಶಿವನು ಸುಪ್ರಸನ್ನನಾಗಲಿಲ್ಲ. ಆಗ ಆ ಮಾನಿಯು ಶಿವನನ್ನು ಒಲಿಸಿಕೊಂಡೇ ತೀರುವೆನೆಂದು ಪ್ರತಿಜ್ಞೆಮಾಡಿ, ಅಲ್ಲಿಂದ ಹಿಮಗಿರಿಯ ದಕ್ಷಿಣದಲ್ಲಿರುವ ' ಪರಳೀ, ಎಂಬ ಹೆಸರಿನ ವನಕ್ಕೆ ಬಂದು ಅಲ್ಲಿ ಒಂದು ಆಳವಾದ ತಗ್ಗು ತೋಡಿ ಅದರಲ್ಲಿ ಶ್ರೀಗಂಧದ ದೊಡ್ಡ ದೊಡ್ಡ ಬೊಡ್ಡೆಗಳನ್ನು ಎತ್ತರವಾಗಿ ಒಟ್ಟಿ ತುಸು ಹೊತ್ತಿನಲ್ಲಿ ಭಯಂಕರವಾದ ಅಗ್ನಿಕುಂಡವನ್ನು ರಚಿಸಿದನು. ಮುಂದೆ ಅವನು ತನ ಧ್ಯಾನಕ್ಕಾಗಿ ರುದ್ರನದೊಂದು ಉಗ್ರಮೂರುತಿಯನ್ನು ಆ ಕುಂಡದ ಮೇಲ್ಬದಿಯಲ್ಲಿ ಸ್ಥಾಪಿಸಿ, ಸ್ನಾನಮಾಡಿ ಒದ್ದೆಯಿಂದ ಆ ಮೂರುತಿಯನ್ನು ಪೂಜಿಸಿದ ಮೇಲೆ ಭುಜಗಳನ್ನು ಮೇಲಕ್ಕೆತ್ತಿ ಆಕ್ರೋಶದಿಂದ ಒಂದೇ ಸವನೆ ಶಂಕರನನ್ನು ಧಾವಿಸಹತ್ತಿದನು- ಆದರೂ ಶಿವನು ಉದಯಿಸಲಿಲ್ಲ. ಆಗ ಅವನಿಗೆ ಅತ್ಯಂತ ದುಃಖವಾಗಿ ತಪಃಕ್ಷೀಣವಾದ ತನ್ನ ದೇಹವನ್ನು ನೋಡಿ ತನ್ನಷ್ಟಕ್ಕೆ ತಾನೇ ಅಂದುಕೊಂಡನೇನಂದರೆ, ಈಗ ನಾನು ಈ ದೇಹದಿಂದ ಯಾವ ಪುರುಷಾರ್ಥವನ್ನು ಸಾಧಿಸಿಕೊಂಡಹಾಗಾಯಿತು? ಎಲಾ! ಈವೊತ್ತಿನವರೆಗೆ ನಾನು ಮಾಡಿದ ಪ್ರಯಾಸವೆಲ್ಲ ವ್ಯರ್ಥವಾಗಿ ಹೋಯಿತು. ಅಂದಮೇಲೆ ಬಲಹೀನವಾದ ಈ ನನ್ನ ಶರೀರಕ್ಕೂ, ನಿಷ್ಫಲವಾದ ಈ ತಪಸ್ಸಿಗೂ ಧಿಕ್ಕಾರವಿರಲಿ!! ಇನ್ನು ನಿಷ್ಪ್ರಯೋಜಕವಾದ ಈ ದೇಹವನ್ನು ನಾನು ಇಟ್ಟಾದರೂ ಪ್ರಯೋಜನವೇನು! ಎಂದು ನುಡಿಯುವಾಗ ಅವನ ಸರ್ವಾಂಗದಲ್ಲಿ ಒಂದುತರದ ಆವೇಶತುಂಬಿ, ಅವನಲ್ಲಿ ತನ್ನ ದೇಹದ ಪರಿವೆಸಹ ಉಳಿಯದಾಯಿತು; ಆಗ ಆ ಘೋರವೃತ್ತಿಯ ಧೀರರಾಕ್ಷಸನು ಆವೇಶದಭರದಲ್ಲಿ ಚಟ್ಟನೆ ಎದ್ದುನಿಂತು ಚಂದ್ರಹಾಸವೆಂಬ ತನ್ನ ಖಡ್ಗವನ್ನು ಹಿರಿದು, ಆ ಖಡ್ಗದಿಂದ ಒಂದೊಂದೇ ತನ್ನ ಶಿರಃಕಮಲಗಳನ್ನು ಕತ್ತರಿಸಿ ಅರಿಷಿಣ ಕುಂಕುಮದಿಂದ ಅವನ್ನು ಅಲಂಕರಿಸಿ ರಕ್ತ ಪುಷ್ಪಗಳೊಂದಿಗೆ ' ಓಂ ಮಹಾರುದ್ರಾಯ ಸ್ವಾಹಾ, ಎಂಬ ಮಂತ್ರದಿಂದ ರುದ್ರನ ಪ್ರೀತ್ಯರ್ಥವಾಗಿ ಅಗ್ನಿಯಲ್ಲಿ ಹೋಮಮಾಡಹತ್ತಿದನು.

ಹೀಗೆ ಆ ದೈತ್ಯೇಂದ್ರನು ತನ್ನ ಆವೇಶದಲ್ಲಿ ಒಂದರಹಿಂದೊಂದರಂತೆ ತನ್ನ ಒಂಬತ್ತು ರುಂಡಗಳನ್ನು ಕ್ರಮವಾಗಿ ಹೋಮಮಾಡಿ, ಅವುಗಳಿಂದ ಹೊರಟ ರಕ್ತಪ್ರವಾಹದಿಂದ ಕುಂಡದೊಳಗಿನ ಅಗ್ನಿಯು ಸೊಂಯ್, ಎಂದು ಶಾಂತವಾಗುತ್ತಿರಲು, ಉಳಿದ ತನ್ನ ಹತ್ತನೆಯ ಪ್ರಧಾನ ಶಿರಸ್ಸಿಗೂ ಕೈ ಚಾಚಿದನು. ಆಗ ಇವನ ಅತ್ಯಂತ ನಿಕಟತರ ಕೃತಿಗೂ ಉಗ್ರವಾದ ತಪಸ್ಸಿಗೂಮೆಚ್ಚಿ ಮಹಾರುದ್ರನು ಒಮ್ಮೆಲೆ ಆವನ ಮುಂಭಾಗದಲ್ಲಿ ಪ್ರಕಟನಾಗಿ ಅವನು ಎತ್ತಿರುವ ಖಡ್ಗಹಸ್ತವನ್ನು ಗಟ್ಟಿಯಾಗಿ ಹಿಡಿದು ಗಡಿಬಿಡಿಯಿಂದ ಅವನನ್ನು ಕುರಿತು—ಹಾ! ಸಾಕುಮಾಡು, ರಾವಣಾ ಈ ನಿನ್ನ ಘೋರಕೃತ್ಯವನ್ನು ಸಾಕುಮಾಡು. ಯಾವಾತನ ಮೆಚ್ಚಿಕೆಗಾಗಿ ನೀನು ಈ ಭಯಂಕರವಾದ ಕೃತ್ಯವನ್ನು ಆರಂಭಿಸಿರುವಿಯೋ, ಅವನೇ ನಾನು ಪ್ರತ್ಯಕ್ಷನಾಗಿ ಬಂದು ನಿಂತಿರುವೆನೆಂಬದನ್ನ ಕಣ್ಣು ತೆರೆದು ನೋಡು. ನೀನು ಮಾಡಿರುವ ಈ ತಪಕ್ಕಾಗಿ ನಾನು ಬೇಕಾದಂಥ ವರಗಳನ್ನು ದಯಪಾಲಿಸುವೆನಾದ್ದರಿಂದ, ನಿನಗೆ ಬೇಕಾದ ವರಗಳನ್ನು ನೀನು ಬೇಡಿಕೋ, ಎಂದು ಅಮೃತತುಲ್ಯವಾದ ವಾಣಿಯಿಂದ ನುಡಿಯಲು, ರಾವಣನು ಪರಮಾನಂದಪಟ್ಟು ಪರಮಾತ್ಮನಪಾದಗಳಿಗೆ ಸಾಷ್ಟಾಂಗವೆರಗಿ ಅತ್ಯಂತ ಲೀನತೆಯಿಂದ ಅವನನ್ನು ಕುರಿತು—ದೇವಾಧಿದೇವಾ ಶಂಕರಾ, ನಿನ್ನ ಈ ದಿವ್ಯ ದರ್ಶನದಿಂದ ನಾನು ಧನ್ಯನಾದೆನು. ನನ್ನ ತಪಸ್ಸಿನ ಪರಿಶ್ರಮವು ಇಂದು ಸಾರ್ಥಕವಾದಂತಾಯಿತು. ಲೋಕಾಧ್ಯಕ್ಷನಾದ ನೀನು ಪ್ರತ್ಯಕ್ಷನಾಗಿ ಬಂದುನಿಂತಿರಲು, ನಿನ್ನ ಕಿಂಕರನಾದ ನನಗೆ ಏತರಿಂದ ಕೊರತೆ? ದೇವಾ, ನಿಜವಾಗಿ ನೀನು ವರವೀಯುವದಕ್ಕಾಗಿಯೇ ಬಂದಿದ್ದರೆ ಈಗ ಬೇಕಾಗಿರುವ ಅತುಲಭುಜಪರಾಕ್ರಮವನ್ನು ನನಗೆ ದಯಪಾಲಿಸೆ”ಂದು ಪ್ರಾರ್ಥಿಸಿ, ಸಂಗೀತಶಾಸ್ತ್ರಕೋವಿದನಾದ ಆ ರಾವಣನು ವೀಣೆಯ ಮಧುರಸ್ವರದೊಂದಿಗೆ ಆಲಾಪತಾನಗಳಲ್ಲಿ ಸದಾಶಿವನ ಸತ್ಕೀರ್ತಿಯನ್ನು ಗಾನಮಾಡಹತ್ತಿದನು. ಆಗ ಗಾನಪ್ರಿಯನಾದ ಹರನು ಮಧುರವಾದ ಅವನ ಗಾನದಿಂದ ಸಂತುಷ್ಟನಾಗಿ, ಅಗ್ನಿಯಲ್ಲಿ ಹೋಮಮಾಡಿದ ಅವನ ಒಂಬತ್ತೂ ಶಿರಃಕಮಲಗಳು ಪೂರ್ವದಂತೆ ಅವನಿಗೆ ದೊರೆಯುವಹಾಗೆ ಅನುಗ್ರಹಿಸಿ ಅವನು ಬೇಡಿದ ವರವಿತ್ತು ಅಲ್ಲಿಯೇ ಅದೃಶ್ಯನಾದನು. ಹೀಗೆ ರಾವಣನು ವೀಣೆಯ ಸಹಾಯದಿಂದ ರುದ್ರನನ್ನು ಸಂತೋಷಗೊಳಿಸಿದಾಗಿನಿಂದ ಇದಕ್ಕೆ ರುದ್ರವೀಣೆಯೆಂಬ ಹೆಸರು ಲೋಕದಲ್ಲಿ ರೂಢವಾಯಿತು. ಇರಲಿ. ಹೀಗೆ ಭಗವಂತನು ವರಪ್ರದಾನಮಾಡಿ ಕಾಣದಾಗಲು, ತಾಪಃಸಿದ್ಧನಾದ ರಾವಣನು ಕೃತಕೃತ್ಯನಾಗಿ ಹರ್ಷಾತಿಶಯದಿಂದ ಕುಣಿಯುತ್ತ ಲಂಕಾಪುರಿಗೆ ಹೊರಟನು.

ಇತ್ತ ಈ ಸುದ್ದಿಯು ಇಂದ್ರಾದಿ ದೇವತೆಗಳಿಗೆ ತಿಳಿಯಲು, ಅವರು ಗಾಬರಿಯಾಗಿ ಎಲ್ಲರೂ ಒಟ್ಟುಗೂಡಿ ತಮ್ಮತಮ್ಮೊಳಗೇ ಯೋಚಿಸಿ, ಈ ಅರಿಷ್ಟನಿವಾರಣಕ್ಕಾಗಿ ನಾರದರನ್ನು ಕಳಿಸಿದರು. ಇತ್ತ ರಾವಣನು ಕೈಲಾಸದಿಂದ ಹೊರಟವನು ಇನ್ನೂ ತನ್ನ ರಾಜಧಾನಿಗೆ ಮುಟ್ಟಿದ್ದಿಲ್ಲ. ಅಷ್ಟರಲ್ಲಿಯೇ ನಾರದರು ಬಂದು ಅವನನ್ನು ಕೂಡಿಕೊಂಡರು. ರಾವಣನು ಅವರಿಗೆ ತನ್ನ ವರದ ವೃತ್ತಾಂತವನ್ನು ಹೇಳಲು, ನಾರದರು ಆ ರಾಕ್ಷಸೇಶ್ವರನನ್ನು ಕುರಿತು—ಲಂಕಾಪತೇ ರಾವಣಾ, ಧನ್ಯನು, ತಪಃಸ್ಸಿದ್ಧನಾದ ನೀನೇ

ಧನ್ಯಸು! ತ್ರಿಭುವನೈಕವೀರನಾದ ನಿನ್ನನ್ನು ಸರಿಗಟ್ಟುವವನು ಇನ್ನಾವನಿರುವನು! ಇದೆಲ್ಲ ಯೋಗ್ಯವಾಯಿತು. ಪರಂತು, ನೀನು ಆ ಶಂಕರನಲ್ಲಿ ವಿಶ್ವಾಸವಿಟ್ಟು ಅವನು ಕೊಟ್ಟ ವರವನ್ನು ಅಲ್ಲಿಯೇ ಪರೀಕ್ಷಿಸದೆ ಹಾಗೆಯೇ ಬಂದದ್ದು ನಿನ್ನದು ದೊಡ್ಡ ತಪ್ಪು. ಶ್ಮಶಾನದಲ್ಲಿ ದಿಗಂಬರನಾಗಿ ಭೂತಗಣಗಳೊಂದಿಗೆ ಹುಚ್ಚನಂತೆ ಕುಣಿಯುತ್ತಿರುವ ಆ ಭೂತಪತಿಯು ವರವಚನವನ್ನು ಪರೀಕ್ಷಿಸದೆ ನಿನ್ನಹೊರತು ಅನ್ಯನು ಯಾವನಾದರೂ ಹೀಗೆ ಬರಬಹುದೆ? ಹೀಗೆಯೇ ಆ ದಿಗಂಬರನ ಮಾತಿನಲ್ಲಿ ವಿಶ್ವಾಸವಿಟ್ಟು ಹಿಂದಕ್ಕೆ ಎಷ್ಟೋ ಮಂದಿ ನಷ್ಟರಾಗಿ ಹೋದದ್ದನ್ನು ನಾನು ಕಣ್ಣು ಮುಟ್ಟಿ ನೋಡಿದ್ದೇನೆ. ನಿನ್ನ ಪರಿಣಾಮವಾದರೂ ಸಾಂಪ್ರತ ಅದೇ ಸ್ಥಿತಿಗೆ ಬಂದು ನಿಂತಿರುವದು. ಇನ್ನು ನೀನು ಮುಂದೆ ಹೇಗೆ ಮಾಡುವೆಯೋ ನೋಡು" ಎಂದು ನುಡಿದು ನಾರದರು ಸುಮ್ಮನೆ ಮುಂದಕ್ಕೆ ಸಾಗಹತ್ತಿದರು. ನಾರದರ ಈ ಮಾತನ್ನು ಕೇಳಿ ರಾವಣನು ಬೆಪ್ಪಾಗಿ, ಏನೂ ತಿಳಿಯದ ಮೂಢನಂತೆ ತುಸುಹೊತ್ತು ಸುಮ್ಮನೆ ನಿಂತು ನಾರದರನ್ನು ಕುರಿತು—ನಾರದರೇ, ಕೆಲಸ ಕೆಟ್ಟಿತು. ನಿಮ್ಮ ಮಾತಿನಂತೆ ನಾನು ವರವನ್ನು ಪರೀಕ್ಷಿಸದೆ ಹಾಗೆಯೇ ಬಂದದ್ದು ಬಹಳ ತಪ್ಪಾಯಿತು. ಕೈಮೀರಿ ಹೋದ ಮಾತಿಗೆ ಇನ್ನು ಮಾಡುವದೇನು! ಇನ್ನಾದರೂ ಇದಕ್ಕೆ ಯಾವದಾದರೊಂದು ಉಪಾಯವಿದ್ದರೆ ತಾವು ದಯಮಾಡಿ ನನಗೆ ಹೇಳಿ ನನ್ನ ಈ ಶ್ರಮವನ್ನು ಸಫಲಗೊಳಿಸುವಂತೆ ಮಾಡಿದರೆ ನನ್ನ ಮೇಲೆ ನಿಮ್ಮ ದೊಡ್ಡ ಉಪಕಾರವಾದಂತಾಗುವದು.'' ಎಂದು ಸಣ್ಣ ಮೋರೆ ಮಾಡಿ ಲೀನಭಾವದಿಂದ ಬೇಡಿಕೊಳ್ಳಲು, ನಾರದರು ತಮ್ಮ ಮನಸ್ಸಿನಂತೆ ಯುಕ್ತಿಯು ಸಾಧಿಸಿದ್ದಕ್ಕಾಗಿ ಸಂತೋಷಬಟ್ಟು ಮುಗುಳುನಗೆಯಿಂದ—"ದಾನವೇಂದ್ರಾ, ನೀನು ಸರ್ವಥಾ ಚಿಂತಿಸಬೇಡ. ನನ್ನಲ್ಲಿ ವಿಶ್ವಾಸವಿಟ್ಟು, ನಾನು ಹೇಳಿದಂತೆ ವರ್ತಿಸಿದರೆ, ನಿನ್ನ ಈ ಶ್ರಮವು ಎಂದೂ ವ್ಯರ್ಥವಾಗಲಿಕ್ಕಿಲ್ಲ. ಈಗಲೇ ನಿನ್ನ ವರದ ಪರೀಕ್ಷೆಯಾಗಬೇಕಾಗಿದ್ದರೆ, ಇಲ್ಲಿಂದ ನೀನು ಮತ್ತೆ ಹಿಂತಿರುಗಿ ನೆಟ್ಟಗೆ ಕೈಲಾಸಕ್ಕೆ ಹೋಗು. ಅಲ್ಲಿ ಸಕಲ ಭೂತಗಳೊಂದಿಗೆ ಪಾರ್ವತೀಪರಮೇಶ್ವರರು ತಮ್ಮ ಸ್ಥಳಗಳಲ್ಲಿ ಕುಳಿತಾಗ, ನೀನು ಒಮ್ಮೆಲೇ ಆ ಪರ್ವತಕ್ಕೆ ಪರ್ವತವನ್ನೇ ಎತ್ತುವದಕ್ಕೆ ಪ್ರಯತ್ನಿಸು. ಸುದೈವದಿಂದ ಆ ಪರ್ವತವು ಮೇಲಕ್ಕೆ ಎದ್ದರೆ, ನಿನ್ನ ಕಾರ್ಯವೇ ಆಯಿತು. ಇಲ್ಲದೆಹೋದರೆ ನಿನಗಿತ್ತ ಈ ವರವು ನಿರರ್ಥಕವಾದದ್ದೆಂದು ಭಾವಿಸಿ, ಆ ಕಪಟಿಯಾದ ಶಂಕರನನ್ನು ಇನ್ನೊಮ್ಮೆ ಹೀಗೆ ಎಂದೂ ನಂಬಬೇಡ," ಎಂದು ಹೇಳಿ ನಾರದರು ಬಹಳ ಹೊತ್ತು ನಿಲ್ಲದೆ ಆಕಾಶಮಾರ್ಗವಾಗಿ ಹೊರಟು ಹೋದರು.

ಇತ್ತ ರಾವಣನು ಸಮಾಧಾನಪಟ್ಟು ನಾರದರ ಬುದ್ಧಿಪ್ರಭಾವವನ್ನು ಹೊಗಳುತ್ತಾ ತಿರುಗಿ ಕೈಲಾಸಕ್ಕೆ ಬಂದನು. ಇವನು ಕೈಲಾಸಕ್ಕೆ ಬಂದು ಮುಟ್ಟಿದಾಗ ಸೂರ್ಯನು ಅದೇ ಅಸ್ತಾಚಲಶಿಖರವನ್ನು ಇಳಿದಿದ್ದನು. ಆಗ ಪ್ರದೋಷಕಾಲದ ಶಿವಪೂಜೆಗೆಂದು ಸಕಲದೇವತೆಗಳೊಂದಿಗೆ ಶಿವಗಣಗಳೆಲ್ಲ ಕೈಲಾಸದಲ್ಲಿ ಕೂಡಿದರು. ಇದೇ ಸಂಧಿಯನ್ನು ನಿರೀಕ್ಷಿಸುತ್ತ ಕುಳಿತ ರಾವಣನು ನನ್ನ ವರಪರೀಕ್ಷಣೆಗೆ ಈ ಕಾಲವು ಯೋಗ್ಯವಾದದ್ದೆಂದು ಭಾವಿಸಿ ತನ್ನ ಹೊದ್ದುಕೊಳ್ಳುವ ವಸ್ತ್ರವನ್ನು ನಡುವಿಗೆ ಸುತ್ತಿ

ಪೂರ್ವಾಭಿಮುಖವಾಗಿರುವ ಆ ಕೈಲಾಸದ ಒಂದು ಪ್ರಶಸ್ತವಾದ ಹೊದರಿನಲ್ಲಿ ಹಿಂಬದಿಯಿಂದ ಪ್ರವೇಶಿಸಿ ತನ್ನ ಇಪ್ಪತ್ತೂ ಕೈಗಳನ್ನು ನೆಲಕ್ಕೂರಿ ಒಳ್ಳೆಯ ಕಸುವಿನಿಂದ ಒಮ್ಮೆ ಮೈಯುಬ್ಬಿಸಲು, ಒಂದೇ ಕಾಲಕ್ಕೆ "ಖಟ್ ಖಡಲ್" ಎಂದು ಶಬ್ದವಾಗಿ ಆ ಭಯಂಕರ ಶಬ್ದವು ಆಕಾಶಮಂಡಲವನ್ನೆಲ್ಲ ವ್ಯಾಪಿಸಿತು. ಇದನ್ನು ಕೇಳಿ ಮೇಲಿನವರು ಗಾಬರಿಗೊಂಡು ಅತ್ತಿತ್ತ ನೋಡುವಷ್ಟರಲ್ಲಿ ಕೈಲಾಸಪರ್ವತದ ಸುತ್ತಲಿನ ತಟಬಂದಿಯು ಸಿಡಿಯಹತ್ತಿ, ಪರ್ವತವೆಲ್ಲ ಲಿಕಿ ಲಿಕಿಯಾಗಿ ಮೇಲಿನವರು ಒಬ್ಬೊಬ್ಬರೇ ಕೆಳಗುರುಳಹತ್ತಿದರು. ಹೀಗಾದದ್ದನ್ನು ಕಂಡು ಪಾರ್ವತಿಯು ಭಯಾತಿಶಯದಿಂದ ನಡುಗಹತ್ತಿ ನಿಶ್ಚಿಂತನಾಗಿ ಕುಳಿತಿರುವ ಶಂಕರನನ್ನು ಕುರಿತು—ಪ್ರಿಯಕರಾ, ಇದೇನೋ ಅಪಘಾತವಾಯಿತು; ನೋಡಿರಿ, ಕೈಲಾಸವು ಒಂದೇಸವನೆ ಅಲೆದಾಡಹತ್ತಿ ಮೇಲಿನವರು ಕೆಳಗುರುಳಹತ್ತಿದ್ದಾರೆ. ಇನ್ನು ಸ್ವಲ್ಪಹೊತ್ತಿನಲ್ಲಿ ಕೈಲಾಸಕ್ಕೆ ಕೈಲಾಸವೇ ಉರುಳಿಬಿದ್ದು ನಾವು ಸಹ ಉಳಿಯುವಹಾಗಿಲ್ಲ. ಆದ್ದರಿಂದ ದೇವಾ, ಕರುಣಾಳುವಾದ ನೀನು ಈ ಅನಿಷ್ಟವನ್ನು ಶೀಘ್ರವಾಗಿ ಪರಿಹರಿಸು" ಎಂದು ಅತ್ಯಂತ ಆತುರದಿಂದ ಹೇಳಿಕೊಳ್ಳಲು, ಶಿವನು ಮೃದು ಹಾಸ್ಯದಿಂದ ಈ ಕಾರ್ಯವು ನನ್ನ ಭಕ್ತನಾದ ರಾವಣನಿಂದಲೇ ಆಗಿರಬಹುದೆಂದು ಭಾವಿಸಿ, ಅವನು ಪಾರ್ವತಿಯ ಬೇಡಿಕೆಯಂತೆ ಸಕಲ ಭೂತಗಳ ಸುಸ್ಥಿತಿಗಾಗಿ ಕೈಲಾಸವನ್ನು ತನ್ನ ವಾಮಪಾದದ ಅಂಗುಷ್ಠದಿಂದ ತುಸು ಒತ್ತಿ ಹಿಡಿಯಲು, ಲಿಕಿಲಿಕಿಯಾಗಿ ಹೋಗಿದ್ದ ಆ ಪರ್ವತದ ಎಲ್ಲ ಸಂದುಗಳು ತಮ್ಮ ತಮ್ಮಸ್ಥಕ್ಕೆ ತಾವೇ ಕೂಡಿಹೋಗಿ, ಅದು ಪೂರ್ವದಂತೆ ಅಚಲವಾಗಿ ನಿಂತಿತು. ಇತ್ತ ಅತಿಶಯ ಭಾರವಾಗಿ ಅದರ ಬುಡದಲ್ಲಿ ಸಿಕ್ಕ ರಾವಣನ ಮೈಎಲುವುಗಳು ಮುರಿದು ಪುಡಿಪುಡಿಯಾದವು. ಆಗಿನ ಆ ವ್ಯಥೆಯನ್ನು ತಾಳಲಾರದೆ ಅವನು ಕೆಟ್ಟ ಧ್ವನಿಯಿಂದ ಒಂದೇ ಸವನೆ ಚೀರಹತ್ತಿದನು. ಆದರೆ ಆಗಿನ ಕಾಲಕ್ಕೆ ಆತನನ್ನು ಆ ಸಂಕಟದಿಂದ ಉಳಿಸಿಕೊಳ್ಳುವವರು ಯಾರೂ ಇಲ್ಲದಿರುವವನ್ನು ನೋಡಿ ಅವನು ಗಾಬರಿಗೊಂಡನು. ಕಡೆಗೆ ದೀನವತ್ಸಲನಾದ ಸದಾಶಿವನ ಹೊರತು ಈ ಪ್ರಸಂಗದಲ್ಲಿ ನನ್ನನ್ನು ರಕ್ಷಿಸುವವರು ಯಾರೂ ಇಲ್ಲವೆಂದು ನಿರ್ಧರಿಸಿ, ಅವನು ಅತ್ಯಂತ ದೈನ್ಯವಾಣಿಯಿಂದ ಶಂಕರನನ್ನು ಧಾವಿಸಹತ್ತಿದನು. ಆಗ ಶಂಕರನು ಕನಿಕರಪಟ್ಟು ಕೂಡಲೆ ಕೈಲಾಸದಿಂದ ಕೆಳಗಿಳಿದು ಬೊಕ್ಕ ಬೋರಲು ಬಿದ್ದು ನರಳಹತ್ತಿರುವ ರಾವಣನನ್ನು ಎತ್ತಿ ಹಿಡಿದು ತನ್ನ ಅಮೃತಹಸ್ತದಿಂದ ಅವನ ಸರ್ವಾಂಗವನ್ನು ಸ್ಪರ್ಶಿಸಲು, ಪುಡಿಪುಡಿಯಾಗಿ ಹೋಗಿದ್ದ ಅವನ ಎಲುವುಗಳು ತತ್ಕ್ಷಣದಲ್ಲಿಯೇ ಹೊಂದುಗೂಡಿ ಪೂರ್ವಕ್ಕಿಂತಲೂ ಅಧಿಕವಾದ ದೇಹಬಲವು ಅವನಲ್ಲಿ ಪ್ರಾಪ್ತವಾಯಿತು. ಆಗ ಅವನು ಉತ್ಸಾಹದಿಂದ ಎದ್ದು ಕುಳಿತು ಕೃತಕರ್ಮಕ್ಕಾಗಿ ಪಶ್ಚಾತ್ತಾಪಪಟ್ಟು ಅಪರಾಧಕ್ಷಮೆಗಾಗಿ ಶಂಕರನ ಪಾದಗಳ ಮೇಲೆ ಬಿದ್ದು ಪರಿಪರಿಯಾಗಿ ಬೇಡಿಕೊಳ್ಳಹತ್ತಿದನು. ಆಗ ಪರಿತುಷ್ಟನಾದ ಪರಮೇಶ್ವರನು ವಾತ್ಸಲ್ಯದಿಂದ ಅವನನ್ನು ಕುರಿತು—"ಭಕ್ತಶ್ರೇಷ್ಠಾ, ಈ ಅಪರಾಧವು ಸ್ವತಃ ನಿನ್ನ ಬುದ್ಧಿಯಿಂದಲೇ ಆಗಿರದೆ, ಆ ಜಗಳಗಂಟನಾದ ನಾರದನ ಕಲಿಕೆ

ಯಿಂದಾಗಿರುವದಾದ್ದರಿಂದ ಇಷ್ಟೊಂದು ಮನಸ್ಸಿಗೆ ಹಚ್ಚಿಕೊಂಡು ನೀನು ಕೊರಗಬೇಡ. ನನ್ನ ಕೃಪೆಯಿಂದ ಈಗ ನಿನ್ನಲ್ಲಿ ಅಮೋಘವಾದ ಬಲವು ಸಿದ್ಧಿಸಿರುವದು. ಇದರಿಂದ ನೀನು ಭುವನತ್ರಯವನ್ನು ಸಹ ಸಹಜವಾಗಿ ಜಯಿಸಬಹುದು; ಆದ್ದರಿಂದ ಇನ್ನು ನೀನು ಯಾರಮಾತಿಗೂ ಲಕ್ಷಗೊಡದೆ, ಇಲ್ಲಿಂದ ನೆಟ್ಟಗೆ ನಿನ್ನ ಸ್ಥಳಕ್ಕೆ ಹೊರಟುಹೋಗು, ಎಂದು ಹೇಳಿ ಶಿವನು ಅಲ್ಲಿಯೇ ಅದೃಶ್ಯನಾದನು. ವಿವೇಕಶೀಲಾ, ಹೀಗೆ ಪರಮಾತ್ಮನು ಮಹಾ ವೈದ್ಯನಂತೆ ಮೇಲಿಂದ ಮೇಲೆ ಭಕ್ತಶ್ರೇಷ್ಠನಾದ ರಾವಣನಿಗೆ ಸಿರಃಸಂಧಾನ–ಅಸ್ಥಿಸಂಧಾನಾದಿಗಳಿಂದ ಆಯುರಾರೋಗ್ಯವನ್ನು ತಂದುಕೊಟ್ಟದ್ದರಿಂದ ಇವನಿಗೆ ವೈದ್ಯನಾಥನೆಂಬ ನಾಮವು ಸಾರ್ಥಕವಾಯಿತು. ಲೋಕದಲ್ಲಿ ಈವೊತ್ತಿಗೂ ಇವನು ರಾವಣನ ಬೇಡಿಕೆಯಂತೆ ಆ ಪರಳೀಕ್ಷೇತ್ರದಲ್ಲಿ ಲಿಂಗರೂಪನಾಗಿ ವಾಸಿಸಿರುವನು. ದಿವ್ಯವಾದ ಈ ಲಿಂಗದರ್ಶನದಿಂದ ಭಕ್ತರು ಭವರೋಗ ಮುಕ್ತರಾಗಿ ಪುನರ್ಜನ್ಮರಹಿತವಾದ ಶಾಶ್ವತ ಸುಖಸ್ಥಾನವನ್ನು ಹೊಂದಿ ಧನ್ಯರಾಗುವರು!

---

## ೬ ಭೀಮಶಂಕರ ಲಿಂಗೋತ್ಪತ್ತಿ !

ಯಂ ಶಾಕಿನೀ ಡಾಕಿನಿಕಾ ಸಮಾಜೇ ನಿಷೇವ್ಯಮಾಣಂ ಪಿಶಿತಾಶನೈಶ್ಚ ॥
ಸದೈವ ಭೀಮಾದಿ ಪದಪ್ರಸಿದ್ಧಂ ತಂ ಶಂಕರಂ ಭಕ್ತಹಿತಂ ನಮಾಮಿ ॥ ೬ ॥



ವಿವೇಕಶೀಲಾ, ಇನ್ನು ನಿನಗೆ ಭಗವಾನ್ ಸದಾಶಿವನು ಭೀಮಶಂಕರನೆಂಬ ನಾಮದಿಂದ ಹೇಗೆ ಪ್ರಸಿದ್ಧನಾದನೆಂಬ ಇತಿಹಾಸವನ್ನು ಹೇಳುವೆನು ಕೇಳು. ಹಿಂದಕ್ಕೆ ಲಂಕಾಪಟ್ಟಣದಲ್ಲಿ ರಾವಣಾನುಜನಾದ ಕುಂಭಕರ್ಣನು ಕರ್ಕಟಿಯೆಂಬ ತನ್ನಸ್ತ್ರೀಯಲ್ಲಿ ಭೀಮನೆಂಬ ಹೆಸರಿನ ಒಬ್ಬ ಬಲಾಢ್ಯ ಪುತ್ರನನ್ನು ಪಡೆದಿದ್ದನು. ಅದೇಸಂಧಿಯಲ್ಲಿ ಶ್ರೀರಾಮನಿಂದ ರಾವಣ–ಕುಂಭಕರ್ಣರ ಸಂಹಾರವಾಯಿತು. ಆಗ ಕರ್ಕಟಿಯು ಪತಿಯಮರಣದಿಂದ ಅತ್ಯಂತ ದುಃಖಿತಳಾಗಿ ತನ್ನ ತವರಮನೆಗೆ ಹೋದಳು. ಆಗ ಆಕೆಯ ವೃದ್ಧರಾದ "ಕರ್ಕಟ" "ಪುಷ್ಕಶೀ" ಎಂಬ ತಂದೆ ತಾಯಿಗಳುಸುತೀಕ್ಷ್ಣ ಋಷಿಯನ್ನು ತಿನ್ನಹೋಗಿ ಆತನ ಕ್ರೋಧಾಗ್ನಿಯಿಂದ ದಗ್ಧರಾಗಿ ಹೋದರು. ಆಕೆಯ ಅಣ್ಣನಾದ ವಿರೋಧನು ಮೊದಲೇ ರಾಮನಿಂದ ಹತನಾಗಿದ್ದನು; ಅದ್ದರಿಂದ ಆ ಕುಂಭಕರ್ಣಪತ್ನಿಯಾದ ಕರ್ಕಟಿಯು ಅನಾಥಳಾಗಿ ಬಾಲಕನಾದ ಭೀಮನೊಡನೆ ವಿಂಧ್ಯಾದ್ರಿಗೆ ಹೋಗಿ ಅಲ್ಲಿಯ ಒಂದು ನಿಬಿಡವಾದಅರಣ್ಯದ ತಪ್ಪಲಭೂಮಿಯಲ್ಲಿ ವಾಸಿಸಹತ್ತಿದಳು. ಮುಂದೆ ಭೀಮನು ದೊಡ್ಡವನಾದಬಳಿಕ ಒಂದುದಿನ ಚಿಂತಾತುರಳಾದ ತನ್ನ ತಾಯಿಯನ್ನು ಕುರಿತು ಆಧ್ಯತೆಯಿಂದ—ಜನನಿ, ಯಾವಾಗಲೂ ನೀನು ಹೀಗೆ ಚಿಂತಾತುರಳಾಗಿ ಕುಳಿತುಕೊಳ್ಳಲಿಕ್ಕೆ ಕಾರಣವೇನು? ಯಾರಿಂದಲಾದರೂ ನಿನಗೆ ಮನಸ್ತಾಪವಾಗಿರುವದೋ? ಹೇಳು, ಆ ಅಧಮರಶಾಸನವನ್ನು ನಾನು ಈಗಲೇ

ಮಾಡುವೆನು; ನನ್ನಂಥ ವೀರಪುತ್ರನು ನಿನಗೆ ವಿಧೇಯನಾಗಿರಲು, ನೀನು ಅಸಹಾಯಳಂತೆ ಹೀಗೆ ಉದಾಸೀನಳಾಗಿ ಕುಳಿತುಕೊಳ್ಳುವದು ಉಚಿತವಲ್ಲ; ಹಾಗು ನಾವು ನಮ್ಮ ಊರು ಕೇರಿಗಳನ್ನು ಬಿಟ್ಟು ಅನಾಥರಂತೆ ಈ ಪರ್ವತದಲ್ಲಿ ವಾಸಿಸುವದಾದರೂ ಏಕೆ? ನಮಗೆ ಆಪ್ತೇಷ್ಟ–ಬಂಧು–ಬಳಗದವರು ಯಾರೂ ಇಲ್ಲವೇನು? ನಾನು ಚಿಕ್ಕವನಿರುವಾಗಲೇ ನೀನು ಈ ಸ್ಥಳಕ್ಕೆ ಬಂದಿರುವದರಿಂದ ನನಗೆ ಈ ಯಾವ ಸಂಗತಿಯೂ ಗೊತ್ತಿಲ್ಲ. ಹಡೆದ ನನ್ನ ತಂದೆಯ ಹೆಸರು ಸಹ ನನಗೆ ಈವರೆಗೆ ಗೊತ್ತಿಲ್ಲ. ಆದ್ದರಿಂದ ತಾಯಿ! ನನ್ನ ತಂದೆಯ ಹಾಗೂ ನಮ್ಮ ಪೂರ್ವಜರ ಪರಿಚಯವನ್ನು ನನಗೆ ಮಾಡಿಕೊಟ್ಟು, ನಿನ್ನ ಅಸಮಾಧಾನದ ಕಾರಣವೇನಿರುವದೆಂಬದನ್ನು ನನಗೆ ತಿಳಿಸು.

ಹೀಗೆ ತನ್ನ ಮಗನು ಅತ್ಯಂತ ಆತುರತೆಯಿಂದ ಕೇಳಿಕೊಳ್ಳಲು, ಕರ್ಕಟಿಯು ಕಣ್ಣೀರು ಸುರಿಸುತ್ತ, ತನ್ನ ಪತಿಯ ಮರಣವಾದಾಗಿನಿಂದ ತಾನು ವಿಂಧ್ಯಾದ್ರಿಯಲ್ಲಿ ಬಂದುಳಿದ ಸಂಗತಿಯವರೆಗೆ ಒಂದುಬಿಡದೆ ಎಲ್ಲವನ್ನೂ ಹೇಳಿದಮೇಲೆ, ನನ್ನ ಪತಿಯು ಹಿಂದಕ್ಕೆ ಇದೇ ಸ್ಥಳದಲ್ಲಿ ನನ್ನನ್ನು ಭೋಗಿಸಿದ್ದನಾದ್ದರಿಂದ ಅತ್ಯಂತ ಪ್ರೀತ್ಯಾಸ್ಪದವಾದ ಈ ಸ್ಥಳದಲ್ಲಿ ಈಗ ನಾನು ನಿನ್ನೊಡನೆ ವಾಸಿಸಿರುವೆನೆ"ಂದು ಹೇಳಿ ಸುಮ್ಮನಾದಳು. ತಾಯಿಯ ಮುಖದಿಂದ ಹೀಗೆ ತನ್ನ ಪೂರ್ವೇತಿಹಾಸವನ್ನು ಕೇಳಿ ಭೀಮಾಸುರನು ಅತ್ಯಂತ ಕುಪಿತನಾದನು. • ಅವನು ಉದ್ದಾಮತನದಿಂದ ತನ್ನ ಖಡ್ಗ–ಮುಷ್ಟಿಯನ್ನು ಒತ್ತುತ್ತ ಚಟ್ಟನೆ ಎದ್ದುನಿಂತು, ತನ್ನ ತಾಯಿಯನ್ನುದ್ದೇಶಿಸಿ—ಮಾತೇ, ವೀರಪತ್ನಿಯೆನಿಸಿದ ನಿನಗೆ ನನ್ನಂಥ ವೀರಪುತ್ರನು ಜೀವಿತವಾಗಿರಲು ಇನ್ನೂ ದುಃಖವೇ? ತಾಯಿ, ಈವೊತ್ತಿಗೇ ನಿನ್ನ ದುಃಖವು ಕಡಿದು ಹೋಯಿತೆಂದು ತಿಳಿ; ಇನ್ನು ನೀನು ಹೀಗೆ ಸರ್ವಥಾ ಚಿಂತಿಸಬೇಡ; ನನ್ನ ತಂದೆಯನ್ನು ನಾಶಗೊಳಿಸಿದ ಆ ಪುಂಡಹರಿಯ ಸಾಮರ್ಥ್ಯವನ್ನಾದರೂ ಒಮ್ಮೆ ನೋಡಿ ಬಿಡುವೆನು, ಎಂದು ನುಡಿದು ತಾಯಿಯನ್ನು ನಮಸ್ಕರಿಸಿ, ಅದೇ ವಿಂಧ್ಯಪರ್ವತದ ಘೋರಾರಣ್ಯದಲ್ಲಿ ಬ್ರಹ್ಮನನ್ನು ಕುರಿತು ಘೋರತಪಸ್ಸು ಮಾಡತೊಡಗಿದನು. ಅವನ ಘೋರತಪಶ್ಚರ್ಯವು ಸಹಸ್ರಾವಧಿವರ್ಷ ನಡೆಯಲು, ಆ ರಾಕ್ಷಸನ ನಡುನೆತ್ತಿಯಿಂದ ಒಂದೇಕಾಲಕ್ಕೆ ತ್ರಿಭುವನವನ್ನೇ ದಹಿಸುವಂತಹ ಅಗ್ನಿಜ್ವಾಲೆಯು ಭುಗಿ ಭುಗಿಲೆಂದು ಹೊರಬಿದ್ದು, ಆಕಾಶಕಟಾಹವನ್ನು ವ್ಯಾಪಿಸಿ ಮೇಲೆ ದೇವಲೋಕವನ್ನು ದಹಿಸಹತ್ತಿತು. ಆಗ ಬ್ರಹ್ಮನು ದೇವತೆಗಳ ಪ್ರಾರ್ಥನೆಯಂತೆ ಭೀಮಾಸುರನಿಗೆ ಪ್ರಸನ್ನನಾಗಿ—ವತ್ಸ, ಅಸುರಕುಲಭೂಷಣಾ, ನಿನ್ನ ಘೋರತಪಕ್ಕಾಗಿ ನಾನು ಮೆಚ್ಚಿ ಬಂದಿರುವೆನಾದ್ದರಿಂದ ನಿನ್ನ ಮನಸ್ಸಿನಲ್ಲಿದ್ದ ವರಗಳನ್ನು ನೀನು ಬೇಡಿಕೋ, ಎಂದು ಅಮೃತ ತುಲ್ಯವಾದ ವಾಣಿಯಿಂದ ನುಡಿಯಲು, ರಾಕ್ಷಸನು ಹರ್ಷಾತಿಶಯದಿಂದ ಕೈಮುಗಿದು—ದೇವಾ, ದೀನಬಂಧೋ, ನೀನು ನನಗೆ ಪ್ರಸನ್ನನಾಗಿ ವರವೀಯುವದೇ ನಿಜವಾಗಿದ್ದರೆ ನನಗೆ ಅತುಲ ಭುಜಬಲವು ಸಿದ್ಧಿಸುವಂತೆ ಕರುಣಿಸೆಂ"ದು ಪ್ರಾರ್ಥಿಸಲು, ಪಿತಾಮಹನು—"ನಿನ್ನ ಮನೋರಥವು ಪೂರ್ಣವಾಗಲೆ"ಂದು, ವರವಿತ್ತು ಅಲ್ಲಿಯೇ ಗುಪ್ತನಾದನು.

ಇತ್ತ ತಪಃಸಿದ್ಧನಾದ ರಾಕ್ಷಸನು ಹರ್ಷಭರದಿಂದ ಮನೆಗೆ ಬಂದು ತನ್ನ ತಾಯಿಯಾದ ಕರ್ಕಟಿಯು ಪಾದಗಳನ್ನು ಆನಂದಾಶ್ರುಗಳಿಂದ ಆರ್ದ್ರಗೊಳಿಸಿ ಆಕೆಯ ಆಜ್ಞೆಯಿಂದ ಮೊದಲು ಭೂಲೋಕವನ್ನು ಜಯಿಸಲುದ್ಯೋಗಿಸಿ, ಸಹ್ಯಾದ್ರಿಯ ತಪ್ಪಲಿನ ಮಹಾರಾಜನಾದ ಕಾಮರೂಪೇಶ್ವರನನ್ನು ಸೋಲಿಸಿ, ಅವನ ಹೆಂಡತಿಯಾದ ದಕ್ಷಿಣೆ ಎಂಬವಳೊಡನೆ ಅವನನ್ನು ಸೆರೆಯಲ್ಲಿಟ್ಟನು. ಕಾಮರೂಪೇಶ್ವರನು ಮಹಾಧರ್ಮಿಷ್ಠನೂ, ಶಿವಭಕ್ತಿಧುರೀಣನೂ, ಭೂತಮಾತ್ರಗಳಲ್ಲಿ ಆತ್ಮಬುದ್ಧಿಯುಳ್ಳವನೂ, ದ್ವಂದ್ವಾತೀತನೂ ಆಗಿದ್ದನು. ದಕ್ಷಿಣಾ, ಎಂಬ ಹೆಸರಿನ ಇವನ ಧರ್ಮಪತ್ನಿಯಾದರೂ ಪತಿಯ ಸಹವಾಸದಿಂದ ಇದೇ ಯೋಗ್ಯತೆಗೆ ಮುಟ್ಟಿದ್ದಳು. ಹೀಗಿರುವದರಿಂದ ಅವರಿಬ್ಬರು ವಿವೇಕಬಲದಿಂದ ಯಾರವಿಷಯವಾಗಿಯೂ ದುಃಖಿಸದೆ ಸರ್ವವೂ ಕಾಲಾಧೀನವಾಗಿರುವದರಿಂದ ನಮ್ಮಲ್ಲಿ ಯಾವ ಸ್ವಾತಂತ್ರ್ಯವೂ ಇಲ್ಲವೆಂದು ಅಂದುಕೊಂಡು ಶಿವಧ್ಯಾನಾಸಕ್ತರಾಗಿ ಸುಖವಾಗಿ ವಾಸಿಸಹತ್ತಿದರು. ಅಲ್ಲಿ ಕಾಮರೂಪನಿಗೆ ನಿತ್ಯಾನುಷ್ಠಾನದ ಬಹಿಃಸಾಧನಗಳು ದೊರೆಯದ್ದರಿಂದ, ಶಿವಪೂಜೆಯೇ ಮೊದಲಾದ ಅವನ ಯಾವಕರ್ಮಗಳೂ ನಡೆಯದಾದವು. ಆಗ ಅವನು ಕ್ರಮವಾಗಿ ತನ್ನ ಬಾಹ್ಯಕರ್ಮಗಳನ್ನೆಲ್ಲ ಬಿಟ್ಟುಕೊಟ್ಟು ಕೇವಲ ಅಂತರ್ಮುಖ ವೃತ್ತಿಯಿಂದ ಮನಸ್ಸಿನಲ್ಲಿಯೇ ಶಿವನನ್ನು ಪೂಜಿಸತೊಡಗಿದನು. ಇವನು ಪ್ರತಿನಿತ್ಯ ಉಷಃಕಾಲದ ಮಂಗಲಸಮಯದಲ್ಲೆದ್ದು ಗಂಗಾದಿಪುಣ್ಯನದಿಗಳನ್ನು ಸ್ಮರಿಸಿ ಅವುಗಳ ಪವಿತ್ರಜಲದಲ್ಲಿ ತಾನು ಸ್ನಾನಸಂಧ್ಯಾದಿ ಕರ್ಮಗನ್ನು ಮಾಡಿ ಶಿವಪಾರ್ಥಿವ ಪೂಜೆಯನ್ನು ಕೈಗೊಂಡಿರುವೆನೆಂದು ಮನಸ್ಸಿನಲ್ಲಿಯೇ ಭಾವಿಸುತ್ತಿದ್ದನು. ನಿತ್ಯದಲ್ಲಿ ಈ ಭಾವಿಕನು ತಾನು ಮೊದಲು ಬಹಿರಂಗದಲ್ಲಿ ಮಾಡುತ್ತಾ ಬಂದಿರುವ ಸಕಲ ರಾಜೋಪಚಾರಗಳನ್ನೂ, ಸ್ತುತಿ ಸ್ತೋತ್ರ ಪ್ರಣತಿಗಳನ್ನೂ, ಮನಸ್ಸಿನಿಂದಲೇ ಪರಮಾತ್ಮನ ಪಾದಗಳಿಗೆ ಸಮರ್ಪಿಸಿ ಭಕ್ತಿಯಿಂದ ಶಿವಪಂಚಾಕ್ಷರೀ ಮಂತ್ರವನ್ನು ಜಪಿಸುತ್ತಿದ್ದನು- ರಾಜಪತ್ನಿಯಾದರೂ ಪತಿಧರ್ಮಪರಾಯಣಳಾಗಿ ಇದೇ ಕ್ರಮವನ್ನು ಸಾಗಿಸಹತ್ತಿದಳು. ಇತ್ತ ವರದರ್ಪಿತನಾದ ಭೀಮಾಸುರನು ದೊಡ್ಡ ಸೈನ್ಯದೊಂದಿಗೆ ದಿಗ್ವಿಜಯಮಾಡಿ, ಭೂಲೋಕದ ಎಲ್ಲರಾಜರನ್ನೂ ಜಯಿಸಿ ಸಪ್ತಸಾಗರ ವಲಯಾಂಕಿತವಾದ ಈ ಪೃಥ್ವಿಯನ್ನು ಒಬ್ಬನೇ ಆಳಹತ್ತಿದನು. ಹೀಗೆ ಇವನು ಸಾರ್ವಭೌಮರ ಎಲ್ಲ ಚಿನ್ಹಗಳನ್ನು ಧರಿಸಿ ಆಢ್ಯತೆಯಿಂದ ರಾಜ್ಯವಾಳಹತ್ತಿದಾಗ ಪ್ರಜರ ವರ್ಣಾಶ್ರಮಧರ್ಮಗಳೆಲ್ಲ ಮುಳುಗಿ ಹೋದವು. ಯಜ್ಞಯಾಗಾದಿ ಕರ್ಮಗಳಲ್ಲಿ ದೇವತೆಗಳಿಗಾಗಿ ಅರ್ಪಿಸುವ ಹವಿರ್ಭಾಗಗಳನ್ನು ನಿಲ್ಲಿಸಿ ಅವನ್ನೆಲ್ಲ ನನಗೆ ಸಮರ್ಪಿಸಬೇಕೆಂದು ಭೀಮಾಸುರನು ಬ್ರಾಹ್ಮಣರಿಗೆಲ್ಲ ಅಪ್ಪಣೆ ಮಾಡಿದನು. ಇವನ ಅಧಿಕಾರದಲ್ಲಿ ಯಾವ ವೇದಧರ್ಮಗಳೂ, ಯಾವ ಸ್ಮೃತಿಧರ್ಮಗಳೂ, ಯಾವ ಶಾಸ್ತ್ರಧರ್ಮಗಳೂ ಉಳಿಯದಾದವು. ಸಾಧು–ಸತ್ಪುರುಷರ ಆಟವು ನಡೆಯದಾಯಿತು; ತಪಸ್ವಿಗಳ ತಪವು ಮುಳುಗಿತು; ಪತಿವ್ರತೆಯರ ವ್ರತವು ಕೆಟ್ಟಿತು !

ಹೀಗೆ ಆ ದುಷ್ಟನು ಪೃಥ್ವಿಯಮೇಲಿನ ಎಲ್ಲ ಧರ್ಮಗಳನ್ನೂ ನಾಶಗೊಳಿಸಿಬಿಡಲು

ಮತನದಿಂದ ನಡೆಯುಹತ್ತಲು, ಈ ತಾಪವನ್ನುಸಹಿಸಲಾರದೆ ಪ್ರಜೆಗಳೆಲ್ಲರೂ ಒಟ್ಟುಗೂಡಿ ಇವನಿದ್ದೆಡೆಗೆ ಬಂದು ಕೈಮುಗಿದು ವಿನಯದಿಂದ—ಮಹಾರಾಜಾ, ನಮ್ಮಧರ್ಮಗಳನ್ನಿಷ್ಟು ನಮಗೆ ನಡೆಯಿಸಿಕೊಡೆ"ಂದು ಬಹುಪರಿಯಾಗಿ ಬೇಡಿಕೊಂಡರು. ಆದರೂ ಆ ಮದಾಂಧನು ಕಣ್ದೆರೆಯದೆ ಅಧಿಕವಾಗಿಯೇ ಅವರನ್ನು ಪೀಡಿಸಹತ್ತಿದನು. ಆಗ ಧರ್ಮಾಭಿಮಾನಿಗಳಾದ ಪ್ರಜರು ನಿರುತ್ಸಾಹಿಗಳಾಗದೆ ಸಿಟ್ಟಿನಿಂದ ಎಲ್ಲರೂ ಹೊಂದುಗೂಡಿ ಪ್ರತಿಒಬ್ಬರೂ ತಮ್ಮ ಜೀವದಹಂಗು ಸಹ ತೊರೆದು ಆ ದುಷ್ಟರಾಕ್ಷಸನೊಡನೆ ಅಸಹಕಾರವನ್ನು ಪ್ರಾರಂಭಿಸಿದರು. ಉಳಿದ ಹಲವು ಶಿವಭಕ್ತರು ರಾಷ್ಟ್ರಹಿತಕ್ಕಾಗಿ ಋಷಿಜನರೊಡನೆ ದೊಡ್ಡ ದೊಡ್ಡ ಕ್ಷೇತ್ರಗಳಿಗೆ ಹೋಗಿ ನಾನಾವಿಧ ಅನುಷ್ಠಾನಗಳನ್ನು ಮಾಡತೊಡಗಿದರು. ಇತ್ತ ಎಷ್ಟೋ ದಿನಗಳಿಂದ ಯಜ್ಞದಲ್ಲಿಯ ಹವಿರ್ಭಾಗವು ದೊರೆಯದ್ದರಿಂದ ಹವಿಷಾಶನರಾದ ದೇವತೆಗಳು ಕೋಪಾವಿಷ್ಟರಾಗಿ ಇವನ ನಾಶದ ಉಪಾಯುಗಳನ್ನು ಯೋಚಿಸತೊಡಗಿದರು, ಆದರೆ ಅವರ ಯಾವ ಉಪಾಯವೂ ನಡೆಯದಾಗಲು, ನಿರುಪಾಯರಾಗಿ ಅಶನವಿಲ್ಲದೆ ಅವರೆಲ್ಲರೂ ಮಾನವಾಕಾರದಿಂದ ಭೂಮಿಗಿಳಿದು ಮಹಾಕೇಶಿನೀ ನದಿಯ ಪುಣ್ಯತಟದಲ್ಲಿ ಲೋಕರಕ್ಷಕನಾದ ಭಗವಾನ್ ಶಂಕರನನ್ನು ಆರಾಧಿಸಹತ್ತಿದರು. ಆಗ ಭಕ್ತಸಂಕಟ ಹಾರಕನಾದ ಭಗವಾನ್ ಸದಾಶಿವನು ಅವರ ನಿಸ್ಸೀಮ ಭಕ್ತಿಗಾಗಿ ಸಂತೋಷಪಟ್ಟು ವೃಷಭಾರೂಢನಾಗಿ ಸ್ವಕಾಂತಿಯಿಂದ ದಿಙ್ಮಂಡಲವನ್ನು ಪ್ರಕಾಶಿಸುತ್ತ ಅವರೆದುರಿನ ಲಿಂಗರಾಶಿಯಿಂದ ಪ್ರಕಟನಾದನು! ಹೀಗೆ ಒಮ್ಮೆಲೆ ಉದ್ಭವಿಸಿದ ಶಂಕರನ ದಿವ್ಯಮೂರ್ತಿಯನ್ನು ನೋಡಿ ಪರಮಾನಂದ ಸಾಗರದಲ್ಲಿ ಮುಳುಗಿಹೋದ ಆ ಭೂಸುರರ ಕಂಠಗಳು ಭಕ್ತ್ಯತಿಶಯದಿಂದ ಬಿಗಿದುಬರಲು, ಅವರುಅತ್ಯಂತಲೀನಭಾವದಿಂದ ಪರಮಾತ್ಮನ ಪಾದಗಳಿಗೆ ಸಾಷ್ಟಾಂಗವೆರಗಿ ಸ್ತುತಿಸಹತ್ತಿದರು. ಆಗಶಂಕರನು ವಾತ್ಸಲ್ಯದಿಂದ—ದೇವತೆಗಳಿರಾ, ನಿಮ್ಮಕಷ್ಟವನ್ನು ನಾನು ಅರಿತಿರುವೆನು. ಅಮರರಾದ ನಿಮಗೆ ಮರಣದ ಭಯವಂತೂ ಇಲ್ಲವೇಇಲ್ಲ. ಇನ್ನು ಆ ಮದಾಂಧ ರಾಕ್ಷಸನಿಂದ ನಿಮಗೆ ವಿಶೇಷ ತಾಪವಾಗಿರಬಹುದು. ಆದರೆ ಅವನು ಮಾಡಿದ ಪುಣ್ಯವು ಇನ್ನೂ ಅವಶಿಷ್ಟವಾಗಿರುವದರಿಂದ ಅವನನ್ನು ನಾನು ಈಗಲೇ ನಾಶಗೊಳಿಸಲು ಬರುವಂತಿಲ್ಲ. ಮುಂದೆ ಅವನು ತನ್ನ ಕಾರಾಯಲದಲ್ಲಿಟ್ಟಿದ್ದ ನನ್ನ ಪ್ರಿಯಭಕ್ತನಾದ ಕಾಮರೂಪೇಶ್ವರನನ್ನು ಪತ್ನಿಯೊಡನೆ ವಿಶೇಷವಾಗಿ ಪೀಡಿಸಹತ್ತಿದನೆಂದರೆ ಅವನ ಪುಣ್ಯವೆಲ್ಲ ಒಡಕ ಮಡಿಕೆಯಲ್ಲಿದ್ದ ನೀರಿನಂತೆ ಕ್ರಮವಾಗಿ ಅಳಿದುಹೋಗಿ ಮುಂದೆ ಅವನು ಕೇವಲ ಪಾಪರೂಪನಾಗಿ ಉಳಿಯುವನು. ಆಗ ಆ ದುಷ್ಟನ ಅಳಿಗಾಲವು ಒದಗಿತೆಂದು ನೀವು ತಿಳಿಯಿರಿ, ಎಂದು ಹೇಳಿ ಅವನು ಅಲ್ಲಿಯೇ ಅದೃಶ್ಯನಾದನು. ಆಗ ದೇವತೆಗಳು ಸಂತೋಷಪಟ್ಟು ಆ ಸ್ಥಳಕ್ಕೆ ನಮಸ್ಕರಿಸಿ ತಮ್ಮ ತಮ್ಮ ಸ್ಥಳಗಳಿಗೆ ಹೊರಟುಹೋದರು.

ಇತ್ತ ಭೀಮಾಸುರನ ಬಂದೀವಾಸದಲ್ಲಿದ್ದ ರಾಜದಂಪತಿಗಳ ಶಿವಾರಾಧನೆಯು ಬರಬರುತ್ತ ಹೆಚ್ಚುಹತ್ತಿ, ಅವರ ಪುಣ್ಯವಿಶೇಷದಿಂದ ಆ ಕಾರಾಲಯವು ಪಾಪಾತ್ಮರಿಗೆ ಮಾರಕವಾಗಿಯೂ, ಪುಣ್ಯಾತ್ಮರಿಗೆ ತಾರಕವಾಗಿಯೂ ತೋರಹತ್ತಿತು. ಹೀಗಿರಲು ಒಂದು ದಿನ ಕಾವಲುಗಾರರಲ್ಲೊಬ್ಬ ರಾಕ್ಷಸನು ಓಡಿಹೋಗಿ ಓಲಗದಲ್ಲಿ ಕುಳಿತಿರುವ ತನ್ನ

ಒಡೆಯನಿಗೆ ಆ ರಾಜದಂಪತಿಗಳ ಮಹಾಮಹಿಮೆಯನ್ನು ತಿಳಿಸಿ, ಅಲ್ಲಿ ನಿಲ್ಲುವದು ನಮ್ಮಿಂದಾಗದೆಂದು ಹೇಳಲು, ಭೀಮಾಸುರನು ಆಶ್ಚರ್ಯಪಟ್ಟು ಇದನ್ನು ನೋಡಿಯೇ ಬರಬೇಕೆಂಬ ಕುತೂಹಲದಿಂದ ಓಲಗದಿಂದೆದ್ದು ಪರಿಮಿತ ಪರಿವಾರದೊಡನೆ ಖಡ್ಗಪಾಣಿಯಾಗಿ ಕಾರಾಗೃಹಕ್ಕೆ ಬಂದನು. ಒಳಗೆ ಪ್ರವೇಶಿಸುವಾಗ ಅವನಿಗಾದರೂ ಆ ದೈವೀತೇಜವು ಬಾಧಿಸದೆ ಬಿಡಲಿಲ್ಲ. ಆದರೂ ಅವನು ಅದನ್ನು ವ್ಯಕ್ತಗೊಳಿಸದೆ ಧೈರ್ಯದಿಂದ ರಾಜದಂಪತಿಗಳಿದ್ದ ಸ್ಥಳಕ್ಕೆ ಬಂದನು. ಆಗ ಆ ಪುಣ್ಯಾತ್ಮರ ಅಂತಃಕರಣ ವೃತ್ತಿಯು ಮಾನಸಪೂಜೆಯ ಆನಂದದಲ್ಲಿ ಬೆರೆತು ಹೋಗಿದ್ದದ್ದರಿಂದ ಅವರು ದೇಹಭಾನವಿಲ್ಲದೆ ನಿಶ್ಚಲರಾಗಿ ಕುಳಿತುಬಿಟ್ಟಿದ್ದರು. ಅವರನ್ನು ಸ್ಪರ್ಶಿಸುವದು ಭೀಮಾಸುರನಿಗೂ ಅವನ ಪರಿವಾರಕ್ಕೂ ಆಗಲಿಲ್ಲ. ಆದರೆ ರಾಕ್ಷಸರ ಕೋಲಾಹಲದಿಂದ ಆ ರಾಜದಂಪತಿಗಳ ಸಮಾಧಿಭಂಗವಾಗಿ ಅವರು ಸುತ್ತಲೂ ನೋಡಹತ್ತಿದರು. ಆಗ ಭೀಮಾಸುರನು ಕ್ರೋಧಾವೇಶದಿಂದ ಕಣ್ಣು ಕೆಕ್ಕರಿಸಿ ರಾಜನನ್ನು ಕುರಿತು—ಎಲೈ ಅಧಮಾ, ಮನುಷ್ಯಪಶುವಾದ ನಿನ್ನ ಉದ್ದಾಮತನವಾದರೂ ಎಷ್ಟದು! ಸಂಪೂರ್ಣವಾಗಿ ನನ್ನನ್ನು ಸೇರಿದ ನೀನು ನನ್ನ ಕಲ್ಯಾಣ ಚಿಂತಿಸುವ ಬದಲು ನನ್ನೊಡನೆ ದ್ರೋಹ ಬಳಿಸುವೆಯಾ? ನೀಚಾ, ಹೇಳು ಸತ್ಯವಾಗಿ ಹೇಳು, ನೀನು ದಿನಾಲು ಯಾವ ದೇವರನ್ನು ಏನು ಕಾರಣ ಆರಾಧಿಸುತ್ತಿರುವೆಯೆಂಬದನ್ನು? ನಿಜಾರ್ಥವನ್ನು ಇದ್ದಕ್ಕಿದ್ದಹಾಗೆ ಹೇಳಿದರೆ ಈಗಲೇ ನಿನ್ನನ್ನು ಬಿಟ್ಟು ಬಿಡುವೆನು. ಇಲ್ಲದೆ ಹೋದರೆ ನಿನ್ನ ಪರಿಣಾಮವು ನೆಟ್ಟಗಾಗಲಿಕ್ಕಿಲ್ಲವೆಂದು ಗರ್ಜಿಸಿ ಕೇಳಲು, ಸತ್ಯಪಾಶನಿಯಂತ್ರಿತನಾದ ರಾಜನು ಪರಮೇಶ್ವರನಲ್ಲಿ ವಿಶ್ವಾಸವಿಟ್ಟು ನಿರ್ಭಯದಿಂದ—ಮಹಾರಾಜ, ನಿಜವಾದ ಸಂಗತಿಯೆಂದರೆ ನಾನು ನನ್ನ ಇಷ್ಟದೈವತವಾದ ಶಿವಲಿಂಗ ಮೂರ್ತಿಯನ್ನು ಆತ್ಮಸಂರಕ್ಷಣೆಗಾಗಿಯೂ, ಪ್ರಜಾಸಂರಕ್ಷಣೆಗಾಗಿಯೂ ದಿನಾಲು ಚಿಂತಿಸುತ್ತಿರುವೆನು; ಯಾಕಂದರೆ ಈ ಲಿಂಗದಲ್ಲಿ ಭಕ್ತಸಂಕಟಹಾರಕನಾದ ಶಂಕರನು ಸದೋದಿತವಾಗಿ ವಾಸಿಸಿದ್ದು, ಇವನು ತನ್ನ ಭಕ್ತದ್ವೇಷಿಗಳಾದ ಪಾಪಿಗಳನ್ನು ನಾನಾ ರೂಪಗಳಿಂದ ನಾಶಗೊಳಿಸಿ 'ಭಕ್ತಾಭಿಮಾನಿಯೆ'ಂಬ ತನ್ನ ಬಿರುದನ್ನು ಈವೊತ್ತಿಗೂ ಕಾಯ್ದುಕೊಳ್ಳುತ್ತ ಬಂದಿರುವನು. ಅಂಥ ಈ ಸದಾಶಿವನನ್ನು ನಾನು ಈಗ ಬಹಳದಿವಸಗಳಿಂದ ಆರಾಧಿಸುತ್ತ ಬಂದಿರುವಂತೆ ಈಗಾದರೂ ಸಂಕಟದಲ್ಲಿ ಬಿದ್ದ ನಾನು ಇವನನ್ನು ಧ್ಯಾನಿಸುತ್ತಿರುವೆನು. ಇಷ್ಟೇ ನನ್ನ ಯಥಾರ್ಥವಾದ ಸಂಗತಿಯು; ಇದನ್ನರಿತು ನಿನ್ನವರಾದ ನಮಗೆ ಬೇಕಾದಂಥ ಶಿಕ್ಷೆಯನ್ನು ನೀನು ವಿಧಿಸು. ಅದನ್ನು ನಾವು ಸಂತೋಷದಿಂದ ಭೋಗಿಸುವೆವು.

ಹೀಗೆ ಕಾಮರೂಪೇಶ್ವರನು ಇದ್ದ ಸಂಗತಿಯನ್ನು ಯಥಾಸ್ಥಿತವಾಗಿ ಹೇಳಲು, ರಾಕ್ಷಸನು ತುಸು ಶಾಂತನಾಗಿ ತಿರಸ್ಕಾರದ ಹಾಸ್ಯದಿಂದ ಪರಿಪರಿಯಾಗಿ ಶಿವನನ್ನು ನಿಂದಿಸುತ್ತ ಶಿವನನ್ನು ಬಿಟ್ಟು ನನ್ನನ್ನು ಆರಾಧಿಸೆಂದು ಆಜ್ಞಾಪಿಸಿದನು. ಆಗ ಪರಮ ಶಿವಭಕ್ತನಾದ ಕಾಮರೂಪೇಶ್ವರನು ಇವನ ಶಿವನಿಂದೆಯನ್ನು ಕೇಳಿ ಅಸಮಾಧಾನಪಟ್ಟು ಇವನ ಅಜ್ಞಾನ ನಿವಾರಣೆಗಾಗಿ ದೇವರನ್ನು ಪ್ರಾರ್ಥಿಸಹತ್ತಿದನು.

ಆಗ ರಾಕ್ಷಸನು ಸಿಟ್ಟಿನಿಂದ ಮತ್ತೊಮ್ಮೆ ಗರ್ಜಿಸಲು, ರಾಜನು ಶಾಂತಚಿತ್ತದಿಂದ ಅವನನ್ನು ಕುರಿತು—ಮಹಾರಾಜ, ತಮ್ಮ ಆಜ್ಞೆಯು ನನಗೆ ಶಿರಸಾವಹನವಾಗಿರುವದು. ತಮ್ಮ ಆಜ್ಞಾನುಸಾರವಾಗಿ ಪಾಮರನಾದ ನಾನು ಕೃತಘ್ನತೆಯಿಂದ ದಯಾಳುವಾದ ಈ ಪರಮೇಶ್ವರನನ್ನು ಒಂದುಪಕ್ಷದಲ್ಲಿ ಬಿಟ್ಟರೂ ಬಿಡಬಹುದು; ಆದರೆ ಸರ್ವೋತ್ತಮನಾದ ನನ್ನ ಸ್ವಾಮಿಯು ಶರಣುಹೋದ ನನ್ನನ್ನು ಎಂದಿಗೂ ಬಿಡಲಾರನು. ಇದಕ್ಕೆ ನಾನೇನು ಮಾಡಲಿ? ಬಲಿಷ್ಠರಾದ ತಮ್ಮಿಂದ ಈ ಕಾರ್ಯವು ಸಹಜವಾಗಿ ಆಗುವಹಾಗಿದ್ದರೆ, ನೀವೇ ನನ್ನ ಸ್ವಾಮಿಯನ್ನು ನನ್ನಿಂದ ದೂರಮಾಡಬಹುದು, ಎಂದು ಸೌಮ್ಯವಾಗಿ ಭಾಷಣಮಾಡಿ ಸುಮ್ಮನಾಗಲು, ಇವನ ಒಂಗೊಂದೇ ಮರ್ಮಭೇದಕ ಮಾತುಗಳನ್ನು ಕೇಳಿ ರಾಕ್ಷಸನ ಅಂತಃಕರಣವು ಕ್ಷುಬ್ಧವಾಯಿತು. ಆ ಕ್ರೂರನು ಸಕ್ರನೆ ವರೆಯಿಂದ ತನ್ನ ಖಡ್ಗವನ್ನು ಹಿರಿದು ರಾಜನನ್ನು ಕುರಿತು—ಎಲಾ, ಅಧಮಾ, ನೋಡು ಈ ಖಡ್ಗದಿಂದ ನಿನ್ನನ್ನು ಈಗ ಹೇಳಕೇಳಿಯೇ ತುಂಡರಿಸುವೆನು- ಕರೆ, ಈಗ ನಿನ್ನನ್ನು ರಕ್ಷಿಸುವ ಸ್ವಾಮಿಯು ಎಲ್ಲಿರುವನು. ಎಂದು ನುಡಿದು ಆವೇಶದಿಂದ ಖಡ್ಗವನ್ನು ಮೇಲೆ ನೆಗಹಿ ಇನ್ನು ಅವನನ್ನು ತುಂಡರಿಸತಕ್ಕವನು; ಅಷ್ಟರಲ್ಲಿ ಭಕ್ತಕೈವಾರಿಯಾದ ಭಗವಾನ್ ಮಹಾರುದ್ರನು ಶೂಲ, ಪಿನಾಕ, ಪರಿಘ, ಭೃಶುಂಡಿಕಾದಿ ದಿವ್ಯಾಯುಧಗಳನ್ನು ಧರಿಸಿ ಅರ್ಭಟಿಸುತ್ತ ರಾಜನ ಹಿಮ್ಮಗ್ಗಲಲ್ಲಿ ಆವಿರ್ಭವಿಸಿ ಆ ದುಷ್ಟರಾಕ್ಷಸಾಧಿಪನ ಖಡ್ಗವನ್ನು ತನ್ನ ಪಿನಾಕದಿಂದ ತುಂಡರಿಸಿದನು. ಮುಂದೆ ಆ ಅಸುರನೊಡನೆ ಸದಾಶಿವನು ಘೋರಯುದ್ಧಮಾಡುವಾಗ ತ್ರೈಲೋಕ್ಯವು ತಾಪಕ್ಕೆ ಗುರಿಯಾಗಲು, ನಾರದನ ಪ್ರಾರ್ಥನೆಯಂತೆ ಕೃಪಾಸಾಗರನಾದ ಸದಾಶಿವನು ನಾರದನು ನೋಡನೋಡುವಷ್ಟರಲ್ಲಿ ಹುಂಕಾರಮಾತ್ರದಿಂದ ಭೀಮಾಸುರನ ಸೈನ್ಯವನ್ನು ಸುಟ್ಟು ಬೂದಿಮಾಡಿದನು! ಶಿವನ ಶಸ್ತ್ರಘಾತದಿಂದ ಮೊದಲೇ ಮರಣೋನ್ಮುಖನಾದ ಭೀಮಾಸುರನು ಶತ್ರುವಿನ ಕೋಪಾಗ್ನಿಯಿಂದ ದಗ್ಧವಾದ ತನ್ನಸೈನ್ಯವನ್ನು ನೋಡಿ ಭಯಗ್ರಸ್ತನಾದನು. ಭೀತಿಯಿಂದ ಅವನ ಎದೆಯೊಡೆದು ನೀರಾಯಿತು. ಕಡೆಗೆ ಅವನು ನಿರುಪಾಯನಾಗಿ ಶತ್ರುಭಾವವನ್ನು ಬಿಟ್ಟು ಸರಲಮನಸ್ಸಿನಿಂದ ಸರಿಯುತ್ತ ಸರಿಯುತ್ತ ಶಿವನಪಾದಗಳಮೇಲೆ ಬಿದ್ದು ದೈನ್ಯದಿಂದ ಆತನನ್ನು ಸ್ತುತಿಸಹತ್ತಿದನು. ಹೀಗೆ ಅನನ್ಯ ಗತಿಕನಾಗಿ ಶುದ್ಧಭಾವದಿಂದ ಶರಣು ಬಂದ ಆ ರಾಕ್ಷಸನನ್ನು ದಾಕ್ಷಾಯಣೀ ಪ್ರಿಯನು ಕೃಪಾವಲೋಕನದಿಂದ ಸಂತೋಷಗೊಳಿಸಿ ವರಪ್ರಾರ್ಥನೆಗಾಗಿ ಅವನನ್ನು ಪ್ರೇರಿಸಿದನು. ಆಗ ಭೀಮಾಸುರನು ವ್ಯಥೆಯಿಂದ ಏಳಲಾರದೆ ಮಲಗಿದಲ್ಲಿಯೇ ನಮಸ್ಕರಿಸಿ ಭಕ್ತಿಯಿಂದ—ದೇವಾ, ದುಷ್ಟಭಂಜನಾ, ಪಾಪಿಯಾದ ನಾನು ನಿನಗೆ ಅನಂತಾಪರಾಧಗಳನ್ನು ಮಾಡಿದೆನು. ಈವರೆಗೆ ಬಾಣಗಳಿಂದಲೂ, ವಾಣಿಯಿಂದಲೂ, ದೇಹದಿಂದಲೂ ಮಾಡಿದ ನನ್ನ ಸರ್ವಾಪರಾಧಗಳನ್ನು ಕ್ಷಮಿಸಿ, ಇಂದಿನವರೆಗೆ ದುಷ್ಟನಾದ ನಾನು ಬಹುಪರಿಯಾಗಿ ಪೀಡಿಸಿದ ನಿನ್ನ ನಿಸ್ಸೀಮಭಕ್ತರಾದ ಈ ರಾಜದಂಪತಿಗಳಿಗೆ ನನ್ನ ಬೇಡಿಕೆಯಂತೆ ಅಕ್ಷಯ್ಯವಾದ ಸುಖವು ಪ್ರಾಪ್ತವಾಗುವಂತೆ ಕರುಣಿಸು! ಹಾಗು ನಿನ್ನ ಭಕ್ತರನ್ನು ನಿರರ್ಥಕವಾಗಿ ಪೀಡಿಸುವ ನನ್ನಂಥ

ಪಾಪಾತ್ಮರನ್ನು ಈಗಿನಂತೆ ಮುಂದೆಯಾದರೂ ಶಿಕ್ಷಿಸುತ್ತ ಭೀಮನೆಂಬ ನನ್ನ ನಾಮ ಹೊಂದಿ ಆ ಪಾಪಾತ್ಮರಿಗೆ ಭಯಂಕರನಾಗಿ ಯಾವಾಗಲೂ ಇದೇಸ್ಥಳದಲ್ಲಿ ವಾಸಿಸು. ಇದಲ್ಲದೆ ನಿನ್ನ ದ್ರೋಹದಿಂದ ಅಮಂಗಲವಾದ ನನ್ನ ಈ ದೇಹವನ್ನು ನಿನ್ನ ಪಾವನವಾದ ನೇತ್ರಾಗ್ನಿಯಿಂದ ದಹಿಸಿ, ಇದಕ್ಕೆ ನಿನ್ನ ಪಾದಸೇವೆಯು ನಿರಂತರವಾಗಿ ದೊರೆಯುವಂತೆ ಮಾಡು" ಎಂದು ಅಂತಃಕರಣ ಪೂರ್ವಕವಾಗಿ ಪ್ರಾರ್ಥಿಸುವಾಗ ಅವನ ರೋಮಾಂಚ ಗಳು ನೆಟ್ಟಗಾದವು; ಭಕ್ತ್ಯತಿಶಯದಿಂದ ಅವನ ಕಂಠವು ಬಿಗಿದುಬಂದು ಮಾತುಗಳು ಹೊರಡದಾದವು. ಆಗ ಅವನು ಅಶ್ರುಪೂರಿತವಾದ ನೇತ್ರಗಳಿಂದ ಭಗವಾನ್ ಸದಾ ಶಿವನ ದಿವ್ಯರೂಪವನ್ನು ಕಣ್ಣುತುಂಬ ನೋಡುತ್ತಿರಲು, ನೇತ್ರಮಾರ್ಗದಿಂದಲೇ ಅವನ ಪ್ರಾಣವು ಹೊರಟುಹೋಯಿತು. ಹೀಗೆ ಮಹಾ ಮಹಾ ಸಾಧಕರಿಗೂ ಸಹ ಸಾಧಿಸ ದಿದ್ದ ಆ ರಾಕ್ಷಸೋತ್ತಮನ ಅಂತ್ಯಕಾಲದ ಶುದ್ಧ ಭಾವವನ್ನು ನೋಡಿ ಶಂಕರನು ಸಂತು ಷ್ಟನಾಗಿ ಮರಣಕಾಲದಲ್ಲಿ ಅವನು ಪ್ರಾರ್ಥಿಸಿದಂತೆ ಆವನ ಶವವನ್ನು ತನ್ನ ನೇತ್ರಾಗ್ನಿ ಯಿಂದ ದಹಿಸಿ, ಅತ್ಯಂತವಾತ್ಸಲ್ಯದಿಂದ ಅವನ ಚಿತಾಭಸ್ಮವನ್ನು ತನ್ನ ಸರ್ವಾಂಗದಲ್ಲಿ ಧರಿಸಿ ಪರ್ವತಪ್ರಾಯವಾಗಿ ಬಿದ್ದ ಉಳಿದ ರಾಕ್ಷಸಸೈನ್ಯದ ಚಿತಾಭಸ್ಮವನ್ನು ಪೂತ್ಕಾರ ಮಾತ್ರದಿಂದ ಅರಣ್ಯದ ಮಧ್ಯದಲ್ಲೆಲ್ಲ ಹಾರಿಸಿಬಿಟ್ಟನು. ಪರಮಾತ್ಮನ ಪೂತ್ಕಾರದಿಂದ ಪವಿತ್ರವಾದ ಆ ಭಸ್ಮಕಣಗಳು ಮುಂದೆ ನಾನಾ ಕಾರ್ಯಕ್ಷಮಗಳಾದ ದಿವ್ಯೌಷಧಿಗ ಳಾಗಿ ಪರಿಣಮಿಸಿದವು. ಆದ್ದರಿಂದಲೇ ಈವೊತ್ತಿಗೂ ಸಹ್ಯಾದ್ರಿಯ ತಪ್ಪಲಲ್ಲಿ ಓಷಧಿ ವನಸ್ಪತಿಗಳ ವಿಪುಲತೆಯು ಕಂಡುಬರುವದು. ಇರಲಿ. ಹೀಗೆ ಭೂತೇಶನು ಚಿತಾ ಭಸ್ಮಧರಿಸಿ ಆನಂದಾತಿಶಯದಿಂದ ಕುಣಿಯುತ್ತಿರಲು, ನಾರದರಿಗೆ ಪರಮಾನಂದವಾ ಯಿತು. ಅಷ್ಟರಲ್ಲಿ ಹರಿಬ್ರಹ್ಮೇಂದ್ರಾದಿ ದೇವತೆಗಳು ಋಷಿಗಳೊಂದಿಗೆ ಆ ಸ್ಥಳಕ್ಕೆ ಬಂದು ನರ್ತನಾನಂದದಲ್ಲಿ ಮಗ್ನನಾದ ಭಗವಾನ್ ನಟರಾಜನನ್ನು ವಿನಯದಿಂದ ವಂದಿಸಿ ವಿವಿಧ ಸ್ತೋತ್ರಗಳಿಂದ ಸ್ತುತಿಸಹತ್ತಲು, ಆನಂದಮೂರುತಿಯಾದ ಸದಾಶಿವನು ಕ್ರಮ ವಾಗಿ ಅವರೆಲ್ಲರನ್ನೂ ಆಲಿಂಗಿಸಿ ಅವರ ಬೇಡಿಕೆಯ ವರಗಳನ್ನು ಅವರವರ ಇಚ್ಛಾನುಸಾರ ವಾಗಿ ಕೊಟ್ಟು ನಾರದರೊಂದಿಗೆ ಅವರನ್ನು ಅವರವರ ಸ್ಥಳಗಳಿಗೆ ಕಳುಹಿದನು. ಇತ್ತ ಬಂಧಮುಕ್ತನಾದ ಕಾಮರೂಪೇಶ್ವರನು ಪರಮ ಸಾಧ್ವಿಯಾದ ದಕ್ಷಿಣೆ ಯೊಡನೆ ಶಿವನಪಾದಗಳ ಮೇಲೆ ಬಿದ್ದು, ಅವನ ಕೃಪಾವಲೋಕನದಿಂದ ವಿದೇಹ ಮುಕ್ತಿ ಯನ್ನು ಪಡೆದು ಧನ್ಯನಾದನು. ಭಕ್ತಾಧೀನನಾದ ಭಗವಾನ್ ಭವನು ಭೀಮಾಸುರನ ಬೇಡಿಕೆಯಂತೆ ಭೀಮಶಂಕರನೆಂಬ ಭಯಪ್ರದವಾದ ನಾಮದಿಂದ ಶಾಕಿನೀ ಡಾಕಿನೀ ಪ್ರಭೃತಿ ತನ್ನ ಭೂತಗಣಗಳೊಂದಿಗೆ ದುಷ್ಟರನ್ನು ನಿಗ್ರಹಿಸುತ್ತ, ಶಿಷ್ಟರನ್ನು ಅನುಗ್ರ ಹಿಸುತ್ತ ಅದೇ ಸ್ಥಳದಲ್ಲಿ ಸ್ಥಿರವಾಗಿ ವಾಸಿಸಿದನು. ಇವನು ಅಲ್ಲಿ ಯಾವಾಗಲೂ ತನಗೆ ಪ್ರಿಯವಾದ ಡಾಕಿನೀಗಣದ ಮಧ್ಯದಲ್ಲಿ ಕ್ರೀಡಿಸುತ್ತಿರುವನಾದ್ದರಿಂದ ಇವನಿರುವ ಈ ಪುಣ್ಯ ಭೂಮಿಯು ' ಡಾಕಿನೀ , ಎಂಬ ಹೆಸರಿನಿಂದ ಪ್ರಸಿದ್ಧವಾಯಿತು.

## ೭ ರಾಮೇಶ-ಲಿಂಗೋತ್ಪತ್ತಿ .

**ಸುತಾಮ್ರಪರ್ಣೀ ಜಲರಾಶಿಯೋಗೇ ನಿಬಧ್ಯಸೇತುಂ ವಿಶಿಖೈರಸಂಖ್ಯೈಃ ॥**
**ಶ್ರೀ ರಾಮಚಂದ್ರೇಣ ಸಮರ್ಪಿತಂ ತಂ ರಾಮೇಶ್ವರಾಖ್ಯಂ ನಿಯತಂ ನಮಾಮಿ ॥ ೭ ॥**



ವಿವೇಕಶೀಲಾ, ಇನ್ನು ಭಗವಾನ್ ಸದಾಶಿವನು ರಾಮೇಶ್ವರನೆಂಬ ಸುಪ್ರಸಿದ್ಧ ನಾಮವನ್ನು ಹೇಗೆ ಪಡೆದನೆಂಬದನ್ನು ಹೇಳುವೆನು ಕೇಳು. ದಾಶರಥಿ ಶ್ರೀ ರಾಮನು ಸೀತೆಯನ್ನು ಹುಡುಕುತ್ತ ಹುಡುಕುತ್ತ ದಕ್ಷಿಣ ಸಮುದ್ರತೀರವನ್ನು ಸೇರಿದನು. ಆಗ ಆತನು ಸೀತೆಯನ್ನು ನೆನಿಸಿ ದುಃಖಿಸುವಾಗ ಆತನ ಗಂಟಲು ಆರಿ ಬಹಳ ನೀರಡಿಕೆಯಾಯಿತು. ಸಮುದ್ರದ ಅಪಾರ ಜಲವು ಕುಡಿಯಲು ಅಯೋಗ್ಯವಾದದ್ದರಿಂದ ಸುಗ್ರೀವಾದಿ ಕಪಿಗಳು ಸವಿನೀರನ್ನು ಹುಡುಕುತ್ತ ಸ್ವಲ್ಪ ಹೊತ್ತಿನಲ್ಲಿಯೇ ಒಂದು ಬಂಗಾರದ ಹೂಜೆಯಲ್ಲಿ ಸರೋವರದ ಸ್ವಾದುಶೀತಲವಾದ ಉದಕವನ್ನು ತಂದು ಶ್ರೀ ರಾಮನಿಗೆ ಅರ್ಪಿಸಿದರು. ಆಗ ಅತ್ಯಂತ ತೃಷಾತುರನಾದ ದಾಶರಥಿಯು ಆ ಜಲಪಾತ್ರವನ್ನು ತಕ್ಕೊಂಡು ಇನ್ನು ಎತ್ತಿ ನೀರು ಕುಡಿಯಬೇಕೆನ್ನುವಷ್ಟರಲ್ಲಿ, ಅವನಿಗೆ ತನ್ನ ನಿತ್ಯದ ಶಿವಪೂಜೆಯ ಸ್ಮರಣವಾಯಿತು. ಆಗ ಅವನು ಒಮ್ಮೆಲೆ ಬೆಚ್ಚಿಬಿದ್ದು—“ಎಲ ಎಲಾ! ಇಂದು ನಾನು ದುಃಖದ ಭರದಲ್ಲಿ ನನ್ನ ಶಿವಪೂಜೆಯನ್ನೇ ಮರೆತುಬಿಟ್ಟೆನಲ್ಲ! ಹೀಗೆಯೇ ಜಲಪಾನ ಮಾಡಿದ್ದರೆ ಮಹದಪರಾಧವಾಗುತ್ತಿತ್ತು, ಎಂದು ನುಡಿದು, ನೀರು ಕುಡಿಯದೆ ಆ ಜಲಪಾತ್ರವನ್ನು ಕೆಳಗಿಟ್ಟು ಲಕ್ಷ್ಮಣನ ಕಡೆಗೆ ನೋಡಹತ್ತಿದನು. ಆಗ ಲಕ್ಷ್ಮಣನು ಅಣ್ಣನ ಭಾವವನ್ನರಿತು ಪಾರ್ಥಿವ ಪೂಜೆಯ ಎಲ್ಲ ಉಪಕರಣಗಳನ್ನು ಶುದ್ಧಗೊಳಿಸಿ ಅವನಿಗೆ ತಿಳಿಸಲು, ರಾಘವನು ಸಮುದ್ರದಲ್ಲಿ ಸ್ನಾನಮಾಡಿ ಅದರ ದಡದ ಪ್ರಶಸ್ತವಾದ ಒಂದು ಹಾಸುಗಲ್ಲಮೇಲೆ ಕುಳಿತು ಮಂತ್ರಪೂರ್ವಕವಾಗಿ ಭಸ್ಮ-ರುದ್ರಾಕ್ಷಗಳನ್ನು ಧರಿಸಿ ಸಂಧ್ಯಾವಂದನಾದಿ ನಿತ್ಯಕರ್ಮಗಳನ್ನು ತೀರಿಸಿದ ಮೇಲೆ, ಪ್ರಶಸ್ತವಾದ ಒಂದು ಮೃಣ್ಮಯ ಲಿಂಗವನ್ನು ಮಾಡಿ ಅದಕ್ಕೆ ರುದ್ರ ಸೂಕ್ತದಿಂದ ಅಭಿಷೇಕ ಮಾಡಿದನು. ಮುಂದೆ ಶುಭ್ರಾಕ್ಷತೆ, ಗಂಧ, ಪುಷ್ಪಗಳಿಂದ ಆ ಲಿಂಗವನ್ನು ಅಲಂಕರಿಸಿ, ಸಹಸ್ರನಾಮಗಳಿಂದ ಅದಕ್ಕೆ ಬಿಲ್ವಾರ್ಚನೆ ಮಾಡಿ ಭಕ್ತಿಯಿಂದ ನಮಸ್ಕರಿಸಿದನು. ಅಷ್ಟರಲ್ಲಿ ಲಕ್ಷ್ಮಣನು ಪೂಮಾಲೆಯನ್ನೂ, ಸುಗ್ರೀವನು ಧೂಪ-ದೀಪಗಳನ್ನೂ, ನಲನು ನೈವೇದ್ಯವನ್ನೂ ಸಿದ್ಧಮಾಡಿಕೊಡಲು. ಅವನ್ನೆಲ್ಲ ರಾಘವನು ಶಂಕರನ ಪಾದಗಳಿಗೆ ಅತ್ಯಂತ ಲೀನತೆಯಿಂದ ಸಮರ್ಪಿಸಿ, ಭಕ್ತ್ಯತಿಶಯದಿಂದ ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಿ ಮಹಾದೇವನನ್ನು ಕುರಿತು—ದೇವಾ, ದೀನಬಂಧೋ, ಸಚ್ಚಿದಾನಂದ ಘನನಾದ ನೀನು ಸಕಲಪ್ರಾಣಿಗಳ ಅಂತಃಕರಣಗಳಲ್ಲಿ ಸಮವಾಗಿ ವಾಸಿಸಿ ಅವರವರ ಭಾವನಾನುಸಾರವಾಗಿ ಅವರವರ ಎಲ್ಲ ಮನೋರಥಗಳನ್ನು ಪೂರ್ಣಗೊಳಿಸು

ತ್ತಿರುವಾಗ, ದೀನನಾದ ನನ್ನ ವಿಷಯವಾಗಿ ನೀನು ಇಷ್ಟೊಂದು ನಿರ್ದಯನಾಗಲು ಕಾರಣವೇನು? ಕರುಣಾಸಾಗರನಾದ ನೀನೇ ಕುಳಿತು ಹೀಗೆ ನಿರ್ದಯನಾದರೆ, ನನ್ನ ಸುಖದುಃಖಗಳನ್ನು ಇನ್ನು ಯಾರಮುಂದೆ ಹೇಳಿಕೊಳ್ಳಲಿ? ನನ್ನ ಸಾಧನಸಾಮಗ್ರಿಯು ಅತ್ಯಂತ ದುರ್ಬಲವಾಗಿರುವದರಿಂದ ನಿನ್ನ ಸಹಾಯವಿಲ್ಲದೆ ನನ್ನ ಯಾವ ಕಾರ್ಯಗಳೂ ಸಿದ್ಧಿಸುವಹಾಗಿಲ್ಲ. ಜಗಚ್ಚಕ್ರಚಾಲಕನಾದ ನಿನ್ನ ಆಶ್ರಯವಿಲ್ಲದೆ ಬ್ರಹ್ಮಾಂಡದೊಳಗಿನ ಒಂದು ಕಡ್ಡಿಯು ಸಹ ಚಲಿಸದಿರಲು, ಅಲ್ಪಶಕ್ತಿಯುತನಾದ ನಾನು ನಿನ್ನ ನೆರವಿಲ್ಲದೆ ಚಂಚಲವಾದ ಕಪಿಸೈನ್ಯದೊಂದಿಗೆ ಅಪಾರವಾದ ಈ ಸಾಗರವನ್ನು ಬಂಧಿಸುವ ಬಗೆ ಹೇಗೆ? ದೇವಾ, ನಿನ್ನ ಪೂಜಾಬಲದಿಂದ ಒಂದು ವೇಳೆ ಈ ಸಮುದ್ರವನ್ನು ಬಂಧಿಸಿದರೂ ಬಂಧಿಸಬಹುದು; ಆದರೆ, ನಿನ್ನ ಕೃಪಾಛತ್ರದ ಶೀತಲವಾದ ನೆರಳಿನಲ್ಲಿ ಯಾವಾಗಲೂ ವಾಸಿಸಿ ತನ್ನ ಭುಜಪರಾಕ್ರಮದಿಂದ ತ್ರಿಭುವನವನ್ನೇ ನಡುಗಿಸಿ ಬಿಟ್ಟಿರುವ ಆ ಲಂಕಾಧಿಪನಾದ ರಾವಣನು ನನ್ನ ವೈರಿಯಲ್ಲವೆ? ಅಂದ ಮೇಲೆ ಅಂಥ ದುರ್ಧರನಾದ ರಾಕ್ಷಸನೊಡನೆ ಸಮರಾಂಗಣದಲ್ಲಿ ಹೋರಾಡುವ ಯೋಗ್ಯತೆಯು ನನ್ನದೆಯೇ? ದೇವಾ, ಆದರೂ ನೀನು ನ್ಯಾಯಪಕ್ಷಪಾತಿಯಲ್ಲವೆ? ಅನ್ಯಾಯ್ಯದಿಂದ ನಡೆಯುವವರು ನಿನ್ನ ನಿಸ್ಸೀಮ ಭಕ್ತರಿದ್ದರೂ ಅವರನ್ನು ನೀನು ಸಹಿಸಲಾರೆಯೆಂಬದನ್ನು ನಾನು ಪೂರ್ಣವಾಗಿ ಅರಿತಿರುವೆನು. ಪ್ರಾರಬ್ಧ ಪ್ರವಾಹಪತಿತರಾದ ಪ್ರಾಣಿಗಳ ನ್ಯಾಯಾನ್ಯಾಯ, ಧರ್ಮಾಧರ್ಮ, ಸತ್ಯಾಸತ್ಯಾದಿಗಳ ವಿಚಾರಣೆಯು, ಸರ್ವಾಂತರ್ಯಾಮಿಯೂ, ಸರ್ವಸಾಕ್ಷಿಯೂ ಆದ ನಿನ್ನಿದುರಿಗಾಗದೆ ಇನ್ನು ಆಗಬೇಕಾದರೂ ಎಲ್ಲಿ? ಇದಲ್ಲದೆ ಪಾಪಾತ್ಮರನ್ನೂ, ಅಸದ್ವಾದಿಗಳನ್ನೂ, ಅನ್ಯಾಯಿಗಳನ್ನೂ, ಧರ್ಮಹೀನರನ್ನೂ, ನಾನು ಸ್ವತಃ ಅವತರಿಸಿ ನಾಶಗೊಳಿಸುವೆನೆಂದು ನಿನ್ನ ವಚನವಾದರೂ ಇರುವದಲ್ಲವೆ? ಹೀಗಿರಲು, ಅನ್ಯಾಯ, ಅಧರ್ಮ, ಅಸತ್ಯಾದಿ ದುರ್ಗುಣಗಳಿಗೆ ತವರುಮನೆಯಾಗಿದ್ದ ಆ ದುಷ್ಟರಾವಣನನ್ನು ನೀನು ನನ್ನ ಪ್ರಿಯಭಕ್ತನೆಂದು ರಕ್ಷಿಸುತ್ತಿರುವೆಯಲ್ಲ! ಭಗವನ್, ನೀನೇ ಕುಳಿತು ಹೀಗೆ ಅನ್ಯಾಯ ಮಾಡಹತ್ತಿದರೆ ನಿನ್ನ ನ್ಯಾಯಪಕ್ಷಪಾತಿತ್ವದ ಬಿರುದನ್ನು ಕಾಯುವವರಾರು? ಆದುದರಿಂದ ಭೂಭಾರಹರಣರೂಪವಾದ ಈ ಮಹಾಕಾರ್ಯವನ್ನು ಈ ಪ್ರಸಂಗದಲ್ಲಿ ಅಲ್ಪನಾದ ನನ್ನ ಕೈಯಿಂದ ಮಾಡಿಸಿ ಚಿರಂತನವಾದ ನಿನ್ನ ಈ ಬಿರುದನ್ನು ಕಾಯ್ದುಕೋ” ಎಂದು ಪ್ರಾರ್ಥಿಸಿ ಆ ಲಿಂಗಕ್ಕೆ ಛತ್ರ ಚಾಮರಾದಿ ರಾಜೋಪಚಾರಗಳನ್ನು ಸಮರ್ಪಿಸಿದನು. ಮುಂದೆ ಅವನು ಪೂಜೆಯನ್ನು ಮುಗಿಸಿ ಭಕ್ತಿಯ ಉದ್ರೇಕದಲ್ಲಿ ಉಚ್ಚಸ್ವರದಿಂದ “ಪಾರ್ವತೀಪತೇ ಹರ! ಹರ! ಹರ! ಮಹಾದೇವ!!!” ಎಂದು ಹರನಾಮವನ್ನು ಉದ್ಘೋಷಿಸಿ, ಸದಾಶಿವನ ದಿವ್ಯಾಕಾರವನ್ನು ಮನಸ್ಸಿನಲ್ಲಿ ತಂದು ಅವನ ಪ್ರೀತಿಗಾಗಿ ಗಲ್ಲವಾದ್ಯವನ್ನು ಮಾಡಹತ್ತಿದನು. ಆಗ ಇವನ ಅಕೃತ್ರಿಮವಾದ ದಿವ್ಯಭಕ್ತಿಯನ್ನು ನೋಡಿ ಭಗವಾನ್ ಸದಾಶಿವನು ಗಲ್ಲನಾದದೊಂದಿಗೆ ಇವನು ಪೂಜಿಸಿಟ್ಟ ಮೃಣ್ಮಯ ಲಿಂಗದಿಂದ ಒಮ್ಮೆಲೆ ಪ್ರಕಟನಾಗಿ ಅತ್ಯಂತ ಲೀನತೆಯಿಂದ ಕುಳಿತುಕೊಂಡಿರುವ ಶ್ರೀರಾಮನನ್ನು ನೋಡಿ ಅಪ್ಪಿಕೊಂಡು ಪ್ರೇಮಾತಿಶಯದಿಂದ ಅವನನ್ನು ಕುರಿತು—ವತ್ಸಾ, ದಾಶರಥೇ, ಭಕ್ತೋತ್ತಮ

ನಾದ ನೀನು ಸಮರ್ಪಿಸಿದ್ದ ಈ ಉಪಚಾರಗಳಿಂದ ನಾನು ಸಂತುಷ್ಟನಾದೆನು. ನೀನು ಪ್ರಾರ್ಥಿಸಿದಂತೆ ನಿನ್ನ ಪ್ರತಿಒಂದು ಕಾರ್ಯದಲ್ಲಿ ಜಯಪ್ರಾಪ್ತಿಯಾಗಿ, ದಶದಿಕ್ಕುಗಳಲ್ಲಿಯೂ ನಿನ್ನ ನಿಷ್ಕಲಂಕವಾದ ಕೀರ್ತಿಯು ಪಸರಿಸುವದು. ಹಾಗು ನೀನು ನುಡಿದಂತೆ ಪಾಪಾತ್ಮನಾದ ಆ ಲಂಕೇಶನು ಅನೇಕ ದುಷ್ಕೃತ್ಯಗಳನ್ನು ಮಾಡಿ ನನ್ನ ಕೃಪೆಗೆ ಅಪಾತ್ರನಾಗಿರುವನಾದ್ದರಿಂದ, ಮದಂಶಭೂತನಾದ ನಿನ್ನಿಂದ ಈ ಪ್ರಸಂಗದಲ್ಲಿ ಅವನ ನಾಶವಾಗುವದೇ ಯೋಗ್ಯವಾಗಿರುವದು. ಆದುದರಿಂದ ನೀನು ಯಾವಬಗೆಯಿಂದಲೂ ಅಧೈರ್ಯ ತಾಳದೆ ಈ ಸಮುದ್ರದಲ್ಲಿ ಸೇತುವನ್ನು ಕಟ್ಟಿ ಭೂಭಾರಹರಣಮಾಡಿ ಕೀರ್ತಿಶಾಲಿಯಾಗು. ನಿನ್ನ ಮೇಲೆ ನನ್ನ ಕೃಪೆಯು ಪೂರ್ಣವಾಗಿರುವದರಿಂದ ನಿನ್ನ ಎಲ್ಲಕಾರ್ಯಗಳು ಕೈಗೂಡುವವು. ಎಂದು ಅಭಯವಿತ್ತನು. ಆಗ ರಾಘವನು ಲೀನತೆಯಿಂದ ನಮಸ್ಕರಿಸಿ, ಪರಮಾನಂದ ಮುದ್ರೆಯಿಂದ—ಭಗವನ್, ಸರ್ವತಂತ್ರಸ್ವತಂತ್ರನಾದ ನಿನ್ನಿಂದಲೇ ಈ ಕಾರ್ಯವಾಗಬೇಕಾಗಿರುವದಲ್ಲದೆ, ಇದರಲ್ಲಿ ನಾನು ಕೇವಲ ನಿಮಿತ್ತಮಾತ್ರನಾಗಿರುವೆನು. ಆಗಲಿ, ದೇವಾ, ನಿನ್ನ ಇಚ್ಛೆಯಂತೆ ನಾನು ಸರ್ವಕಾರ್ಯಗಳನ್ನೂ ಸಾಧಿಸುವೆನು; ಆದರೆ ನೀನು ಮಾತ್ರ ನನ್ನ ಧೈರ್ಯಕ್ಕಾಗಿಯೂ, ಲೋಕೋದ್ಧಾರಕ್ಕಾಗಿಯೂ ಸಾಯುಧ ಸಶಕ್ತಿಕನಾಗಿ ನನ್ನ ಹೆಸರಿನಿಂದ ಇದೇ ಸ್ಥಳದಲ್ಲಿ ವಾಸಿಸಬೇಕೆಂದು ಪ್ರಾರ್ಥಿಸಲು, ಭಗವಂತನು ಗಂಭೀರವಾಣಿಯಿಂದ "ತಥಾಸ್ತು" ಎಂದು ನುಡಿದು ಅಲ್ಲಿಯೇ ಅದೃಶ್ಯನಾದನು. ವಿವೇಕಶೀಲಾ, ಈವೊತ್ತಿಗೂ ಈ ಲಿಂಗವು ರಾಮೇಶ್ವರನೆಂಬ ಹೆಸರಿನಿಂದ ಲೋಕವಿಖ್ಯಾತವಾಗಿರುವದು. ಇದರ ಪೂಜನದರ್ಶನಾದಿಗಳಿಂದ ಭಕ್ತರು ಭಯಮುಕ್ತರಾಗುವರು.

## ೮ ನಾಗೇಶ ಲಿಂಗೋತ್ಪತ್ತಿ;

ಯಾಮ್ಯೇ ಸದಂಗೇ ನಗರೇತಿರಮ್ಯೇ ವಿಭೂಷಿತಾಂಗಂ ವಿವಿಧೈಶ್ಚಭೋಗೈಃ ॥
ಸದ್ಭಕ್ತಿ ಮುಕ್ತಿಪ್ರದಮೀಶಮೇಕಂ ಶ್ರೀನಾಗನಾಥಂ ಶರಣಂ ಪ್ರಪದ್ಯೇ ॥ ೮ ॥

ವಿವೇಕಶೀಲಾ, ಇನ್ನು ನಿನಗೆ ದಾರುಕಾಧೀಶನಾದ ನಾಗೇಶನ ಮಹಿಮೆಯನ್ನು ಹೇಳುವೆನು ಕೇಳು. ಹಿಂದಕ್ಕೆ ಪಶ್ಚಿಮೋದಧಿಯ ಧಡದಲ್ಲಿ ಹದಿನಾರು ಯೋಜನ ವಿಸ್ತೀರ್ಣವಾದ "ದಾರುಕಾ" ಎಂಬ ಹೆಸರಿನದೊಂದು ಪುಣ್ಯಾರಣ್ಯವು ನಿಶಾಚರರ ನಿತ್ಯದ ಅವಾಸಸ್ಥಾನವಾಗಿತ್ತು. ಅಲ್ಲಿ ದಾರುಕನೆಂಬ ಹೆಸರಿನ ಒಬ್ಬ ದೈತ್ಯರಾಜನು ಲೋಕಕಂಟಕನಾಗಿ ತನ್ನ ಪರಿವಾರದೊಡನೆ ಬಹುಕಾಲದಿಂದ ವಾಸಿಸಿದ್ದನು. ಈತನಿಗೆ ಇದೇ ಹೆಸರಿನವಳೊಬ್ಬ ರಾಕ್ಷಸಿಯು ತಂಗಿಯಾಗಿದ್ದು, ಇವನಿಗೆ ಸಾನುಕೂಲಳಾಗಿದ್ದಳು. ಇವಳು ಸಾಕ್ಷಾತ್ ಚಂಡೀಶ್ವರಿಯನ್ನು ಆರಾಧಿಸಿ ತನ್ನ ಹೆಸರಿನ ಈ ವನವನ್ನು ಎತ್ತಿಕೊಂಡು ಸರ್ವೋಪಕರಣಗಳಿಂದ ಸಹಿತವಾಗಿ ಬೇಕಾದಲ್ಲಿ ಬೇಕಾದಹಾಗೆ ಒಯ್ಯಬರುವಂತೆ ವರವು ಪಡೆದಿ

ದ್ದಳು. ಹೀಗೆ ಎಲ್ಲ ಪ್ರಕಾರದಿಂದಲೂ ಅತ್ಯಂತ ಬಲಿಷ್ಠವಾಗಿದ್ದ ತನ್ನ ಪರಿವಾರದಿಂದ ಕೂಡಿ ಆ ದೈತ್ಯರಾಜನು ಸುಖವಾಗಿ ವಾಸಿಸಿದ್ದನು. ಇವನು ತನ್ನ ಕ್ರೂರಸ್ವಭಾವಕ್ಕನುಸರಿಸಿ ಮೇಲಿಂದ ಮೇಲೆ ತನ್ನ ಪರಿವಾರದೊಡನೆ ದಾರುಕಾವನದ ಸುತ್ತಲಿನ ಜನಸ್ಥಾನಗಳನ್ನು ಹೊಕ್ಕು, ನಿರಪರಾಧಿಗಳಾದ ಅಲ್ಲಿಯ ಜನರನ್ನು ಪರಿಪರಿಯಾಗಿ ಪೀಡಿಸಹತ್ತಿದನು. ಈ ದುಷ್ಟ ರಾಕ್ಷಸನ ಹಾವಳಿಯಿಂದ ಸುತ್ತಲಿನ ಎಲ್ಲಜನರೂ ಬೇಸತ್ತುಹೋಗಿದ್ದರು. ಅಲ್ಲಿಯ ರಾಜನನ್ನು ಇವನು ಎಷ್ಟೋಸಾರೆ ಸೋಲಿಸಿದ್ದನಾದ್ದರಿಂದ ರಾಜನ ಭಯವು ಇವನಿಗೆ ಎಷ್ಟು ಮಾತ್ರವೂ ಉಳಿದಿದ್ದಿಲ್ಲ. ಆದ್ದರಿಂದ ಜನರು ತಮಗೆ ತಾರಕರನ್ನು ಕಾಣದೆ ಚಿಂತಿಸುತ್ತಿರಲು, ಸಮೀಪದಲ್ಲಿ "ಉರ್ವ" ಎಂಬ ಋಷಿಯು ಲೋಕೋಪಕಾರಕ್ಕಾಗಿ ತಪಸ್ಸನ್ನಾಚರಿಸುವದು ಒಬ್ಬ ವನೇಚರನಿಂದ ಅವರಿಗೆ ಗೊತ್ತಾಯಿತು. ಆಗ ಜನರು ಆ ಋಷೀಶ್ವರನಿಗೆ ಶರಣುಹೋಗಿ ತಮ್ಮ ಕಷ್ಟವನ್ನು ದೂರಿಕೊಳ್ಳಲು, ಆತನು ಕರುಣಾಳುವಾಗಿ ಆ ದುಷ್ಟ ದಾರುಕ ರಾಕ್ಷಸನಿಗೆ ಅವನ ಪರಿವಾರ ಸಹಿತವಾಗಿ—"ನೀವು ಪ್ರಜಾಹಿಂಸಕ ಬುದ್ಧಿಯಿಂದ ನಿಮ್ಮ ವನವನ್ನು ದಾಟಬಂದರೆ ನಿಮ್ಮ ಕಾಲುಗಳು ತುಂಡರಿಸಲೆಂ"ದು ಶಾಪಕೊಟ್ಟು ಅವರ ನಾಶಕ್ಕಾಗಿ ಇಂದ್ರಾದಿ ದೇವತೆಗಳನ್ನು ಪ್ರಾರ್ಥಿಸತೊಡಗಿದನು. ಇದರಿಂದ ಜನರಿಗೆ ರಾಕ್ಷಸ ಬಾಧೆಯು ತಪ್ಪಿದ್ದಲ್ಲದೆ, ಆ ದುಷ್ಟ ರಾಕ್ಷಸನಿಗೇ ಜನರಿಂದ ಬಾಧೆಯಾಗಹತ್ತಿತು. ಪರಮ ಶಿವಭಕ್ತನಾದ ಅವರ ಅರಸನು ಸೈನ್ಯದೊಡನೆ ರಾಕ್ಷಸನ ಮೇಲೆ ಏರಿಹೋಗಿ ಅವನನ್ನು ಸೋಲಿಸಿದನು. ಇಂದ್ರಾದಿ ದೇವತೆಗಳು ಗುಪ್ತರೀತಿಯಿಂದ ಕಾದುತ್ತಿದ್ದದ್ದರಿಂದ ರಾಕ್ಷಸನು ಪರಾಜಿತನಾದದ್ದು ಆಶ್ಚರ್ಯವಲ್ಲ. ಆಗ ದಾರುಕನ ತಂಗಿಯು ತನಗಿರುವ ಚಂಡಿಯ ವರಪ್ರದಾನದಂತೆ ದಾರುಕವನಕ್ಕೆ ವನವನ್ನೇ ಸರ್ವೋಪಕರಣಗಳೊಂದಿಗೆ ಎತ್ತಿಕೊಂಡು ಹೋಗಿ ಸಮುದ್ರಮಧ್ಯದಲ್ಲಿ ಮುಳುಗದಂತೆ ಅದನ್ನು ಇಟ್ಟುಬಿಟ್ಟಳು. ಅದರಿಂದ ರಾಕ್ಷಸರು ನಿರ್ಭಯದಿಂದ ವಾಸಿಸಹತ್ತಿದರು.

ಹೀಗೆ ಆರಾಕ್ಷಸರು ಸಮುದ್ರಮಧ್ಯವನ್ನು ಸೇರಿದ ಕೆಲಕಾಲದವರೆಗೆ ಜನಸ್ಥಾನದ ಜನರು ತಮ್ಮ ವರ್ಣಾಶ್ರಮ ಧರ್ಮಗಳನ್ನು ಮೊದಲಿನಂತೆ ಕೈಕೊಂಡು ಸುಖವಾಗಿ ವಾಸಿಸಹತ್ತಿದರು. ಹೀಗೆ ಎಷ್ಟೋಕಾಲವು ಕ್ರಮಿಸಿದಮೇಲೆಪುನಃ ಹಾವಳಿಗೆ ಪ್ರಾರಂಭವಾಯಿತು. "ಉರ್ವ" ಋಷಿಯ ಶಾಪಭಯದಿಂದ ಯದ್ಯಪಿ ಇವರು ಭೂಮಿಯಮೇಲೆ ಸಂಚರಿಸದಿದ್ದರೂ ತಮ್ಮ ದುಷ್ಕೃತ್ಯಗಳನ್ನು ನೀರಿನಲ್ಲಿದ್ದೇ ನಡಿಸಹತ್ತಿದರು. ಶಕ್ತ್ಯನುಗ್ರಹದಿಂದ ಇವರು ಜಲಸ್ತಂಭನವಿದ್ಯೆಯಲ್ಲಿ ಪ್ರಾವೀಣ್ಯವನ್ನು ಪಡೆದಿದ್ದರಿಂದ ದಿನಾಲು ಇವರು ಸಮುದ್ರದ ನೀರಿನಲ್ಲಿ ಅಡಗಿ ಕುಳಿತು ಅಲ್ಲಿ ಬರುವ ಜನರ ಹಡಗ ಡೋಣಿಗಳನ್ನು ಒಡೆದುಹಾಕಿ ಅಲ್ಲಿಯ ಜನರನ್ನು ಸೆರೆಹಿಡಿದು ತಮ್ಮ ಕಾರಾಗೃಹದ ಕಡೆಗೆ ಒಯ್ಯಹತ್ತಿದರು. ಹೀಗಿರಲು, ಒಂದುದಿನ ಸಂಜೆಯಮುಂದೆ ವಿಭವಶಾಲಿಗಳಾದ ಸಾವಿರಾರು ಜನ ವೈಶ್ಯರಿಂದ ತುಂಬಿದ ಒಂದು ದೊಡ್ಡಹಡಗವು ಎತ್ತಣಿಂದಲೋಹೊರಟು ಅದು ಕ್ರಮವಾಗಿ ಈ ರಾಕ್ಷಸನ ಆಳವಿನೊಳಗೇ ಬರತೊಡಗಿತು, ಆಗ ರಾಕ್ಷಸ

ರಾಜನಾದ ದಾರುಕನು ತನ್ನ ಕೆಲ ಜನರೊಡನೆ ಸಮುದ್ರದಲ್ಲಿ ಮುಳುಗುಹಾಕಿ ಕ್ಷಣಮಾತ್ರದಲ್ಲಿ ಹಡಗವನ್ನು ಡಬ್ಬುಹಾಕಿ ಒಬ್ಬೊಬ್ಬ ದೈತ್ಯನು ಇಬ್ಬಿಬ್ಬರಂತೆ ಅದರಲ್ಲಿದ್ದ ಜನತನ್ನು ಹೆಗಲಮೇಲೆ ಕುಳ್ಳಿರಿಸಿಕೊಂಡು ಒಂದೇ ಕೈಯಿಂದ ಈಸುತ್ತ ತಮ್ಮ ಬಿಡಾರದ ಕಡೆಗೆ ಸಾಗಿದರು.

ಹೀಗೆ ಆ ದುಷ್ಟರು ಆ ವೈಶ್ಯರೊಂದಿಗೆ ಅವರ ಸರ್ವಸ್ವವನ್ನೂ ಅಪಹರಿಸಿ ನಿರಪರಾಧಿಗಳಾದ ಅವರನ್ನು ತಮ್ಮ ಸೆರೆಮನೆಗೆ ಈಡುಮಾಡಿ ಬಹುವಿಧವಾಗಿ ಪೀಡಿಸಹತ್ತಿದರು. ಬರಬರುತ್ತ ಆ ನೀಚರು ಬಲಾತ್ಕಾರದಿಂದ ಇವರಿಗೆ ಮಾಂಸಭಕ್ಷಣವನ್ನು ಸಹ ಮಾಡಿಸಹತ್ತಿದರು. ಆಗಂತೂ ಇವರಿಗೆ ಮರಣಪ್ರಾಯ ದುಃಖವಾಯಿತು! ಆದರೆ ಅವರೊಳಗಿನ ಕೆಲವು ಶೀಲವಂತ ಶಿವಭಕ್ತರುಮಾತ್ರ ಇದಕ್ಕೆ ಒಪ್ಪದೆ ಸ್ನಾನದೊಂದಿಗೆ ತಮ್ಮ ನಿತ್ಯದ ಆಹಾರವನ್ನೂ ಬಿಟ್ಟುಗೊಟ್ಟು ಕೇವಲ ಜಲಾಹಾರದಿಂದಿದ್ದು, ತಮ್ಮ ಇಷ್ಟ ದೈವತವಾದ ಸದಾಶಿವನನ್ನು ಧ್ಯಾನಿಸಹತ್ತಿದರು. ಇವರಲ್ಲಿ ಸುಪ್ರಿಯನೆಂಬವನೊಬ್ಬ ವೈಶ್ಯನಂತೂ ಮಹಾಶಿವಭಕ್ತನಿದ್ದು, ಇವನು ದಿನಾಲು ತನ್ನ ಶಿವಪೂಜೆಯಾಗದೆ ಬಾಯಲ್ಲಿ ನೀರು ಸಹ ಹಾಕುತ್ತಿದ್ದಿಲ್ಲ. ಆದರೆ ಅಲ್ಲಿ ಇವನಿಗೆ ಶಿವಪೂಜೆಯ ಬಾಹ್ಯೋಪಚಾರಗಳು ದೊರೆಯುವದೆತ್ತ! ಹೀಗಿದ್ದರೂ ಅವನು ಮನಃಕಲ್ಪಿತ ಉಪಚಾರಗಳಿಂದ ದಿನಾಲು ಪೂಜೆಯನ್ನು ಮನಸ್ಸಿನಲ್ಲಿಯೇ ಮಾಡಹತ್ತಿದನು. ಇವನು ತನ್ನಂತೆ ತನ್ನ ಅನುಯಾಯಿಗಳಿಗೂ ಅತ್ಯಂತ ಕನಿಕರದಿಂದ ಈ ಕ್ರಮವನ್ನು ಹೇಳಿಕೊಟ್ಟು ಎಲ್ಲರನ್ನೂ ಶಿವಾರಾಧನೆಗೆ ಹಚ್ಚಿದನು. ಹೀಗೆ ಎಲ್ಲರೂ ಆ ಮಹಾತ್ಮನಿಂದ ಶಿವದೀಕ್ಷೆಯನ್ನು ಪಡೆದು ಏಕಾಗ್ರ ಮನಸ್ಸಿನಿಂದ ಭಗವಾನ್ ಭವಾನೀಕಾಂತನನ್ನು ಭಜಿಸಹತ್ತಲು, ಶಿವಸಾನ್ನಿಧ್ಯದಿಂದ ಪವಿತ್ರವಾಗಿ ಹೋದ ಆ ಕಾರಾಲಯವು ಪಾಪಾತ್ಮರಾದ ಈ ರಾಕ್ಷಸರಿಗೆ ಅತ್ಯಂತ ಭಯಪ್ರದವಾಗಿ ತೋರಹತ್ತಿತು. ಸುಪ್ರಿಯನು ದಿನಾಲು ತನ್ನ ಮಾನಸಪೂಜೆಯಲ್ಲಿ ಕುಳಿತಾಗ ಭಕ್ತಾಧೀನನಾದ ಭಗವಾನ್ ಶಂಕರನು ಅವನೆದುರಿಗೆ ಮೂರ್ತಿಗೊಂಡು ಬಂದು ನಿಂತು ಆದರಪೂರ್ವಕವಾಗಿ ಸ್ವತಃ ಅವನ ಪೂಜೆಯನ್ನು ಸ್ವೀಕರಿಸುತ್ತಿದ್ದನು. ಆದರೆ ಈ ಸಂಗತಿಯು ಇವನೊಬ್ಬನಿಗೇ ಗೊತ್ತಿತ್ತಲ್ಲದೆ ಅನ್ಯ ಯಾವವೈಶ್ಯರಿಗೂ ಗೊತ್ತಿದ್ದಿಲ್ಲ. ಹೀಗೆ ಈ ಕ್ರಮವು ಮುಂದೆ ಆರುತಿಂಗಳವರೆಗೆ ಅವಿಚ್ಛಿನ್ನವಾಗಿ ನಡೆಯಲು, ಒಂದು ದಿನ ದಾರುಕಾ ರಾಕ್ಷಸಿಯು ಶಕ್ತ್ಯನುಗ್ರಹದಿಂದ ಈ ಪ್ರಕಾರವನ್ನು ಸ್ವತಃ ತನ್ನ ಕಣ್ಣು ಮುಟ್ಟ ನೋಡಿ ಆಶ್ಚರ್ಯಗೊಂಡು ತನ್ನ ಅಣ್ಣನಾದ ದಾರುಕನ ಮುಂದೆ ಇದನ್ನು ತಿಳುಹಿದಳು. ಆಗ ಆ ದುಷ್ಟನು ಮನಸ್ಸಿನಲ್ಲಿ—ಈ ಅರಿಷ್ಟವು ನನ್ನ ನಾಶಕ್ಕಾಗಿಯೇ ಉದ್ಭವಿಸಿರಬಹುದೆಂದು ಯೋಚಿಸಿ ಹಾಗೆಯೇ ಆಸನದಿಂದೆದ್ದು ಪರಿಮಿತ ಪರಿವಾರದೊಡನೆ ಖಡ್ಗಪಾಣಿಯಾಗಿ ಕಾರಾಗೃಹಕ್ಕೆ ಬಂದು ಧ್ಯಾನಸ್ಥನಾದ ಅವನನ್ನು ತುಂಡರಿಸಬೇಕೆನ್ನುವಷ್ಟರಲ್ಲಿ ಭಕ್ತಸಂಕಟಹಾರಕನಾದ ಭಗವಾನ್ ಸದಾಶಿವನು ಕರುಣಾಪೂರಿತನಾಗಿ ತನ್ನ ಭಕ್ತರನ್ನು ಉಳಿಸಿಕೊಳ್ಳಬೇಕೆಂದು ಭಗವತೀ ಭವಾನಿಯೊಡನೆ ತ್ರಿಶೂಲಾದಿ ದಿವ್ಯಾಯುಧಗಳಿಂದ ಕೂಡಿ ಗಡಗಡನೆ ಗರ್ಜಿಸುತ್ತ ಅದೇ ಸ್ಥಳದಲ್ಲಿ ಆವಿರ್ಭವಿಸಿದನು. ಹೀಗೆ

ತಿಮ್ಮೆಲೆ ಶಿವಾಭವಾನಿಯರು ಅರ್ಭಟಿಸುತ್ತ ಭೂಮಿಯೊಳಗಿಂದ ಹೊರಬಿದ್ದದ್ದನ್ನು ನೋಡಿ ಆ ದುಷ್ಟ ದಾರುಕನಿಗೆ ಸಹನವಾಗಲಿಲ್ಲ. ಆಗ ಅವನು ವೀರಾವೇಶದಲ್ಲಿ ಮೈಮರೆತು ತನ್ನ ಭಯಂಕರವಾದ ಖಡ್ಗವನ್ನು ನೆಗಹಿ ಅವರನ್ನು ಹೊಡೆಯಹೋದನು. ಆಗ ಶಿವನು ಹುಂಕಾರಮಾತ್ರದಿಂದ ಆ ದುಷ್ಟರನ್ನು ಸೈನ್ಯದೊಡನೆ ಸುಟ್ಟು ಬೂದಿಮಾಡಿ ಕ್ರೋಧಾವೇಶದಲ್ಲಿ ತನ್ನ ತೃತೀಯನೇತ್ರದಿಂದ ಸುತ್ತಲೂ ನೋಡಹತ್ತಿದನು. ಆಗ ಅವನ ದೃಷ್ಟಿಪಾತದಿಂದ ರಾಕ್ಷಸರ ವಂಶವೆಲ್ಲ ಹುರಿದುಹೋಯಿತು; ಆದರೆ ಭವಾನಿಯ ಕೃಪೆಯಿಂದ ಅವನ ತಂಗಿಯಾದ ದಾರುಕಾರಾಕ್ಷಸಿಯು ಮಾತ್ರ ಜೀವದಿಂದುಳಿದಳು. ಆಗ ಅವಳು ಭಯಾತಿಶಯದಿಂದ ನಡುಗುತ್ತ ಓಡಿಬಂದು ಶಿವಾಭವಾನಿಯರ ಪಾದಗಳ ಮೇಲೆ ಬಿದ್ದು ಪ್ರಾಣರಕ್ಷಣೆಗಾಗಿ ಬೇಡಿಕೊಳ್ಳಹತ್ತಿದಳು. ಆಗ ಭವನು ಭವಾನಿಯ ಕೃಪೆಗೆ ಪಾತ್ರಳಾದ ಆ ರಾಕ್ಷಸಿಗೆ ಜೀವದಾನ ಕೊಟ್ಟು ರಕ್ಷಿಸಿದನು. ಆ ಮೇಲೆ ಭವಾನಿಯು ಅವಳಿಗೆ "ಕಲ್ಪಾಂತರದಲ್ಲಿ ನೀನು ನನ್ನ ಕೃಪೆಯಿಂದ ಒಬ್ಬ ಸಾರ್ವಭೌಮನ ಪತ್ನಿಯಾಗಿ ಲೋಕದಲ್ಲಿ ನಿನ್ನ ವಂಶವು ವಿಸ್ತಾರವಾಗುವದಲ್ಲದೆ ಇಂದಿನಿಂದ ಈ ವನವು ನಿನ್ನ ನಾಮ ಹೊಂದಿ ಲೋಕದಲ್ಲಿ ವಿಖ್ಯಾತ ಹೊಂದುವದೆ"ಂದು ವರವಿತ್ತಳು. ಆಗ ಆ ರಾಕ್ಷಸಿಯು ಸಂತೋಷಪಟ್ಟು ಅವರಿಗೆ ನಮಸ್ಕರಿಸಿ ಹೊರಟುಹೋದಳು.

ಇತ್ತ ಪರಮಾತ್ಮನು ಭಕ್ತಿಪರವಶನಾಗಿ ನಿಂತುಕೊಂಡಿರುವ ಸುಪ್ರಿಯನನ್ನು ಎದೆಗವಚಿಕೊಂಡು ಕಡುವಾತ್ಸಲ್ಯದಿಂದ ಅವನನ್ನು ಕುರಿತು—ಭಕ್ತೋತ್ತಮಾ, ಸುಪ್ರಿಯಾ, ನನಗೆ ನೀನು ಅತ್ಯಂತ ಪ್ರೀತ್ಯಾಸ್ಪದನಾಗಿರುವದರಿಂದ ಸುಪ್ರಿಯನೆಂಬ ಈ ನಿನ್ನ ನಾಮವು ನಿನ್ನ ದೇಹದೊಂದಿಗೆ ಇಂದು ಸಾರ್ಥಕವಾಯಿತು. ಪರಮ ಪುಣ್ಯಶಾಲಿಯಾದ ನಿನ್ನ ಯೋಗದಿಂದ ಇಲ್ಲಿರುವ ನಿನ್ನ ಅನುಯಾಯಿಗಳುಸಹ ಧನ್ಯರಾದರು. ನನ್ನ ದರ್ಶನದಿಂದ ಇವರಿಗೆ ಎಂದೂ ದುರ್ಗತಿಯು ಸಿದ್ಧಿಸಲಾರದು. ನೀನಂತೂ ನನ್ನ ಅನುಗ್ರಹಕ್ಕೆ ಪಾತ್ರನೇ ಇರುವೆಯಾದ್ದರಿಂದ ನಿನಗೆ ಬೇಕಾದವರಗಳನ್ನು ಬೇಡಿಕೋ, ಎಂದು ನುಡಿಯಲು, ಸುಪ್ರಿಯನು ಪರಮಾನಂದದ ಭರದಲ್ಲಿ ಕೈಮುಗಿದು—ಭಗವನ್ ಭವಾನೀಪತೇ, ಭಕ್ತಸಂಕಟಹಾರಕನಾದ ನಿನ್ನ ದರ್ಶನದಿಂದಲೇ ನಾನು ಧನ್ಯನಾದೆನು; ಪರಮಾನಂದರಸಾಸ್ವಾದದಿಂದಸಂತೃಪ್ತನಾದ ನನಗೆ ನಿನ್ನ ಯಾವ ಪದದ ಇಚ್ಛೆಯೂ ಉಳಿದಿರುವದಿಲ್ಲವಾದ್ದರಿಂದ ನಾನು ಯಾವ ವರಗಳನ್ನು ಬೇಡಲಿ? ಆದರೂ ಕೊಡಬೇಕೆನ್ನುವದೇ ನಿನ್ನ ಮನಸ್ಸಿನಲ್ಲಿದ್ದರೆ ಈಗಿದ್ದ ನನ್ನ ಇದೇ ವೃತ್ತಿಯು ನನ್ನಲ್ಲಿ ಕಡೆಯವರೆಗೆ ಉಳಿಯುವಂತೆ ಮಾಡಿ ನನ್ನ ಈ ಬಂಧುಗಳಿಗೆ ಸದ್ಗತಿಯು ಸಿದ್ಧಿಸುವಂತೆ ಅನುಗ್ರಹಿಸು, ಹಾಗೂ ಕರುಣಾಳುವಾದ ನೀನು ಇಂದಿನಂತೆ ಎಂದಿಗಾದರೂ ನಿನ್ನ ಭಕ್ತಜನರ ಭವಪಾಶಗಳನ್ನು ದೂರಮಾಡುತ್ತ ಈ ಶಾಂಭವಿಯೊಡನೆ ಇದೇ ಸ್ಥಳದಲ್ಲಿ ವಾಸಿಸು, ಎಂದು ಪ್ರಾರ್ಥಿಸಲು, ಭಗವಂತನು ಗಂಭೀರವಾಣಿಯಿಂದ"ನಿನ್ನ ಮನೋರಥವು ಪೂರ್ಣವಾಗುವ"ದೆಂದು ವರಪ್ರದಾನ ಮಾಡಿ ಗಿರಿಜೆಯೊಡನೆ ಅಂತರ್ಧಾನ ಹೊಂದಿ ಅದೇ ಸ್ಥಳದಲ್ಲಿ ಲಿಂಗಾಕಾರನಾಗಿ ತೋರಹತ್ತಿದನು.

# ೯ ವಿಶ್ವನಾಥ_ಲಿಂಗೋತ್ಪತ್ತಿ.

ಸಾನಂದಮಾನಂದವನೇ ವಸಂತಮಾನಂದಕಂದಂ ಹತಪಾಪವೃಂದಮ್ ‖
ವಾರಾಣಸೀನಾಥಮನಾಥನಾಥಂ ಶ್ರೀವಿಶ್ವನಾಥಂ ಶರಣಂ ಪ್ರಪದ್ಯೇ ‖ ೯ ‖



**ವಿವೇಕಶೀಲಾ**, ಇನ್ನು ನಿನಗೆ ಲೋಕವಿಶ್ರುತವಾದ ವಾರಾಣಸೀಕ್ಷೇತ್ರದಲ್ಲಿ ಭಗವಾನ್ ಶಂಕರನು ತನ್ನ ಅತ್ಯಂತ ಪ್ರೀತಿಯುಸ್ಥಾನವಾದ ಕೈಲಾಸವನ್ನು ಬಿಟ್ಟು ವಿಶ್ವೇಶ್ವರನೆಂಬ ನಾಮದಿಂದ ಹ್ಯಾಗೆ ಅವತರಿಸಿದನೆಂಬ ಮನೋಹರ ಇತಿಹಾಸವನ್ನು ಹೇಳುವೆನು ಕೇಳು. ಇಲ್ಲಿಂದ ಉತ್ತರಕ್ಕೆ ವಿಂಧ್ಯ–ಹಿಮಾಲಯಗಳ ಮಧ್ಯದಲ್ಲಿ ಜಗದ್ವಿಖ್ಯಾತವಾದ ಕಾಶೀಕ್ಷೇತ್ರವು ಸಾಕ್ಷಾತ್ ಕೈಲಾಸಪತಿಯ ಆವಾಸಸ್ಥಾನವಾಗಿ ಸಕಲ ಪ್ರಾಣಿಗಳಿಗೆ ಅತ್ಯಂತ ತಾರಕವಾಗಿರುವದೆಂಬದನ್ನು ನೀನು ಬಲ್ಲೆಯಷ್ಟೆ? ಮಹಾ ಮಹಾ ಪಾತಕಿಗಳಿಗೆ ಸಹ ಮುಕ್ತಿಪ್ರದವಾಗಿರುವದರಿಂದ ಈ ಕ್ಷೇತ್ರದ ಮಹಿಮೆಯು ಅವರ್ಣನೀಯವಾಗಿರುವದು. ಅನ್ಯ ಕ್ಷೇತ್ರಗಳಲ್ಲಿ ಹೊಂದಲಶಕ್ಯವಾದ ಸಾಯುಜ್ಯಮುಕ್ತಿಯನ್ನು ಪ್ರಾಣಿಗಳು ಈ ಕ್ಷೇತ್ರದಲ್ಲಿ ಸಹಜವಾಗಿ ಹೊಂದುವರು “ **येषां क्वापि गतिर्नास्ति तेषां वाराणसीपुरी** ” ಎಂಬಂತೆ ಎಂಥ ಪಾಪಿಗಳಿದ್ದರೂ ಅವರ ಪಾಪಗಳನ್ನು ದೂರಮಾಡಿ ಅವರನ್ನು ಸದ್ಗತಿಗೆ ಮುಟ್ಟಿಸುವ ಕ್ಷೇತ್ರವು ಜಗತ್ತಿನಲ್ಲಿ ಇದು ಒಂದೇ ಒಂದಾಗಿರುವದು. ಆದುದರಿಂದಲೇ ಭಗವಾನ್ ವ್ಯಾಸರು ಶಿವಪುರಾಣದಲ್ಲಿ “ ಕಾಶೀ ” ಎಂಬ ಶಬ್ದಕ್ಕೆ “ **कर्मणां कर्षणात्काशी** ” ಅಂದರೆ ಪ್ರಾಣಿಗಳ ದುಷ್ಕರ್ಮಗಳನ್ನು ಕರ್ಷಣಮಾಡಿ ಅರ್ಥಾತ್ ಪುಣ್ಯಜನ ಲಭ್ಯವಾದ ಶ್ರೇಷ್ಠಪದಕ್ಕೆ ಮುಟ್ಟಿಸುವದೆಂಬದಾಗಿ ವಿಗ್ರಹಮಾಡಿರುವರು. ಅದರಲ್ಲಿಯೂ, ಪಂಚಕ್ರೋಶೀ ಕ್ಷೇತ್ರವೂ, ಮಣಿಕರ್ಣಿಕಾತೀರ್ಥವೂ ಅತ್ಯಂತ ತಾರಕವಾದವುಗಳು. ಈ ಸ್ಥಳಗಳಲ್ಲಿ, ಪ್ರಾಣಿಗಳ ಕೋಟಿಹತ್ಯಾದೋಷವನ್ನು ಸಹ ಹೊಡೆದುಹಾಕುವ ಪವಿತ್ರತೆಯು ಈವೊತ್ತಿಗೂ ಜಾಗ್ರತವಾಗಿರುವದು. ಇಲ್ಲಿ ಮರಣಹೊಂದಿದ ಪ್ರತಿಬಬ್ಬನು ತಾರಕಮಹಾಮಂತ್ರೋಪದೇಶದಿಂದ ಉದ್ಧೃತನಾಗುವನು. ಆದುದರಿಂದ ಸರ್ವರೂ, ಈ ಸ್ಥಳದಲ್ಲಿ ತಮ್ಮ ಮರಣವಾಗಬೇಕೆಂದು ಯಾವಾಗಲೂ ಇಚ್ಛಿಸುತ್ತಿರುವರು. ಇನ್ನು ಈ ಸ್ಥಳಗಳಿಗೆ ಅನಾದಿಕಾಲದಿಂದ ಇಂಥ ಪವಿತ್ರನಾಮಗಳು ಹೇಗೆ ಪ್ರಾಪ್ತವಾದವೆಂಬದನ್ನು ಸ್ವಲ್ಪದರಲ್ಲಿಯೇ ನಿನಗೆ ಹೇಳುವೆನು ಕೇಳು.

ಮೊದಲು ಅಂದರೆ ಈ ಚರಾಚರ ಸೃಷ್ಟಿಯ ಉತ್ಪತ್ತಿಗಿಂತಲೂ ಪೂರ್ವದಲ್ಲಿ ನಿರ್ಗುಣ–ನಿರ್ವಿಕಾರವಾದ ಸದ್ವಸ್ತುವು ಒಂದೇಒಂದಾಗಿತ್ತು. ಆ ನಿರ್ಗುಣ ಚಿದ್ವಸ್ತುವಿನಿಂದ ಪ್ರಕೃತಿಪುರುಷರ ಉತ್ಪತ್ತಿಯಾಗಿ ಆ ಪ್ರಕೃತಿ–ಪುರುಷರ ಇಚ್ಛೆಯಿಂದ ಆದಿನಾರಾಯಣನ ಅವತಾರವಾಯಿತು. ಆಗ ಅವನಿಗೆ ‘ನೀನು ನಿನ್ನ ತಪೋಬಲದಿಂದ ಅವಾಚ್ಯವಾದ ಸೃಷ್ಟಿಯನ್ನು ರಚಿಸು’ ಎಂದು ಆಜ್ಞಾಪಿಸಿ, ಅವನ ತಪೋನುಷ್ಠಾನಕ್ಕಾಗಿ

ಸದಾಶಿವನು ಪಂಚಕ್ರೋಶಪವಿತ್ರವಾದ ಒಂದು ಸ್ಥಳವನ್ನು ಮಾಡಿಕೊಟ್ಟನು. ಮುಂದೆ ನಾರಾಯಣನು ಸದ್ವಸ್ತುವಿನ ಆಜ್ಞೆಯಂತೆ ಬಹುದಿವಸಗಳ ವರೆಗೆ ಆಸ್ಥಳದಲ್ಲಿ ತಪಸ್ಸು ಮಾಡಹತ್ತಿ ಅತ್ಯಂತ ಪರಿಶ್ರಾಂತನಾಗಲು, ಆ ತಪಃಶ್ರಮದಿಂದ ಅವನ ಸರ್ವಾಂಗದಲ್ಲಿ ಬೆವರೊಡೆದು ಬೆವರಿನ ಹನಿಗಳು ಒಂದೇಸವನೆ ಸೋರಹತ್ತಿ ಅದರಿಂದ ಸುತ್ತಲಿನ ಪ್ರದೇಶವೆಲ್ಲ ಜಲಮಯವಾಗಿ ತಾನು ಕುಳಿತಿರುವ ಪಂಚಕ್ರೋಶಿಯೂ ಕ್ರಮವಾಗಿ ಆ ನೀರಿನಲ್ಲಿ ಮುಳುಗಹತ್ತಿತು. ಆಗ ನಾರಾಯಣನು ನಿರಾಧಾರನಾಗಿ ತನ್ನ ಯೋಗ ಸಾಮರ್ಥ್ಯದಿಂದ ಅದೇ ಜಲದಲ್ಲಿ ಮಲಗಿಬಿಟ್ಟನು. ಅಂದಿನಿಂದಲೇ ಇವನಿಗೆ "ಜಲಶಾಯಿ" ಎಂಬ ಹೆಸರು ಬಂದಿತು.

ಹೀಗೆ ನಾರಾಯಣನ ಸ್ವೇದೋದಕದಲ್ಲಿ ಮುಳುಗಹತ್ತಿರುವ ಆ ಪಂಚಕ್ರೋಶಿಯನ್ನು ನೋಡಿ ಪರಶಿವನು ತನ್ನ ತ್ರಿಶೂಲಾಗ್ರದಿಂದ ಅದನ್ನು ಎತ್ತಿ ಹಿಡಿದನು. ಆಗ ಅದು ನಿರಾಧಾರವಾಗಿ ಆಕಾಶಮಧ್ಯದಲ್ಲಿಯೇ ನಿಂತುಕೊಂಡಿತು. ಇತ್ತ ಶಿವಾಜ್ಞೆಯಂತೆ ನಾರಾಯಣನು ಜಲದಲ್ಲಿಯೇ ತಪಸ್ಸುಮಾಡಿ ತನ್ನ ನಾಭಿಕಮಲದಿಂದ ಸೃಷ್ಟಿಕರ್ತೃವಾದ ಬ್ರಹ್ಮದೇವನನ್ನು ನಿರ್ಮಿಸಿ ಆತನಿಂದ ಈ ಅಖಿಲ ಬ್ರಹ್ಮಾಂಡಗಳನ್ನು ನಿರ್ಮಾಣಗೊಳಿಸಿದನು. ಹೀಗೆ ತನ್ನ ಇಚ್ಛೆಯಂತೆ ಸೃಷ್ಟಿಯು ಸಿದ್ಧವಾಗಲು ಸಚ್ಚಿದಾನಂದ ಘನನಾದ ಸದಾಶಿವನಿಗೆ ಸಂತೋಷವಾಗಿ ತನ್ನ ಅದ್ವಿತೀಯವಾದ ಶಿವತೇಜವನ್ನು ಎಲ್ಲ ಕಡೆಗೂ ಹರವಿ ಸಕಲ ಪ್ರಾಣಿಗಳ ಯೋಗಕ್ಷೇಮದ ಮಹಾಕಾರ್ಯವನ್ನು ತಾನು ಸ್ವತಃ ವಹಿಸಿಕೊಂಡನು; ಅಂತೇ ಇವನಿಗೆ ಅಖಿಲಾಂಡಕೋಟಿ ಬ್ರಹ್ಮಾಂಡನಾಯಕನೆಂಬ ಗೌರವದ ನಾಮವು ಪ್ರಾಪ್ತವಾಯಿತು. ಹೀಗೆ ಸಕಲ ಜೀವರಾಶಿಗಳ ಯೋಗಕ್ಷೇಮವನ್ನು ವಹಿಸಿದ ಮೇಲೆ ಸದಾಶಿವನು ತನ್ನ ಮನಸ್ಸಿನಲ್ಲಿ—ಎಲಾ, ಈ ಬ್ರಹ್ಮಾಂಡದಲ್ಲಿ ಪ್ರಾಣಿಗಳು ತಮ್ಮ ತಮ್ಮ ಕರ್ಮಪಾಶಗಳಿಂದ ಬದ್ಧರಾಗಿ ಅನೇಕ ದುಷ್ಕರ್ಮಗಳ ಯೋಗದಿಂದ ಆನಂದಘನನಾದ ನನ್ನನ್ನು ಕಾಣದೆ ನಿರಾಶ್ರಯರಾಗಿ ಅಧೋಗತಿಗೆ ಹೋಗಹತ್ತಿದರಲ್ಲ! ಇದಕ್ಕೆ ಉಪಾಯವೇನೆಂದು ಯೋಚಿಸಿ ಭಗವಂತನು ತಾನು ಪೂರ್ವದಲ್ಲಿ ತ್ರಿಶೂಲಾಗ್ರದಿಂದ ಎತ್ತಿಹಿಡಿದ ಆ ಪಂಚಕ್ರೋಶಾತ್ಮಕವಾದ ಪುಣ್ಯಭೂಮಿಯನ್ನು ಮೃತ್ಯುಲೋಕದಲ್ಲಿ ಇಳಿಸಿದನು. ಆವೊತ್ತಿನಿಂದಲೇ ಈ ಸ್ಥಳದಲ್ಲಿ ಪುಣ್ಯಕರ್ಮಗಳನ್ನು ಮಾಡಿ ಪ್ರಾಣಿಗಳು ಉದ್ಧೃತರಾಗಹತ್ತಿದರು ಈ ಸ್ಥಳಕ್ಕೆ ಯಾರಿಂದಲೂ ಯಾವಕಾಲಕ್ಕೂ ನಾಶವಿಲ್ಲ. ಸ್ವಯಂಭು ಬ್ರಹ್ಮನ ಆಯುರ್ಮರ್ಯಾದೆಯು ಮುಗಿದು ಹೋಗಿ ಮಹಾಪ್ರಲಯಕಾಲವು ಪ್ರಾಪ್ತವಾದಾಗ ಅವಿನಾಶಿಯಾದ ಸದಾಶಿವನು ಇದನ್ನು ತ್ರಿಶೂಲಾಗ್ರದಿಂದ ಎತ್ತಿಹಿಡಿದು, ಪುನಃ ಬ್ರಹ್ಮದೇವನ ಹೊಸಸೃಷ್ಟಿಯಾದಾಗ ಇದನ್ನು ಮತ್ತೆ ಕೆಳಗೆ ಬಿಡುವನು. ಪಾಪಬಹುಲವಾದ ಈ ಮೃತ್ಯುಲೋಕಕ್ಕೆ ಎಷ್ಟುಮಾತ್ರವೂ ಇದರ ಸಂಪರ್ಕವಿಲ್ಲ. ಆದುದರಿಂದಲೇ ಈ ಸ್ಥಳವು ತುಸುಎತ್ತರವಾಗಿದ್ದು ಒಂದು ಗೊಡಿಯಕಾಳಷ್ಟು ಈ ನರಲೋಕಕ್ಕೆ ಬಿಟ್ಟಿರುವದೆಂದು ಪುರಾಣಾಂತರದಲ್ಲಿ ಹೇಳಿರುವದು. ಇಂಥ ಈ ಪರಮಪವಿತ್ರವಾದ ಸ್ಥಳದಲ್ಲಿ

  

ಭಗವಾನ್ ಶಂಕರನು ಲೋಕಸಂರಕ್ಷಣೆಗಾಗಿ ಅನಾದಿ ಕಾಲದಿಂದಲೇ ಅವಿಮುಕ್ತೇಶನೆಂಬ ಹೆಸರಿನ ಸ್ವಾಂಶಸಂಭೂತನಾದ ಒಬ್ಬ ಗಣಾಧ್ಯಕ್ಷನನ್ನು ಪರಿವಾರದೊಡನೆ ಸ್ಥಾಪಿಸಿರುವನು.

ವಿವೇಕಶೀಲಾ, ಇನ್ನು ಮಣಿಕರ್ಣಿಕೆಯ ಮಹಿಮೆಯಾದರೂ ಇದೇ ಪ್ರಕಾರದ್ದಾಗಿರುವದು. ಇದನ್ನು ಸ್ವಲ್ಪದರಲ್ಲಿ ಹೇಳಿಬಿಡುವೆನು ಕೇಳು. ಹಿಂದೆ ನಿನಗೆ ನಾರಾಯಣನು ಶಿವಾಜ್ಞೆಯಿಂದ ಪಂಚಕ್ರೋಶಿಯಲ್ಲಿ ಕುಳಿತು ತಪಸ್ಸು ಮಾಡಹತ್ತಿದನೆಂತಲೂ, ಅವನ ತಪಃಪ್ರಭಾವದಿಂದ ಅವನ ನಾಭಿಕಮಲದಿಂದ ಬ್ರಹ್ಮನ ಉತ್ಪತ್ತಿಯಾಗಿ ಅವನಿಂದ ಸೃಷ್ಟಿ ರಚನೆಯಾಯಿತೆಂತಲೂ ನಾನು ಹೇಳಿದೆನಷ್ಟೇ! ಅದರೆ ಇವನ ನಾಭಿ ಕಮಲದಿಂದ ಉದ್ಭವಿಸಿದ ಬ್ರಹ್ಮನು ನಾರಾಯಣನ ದೇದೀಪ್ಯಮಾನವಾದ ದೇಹಕಾಂತಿಯನ್ನು ನೋಡಿ ಸಾಶ್ಚರ್ಯಚಕಿತನಾಗಿ ತಲೆಯಲ್ಲಾಡಿಸಲು, ಅವನ ಕಿವಿಯೊಳಗಿನ ಅನರ್ಘ್ಯವಾದ ನೀಲಮಣಿಯು ಕಳಚಿ ಕೆಳಗೆ ನೀರಲ್ಲಿಬಿದ್ದಿತು. ಹೀಗೆ ಬ್ರಹ್ಮನ ಕರ್ಣದಲ್ಲಿದ್ದ ಮಣಿಯು ಈ ಸ್ಥಳದಲ್ಲಿ ಬಿದ್ದಿರುವದರಿಂದ ಇದಕ್ಕೆ "ಮಣಿಕರ್ಣಿಕಾ" ಎಂಬ ಹೆಸರು ಪ್ರಾಪ್ತವಾಯಿತು.

ವಿವೇಕಶೀಲಾ, ಇನ್ನು ವಿಶ್ವೇಶ್ವರನ ಜ್ಯೋತಿರ್ಲಿಂಗೋತ್ಪತ್ತಿಯನ್ನು ಹೇಳುವೆನು ಕೇಳು. ಹಿಂದಕ್ಕೊಮ್ಮೆ ಸದಾಶಿವನು ಭವಾನಿಯೊಡನೆ ಕೈಲಾಸದಿಂದ ಹೊರಟು ಲೋಕಶಿಕ್ಷಣಾರ್ಥವಾಗಿ ಸ್ವರ್ಗ ಮೃತ್ಯು ಪಾತಾಳಾದಿ ಲೋಕಗಳಲ್ಲಿ ಸಂಚರಿಸಿ ಮುಂದೆ ಬ್ರಹ್ಮಲೋಕದಲ್ಲಿ ಬ್ರಹ್ಮನಸಭಾಸ್ಥಾನಕ್ಕೆ ಪ್ರಾಪ್ತನಾದನು. ಆಗ ಬ್ರಹ್ಮದೇವನು ಶಿವಭವಾನಿಯರನ್ನು ಬಹುಮಾನಪುರಃಸರವಾಗಿ ಕರೆತಂದು ಸ್ವಾಸನದಲ್ಲಿ ಕುಳ್ಳಿರಿಸಿ ಆತಿಥ್ಯಧರ್ಮಾನುಸಾರವಾಗಿ ಷೋಡಶೋಪಚಾರಗಳಿಂದ ಅವರನ್ನು ಪೂಜಿಸಿದಮೇಲೆ ತನ್ನ ನಾಲ್ಕು ಮುಖಗಳಿಂದ ಅವರನ್ನು ಸ್ತುತಿಸಹತ್ತಿದನು. ಆಗ ಶಿವನು ಸಂತೋಷಪಟ್ಟು ಅವನನ್ನು ಅಭಿನಂದಿಸಿ ಪಾರ್ವತಿಯೊಡನೆ ಇನ್ನು ಹೊರಡಬೇಕೆನ್ನುವಷ್ಟರಲ್ಲಿ ಬ್ರಹ್ಮನು ಎದ್ದುನಿಂತು ತನ್ನ ಐದನೆಯ ಮುಖದಿಂದ ಶಿವ–ಭವಾನಿಯರಿಗೆ ಅವಾಚ್ಯಭಾಷಣಗಳನ್ನಾಡಹತ್ತಿದನು. ಆಗ ಶಂಕರನು ಸಮಾಧಾನದಿಂದ—ಎಲೈ ಸುರಜ್ಯೇಷ್ಠಾ, ಬ್ರಹ್ಮಾ, ಹೀಗೆ ಮಾತಾಡುವದು ಸೃಷ್ಟಿಕರ್ತೃವಾದ ನಿನಗೆ ಎಷ್ಟುಮಾತ್ರವೂ ಯೋಗ್ಯವಲ್ಲ, ಎಂದು ಬಹುಪ್ರಕಾರವಾಗಿ ಹೇಳಿದರೂ ಬ್ರಹ್ಮನು ಕೇಳಲಿಲ್ಲ. ಆಗ ಲೋಕಶಿಕ್ಷಕನಾದ ಸದಾಶಿವನು ಸಿಟ್ಟಿಗೆದ್ದು ದುರ್ಭಾಷಿಯಾದ ಆ ಬ್ರಹ್ಮನ ಐದನೆಯ ದುರ್ಮುಖವನ್ನು ತನ್ನ ಪಿನಾಕದಿಂದ ತತ್ಕ್ಷಣದಲ್ಲಿ ತುಂಡರಿಸಿ ಚಲ್ಲಿದನು. ಆಗ ಬ್ರಹ್ಮನ ಭಯಂಕರವಾದ ರುಂಡವು ಧೊಪ್ಪನೆ ಕೆಳಗೆ ಬಿದ್ದು, ಅದರೊಳಗಿನ ತಲೆಬುರುಡೆಯು ಬೇರೆಯಾಗಿ ಅದು ಶಿವನನ್ನು ಬಾಧಿಸಹತ್ತಿತು. ಆಗ ಶಿವನು ಸಮರ್ಥನಿದ್ದರೂ ಒಬ್ಬ ಸಾಮಾನ್ಯಪುರುಷನಂತೆ ಪಾರ್ವತಿಯೊಡನೆ ಭಯಚಕಿತನಾಗಿ ಓಡಹತ್ತಿದನು. ಆ ಬ್ರಹ್ಮಕಪಾಲವು ಅವನ ಬೆನ್ನುಬಿಡಲಿಲ್ಲ. ಕಡೆಗೆ ಅವನು ಇದರ ಮುಕ್ತಿಗಾಗಿ ಸಕಲಲೋಕಗಳನ್ನು ಸಂಚರಿಸಿ ಭೂಲೋಕಕ್ಕೆ ಬಂದು ಪುಣ್ಯತರವಾದ ವಾರಾಣಸೀ ಕ್ಷೇತ್ರವನ್ನು ಪ್ರವೇಶಿಸಿದನು. ಆಗ ಭರದಿಂದ

ಬೆನ್ನು ಹತ್ತಿದ ಆ ಬ್ರಹ್ಮಕಪಾಲವು ಶಿವನ ಬೆನ್ನು ಬಿಟ್ಟು ಅವನೊಡನೆ ಒಳಗೆ ಪ್ರವೇಶಿಸುವ ಧೈರ್ಯವಾಗದೆ ತಳಮಳಿಸುತ್ತ ಕಾಶೀಕ್ಷೇತ್ರದ ಹೊರಮಗ್ಗಲಿಗೆ ಒಂದೇ ಸವನೆ ಸುತ್ತು ವರೆಯುಹತ್ತಿತು. ಇತ್ತ ಶಂಕರನು ತನ್ನ ಈ ಕೃತಿಯಿಂದ ಸಕಲ ಲೋಕಗಳಲ್ಲಿ ಕಾಶೀ ಕ್ಷೇತ್ರವು ಅತ್ಯಂತ ಪುಣ್ಯತರವಾದದ್ದೆಂಬ ಆಶಯವನ್ನು ಪ್ರಕಟಗೊಳಿಸುತ್ತ ಭವಾನಿಯೊ ಡನೆ ತಾನುಪೂರ್ವದಲ್ಲಿ ಸ್ಥಾಪಿಸಿದ ಅವಿಮುಕ್ತೇಶ್ವರನ ಬಳಿಗೆಬಂದನು. ಆಗ ಶಿವಾಂಶ ಸಂಭೂತನಾದ ಆ ಗಣೇಶ್ವರನು ಭವ್ಯಾಕಾರದಿಂದ ಎದ್ದು ಬಂದು ಜಗದ್ವಂದ್ಯರಾದ ಶಿವ ಭವಾನಿಯರನ್ನು ಭಕ್ತಿಪುರಃಸರವಾಗಿ ಪೂಜಿಸಿ ಪ್ರದಕ್ಷಿಣೆ ನಮಸ್ಕಾರಗಳಿಂದ ಅವರನ್ನು ಸಂತೋಷಗೊಳಿಸಿದ ಮೇಲೆ ವಿನಯದಿಂದ ಶಿರಬಾಗಿಸಿ ಪರಮಾತ್ಮನನ್ನು ಕುರಿತು—ಭಗವನ್, ಚರಾಚರಗುರೋ, ಅಖಿಲಲೋಕವಂದ್ಯನಾದ ನಿನ್ನ ದರ್ಶನದಿಂದ ನಾನು ಪುನೀತ ನಾದೆನು. ಇದರಂತೆಯೇ ಇನ್ನು ಮುಂದಾದರೂ ನಿರಂತರವಾಗಿ ನಿನ್ನ ಮಂಗಲ ದರ್ಶ ನವು ನನಗೂ ನಿನ್ನ ಭಕ್ತರಿಗೂ ಲಭಿಸುವಂತೆ ನೀನು ನಿನ್ನ ಪರಿವಾರದೊಡನೆ ಸ್ಥಿರವಾಗಿ ಇದೇ ಸ್ಥಳದಲ್ಲಿ ವಾಸಿಸು; ಯಾಕಂದರೆ ಕರುಣಾಳುವಾದ ನೀನು ಕರ್ಮಪಾಶಬದ್ಧರಾದ ಅಖಿಲ ಜೀವರಾಶಿಗಳ ಉದ್ಧಾರಕ್ಕಾಗಿಯೇ ಮೊದಲು ಈ ಸ್ಥಳವನ್ನು ನಿರ್ಮಿಸಿರುವೆಯಾ ದ್ದರಿಂದ ನಿನ್ನ ವಾಸವು ಈ ಸ್ಥಳದಲ್ಲಿ ಬೇಕೇ ಬೇಕು. ನಿನ್ನ ವಾಸವಿಲ್ಲದ ಈ ಸ್ಥಳವು ಪ್ರಾಣಿಗಳಿಗೆ ಎಂದೂ ತಾರಕವೆನಿಸದು. ಆದುದರಿಂದ ದೇವಾ, ಗಂಗಾ ಗಿರಿಜೆಯರೊಡನೆ ನೀನು ನಿರಂತರವಾಗಿ ಇಲ್ಲಿ ವಾಸಿಸಿ ನನ್ನ ಮನೋರಥವನ್ನು ಪೂರ್ಣಗೊಳಿಸೆಂದು ಪ್ರಾರ್ಥಿ ಸಲು, ಕೃಪಾಘನನಾದ ಉಮಾಧವನು ಭಕ್ತೋತ್ತಮನ ಸವಿನಯ ಪ್ರಾರ್ಥನೆಯಂತೆ ಲೋಕೋಪಕಾರಕ್ಕಾಗಿ ವಿಶ್ವೇಶ್ವರನೆಂಬ ನಾಮದಿಂದ ಲಿಂಗಾಕಾರನಾಗಿ ವಾಸಿಸಹತ್ತಿ ದನು. ಸಕಲವಿಶ್ವದ ಯೋಗ್ಯತೆಗಿಂತ ಈ ಕಾಶೀಕ್ಷೇತ್ರದಯೋಗ್ಯತೆಯು ಅಧಿಕವಾ ಗಿದ್ದು, ಈ ಮಹಾಕ್ಷೇತ್ರಕ್ಕೆ ಇವನು ಈಶ್ವರನಾಗಿರುವದರಿಂದಲೂ, ವಿಶ್ವದ ಉತ್ಪತ್ತಿ-ಸ್ಥಿತಿ-ಲಯ ಕರ್ತೃವಾಗಿರುವದರಿಂದಲೂ ಈ ಜ್ಯೋತಿರ್ಲಿಂಗಕ್ಕೆ ವಿಶ್ವೇಶ್ವರನೆಂಬ ದಿವ್ಯ ನಾಮವು ಸುಪ್ರಸಿದ್ಧವಾಯಿತು.

ಹೀಗೆ ಸಿದ್ಧ ಮುನೀಶ್ವರನು ವಿಶ್ವೇಶ್ವರನ ವಿಮಲ ಚರಿತ್ರವನ್ನು ಹೇಳಿ ಸುಮ್ಮನಾ ಗಲು, ಸುಪ್ರಸನ್ನಚಿತ್ತನಾದ ವಿವೇಕಶೀಲನು ಪರಮೋತ್ಸಾಹದಿಂದ ತನ್ನ ಗುರುಗಳನ್ನು ಕುರಿತು—ಸದ್ಗುರೋ, ಜಗದ್ಗುರುವಾದ ವಿಶ್ವೇಶ್ವರನ ಈ ಮಹಿಮೆಯನ್ನು ಕೇಳಿ ನನ್ನ ಜನ್ಮವು ಸಫಲವಾಯಿತು. ಆದರೆ ತಾವು ಹೇಳಿದ ಈ ವಿಷಯದಲ್ಲಿ ನನ್ನ ಅಜ್ಞಾನದ ಮೂಲಕ ಕೆಲವು ಸಂಶಯಗಳು ಉತ್ಪನ್ನವಾಗಿರುವವು. ಸತ್ಯಲೋಕವಾಸಿಯಾದ ಬ್ರಹ್ಮನ ವೇದಪುನೀತವಾದ ಮುಖದಿಂದ ಜಗದ್ವಂದ್ಯನಾದ ಪರಮಾತ್ಮನ ವಿಷಯವಾಗಿ ಅಂಥ ಅವಾಚ್ಯ ಭಾಷಣಗಳು ಏಕೆ ಹೊರಬಿದ್ದವು? ಹೊರಬಿದ್ದರೂ ಶಾಂತಿಸಾಗರನಾದ ಶಂಕರನು ಅವನ್ನು ಕ್ಷಮಿಸಲಿಲ್ಲವೇಕೆ! ಇದರಂತೆಯೇ ಸರ್ವತಂತ್ರ ಸ್ವತಂತ್ರನೂ, ಸರ್ವಾ ಧಾರನೂ, ಸರ್ವಶಕ್ತಿಮಯನೂ ಆದ ಭಗವಾನ್ ಸದಾಶಿವನು ಬ್ರಹ್ಮನ ಆ ಶಿರಃಕ ಪಾಲವನ್ನು ಹುಂಕಾರಮಾತ್ರದಿಂದ ಕ್ಷಣಾರ್ಧದಲ್ಲಿ ಸುಟ್ಟು ಬೂದಿ ಮಾಡಬಹುದಾಗಿದ್ದು,

ಒಬ್ಬ ಸಾಮಾನ್ಯಮನುಷ್ಯನಂತೆ ಆತನು ಅಂಜಿ ಓಡಬೇಕೇ? ಹಾಗೂ ಸರ್ವಮಂಗಲಾಧಾರನಾದ ಇವನ ಪವಿತ್ರ ನಾಮೋಚ್ಚಾರದಿಂದಲೇ ಪ್ರಾಣಿಗಳ ಪಾತಕಗಳು ತೊಳೆದುಹೋಗುವಾಗ, ಸ್ವತಃ ತಾನು ಬ್ರಹ್ಮಹತ್ಯೆಯ ಮಹಾಪಾತಕಕ್ಕೆ ಗುರಿಯಾದ ಕಾರಣವೇನು! ಎಂಬೀ ಸಂಗತಿಗಳ ರಹಸ್ಯವು ನನಗೆ ಸ್ಪಷ್ಟವಾಗಿ ತಿಳಿಯಲಿಲ್ಲ.

ಶಿಷ್ಯನ ಈ ಸಂಶಯಗಳನ್ನು ಕೇಳಿ ಸಿದ್ಧ-ಮುನೀಶ್ವರರು—ವಿವೇಕಶೀಲಾ, ಸುರಜ್ಯೇಷ್ಠನಾದ ಬ್ರಹ್ಮನ ಮುಖದಿಂದ ಅಂಥ ಅವಾಚ್ಯ ಭಾಷಣಗಳು ಹೊರಡಲಿಕ್ಕೆ ಭಗವತೀ ಸರಸ್ವತಿಯ ಶಾಪವೇ ಕಾರಣವು. ಸರಸ್ವತಿಯನ್ನು ಸೃಷ್ಟಿಸಿದ ಬಳಿಕ ಬ್ರಹ್ಮನು ತನ್ನ ಮಗಳೆಂದು ನೋಡದೆ ಆಕೆಯ ರೂಪಕ್ಕೆ ಮೋಹಿತನಾಗಿ ಕಾಮಬಾಧೆಯಿಂದ ಆಕೆಗೆ ಅಭದ್ರ ಮಾತುಗಳನ್ನು ಆಡಹತ್ತಿದನು. ಅವನ್ನು ಕೇಳಿ ಸರಸ್ವತಿಯು ಕ್ರೋಧಸಂತಪ್ತಳಾಗಿ ಬ್ರಹ್ಮನನ್ನು ಕುರಿತು—ಎಲಾ ದಿಟ್ಟ ಪುರುಷಾ ಬ್ರಹ್ಮಾ, ನಿರ್ಲಜ್ಜತನದಿಂದ ಹೀಗೆ ಮಗಳ ಬೆನ್ನಹತ್ತಿ ಅವಾಚ್ಯ ಭಾಷಣಗಳನ್ನು ಮಾಡಿದೆಯಾದ್ದರಿಂದ ಈವೊತ್ತಿನಿಂದ ನೀನು ಇದರಂತೆಯೇ ನಿರಂತರವಾಗಿ ದುರ್ಭಾಷಿಯಾಗೆಂದು ಶಾಪಕೊಟ್ಟಳು. ಅಂದಿನಿಂದಲೇ ಬ್ರಹ್ಮನು ತನ್ನ ಐದನೆಯ ಮುಖದಿಂದ ಅವಾಚ್ಯ ಭಾಷಣಗಳನ್ನಾಡಹತ್ತಿ, ಈ ಮೊದಲೆ ಹೇಳಿದಂತೆ ಪ್ರಸಂಗವಶಾತ್ ಶಂಕರನ ಕೋಪಕ್ಕೆ ಪಾತ್ರನಾದನು. ಅವನ ಈ ಅಪರಾಧವನ್ನು ಭಗವಾನ್ ಶಂಕರನು ಸಹಿಸಬಹುದಾಗಿತ್ತು; ಆದರೆ ವೇದಪ್ರವರ್ತಕನಾದ ಬ್ರಹ್ಮನಂಥ ಪವಿತ್ರ ಪುರುಷನಿಗೆ ಇಂಥ ಅಪವಿತ್ರ ಮುಖವಿರುವದು ಯೋಗ್ಯವೋ? ಆದ್ದರಿಂದಲೇ ಬ್ರಹ್ಮನ ಕಲ್ಯಾಣಕ್ಕಾಗಿ ಆ ಶಿರಸ್ಸನ್ನು ಖಂಡಿಸಬೇಕಾಯಿತು.

ವಿವೇಕಶೀಲಾ, ಸರ್ವತಂತ್ರ ಸ್ವತಂತ್ರನಾದ ಸದಾಶಿವನಲ್ಲಿ ಕಪಾಲದಾಹಕ ಶಕ್ತಿಯು ಇರುವದರ ವಿಷಯವಾಗಿ ಸಂಶಯವೇಕೆ? ಆದರೆ ಲೋಕಗುರುವಾದ ಆ ಭಗವಂತನೇ ಶ್ರುತಿಸ್ಮೃತ್ಯುಕ್ತ ನಿಯಮಗಳ ಉಲ್ಲಂಘನ ಮಾಡಿದರೆ ಅನ್ಯರು ಅವನ್ನು ನಡೆಸುವ ಬಗೆಹೇಗೆ? ಆದ್ದರಿಂದ ಲೋಕ ಶಿಕ್ಷಾರ್ಥವಾಗಿಯೂ, ಕಾಶೀಕ್ಷೇತ್ರದ ಮಹಿಮೆಯನ್ನು ತನ್ನ ಆಚರಣೆಯಿಂದ ವ್ಯಕ್ತಮಾಡುವದಕ್ಕಾಗಿಯೂ ಬ್ರಹ್ಮಹತ್ಯೆಗೆ ಅಂಜಿ ಕಾಶೀವಾಸದಿಂದ ಅದನ್ನು ಆತನು ದೂರಮಾಡಿಕೊಳ್ಳಬೇಕಾಯಿತು. ಒಟ್ಟಿಗೆ ಜಗತ್ಕಲ್ಯಾಣವೇ ಭಗವಂತನ ಉದ್ದೇಶವೆಂದು ತಿಳಿದುಕೋ! ಲೋಕಾಧ್ಯಕ್ಷನೂ, ಲೋಕಪ್ರವರ್ತಕನೂ ಆದ ಈತನೇ ಕುಳಿತು ಕ್ಷೇತ್ರಾದಿಗಳ ದರ್ಶನದಿಂದ ತನ್ನ ಬ್ರಹ್ಮಹತ್ಯೆಯ ದೋಷವನ್ನು ಕಳೆದುಕೊಳ್ಳದಿದ್ದರೆ ಉಳಿದ ಅಜ್ಞಜನರಿಗೆ ಇವನ ಈ ಆಚರಣೆಯೇ ಪ್ರಮಾಣಭೂತವಾಗಿ ಅವರಾದರೂ ನಿಷ್ಪಾಪನಾದ ಇವನಂತೆಯೇ ಪ್ರಾಯಶ್ಚಿತ್ತಾದಿ ಕರ್ಮಗಳನ್ನು ಬಿಟ್ಟುಕೊಟ್ಟು ಅಧೋಗತಿಗೆ ಹೋಗಬೇಕಾದೀತಲ್ಲ. ಹೀಗೆ ಮಾಡುವದರಿಂದ ಇವನೇ ಕುಳಿತು ಧರ್ಮಸಾಂಕರ್ಯವನ್ನುಂಟುಮಾಡಿ ತನ್ನ ಕೈಯಿಂದಲೇ ತಾನು ಪ್ರಜರ ನಾಶಮಾಡಿದ ಮಹಾನ್ ಅನರ್ಥಕ್ಕೆ ಗುರಿಯಾಗಬೇಕಾದೀತು. ಸರ್ವರೂ ತಮ್ಮ ಪಾಪಪುಣ್ಯಗಳ ವಿಷಯವಾಗಿ ಜಾಗ್ರತರಾಗಿ ಧರ್ಮಗ್ರಂಥಗಳಲ್ಲಿ ಹೇಳಿದ ಪ್ರಾಯಶ್ಚಿ

ಶ್ತ್ರಾದಿಗಳನ್ನು ಮಾಡಿ ತದ್ದ್ವಾರಾ ಧರ್ಮಾತ್ಮರಲ್ಲಿಯೂ ಧರ್ಮಗ್ರಂಥಗಳಲ್ಲಿಯೂ ಸದ್ಭಾವನೆಯು ನೆಲಿಸಿ ಉತ್ತರೋತ್ತರ ಕಲ್ಯಾಣವಾಗಬೇಕೆಂಬ ಸದ್ಧೇತುವೇ ಮುಖ್ಯ ಕಾರಣವಾಗಿರುವದಲ್ಲದೆ, ಪೂರ್ಣಕಾಮನಾದ ಆ ಪರಮಾತ್ಮನಲ್ಲಿ ಅನ್ಯಯಾವ ಇಚ್ಛೆಯೂ ಇರುವದಿಲ್ಲ. ಅಥವಾ, " ಅತೀತಃಪಂಥಾನಂ ತವಚಮಹಿಮಾ ವಾಙ್ಮನಸಯೋರತದ್ವ್ಯಾವೃತ್ತ್ಯಾಯಂ ಚಕಿತಮಭಿಧತ್ತೇ ಶ್ರುತಿರಪಿ " ಎಂಬಂತೆ ವಾಙ್ಮನಸ್ಸುಗಳಿಗೆ ನಿಲುಕದವನೂ, ಅಚಿಂತ್ಯ ವೈಭವನೂ, ಆದ ಆ ಅಂಬಿಕಾಧವನ ಅಗಾಧ ಲೀಲೆಗಳ ಮರ್ಮವನ್ನು ಅರಿಯುವವನಾದರೂ ಯಾವನು? ಯಾವ ಪರಮಾತ್ಮನ ಅನಂತಕಲ್ಯಾಣ ಗುಣಗಣಗಳ ವರ್ಣನೆಯಲ್ಲಿ ಅಪೌರುಷೇಯವಾದ ವೇದಗತಿಯು ಸಹ ಕುಂಠಿತವಾಗಿ ಹೋಗಿರುವದೋ, ವಿಶ್ವಾತಿಗನಾದ ಆ ಶಂಕರನ ಗುಣಗಣಗಳನ್ನು ವರ್ಣಿಸುವ ಪಾಮರನು ನಾನೆಷ್ಟರವನು? ಆದರೂ ಪರಮಭಾವಿಕನಾದ ನಿನ್ನ ಚಿತ್ತವೃತ್ತಿಯ ಪ್ರಸನ್ನತೆಗಾಗಿ ಶಿವನ ಚರಿತ್ರವು ದುರ್ಜ್ಞೇಯವಾಗಿರುವದೆಂಬಸಂಗತಿಯನ್ನೇ ಇನ್ನಿಷ್ಟು ವರ್ಣಿಸುವೆನು ಕೇಳು; ಯಾಕೆಂದರೆ ಪರಮಾತ್ಮನು ದುರ್ಜ್ಞೇಯನಿರುವನೆಂಬ ಸಂಗತಿಯೇ ಮೊದಲು ನಮಗೆ ಗೊತ್ತಿರುವದಿಲ್ಲವಾದ್ದರಿಂದ ಅದನ್ನು ನಾವು ಮೊದಲು ತಿಳಿದುಕೊಳ್ಳಬೇಕು. ಇದನ್ನು ತಿಳಿದುಕೊಳ್ಳಬೇಕಾದರೂ ನಮಗೆ ಎಷ್ಟೋ ದಿವಸಗಳು ಬೇಕಾಗುವವು. " ಯೋನಸ್ತದ್ವೇದ ತದ್ವೇದ ನೋನವೇದೇತಿ ವೇದಚ " ಎಂಬ ಶ್ರುತ್ಯರ್ಥದಂತೆ ಯಾವನು ನಿರಭಿಮಾನದಿಂದ ನಾನು ಪರಮಾತ್ಮನನ್ನು ತಿಳಿದಿರುವದಿಲ್ಲವೆಂದು ಹೇಳುವನೋ ಅವನೇ ನಿಜವಾಗಿ ಪರಮಾತ್ಮಜ್ಞಾನವುಳ್ಳವನಲ್ಲದೆ, ಪರಮಾತ್ಮನನ್ನು ನಾನು ಎಂದೋ ತಿಳಿದಿರುವೆನೆಂದು ಹೇಳಿಕೊಳ್ಳುವವನಿಗೆ ಎಂದಿಗೂ ಪರಮಾತ್ಮನ ಜ್ಞಾನವಾಗಲಾರದು. ಆದುದರಿಂದ ಪರಮಾತ್ಮನು ಹ್ಯಾಗೆ ದುರ್ಜ್ಞೇಯನಾಗಿರುವನೆಂಬದನ್ನು ನಿನಗೆ ಹೇಳುವೆನು ಕೇಳು.

ಯಾವ ಪರಮಾತ್ಮನು ವೈರಾಗ್ಯದ ಪರಮಾವಧಿಗೆ ಮುಟ್ಟಿ ತನ್ನ ವೈರಾಗ್ಯವನ್ನು ಕೆಡಿಸಬಂದ ಮನ್ಮಥನನ್ನು ಕ್ಷಣಾರ್ಧದಲ್ಲಿ ಸುಟ್ಟು ಬೂದಿಗೊಳಿಸಿದನೋ, ಅದೇ ಕಾಮಾಂತಕನು ತನ್ನ ದೇಹಾರ್ಧದಲ್ಲಿ ನಿರಂತರವಾಗಿ ಲೋಕಸುಂದರಿಯಾದ ಪಾರ್ವತಿಯನ್ನು ಧರಿಸಿ ಶೃಂಗಾರರಸದ ಪರಮಾವಧಿಗೆ ಮುಟ್ಟಿದನು. ಯಾವ ಮಹಾತ್ಮನು ಮಹಾಮೃತ್ಯುಸ್ವರೂಪವಾದ ಕಾಲಕೂಟ ವಿಷವನ್ನು ಲೀಲಾಮಾತ್ರದಿಂದ ಕಂಠದಲ್ಲಿ ಧರಿಸಿ ಚರಾಚರಾತ್ಮಕವಾದ ಈ ಸೃಷ್ಟಿಯನ್ನು ರಕ್ಷಿಸಿದನೋ, ಅವನೇ ಮೃತ್ಯುಂಜಯನೆಂಬ ಗೌರವದ ನಾಮಹೊಂದಿ ಭಕ್ತಜನರ ಮೃತ್ಯುಪಾಶಗಳನ್ನು ಹರಿದು ಚಲ್ಲುವನು. ಹಾಗೂ ಇವನು ಭೂತ ಪಿಶಾಚಿಗಳೊಂದಿಗೆ ದಿಗಂಬರನಾಗಿ ಶ್ಮಶಾನದಲ್ಲಿ ಸಂಚರಿಸಿದರೆ, ಇವನ ಭಕ್ತರು ವೈಭವಶಾಲಿಗಳಾದ ಮಿತ್ರರೊಂದಿಗೆ ದಿವ್ಯವಸ್ತ್ರಧಾರಿಗಳಾಗಿ ರಾಜಗೃಹದಲ್ಲಿ ಸಂಚರಿಸುವರು. ಇವನ ಗಣವು ಭೂತಗಳಾದರೆ ಇವನ ಭಕ್ತರಿಗೆ ಚತುರಂಗ ಬಲವು. ಇವನ ಕಂಠಾಭರಣವು ರುಂಡಮಾಲೆಯಾದರೆ ಇವನ ಭಕ್ತರ ಕಂಠಗಳಲ್ಲಿ ಮುತ್ತಿನ ಮಾಲೆಗಳು. ಇವನ ವಾಹನವು ವೃದ್ಧ ವೃಷಭವಾದರೆ ಇವನ ಭಕ್ತರ ವಾಹನಗಳು ಗಜತುರಂಗಗಳು. ಇವನು ಬಾರಿಸುವದು ಗಲ್ಲವಾದ್ಯವಾದರೆ ಇವನ

ಭಕ್ತರ ವಾದ್ಯಗಳು ವೀಣಾ—ಮೃದಂಗಾದಿಗಳು. ಇವನ ಶಿರೋವೇಷ್ಟನವು ಜಡೆಗಟ್ಟಿರುವ ಜಟೆಗಳಾದದ್ದಾದರೆ ಇವನ ಭಕ್ತರ ವೇಷ್ಟನೆಯು ಜರತಾರಿಯ ಬಟ್ಟೆಗಳದು. ಇವನ ಆಭರಣಗಳು ಕುಟಿಲ ಸರ್ಪಗಳಾದರೆ ಭಕ್ತರ ಆಭರಣಗಳು ಕಟಕಕುಂಡಲಾದಿಗಳು. ಇವನು ಉಡುವ ಬಟ್ಟೆಯು ವ್ಯಾಘ್ರಾಂಬರವಾದರೆ ಇವನ ಭಕ್ತರ ಉಡುಗರೆಗಳು ಪಟ್ಟವಸ್ತ್ರದವು. ಅಂದಮೇಲೆ ವಿವೇಕಶೀಲಾ, ಇಂಥ ಅಲೌಕಿಕ ವೃತ್ತಿಯ ಮಹಾಮಹಿಮನ ವಿಚೇಷ್ಟಿತೆಯನ್ನು ಯಾರರಿಯಬೇಕು ? " ಕ್ರೀಡಾರ್ಥಂ ಸೃಜಸಿ ಪ್ರಪಂಚಮಖಿಲಂ ಕ್ರೀಡಾಮೃಗೋಯಂ ಜನಾಃ" ಎಂಬಂತೆ ಈ ಅಖಿಲ ಬ್ರಹ್ಮಾಂಡವು ನಟರಾಜನಾದ ಈ ಸದಾಶಿವನ ಕ್ರೀಡಾಭವನವಾಗಿದ್ದು, ನಾವೆಲ್ಲರೂ ಇವನ ಕ್ರೀಡಾಮೃಗಗಳಾಗಿ ಜನಿಸಿರುವೆವು. ಹೀಗಿರಲು ನಮ್ಮಲ್ಲಿ ಯಾವ ಸ್ವಾತಂತ್ರ್ಯವಿದೆ! ಕ್ರೀಡಾಕುಶಲನಾದ ಇವನು ಓಡಿಸಿದತ್ತ ಓಡಿ ನಿಲ್ಲಿಸಿದತ್ತ ನಿಂತು ಇವನು ಮಾಡಿದ್ದನ್ನು ಮಾಡಿಸಿಕೊಂಡು ಒಂದುದಿನ ನಾವೆಲ್ಲರೂ ಇವನ ಅಮೋಘವಾದ ಮಾಯಾಘನಪಟಲದಲ್ಲಿ ಅಡಗಿಹೋಗುವವರು. ಆದ್ದರಿಂದ ಅಜ್ಞರಾದ ನಾವು ಅಚಿಂತ್ಯ ವೈಭವನಾದ ಆ ಅನಂತನ ಅಂತಹುಚ್ಚನ ಹುಚ್ಚುತನಕ್ಕೆ ಹೋಗದೆ ಕೇವಲವಾಗಿ "ಯಾದೃಶೋಸಿ ಮಹಾದೇವ ತಾದೃಶಾಯ ನಮೋ ನಮಃ" ಎಂಬ ಮಹಾತ್ಮರ ಉಕ್ತಿಯಂತೆ ಅನಿರ್ವಚನೀಯನಾದ ಇವನು ಯಾವ ಸ್ವರೂಪದಿಂದಿರುವನೋ ಅದೇ ಸ್ವರೂಪಕ್ಕೆ ಭಕ್ತಿಯಿಂದ ಶತಶಃ ಸಹಸ್ರಶಃ ನಮಸ್ಕರಿಸಿ ನಾವು ಧನ್ಯರಾಗೋಣ!

## ೧೦ ತ್ರ್ಯಂಬಕೇಶ—ಲಿಂಗೋತ್ಪತ್ತಿ.

ಸಹ್ಯಾದ್ರಿ ಶೀರ್ಷೇ ವಿಮಲೇ ವಸಂತಂ ಗೋದಾವರೀತೀರ ಪವಿತ್ರದೇಶೇ ॥
ಯದ್ದರ್ಶನಾತ್ಪಾತಕ ಮಾಶುನಾಶಂ ಪ್ರಯಾತಿತಂ ತ್ರ್ಯಂಬಕಮೀಶಮೀಡೇ ॥೧೦॥

ವಿವೇಕಶೀಲಾ, ಇನ್ನು ನಿನಗೆ ತ್ರ್ಯಂಬಕೇಶ ಜ್ಯೋತಿರ್ಲಿಂಗೋದ್ಭವ ಮಹಿಮೆಯನ್ನು ಹೇಳುವೆನು ಕೇಳು. ಇಲ್ಲಿಂದ ಉತ್ತರಕ್ಕೆ ಗೋದಾವರೀ ತೀರದಲ್ಲಿ ಬ್ರಹ್ಮಗಿರಿಯೆಂಬ ಒಂದು ಸಣ್ಣ ಪರ್ವತವಿದ್ದು, ಆ ಪರ್ವತದ ಕೆಳಭಾಗದ ಒಂದು ಆಶ್ರಮದಲ್ಲಿ ಋಷಿಶ್ರೇಷ್ಠನಾದ ಗೌತಮನು ತನ್ನ ಧರ್ಮಪತ್ನಿಯಾದ ಅಹಲ್ಯೆಯೊಡನೆ ವಾಸಿಸಿದ್ದನು. ಅವನು ಅಸ್ಥಳದಲ್ಲಿ ಹತ್ತುಸಾವಿರ ವರ್ಷಗಳವರೆಗೆ ತಪಸ್ಸು ಮಾಡಿದನು. ಮುಂದೆ ಕೆಲಕಾಲದಮೇಲೆ ಅವನ ಆಶ್ರಮದ ಸುತ್ತಲೂ ಒಂದೇ ಸವನೆ ಹಲವು ವರ್ಷಗಳವರೆಗೆ ಮಳೆಯಾಗದೆ ದೊಡ್ಡ ಬರಬಿದ್ದಿತು. ಆ ಅವಧಿಯಲ್ಲಿ ಅನ್ನ ನೀರಿನ ತಾಪದಿಂದ ಎಷ್ಟೋ ಜನ ಋಷಿಗಳೂ, ಋಷಿಪತ್ನಿಯರೂ, ಪಶುಪಕ್ಷಿಗಳೂ ಮರಣಹೊಂದಿ, ಎಲ್ಲ ಕಡೆಗೆ ಹಾಹಾಕಾರ ಉಂಟಾಯಿತು. ಇದನ್ನು ನೋಡಿ ಆಶ್ರಮದೊಳಗಿನ ಎಲ್ಲ ತಪಸ್ವಿಗಳು

ಸುವೃಷ್ಟಿಗಾಗಿ ತಪಸ್ಸು ಮಾಡಹತ್ತಿದರು. ಇತ್ತ ಗೌತಮನಾದರೂ ಸಮಾಧಿಯನ್ನೇರಿಸಿ ಲೋಕೋಪಕಾರಕ್ಕಾಗಿ ಜಲಾಧಿಪತಿಯಾದ ವರುಣನನ್ನು ಆರಾಧಿಸಹತ್ತಿದನು. ಹೀಗೆ ಅವನು ಆರುತಿಂಗಳವರೆಗೆ ಒಂದೇಮನಸ್ಸಿನಿಂದ ಆರಾಧಿಸಲು, ಭಗವಾನ್ ಪ್ರಚೇತನು ಪ್ರಸನ್ನನಾಗಿ ಗೌತಮನನ್ನು ಕುರಿತು—ಋಷಿಪುಂಗವಾ, ನಿನ್ನ ಕಠಿಣತರವಾದ ತಪಸ್ಸಿಗಾಗಿ ನಾನು ಮೆಚ್ಚಿದೆನು; ಆದರೆ ನಿನಗೆ ಬೇಕಾದ ವರಗಳನ್ನು ನೀನು ಬೇಡಿಕೊಳ್ಳಬಹುದೆಂ"ದು ನುಡಿಯಲು, ಯೋಗಿಶ್ರೇಷ್ಠನಾದ ಗೌತಮನು ವಿನಯದಿಂದ ಶಿರಬಾಗಿಸಿ ಅವನನ್ನು ಕುರಿತು—ದೇವಾ, ನನಗೆ ಈಗ ಬೇಕಾದದ್ದು ವಿಪುಲವಾದ ವೃಷ್ಟಿಯು, ಇದಿಲ್ಲದಿರುವದರಿಂದ ಎಲ್ಲ ಕಡೆಗೆ ಬರಬಿದ್ದು ಹೊಟ್ಟೆಗಿಲ್ಲದೆ ಪ್ರಾಣಿಗಳು ಮೃತ್ಯು ಪಂಥವನ್ನು ಹಿಡಿಯಬೇಕಾಗಿದೆ. ಆದ್ದರಿಂದ ಪ್ರಾಣಿಮಾತ್ರದ ಜೀವನ ಸರ್ವಸ್ವವಾದ ಈ ಉದಕವು ಸಮೃದ್ಧವಾಗುವಂತೆ ಈ ಸ್ಥಳದಲ್ಲಿ ವೃಷ್ಟಿಗರಿಸಬೇಕೆಂದು ಪ್ರಾರ್ಥಿಸಲು, ವರುಣನು ತುಸುಹೊತ್ತು ಯೋಚಿಸಿ ಸಮಾಧಾನದಿಂದ—ಮಹರ್ಷೇ, ಲೋಕಹಿತಕ್ಕಾಗಿ ಪ್ರಯತ್ನಿಸುವ ನಿನ್ನ ವರಪ್ರಾರ್ಥನೆಯಂತೆ ನಾನು ಜಲಸಮೃದ್ಧಿಯನ್ನು ಮಾಡಿಕೊಡಬಹುದು; ಆದರೆ ಭಗವದಾಜ್ಞೆಯ ವಿರುದ್ಧವಾಗಿ ಈಗಲೇ ನನಗೆ ಮಳೆಗರಿಸುವದಕ್ಕೆ ಬರುವಹಾಗಿಲ್ಲ; ಆದ್ದರಿಂದ ಇದೊಂದು ಬಿಟ್ಟು ನೀನು ಉಳಿದ ಬೇಕಾದ ವರಗಳನ್ನು ಬೇಡಬಹುದು; ಅವನ್ನು ನಾನು ನಿರ್ವಿವಾದವಾಗಿ ಕೊಡುವೆನು.

ವರುಣನ ಈ ಚಮತ್ಕಾರದ ಭಾಷಣಗಳನ್ನು ಕೇಳಿ ಗೌತಮನು ಅಸಮಾಧಾನಪಟ್ಟು ಶಾಂತಚಿತ್ತದಿಂದ ನುಡಿದನೇನಂದರೆ—ಸುರಶ್ರೇಷ್ಠಾ, ವರುಣಾ, ನನಗೆ ಬೇಕಾಗಿರುವದೇ ವೃಷ್ಟಿಯೆಂದ ಮೇಲೆ ಇದನ್ನು ಬಿಟ್ಟು ನಾನು ಅನ್ಯವರಗಳನ್ನೇನು ಬೇಡಲಿ? ಆದ್ದರಿಂದ ಸುಪ್ರಸನ್ನನಾದ ನೀನು ನನಗೆ ವರವೀಯುವದೇ ನಿಜವಾಗಿದ್ದರೆ ಈಗ ನನಗೆ ಬೇಕಾಗಿರುವ ವಿಪುಲವೃಷ್ಟಿಯನ್ನೇ ದಯಪಾಲಿಸಲ್ಲದೆ, ಅನ್ಯಯಾವ ವರಗಳ ಆಶೆಯೂ ನನಗಿಲ್ಲ. " ಮಹತೋಹ್ಯಾಶ್ರಯಃಪುಂಸಾಂ ಮಹತ್ವಾಯೋಪಜಾಯತೇ " ಎಂಬಂತೆ ನಿಮ್ಮಂಥ ಮಹಾತ್ಮರ ಆಶ್ರಯವು ಪಾಮರರಾದ ನಮಗೆ ಬಹುಮಹತ್ವದ್ದಾಗಿರುವದು. ಸೇವಕರಿಗೆ ದೊರೆಯಬೇಕಾದ ಉಚ್ಚನೀಚ ಫಲಗಳು ಸೇವ್ಯರ ಯೋಗ್ಯತೆಯನ್ನು ಅವಲಂಬಿಸಿರುವವು. ಕ್ಷುದ್ರವಾದ ನರಿಯ ಸೇವೆಯಿಂದ ಅಸ್ಥಿಮಾಂಸಾದಿ ಹೇಯಪದಾರ್ಥಗಳನ್ನು ಸಂಪಾದಿಸುವದಕ್ಕಿಂತ, ಮೃಗರಾಜನೆನಿಸುವ ಮೃಗೇಂದ್ರನ ದಾಸ್ಯದಿಂದ ಉಪಾದೇಯವಾದ ಮುಕ್ತಾ ಫಲಗಳ ಸಮೃದ್ಧಿಯನ್ನು ಹೊಂದುವದು ಯೋಗ್ಯವಾದದ್ದಲ್ಲವೆ? ಅದಕ್ಕಾಗಿಯೇ ನಾನು ಕ್ಷುದ್ರಫಲದಾತೃಗಳಾದ ಅನ್ಯದೇವತೆಗಳನ್ನು ಬಿಟ್ಟು ಕರುಣಾಳುವಾದ ನಿನ್ನನ್ನು ಆಶ್ರಯಿಸಿರುವೆನು. ದೇವಾ, ಕಲ್ಪವೃಕ್ಷಸ್ವಭಾವದ ನಿನ್ನ ಯೋಗ್ಯತೆಯು ಅಸಾಧಾರಣವಾಗಿರುವದೆಂಬದನ್ನೂ, ಪರೋಪಕಾರ ಪರಾಯಣರಾದ ನಿಮ್ಮಂಥ ಮಹಾತ್ಮರ ಪುಣ್ಯದಿಂದಲೇ ಆಪಾಧವ್ಯವಾದ ಈ ಭೂಮಿಯು ಅಚಲವಾಗಿ ನಿಂತಿರುವದೆಂಬದನ್ನೂ ನಾನು ಪೂರ್ಣವಾಗಿ ಅರಿತಿರುವೆನಾದ್ದರಿಂದ ಈ ಬಗೆಯ ನಿನ್ನ ಮೋಹಕ್ಕೆ ನಾನು ಸಹಸಾ ಒಳಗಾಗುವದಿಲ್ಲ; ಆದ್ದರಿಂದ ಕರುಣಾಳುವಾದ ನೀನು ಮೇಲಿಂದಮೇಲೆ ಹೀಗೆ ಮೋಹಿಸದೆ ನನ್ನ ಮನೋದಯವನ್ನು ಪೂರ್ಣಗೊಳಿಸಿ.

ಗೌತಮುನ ಶಾಸ್ತ್ರ ಬದ್ಧವಾದ ಈ ಸ್ತಷ್ಟೋಕ್ತಿಗಳನ್ನು ಕೇಳಿ ವರುಣನು ಆಶ್ಚರ್ಯಪಟ್ಟು ಅತ್ಯಂತ ಆದರದಿಂದ ಅವನನ್ನು ಕುರಿತು—ಋಷಿಪುಂಗವಾ, ಸಜ್ಜನಸಮ್ಮತವಾದ ನಿನ್ನ ಈ ಭಾಷಣಗಳಿಗಾಗಿ ನಾನು ಒಪ್ಪಿಕೊಂಡೆನು. ಇನ್ನು ನಾನು ಯಾವ ಮಾತುಗಳನ್ನೂ ಆಡದೆ ನಿನ್ನ ಇಚ್ಛೆಯಂತೆ ಈಗಲೇ ನಿನಗೆ ಜಲಸಮೃದ್ಧಿಯನ್ನು ಮಾಡಿಕೊಡುವೆನು; ಆದರೆ ಈಗ ಸದ್ಯಕ್ಕೆ ಈ ಸ್ಥಳದಲ್ಲಿ ವಿಪುಲವೃಷ್ಟಿಯ ಯೋಗವಿಲ್ಲದಿದ್ದರೂ ಪರ್ಯಾಯದಿಂದ ನಾನು ನಿನ್ನ ಇಚ್ಛೆಯಂತೆ ಜಲಸಮೃದ್ಧಿಯ ಯೋಗವನ್ನು ತಂದುಕೊಡುವೆನು. ಮೊದಲು ನೀನು ನಿನಗೆ ಬೇಕಾದಸ್ಥಳದಲ್ಲಿ ನಿನ್ನ ಕೈಯಿಂದಲೇ ದೊಡ್ಡದೊಂದು ತಗ್ಗುತೋಡು. ಈ ಕೆಲಸವು ಪೂರ್ಣವಾದಮೇಲೆ ನಿನ್ನ ಇಚ್ಛೆಯನ್ನು ಪೂರ್ಣಮಾಡುವೆನು, ಎಂದು ನುಡಿಯಲು, ವರುಣನ ಹೇಳಿಕೆಯಂತೆ ಮುಂದೆ ತುಸುಹೊತ್ತಿನಲ್ಲಿಯೇ ಗೌತಮನು ತನ್ನ ಯೋಗಸಾಮರ್ಥ್ಯದಿಂದ ಆಳವಾದ ಒಂದು ತಗ್ಗು ತೋಡಿದನು. ಆಗ ವರುಣನು ಸುಪ್ರಸನ್ನನಾಗಿ ತನ್ನ ಕೈಕಲಶದೊಳಗಿನ ಶುದ್ಧೋದಕವನ್ನು ಆ ತಗ್ಗಿನಲ್ಲಿ ಪ್ರೋಕ್ಷಿಸಲು, ಕ್ಷಣಮಾತ್ರದಲ್ಲಿ ಅದು ಶೀತಲವಾದ ಅಮೋಘ ಸ್ವಾದುಜಲದಿಂದ ತುಂಬಿ ತುಳುಕಹತ್ತಿತು. ಆಗ ವರುಣನು ಋಷೀಶ್ವರನನ್ನು ಕುರಿತು—ಮಹರ್ಷೇ, ಈ ಜಲವು ಇನ್ನು ಹೀಗೆಯೇ ಸೂರ್ಯ–ಚಂದ್ರರಿರುವವರೆಗೆ ಅಕ್ಷಯವಾಗಿ ಉಳಿಯುವದಲ್ಲದೆ, ಇದು ಸ್ವಲ್ಪಕಾಲದಲ್ಲಿ ಮಹಾತೀರ್ಥವೆನಿಸಿ ನಿನ್ನ ಹೆಸರಿನಿಂದ ಲೋಕದಲ್ಲಿ ಖ್ಯಾತಿಹೊಂದುವದು. ನಿನ್ನ ಈ ತೀರ್ಥದಲ್ಲಿ ಮಾಡಿದ ಹೋಮ, ಹವನ, ಜಪ, ತಪಾದಿಗಳು ಅಕ್ಷಯ್ಯವಾಗುವವು, ಎಂದು ನುಡಿದು ಅದೇ ಸ್ಥಳದಲ್ಲಿ ಗುಪ್ತನಾದನು. ಇತ್ತ ಗೌತಮನು ತನ್ನ ಇಚ್ಛೆಯಂತೆ ಜಲಸಮೃದ್ಧಿಯಾದದ್ದನ್ನು ನೋಡಿ ಸಂತೋಷಪಟ್ಟು ತನ್ನ ಧರ್ಮಪತ್ನಿಯಾದ ಅಹಲ್ಯೆಯೊಡನೆ ನಿತ್ಯನೈಮಿತ್ತಿಕಕರ್ಮಗಳನ್ನು ಮಾಡುತ್ತ ಸುಖವಾಗಿ ವಾಸಿಸಹತ್ತಿದನು. ಮುಂದೆ ಇವನು ಆ ನೀರಿನ ಸಹಾಯದಿಂದ ತನ್ನ ಆಶ್ರಮದ ಸುತ್ತಲು ದೇವತಾರ್ಚನೆಯ ಉಪಯೋಗಕ್ಕಾಗಿ ಪೂದೋಟವನ್ನೂ, ಅತಿಥಿ ಅಭ್ಯಾಗತರ ಉಪಚಾರಕ್ಕಾಗಿ ಹಲಸು, ಮಾವು ಮೊದಲಾದ ಫಲವೃಕ್ಷಗಳನ್ನೂ; ತನ್ನ ಹಾಗೂ ತನ್ನ ಶಿಷ್ಯವರ್ಗದ ಉಪಜೀವನಗಾಗಿ ನವಣೆ, ಗೋಧಿ, ಬತ್ತ ಮೊದಲಾದ ಧಾನ್ಯಗಳನ್ನೂ ಬೆಳೆದುಕೊಂಡು ನಿತ್ಯದಲ್ಲಿ ಅತಿಥಿ ಸೇವಾ, ಗೋಸೇವಾ ಮೊದಲಾದ ಪರೋಪಕಾರದ ಕಾರ್ಯಗಳನ್ನು ನಡಿಸಹತ್ತಿದನು. ಈ ಸುದ್ದಿಯು ಎಲ್ಲಕಡೆಗೂ ಹಬ್ಬಿ ಸುತ್ತಲಿನ ಎಲ್ಲ ಋಷಿಗಳು ಗೌತಮನ ಅನುಮತಿಯಂತೆ ಸಾಗ್ನಿಹೋತ್ರ ಸಪರಿವಾರವಾಗಿ ಆ ಸ್ಥಳಕ್ಕೆ ಬಂದು ತಮ್ಮ ತಮ್ಮ ಉಪಜೀವನಕ್ಕಾಗಿ ಬೇರೆಬೇರೆಕಡೆಗೆ ಗದ್ದೆಗಳನ್ನು ಮಾಡಿಕೊಂಡು ನಿರಾತಂಕವಾಗಿ ವಾಸಿಸಹತ್ತಿದರು.

ಹೀಗೆ ಗೌತಮನ ಪುಣ್ಯಪ್ರಭಾವದಿಂದ ಆ ಆಶ್ರಮವು ಸಕಲಪ್ರಾಣಿಗಳ ಸುಖೋಪಜೀವನದ ಆಧಾರಸ್ಥಾನವಾಗಿ ಸಕಲರಿಗೂ ಆನಂದವನ್ನೀಯುತ್ತಿರಲು, ಒಂದು ದಿನ ಮುಂಜಾವಿನ ಸಮಯದಲ್ಲಿ ಗೌತಮನು ಸ್ನಾನದ ನೀರು ತರುವದಕ್ಕಾಗಿ ಹಲವುಜನ ಶಿಷ್ಯರನ್ನು ಆ ಜಲಾಶಯಕ್ಕೆ ಕಳುಹಿದನು. ಉಳಿದ ಋಷಿಪತ್ನಿಯರೂ ನಿತ್ಯದಂತೆ ಆಸ್ಥ

ಳಕ್ಕೆ ನೀರುತುಂಬುವದಕ್ಕಾಗಿ ಬಂದಿದ್ದರು- ಆಗ ಅವರೊಳಗಿನ ಹಲವರು ತಮ್ಮ ದುಷ್ಟ ಸ್ವಭಾವಕ್ಕನುಸರಿಸಿ ಈ ಶಿಷ್ಯರಿಗೆ ನೀರುತುಂಬಗೊಡದೆ ಬಾಯಿಗೆ ಬಂದಹಾಗೆ ಮಾತ ನಾಡಿ ಅವರನ್ನು ಅಪಮಾನಗೊಳಿಸಿದರು. ಆಗ ಸುಜ್ಞರಾದ ಆ ಶಿಷ್ಯರು ಸ್ತ್ರೀಯರೊಂ ದಿಗೆ ಹೆಚ್ಚು ಮಾತುಬಳಿಸುವದು ಯೋಗ್ಯವಲ್ಲವೆಂದು ತಿಳಿದು ಹಾಗೆಯೇ ಹಿಂತಿರುಗಿ ಬಂದು ಗುರುಪತ್ನಿಯಾದ ಅಹಲ್ಯೆಗೆ ಈ ಸುದ್ದಿಯನ್ನು ತಿಳಿಸಿದರು. ಆಗ ಅವಳು ಸ್ವತಃ ಅಲ್ಲಿಯವರೆಗೆ ಹೋಗಿ ಋಷಿಪತ್ನಿಯರನ್ನು ಸಮಾಧಾನಗೊಳಿಸಿ ಶಿಷ್ಯರೊಂದಿಗೆ ನೀರುತಂದು ಪತಿಗೆ ಸಮರ್ಪಿಸಿದಳು. ಹೀಗೆ ಇವಳು ನಿತ್ಯಮುಂಜಾವಿನಲ್ಲಿ ಶಿಷ್ಯರೊಂ ದಿಗೆ ತನಗೆ ಬೇಕಾಗುವಷ್ಟು ನೀರು ತಪ್ಪದೆ ಒಯ್ಯುಹತ್ತಲು, ಉಳಿದ ಋಷಿಪತ್ನಿಯರಿಗೆ ಇದು ಸಹನವಾಗಲಿಲ್ಲ. ಅವರು ಅಹಲ್ಯೆಯೊಡನೆ ದಿನಾಲು ಕಲಹ ಬೆಳಿಸಹತ್ತಿದರು. ಆದರೂ ಆ ಸುಜ್ಞಳು ಯಾವ ಮಾತನ್ನೂ ಆಡದೆ ಶಾಂತವೃತ್ತಿಯಿಂದ ಎಲ್ಲವನ್ನೂ ಸೈರಿಸುತ್ತ ಬಂದಿದ್ದಳು. ಹೀಗಿರಲು ಅವರೊಳಗಿನ ಎಲ್ಲ ಸ್ತ್ರೀಯರೂ ಒಂದುದಿನ ಒಟ್ಟುಗೂಡಿ ತಮ್ಮ ತಮ್ಮೊಳಗೆ ಆಲೋಚಿಸಿ ತಮ್ಮ ತಮ್ಮ ಪತಿಗಳಮುಂದೆ ಅಹಲ್ಯೆಯ ವಿಷಯವಾಗಿ ಇಲ್ಲ ದ್ದೊಂದು ಹೇಳಿ ಅವರ ಮನಸ್ಸನ್ನೇ ಕೆಡಿಸಿದರು. ವಿವೇಕಿಗಳಾದ ಆ ಋಷಿಗಳ ಮನಸ್ಸು ಕಲುಷಿತವಾಗಲಿಕ್ಕೆ ಕಾಲಮಹಿಮೆಯೇ ಕಾರಣವೆಂದು ಹೇಳಬಹುದು. ವಿಪತ್ಕಾಲದಲ್ಲಿ ಆಶ್ರಯಕೊಟ್ಟದ್ದಕ್ಕಾಗಿ ಅಹಲ್ಯಾ-ಗೌತಮರಿಗೆ ಋಷಿಗಳು ಕೃತಜ್ಞರಾಗುವ ಬದಲು, ಆ ದಂಪತಿಗಳನ್ನು ಹ್ಯಾಗಾದರೂ ಮಾಡಿ ಅವರ ಆಶ್ರಮದಿಂದ ದಬ್ಬಬೇಕೆಂದು ಯೋಚಿಸ ಹತ್ತಿದರು!

ಹೀಗೆ ಗೌತಮನನ್ನು ಹೊರಗೆ ಹಾಕುವದಕ್ಕಾಗಿ ಋಷಿಗಳು ಬಹುದಿವಸಗಳವರೆಗೆ ಪ್ರಯತ್ನಿಸಿದರೂ ಅವರಿಗೆ ನಿರ್ದೋಷಿಯಾದ ಗೌತಮನಲ್ಲಿ ಯಾವ ದೋಷಗಳೂ ಕಂಡು ಬರಲಿಲ್ಲ. ಆಗ ಅವರು ಚಿಂತಾತಿಶಯದಿಂದ ತಮ್ಮ ತಮ್ಮೊಳಗೆ—ಪ್ರಿಯಬಾಂಧವರೇ, ಈ ಮಹಾತ್ಮನ ತಪೋಬಲವು ಇನ್ನೂ ಬಲಿಷ್ಠವಾಗಿರುವದರಿಂದ ಇವನಲ್ಲಿ ಯಾವ ದೋಷಗಳನ್ನೂ ಕಲ್ಪಿಸುವಹಾಗಿಲ್ಲ. ಆದ್ದರಿಂದ ಇವನ ತಪೋಬಲಕ್ಕೆ ಮೂಲಕಾರಣ ವಾದ ಇವನ ಪುಣ್ಯಾಂಶವನ್ನು ವಿಘ್ನಪರಂಪರೆಗಳಿಂದ ಕ್ಷೀಣಗೊಳಿಸಿದ ಹೊರತು ನಮ್ಮ ಕಾರ್ಯವು ನಡೆಯುವಹಾಗಿಲ್ಲ- ಬಲಿಷ್ಠವಾದ ಇವನ ಪುಣ್ಯವು ಕ್ಷೀಣವಾಗಬೇಕಾದರೂ ಅಂಥ ಬಲವಾದ ವಿಘ್ನವನ್ನೇ ನಾವು ಯೋಜಿಸಬೇಕು. ಈ ಮಹಾಕಾರ್ಯವನ್ನು ನಾವು ವಿಘ್ನೇಶ್ವರನಿಂದಲೇ ಮಾಡಿಸತಕ್ಕದ್ದು; ಯಾಕೆಂದರೆ ಇವನು ಲೋಕದಲ್ಲಿ ವಿಘ್ನ ಹರ್ತೃವೆನಿಸುವಂತೆ, ವಿಘ್ನಕರ್ತೃವೂ ಆಗಿರುವನು; ಆದ್ದರಿಂದ ಭಕ್ತಿಪರವಶನಾದ ಇವ ನನ್ನು ಒಲಿಸಿಕೊಂಡು ಇವನಿಂದ ನಮ್ಮ ಕಾರ್ಯವನ್ನು ಸಾಧಿಸಿಕೊಳ್ಳೋಣ' ಎಂದು ಯೋಚಿಸಿ, ಎಲ್ಲರೂ ಒಟ್ಟುಗೂಡಿ ಒಂದು ಪವಿತ್ರವಾದ ಸ್ಥಳದಲ್ಲಿ ಏಕಾಗ್ರಚಿತ್ತದಿಂದ ಗಣರಾಜನನ್ನು ಆರಾಧಿಸಹತ್ತಿದರು. ಪ್ರತಿನಿತ್ಯ ಇವರು ಗೌತಮೀ ತೀರ್ಥದಲ್ಲಿ ಸ್ನಾನ ಮಾಡಿ ತಮ್ಮ ಪೂಜೆಯ ಸಲುವಾಗಿ ಶುದ್ಧ ಮೃತ್ತಿಕೆಯಿಂದ ಸಾಯುಧ ಸಶಕ್ತಿಕನಾದ ಗಜಾನನನ ಒಂದು ದಿವ್ಯ ಮೂರ್ತಿಯನ್ನು ರಚಿಸಿ ಎಲ್ಲರೂ ಅದನ್ನು ಪೂಜಿಸುತ್ತಿದ್ದರು.

ಅವರು ಹೀಗೆ ಒಂದು ವರ್ಷದವರೆಗೆ ಅವಿಚ್ಛಿನ್ನವಾಗಿ ಆರಾಧಿಸಲು, ಭಕ್ತಿಪ್ರಿಯನಾದ ಭಗವಾನ್ ವಿಘ್ನೇಶ್ವರನು ಇವರ ಆರಾಧನೆಗೆ ಮೆಚ್ಚಿ ಪಾಶಾಂಕುಶಾದಿ ದಿವ್ಯಾಯುಧ ಗಳಿಂದ ದಿಜ್ಮಂಡಲವನ್ನು ಪ್ರಕಾಶಿಸುತ್ತ ಅವರ ಮುಂದುಗಡೆಯ ಮೃಣ್ಮಯ ಮೂರ್ತಿ ಯೊಳಗಿಂದ ಒಮ್ಮೆಲೆ ಪ್ರಕಟನಾದನು. ಆಗ ಎಲ್ಲ ಋಷಿಗಳಿಗೂ ಪರಮಾನಂದವಾಗಿ ಆನಂದದ ಭರದಲ್ಲಿ ಅವರು ಒಂದೇ ಸವನೆ ಕುಣಿಯಹತ್ತಿದರು. ಆಗ ಗಣಾಧಿಪನು ವಾತ್ಸಲ್ಯದಿಂದ ಅವರನ್ನು ಕುರಿತು—"ಭಕ್ತೋತ್ತಮರೇ, ನಿಮ್ಮ ಆರಾಧನೆಯಿಂದ ನಾನು ಸುಪ್ರಸನ್ನನಾಗಿರುವೆನು; ಆದ್ದರಿಂದ ಎಲ್ಲರೂ ಕೂಡಿ ನಿಮಗೆ ಬೇಕಾದ ಒಂದೇ ವರ ವನ್ನು ಬೇಡಿಕೊಳ್ಳಿರೆಂ"ದು ನುಡಿಯಲು, ಭಕ್ತಿಪರವಶರಾದ ಋಷಿಗಳು ಸಾಷ್ಟಾಂಗವೆರಗಿ ಅತ್ಯಂತ ಲೀನತೆಯಿಂದ—ಭಗವನ್, ಸರ್ವಜ್ಞಮೂರುತಿಯಾದ ನಿನಗೆ ಅರಿಯದ ವಿಷ ಯುವಾವುದು? ಆದರೂ ನಮ್ಮ ಮುಖದಿಂದಲೇ ನೀನು ಅರಿತುಕೊಳ್ಳಬೇಕೆನ್ನುತ್ತಿದ್ದರೆ ಹೇಳುವೆವು ಕೇಳು. ನಾವಿರುವ ಈ ಆಶ್ರಮದಲ್ಲಿ ಪರಮದಾಂಭಿಕನೂ, ಪರದ್ರೋಹಿಯೂ ಆದ ಗೌತಮನೆಂಬ ಹೆಸರಿನ ಒಬ್ಬ ಋಷಿಯು ಕ್ರೂರಕರ್ಮಿಯಾದ ತನ್ನ ಧರ್ಮಪತ್ನಿಯೊ ಡನೆ ಬಹುಕಾಲದಿಂದ ವಾಸಿಸಿದ್ದು, ಇವರೀರ್ವರಿಂದ ನಮಗೂ, ನಮ್ಮ ಹೆಂಡಿರು ಮಕ್ಕ ಳುಗಳಿಗೂ ಅತ್ಯಂತ ತಾಪವಾಗಹತ್ತಿರುವದಾದ್ದರಿಂದ ನೀನು ನಿನ್ನ ವಿಘ್ನಸಾಮರ್ಥ್ಯದಿಂದ ಈ ಅಧಮನ ಅಸಹ್ಯವಾದ ತಪಸ್ತೇಜವನ್ನು ಭಂಗಗೊಳಿಸಲ್ಲದೆ, ಪತ್ನಿಯೊಡನೆ ಈತನನ್ನು ಈಗಲೇ ಆಶ್ರಮದಿಂದ ಹೊರಹೊರಡಿಸುವಂತೆ ಅನುಗ್ರಹಿಸೆಂದು ಬೇಡಿಕೊಂಡರು. ಆಗ ಈ ಅವಿಚಾರಿಗಳ ಅಸಂಬದ್ಧವಾದ ವರಪ್ರಾರ್ಥನೆಯನ್ನು ಕೇಳಿ ವಕ್ರತುಂಡನು ವಿಕಟ ಹಾಸ್ಯದೊಂದಿಗೆ ಅವರನ್ನು ಕುರಿತು—ಋಷಿವರ್ಯರೇ, ಮಹಾತಪಸ್ವಿಗಳೂ, ಪರೋಪ ಕಾರಿಗಳೂ, ಗುಣಪೂರ್ಣರೂ ಆದ ನಿಮ್ಮಲ್ಲಿ ಇಂಥ ದುಷ್ಟ ವಿಚಾರವೇಕೆ? ನಿರಪರಾಧಿ ಯಾದ ಆ ಮಹರ್ಷಿ ಗೌತಮನನ್ನು ಕೃತಘ್ನರಂತೆ ನಿಷ್ಕಾರಣವಾಗಿ ಪೀಡಿಸುವದು ನಿಮಗೆ ಉಚಿತವಲ್ಲ; ಪರಪೀಡೆಯು ಪಾಪ ಸಾಧನವಾಗಿರುವದೆಂಬ ಮಾತು ನಿಮಗೆ ಗೊತ್ತಿಲ್ಲವೋ? ಇದಲ್ಲದೆ ದೀರ್ಘಕಾಲದವರೆಗೆ ಕಷ್ಟಪಟ್ಟು ಮಾಡಿದ ಈ ನಿಮ್ಮ ತಪ ಸ್ಸಿನ ಪ್ರತಿಫಲವಾದರೂ ನಿಮಗೆ ಯೋಗ್ಯವಾಗಿ ದೊರೆಯಬೇಕಲ್ಲವೆ? ನೀವು ಮಾಡಿರುವ ಈ ಶ್ರೇಷ್ಠತಪಸ್ಸಿಗಾಗಿ ನಾನು ಸಾಲೋಕ್ಯಾದಿ ಮಹಾ ಮೋಕ್ಷಗಳನ್ನು ಸಹ ಕೊಡುವ ಹಾಗಿದ್ದು, ಪರಪೀಡೆಯ ಈ ಕ್ಷುದ್ರವರಗಳನ್ನು ಬೇಡಿ ನಿಮ್ಮ ಗೌರವವನ್ನು ನೀವೇ ಕಡಿಮೆ ಮಾಡಿಕೊಳ್ಳುವಿರಲ್ಲ! ಅಜ್ಞರಲ್ಲಿ ಪರೋತ್ಕರ್ಷಸಹಿಷ್ಣುತೆಯ ಗುಣವಿಲ್ಲದಿರುವದರಿಂದ ಅವ ರಿಗೆ ಮಹಾತ್ಮರ ಉತ್ಕರ್ಷದಿಂದ ಅತ್ಯಂತದುಃಖವಾಗಿ ನಿರಪರಾಧಿಗಳಾದ ಆ ಮಹಾತ್ಮ ರಿಗೆ ದುಃಖ ಕೊಡುವದೊಂದು ತಮ್ಮ ದುಃಖಶಾಂತಿಯ ಉಪಾಯವಾಗಿರುವದೆಂದು ಅವರು ತಿಳಿದುಕೊಳ್ಳುವರು. ಆದರೆ ಸತ್ವನಿಷ್ಠರಾದ ಸಜ್ಜನರು ಸುಖದುಃಖಾದಿ ದ್ವಂದ್ವಗಳಿಗೆ ಒಳಗಾಗದೆ ಅಜ್ಞಜನರಿಂದಾದ ಈ ದುಃಖವು ಮುಂದೆ ನಮ್ಮ ಕಲ್ಯಾಣಕ್ಕಾಗಿಯೇ ಇರುವದೆಂದು ತಿಳಿದು ಸಂತೋಷಪಡುವರಲ್ಲದೆ, ಇವರ ಈ ಅಜ್ಞಾನವನ್ನು ದೂರಮಾಡಿ ಇವರ ಆತ್ಮಕ್ಕೆ ಶಾಶ್ವತವಾದ ಸುಖಶಾಂತಿಯನ್ನು ದಯಪಾಲಿಸೆಂದು ಅಂತಃಕರಣ

ಪೂರ್ವಕವಾಗಿ ಪರಮಾತ್ಮನನ್ನು ಬೇಡಿಕೊಳ್ಳುವರು. ನೀವಿರುವ ಇದೇ ಜನಪದದಲ್ಲಿ ಬಹುದಿವಸ ಮಳೆಯಾಗದೆ ಬರಬಿದ್ದು ಅನ್ನನೀರಿನ ಕೊರತೆಯಿಂದ ಬಾಯಿಬಿಡುತ್ತಿರುವ ನಿಮ್ಮೆಲ್ಲರ ಸುಖಕ್ಕಾಗಿ ಘೋರತರವಾದ ತಪಸ್ಸು ಮಾಡಿ ಭಗವಾನ್ ವರುಣನಿಂದ ಜಲ ಸಮೃದ್ಧಿಯನ್ನು ಪಡೆದು ತದ್ದ್ವಾರಾ ನಿಮ್ಮೆಲ್ಲರ ಸುಖೋಪಜೀವನೆಗಾಗಿ ಸಸ್ಯಸಮೃದ್ಧವಾದ ಎಷ್ಟೋ ಗದ್ದೆಗಳನ್ನು ಮಾಡಿಕೊಟ್ಟು ಕಲ್ಯಾಣಮಾಡಿರುವ ಈ ಗೌತಮ ಋಷಿಯಮೇಲೆ ಈಗ ನೀವು ತಿರುಗಿ ಬಿದ್ದಿರುವಿರಲ್ಲ? ಇದರಿಂದ ನೀವು ಕೃತಘ್ನತೆಯ ಪರಮಾವಧಿಗೆ ಮುಟ್ಟಿದಂತಾಗಲಿಲ್ಲವೆ? ಸ್ತ್ರೀಯಂತ್ರ–ಬಾಧಿತರಾದ ನೀವು ಇನ್ನು ಯಾವ ಪರಿಸ್ಥಿತಿಗೆ ಮುಟ್ಟೀರೆಂಬದನ್ನು ಹೇಳಲಾಗುವದಿಲ್ಲ, ಆದರೂ ನನ್ನ ಮಾತಿನಲ್ಲಿ ನಿಮ್ಮ ವಿಶ್ವಾಸವಿದ್ದರೆ, ಇನ್ನಾದರೂ ಈ ವಿಚಾರವನ್ನು ತಿರುಗಿಸಿ ನಿಮ್ಮ ನಿಜಹಿತಕ್ಕಾಗಿ ನೀವು ಪ್ರಯತ್ನಿಸಿರಿ. ನೀವು ನಿಮ್ಮ ದೃಷ್ಟಿಯಿಂದ ಎಷ್ಟು ಅಕಲ್ಯಾಣಮಾಡಿದರೂ ಆ ಮಹಾತ್ಮನಾದ ಗೌತಮನಿಗೆ ಅಕಲ್ಯಾಣವಾಗದೆ ಆತನ ದ್ರೋಹಕ್ಕೆ ಮಾತ್ರ ನೀವು ಗುರಿಯಾಗುವಿರಿ; ಆದುದರಿಂದ ಘಾತಕವಾದ ಈ ವಿಚಾರವನ್ನು ನೀವು ಈಗಲೇ ಬಿಟ್ಟುಬಿಡಿರಿ- ಮಾತ್ಸರ್ಯಮೋಹಿತರಾದ ನಿಮಗೆ ಯದ್ಯಪಿ ನಿಮ್ಮ ಲಾಭಹಾನಿಗಳ ವಿಷಯವಾಗಿ ಅಜ್ಞಾನವಿದ್ದರೂ, ಸದುಪದೇಶಗಳಿಂದ ಅದನ್ನು ದೂರಮಾಡಿ ನಿಮ್ಮ ಹಿತಮಾಡುವದು ನನ್ನ ಕರ್ತವ್ಯವಾಗಿರುವದರಿಂದ ನಾನು ಇನ್ನೂ ಒಮ್ಮೆ ಹೇಳುವೆನು, ನೀವು ಲೋಕನಿಂದ್ಯವಾಗಿರುವ ಈ ವರವನ್ನು ಬಿಟ್ಟು ಲೋಕೋಪಕಾರದ ಇಲ್ಲವೆ ಆತ್ಮೋದ್ಧಾರದ ಅನ್ಯವರಗಳನ್ನು ಬೇಡಿ ನಿಮ್ಮ ತಪಃಕ್ಲೇಶವನ್ನು ಸಫಲಗೊಳಿಸಿರಿ.

ಹೀಗೆ ದಯಾಳುವಾದ ವಿಘ್ನೇಶ್ವರನು ಬಹು ಪ್ರಕಾರವಾಗಿ ಬೋಧಿಸಿದರೂ ದುಷ್ಟ ಮನಸ್ಸಿನ ಆ ಋಷಿಗಳು ಕೇಳಲಿಲ್ಲ. ಅವರು ನಾವು ಈಗ ಬೇಡಿದ್ದನ್ನೇ ನಮಗೆ ದಯಪಾಲಿಸೆಂದು ಹಟಹಿಡಿದು ಗಟ್ಟಿಯಾಗಿ ಕುಳಿತುಕೊಂಡರು- ಆಗ ಗಣಾಧಿಪನು ಕೋಪದಿಂದ ಅವರನ್ನು ಕುರಿತು—ಋಷಿಗಳಿರಾ, ಈಶಸಂಕಲ್ಪವನ್ನು ತಪ್ಪಿಸುವವರಾರು? ಯೋಗ್ಯವೇ ಆಗಲಿ, ಅಯೋಗ್ಯವೇ ಆಗಲಿ ಭಕ್ತಾಧೀನನಾದ ನಾನು ನೀವು ಬೇಡಿದ ವರಗಳನ್ನು ಕೊಡಬೇಕಾಗುವದಾದ್ದರಿಂದ ನಾಳೆ ಬೆಳಗುಮುಂಜಾನೆ ಗೋರೂಪದಿಂದ ಗೌತಮನ ಗದ್ದೆಯಲ್ಲಿ ನಿಮ್ಮ ಮನೋರಥವನ್ನು ಪೂರ್ಣಗೊಳಿಸುವೆನೆಂದು ನುಡಿದು ತಾನು ನಿಂತಿರುವ ಸ್ಥಳದಲ್ಲಿಯೇ ಅದೃಶ್ಯನಾದನು. ಮರುದಿನ ಬೆಳಗಾಗಲು, ದುಷ್ಟವೃತ್ತಿಯ ಆ ಋಷಿಗಳು ಸಂತೋಷದಿಂದ ತಮ್ಮ ಹೆಂಡಿರೊಡನೆ ಗಣಪತಿಯು ಹೇಳಿದಂತೆ ಗೌತಮನ ಗದ್ದೆಯ ಕಡೆಗೆ ಬಂದರು. ಅವರು ಬರುವದಕ್ಕಿಂತ ಮುಂಚಿತವಾಗಿಯೇ ಒಂದು ಆಕಳು ಹಚ್ಚಗೆ ಹಸರುಮುರಿಯುವ ಆ ಬತ್ತದ ಗದ್ದೆಯಲ್ಲಿ ಮೇಯುತ್ತ ನಿಂತಿತ್ತು. ಅಷ್ಟರಲ್ಲಿ ಗೌತಮನು ತನ್ನ ಪ್ರಾತರಾಹ್ನಿಕವನ್ನು ತೀರಿಸಿ ಪ್ರತಿನಿತ್ಯದಂತೆ ಆದಿನವೂ ತನ್ನ ಗದ್ದೆಯನ್ನು ನೋಡುವದಕ್ಕಾಗಿ ಆ ಸ್ಥಳಕ್ಕೆ ಬಂದನು. ಆಕಳು ತನ್ನ ಅರ್ಧಗದ್ದೆಯನ್ನು ಮೇದಿರುವದು ಆತನ ಕಣ್ಣಿಗೆ ಬಿದ್ದಿತು. ಆಗ ಗೌತಮನು ಒಂದು ಹುಲ್ಲುಕಡ್ಡಿಯನ್ನು ತಕ್ಕೊಂಡು ಆ ಆಕಳನ್ನು ಬೆದರಿಸಬೇಕೆಂದು ಅದರ ಮೈಗೆ ಮುಟ್ಟಿಸಲು, ತತ್‌ಕ್ಷಣದಲ್ಲಿಯೇ ಅದು

ದೊಪ್ಪನೆ ನೆಲಕ್ಕೆ ಬಿದ್ದು ಚಟಪಟ ಒದ್ದಾಡಿ ಸತ್ತುಹೋಯಿತು. ಆಗ ಆ ಋಷಿಶ್ರೇಷ್ಠನು ದುಃಖಪಟ್ಟು ತನ್ನ ಧರ್ಮಪತ್ನಿಯಾದ ಅಹಲ್ಯೆಯನ್ನು ಕರೆದು ಅವಳನ್ನು ಕುರಿತು ಅಸಮಾಧಾನದಿಂದ—ಪ್ರಿಯೇ, ಪರಮಪಾಪಿಯಾದ ನನ್ನಿಂದ ಆಕಸ್ಮಾತ್ತಾಗಿ ಇಂದು ಗೋಹತ್ಯೆಯ ಮಹಾಪಾತಕವು ಸಂಭವಿಸಿತಲ್ಲ! ಇದಕ್ಕೇನು ಗತಿ! ಯಾವ ದೇವತಾಕ್ಷೋಭದಿಂದ ಹೀಗಾಗಿರಬಹುದು! ಇನ್ನು ಇದರ ದೋಷನಿವಾರಣೆಗಾಗಿ ನಾನು ಹೇಗೆ ಮಾಡಲಿ, ಯಾರು ನನ್ನನ್ನು ಉದ್ಧರಿಸಿಯಾರು! ಎಂದು ದೀನವಾಣಿಯಿಂದ ನುಡಿಯುವಾಗ ಆ ಪಾಪಭೀರುವಿನ ಕಣ್ಣೊಳಗಿಂದ ದುಃಖಾಶ್ರುಗಳು ಧಾರೆಗಟ್ಟಿ ಒಂದೇಸವನೆ ಸುರಿಯುಹತ್ತಿದವು. ಇದನ್ನು ನೋಡಿ ಸಾಧ್ವೀಶಿಖಾಮಣಿಯಾದ ಅಹಲ್ಯೆಗೂ ಪರಮಾವಧಿ ದುಃಖವಾಯಿತು. ಅಷ್ಟರಲ್ಲಿ ಋಷಿಗಳು ಅಲ್ಲಿಗೆ ಬಂದು—"ಮಹತ್ಪಾಪ! ಮಹತ್ಪಾಪವೆಂ"ದು ಕೂಗುತ್ತ ಅಹಲ್ಯಾ-ಗೌತಮರನ್ನು ಮುತ್ತಿದರು. ಹೀಗೆ ಒಮ್ಮೆಲೆ ಋಷಿಗಳು ತನ್ನನ್ನು ಬಂದು-ಮುತ್ತಿದ್ದನ್ನು ನೋಡಿ ಸರಲಹೃದಯನಾದ ಗೌತಮನಿಗೆ ದುಃಖದಲ್ಲಿಯೇ ತುಸು ಸಮಾಧಾನವಾಗಿ ಬಹುಲೀನತೆಯಿಂದ ಅವರನ್ನು ಕುರಿತು—ಮಹಾತಯರೇ, ಯೋಗ್ಯಪ್ರಸಂಗದಲ್ಲಿ ನಿಮ್ಮ ಸಮಾಗಮವಾಯಿತು. ನನ್ನ ದೌರ್ಭಾಗ್ಯದಿಂದ ಈ ಗೋವು ಕೇವಲ ಹುಲ್ಲು ಕಡ್ಡಿಯ ಸ್ಪರ್ಶದಿಂದ ಒಮ್ಮೆಲೆ ಮರಣ ಹೊಂದಿತು; ಆಕಸ್ಮಾತ್ತಾಗಿ ಘಟಿಸಿದ ಈ ಗೋಹತ್ಯಾದೋಷದಿಂದ ನಾನು ಇನ್ನು ಹ್ಯಾಗೆ ಮುಕ್ತನಾದೇನು! ಇದಕ್ಕೆ ಯಾವ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕಾದೀತು? ಎಂದು ಅವರನ್ನು ಕೇಳಿಕೊಳ್ಳಲು, ಋಷಿಗಳು—ಗೌತಮಾ, ಒಬ್ಬ ಕ್ರೂರ ಚಾಂಡಾಲನಿಂದಲೂ ಸಂಭವಿಸದ ಈ ಘೋರಕರ್ಮವನ್ನು ನೀನು ಹೇಗೆ ಮಾಡಿದೆ? ಗೋಹತ್ಯೆಯ ಪಾತಕವು ಸಾಧಾರಣವಾದದ್ದಲ್ಲ; ಇದು ಮಾತೃಹತ್ಯೆಗಿಂತಲೂ ಅಧಿಕವಾಗಿರುವದಲ್ಲದೆ, ವಧಮಾಡಿದ ಅಧಮನು ಮೃತಗೋವಿನ ಸರ್ವಾಂಗದಲ್ಲಿದ್ದ ರೋಮಸಂಖ್ಯೆಗಳಷ್ಟು ವರ್ಷ ನರಕದಲ್ಲಿ ಕೊಳೆಯಬೇಕಾಗುವದು. ಹೀಗಿದ್ದು ಮಹಾಪಾಪಿಯಾದ ನೀನು ನಮ್ಮೆಡೆಗೆ ಪ್ರಾಯಶ್ಚಿತ್ತವನ್ನು ಕೇಳಿಕೊಳ್ಳುವೆಯಲ್ಲ! ನಿನ್ನಲ್ಲಿ ವಜ್ರಲೇಪವಾಗಿಹೋದ ಈ ಪಾತಕದ ಪರಿಮಾರ್ಜನೆಯು ಇನ್ನು ಏನು ಮಾಡಿದರೂ ಆಗುವಂತಿಲ್ಲ. ನಿನ್ನ ಈ ದೇಹದ ಅಂತವಾಗುವದೇ ಇದಕ್ಕೆ ತಕ್ಕ ಪ್ರಾಯಶ್ಚಿತ್ತವಾಗಿರುವದು. ಇದನ್ನಾದರೂ ನೀನು ಈಗಲೇ ಮಾಡಿಕೊಳ್ಳತಕ್ಕದ್ದು. ಇದಾಗದ ಪಕ್ಷಕ್ಕೆ ನೀನು ಈ ಆಶ್ರಮದಲ್ಲಿ ಒಂದುಕ್ಷಣಹೊತ್ತು ಸಹ ನಿಲ್ಲಲಾಗದು. ಮಹಾಪಾತಕಿಯಾದ ನಿನ್ನ ಮುಖದರ್ಶನವು ನಮಗೆ ಸರ್ವಥಾಬೇಡ; ನಿನ್ನ ದರ್ಶನ ಮಾತ್ರದಿಂದ ನಮಗೆ ಸಚೈಲ ಸ್ನಾನದ ಪ್ರಾಯಶ್ಚಿತ್ತವಿರುವದಲ್ಲದೆ, ದುರ್ಮುಖನಾದ ನೀನು ಆಶ್ರಮದಲ್ಲಿರುವವರೆಗೆ ನಾವು ನಮ್ಮ ದೇವ-ಋಷಿ-ಪಿತೃ ಕಾರ್ಯಗಳನ್ನು ಸಹ ಮಾಡುವಹಾಗಿಲ್ಲ; ಆದ್ದರಿಂದ ನಿನ್ನ ಪತ್ನಿಯೊಡನೆ ನೀನು ಈಗಲೇ ಆಶ್ರಮದಿಂದ ಹೊರಟುಹೋಗು, ಎಂದು ಗರ್ಜಿಸಿ ಪಶ್ಚಾತ್ತಾಪ ತಪ್ತನಾದ ಆ ಗೌತಮನಿಗೆ ಮನಬಂದಂತೆ ಮಾತಾಡಹತ್ತಿದರು. ಆಗ ಸತ್ವಶೀಲರಾದ ಅಹಲ್ಯಾ-ಗೌತಮರು ಸಮಾಧಾನದಿಂದ ಋಷಿವೃಂದಕ್ಕೆ ದೂರದಿಂದಲೇ ಸಾಷ್ಟಾಂಗವೆರಗಿ ಶಿಷ್ಯರೊಡನೆ ಆಶ್ರಮದಿಂದ

ಹೊರಬಿದ್ದರು; ಹೀಗೆ ಇವರು ಆಶ್ರಮದಿಂದ ತಳಮಳಿಸುತ್ತ, ಹೋದಮರುದಿವಸವೇ ಗೌತಮೀತೀರ್ಥದ ಪವಿತ್ರತೆಯೂ, ಸ್ವಾದುಶೀತಲತ್ವಾದಿ ಗುಣಗಳೂ ಒಮ್ಮೆಲೆ ಹೊರಟು ಹೋದವು. ಪೃಥ್ವಿಯು ನಿರ್ವೀರ್ಯವಾಯಿತು, ಓಷಧಿಗಳು ನಿಸ್ಸತ್ವವಾದವು; ವೃಕ್ಷಗಳು ಫಲಿಸದಾದವು; ಕಿಂಬಹುನಾ, ಪೃಥಿವ್ಯಾದಿ ಪಂಚಮಹಾಭೂತಗಳೂ ಆ ಸ್ಥಳದಲ್ಲಿ ತಮ್ಮ ಕಾರ್ಯಮಾಡುವದಕ್ಕಾಗಿ ಹಿಂಜರಿಯಹತ್ತಿದವು.

ಹೀಗೆ ಗೌತಮನು ದುಃಖಿಸುತ್ತ ಮುಂದೆ ಒಂದು ಹರದಾರಿಯ ಅಂತರದ ಮೇಲೆ ಸಣ್ಣದೊಂದು ಪರ್ಣಕುಟಿಯನ್ನು ಹಾಕಿ ಪರಿಮಿತ ಶಿಷ್ಯರೊಂದಿಗೆ ಅಲ್ಲಿ ವಾಸಿಸಹತ್ತಿದನು. ಆದರೆ ಗೋಹತ್ಯೆಯ ಪಾಪದ ಪರಿಮಾರ್ಜನೆಯಾಗದ ಹೊರತು ದೇವ-ಪಿತೃಕರ್ಮಗಳನ್ನು ಆಚರಿಸುವದು ಶಾಸ್ತ್ರತಃ ನಿಷಿದ್ಧವಾಗಿರುವದರಿಂದ ಅಲ್ಲಿ ಇವನು ಯಾವ ಕರ್ಮಾನುಷ್ಠಾನಗಳನ್ನೂ ಮಾಡದೆ ಸುಮ್ಮನೇ ಕುತುಳಿಕೊಳ್ಳಬೇಕಾಯಿತು. ಒಂದು ದಿನ ಬೆಳಗುಮುಂಜಾನೆ ಇವನು ನಿರುತ್ಸಾಹದಿಂದ ತನ್ನ ಹಾಸಿಗೆಯಮೇಲೆ ಎದ್ದು ಕುಳಿತುಮನಸ್ಸಿನಲ್ಲಿ ಅಂದುಕೊಂಡನೇನಂದರೆ—ಹೀಗೆಯೇ ನಾನು ದಿನಾಲು ಕರ್ಮಹೀನನಾಗಿ ಕುಳಿತುಕೊಂಡರೆ ಮುಂದೆ ನನ್ನ ಗತಿಯೇನು? ಉಪದೇಶಕರಿಲ್ಲದೆ ನನ್ನ ಕರ್ಮಶುದ್ಧಿಯಂತೂ ಆಗುವಹಾಗಿಲ್ಲ; ಆದ್ದರಿಂದ ನಾನೇ ಈವೊತ್ತು ಆ ಋಷೀಶ್ವರರ ಬಳಿಗೆ ಹೋಗಿ ಸರಳಮನಸ್ಸಿನಿಂದ ಈ ವಿಷಯವಾಗಿ ಏನಾದರೂ ಪ್ರಾಯಶ್ಚಿತ್ತವನ್ನು ಕೇಳಿ ಬರಬೇಕೆಂದು ಯೋಚಿಸಿ ಪ್ರಾತರ್ವಿಧಿಯನ್ನು ತೀರಿಸಿ ಹಾಗೆಯೇ ಹೊರಟುಬಿಟ್ಟನು. ಮುಂದೆ ತಾಸುಹೊತ್ತಿನಲ್ಲಿಯೇ ಅವನು ಪೂರ್ವಾಶ್ರಮದ ಸಮೀಪಕ್ಕೆ ಬಂದನು. ಆ ದಿನ ಯಾವದೋ ಒಂದು ಕಾರ್ಯನಿಮಿತ್ತವಾಗಿ ಅಲ್ಲಿಯ ಋಷಿಗಳೆಲ್ಲ ಒಂದೇ ಸ್ಥಳದಲ್ಲಿ ನೆರೆದಿದ್ದರು. ಅದನ್ನು ಕಂಡು ಗೌತಮನು ಸಂತೋಷಪಟ್ಟು, ಅವರಿದ್ದ ನಿಟ್ಟಿನ ಹೊರಮಗ್ಗಲಿಗೆ ಬಂದು ದೂರದಿಂದಲೇ ಸಾಷ್ಟಾಂಗವೆರಗಿ ಬಹು ಲೀನತೆಯಿಂದ ನುಡಿದನೇನಂದರೆ—"ಮಹನೀಯರೇ, ನನ್ನನ್ನು ಉದ್ಧರಿಸಬೇಕು. ಪರಮಪೂಜ್ಯರಾದ ನೀವಲ್ಲದೆ ಮಹಾಪಾಪಿಯಾದ ನನ್ನನ್ನು ಉದ್ಧರಿಸುವವರಾರು? ಇನ್ನುಮೇಲೆ ನೀವು ಉಪೇಕ್ಷಿಸಿದರೆ ಈ ದೀನನು ಜೀವದಿಂದ ಉಳಿಯುವಹಾಗಿಲ್ಲ; ಆದ್ದರಿಂದ ದಯಮಾಡಿ ತಾವು ನನ್ನ ಕರ್ಮಶುದ್ಧಿಗಾಗಿ ಏನಾದರೂ ಪ್ರಾಯಶ್ಚಿತ್ತವನ್ನು ಹೇಳಿಕೊಡಬೇಕೆಂದು" ದೈನ್ಯದಿಂದ ಬೇಡಿಕೊಳ್ಳಲು, ಅವರೊಳಗಿನ ಹಲವು ವೃದ್ಧ ತಾಪಸರಿಗೆ ದಯೆಹುಟ್ಟಿ ಇವನನ್ನು ಮುಂದಕ್ಕೆ ಕರೆದು ಪ್ರೇಮದಿಂದ—ಗೌತಮಾ, ನಿನ್ನ ಈ ಘೋರಕಾರ್ಯದ ಪರಿಮಾರ್ಜನೆಯು ಸಣ್ಣ ಪುಟ್ಟ ಪ್ರಾಯಶ್ಚಿತ್ತಗಳಿಂದಾಗುವಹಾಗಿಲ್ಲವಾದ್ದರಿಂದ ಇದಕ್ಕೆ ತಕ್ಕ ಪ್ರಾಯಶ್ಚಿತ್ತಗಳನ್ನು ನಾವು ಹೇಳುವೆವು ಕೇಳು. ನೀನು ಇಲ್ಲಿಂದ ನೆಟ್ಟಗೆ ಪೂರ್ವಾಭಿಮುಖವಾಗಿ ಹೊರಟು, ನೀನು ಮಾಡಿದ ಪಾಪವನ್ನು ಎಲ್ಲಕಡೆಗೂ ಪ್ರಕಾಶಿಸುತ್ತ ಈ ಪೃಥ್ವಿಯನ್ನು ಸುತ್ತು ಹಾಕಿ ತಿರುಗಿ ಇದೇ ಸ್ಥಳಕ್ಕೆ ಬರಬೇಕು. ಆ ಮೇಲೆ ಮೌನವ್ರತವನ್ನು ಕೈಕೊಂಡು ಕಡೆಗೆ ಈ ಬ್ರಹ್ಮಗಿರಿಯನ್ನು ಭಕ್ತಿಯಿಂದ ನೂರಾಒಂದುಸಾರೆ ಸುತ್ತುವರೆಯಬೇಕು. ಇದು ಆಗದಿದ್ದರೆ ಜಗತ್ಪಾವನಳಾದ ಭಾಗೀರಥಿಯನ್ನು ಪ್ರಸನ್ನೀಕರಿಸಿಕೊಂಡು ಅವಳ ಉದಕದಲ್ಲಿ ಸ್ನಾನಮಾಡಿ

ಪರಮೇಶ್ವರನ ಕೋಟಿ ಲಿಂಗಾರ್ಚನೆಯನ್ನಾದರೂ ಭಕ್ತಿಪುರಸ್ಸರವಾಗಿ ಮಾಡಬೇಕು. ಇವೆರಡೂ ಸಾಧಿಸದಿದ್ದ ಪಕ್ಷಕ್ಕೆ ಕೇವಲ ಗಂಗಾಸ್ನಾನಮಾಡಿ ಲಿಂಗಾರಾಧನೆಗೈದರೂ ನಡೆಯುಬಹುದೆಂದು ಹೇಳಲು, ಗೌತಮನು ಸಮಾಧಾನಪಟ್ಟು ಅವರನ್ನು ಕುರಿತು ಕೃತಜ್ಞತೆಯಿಂದ—ತಪೋಧನರೇ, ತಾವು ಹೇಳಿಕೊಟ್ಟಂತೆ ಮೊದಲು ಬ್ರಹ್ಮಗಿರಿಯ ಪ್ರದಕ್ಷಿಣೆ ಮಾಡಿ ಆಮೇಲೆ ಕೋಟಿ ಲಿಂಗಾರ್ಚನೆಗೆ ಪ್ರಾರಂಭಿಸುವೆನೆಂದು ಹೇಳಿ ನಿರ್ಮಾತ್ಸರ್ಯದಿಂದ ತನ್ನ ಕರ್ಮಶುದ್ಧಿಯ ಉಪಾಯವನ್ನು ಹೇಳಿಕೊಟ್ಟ ಆ ಋಷೀಶ್ವರರನ್ನು ಕೊಂಡಾಡುತ್ತ ತನ್ನ ಸ್ಥಳಕ್ಕೆ ಬಂದು ಅಹಲ್ಯೆಯ ಮುಂದೆ ಈ ಸುದ್ದಿಯನ್ನು ಹೇಳಿ ತಾನು ಹಾಗೆಯೇ ಭೂಪ್ರದಕ್ಷಿಣೆಗಾಗಿ ಹೊರಟನು. ಮುಂದೆ ತುಸು ದಿವಸಗಳಲ್ಲಿಯೇ ಅವನ ನೂರಾಒಂದು ಗಿರಿಪ್ರದಕ್ಷಿಣೆಗಳಾಗಿ ಮುಂದೆ ಅವನು ಋಷಿಗಳ ಅಪ್ಪಣೆಯಂತೆ ಅಹಲ್ಯೆಯೊಡನೆ ಭಕ್ತಿಯಿಂದ ಕೋಟಿ ಲಿಂಗಾರ್ಚನೆಯನ್ನು ಪ್ರಾರಂಭಿಸಿದನು.

ಹೀಗೆ ಈ ಋಷಿವರನು ಮುಂದೆ ಎಷ್ಟೋ ದಿವಸಗಳವರೆಗೆ ಏಕಾಗ್ರಮನಸ್ಸಿನಿಂದ ಇದೇ ಕ್ರಮವನ್ನು ನಡಿಸಲು, ಇವನ ನಿಸ್ಸೀಮವಾದ ಭಕ್ತಿಯನ್ನು ನೋಡಿ ಭಗವಾನ್ ಸದಾಶಿವನು ಸಂತುಷ್ಟನಾಗಿ ಪ್ರದೋಷ ಕಾಲದ ಒಂದು ಮಂಗಲಕರ ಸಮಯದಲ್ಲಿ ತನ್ನ ತೇಜೋವಿಶೇಷದಿಂದ ದಿಙ್ಮಂಡಲವನ್ನು ಬೆಳಗುತ್ತ ಧ್ಯಾನಸ್ಥನಾಗಿ ಕುಳಿತ ಗೌತಮನ ಮುಂದುಗಡೆಗೆ ಪ್ರಕಟನಾದನು; ಹೀಗೆ ಒಮ್ಮೆಲೆ ಪರಮಾತ್ಮನು ಪ್ರಕಟನಾದದ್ದನ್ನು ನೋಡಿ ಪರಮ ಭಾವಿಕನಾದ ಗೌತಮನಿಗೆ ಹಿಡಿಸಲಾರದಷ್ಟು ಆನಂದವಾಯಿತು. ಭಗವದ್ದರ್ಶನದಿಂದ ಅವನ ಶುದ್ಧಾಂತಃಕರಣವು ಭಕ್ತಿರಸದಿಂದ ತುಂಬಿ ತುಳುಕಲು, ಶಿವನ ಪಾದಗಳಿಗೆ ಸಾಷ್ಟಾಂಗವೆರಗಿ ಸದ್ಗದಿತ ಕಂಠದಿಂದ ಅವನನ್ನು ಕುರಿತು—ಭಗವನ್, ದೀನಬಂಧೋ, ಅಖಿಲಲೋಕವಂದ್ಯನಾದ ನಿನ್ನ ದೀನಬಂಧುತ್ವವನ್ನು ಅಧಮಾಧಮನಾದ ನಾನು ಎಷ್ಟೆಂದು ವರ್ಣಿಸಲಿ? ದೇವಾ, ಗೋಹತ್ಯೆಯ ಘೋರಕೃತಿಯಿಂದ ಪರಮ ಪಾಪಿಯೂ, ಪತಿತನೂ ಆದ ನನ್ನನ್ನು ಅನ್ಯದೇವತೆಗಳು ಕಣ್ಣೆತ್ತಿಸಹ ನೋಡದಿರುವಾಗ ನೀನು ನನಗೆ ದರ್ಶನ ಕೊಟ್ಟೆಯಲ್ಲ! ಸರ್ವತಂತ್ರಸ್ವತಂತ್ರನೂ, ನಿರವಧಿ ಕೃಪಾಸಾಗರನೂ ಆದ ನಿನ್ನ ಅಗಾಧ ಮಹಿಮೆಯನ್ನು ಅರಿಯುವವರಾದರೂ ಯಾರು? ಆದ್ದರಿಂದ ಅಜ್ಞನೂ, ಅಮಂಗಲನೂ, ಅಧಮನೂ ಆದ ನಾನು ಕೇವಲ ಭಕ್ತಿಯಿಂದ ನಿನ್ನನ್ನು ನಮಸ್ಕರಿಸುವೆನು.

ಹೀಗೆ ಅತ್ಯಂತ ಲೀನಭಾವದಿಂದ ಪ್ರಾರ್ಥಿಸಿ ಭಗವಂತನ ಪಾದಗಳಿಗೆ ಮತ್ತೆ ಸಾಷ್ಟಾಂಗವೆರಗಲು, ಶಂಕರನು ಅವನನ್ನು ವಾತ್ಸಲ್ಯದಿಂದ ಹಿಡಿದೆತ್ತಿ—ಋಷಿಶ್ರೇಷ್ಠಾ, ಗೌತಮಾ, ಪರಮಪುಣ್ಯಶಾಲಿಯಾದ ನಿನ್ನ ಆರಾಧನೆಯಿಂದ ನಾನು ಸಂತುಷ್ಟನಾಗಿ ಬಂದಿರುವೆನಾದ್ದರಿಂದ ನಿನಗೆ ಬೇಕಾದವರಗಳನ್ನು ನೀನು ಬೇಡಿಕೋ, ಎಂದು ನುಡಿಯಲು, ಗೌತಮನು ಭಕ್ತಿಯಿಂದ ಕೈಮುಗಿದು—ದೇವಾ, ಭಕ್ತವತ್ಸಲನಾದ ನೀನು ಪ್ರಸನ್ನನಾಗಿರುವದೇ ನಿಜವಾಗಿದ್ದರೆ ನನ್ನಲ್ಲಿ ವಜ್ರಲೇಪವಾಗಿ ಉಳಿದ ಈ ಗೋಹತ್ಯೆಯ ಮಹಾಪಾತಕವನ್ನಿಷ್ಟು ದೂರಮಾಡಲ್ಲದೆ, ಬೇರೆಯಾವ ವರಗಳ ಆಶೆಯೂ ನನಗಿಲ್ಲವೆಂದು

ಪ್ರಾರ್ಥಿಸಿದನು. ಆಗ ಮಹಾದೇವನು ಮೃದುಹಾಸ್ಯದಿಂದ—ಗೌತಮಾ, ಎಂಥ ಅಪಕ್ವವಿಚಾರವಿದು? ಪಾಪಾತ್ಮರಿಗೆ ನಾನು ಹೀಗೆ ದರ್ಶನವನ್ನಾದರೂ ಕೊಡಬಹುದೆ? ಸ್ವತಃ ನಾನು ಪ್ರತ್ಯಕ್ಷನಾಗಿಬಂದು ನಿಂತಿರಲು, ನಾನು ಮಹಾಪಾತಕಿಯೆಂದು ನೀನು ತಿಳಿದುಕೊಳ್ಳುವದು ನಿನ್ನ ಅಪಕ್ವವಿಚಾರದ ಮಹಿಮೆಯಲ್ಲದೆ ಮತ್ತೇನು? ನಿಷ್ಪಾಪನಾದ ನಿನಗೆ ಪಾಪದ ಗಾಳಿಯು ಸಹ ಸೋಂಕದಿರಲು, ನಿನ್ನನ್ನು ಮಹಾಪಾತಕಿಯೆಂದು ಕರೆಯುವ ಅಂಥ ಅಧಮರಾದರೂ ಯಾರು? ಋಷೀಶ್ವರಾ, ಪುಣ್ಯಾತ್ಮನಾದ ನಿನ್ನ ಯೋಗ್ಯತೆಯು ಸಾಧಾರಣವಾದದ್ದಲ್ಲ. ಕೇವಲ ನಿನ್ನ ದರ್ಶನಮಾತ್ರದಿಂದಲೇ ಚರಾಚರಾತ್ಮಕವಾದ ಈ ವಿಶ್ವವೆ ಉದ್ಧೃತವಾಗುವಹಾಗಿರಲು, ನೀಚಜನರ ದುರ್ವಾದಗಳಿಗೆ ಲಕ್ಷಗೊಟ್ಟು ನಾನು ಪಾಪಾತ್ಮನೆಂದು ಭಾವಿಸಿ ನೀನು ಸುಮ್ಮನೆ ದುಃಖಪಡುವೆಯಲ್ಲ! ಹೀಗೆ ತಿಳಿಯುವದು ಅಜ್ಞಜನರ ಲಕ್ಷಣವಾಗಿರುವದರಿಂದ ಮಹಾಜ್ಞಾನಿಯಾದ ನೀನು ಇನ್ನು ಹೀಗೆ ಸರ್ವಥಾ ಗೃಹಿಸದೆ, ಸಾಧ್ವೀಶಿಖಾಮಣಿಯಾದ ನಿನ್ನ ಧರ್ಮಪತ್ನಿಯೊಡನೆ ಸುಖವಾಗಿ ವಾಸಿಸು. ಸರಲವೃತ್ತಿಯುವನಾದ ನಿನಗೆ ಆ ನೀಚರ ಕಪಟಾಚರಣೆಯು ಗೊತ್ತಾಗದ್ದರಿಂದ ನೀನು ಹೀಗೆ ಗೃಹಿಸಿಕೊಂಡಿರಬಹುದು. ಆದರೆ ಗೌತಮಾ, ನೀನು ಪೂರ್ವಾಶ್ರಮದಲ್ಲಿ ಪ್ರತಿಷ್ಠಿತನಾಗಿರುವಾಗ ನಿನ್ನ ಪ್ರತಿಷ್ಠೆಯು ಉಳಿದ ಋಷಿಗಳಿಗೆ ಸಹನವಾಗದೆ ಆ ಅಧಮರು ತಮ್ಮ ಸ್ತ್ರೀಯರ ಕಿವಿಯೂದಿಕೆಯಂತೆ ಮಹೋಪಕಾರಿಯಾದ ನಿನ್ನೊಡನೆ ದ್ರೋಹ ಬೆಳಸಿ ನಿನ್ನ ಕರ್ಮವಿಘಾತಕ್ಕಾಗಿ ಆ ಸಾಹಸಿಗಳು ಒಂದು ಸಂವತ್ಸರದ ವರೆಗೆ ಗುಪ್ತವಾಗಿ ತಪಸ್ಸುಮಾಡಿ ವಿಘ್ನೇಶ್ವರನನ್ನು ಒಲಿಸಿಕೊಂಡು ಆತನಿಂದ ನಿನಗೆ ಗೋಹತ್ಯೆಯ ಪಾತಕವು ಒದಗುವಂತೆ ಮಾಡಿದರು. ಆ ಅಧಮರಮೇಲೆ ನನ್ನ ಕ್ಷೋಭವು ಬಹಳವಾಗಿರುವದರಿಂದ ಅವರಿಗೆ ಎಂಥ ಶಿಕ್ಷೆಯನ್ನಾದರೂ ವಿಧಿಸಬಹುದು. ಆದ್ದರಿಂದ ಗೌತಮಾ, ಹೇಳು, ನಿನ್ನ ಹಿತಶತ್ರುಗಳಾದ ಆ ನೀಚರಿಗೆ ಯಾವ ಶಿಕ್ಷೆಯನ್ನು ವಿಧಿಸಬೇಕೆಂಬದನ್ನು! ಎಂದು ನುಡಿದು ಅವರನ್ನು ದಂಡಿಸುವದಕ್ಕಾಗಿ ಭಗವಂತನು ಕೋಪಾವೇಶದಿಂದ ತನ್ನ ಉಗ್ರವಾದ ಶೂಲಾಯುಧವನ್ನು ಮೇಲಕ್ಕೆ ನೆಗಹಿದನು- ಆಗ ಮಹಾಸತ್ವಶಾಲಿಯಾದ ಗೌತಮನು ಶಾಂತವೃತ್ತಿಯಿಂದ ಶಂಕರನ ತ್ರಿಶೂಲವನ್ನು ತಡೆದು ನಮ್ರಭಾವದಿಂದ ಅವನನ್ನು ಕುರಿತು—ಭಗವನ್ ಭೂತಪತೇ, ಕಾಲಕಾಲಾಂತಕನಾದ ನಿನಗೆ ಯಾವದು ತಾನೆ ಅಶಕ್ಯವು? ಹುಂಕಾರಮಾತ್ರದಿಂದ ತ್ರಿಪುರವಧಲೀಲೆಗೈದ ನಿನಗೆ ಈ ಋಷಿಗಳ ಶಾಸನವೆಂದರೆ ಎಷ್ಟರದು? ಆದರೂ ಮಹಾತ್ಮರಾದ ಆ ಋಷಿಗಳಿಗೆ ನೀನು ಸರ್ವಥಾ ಶಾಪಗೊಡಬೇಡ; ಅವರಿಂದಾದಹಾಗೆ ಉಪಕಾರವು ನನಗೆ ಈ ಜನ್ಮದಲ್ಲಿ ಅನ್ಯ ಯಾವ ಜನರಿಂದಲೂ ಆಗಿಲ್ಲ. ಯಾಕಂದರೆ, ನನ್ನೊಡನೆ ಅವರು ದ್ರೋಹ ಬಗೆದದ್ದೂ, ಗೋಹತ್ಯಾದೋಷದಿಂದ ನನ್ನನ್ನು ಹೊರಹೊರಡಿಸಿದ್ದೂ, ತದ್ದೋಷನಿವೃತ್ತಿಗಾಗಿ ನನಗೆ ಪ್ರಾಯಶ್ಚಿತ್ತ ವಿಧಿಸಿದ್ದೂ ನಿನ್ನ ಅಲಭ್ಯದರ್ಶನವಾದ ನನಗೆ ಹಿತಕರವೇ ಅಲ್ಲವೆ? ತಾಯಿಯಂತೆ ಹಿತಚಿಂತಕರೂ, ಸದ್ಗುರುವಿನಂತೆ ಮಾರ್ಗದರ್ಶಿಗಳೂ ಆದ ಆ ಪುಣ್ಯಾತ್ಮರು ಪಾಮರನಾದ ನನ್ನ ಮೇಲೆ ಹೀಗೆ ಅನುಗ್ರಹಿಸದೆ ಹೋಗಿದ್ದರೆ, ಹರಿಬ್ರಹ್ಮೇಂದ್ರಾದಿ ದೇವ

ಕೆಗಳಿಗೆ ಸಹ ದುರಧಿಗಮವಾದ ನಿನ್ನ ಈ ದಿವ್ಯದರ್ಶನವನ್ನು ಇವೇ ಚರ್ಮ ಚಕ್ಷುಗ ಳಿಂದ ಮಾಡಿಕೊಳ್ಳಬೇಕಾದರೆ ನಾನು ಹೀಗೆಯೇ ಎಷ್ಟು ಜನ್ಮಗಳನ್ನು ತಾಳಬೇಕಾಗು ತ್ತಿತ್ತೆಂಬದು ಸರ್ವಜ್ಞನಾದ ನಿನಗೇ ಗೊತ್ತು. ಆದ್ದರಿಂದ ಸುಲಭರೀತಿಯಾಗಿ ನಿನ್ನ ದರ್ಶನ ಮಾಡಿಕೊಟ್ಟು ನನ್ನನ್ನು ಉದ್ಧರಿಸಿದ ಆ ಋಷಿಗಳ ಯೋಗ್ಯತೆಯು ಸಾಧಾರಣವಾದ ದ್ದಲ್ಲ! ಧನ್ಯರು! ದೇವಾ, ಇಂದಿಗೆ ಅವರೇ ಧನ್ಯರು!! ಅವರೇ ಪಾವನರು! ಅವರೇ ಕೃತಾರ್ಥರು!! ಕಿಂಬಹುನಾ ದೇವಾ, ನಿನಗಿಂತಲೂ ವಿಶೇಷತಃ ಅವರು ನನಗೆ ಪೂಜ್ಯ ರಾಗಿ ತೋರುವರು. ಹೀಗೆ ನಿನಗಿಂತಲೂ ಸದ್ಗುರುವು ಸರ್ವಗುಣಗಳಿಂದ ಶ್ರೇಷ್ಠನಾಗಿ ರುವನೆಂದು ನೀನೇ ನಿನ್ನ ಮುಖದಿಂದ ಹೇಳಿದ ವಚನವು ನನ್ನ ಲಕ್ಷದಲ್ಲಿ ಪೂರ್ಣವಾಗಿ ಉಳಿದಿರುವದು. ಹೀಗಿರಲು, ನನ್ನ ದೃಷ್ಟಿಯಿಂದ ಈ ಋಷಿಗಳು ನನಗೆ ಸದ್ಗುರುಗಳಾದ ಮೇಲೆ ನನ್ನ ಹಿತಕರ್ತೃವಾದ ನಿನಗೆ ನಿನ್ನ ವಚನವು ಮಾನ್ಯವಾದಂತೆಯೇ ಆಯಿತಲ್ಲವೆ? ಅಂದಮೇಲೆ ಅವರನ್ನು ಶಿಕ್ಷಿಸಹೇಳುವ ನಾನು ಗುರುದ್ರೋಹದ ಮಹಾಪಾತಕಕ್ಕೆ ಗುರಿಯಾ ಗದೆ ಹೇಗುಳಿಯುವೆನು? ದೇವಾ, ಈಗಲೇ ನಿನ್ನ ಕೋಪದೊಂದಿಗೆ ಇವರ ಶಿಕ್ಷೆಯ ಆವೇಶವನ್ನು ಆವರಿಸುವ ಕೃಪೆಮಾಡು. ನಿನ್ನ ಈ ಕ್ರೋಧ ಮುದ್ರೆಯನ್ನು ನನ್ನಿಂದ ಬಹಳ ಹೊತ್ತು ನೋಡುವದಾಗುವದಿಲ್ಲ. ಆದ್ದರಿಂದ ಉಗ್ರವಾದ ನಿನ್ನ ಈ ವೃತ್ತಿ ಯನ್ನು ಶಾಂತಗೊಳಿಸಿ ಭಕ್ತನಾದ ನನ್ನ ಈ ಬೇಡಿಕೆಯನ್ನು ಪೂರ್ಣಮಾಡು. ಈ ಮೊ ದಲು ಋಷಿಗಳ ಹೇಳಿಕೆಯಂತೆ ನಾನು ಎರಡು ಪ್ರಾಯಶ್ಚಿತ್ತಗಳನ್ನು ಮಾಡಿಕೊಂಡೆನು. ಇನ್ನು ಗಂಗೆಯಲ್ಲಿ ಸ್ನಾನಮಾಡಿ ನಿನ್ನನ್ನು ಪೂಜಿಸುವ ಮೂರನೆಯ ಇದೊಂದೇ ಪ್ರಾಶ್ಚಿತ್ತವಿರುವದು. ಇದನ್ನೂ ನಿನ್ನ ಕೃಪೆಯಿಂದ ಈಗಲೇ ಮಾಡಿಬಿಡುವೆನು. ಇದಾಗದಹೊರತು ನನ್ನ ಮನಸ್ಸಿಗೆ ಎಂದೂ ಪ್ರಶಸ್ತವಾಗಲಾರದು. ಆದ್ದರಿಂದ ದೇವಾ, ನನ್ನ ಈ ಪ್ರಾಯಶ್ಚಿತ್ತದ ಪೂರ್ತಿಗಾಗಿ ಲೋಕಪಾವನಳಾದ ಭಗವತೀ ಭಾಗೀರಥಿಯು ನನಗೆ ಪ್ರಾಪ್ತಳಾಗುವಂತೆ ಮಾಡು.

ಹೀಗೆ ಗೌತಮನು ಭಕ್ತಿಯಿಂದ ಬೇಡಿಕೊಳ್ಳಲು, ಭಗವಾನ್, ಸದಾಶಿವನು, ಇವನ ರಹಸ್ಯ–ಪೂರ್ಣವಾದ ಭಾಷಣಗಳಿಗೂ, ಧರ್ಮಬುದ್ಧಿಗೂ, ಸರಲಸ್ವಭಾವಕ್ಕೂ, ಔದಾರ್ಯಕ್ಕೂ ಉದಯೆಗೂ, ಸಹನಶೀಲತೆಗೂ ಆಶ್ಚರ್ಯಪಟ್ಟು ಅವನ ಬೇಡಿಕೆಯಂತೆ ಮೊದಲೇ ಭೂಮ್ಯಾಕಾಶಗಳ ಸಾರಶೋಷಣೆಯಿಂದ ಸಂಗ್ರಹಿಸಿಟ್ಟದ್ದ ಗಂಗೆಯ ಪವಿತ್ರೋದಕವನ್ನು ತನ್ನ ಪಿಂಗಟವಾದ ಜಟಾಕಲಾಪಗಳಿಂದ ಒಮ್ಮೆಲೆ ಪ್ರಕಟಗೊಳಿಸಿದನು. ಆಗ ಭಾಗೀ ರಥಿಯು ಪರಮಾತ್ಮನ ಮಸ್ತಕದಿಂದ ಆರ್ಭಟಿಸುತ್ತ ಹೊರಬಿದ್ದು ಮುಂದೆ ಪ್ರವಾಹರೂಪ ದಿಂದ ಹರಿಯಹತ್ತಿದಳು. ಆಗ ಗೌತಮನು ವೇಗಾತಿಶಯದಿಂದ ಪ್ರವಹಿಸುವ ಜಾಹ್ನವಿಯಲ್ಲಿ ಸ್ನಾನಮಾಡಿ ಫಲ–ಪುಷ್ಪಾದಿಗಳಿಂದ ಆಕೆಯನ್ನು ಪೂಜಿಸಿ ಭಕ್ತಿಯಿಂದ ಸ್ತುತಿಸಹತ್ತಲು, ಆವಳು ಮುಂದಕ್ಕೆ ಒಂದು ಹೆಜ್ಜೆಯನ್ನು ಸಹ ಇಡದೆ ದಿವ್ಯಾಂಗನೆಯ ರೂಪದಿಂದ ನಲಿ ದಾಡುತ್ತ ಋಷಿಯ ಮುಂಭಾಗದಲ್ಲಿ ಬಂದು ನಿಂತಳು. ಆಗ ಭಕ್ತಿಪರವಶರಾದ ಅಹಲ್ಯಾ– ಗೌತಮರು ಸಾಷ್ಟಾಂಗವೆರಗಿ ಅವಳನ್ನು ಕುರಿತು—ಜಗದಂಬೆ, ಲೋಕಪಾವನಳಾದ ನಿನ್ನ

ದರ್ಶನದಿಂದ ನಾವು ಪುನೀತರಾದೆವು. ಇದರಂತೆಯೇ ತೀರ್ಥರೂಪಳಾಗಿ ನೀನು ನಿರಂತರವಾಗಿ ಇದೇ ಸ್ಥಳದಲ್ಲಿ ವಾಸಿಸು. ಯಾಕಂದರೆ ಇಂದು ನಿನ್ನ ಪುಣ್ಯೋದಕದಲ್ಲಿ ಸ್ನಾನಮಾಡಿದಾಗ ನಿಂದಾದಷ್ಟು ಮನಃಪ್ರಸನ್ನತೆಯು ಉಳಿದ ಯಾವ ಪ್ರಾಯಶ್ಚಿತ್ತಗಳಿಂದಲೂ ನಮಗಾಗಿದ್ದಿಲ್ಲ ವಾದ್ದರಿಂದ, ಪ್ರಾಣಿಗಳ ಪಾಪನಿರ್ದಲನ ಕರ್ಮದಲ್ಲಿ ನೀನು ಬಹು ಸಮರ್ಥಳಿರುವೆಯೆಂಬ ಮಾತನ್ನು ನಾನು ಇಂದು ಪೂರ್ಣವಾಗಿ ಮನಗಂಡೆನು- ಆದುದರಿಂದ ಭಕ್ತವತ್ಸಲಳಾದ ನೀನು ಈ ಸ್ಥಳದಲ್ಲಿ ಇರಲೇಬೇಕೆಂದು ಪ್ರಾರ್ಥಿಸುತ್ತಿರಲು, ಶಂಕರ—ಪಾರ್ವತಿಯರು ಮಧ್ಯದಲ್ಲಿಯೇ ಬಾಯಿಹಾಕಿ ಗೌತಮನ ಪ್ರಾರ್ಥನೆಯಂತೆ ಮೊದಲೇ ಅರ್ಥಮರ್ಥ ಸಮ್ಮತಿಸಿದ ಭಾಗೀರಥಿಯನ್ನು ವೈವಸ್ವತಮನುವಿನ ೨೮ ನೆಯ ಕಲಿಯುಗದವರೆಗೆ ಆ ಸ್ಥಳದಲ್ಲಿ ವಾಸಿಸಿರುವದಕ್ಕಾಗಿ ಪೂರ್ಣವಾಗಿ ಸಮ್ಮತಿಗೊಳಿಸಿದರು. ಅಷ್ಟರಲ್ಲಿ ಗೌತಮನ ಹಿತಶತ್ರುಗಳಾದ ಪೂರ್ವಾಶ್ರಮದ ಋಷಿಗಳೆಲ್ಲ ಕೃತಕರ್ಮಕ್ಕಾಗಿ ಪಶ್ಚಾತ್ತಾಪಪಟ್ಟು ಗೌತಮನ ಅಗಾಧಮಹಿಮೆಯನ್ನು ಹೊಗಳುತ್ತ ಅವನಿದ್ದೆಡೆಗೆ ಬಂದು ಸಾಷ್ಟಾಂಗವೆರಗಿ ತಮ್ಮ ಪಾಪಿತ್ವತೆಗಾಗಿ ಅವನನ್ನು ಬೇಡಿಕೊಳ್ಳಹತ್ತಿದರು. ಆಗ ಸರಲಹೃದಯನಾದ ಗೌತಮನು ಅವರನ್ನು ಅನುಗ್ರಹಿಸಿ ತನಗಾದಂತೆ ಇವರಿಗಾದರೂ ಶಿವದರ್ಶನವಾಗಿ ಇವರು ಕೃತಾರ್ಥರಾಗಲೆಂಬ ಸದ್ಧೇತುವಿನಿಂದ ಗಂಗಾ-ಪಾರ್ವತಿಯರೊಡನೆ ನಿಂತುಕೊಂಡಿರುವ ಭಗವಾನ್ ಸದಾಶಿವನ ದರ್ಶನಕ್ಕಾಗಿ ಅವರನ್ನು ಪ್ರೇರಿಸಿದನು. ಆದರೆ ಪಾಪಾತ್ಮರಾದ ಅವರಿಗೆ ದರ್ಶನವು ಹ್ಯಾಗೆ ಸಂಭವಿಸಬೇಕು? ಅವರ ದೃಷ್ಟಿಗಳಿಗೆ ಕೇವಲ ಗೌತಮನೊಬ್ಬನೇ ಕಾಣಹತ್ತಿದನಲ್ಲದೆ, ಉಳಿದ ಯಾರ ದರ್ಶನವೂ ಅವರಿಗಾಗಲಿಲ್ಲ. ಆಗ ಅವರಿಗೆ ಪರಮಾಶ್ಚರ್ಯವಾಗಿ ದೀನಮುದ್ರೆಯಿಂದ ಒಂದೇ ಸವನೆ ಅವರು ಗೌತಮನನ್ನು ನೋಡಹತ್ತಿದರು. ಆಗ ಗೌತಮನು ಅತ್ಯಂತ ದಯಾನ್ವಿತನಾಗಿ ಅವರನ್ನು ನೋಡುತ್ತ, ಮೂರ್ತಿಗೊಂಡು ತನ್ನ ಮುಂದೆ ನಿಂತಿರುವ ಭಾಗೀರಥಿಯನ್ನು ಕುರಿತು—ದೇವೀ, ದಯಾಶೀಲಳಾದ ನೀನು ಹ್ಯಾಗಾದರೂ ಮಾಡಿ ಇವರನ್ನಿಷ್ಟು ಉದ್ಧರಿಸಬೇಕೆಂದು ಪ್ರಾರ್ಥಿಸಲು, ಅವಳು ಒಮ್ಮೆಲೆ ಕೋಪಗೊಂಡು ತಿರಸ್ಕಾರಮುದ್ರೆಯಿಂದ ಅವನನ್ನು ಕುರಿತು—ಋಷಿವರಾ, ನನ್ನ ಪವಿತ್ರನಾಮವನ್ನು ಸಹ ಉಚ್ಚರಿಸುವ ಯೋಗ್ಯತೆಯಿಲ್ಲದ ಈ ಪಾಪಾತ್ಮರನ್ನು ನಾನು ಏನೆಂದು ಉದ್ಧರಿಸಲಿ? ಛಿದ್ರಾನ್ವೇಷಿಗಳೂ, ಸ್ತ್ರೀಜಿತರೂ, ಕೃತಘ್ನರೂ, ದುರಭಿಮಾನಿಗಳೂ, ಪರದ್ರೋಹಿಗಳೂ ಆದ ಈ ಪಾಪಿಗಳ ನಾಮವನ್ನು ಸಹ ನನ್ನೆದುರಿಗೆ ಉಚ್ಚರಿಸಬೇಡ, ಇವರನ್ನು ನಾನು ಸರ್ವಥಾ ಉದ್ಧರಿಸಲಾರೆನೆಂದು ಸ್ಪಷ್ಟವಾಗಿ ನುಡಿದಳು. ಆಗ ಗೌತಮನು ಅಸಮಾಧಾನದಿಂದ ಅವಳನ್ನು ಕುರಿತು—ದೇವಿ, ಜಗಜ್ಜನನಿಯಾದ ನಿನ್ನಲ್ಲಿ ಇಂಥ ವಿಷಮಬುದ್ಧಿಯೇಕೆ? ಯಾವ ಪುಣ್ಯಾತ್ಮರಿಂದ ಮಹಾಪಾತಕಿಯಾದ ನನಗೆ ನಿನ್ನ ದರ್ಶನವಾಯಿತೋ, ಅಂಥ ಋಷಿಪುಂಗವರು ನನ್ನನ್ನು ಅನುಗ್ರಹಿಸಿ ನಾನಿರುವಲ್ಲಿಗೆ ಸ್ವತಃ ಬಂದು ಪ್ರಾರ್ಥಿಸುತ್ತಿರಲು, ನೀನು ಅವರನ್ನು ಅನುಗ್ರಹಿಸದಿರುವದು ಎಷ್ಟು ಅಸಮಂಜಸವಾಗಿರುವದೆಂಬದನ್ನು ನೀನೇ ತಿಳಿದು ನೋಡು. ದೇವೀ, ಇದು ಮಹಾತ್ಮರಿಗೆ ಸಲ್ಲುವ ರೀತಿಯಲ್ಲವೆಂಬದನ್ನು ನಾನು ನಿನಗೆ

ಸ್ಪಷ್ಟವಾಗಿ ಹೇಳುವೆನು. ಹಾಗು "ಅಪಕಾರಿಷು ಯೇಲೋಕೇ ಉಪಕಾರಂ ಚರಂತಿ ವೈ। ತೇನತೇ ಪೂಜ್ಯತಾಂ ಯಾಂತಿ" ಎಂಬಂತೆ ನಾವು ಲೋಕದಲ್ಲಿ ವಿಶಿಷ್ಟತರವಾದ ಪೂಜ್ಯಭಾವ ವನ್ನು ಹೊಂದಬೇಕಾಗಿದ್ದರೆ, ಅಪಕಾರಿಗಳಿಗೆ ಉಪಕಾರ ಮಾಡುವ ವ್ರತವನ್ನು ಮೊದಲು ಕೈಕೊಳ್ಳಬೇಕು; ಯಾಕಂದರೆ ನಮ್ಮ ಮುಂದಿನ ಕಲ್ಯಾಣಕ್ಕಾಗಿಯೇ ಇವರು ಕಷ್ಟ ಬಟ್ಟು ತಮ್ಮ ದೇಹದಂಡನೆಮಾಡಿ ಅಪಕಾರಮಿಷದಿಂದ ನಮಗೆ ಒಂದುತರದ ಉಪಕಾರ ವನ್ನೇ ಮಾಡುತ್ತಿರಲು, ಅಂಥ ಪರೋಪಕಾರಿಗಳಿಗಾಗಿ ನಮ್ಮಿಂದ ಯಾದಪ್ರಸಂಗದ ಲ್ಲಿಯೂ ಪ್ರತ್ಯುಪಕಾರವಾಗದಿದ್ದರೆ ಕೃತಘ್ನತೆಯ ದೋಷಕ್ಕೆ ನಾವು ಗುರಿಯಾಗಲಿಕ್ಕಿ ಲ್ಲವೆ? ಆದುದರಿಂದ ನಾನಂತೂ ಇಂಥವರಿಗೆ ಬಹಳವಾಗಿ ಅಂಜಿಕೊಳ್ಳುವೆನು. ಇಲ್ಲಿಯ ವರೆಗೆ ನಾನು ಇಂಥ ಪರೋಪಕಾರಿಗಳಿಗೆ ಉಪಕಾರಮಾಡುತ್ತ ಬಂದಿರುವೆನೆಂತಲೇ ನಿಮ್ಮಂಥ ದೇವತೆಗಳು ಸಹ ನನಗೆ ಬಹುಮಾನ ಕೊಡುತ್ತ ಬಂದಿರುವಿರಿ; ಅಂದ ಮೇಲೆ ನನ್ನ ಎಲ್ಲ ಅಭ್ಯುದಯ ನಿಶ್ರೇಯಸಗಳಿಗೆ ಮೂಲ ಕಾರಣರಾದ ಇವರನ್ನು ನನ್ನ ಉಪಾಸ್ಯ ದೇವತೆಯಾದ ನೀನು ಉದ್ಧಾರ ಮಾಡದಿರುವದಾದರೂ ಹೇಗೆ? ಆದ್ದರಿಂದ ಜಾನ್ಹವಿ, ಇನ್ನು ನೀನು ಯಾವ ದೋಷವನ್ನೂ ಮುಂದೆ ಮಾಡದೆ ನನ್ನ ಬೇಡಿಕೆಯನ್ನು ಶೀಘ್ರವಾಗಿ ಸಫಲಗೊಳಿಸು. ಅಥವಾ, ನಿರವಧಿ ಕೃಪಾಸಾಗರಳೂ, ಪತಿತೋದ್ಧಾರ ಕಳೂ, ಪರೋಪಕಾರಿಯೂ ಆದ ನಿನಗೆ ಬುದ್ಧಿಗಲಿಸುವ ಪಾಮರನು ನಾನೆಷ್ಟರವನು? ಜನನಿ, ಇನ್ನು ನೀನು ನಿನ್ನ ಮನಸ್ಸಿಗೆ ಬಂದ ಹಾಗೆ ಮಾಡು, ಅದೂ ನನಗೆ ಸಂತೋಷವೆ.

ಹಿಗೆ ಗೌತಮನು ನುಡಿದು ಸುಮ್ಮನಾಗಲು, ಭಗವತೀ ಭೀಷ್ಮನಂದಿನಿಯು ಆನಂದ ಮುದ್ರೆಯ ಮೃದುಹಾಸ್ಯದಿಂದ ಭಕ್ತೋತ್ತಮನಾದ ಗೌತಮನಕೈಹಿಡಿದು— ಋಷಿಪುಂಗವಾ, ನಿನ್ನ ಶಾಸ್ತ್ರಬದ್ಧವಿಚಾರಗಳು ನನಗೆ ಅಕ್ಷರಶಃ ಮಾನ್ಯವಾಗಿರು ವವು. ನಿನ್ನ ಯೋಗ್ಯತೆಯನ್ನು ನಾನು ಅಧಿಕವಾಗಿ ವರ್ಣಿಸುವದಕ್ಕಿಂತ, ತಡಮಾಡದೆ ನಿನ್ನ ಇಚ್ಛೆಯನ್ನು ಪೂರ್ಣಗೊಳಿಸುವದೇ ನನಗೆ ಯೋಗ್ಯವಾಗಿ ತೋರುವದು. ಆದರೂ ಈ ಪಾಪಿಗಳು ಕೃತಕರ್ಮಕ್ಕಾಗಿ ಶಾಸ್ತ್ರತಃ ಪ್ರಾಯಶ್ಚಿತ್ತವನ್ನು ತಕ್ಕೊಳ್ಳಲೇ ಬೇಕಾಗು ವದು. ಇದಾದಮೇಲೆ ಮಾತ್ರ ನಿನ್ನ ಮಾತಿನಂತೆ ನಾನು ಇವರನ್ನು ಉದ್ಧರಿಸಬಹು ದೆಂದು ನುಡಿಯಲು, ಅದೇ ಪ್ರಕಾರ ಗೌತಮನು ಒಂದೂಬಿಡದೆ ಆ ಋಷಿಗಳಿಂದ ಎಲ್ಲ ಪ್ರಾಯಶ್ಚಿತ್ತಗಳನ್ನೂ ಮಾಡಿಸಿ ಭಾಗೀರಥಿಗೆ ತಿಳಿಸಲು, ಕೂಡಲೆ ಅವಳು ತಾನು ನಿಂತಿ ರುವ ಸ್ಥಳದಿಂದ ಪ್ರವಾಹರೂಪಳಾಗಿ ಹರಿದು ಹೋಗಿ ಒಂದು ದೊಡ್ಡ ತಗ್ಗಿನಲ್ಲಿ ತುಂಬಿ ಕೊಂಡಳು. ಆಗ ಎಲ್ಲ ಋಷಿಗಳೂ, ಋಷಿಪತ್ನಿಯರೂ ಅಹಲ್ಯಾ ಗೌತಮರೊಡನೆ ಆ ಭಾಗೀರಥಿಯಲ್ಲಿ ಸ್ನಾನಮಾಡಿ ಧನ್ಯರಾದರು. ಅಷ್ಟರಲ್ಲಿ ಇಂದ್ರಾದಿ ದೇವತೆಗಳು ಆ ಸ್ಥಳಕ್ಕೆ ಬಂದು ತಪಸ್ಸಿದ್ಧರಾದ ಅಹಲ್ಯಾ ಗೌತಮರನ್ನು ಅಭಿನಂದಿಸಿದ ಮೇಲೆ ಎಲ್ಲರೂ ಕೂಡಿ ಪರಮಾತ್ಮನನ್ನು ಸ್ತುತಿಸಹತ್ತಿದರು. ಆಗ ದಯಾಘನನಾದ ಸದಾಶಿವನು ಸಂತುಷ್ಟಚಿತ್ತನಾಗಿ ಎಲ್ಲರಿಗೂ ಲಿಂಗರೂಪವಿತ್ತು ಪೂಜನೆಗಾಗಿ ಅವನ್ನು ಪ್ರೇರಿಸಿ ದನು. ಆಗ ಸರ್ವರೂ ಸಾಷ್ಟಾಂಗವೆರಗಿ ಭಕ್ತಿಯಿಂದ—ದೇವಾ, ಮಹಾಮಹಿಮ

ನಾದ ನೀನು ಲೋಕೋದ್ಧಾರಾರ್ಥವಾಗಿ ಪರಿವಾರದೊಡನೆ ಇದೇ ಸ್ಥಳದಲ್ಲಿ ವಾಸಿಸೆಂದು ಪ್ರಾರ್ಥಿಸಿದರು. ಅದರಂತೆಯೇ ಪರಮಾತ್ಮನು ಗಂಗಾಭವಾನಿಯರೊಡನೆ ಜ್ಯೋತಿಸ್ಸ್ವರೂಪನಾಗಿ ತ್ರ್ಯಂಬಕೇಶನೆಂಬ ನಾಮದಿಂದ ಆ ಸ್ಥಳದಲ್ಲಿ ವಾಸಿಸಹತ್ತಿದನು. ವಿವೇಕಶೀಲಾ, ಈ ಹೊತ್ತಿಗೂ ಆ ಗೌತಮೀತಟದಲ್ಲಿ ಈ ಜ್ಯೋತಿರ್ಲಿಂಗವು ಸುಪ್ರಸಿದ್ಧವಿರುವದು. ಇಲ್ಲಿಯ ಈ ತೀರ್ಥವು ಗೌತಮನ ಪುಣ್ಯಪ್ರಭಾವದಿಂದಾಗಿರುವದರಿಂದ ಇದಕ್ಕೆ ಗೌತಮೀತೀರ್ಥವೆಂತಲೂ, ಗಂಗೆಯು ಹರಿದು ಬಂದು ನಿಂತಿರುವ ಈ ಸ್ಥಳಕ್ಕೆ ಕುಶಾವರ್ತ ತೀರ್ಥವೆಂತಲೂ, ಇವಳು ಹರಿದು ಬಂದ ಮೇಲಣ ಭಾಗಕ್ಕೆ ಗಂಗಾದ್ವಾರವೆಂತಲೂ ಹೆಸರು ಅಂದಿನಿಂದಲೇ ಪ್ರಾಪ್ತವಾದವು. ಮಕರದಲ್ಲಿ ಇಂದ್ರಾದಿದೇವತೆಗಳು ಸಹ ಈ ತೀರ್ಥದಲ್ಲಿ ಸ್ನಾನಮಾಡಿ ಹೋಗುವರು. ವಿವೇಕಶೀಲಾ, ಯಾವಭಕ್ತರು ಈ ಗೌತಮೀತೀರ್ಥದಲ್ಲಿ ಸ್ನಾನಮಾಡಿ ತ್ರ್ಯಂಬಕೇಶನನ್ನು ಪೂಜಿಸುವರೋ, ಅವರ ಅನಂತ ಜನ್ಮದ ಪಾಪವು ತೊಳೆದುಹೋಗಿ ಶಿವಾನುಗ್ರಹದಿಂದ ಅವರು ಪುನರ್ಜನ್ಮರಹಿತವಾದ ಶಾಶ್ವತ ಸುಖಸ್ಥಾನವನ್ನು ಹೊಂದಿ ಧನ್ಯರಾಗುವರು.



## ೧೧ ಕೇದಾರೇಶ-ಲಿಂಗೋತ್ಪತ್ತಿ .

ಮಹಾದ್ರಿಪಾರ್ಶ್ವೇ ಚ ತಟೇ ರಮಂತಂ ಸಂಪೂಜ್ಯಮಾನಂ ಸತತಂ ಮುನೀಂದ್ರೈಃ ॥
ಸುರಾ ಸುರೈರ್ಯಕ್ಷಮಹೋರಗಾದ್ಯೈಃ ಕೇದಾರಮೀಶಂ ಶಿವಮೇಕಮೀಡೇ ॥೧೧॥

ವಿವೇಕಶೀಲಾ, ಇನ್ನು ನಿನಗೆ ಸದಾಶಿವನು ಕೇದಾರೇಶನೆಂಬ ನಾಮದಿಂದ ಬದರಿಕಾಶ್ರಮದಲ್ಲಿ ಹೇಗೆ ಅವತರಿಸಿದನೆಂಬಬಗ್ಗೆ ಸ್ವಲ್ಪದರಲ್ಲಿಯೇ ಹೇಳುವೆನು ಕೇಳು. ಯಾವಾಗಲೂ ಸಸ್ಯಸಮೃದ್ಧಿಯಿಂದಲೂ, ಪುಣ್ಯಾರಣ್ಯಗಳಿಂದಲೂ, ತೀರ್ಥಕ್ಷೇತ್ರಗಳಿಂದಲೂ ಪ್ರಾಣಿಗಳಿಗೆ ತಾರಕವಾಗಿರುವದರಿಂದ ಭರತಖಂಡವು ಎಲ್ಲ ಖಂಡಗಳಲ್ಲಿ ಆದರಣೀಯವಾಗಿರುವದು. ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳ ಸಾಧನೆಗಾಗಿ ಮಾಡಬೇಕಾದ ತಪೋನುಷ್ಠಾನಗಳಿಗೆ ಈ ಪುಣ್ಯಭೂಮಿಯು ಮೂಲಾಧಾರವಾಗಿರುವದರಿಂದ ಈ ಖಂಡದ ಮಹಿಮೆಯು ಅಗಾಧವಾಗಿರುವದು. ಆದುದರಿಂದಲೇ “ ದೇವಾ ಅಪಿ ಸಮೀಹಂತೇ ಜನ್ಮ ಕರ್ಮ ಸುಖಾವಹಮ್ ” ಎಂಬಂತೆ ಪರಬ್ರಹ್ಮವಿಷಯಕ ಜ್ಞಾನವಿಲ್ಲದ ದೇವತೆಗಳು ಸಹ ಪುನಃ ಯಜ್ಞಯಾಗಾದಿ ಕರ್ಮಗಳನ್ನು ಮಾಡಿ ಚಿತ್ತಶುದ್ಧಿದ್ವಾರಾ ಸದ್ವಸ್ತುವಿನ ಜ್ಞಾನವಾಗಿ ಮುಕ್ತರಾಗಬೇಕೆಂದು, ಸರ್ವಕರ್ಮಾಧಾರವಾದ ಈ ಸ್ಥಳದಲ್ಲಿ ತಮ್ಮ ಜನ್ಮವಾಗಬೇಕೆಂದು ಇಚ್ಛಿಸುತ್ತಿರುವರೆಂದ ಮೇಲೆ ಇದರ ಮಹತ್ವವನ್ನು ನಾನೇನು ವರ್ಣಿಸಲಿ? ಅಂತೇ, ಸೃಷ್ಟಿಪಾಲಕನಾದ ಸರ್ವೇಶ್ವರನು ಮೇಲಿಂದಮೇಲೆ ಈ ಸ್ಥಳದಲ್ಲಿ ತನ್ನ ಅನಂತಾವತಾರ ಲೀಲೆಗಳನ್ನು ಪ್ರಕಟಿಸುತ್ತಿರುವನು. ಇದರಲ್ಲಿಯೂ ಪರಮಾತ್ಮನು ನರ-ನಾರಾಯಣ ರೂಪ

ದಿಂದ ವಾಸಿಸಿದ್ದ ಬದರಿಕಾಶ್ರಮವೆಂಬ ಸ್ಥಳವಂತೂ ಅವರ್ಣನೀಯವಾದದ್ದು. ಪರಮ ಪವಿತ್ರವಾದ ಈ ಬದರಿಕಾಶ್ರಮದಲ್ಲಿ ಭಗವಾನ್ ನಾರಾಯಣನು ನರನೆಂಬ ತನ್ನ ಎರಡನೆಯ ಅವತಾರದಿಂದ ಕೂಡಿ, ಸೃಷ್ಟಿ ಸಂರಕ್ಷಣೆಯ ಯೋಗ್ಯತೆಯು ತನ್ನಲ್ಲಿ ಸಿದ್ಧಿಸಬೇಕೆಂಬ ಇಚ್ಛೆಯಿಂದ ಸಾಕ್ಷಾತ್ ಪರಮೇಶ್ವರನ ಪರಂಜ್ಯೋತಿಸ್ವರೂಪವಾದ ಲಿಂಗವನ್ನು ಅಂತರಂಗದಲ್ಲಿರಿಸಿ ಅನಂತಕಾಲದಿಂದ ಆರಾಧಿಸುತ್ತ ಬಂದಿದ್ದನು. ಹೀಗೆ ಭಗವದ್ಧ್ಯಾನಾಸಕ್ತರಾಗಿ ಕುಳಿತ ಆ ನರ-ನಾರಾಯಣರಿಗೆ ಮುಂದೆ ಎಷ್ಟೋ ದಿನಗಳು ಕ್ರಮಿಸಿ ಹೋದವು. ಆಗ ಇವರ ಆರಾಧನೆಗೆ ಮೆಚ್ಚಿ ಮುಂದೆ ಒಂದಾನೊಂದು ದಿನ ಬೆಳಗು ಮುಂಜಾವಿನ ಮಂಗಲಕರ ಸಮಯದಲ್ಲಿ ವಿಶ್ವಪಾಲಕನಾದ ಭಗವಾನ್ ಸದಾಶಿವನು ಕರ್ಪೂರಖಂಡಗಳಂತೆ ಅತ್ಯಂತ ಶುಭ್ರವಾದ ತನ್ನ ದೇಹಕಾಂತಿಯಿಂದ ಹಿಮಶೃಂಗಗಳ ಶುಭ್ರತೆಯನ್ನು ಹಿಂಜರಿಯುತ್ತ ಅವರೀರ್ವರ ಮುಂದುಗಡೆಗೆ ಪ್ರಕಟನಾದನು. ಆಗ ಅವನು ಸುತ್ತಿದ ಪುಲಿಚರ್ಮವೂ, ಧರಿಸಿದ ರುಂಡಮಾಲೆಯೂ, ಒಪ್ಪುವ ರುದ್ರಾಕ್ಷಗಳೂ, ಜೋಲುವ ಜಡೆಗಳೂ, ಧರಿಸಿದ ಪಿನಾಕವೂ ಅವನ ಲೋಕೋತ್ತರ ಲೋಕನಾಥತ್ವವನ್ನು ವಿಶೇಷತಃ ವ್ಯಕ್ತಗೊಳಿಸುತ್ತಿದ್ದವು. ಹೀಗೆ ಮಹದ್ದ್ಯುತಿಕರನಾದ ಹರನು ಕೋಟಿ ಸೂರ್ಯಪ್ರತೀಕಾಶನಾಗಿ ತಮ್ಮೆದುರಿಗೆ ಒಮ್ಮೆಲೆ ಪ್ರಕಟನಾದದ್ದನ್ನು ನೋಡಿ ನರ-ನಾರಾಯಣರು ಸಂತೋಷದಿಂದೆದ್ದು ಅವನಿಗೆ ವಿನಯಾತಿಶಯದಿಂದ ಸಾಷ್ಟಾಂಗವೆರಗಿದರು. ಆಗ ಶಂಕರನು ಮೃದುಹಾಸ್ಯದಿಂದ ಅವರನ್ನು ತನ್ನ ಶೀತಲವಾದ ಬಾಹುಗಳಿಂದ ಹಿಡಿದೆತ್ತಿ ಅಂತಃಕರಣಪೂರ್ವಕವಾಗಿ ನುಡಿದನೇನಂದರೆ— ಲೋಕಪಾಲಕರೇ, ಶೌರ್ಯಸಾರರೂ, ಶಾಂತಿಸಮೃದ್ಧರೂ, ಸದಾನಂದತೃಪ್ತರೂ ಆದ ನಿಮ್ಮ ಯೋಗ್ಯತೆಯು ಸಾಧಾರಣವಾದದ್ದಲ್ಲ, ಹೀಗಿದ್ದು ಎಲ್ಲ ಗುಣಗಳಿಂದಲೂ ನಿಮಗೆ ಸರಿಸಮಾನಸ್ಕಂದನಾದ ನನ್ನ ಪ್ರಾಪ್ತಿಗಾಗಿ ಇಷ್ಟೊಂದು ಗೌರವದ ತಪವೇಕೆ? ತ್ರಿಭುವನ ಪರಿತ್ರಾಣಕ್ಷಮರಾದ ನಿಮ್ಮ ಯೋಗ್ಯತೆಗೂ ಮೀರಿಹೋದ ಅಂಥ ವರ-ವಿಶೇಷವಾವರೂ ಯಾವದಿರುವದು? ಇದ್ದರೂ ಅದನ್ನು ಪೂರ್ಣಗೊಳಿಸುವ ಯೋಗ್ಯತೆಯೊಂದು ನನ್ನಲ್ಲಿ ಇರಬೇಕಲ್ಲವೆ? ಆದರೂ ನಿಮ್ಮ ಇಚ್ಛೆಯನ್ನು ತಿಳಿಸಿದಲ್ಲಿ ಶಕ್ಯವಿದ್ದಮಟ್ಟಿಗೆ ನಾನು ನಿಮ್ಮ ಕಾರ್ಯವನ್ನು ಮಾಡಿಕೊಡುವೆನು.

ಈ ಪ್ರಕಾರವಾಗಿ ಭಗವಾನ್ ಸದಾಶಿವನು ಸರ್ವಸಾಧಾರಣರಂತೆ ನುಡಿದು ಸುಮ್ಮನಾಗಲು, ಇವನ ಯೋಗ್ಯತೆಯನ್ನರಿತ ನರ-ನಾರಾಯಣರು ಮೃದುಹಾಸ್ಯದಿಂದ ಕೈ ಮುಗಿದು—ದೇವಾ, "ಕರ್ತುಮಕರ್ತುಮನ್ಯಥಾ ಕರ್ತುಂ" ಸಮರ್ಥನಾದನೀನು ನಿನ್ನವರಾದ ನಮ್ಮನ್ನು ಹೀಗೆ ಮೋಹಗೊಳಿಸಬೇಡ. ಯಾಕಂದರೆ ದೇವತಾಸಾರ್ವಭೌಮನಾದ ನಿನ್ನ ಅಂತವು ಹಿಂದಕ್ಕೆ ನನಗೂ, ಬ್ರಹ್ಮದೇವನಿಗೂ ಸಹ ಹತ್ತಲಿಲ್ಲವಾದ್ದರಿಂದ ನಿನ್ನ ಮಾಯೆಯು ಅಮೋಘವಾಗಿರುವದು; ಅಂದಮೇಲೆ ಇಂಥ ಅಚಿಂತ್ಯವೈಭವನಾದ ನಿನ್ನನ್ನು ನಾನು ಏನೆಂದು ಸ್ತುತಿಸಲಿ? ದೇವಾ, ಅವಾಚ್ಯವಾದ ಈ ಭೂಮಿಯೇ ವಿಶ್ವಪಾಲಕನಾದ ನಿನ್ನ ರಥವು, ವೇದಗಳೇ ವೇದಾಂತ

ವೇದ್ಯನಾದ ನಿನ್ನ ರಥಾಶ್ವಗಳು, ಪಾತಾಳವೇ ನಾಗಭೂಷಣನಾದ ನಿನ್ನ ಅಲಂಕಾರದ ಪೆಟ್ಟಿಗೆಯು, ಆಕಾಶವೇ ನಕ್ಷತ್ರಮಾಲಾಪ್ರಿಯನಾದ ನಿನ್ನ ಪುಷ್ಪವಾಟಿಕೆಯು, ದಿಕ್ಪಾಲಕರೇ ದಿಗಂಬರನಾದ ನಿನ್ನ ವಸ್ತ್ರಪಾಲಕರು, ಕಂದರ್ಪನೇ ಕಾಮಾರಿಯಾದ ನಿನ್ನ ಚಂದನಕಾಷ್ಠವು, ಸಮುದ್ರವೇ ತ್ರಿಪುರಾಂತಕನಾದ ನಿನ್ನ ಬತ್ತಳಿಕೆಯು; ಹೀಗೆ ಅಪ್ರಾಕೃತಿಕವಾದ ನಿನ್ನ ಲೋಕೋತ್ತರ ಕರ್ಮಗಳೇ ನಿನ್ನ ವಿಶ್ವಾಧೀಶತ್ವವನ್ನು ವ್ಯಕ್ತಮಾಡುತ್ತಿರಲು, ನಾನು ಅವನ್ನು ಹೆಚ್ಚಿಗೇನು ವರ್ಣಿಸಲಿ? ಆದ್ದರಿಂದ ದೇವಾ, ಅನಂತನಾದ ನಿನ್ನ ಗುಣಗಣಗಳ ಅನಂತತ್ವವನ್ನು ಸಾಂತರಾದ ನಾವು ಹೆಚ್ಚು ವರ್ಣಿಸದೆ ಕೇವಲ ಭಕ್ತಿಯಿಂದ ಸಾಷ್ಟಾಂಗವೆರಗಿ ಪ್ರಾರ್ಥಿಸುವೆವೆಂತೆಂದರೆ—ಸರ್ವೇಶ್ವರನಾದ ನೀನು ನಮ್ಮಲ್ಲಿ ಯೋಗ್ಯತೆಯು ಇಲ್ಲದಿದ್ದರೂ ಅನುಗ್ರಹಿಸಿ ಸಂತೋಷದಿಂದ ವಹಿಸಿಬಿಟ್ಟ ವಿಶ್ವಪಾಲನೆಯು ಈ ಮಹಾಕಾರ್ಯವು ನಿರ್ವಿಘ್ನದಿಂದ ನಮ್ಮಿಂದ ಕಡೆಯವರೆಗೆ ಕಡೆಗಾಣುವಂತಿಲ್ಲವಾದ್ದರಿಂದ, ಈ ಕಾರ್ಯನಿರ್ವಾಹಕ ಶಕ್ತಿಯು ನಮ್ಮಲ್ಲಿ ಪೂರ್ಣವಾಗಿ ಉಳಿಯುವಂತೆ ಅನುಗ್ರಹಿಸು; ಹಾಗೂ ನೀನು ಇಂದಿನಂತೆ ಇನ್ನುಮುಂದೆಯೂವರೂ ನಮ್ಮ ಧ್ಯೇಯಮೂರ್ತಿಯಾಗಿ ಸುರ–ನರ–ಕಿನ್ನರರಿಂದ ಪೂಜೆಗೊಳ್ಳುತ್ತ ಇದೇ ಸ್ಥಳದಲ್ಲಿ ಅಚಲವಾಗಿರೆಂ"ದು ವಿನಯದಿಂದ ಪ್ರಾರ್ಥಿಸಲು, ಪರಮೋದಾರನಾದ ಪಾರ್ವತೀವರನು ಪ್ರಸನ್ನಮುದ್ರೆಯ ಮೃದುಹಾಸ್ಯದಿಂದ—"ನಿಮ್ಮ ಮನೋದಯವು ಪೂರ್ಣವಾಗಲೆಂ"ದು ವರವಿತ್ತು ಅಲ್ಲಿಯೇ ಅದೃಶ್ಯನಾದನು. ಅಂದಿನಿಂದಲೇ ಭಗವಂತನು "ಕೇದಾರ" ಎಂಬ ಹೆಸರಿನ ಆ ಹಿಮಾಚಲದ ಒಂದು ಪ್ರಶಸ್ತವಾದ ಶಿಖರದಲ್ಲಿ, ನರ–ನಾರಾಯಣರ ಇಚ್ಛೆಯಂತೆ ಲೋಕೋದ್ಧಾರಾರ್ಥವಾಗಿ ಈವೊತ್ತಿಗೂ ಉತ್ತರ–ದಕ್ಷಿಣಾಯನಗಳಲ್ಲಿ ಸುರ–ನರರಿಂದ ಪೂಜೆಗೊಳ್ಳುತ್ತ ಜಾಗ್ರತನಾಗಿ ವಾಸಿಸಿರುವನು. ಇವನು "ಕೇದಾರ"ವೆಂಬ ಹಿಮಶೃಂಗದಲ್ಲಿ ಲಿಂಗರೂಪನಾಗಿ ಅವತರಿಸಿದನಾದ್ದರಿಂದ ಇವನಿಗೆ ಕೇದಾರೇಶ್ವರನೆಂತಲೂ, ಬದರಿಕಾಶ್ರಮದಲ್ಲಿರುವದರಿಂದ ಬದರೀನಾಥನೆಂತಲೂ ಲೋಕಪ್ರಸಿದ್ಧವಾದ ನಾಮಗಳು ಪ್ರಾಪ್ತವಾದವು. ವಿವೇಕಶೀಲಾ, ದೇವಾನು ದೇವತೆಗಳಿಗೂ ದುರ್ಲಭವಾದ ಈ ಜ್ಯೋತಿರ್ಲಿಂಗದ ಮಂಗಲ ದರ್ಶನವನ್ನು ಯಾವಭಕ್ತರು ಮಾಡಿಕೊಳ್ಳುವರೋ, ಯಾರು ಇವನ ಮಹಾತ್ಮೆಯನ್ನು ಭಕ್ತಿಯಿಂದ ಕೇಳುವರೋ, ಅವರು ತಮ್ಮ ಸಕಲ ಕಷ್ಟಗಳಿಂದ ಮುಕ್ತರಾಗಿ ಅಂತ್ಯದಲ್ಲಿ ಶಾಶ್ವತವಾದ ಶಿವಪದವನ್ನು ಪಡೆದು ಧನ್ಯರಾಗುವರು!!





# ೧೨ ಘುಷ್ಮೇಶ-ಲಿಂಗೋತ್ಪತ್ತಿ.

ಇಲಾಪುರೀ ರಮ್ಯವಿಶಾಲಕೇಽಸ್ಮಿನ್ಸಮುಲ್ಲಸಂತಂ ಚ ಜಗದ್ವರೇಣ್ಯಂ ॥
ವಂದೇ ಮಹೋದಾರತರ ಸ್ವಭಾವಂ ಘುಷ್ಮೇಶ್ವರಾಖ್ಯಂ ಶರಣಂಪ್ರಪದ್ಯೇ ॥೧೨॥



ಭಕ್ತಿಶಾಲಿಯಾದ ವಿವೇಕಶೀಲನೇ, ಇನ್ನುಳಿದ ಹನ್ನೆರಡನೆಯ ಘುಷ್ಮೇಶಾಖ್ಯ ಜ್ಯೋತಿರ್ಲಿಂಗದ ಚಮತ್ಕಾರಿಕ ಮಹಿಮೆಯನ್ನಿಷ್ಟು ನಿನಗೆ ಹೇಳುವದುಳಿಯಿತು. ಇಲ್ಲಿಂದ ದಕ್ಷಿಣಕ್ಕೆ, ಅಂದರೆ ದಕ್ಷಿಣ ಕರ್ನಾಟಕದಲ್ಲಿ ಮೊದಲು ಸುರ-ಸಿದ್ಧ-ಕಿನ್ನರರ ಆವಾಸಸ್ಥಾನವಾಗಿದ್ದ 'ಸುರಾದ್ರಿ' ಎಂಬ ಹೆಸರಿನ ಒಂದು ಚಿಕ್ಕ ಪರ್ವತವು, ಈಗ ದೇವಗಿರಿಯೆಂಬ ಹೆಸರಿನಿಂದ ಸುಪ್ರಸಿದ್ಧವಿರುವದೆಂಬದನ್ನು ನೀನು ಕೇಳಿರಬಹುದಷ್ಟೇ? ಆದರೆ, ಆ ದೇವಗಿರಿಯ ನೆರೆಹಳ್ಳಿಯಲ್ಲಿ, ಹಿಂದಕ್ಕೆ ಭಾರದ್ವಾಜ ಕುಲೋತ್ಪನ್ನನಾದ 'ಸುಧರ್ಮನೆಂ'ಬ ಹೆಸರಿನ ಒಬ್ಬ ಸತ್ವಶೀಲ ಬ್ರಾಹ್ಮಣನು ವಾಸಿಸುತ್ತಿದ್ದನು. ಅವನಿಗೆ ಸ್ವಭಾವದಿಂದ ಕರ್ಕಶೆಯೂ, ಕ್ರೂರಳೂ ಆದ ಒಬ್ಬ ಹೆಂಡತಿಯು ಇದ್ದಳು. ಇವಳ ಹೆಸರು ಸುದೇಹಳು. ಇವಳು ರೂಪದಿಂದ ಬಹುಸುಂದರಿಯಾಗಿದ್ದದ್ದರಿಂದ ಇವಳಿಗೆ ಸುದೇಹಳೆಂಬ ಹೆಸರು ಸಾರ್ಥಕವಾಗಿತ್ತು. ಇವಳ ಪತಿಯಾದ ಸುಧರ್ಮನು ತನ್ನ ಗಾರ್ಹಸ್ಥ್ಯೋಚಿತ ಸದ್ಧರ್ಮಗಳನ್ನು ಸರಿಯಾಗಿ ಮಾಡಿ 'ಸುಧರ್ಮನೆಂ'ಬ ತನ್ನ ನಾಮವನ್ನೂ ಸಾರ್ಥಕಗೊಳಿಸಿದ್ದನು. ಇವನು ವೃತ್ತಿಯಿಂದ ಶ್ರೀಮಾನನಿದ್ದರೂ ಗರ್ವರಹಿತನೂ, ವಿದ್ವಾಂಸನಿದ್ದರೂ ವಿನಯಶಾಲಿಯೂ, ಜ್ಞಾನಿಯಿದ್ದರೂ ಮೌನಿಯೂ, ದಾನಶೀಲನಿದ್ದರೂ ಹೇಳಿಕೊಳ್ಳದವನೂ, ಸಮರ್ಥನಿದ್ದರೂ ಸಹನಶೀಲನೂ ಆಗಿದ್ದನು.

ಇಂತು ಸದ್ಗುಣಗಣಮಂಡಿತನಾದ ಆ ಭೂಸುರೋತ್ತಮನು ಸ್ವಕಾಂತಿಯಿಂದ ಸಾಕ್ಷಾತ್ ದಿನಮಣಿಯಂತೆ ಶೋಭಿಸುತ್ತ ಸಾಂಸಾರಿಕ ಸುಖದುಃಖಗಳನ್ನು ಅತ್ಯನಾಸಕ್ತಿಯಿಂದ ಭೋಗಿಸುತ್ತಿದ್ದನು. ಹೀಗೆ ವಾಸಿಸಿರುವ ಆ ಬ್ರಾಹ್ಮಣನ ಆಯುರ್ಮಾನದಲ್ಲಿ ಬಹುಕಾಲವು ಅತಿಕ್ರಮಿಸಿಹೋದರೂ ಆತನಿಗೆ ಸಂತಾನವಾಗಲಿಲ್ಲ. ಇದರಿಂದ ಅವನಿಗೆ ಲೋಕರೀತ್ಯಾ ಸ್ವಲ್ಪ ದುಃಖವಾದರೂ ಮಹಾಜ್ಞಾನಿಯಾದ ಆ ಬ್ರಾಹ್ಮಣನು ತನ್ನ ವಿವೇಕದಿಂದ ಈ ಕ್ಷುದ್ರದುಃಖಕ್ಕೆ ಇಂಬುಗೊಡದೆ ಮನಸ್ಸಿನಲ್ಲಿ ಅಂದುಕೊಂಡನೇನಂದರೆ— ಅಹೋ, ಪರಮೇಶ್ವರನ ಮಾಯೆಯು ಎಷ್ಟು ದುಸ್ತರವಾದದ್ದು! ಇದು ಎಂಥ ವೈರಾಗ್ಯಶೀಲನನ್ನಾದರೂ ಆವರಿಸಿಬಿಡುವದಲ್ಲ! ಸಕಲಪ್ರಾಣಿಗಳ ಕರ್ಮಸಾಕ್ಷಿಯಾದ ಭಗವಾನ್ ಭವಾನೀವಲ್ಲಭನು ನಮ್ಮ ನಮ್ಮ ಪ್ರಾರಬ್ಧಾನುಸಾರವಾಗಿ ಫಲಗಳನ್ನೀಯುತ್ತಿರಲು, ನನಗೆ ಸಂತತಿಯಾಗಲಿಲ್ಲೆಂದು ಮೂರ್ಖನಂತೆ ನಾನು ದುಃಖಿಸುವೆನಲ್ಲ? ತಿಳಿದುನೋಡಿದರೆ ಈ ಪುತ್ರ-ಮಿತ್ರ-ಕಲತ್ರಾದಿಕರು ಪರ್ಯಾಯದಿಂದ ನನಗೆ ಮಾರಕರೇ ಹೊರತು ತಾರಕರಲ್ಲ, "ಆತ್ಮನಸ್ತಾರಕಶ್ಚಾತ್ಮಾ" ಎಂಬಂತೆ ಕರ್ಮಬದ್ಧನಾದ ನನ್ನನ್ನು ಈ ಭವಾಬ್ಧಿ

ಯಿಂದ ತಾರಿಸುವವನು ಸಚ್ಚಿದಾನಂದಘನನಾದ ಸದಾಶಿವನೊಬ್ಬನೇ ಹೊರತು ಈ ಲೌಕಿಕ ಪುತ್ರರಿಂದೇನಾಗುವದು? ಇದಲ್ಲದೆ ಈಷಣಾತ್ರಯ-ಬದ್ಧರಿಗೆ ಮೋಕ್ಷವಿಲ್ಲವೆಂಬದನ್ನು ಶಾಸ್ತ್ರವಾದರೂ ಹೇಳುವದಲ್ಲವೆ? ಹೀಗಿರಲು, ಮಹಾತ್ಮರಿಂದ ತಿರಸ್ಕರಿಸುತ್ತ ಬಂದ ಈ ಕ್ಷುದ್ರ ಪುತ್ರೇಷಣೆಯ ಬಲೆಗೆ ನಾನು ಬೇಕಾಗಿಯೇ ಯಾಕೆ ಸಿಕ್ಕಿಕೊಳ್ಳಬೇಕು? ಎಲಾ, ಎಷ್ಟೋಜನ ನಿರ್ಲಿಪ್ತ ಸಾಂಸಾರಿಕರು ತಮಗೆ ಸಂತಾನವಾಗಿದ್ದರೂ 'ಕಿಂಪ್ರಜಯಾ ಕರಿಷ್ಯಾಮಃ' ಎಂಬಂತೆ ದುಃಖಮೋಹಾದ್ಯನರ್ಥಕಾರಕವಾದ ಈ ಘೋರ ಸಂಸಾರದಿಂದ ತಾರಿಸದಿದ್ದ ಈ ಹೀನಸಂತತಿಯಿಂದ ನಮಗೇನು ಪ್ರಯೋಜನವೆಂದು ಇದ್ದ ಸಂತಾನವನ್ನೇ ತೃಣೀಕರಿಸಿ ಸದ್ವಸ್ತುವಿನ ಶೋಧಕ್ಕಾಗಿ ಹೊರಟುಹೋಗುತ್ತಿರಲು, ಇಲ್ಲದ ಸಂತತಿಗಾಗಿ ಕೊರಗಿ ತದ್ವಾರಾ ಸಂಸಾರದಲ್ಲಿ ಬಿದ್ದು ಆತ್ಮಘಾತಮಾಡಿಕೊಳ್ಳುವ ನನ್ನಂಥ ಅವಿಚಾರಿಯು ನನ್ನ ಹೊರತು ಇನ್ನಾವನಿರುವನು? ಎಂದು ಅಂದುಕೊಂಡು ಸಂತತಿಗಾಗಿ ಚಿಂತಿಸದೆ ಸುಖವಾಗಿ ವಾಸಿಸಹತ್ತಿದನು. ಇತ್ತ ಇವನ ಹೆಂಡತಿಯು ಕೇವಲ ಪ್ರವೃತ್ತಿಮಾರ್ಗದವಳಿರುವದರಿಂದ ಸ್ತ್ರೀ ಸ್ವಭಾವಕ್ಕನುಸರಿಸಿ ದಿನಾಲು ಸಂತತಿಗಾಗಿ ಚಡಪಡಿಸಹತ್ತಿದಳು ಅದರ ಚಿಂತೆಯಿಂದ ಅವಳು ನಿಟ್ಟುಸುರು ಬಿಡುತ್ತ ಒಮ್ಮೊಮ್ಮೆ ಮನಸ್ಸಿನಲ್ಲಿ—"ಎಲ ಎಲಾ! ಇಲ್ಲಿಯವರೆಗೆ ನನ್ನ ಋತುಕಾಲಗಳು ನಿರರ್ಥಕವಾಗಿ ಹೋದವಲ್ಲ! ಕಡೆಯವರೆಗೆ ಹೀಗೆಯೇ ಆದರೆ ಮುಂದೆ ನನ್ನ ಗತಿಯೇನು? "ಮಕ್ಕಳಿಲ್ಲದ ಬಾಳ್ವೆಯು ಕಾಡಿಗಿಂತ ಕಡೆ" ಯೆಂಬಂತೆ ನನ್ನ ಬಾಳ್ವೆಯು ನಿರರ್ಥಕವಾಯಿತಲ್ಲ, ಎಂದು ಬಹುಪ್ರಕಾರವಾಗಿ ಚಿಂತಿಸುತ್ತ ಒಳಗಿಂದೊಳಗೇ ಕೊರಗಹತ್ತಿದಳು. ಹೀಗಿದ್ದರೂ ಇವಳು ತನ್ನ ಚಿಂತೆಯಕಾರಣವನ್ನು ಪತಿಗೆ ತಿಳಿಸಿದ್ದಿಲ್ಲ. ಆದರೆ ಹೆಂಡತಿಯ ಈ ಅಂತರ್ಗತವನ್ನು ಚತುರನಾದ ಸುಧರ್ಮನು ತಿಳಿಯದೆ ಇರಲಿಲ್ಲ; ಆದರೂ ಅವನು ಈ ವಿಷಯವಾಗಿ ಯಾವದೂ ಮಾತಾಡದೆ ಇವಳಿಂದಲೇ ಈ ಪ್ರಸಕ್ತಿಯನ್ನು ಹೋಡಿಸಿ ಪ್ರಸಂಗದಲ್ಲಿ ನಾಲ್ಕು ಸಮಾಧಾನದ ಮಾತುಗಳನ್ನು ಹೇಳಿ ಶಾಂತಗೊಳಿಸಬೇಕೆಂದು ಹಾಗೆಯೇ ಬಿಟ್ಟುಕೊಟ್ಟದ್ದನು.

ಈ ಮಾತಿಗೆ ಮುಂದೆ ನಾಲ್ಕಾರು ದಿನಗಳು ಕ್ರಮಿಸಿದ ಮೇಲೆ ಒಂದು ದಿನ ಸುದೇಹಳು ಪತಿಯು ಪ್ರಸನ್ನಚಿತ್ತನಾಗಿರುವದನ್ನು ನೋಡಿ ಬಹುಲೀನತೆಯಿಂದ ನಮಸ್ಕರಿಸಿ—ಪ್ರಾಣೇಶನೇ, ನಿಮ್ಮಲ್ಲಿ ನನ್ನದೊಂದು ವಿಜ್ಞಾಪನೆಯದೆ. ಇದನ್ನು ಅರಿಕೆಮಾಡಿಕೊಳ್ಳಬೇಕೆಂದು ನಾನು ನನ್ನ ಮನಸ್ಸಿನಲ್ಲಿ ಬಹಳ ದಿವಸಗಳಿಂದ ಮಾಡಿಕೊಂಡಿದ್ದರೂ ಧೈರ್ಯಸಾಲದ್ದಕ್ಕೆ ಬಿಟ್ಟದ್ದೆನು. ಇಂದು ನನಗೆ ಬಹಳೇ ಅಸಮಾಧಾನವಾದದ್ದರಿಂದ ನಿರ್ವಾಹವಿಲ್ಲದೆ ಹೇಳಿಕೊಳ್ಳಬೇಕಾಯಿತು. ಸರ್ವ ಸಂಸಾರಸುಖಗಳಲ್ಲಿ ಶ್ರೇಷ್ಠ ಸುಖವೆನಿಸಿ ಸದ್ಗತಿಗೆ ಸಾಧನವಾಗಿರುವ ಸಂತತಿಯೇ ನನಗಿಲ್ಲದಿರಲು, ಉಳಿದ ಸಾಧನಗಳಿಂದೇನು ಸುಖವಾಗಬಹುದು? ಪರಮ ವೈರಾಗ್ಯಶೀಲರಾದ ನಿಮಗೆ ಈ ವಿಷಯದ ಮಹತ್ವವು ಅಷ್ಟೊಂದು ತೋರದಿದ್ದರೂ, ಅಜ್ಞಳಾದ ನನ್ನ ದೃಷ್ಟಿಗೆ ಇದು ಬಹು ಮಹತ್ವದ್ದಾಗಿಯೂ, ತಾರಕವಾಗಿಯೂ ತೋರುವದು. ಆದುದರಿಂದ ಅಲ್ಪಕಾಲದಲ್ಲಿ ನನಗೆ ಪುತ್ರಸಂತಾನವಾಗುವಂತೆ ತಾವು ಅನುಗ್ರಹಿಸಬೇಕು. ಇಷ್ಟೇ ತಮ್ಮ ಚರಣಕಮಲಗಳಲ್ಲಿ

ನನ್ನ ಪ್ರಾರ್ಥನೆಯು, ಎಂದು ಕಷ್ಟದಿಂದ ನುಡಿಯುವಾಗ ಅವಳ ಕಂಠವು ಬಿಗಿದುಬಂದು ಕಣ್ಣೊಳಗಿಂದ ದುಃಖಾಶ್ರುಗಳು ಸುರಿಯುಹತ್ತಿದವು. ಆಗ ಸುಜ್ಞನಾದ ಸುಧರ್ಮನು ಹೆಂಡತಿಯ ಈ ದುಃಖಾವೇಗವನ್ನು ನೋಡಿ ಖೇದಾಶ್ಚರ್ಯ ಮುದ್ರೆಯಿಂದ ಅವಳನ್ನು ಕುರಿತು—ಪ್ರಿಯೇ, ಸಂತತಿಗಾಗಿ ನೀನು ಇಷ್ಟೊಂದು ನೊಂದುಕೊಂಡಿರುವದೇಕೆ? ಆಗುವಯೋಗವಿದ್ದರೆ ಮುಂದಾದರೂ ಆಗಬಹುದು. ಒಂದು ವೇಳೆ ಆಗದಿದ್ದರೂ, ಪರ ಮೇಶ್ವರನ ಇಚ್ಛೆಯು ವಿರುದ್ಧವಾದ ಈ ಸಂತತಿಯು ಬಗ್ಗೆ ನಾವು ಚಿಂತಿಸಿಯಾದರೂ ಮಾಡುವದೇನು? ಈ ಸೃಷ್ಟಿಯಲ್ಲಿದ್ದ ಸಕಲ ಪ್ರಾಣಿಮಾತ್ರಗಳ ಪ್ರತಿ ಒಂದು ವ್ಯವಹಾರವು ಜಗಜ್ಜನ್ಮಾದಿಕಾರಣನಾದ ಮಹಾದೇವನ ಇಚ್ಛೆಯಂತೆಯೇ ನಡೆದಿರುವಾಗ ಅವನ ಇಚ್ಛೆಗಾದರೂ ನಾವು ಯಾಕೆ ಅಡ್ಡಾಗಬೇಕು? ಜಗತ್ಪಿತನಾದ ಸದಾಶಿವನು ನಮ್ಮ ಪ್ರಾಚೀನ ಕರ್ಮಾನುಸಾರವಾಗಿ ಫಲಕೊಡುತ್ತಿರಲು, ಅವನಲ್ಲಿ ದೋಷಾರೋಪವು ಎಂದಿಗೂ ಕೂಡದು. ಹೀಗೆ ಸ್ವಕರ್ಮಜಾಲಗ್ರಥಿತರಾದ ನಾವು ಯಾರಿಗೂ ದೋಷವಿಡದೆ ಜನ್ಮಾಂತರೀಯ ಶುಭಾ ಶುಭ ಕರ್ಮಗಳನ್ನು ಅವಶ್ಯವಾಗಿ ಭೋಗಿಸಿಯೇ ತೀರಬೇಕು. ವಿಚಾರಿಸಿ ನೋಡಿದರೆ ಚರಾಚರಾತ್ಮಕವಾದ ಈ ಪ್ರಪಂಚವೇ ಸ್ವಪ್ನೋಪಮವಾಗಿರಲು, ಇಂಥ ವಿನಶ್ವರ ಸ್ವಾಪ್ನಿಕ ಸಂಸಾರದಲ್ಲಿ ನಾವು ನಮ್ಮ ಕ್ಷುದ್ರ ವಿಷಯಸುಖಕ್ಕಾಗಿ ಹುಟ್ಟಿಸಿದ ಈ ಸಂತತಿಯು ನಮ್ಮನ್ನು ಎಷ್ಟು ಪಾತ್ರ ತಾರಿಸೀತು? ಆದ್ದರಿಂದ ಪ್ರಿಯೇ, ಇನ್ನು ನೀನು ಈ ಬಗೆಯ ಕ್ಷುದ್ರ ಮನಸ್ತಾಪಗಳಿಗೆ ಇಂಬುಗೊಡದೆ, ಸರ್ವ ಮಂಗಲನಾದ ಸದಾಶಿವನಲ್ಲಿ ಲಕ್ಷವಿರಿಸಿ ಸೌಖ್ಯ ಹೊಂದು.

ಹೀಗೆ ಮುಮುಕ್ಷು-ಜನೋಚಿತವಾದ ಪತಿಯ ಜ್ಞಾನೋಪದೇಶವನ್ನು ಕೇಳಿ ಸುದೇಹಳಿಗೆ ಸ್ವಲ್ಪಮಟ್ಟಿಗೆ ಸಮಾಧಾನವಾದರೂ, ಸಾಂಸಾರಿಕ ಹಲವು ದೋಷಗಳಿಂದ ಮಲಿನವಾದ ಅವಳ ಅಂತಃಕರಣದಲ್ಲಿ ಆ ತತ್ವಗಳು ಬಹಳಹೊತ್ತು ನಿಲ್ಲದೆ ಕಾದಹಂಚಿನೊಳಗಿನ ಜಲಬಿಂದುಗಳಂತೆ ಅಲ್ಲಿಯೇ ಅಡಗಿ ಹೋದವು. ಒಂದು ದಿನ ನೆರೆದ ಸ್ತ್ರೀಯರ ಸಂಘದಲ್ಲಿ 'ಅಪುತ್ರವತಿ'ಯೆಂದು ಸುದೇಹಳನ್ನು ಬಹಳವಾಗಿ ಹೆಂಗಸರು ಜರೆದಾಡಿದ್ದರಿಂದ ಆಕೆಯು ಪತಿಯ ಚರಣಕ್ಕೆರಗಿ ನಡೆದ ಸಂಗತಿಯನ್ನೆಲ್ಲ ತಿಳಿಸಿ ಇನ್ನು ನೀವು ನನಗೆ ಸಂತತಿಯನ್ನು ಕೊಡದಿದ್ದರೆ ನಿಮ್ಮ ಪಾದಗಳಮೇಲೆ ಬಿದ್ದು ಪ್ರಾಣಕೊಡುವೆನೆಂದು ಪತಿಯ ಎರಡೂ ಪಾದಗಳನ್ನು ಗಟ್ಟಿಯಾಗಿ ಹಿಡಿದುಕೊಂಡು ಕುಳಿತುಬಿಟ್ಟಳು. ಆಗ ಆ ವಿವೇಕಶೀಲನಾದ ಬ್ರಾಹ್ಮಣನು ಎಷ್ಟುಪರಿಯಾಗಿ ಬೋಧಿಸಿದರೂ ಈ ನಿರ್ಧಾರದ ಹೆಣ್ಣು ಮಗಳು ತನ್ನ ಸಂಕಲ್ಪವನ್ನು ತಿರುಗಿಸಲಿಲ್ಲ. ಆಗ ಸುಧರ್ಮನು ಇದಕ್ಕೆ ಏನು ಮಾಡಬೇಕಾದೀತೆಂದು ಬಹುಕಾಲದವರೆಗೆ ಯೋಚಿಸಿ ಕಡೆಗೆ ಅವನು ಮನಸ್ಸಿನಲ್ಲಿ—ನಾನು ಈವರೆಗೆ ಮಾಡಿದ ಪುಣ್ಯದೊಳಗಿನ ಅರ್ಧಾಂಶವನ್ನು ಇವಳ ಸಂತತಿಗಾಗಿ ವೆಚ್ಚಮಾಡದಿದ್ದರೆ ನಿರ್ವಾಹವಿಲ್ಲವೆಂದು ನಿರ್ಧರಿಸಿ ಕೂಡಲೆ ಅವಳನ್ನು ದೇವಾಗಾರಕ್ಕೆ ಕರೆದೊಯ್ದು ದೇವರ ಜಗುಲಿಯಮೇಲಿದ್ದ ಭಿನ್ನಜಾತಿಯ ಎರಡು ಪುಷ್ಪಗಳನ್ನು ತಕ್ಕೊಂಡು ಅವನ್ನು ತನ್ನ ಹಸ್ತೋದಕದಿಂದ ಅಭಿಮಂತ್ರಿಸಿ ದೇವರ ಮುಂದುಗಡೆಗೆ ಚಲ್ಲಿಕೊಟ್ಟನು. ಅವುಗಳಲ್ಲಿ ಒಂದು ಜಾತಿಯದು

ಇವಳ ಸಂತತಿಯು ಭಾವವನ್ನು ಇನ್ನೊಂದು ಜಾತಿಯದು ಸಂತತಿಯ ಅಭಾವವನ್ನು ಸೂಚಿಸುತ್ತಿರುವವಿದ್ದು, ಅವೆರಡನ್ನೂ ಮನಸ್ಸಿನಲ್ಲಿ ಗುರುತಿಸಿ ತನ್ನ ಹೆಂಡತಿಯನ್ನು ಕುರಿತು.—"ಪ್ರೀಯೆ, ಇವೆರಡರಲ್ಲಿ ಯಾವದಾದರೊಂದನ್ನು ಸ್ಪರ್ಶಮಾಡು. ಯಾಕಂದರೆನಿನ್ನ ಪ್ರಾಕ್ತನದಲ್ಲಿ ಮೂಲತಃ ಸಂತಾನವಿರದಿದ್ದರೂ ನಾನು ನನ್ನ ಬಹುಕಾಲದ ಪುಣ್ಯಸಂಪತ್ತನ್ನು ವೆಚ್ಚಮಾಡಿ. ನಿನ್ನ ಸಮಾಧಾನಕ್ಕಾಗಿ ಈ ಸುಯೋಗವನ್ನು ತಂದುಕೊಟ್ಟದ್ದೇನೆ. ಇದರಲ್ಲಿ ನಿನ್ನ ಪುಣ್ಯವಾದರೂ ಒಳಪಡಬೇಕಾಗಿರುವದಾದ್ದರಿಂದ ಈ ಕುಲದೇವತೆಗೆ ಭಕ್ತಿಯಿಂದ. ನಮಸ್ಕರಿಸಿ ಬಹು ಶುದ್ಧ ಭಾವದಿಂದ ಈ ಕಾರ್ಯಮಾಡು" ಎಂದು ಅಜ್ಞಾಪಿಸಿದನು. ಆಗ ಸುದೇಹಳು ತನ್ನ ದುರದೃಷ್ಟ ಪ್ರಭಾವದಿಂದ ಪತಿಯ ಈ ತಂತ್ರದಲ್ಲಿ ವಿಶ್ವಾಸವಿರಿಸದೆ ಕುಲದೇವತೆಗೆ ನಮಸ್ಕರಿಸದೆ, ಹಾಗೆಯೇ ಎಡಭಾಗದ ಒಂದು ಪುಷ್ಪವನ್ನು ಕೈಯ್ಯಲ್ಲಿ ತಕ್ಕೊಂಡಳು. ಆಗ ತಾನು ತನ್ನ ಮನಸ್ಸಿಲ್ಲಿ ಗುರುತಿಸಿಟ್ಟ ಸಂತಾನ ಸೂಚಕ ಸುಮನವನ್ನು ಬಿಟ್ಟು ತಟ್ಟನೆ ಅನ್ಯಪುಷ್ಪವನ್ನು ಗೃಹಿಸಿದ್ದರಿಂದ ಸುಧರ್ಮನು ಅಸಮಾಧಾನಮುದ್ರೆಯಿಂದ ತುಸುಹೊತ್ತು ಕಣ್ಣು ಮುಚ್ಚಿ ನಿಟ್ಟುಸುರು ಬಿಟ್ಟು ಸುದೇಹಳನ್ನು ಕುರಿತು—"ಪ್ರಿಯೇ, ಪರಮೇಶ್ವರನ ಸತ್ಯಸಂಕಲ್ಪವನ್ನು ತಪ್ಪಿಸುವವರಾರು? ನಿನ್ನ ದೌರ್ಭಾಗ್ಯವೇ ಮೂರ್ತಿಗೊಂಡು ನಿನ್ನ ಕೈಯಿಂದ ಈ ಕೆಲಸ ಮಾಡಿಸುವಾಗ ನನ್ನ ಪುಣ್ಯವಾದರೂ ಏನು ಮಾಡೀತು? ಈ ಮಾತು ನಾನು ನಿನಗೆ ಮೊದಲೇ ತಿಳಿಸಲಿಲ್ಲವೆ? ಆಗಲಿ, ಈಶೇಚ್ಛೆಯಿದ್ದಂತಾಗಲಿ, ನನಗೆ ಶಕ್ಯವಿದ್ದ ಮಟ್ಟಿಗಂತೂ ನಾನು ಪ್ರಯತ್ನಿಸಿದೆನು. ಇನ್ನು ಇದರಲ್ಲಿ ನನ್ನ ಯತ್ನವೂ ನಡೆಯುವ ಹಾಗಿಲ್ಲ; ಮುಗಿಯಿತು, ಇನ್ನು ನಿನ್ನ ಸಂತತಿಯ ಮಾತೇ ಮುಗಿಯಿತು. ಇನ್ನು ನೀನು ಸರ್ವಥಾ ಈ ವಿಷಯವಾಗಿ ದುಃಖಿಸಬೇಡ" ಎಂದು ಹೇಳಿ ಸುಧರ್ಮನು ಮೊದಲಿನಂತೆಯೇ ತನ್ನ ಧರ್ಮ ಕರ್ಮಗಳಲ್ಲಿ ತೊಡಗಿಕೊಂಡನು.

ಪತಿಯ ಈ ನಿರಾಶಾಜನಕವಾದ ಭಾಷಣವನ್ನು ಕೇಳಿ ಸುದೇಹಳ ಆಶಾತಂತುವು ಒಮ್ಮೆಲೆ ಹರಿದುಹೋಗಿ ದುಃಖಾತಿಶಯದಿಂದ ಆಕೆಯು ನೆಲಕ್ಕೆ ಬಿದ್ದಳು. ಹೀಗೆ ಕೆಲವು ಹೊತ್ತು ತಳಮಳಿಸಿ ದುಃಖವೇಗವು ತುಸು ಕಡಿಮೆಯಾದ ಮೇಲೆ ಎದ್ದು ಕುಳಿತು ಶೂನ್ಯಮನಸ್ಸಿನಿಂದ ಏನೋ ಯೋಚಿಸಹತ್ತಿದಳು. ತುಸು ಹೊತ್ತಿನಲ್ಲಿ ಅವಳಿಗೆ ಯಾವದೋಒಂದು ಸಂಗತಿಯು ತೋಚಿದಂತಾಗಿ, ತಾನು ಕುಳಿತ ಸ್ಥಳದಿಂದ ಚಟ್ಟನೆ ಮೇಲಕ್ಕೆದ್ದು ಬಡಬಡ ಪತಿಯ ಬಳಿಗೆ ಹೋಗಿ ವಿನಯದಿಂದ ಕೈಜೋಡಿಸಿ— ಪತಿರಾಜಾ, ಹತಭಾಗ್ಯಳಾದ ನನ್ನ ಗತಿಯಂತೂ ಹೀಗಾಗಿ ಹೋಯಿತು. ಆದರೂ ಚಿಂತೆಯಿಲ್ಲ, ಇನ್ನು ನೀವು ನನ್ನ ಅನುಮತಿಯಂತೆ ಎರಡನೆಯ ಲಗ್ನವನ್ನಾದರೂ ಮಾಡಿಕೊಂಡು ಪುತ್ರರನ್ನು ಪಡೆಯಿರಿ. ಪುತ್ರಹೀನರಾಗಿ ಹೀಗೆ ಜೀವಿಸಿರುವದು ನನ್ನ ಮನಸ್ಸಿಗೆ ಎಷ್ಟು ಮಾತ್ರವೂ ಬರುವದಿಲ್ಲ. ಯಾರಿಂದಲೇ ಆಗಲಿ, ಸಂತಾನವಾಗಿ ನಮ್ಮಮನೆತನವು ನಿಂತರಾಯಿತು. ಆದ್ದರಿಂದ ಪ್ರಿಯಾ, ನನ್ನ ಈ ಪ್ರಾರ್ಥನೆಯನ್ನು ಅಲ್ಲಗಳೆಯದೆ ನನಗಿಷ್ಟು ನಡೆಯಿಸಿಕೊಟ್ಟರೆ ನೆಟ್ಟಗಾಗುವದು, ಎಂದು ಪ್ರಾರ್ಥಿಸಿದಳು. ಆಗ ಸುಧರ್ಮನು ಅವಳನ್ನು ತಿರಸ್ಕರಿಸಿ—ಅವಿಚಾರಿಯೇ, ನಿನ್ನೊಬ್ಬಳಿಂದಲೇ ನನಗೆ ಸಾಕು

ಬೇಕಾಗಿ ಹೋಗಿರಲು, ಇನ್ನು ಎರಡನೆಯ ಲಗ್ನಮಾಡಿ ನನ್ನ ಧರ್ಮಕರ್ಮಗಳಿಗೆ ವಿಘ್ನ ತರಬೇಕೆನ್ನುವೆಯಾ! ಸಾಕು, ನನಗೆ ಈ ದುಃಖದಾಯಕ ಸಂಸಾರವೇ ಸಾಕೆಂ"ದು ನಿರಾಕರಿಸಿ ಮಾತನಾಡಿದರೂ ಕೇಳದೆ ಆ ಭಂಡಿಯು ಮರುದಿನವೇ ತನ್ನ ತವರಮನೆಗೆಹೋಗಿ ಸನಿಯದ ಎಲ್ಲ ಸಂಬಂಧಿಕರನ್ನೂ ಕರೆಕಳಿಸಿ ಉಪವರಳಾದ ಘೂಷ್ಮೆಯೆಂಬ ಹೆಸರಿನ ತನ್ನ ಅಣ್ಣನ ಮಗಳನ್ನು ನಿಶ್ಚಯಿಸಿ ಲಗ್ನದ ಮುಹೂರ್ತವನ್ನು ಸಹ ಗೊತ್ತುಮಾಡಿ ತಿರುಗಿ ಪತಿಯ ಬಳಿಗೆ ಬಂದು ಆದ ಎಲ್ಲ ಸಂಗತಿಯನ್ನೂ ಅರುಹಿದಳು. ಆಗವಳ ದೀರ್ಘ ಸಾಹಸವನ್ನೂ, ಸಂತತಿಯ ವಿಷಯವಾಗಿದ್ದ ಅವಳ ಆತುರತೆಯನ್ನೂ ನೋಡಿ ಒಂದು ಬಗೆಯಿಂದ ಸುಧರ್ಮನಿಗೆ ಸಮಾಧಾನವಾದರೂ, ವೈರಾಗ್ಯಶೀಲನಾದ ಅವನ ಮನಸ್ಸು ಅವಳು ಮಾಡಿಕೊಂಡು ಬಂದ ಈ ಕಾರ್ಯಕ್ಕಾಗಿ ಸಹಸಾ ಒಡಂಬಡದೆ ಅವಳನ್ನು ಕುರಿತು ಶಾಂತಮನಸ್ಸಿನಿಂದ ಅವನು—ಸಾಹಸಿಯೇ, ಇದೇನು ಮಾಡಿಕೊಂಡು ಬಂದೆ! ಬೇಡ, ಈ ಕಾರ್ಯದಿಂದ ನಿನಗೆ ಎಂದಿಗೂ ಸೌಖ್ಯವಾಗಲಿಕ್ಕಿಲ್ಲ. ನೋಡು, ಕಡೆಯ ವರೆಗೆ ಲಕ್ಷವಿಟ್ಟು ವಿಚಾರಿಸಿ ನೋಡು. ಈಗಿರುವ ನಿನ್ನ ಈ ಸರಲಮನಸ್ಸು ಲಗ್ನವಾದ ಮೇಲೆ, ಲಗ್ನವಾದಾಗಿನದು ಸಂತತಿಯಾದಮೇಲೆ, ಸಂತತಿಯಕಾಲದ್ದು ಸೊಸೆಯಬಂದ ಮೇಲೆ ಸಮವಾಗಿ ಉಳಿಯಲಿಕ್ಕಿಲ್ಲಕಂಡೆಯಾ? ಸವತಿ ಮಾತ್ಸರ್ಯವು ಬಹು ಭಯಂಕರ ವಾದದ್ದು. ಇದು ಪ್ರತ್ಯಕ್ಷ ಬೆನ್ನಿನಲ್ಲಿ ಬಿದ್ದ ಅಕ್ಕ ತಂಗೆಯರನ್ನು ಸಹ ನಾಶಗೊಳಿಸುತ್ತಿರು ವಾಗ ಅಣ್ಣನ ಮಗಳಾದ ಆ ಘುಷ್ಮೆಯನ್ನು ವಿಲಕ್ಷಣಸ್ವಭಾವದ ನೀನು ಕಡೆಯವರೆಗೆ ಯೋಗ್ಯವಾಗಿ ನಡೆಯಿಸಿಕೊಂಡೀಯೆಂದು ಹೇಳುವದು ನನ್ನಿಂದಂತೂ ಆಗದು. ಆದುದರಿಂದ ಈ ಕಾರ್ಯಕ್ಕೆ ನೀನು ಕೈಹಾಕದಿರುವದೇ ಯೋಗ್ಯವೆಂದು ನನಗೆ ಕಂಡುಬರುತ್ತದೆ.……ಎಂದು ಸುಧರ್ಮನು ಇನ್ನೂ ಏನೇನೋ ಮುಂದೆ ಮಾತಾಡಬೇಕೆನ್ನುವಷ್ಟರಲ್ಲಿ ಮಹಾ ಅಭಿಮಾನಿಯಾದ ಸುದೇಹಳಿಗೆ ಈ ಮಾತು ಸಹಿಸದೆ, ನಡುವೇ ಬಾಯಿ ಹಾಕಿ—ಎಲಎಲಾ, ಎಂಥ ಮಾತು ನಿಮ್ಮದಿದು! ಪ್ರತ್ಯಕ್ಷ ನನ್ನ ಅಣ್ಣನ ಮಗಳಾದ ಆ ಘುಷ್ಮೆಯನ್ನು ನಾನು ಉರಿಸಿಕೊಳ್ಳುವವಳೇ? ಈ ಮಾತು ಎಂದಿಗೂ ಸಂಭವಿಸದು. ಯಾಗಾದರೂ ಬಂದು ನನ್ನ ಕೆಲಸ ಬಿಡಿಸಿದರೆ ಸಾಕು. ಇದೆಲ್ಲ ನನಗೇನು ಬೇಕಾಗಿದೆ! ಅವಳು ಮೈನೆರೆದು ಮನೆಗೆ ಬರುವದೊಂದೇತಡ, ಎಲ್ಲ ಅಧಿಕಾರಗಳನ್ನೂ ಅವಳಿಗೊಪ್ಪಿಸಿ ಅವಳ ಮಕ್ಕಳು ಮರಿಗಳನ್ನಾಡಿಸುತ್ತ ಬೇಕಾದಹಾಗೆ ಇರುವೆನು; ನೋಡಿಯಾದರೂ ನೋಡಿರಿ, ಸುಮ್ಮನೆ ನನಗೆ ದೋಷಕೊಡಬೇಡಿರಿ, ಎಂದು ನುಡಿದು ಮರುದಿನವೇ ತನ್ನ ಎಲ್ಲ ಆಪ್ತವರ್ಗವನ್ನು ಕೂಡಿಸಿ ಲಗ್ನದ ಸಮರಣೆಗೆ ಪ್ರಾರಂಭಿಸಿ ಮುಂದೆ ನಾಲ್ಕಾರು ದಿವಸಗಲ್ಲಿ ಒಂದು ಸುಮುಹೂರ್ತನೋಡಿ ವಿವಾಹವಿಧಿಯನ್ನು ನೆರವೇರಿಸಿಬಿಟ್ಟಳು. ಲಗ್ನವಾದ ಮೂರೇತಿಂಗಳಲ್ಲಿ ಘುಶ್ಮೇಯು ಮೈನೆರೆದು ಮನೆಗೆಬಂದಳು. ಸುಧರ್ಮನು ಆವರೀರ್ವರೊಡನೆ ನಾನಾವಿಧ ವಿಷಯೋಪ ಭೋಗಗಳನ್ನು ಅತ್ಯನಾಸಕ್ತಿಯಿಂದ ಭೋಗಿಸಹತ್ತಿದನು. ಇವನ ಕಿರಿಯ ಹೆಂಡತಿಯು ಹಿರಿಯ ಹೆಂಡತಿಯಷ್ಟು ರೂಪವಲ್ಲಿ ಹೇಳಿಕೊಳ್ಳುವಹಾಗೆ ಇದ್ದಿಲ್ಲವಾದರೂ ಇವಳು ಅವಳಿಗಿಂತ ಸುಶೀಲೆಯೂ, ಸದ್ಗುಣೆಯೂ,

ಪತಿಭಕ್ತಿಪರಾಯಣಳೂ, ಸಮಯುವರಿತವಳೂ ಆಗಿದ್ದಳು. ಆದ್ದರಿಂದ ಗುಣಲುಬ್ಧನಾದ ಸುಧರ್ಮನಿಗೆ ಸ್ವಾಭಾವಿಕವಾಗಿ ಇವಳೇಹೆಚ್ಚು ಪ್ರೀತಿಯವಳಾಗಿ ತೋರಿದರೂ ಚಾಣಾಕ್ಷನಾದ ಆ ಬ್ರಾಹ್ಮಣನು ಅದನ್ನು ವ್ಯಕ್ತಗೊಳಿಸದೆ ತನ್ನ ಧರ್ಮಕೃತ್ಯಗಳಿಗೆ ವಿಘ್ನ ಬರಬಾರದೆಂದು ಹೊರಹೊರಗೆ ಹಿರಿಯುಹೆಂಡತಿಯುನ್ನೇ ಪ್ರೀತಿಸುವವನಂತೆ ತೋರಿಸುತ್ತಿದ್ದನು. ಇದನ್ನರಿತ ಸುದೇಹಳು ಹೊರಗೆ ಅಡಿ ತೋರಿಸದೆ ಈರ್ಷ್ಯಾತಿಶಯದಿಂದ ಆ ಘುಷ್ಮೆಯನ್ನು ಒಳಗಿಂದೊಳಗೆ ತಿಕ್ಕಿಮುಕ್ಕುತ್ತಿದ್ದಳು- ಹೀಗೆ ಪೀಡಿಸುತ್ತಿದ್ದರೂ ಆ ವಿವೇಕಿಯಾದ ಘುಷ್ಮೆಯು ತನ್ನ ಪ್ರಚಂಡವಾದ ಸಹಿಷ್ಣುತೆಯಿಂದ ತನ್ನ ಪತಿಸೇವೆಗೂ, ಸದ್ವೃತ್ತಿಗೂ ಭಂಗಬಾರದಂತೆ ನಡೆದುಕೊಳ್ಳುತ್ತ ಬಂದಿದ್ದಳು.

ಹೀಗೆ ಆ ವಿಪ್ರೋತ್ತಮನು ಉಭಯ ಪತ್ನಿಯರಿಂದ ಕೂಡಿ ಬಹುಕಾಲದವರೆಗೆ ವಿಷಯಭೋಗಗಳನ್ನು ಭೋಗಿಸಿದನು. ಆದರೆ ದುರ್ದೈವದಿಂದ ಚಿಕ್ಕವಳಹೊಟ್ಟೆಯಲ್ಲಿಯೂ ಸಂತಾನವಾಗಲಿಲ್ಲ. ಆಗ ಘನವಂತಳಾದ ಆ ಘುಶ್ಮೆಯು ಅತ್ಯಂತವಾಗಿ ಅಸಮಾಧಾನಪಟ್ಟು ಇದಕ್ಕಾಗಿ ಇನ್ನು ದೇವತಾನುಗ್ರಹವನ್ನು ಸಂಪಾದಿಸಬೇಕೆಂಬು ನಿರ್ಧರಿಸಿ ಅವಳು ಪತಿಯಿಂದ ಶಿವದೀಕ್ಷೆಯನ್ನು ಪಡೆದು ಮನೆಯಲ್ಲಿಯೇ ಶುದ್ಧಭಾವದಿಂದ ಕೋಟಿಲಿಂಗಾರ್ಚನೆಗೆ ಪ್ರಾರಂಭಿಸಿದಳು. ನಿತ್ಯ ಅವಳು ತನ್ನ ಸಂಕಲ್ಪದಂತೆ ನೂರಾಒಂದು ಲಿಂಗಗಳನ್ನು ಮಾಡಿ ಪತಿಯ ಅನುಮತಿಯಂತೆ ವಿಧಿಪೂರ್ವಕವಾಗಿ ಅವನ್ನು ಪೂಜಿಸಿ ತೀರ್ಥಪ್ರಸಾದವಾದಮೇಲೆ ಪೂಜಿಸಿದ ಆ ಲಿಂಗಗಳನ್ನು ಭಕ್ತಿಯಿಂದ ಒಯ್ದು ಊರಹೊರಗಿನ ಒಂದು ಸರೋವರದಲ್ಲಿ ವಿಸರ್ಜಿಸುತ್ತಿದ್ದಳು. ಹೀಗಿವಳ ಲಿಂಗಾರ್ಚನೆಯ ವಿಧಿಯು ಪ್ರತಿನಿತ್ಯ ಅನ್ನ ಸಂತರ್ಪಣೆಯೊಂದಿಗೆ ಅವಿಚ್ಛಿನ್ನವಾಗಿ ನಡೆದು, ಕಡೆಗೊಂದು ಮಂಗಲದಿವಸದಲ್ಲಿ ಲಿಂಗಗಳ ಕೋಟಿಸಂಖ್ಯೆಯು ಪೂರ್ಣವಾಯಿತು; ಆಗಂತೂ ಆ ದಂಪತಿಗಳು ಆನಂದಸಾಗರದಲ್ಲಿ ಮುಳುಗಿ ಲಿಂಗಾರ್ಚನೆಯ ಮಂಗಲವನ್ನು ಬಹು ಸಮಾರಂಭದಿಂದ ಮಾಡಿ ಮುಗಿಸಿದರು.

ಇಂತು ಬಹುದಿವಸಗಳವರೆಗೆ ಏಕನಿಷ್ಠೆಯಿಂದ ಆ ಸಾಧ್ವೀಶಿಖಾಮಣಿಯು ಶಿವನನ್ನು ಆರಾಧಿಸಲು, ಅವಳ ಶುದ್ಧಭಾವನೆಗೆ ಮೆಚ್ಚಿ ಮಹಾದೇವನು ಅಂದಿನ ಅವಳ ಬೆಳಗುಮುಂಜಾವಿನ ಸ್ವಪ್ನದಲ್ಲಿ ವಿಪ್ರರೂಪದಿಂದ ಪ್ರಕಟನಾಗಿ ಅವಳನ್ನು ಕುರಿತು—ಸುಮಂಗಲೆಯೇ, ಭಕ್ತಶ್ರೇಷ್ಠಳಾದ ನಿನ್ನ ಬಯಕೆಯಂತೆ ಸುಂದರನೂ, ಸದ್ಗುಣಿಯೂ, ಸದಾ, ಶಿವಂಕರನಾದ ನನ್ನಲ್ಲಿ ನಿಷ್ಠೆಯುಳ್ಳವನೂ ಆದ ಒಬ್ಬ ಸುಪುತ್ರನನ್ನು ನಾನು ನಿನಗೆ ದಯಪಾಲಿಸಿರುವೆನು. ಇನ್ನು ನೀನು ಸಂತತಿಗಾಗಿ ಚಿಂತಿಸಬೇಡ, ಎಂದು ಅಮೃತಸದೃಶವಾದ ವಾಣಿಯಿಂದ ನುಡಿದು ಅದೃಶ್ಯನಾದನು. ಮರುದಿನ ಬೆಳಗಾಗುತ್ತಲೆ ಆ ಭಾವಿಕಳು ತನ್ನ ಸ್ವಪ್ನದಸಂಗತಿಯನ್ನು ಪತಿಗೆ ತಿಳಿಸಲು ಅದರಿಂದ ಅವನಿಗೂ ಪರಮಾನಂದವಾಗಿ ಶಿವಭಕ್ತಿಯ ಶ್ರೇಷ್ಠತೆಗಾಗಿ ಅವಳನ್ನು ಅಭಿನಂದಿಸಿದನು. ಮುಂದೆ ಕುಸುದಿವಸಗಳಲ್ಲಿಯೇ ಸರ್ವೇಶ್ವರನ ವರವಚನದಂತೆ ಆ ಸಾಧ್ವಿಗೆ ಒಂದೊಂದೇ ಗರ್ಭಚಿನ್ಹಗಳು ತೋರಹತ್ತಿದವು. ಶಿವತೇಜದಿಂದ ಅವಳಮುಖವು ಪ್ರಕಾಶಿಸಹತ್ತಿತು. ನವಮಾಸ

ಗಳು ಪೂರ್ಣವಾಗಲು, ಸುಮುಹೂರ್ತ ಸುನಕ್ಷತ್ರಗಳಲ್ಲಿ ಸಾಕ್ಷಾತ್ ಸೂರ್ಯನಂತೆ ತೇಜಸ್ವಿಯಾದ ಒಂದು ಗಂಡು ಶಿಶುವನ್ನು ಆಕೆಯು ಹೆತ್ತಳು, ಆಗ ಸುಧರ್ಮನು ಸಂತೋಷಪಟ್ಟು ಸುಮುಹೂರ್ತದಲ್ಲಿ ಜನಿಸಿದ ಆ ಶಿಶುವಿಗೆ ಜಾತಕರ್ಮಸಂಸ್ಕಾರಮಾಡಿ ದಾನದಕ್ಷಿಣಾದಿಗಳಿಂದ ಬ್ರಾಹ್ಮಣರನ್ನು ಸಂತೋಷಪಡಿಸಿದನು. ಮುಂದೆ ಹನ್ನೆರಡನೆಯ ದಿವಸ ಘುಷ್ಮೆಯು ಸಕಲ ಸುವಾಸಿನಿಯರೊಂದಿಗೆ ಶಂಕರನ ವರಪ್ರಸಾದದಿಂದ ಜನ್ಮವಾದದ್ದರಿಂದ ತನ್ನ ಮಗುವಿಗೆ ಶಂಕರನೆಂಬ ನಾಮವಿಟ್ಟಳು. ಮುಂದೆ ಶಂಕರನಿಗೆ ಐದನೆಯ ವರ್ಷವು ಪ್ರಾಪ್ತವಾಯಿತು. ಆಗ ಸಕಲಶಾಸ್ತ್ರಪಾರಂಗತನಾದ ಸುಧರ್ಮನು ಶಂಕರನ ಉಪನಯನ ಸಂಸ್ಕಾರವನ್ನು ಮಾಡಿ ಮುಂದೆ ಅವನು ೨೦ ವರ್ಷದವನಾಗುವವರೆಗೆ ಮನೆಯಲ್ಲಿಯೇ ಅವನಿಗೆ ವೇದಶಾಸ್ತ್ರಾಧ್ಯಯನವನ್ನು ಮಾಡಿಸಿ ಬುದ್ಧಿವಂತನಾದ ಅವನಿಗೆ ವಂಶಪರಂಪರಾಗತವಾದ ಶಿವದೀಕ್ಷೆಯನ್ನು ಕೊಟ್ಟು ಅವನನ್ನು ಭಕ್ತಿಜ್ಞಾನಸಂಪನ್ನನಾಗಿ ಮಾಡಿದನು. ಹೀಗೆ ವಿವೇಕಿಯಾದ ಆ ತರುಣನ ವಿದ್ಯೆಯು ವಿನಯದಿಂದಲೂ, ವಿನಯವು ರೂಪದಿಂದಲೂ, ರೂಪವು ತಾರುಣ್ಯದಿಂದಲೂ, ತಾರುಣ್ಯವು ಶಿವಪೂಜೆಯಿಂದಲೂ ಅಧಿಕಾಧಿಕವಾಗಿ ಶೋಭಿಸುತ್ತಿರಲು, ಇವನ ಕೀರ್ತಿಕುಸುಮದ ಪರಾಗವು ಎಲ್ಲ ಕಡೆಗೂ ಹಬ್ಬಿಕೊಂಡಿತು. ಆಗ ಇವನ ಕೀರ್ತಿಯನ್ನು ಕೇಳಿದ ದೂರದೂರಿನ ಎಷ್ಟೋ ಜನ ಕನ್ಯಾಪಿತರು ಕನ್ಯಾದಾನೇಚ್ಛೆಯಿಂದ ತೆರಪಿಲ್ಲದೆ ಇವನ ಮನೆಗೆ ಎಡತಾಕಹತ್ತಿದರು. ಆಗ ಸುಧರ್ಮನು ಸಂತೋಷಭರಿತನಾಗಿ ಘುಷ್ಮಾ-ಸುದೇಹರ ಅನುಮತಿಯಂತೆ, ಬಂದ ಆ ಕನ್ಯೆಯರಲ್ಲಿ ಸತ್ಕುಲಪ್ರಸೂತಳೂ, ಸದ್ಗುಣಮಂಡಿತಳೂ, ಲಾವಣ್ಯವತಿಯೂ ಆದ ಒಂದು ಕನ್ಯೆಯನ್ನು ಗೊತ್ತುಮಾಡಿ ತನ್ನ ಬಂಧು ಬಾಂಧವರೊಂದಿಗೆ ಸುಮುಹೂರ್ತದ ಒಂದು ಮಂಗಲ ದಿವಸದಲ್ಲಿ ಶಂಕರನ ವಿವಾಹವನ್ನು ಮಾಡಿ ಆತನ ಹೆಂಡತಿಗೆ ಪಾರ್ವತಿಯೆಂದು ಹೆಸರಿಟ್ಟನು. ಮುಂದೆ ತುಸುದಿವಸಗಳಲ್ಲಿಯೇ ಸೊಸೆಯು ಮೈನೆರೆದು ಮನೆಗೆ ಬರಲು, ಘುಷ್ಮಾ-ಸುಧರ್ಮರಿಗೆ ಹಿಡಿಸಲಾರದಷ್ಟು ಆನಂದವಾಗಿ ಅವರು ತರುಣರಾದ ಶಂಕರಪಾರ್ವತಿಯರೊಡನೆ ಸುಖವಾಗಿ ಕಾಲಕಳೆಯಹತ್ತಿದರು.

ಇತ್ತ ಸುಧರ್ಮನ ಹಿರಿಯ ಹೆಂಡತಿಯಾದ ಸುದೇಹಳ ವೃತ್ತಿಯು ದಿನದಿನಕ್ಕೆ ವಿಪರೀತವಾಗಹತ್ತಿತ್ತು. ಏನು ಮಾಡಿದರೂ ದುಸ್ತರವಾದ ಸವತಿಮಾತ್ಸರ್ಯವು ಅವಳನ್ನು ಆವರಿಸದೇ ಬಿಡಲಿಲ್ಲ. ಒಂದು ದಿನ ಘುಷ್ಮೆಯು ಪತಿಪ್ರೇರಣೆಯಂತೆ ಪುತ್ರನಾದ ಶಂಕರನನ್ನು ಅವನ ಪತ್ನಿಯೊಡನೆ ಸುದೇಹಳ ತೊಡೆಯ ಮೇಲೆ ಕುಳ್ಳಿರಿಸಿ, ಬಹುಲೀನತೆಯಿಂದ—ಅಕ್ಕಾ, ಪರಮೇಶ್ವರನ ಕೃಪೆಯಿಂದಲೂ, ಸುಮಂಗಲೆಯಾದ ನಿನ್ನ ಆಶೀರ್ವಾದದಿಂದಲೂ ನನ್ನ ಎಲ್ಲ ಮನೋರಥಗಳು ಪೂರ್ಣವಾದವು. ಸರ್ವಮಂಗಲಾಧಿಷ್ಠಾತೃವಾದ ಆ ಸದಾಶಿವನ ಕೃಪೆಯಾದಮೇಲೆ ಯಾವದು ತಾನೆ ಸಿದ್ಧಿಸಲಿಕ್ಕಿಲ್ಲ? ಅಕ್ಕಾ, ಇಷ್ಟಾದಮೇಲೆ ನಿನಗೆ ಔದಾಸೀನ್ಯವೇಕೆ? ಇಗೋ, ಇವನು ಶಿವಪ್ರಸಾದಲಬ್ಧನಾದ ನಿನ್ನ ಮಗನು. ಸುಗುಣೆಯಾದ ಇವಳು ನಿನ್ನ ಸೊಸೆಯು. ಇವರಿಂದ ಕೂಡಿ ಇನ್ನು ನೀನು ಸುಖವಾಗಿ ವಾಸಿಸು. ಮಕ್ಕಳಿಲ್ಲೆಂಬ ಚಿಂತೆಯನ್ನು ಮಾತ್ರ ಇನ್ನು ನೀನು ಸರ್ವಥಾ ಮನಸ್ಸಿನಲ್ಲಿ

ತರಬೇಡ. ಈಗಿದ್ದ ಈ ಮಗನೂ, ಸೊಸೆಯೂ ನಿನ್ನವರೇ ಹೊರತು ನನ್ನವರಲ್ಲ„ ಎಂದು ಸರಲವೃತ್ತಿಯಿಂದಲೂ, ನಿಷ್ಕಪಟಪ್ರೇಮದಿಂದಲೂ ನುಡಿಯುತ್ತಿರಲು, ಜನ್ಮತಃ ಕುಟಿಲ ಸ್ವಭಾವದವಳಾದ ಸುದೇಹಳು ಮೇಲೆ ಮೇಲೆ ಅವಳಮಾತಿಗೆ ಸಂತೋಷವನ್ನು ವ್ಯಕ್ತ ಗೊಳಿಸಿದರೂ ಒಳಗಿಂದೊಳಗೆ ಮಾತ್ಸರ್ಯಾಗ್ನಿಯಿಂದ ಒಂದೇ ಸವನೆ ಉರಿಯುತ್ತಿದ್ದಳು. ಆ ದುಷ್ಟಳು ಸವತಿಯಉತ್ಕರ್ಷವನ್ನು ನೋಡಲಾರದೆ ಶಂಕರನನ್ನು ರಾತ್ರಿ, ಮಲಗಿದಾಗ ತುಂಡರಿಸಿ ಚಲ್ಲಬೇಕೆಂದು ಯೋಚಿಸಿ, ಒಂದು ಖಡ್ಗವನ್ನು ತನ್ನ ಹಾಸಿಗೆಯ ಬುಡದಲ್ಲಿ ಗುಪ್ತವಾಗಿ ಇಟ್ಟುಕೊಂಡಿರಹತ್ತಿದಳು. ಒಂದು ದಿನ ಮನೆಯಲ್ಲಿ ಘುಷ್ಮೆ-ಸುಧರ್ಮರು ನಿತ್ಯದಂತೆ ತಮ್ಮ ಪ್ರದೋಷಕಾಲದ ಶಿವಪೂಜೆಯನ್ನು ತೀರಿಸಿಕೊಂಡು ಸಾಯಂಕಾಲದ ಊಟಉಡಿಗೆಗಳಾದ ಮೇಲೆ ತಮ್ಮ ತಮ್ಮ ಸ್ಥಳಗಳಿಗೆ ಹೋಗಿ ಮಲಗಿಕೊಂಡರು. ಶಂಕರನೂ ಪಾರ್ವತಿಯೊಡನೆ ಸುಖಶಯ್ಯೆಯಲ್ಲಿ ಪವಡಿಸಿದನು. ಇತ್ತ ಶಂಕರನ ಕೊಲೆಮಾಡಲು ಹೊಂಚು ಹಾಕಿಕೊಂಡು ಕುಳಿತಿದ್ದ ಸುದೇಹಳು ಒಬ್ಬ ಕೊಲೆಗಡಕನ ಸಹಾಯದಿಂದ ಶಂಕರನು ಮಲಗಿರುವ ಕೋಣೆಗೆ ಕನ್ನವಿಕ್ಕಿ ಏಳು ತಾಸುರಾತ್ರಿಯ ಸುಮಾರಕ್ಕೆ ಒಳಗೆ ಹೊಕ್ಕು ಗಾಢನಿದ್ರೆಯಲ್ಲಿರುವ ಶಂಕರ-ಪಾರ್ವತಿಯರನ್ನು ಒಂದು ವಿಷಮೂಲಿಕೆಯ ಮೂಸಿ ನೋಡಿಸಿ ಪ್ರಜ್ಞಾಹೀನರನ್ನಾಗಿ ಮಾಡಿದಳು! ಬಳಿಕ ಮಾತ್ಸರ್ಯಪೀಡಿತಳಾದ ಆ ರಾಕ್ಷಸಿಯು ಶಂಕರನನ್ನು ಖಡ್ಗದಿಂದ ತುಂಡರಿಸಿ ಅವನ ಛಿನ್ನ ವಿಚ್ಛಿನ್ನ ಅವಯವಗಳನ್ನು ಕೊಲೆಗಡಕನ ಸಹಾಯದಿಂದ ಊರಹೊರಗಿನ ಒಂದು ಸರೋವರದಲ್ಲಿ ಚಲ್ಲಿಸಿ, ಯಾರೋ ಕಳ್ಳರು ಈ ಘೋರಕೃತ್ಯಮಾಡಿರುವರೆಂಬ ಭಾವನೆಯು ನೋಡುವವರಿಗೆ ಆಗುವಂತೆ ಮಾಡಿ, ಒಂದೂ ಅರಿಯದವಳಂತೆ ಆನಂದದಿಂದ ತನ್ನ ಹಾಸಿಗೆಯ ಮೇಲೆ ಬಂದು ಮಲಗಿಕೊಂಡಳು! ಪಾಪ! ಎಚ್ಚರದಪ್ಪಿ ಬಿದ್ದುಕೊಂಡಿದ್ದ ಪಾರ್ವತಿಗೆ ಇದಾವಸುದ್ದಿಯೂ ಗೊತ್ತಾಗಿದ್ದಿಲ್ಲ. ಬೆಳಗುಮುಂಜಾವಿನಲ್ಲಿ ಆಕೆಗೆ ಒಂದು ದುಷ್ಟ ಸ್ವಪ್ನ ಬಿದ್ದು ಚಿಟ್ಟನೆ ಚೀರಿ ಪತಿಯನ್ನು ಆಲಿಂಗಿಸಹೋಗಿ ಎಚ್ಚತ್ತು ನೋಡಲು, ಹಾಸಿಗೆಯ ಮೇಲೆ ಪತಿಯು ಮಲಗಿರದೆ, ರಕ್ತ ಮುಳುಗಿದ ಹಾಸಿಗೆಯೂ, ಕೋಣೆಯ ಗೋಡೆಗೆ ಕೊರೆದಿದ್ದ ಕನ್ನವೂ ಆಕೆಯ ಕಣ್ಣಿಗೆ ಬಿದ್ದವು. ಆಗ ಆ ಸಾಧ್ವಿಯು ಎದೆಯೊಡೆದು ನೀರಾಗಿ ಆಕೆಯು ದುಃಖದಿಂದ ಆಕ್ರೋಶ ಮಾಡುತ್ತ ಕೋಣೆಯ ಹೊರಗೆ ಬಂದಳು. ಇದನ್ನೇ ನೋಡುತ್ತಿದ್ದ ದುಷ್ಟ ಸುದೇಹಳು ಏನೂ ಅರಿಯದವಳಂತೆ ಸೊಸೆಯನ್ನು ತಬ್ಬಿಕೊಂಡು ಮಗನನ್ನು ನೆನಿಸಿ ಅಳಹತ್ತಿದಳು. ಹೀಗೆ ಮನೆಯಲ್ಲಿ ಅನರ್ಥನಡೆದಿದ್ದರೂ, ಪ್ರಾತಃಕಾಲದ ಶಿವಪೂಜೆಯಲ್ಲಿ ತೊಡಗಿದ್ದ ಘುಷ್ಮೆ-ಸುಧರ್ಮರ ಚಿತ್ತವು ಚಂಚಲವಾಗಲಿಲ್ಲ. ನಿತ್ಯದಂತೆ ಶಿವಪೂಜೆಯು ಸಾಂಗವಾದ ಬಳಿಕ ಘುಷ್ಮೆಯು ಸೊಸೆಯ ದುಃಖದ ಕಾರಣವನ್ನು ಕೇಳಿಕೊಂಡು ತಮ್ಮ ದುಃಖವನ್ನು ನುಂಗಿ ಆಕೆಯನ್ನು ಸಮಾಧಾನಗೊಳಿಸುತ್ತ—ವತ್ಸೇ, ಪಾರ್ವತೀ, ಹೀಗೆ ದುಃಖಿಸಬೇಡಮ್ಮ! ನಿನ್ನ ಪತಿಯು ನಿನ್ನನ್ನು ಬಿಟ್ಟು ಎಲ್ಲಿಯೂ ಹೋಗಿರುವದಿಲ್ಲ! ಸರ್ವೇಶ್ವರನಾದ ಸಾಕ್ಷಾತ್ ಶಂಕರನ ವರಪ್ರಸಾದದಿಂದಾದ ನಿನ್ನ ಪತಿಗೆ ಎಂದಾದರೂ ಮರಣಬರುವದುಂಟೆ? ಆತನು

ಈಗ ಶಂಕರನ ಸಚ್ಚಿದಾನಂದ ವಿಗ್ರಹದಲ್ಲಿ ಬೆರೆತು ಶಾಶ್ವತಸುಖವನ್ನು ಹೊಂದಿ ನಿಶ್ಚಿಂತನಾಗಿರುವನು. ಆತನ ಪ್ರೇಮಲ ಮಾತಾಪಿತೃಗಳಾದ ಆ ಭವಾನೀ ಶಂಕರರು ತಮ್ಮ ಪ್ರಿಯಪುತ್ರನಾದ ನನ್ನ ಕಂದಮ್ಮನನ್ನು ಈಗ ಎತ್ತಿ ಮುದ್ದಾಡತೊಡಗಿರಬಹುದು. ನಿನ್ನ ಪತಿಯನ್ನು ಭಗವಾನ್ ಶಂಕರನು ಸರ್ವಥಾ ಉಪೇಕ್ಷಿಸತಕ್ಕವನಲ್ಲ. ಒಂದು ಪಕ್ಷದಲ್ಲಿ ಉಪೇಕ್ಷಿಸಿದರೆ ಆ ಸರ್ವತಂತ್ರಸ್ವತಂತ್ರನನ್ನು ನಾವು ಮಾಡುವದೇನು! ಈ ಜಗತ್ತು ಆ ಭಗವಾನ್ ಸದಾಶಿವನ ಕ್ರೀಡೆಯ ಸಾಧನವಾಗಿರುವದರಿಂದ, ಈಗೊದಗಿದ ಅನರ್ಥವು ಆ ಮಹಾರುದ್ರನ ಹಲವು ಕ್ರೀಡೆಗಳಲ್ಲಿ ಒಂದು ಕ್ರೀಡೆಯಾಗಿರುವದು; ಆದ್ದರಿಂದ ನೀನು ಅಜ್ಞಳಂತೆ ದುಃಖಿಸದೆ ಸ್ವಸ್ಥಚಿತ್ತಳಾಗಿರು.

ಹೀಗೆ ಘುಷ್ಮೆಯು ಸೊಸೆಯನ್ನು ಬೋಧಿಸಿ, ತಾನು ಬೆಳಗಿನಲ್ಲಿ ಪೂಜಿಸಿದ್ದ ನೂರಾ ಒಂದು ಪಾರ್ಥಿವ ಲಿಂಗಗಳನ್ನು ಬಟ್ಟೆಯಲ್ಲಿ ಕಟ್ಟಿಕೊಂಡು ಅವನ್ನು ವಿಸರ್ಜಿಸಲಿಕ್ಕೆ ನಿತ್ಯದಂತೆ ಸರೋವರಕ್ಕೆ ಹೋದಳು. ಆಕೆಯು ನಿತ್ಯಸ್ನಾನಮಾಡಿ ಶಿವಲಿಂಗಗಳನ್ನು ವಿಸರ್ಜಿಸುವ ಆ ಸರೋವರದಲ್ಲಿಯೇ ಸುದೇಹರಾಕ್ಷಸಿಯು ಶಂಕರನ ತುಂಡರಿಸಿದ ಶರೀರಾವಯವಗಳನ್ನು ಮುಣುಗಿಸಿದ್ದಳು. ಘುಷ್ಮೆಯು ಶಿವಪಂಚಾಕ್ಷರೀ ಮಂತ್ರವನ್ನು ಜಪಿಸುತ್ತ ಲಿಂಗಗಳನ್ನು ಸರೋವರದಲ್ಲಿ ವಿಸರ್ಜಿಸಿ, ಮಾಧ್ಯಾಹ್ನದ ಶಿವಪೂಜೆಗಾಗಿ ಮತ್ತೆ ಅಲ್ಲಿ ವೈತೊಳೆದು ಅರಿಸಿಣ-ಕುಂಕುಮಾದಿಗಳಿಂದ ಜಲದೇವತೆಯನ್ನು ಪೂಜಿಸಿದಳು. ಆಗ ಈ ಮಹಾತ್ಮಳ ಅಕೃತ್ರಿಮಭಕ್ತಿಗೆ ಮೆಚ್ಚಿ ಭಗವಾನ್ ಶಂಕರನು ಆ ಘುಷ್ಮೆಯ ಮಗನ ಭಿನ್ನಾವಯವಗಳನ್ನು ಒಟ್ಟುಗೂಡಿಸಿ ಶಂಕರನನ್ನು ಸಜೀವಗೊಳಿಸಿದನು. ಆಗ ಶಂಕರನು ಈಸುತ್ತ ತನ್ನಬಳಿಗೆ ಬರುವದನ್ನು ನೋಡಿ ಘುಷ್ಮೆಯ ಕೋಮಲಾಂತಃಕರಣದ ಭಕ್ತಿರಸವು ಉಕ್ಕೇರಿತು; ಕಂಠವು ಬಿಗಿಯಿತು; ಸರ್ವಾಂಗವು ರೋಮಾಂಚಿತವಾಯಿತು. ಆಗ ಆ ಭಕ್ತಾಗ್ರೇಸರಳು ತನ್ನ ಮಗನನ್ನು ಕುರಿತು—ಅಪ್ಪಾ ಬಾಳಾ, ಬಂದೆಯಾ! ಆ ಶಿವನ ದಿವ್ಯಪಾದಗಳನ್ನು ಕಂಡು ಮತ್ತೆ ನನಗೆ ಅವ್ವಾ ಎಂದು ಕರೆಯಬಂದೆಯಾ! ಬಹಳ ನೆಟ್ಟಗಾಯಿತು, ಎಂದು ಮಗನನ್ನು ಅಪ್ಪಿಕೊಂಡು, ಆಕಾಶದ ಕಡೆಗೆ ನೋಡಿ ಕರುಣಾಕರನಾದ ಸದಾಶಿವನನ್ನು ಶತಶಃ ಸಹಸ್ರಶಃ ನಮಸ್ಕರಿಸಿದಳು! ವಿಷಯೇಚ್ಛೆಯನ್ನು ಸಂಪೂರ್ಣವಾಗಿ ತೊರೆದಿದ್ದ ಆ ಶಿವಭಕ್ತ ಶಿಖಾಮಣಿ-ಘುಷ್ಮೆಯು ಒಂದು ಹುಲ್ಲುಕಡ್ಡಿಯಿಂದ ಬ್ರಹ್ಮಲೋಕದವರೆಗೆ ಸರ್ವವಸ್ತುಗಳನ್ನು ಸಮಾನವಾಗಿಯೇ ತುಚ್ಛವೆಂದು ಭಾವಿಸಿದ್ದಳು. ಆಕೆಗೆ ಆದರಣೀಯವಾದದ್ದೆಂದರೆ ಒಂದು ಶಿವಭಕ್ತಿಯು! ಆಕೆಯ ವೃತ್ತಿಯು ಯಾವಾಗಲೂ ಶಿವಭಕ್ತಿರತವಾಗಿ ನಿರ್ವಿಕಾರವಾಗಿರುತ್ತಿತ್ತು. ಮಗನು ಮರಣ ಹೊಂದುವದಕ್ಕಿಂತ ಮೊದಲು ಇದ್ದ ಇವಳ ಸುಪ್ರಸನ್ನವಾದ ಮುಖಮುದ್ರೆಯು, ಮಗನು ಮರಣ ಹೊಂದಿದಾಗ, ಅಥವಾ ಮಗನು ಮತ್ತೆ ಬದುಕಿ ಬಂದಾಗ ಅಚ್ಚಳಿದಿದ್ದಿಲ್ಲ! ವಿವೇಕಶೀಲಾ, ಇದೆಲ್ಲ ಅಕೃತ್ರಿಮವಾದ ನಿಷ್ಕಾಮಶಿವಭಕ್ತಿಯ ಆಟವು! ತನ್ನ ಭಕ್ತಳ ಈ ನಿರ್ಹೇತುಕ ಭಕ್ತಿಯನ್ನು ನೋಡಿ ಶಂಕರನು ಸಂತೋಷಪಟ್ಟು ಆ ಸರೋವರ ಜಲಮಧ್ಯದಿಂದ ಪ್ರಕಟನಾಗಿ ಘುಷ್ಮೆಯನ್ನು ಕುರಿತು—ಭಕ್ತೋತ್ತಮಳೇ, ನಿನ್ನ ಭಕ್ತಿಗೆ ಮೆಚ್ಚಿ ಪ್ರಸನ್ನನಾಗಿ

ದ್ದೇನೆ. ನಿನಗೆ ತಾಪವಿತ್ತ ಸುದೇಹಳಿಗೆ ಯಾವ ಶಿಕ್ಷೆಯನ್ನು ವಿಧಿಸಲಿ? ನಿನ್ನ ಇಷ್ಟಾರ್ಥ ವನ್ನು ಬೇಗನೆ ಕೇಳಿಕೊಳ್ಳು, ಎಂದು ನುಡಿಯಲು, ಭಗವದ್ದರ್ಶನದಿಂದ ಘುಷ್ಮಾ-ಸುಧ ರ್ಮರಿಗೆ ಪರಮಾನಂದವಾಯಿತು. ಆಗ ಘುಷ್ಮೆಯು ಕೈಜೋಡಿಸಿ—ಭಗವಂತಾ, ನಿನ್ನ ಈ ಸಗುಣರೂಪದರ್ಶನಕ್ಕೆ ಕಾರಣಳಾದ ಸುದೇಹಳಿಗೆ ದರ್ಶನಕೊಟ್ಟು ಅಂತ್ಯದಲ್ಲಿ ಆಕೆಗೆ ಸಾಯುಜ್ಯಪದವಿಯನ್ನು ಕೊಡು. ಪೂರ್ಣಕಾಮನಾದ ನಿನ್ನ ದರ್ಶನಮಾತ್ರ ದಿಂದ ನನ್ನ ಬಯಕೆಗಳೆಲ್ಲ ಪೂರ್ಣವಾಗಿರುವದರಿಂದ, ನನ್ನಂತೆ ಭಕ್ತರನ್ನು ಉದ್ಧರಿಸುವದ ಕ್ಕಾಗಿ ಸ್ವಯಂಜ್ಯೋತಿಸ್ವರೂಪನಾಗಿ ಪರಿವಾರದೊಡನೆ ನೀನು ಇಲ್ಲಿಯೇ ವಾಸಿಸು, ಎಂದು ಪ್ರಾರ್ಥಿಸಲು, ಭವಾನೀ ಪತಿಯು—ಭಕ್ತೋತ್ತಮಳೇ, ನಿನ್ನವೆರಡೂ ಬೇಡಿಕೆ ಗಳು ನಿನ್ನ ಭಕ್ತಿಯ ಪ್ರಭಾವದಿಂದ ಪೂರಯಿಸುವವು. ನಿನ್ನ ಸವತಿಯನ್ನು ಕೃತಾರ್ಥ ಳಾಗ ಮಾಡಿ ನನ್ನ ಪರಮಭಕ್ತಳಾದ ನಿನ್ನ ಹೆಸರಿನಿಂದ ಈ ಸ್ಥಳದಲ್ಲಿ ವಾಸಿಸುವೆನು. ಶಿವನಿಗೂ ಶಿವಭಕ್ತರಿಗೂ ಭೇದವಿಲ್ಲೆಂಬದನ್ನಷ್ಟೇ ಅಲ್ಲ, ಶಿವನಿಗಿಂತಲೂ ಶಿವಭಕ್ತರ ಯೋ ಗ್ಯತೆಯು ಅಧಿಕವೆಂಬದನ್ನು ಪ್ರಸಿದ್ಧಿಗೊಳಿಸುತ್ತ ಇಲ್ಲಿ ಜ್ಯೋತಿರ್ಲಿಂಗರೂಪದಿಂದ ವಾಸಿ ಸುವೆನು; ಮತ್ತು ನೀನು ಪೂಜಿಸಿದ ಕೋಟಿಲಿಂಗಗಳು ನನ್ನ ಪರಿವಾರಲಿಂಗಗಳಾಗಿ ಈ ಪವಿತ್ರಸ್ಥಾನವು ಮಹಾಶಿವಾಲಯವೆನಿಸಿ ಲೋಕದಲ್ಲಿ ಪ್ರಖ್ಯಾತಿಹೊಂದುವದು. ಇದ ಲ್ಲದೆ ನೀನು ಪ್ರತಿನಿತ್ಯ ಏಕಾಗ್ರ ಮನಸ್ಸಿನಿಂದ ನನ್ನ ತುಷ್ಟಿಗಾಗಿ ನೂರಾಒಂದು ಪಾರ್ಥಿವ ಲಿಂಗಗಳನ್ನು ಪೂಜಿಸಿ ಧನ್ಯಳಾಗಿರುವೆಯಾದ್ದರಿಂದ ನಿನ್ನ ಪುತ್ರನಾದ ಶಂಕರನಿಂದ ಮುಂದೆ ನೂರಾಒಂದು ತಲೆಗಳವರೆಗೆ ನಿನ್ನ ವಂಶಜರು ನನ್ನ ಅನುಗ್ರಹದಿಂದ ಪೂರ್ಣಾಯುಷಿಗಳೂ, ಧನಿಕರೂ, ವಿದ್ವಾಂಸರೂ, ಭಕ್ತಿಯುತರೂ, ಕೀರ್ತಿಶಾಲಿಗಳೂ, ಉದಾರರೂ, ಪರೋಪ ಕಾರಿಗಳೂ ಆಗಿ ಜಗತ್ತಿನಲ್ಲಿ ಖ್ಯಾತಿಹೊಂದುವರು, ಎಂದು ಮೂರನೆಯದೊಂದು ವರವನ್ನು ತಾನಾಗಿ ಕೊಟ್ಟು ಶಂಕರನು ಅದೃಶ್ಯನಾದನು. ಈ ಘುಷ್ಮೇಶ್ವರ ಜ್ಯೋತಿರ್ಲಿಂಗದ ದರ್ಶನಯೋಗದಿಂದ ಭಕ್ತರಭವಪಾಶವು ದೂರವಾಗಿ ಅಂತ್ಯದಲ್ಲಿ ಅವರು ಶಿವಲೋಕ ವನ್ನು ಹೊಂದಿ ಕೃತಕೃತ್ಯರಾಗುವರು! ವಿವೇಕಶೀಲಾ; ಹೀಗೆ ಸೋಮನಾಥನಿಂದ ಘುಷ್ಮೇ ಶ್ವರನವರೆಗೆ ನಾನು ಹೇಳಿದ ಹನ್ನೆರಡು ಜ್ಯೋತಿರ್ಲಿಂಗಗಳ ಚರಿತ್ರಗಳನ್ನು ಹೇಳುವ ವರೂ ಕೇಳುವವರೂ ನಿಷ್ಕಲ್ಮಷರಾಗಿ ಇಹದಲ್ಲಿ ಸಕಲಭೋಗಗಳನ್ನು ಭೋಗಿಸಿ ಅಂತ್ಯ ದಲ್ಲಿ ಶಿವಸಾಯುಜ್ಯವನ್ನು ಪಡೆದು ಧನ್ಯರಾಗುವರು.



# ಶೈವಸುಧಾರ್ಣವ.

## ೨ನೆಯ ಭಾಗ.

### ಜ್ಞಾನಪ್ರದೀಪ !

ಈ ಮೇರೆಗೆ ಸಿದ್ಧಮುನೀಶ್ವರನು ಹೇಳಿದ ಅತ್ಯಂತ ರಹಸ್ಯಯುಕ್ತವಾದ ಶೈವಸುಧಾರ್ಣವದ ಹನ್ನೊಂದು ಸುಧಾತರಂಗಗಳ ರಸಾಸ್ವಾದದಿಂದ ವಿವೇಕಶೀಲನೇ ಮೊದಲಾದ ಶಿಷ್ಯಪರಿವಾರಕ್ಕೆ ಪರಮಾನಂದವಾಯಿತು. ಶ್ರೀ ಗುರುಕೃಪೆಯಿಂದ ಅವರ ಹೃದಯದಲ್ಲಿಯ ನಿರ್ಮಲ-ಭಕ್ತಿರಸವು ಉಕ್ಕೇರಲು, ಅವರ ನೇತ್ರಗಳಿಂದ ಆನಂದಾಶ್ರುಗಳು ಸುರಿಯಹತ್ತಿದವು; ಅವರ ಶರೀರಗಳು ರೋಮಾಂಚಿತವಾದವು; ಸದ್ಗುರುಬೋಧದಿಂದ ಯಾವದೋ ಒಂದು ಪರಮಾನಂದದ ಸ್ಥಾನವನ್ನು ಮುಟ್ಟಿದವರಂತೆ ಅವರು ಕೃತಕೃತ್ಯರಾದರು! ಹೀಗೆ ಕೆಲಹೊತ್ತು ಸ್ವಾನಂದಸಾಮ್ರಾಜ್ಯಸುಖವನ್ನು ಅನುಭವಿಸುತ್ತ ಶ್ರೀಗುರುಸನ್ನಿಧಿಯಲ್ಲಿ ಅವರು ಕುಳಿತಿರಲು, ಸಿದ್ಧಮುನೀಶ್ವರನು—"ವಿವೇಕಶೀಲಾದಿ ಶಿಷ್ಯರೇ, ಶ್ರೀ ಶಿವಚರಿತ್ರ-ಕಥನ-ಶ್ರವಣಾನಂದದಲ್ಲಿ ನಮ್ಮೆಲ್ಲರ ಸತ್ಕಾಲಕ್ಷೇಪವಾದ್ದರಿಂದ ನಾವೆಲ್ಲರೂ ಧನ್ಯರೇ ಸರಿ! ಆದರೆ ಬ್ರಹ್ಮಾದಿದೇವತೆಗಳಿಗೂ ತಿಳಿಯಲಶಕ್ಯವಾದ ಶಿವಮಹಿಮೆಯನ್ನು ತಿಳಿಯಲು ನಾವೆಷ್ಟರವರು? ಹೀಗೆ ಆ ಮಹಿಮೆಗಳನ್ನು ತಿಳಿಯಲು ನಾವು ಅಶಕ್ತರಾದರೂ, ಸರ್ವೋತ್ತಮನಾದ ಆ ಸದಾಶಿವನ ಉಪಾಸನೆಯನ್ನು ಭಕ್ತಿಯಿಂದ ಮಾಡಿ ಆತನ ಕೃಪೆಯಿಂದ ಭವಸಾಗರವನ್ನು ದಾಟುವದು ನಮಗೆ ಶಕ್ಯವಾಗಿರುವದು. ವಿವೇಕಶೀಲಾ, ವ್ಯವಹಾರದಲ್ಲಿ ನಮಗೆ ಭೋಗ್ಯವಸ್ತುಗಳ ಸ್ವರೂಪಜ್ಞಾನವಿಲ್ಲದಿದ್ದರೂ, ಅವುಗಳ ಉಪಭೋಗದಿಂದ ತೃಪ್ತಿಯಾಗುವದಿಲ್ಲವೆ? ಅದರಂತೆಯೇ ನಮಗೆ ಪರಮೇಶ್ವರನ ಸ್ವರೂಪದ ಜ್ಞಾನವಾಗದಿದ್ದರೂ ಆತನ ಕೃಪೆಯಿಂದ ನಮಗೆ ಸದಾನಂದ ಪ್ರಾಪ್ತಿಯಾಗುವದು! ಆದ್ದರಿಂದ ಭವಬಂಧದಿಂದ ಮುಕ್ತರಾಗಲಿಕ್ಕೆ ಶಿವಭಕ್ತಿಯು ಅವಶ್ಯವಾಗಿರುವದು, ಎಂದು ಹೇಳಲು, ವಿವೇಕಶೀಲನು—ಗುರುದೇವಾ, ಭಗವಾನ್ ಸದಾಶಿವನ ಔಪಾಸನೆ ಮಾಡುವದು ಮೋಕ್ಷಕ್ಕೆ ಸಾಧನವೆಂದು ಹೇಳೋಣವಾಯಿತು; ಆದರೆ ಭಗವಂತನ ಸ್ವರೂಪಜ್ಞಾನವು ಹೋಗಲಿ. ಭೋಗ್ಯವಸ್ತುಗಳಂತೆ ಆತನ ಪ್ರತ್ಯಕ್ಷದರ್ಶನವೂ ನಮಗೆ ಆಗದಿರುವಾಗ ಆತನಲ್ಲಿ ನಾವು ವಿಶ್ವಾಸವಿಟ್ಟು ವ್ಯವಹರಿಸುವದಾದರೂ ಹೇಗೆ? ಬೈಲಿಗೆ ಬೈಲಾಗಿರಲು, ನಮ್ಮಲ್ಲಿ ದೃಢವಾದ ಶಿವಭಕ್ತಿಯು ಹ್ಯಾಗೆ ಉಂಟಾಗಬೇಕು? ನಮ್ಮ ಇಂದ್ರಿಯಗಳು ಅನುಭವವೇದ್ಯವಾದ ವಿಷಯಗಳಲ್ಲಿ ಆಸಕ್ತವಾಗಿರುವದ

ರಿಂದ, ಅವನ್ನು ಬಿಗಿಹಿಡಿದು ಅನುಭವವೇದ್ಯನಲ್ಲದ ಈಶ್ವರನ ಸೇವೆಯಲ್ಲಿ ಅವನ್ನು ಹ್ಯಾಗೆ ತೊಡಗಿಸಬೇಕು? ಅನುಭವಕ್ಕೆ ಬರುತ್ತಿರುವ ವಸ್ತುಗಳ ಕಡೆಗೇ ಮನಸ್ಸು ಹರಿಯುವದು ಸ್ವಾಭಾವಿಕವಾದದ್ದರಿಂದ, ಯಾವಾಗಲೂ ಮನಸ್ಸು ಅನುಭೂತವಿಷಯಗಳಕಡೆಗೇ ಎಡ ತಾಕುತ್ತಿರುವದು. ಇಂಥ ಚಂಚಲಮನಸ್ಸನ್ನು ನಮ್ಮ ಅನುಭವಕ್ಕೆ ಬಾರದಿರುವ ಶಿವನ ಔಪಾಸನೆಯಲ್ಲಿ ತೊಡಗಿಸುವ ಬಗೆ ಹೇಗೆ? ಸದ್ಗುರುನಾಥಾ,ನೀನು ಭಗವಚ್ಚರಿತ್ರಗಳ ಶ್ರವಣಮಾಡಿಸಿದ್ದರೂ, ಪ್ರತ್ಯಕ್ಷ ಭಗವಂತನ ದರ್ಶನವು ನಮಗೆ ಆಗದಿರುವದರಿಂದಲೂ, ಹಿಂದಕ್ಕೆ ಆಗಿಹೋಗಿರುವ ಆ ಭಗವಂತನ ಮಹಾಮಹಿಮೆಗಳೂ ನಮ್ಮ ಅನುಭವಕ್ಕೆ ಬಾರದವಿರುವದರಿಂದಲೂ ಆ ಮಹಿಮೆಗಳೆಲ್ಲ ಮನೋರಂಜಕ ಕಥೆಗಳಾಗಿ ಪರಿಣಮಿಸಿ, ಅಂಥ ಕಥೆಗಳನ್ನು ಮತ್ತೂ ಮತ್ತೂ ಕೇಳುವದರ ಕಡೆಗೆ ನಮ್ಮ ಮನಸ್ಸು ಹರಿಯಬಹು ದಲ್ಲದೆ; ಆ ಮನಸ್ಸಿನ ಚಾಂಚಲ್ಯವು ನಷ್ಟವಾಗಿ ಅದು ಭಗವಚ್ಚರಣವನ್ನು ದೃಢವಾಗಿ ಹೊಂದಿಕೊಳ್ಳಲಾರದು; ಆದ್ದರಿಂದಲೇ ಗುರುದೇವಾ, ಲೌಕಿಕದಲ್ಲಿ ಪುರಾಣ ವೈರಾಗ್ಯವು ತಾತ್ಕಾಲಿಕವೆಂದು ಹೇಳಲ್ಪಡುತ್ತಿರುವದು. ಈತಾತ್ಕಾಲಿಕ ವೈರಾಗ್ಯವು ಸ್ಥಿರವಾದಹೊ ರತು ಸ್ಥಿರವಾದ ಭಗವದ್ಭಕ್ತಿಯು ಉಂಟಾಗಲಾರದು. ತನಗೆ ಸ್ಥಿರವಾಗಲಿಕ್ಕೆ ಸ್ಥಾನವು ಸಿಗದಹೊರತು ಮನಸ್ಸಾದರೂ ತನ್ನ ಚಾಂಚಲ್ಯವನ್ನು ಹ್ಯಾಗೆ ಬಿಡಬೇಕು! ಅದರ ಚಾಂಚಲ್ಯವು ನಷ್ಟವಾದ ಹೊರತು ಅದಕ್ಕೆ ಶಾಂತಿಯಾದರೂ ಹ್ಯಾಗೆ ದೊರೆಯಬೇಕು? ಸದ್ಯಕ್ಕೆ ಮನಸ್ಸಿಗೆ ಸ್ವಾಭಾವಿಕವಾಗಿ ದೊರೆತಿರುವ ಸ್ಥಾನಗಳು ವಿಷಯಗಳಾಗಿದ್ದು, ವಿಷಯಗಳ ವಿವಿಧತ್ವದ ಮೂಲಕ ಮನಸ್ಸು ಒಂದು ವಿಷಯದಿಂದ ಒಂದು ವಿಷಯಕ್ಕೆ ಎಡತಾಕುವಾಗ ಅದು ಚಂಚಲತ್ವವನ್ನು ಪಡೆದಿರುವದು! ಅದೇ ಮನಸ್ಸಿಗೆ ಸರ್ವೋತ್ತ ಮನಾದ ಭಗವಾನ್ ಸದಾಶಿವನ ದರ್ಶನವಾದರೆ, ವಿಷಯಗಳ ಕ್ಷುದ್ರತ್ವವು ಅನುಭವಕ್ಕೆ ಬಂದು ಮನಸ್ಸು ಶ್ರೀ ಸದಾಶಿವನ ಚರಣಕಮಲಗಳಲ್ಲಿಯೇ ಭ್ರಮರನಂತೆ ತೊಡಗಿಕೊ ಳ್ಳಲು, ಅದರ ಚಾಂಚಲ್ಯವು ನಷ್ಟವಾಗಬಹುದು! ಆದರೆ ಮನಸ್ಸನ್ನು ಯಾವದಾದ ರೊಂದೇ ವಿಷಯದಲ್ಲಿ ತೊಡಗಿಸಲಿಕ್ಕೂ ನಾವು ಅಸಮರ್ಥರಾಗಿರುವಾಗ, ಅನುಭವಕ್ಕೆ ಬಾರದ ಭಗವಚ್ಚರಣದಲ್ಲಿ ಮನಸ್ಸನ್ನು ನಾವು ಹ್ಯಾಗೆ ಇರಿಸೋಣ! ಈಗಿನ ಹೀನಕಾಲ ದಲ್ಲಿ ನೋಡಿದತ್ತೆಲ್ಲ ಜನರು ವಿಷಯಾಸಕ್ತರಾಗಿರುವದೇ ಕಂಡುಬರುತ್ತದಲ್ಲದೆ, ಈಶ್ವರಚರ ಣಾಸಕ್ತರಾಗಿರುವದು ಕಂಡು ಬರುವದಿಲ್ಲ. ಈಗ ಲೋಕವು ಹೊನ್ನು—ಹೆಣ್ಣು—ಮಣ್ಣು ಗಳ ಪ್ರಾಪ್ತಿಗಾಗಿ ಕಷ್ಟಪಡುವದನ್ನು ನೋಡಿದರೆ, ವಿಷಯಾಸಕ್ತಿಯ ವೈಭವವು ಚನ್ನಾಗಿ ವ್ಯಕ್ತವಾಗುತ್ತದೆ. ಗುರುದೇವಾ, ಇಂಥ ಹೀನಕಾಲದಲ್ಲಿ ನಾವು ಸದಾಶಿವ ನಲ್ಲಿ ದೃಢವಾದ ಭಕ್ತಿಯನ್ನು ಹ್ಯಾಗೆ ತಾಳೋಣ? ಸದ್ಗುರೋ, ನಮ್ಮ ನೆರೆಹೊರೆಯು ನಮ್ಮನ್ನು ವಿಷಯಸುಖದ ಕಡೆಗೆ ಬಲಾತ್ಕಾರದಿಂದ ಎಳೆದೊಯ್ಯುತ್ತಿರುವದು- ಲೋಕದ ಇಂಥ ಕಸುವಿನ ಎಳತವನ್ನು ಕೊಸರಿ ನಾವು ಎಲ್ಲಿಯೂ ಕಣ್ಣಿಗೆ ಬೀಳದ ಈಶ್ವರಚರಣ ದಲ್ಲಿ ಮನಸ್ಸನ್ನಿಡಲು ಹ್ಯಾಗೆ ಸಮರ್ಥರಾದೇವು? ಈಗ ಜನರು ಕಂಠರವದಿಂದ ತಮ್ಮ ತಮ್ಮೊಳಗೆ—"ಇದು ಧರ್ಮದ ದಿವಸವಲ್ಲ; ಈಗ ದೇವರು ಕಣ್ಣು ಮುಚ್ಚಿಕೊಂಡು

ಕೊಳಿತಿರುವನು. ಈಗ ಧರ್ಮದಿಂದ ನಡೆಯುವವರಿಗೆ ದುಃಖ; ಅಧರ್ಮದಿಂದ ನಡೆಯುವವರಿಗೆ ಸುಖ! ಅಂದಬಳಿಕ ಆ ಹಾಳುಧರ್ಮವನ್ನು ತಕ್ಕೊಂಡು ಮಾಡುವದೇನು? ಶ್ರಮದಂತೆ ಫಲವು ದೊರೆಯುತ್ತಿರಲು, ದೇವರ ಗೊಡವೆ ನಮಗೇಕೆ? ನಾವು ಸುಖಪ್ರಾಪ್ತಿಯ ಸಾಧನವಾದ ಅರ್ಥದ ಪ್ರಾಪ್ತಿಯನ್ನೊಂದು ಮಾಡಿಕೊಂಡರಾಯಿತು! ದುಡ್ಡಿದ್ದವನೇ ದೊಡ್ಡಪ್ಪನು, ಅವನಿಗೇ ಜಗತ್ತು ಅಧೀನವಾಗಿರುವದು," ಎಂದು ಆಡಿಕೊಳ್ಳುತ್ತ, ತಮ್ಮ ಮಾತಿನ ಸತ್ಯತೆಗಾಗಿ, ಈಗಿನ ದೊಡ್ಡದೊಡ್ಡ ಸಾರ್ವಭೌಮರಾಜರನ್ನೂ, ಶ್ರೀಮಂತರನ್ನೂ, ಧನ–ಕನಕ ಸಂಪನ್ನರನ್ನೂ ಬೆರಳು ಮಾಡಿ ತೋರಿಸುವರು! ಆದ್ದರಿಂದ ಗುರುದೇವಾ, ಈ ಲೋಕಪ್ರವಾಹದ ವಿರುದ್ಧ ಈಸಿ ಪಾರಾಗಿ ನಾವು ಹ್ಯಾಗೆ ಭಗವಚ್ಚರಣವನ್ನು ಮುಟ್ಟೇವು? ಈ ಎಲ್ಲ ಸ್ಥಿತಿಯನ್ನು ನೋಡಿ ನೆನಿಸಿ ನಮ್ಮ ಮನಸ್ಸು ಅತ್ಯಂತ ವ್ಯಗ್ರವಾಗಿರುವದು; ನಮಗೆ ಮಾರ್ಗವು ತೋಚದಾಗಿದೆ; ಆದ್ದರಿಂದ ಸದ್ಗುರುನಾಥಾ, ಕರುಣಾಳುವಾದ ನೀನು ನಮಗೆ ಕೃತಾರ್ಥತೆಯ ಯೋಗ್ಯ ಮಾರ್ಗ ತೋರಿಸಿ ನಮ್ಮನ್ನು ಉದ್ಧರಿಸು.

ವಿವೇಕಶೀಲನು ಹೀಗೆ ಪ್ರಾರ್ಥಿಸಿದ್ದನ್ನು ಕೇಳಿ ಸಿದ್ಧಮುನೀಶ್ವರನು ಅತ್ಯಂತ ವಾತ್ಸಲ್ಯದಿಂದ—ವಿವೇಕಶೀಲಾ, ನೀನು ಹೇಳಿದಂತೆ ಈಗಿನ ಕಾಲವು ಅತ್ಯಂತ ಹೀನವಾದದ್ದೆಂಬದರಲ್ಲಿ ಸಂಶಯವಿಲ್ಲ. ಈ ಅಧಾರ್ಮಿಕಕಾಲವು ಸೃಷ್ಟಿಯ ಕ್ರಮದಂತೆ ಈಶ್ವರೀತಂತ್ರದಿಂದಲೇ ಒದಗಿದ್ದಾಗಿರುವದರಿಂದ, ಅದನ್ನು ರೂಪಾಂತರಗೊಳಿಸಲು ಒಟ್ಟಿನಲ್ಲಿ ಈಶ್ವರನಹೊರತು ಅನ್ಯರು ಸಮರ್ಥರಲ್ಲವು. ವಿವೇಕಶೀಲಾ, ಚತುರ್ಯುಗಗಳು ಸಹಸ್ರಾವಧಿ ಸಾರೆ ಕ್ರಮಿಸಿದಬಳಿಕ ಬ್ರಹ್ಮನಿಗೆ ನೂರುವರ್ಷಗಳಾಗಲು, ಪ್ರಳಯಕಾಲವು ಒದಗುವದು; ಆ ಅವಧಿಯು ತುಂಬಲಿಕ್ಕೆ ಇನ್ನೂ ಅನಂತ ಕಾಲವುಕ್ರಮಿಸಬೇಕಾಗಿರುವದರಿಂದ, ಈಗ ನಡೆದಿರುವ ಕಲಿಯುಗದ ಅಂತ್ಯದಲ್ಲಿ ಪ್ರಳಯವಾಗಲಾರದು. ಈ ಕಲಿಯುಗವು ಮುಗಿದಬಳಿಕ ಭಗವದಿಚ್ಛೆಯಂತೆ ಪುನಃ ಕೃತಯುಗವು ಒದಗಬೇಕಾಗಿರುವದು. ವಿವೇಕಶೀಲಾ, ಇಂಥ ಆಶ್ಚರ್ಯಕಾರಕ ರೂಪಾಂತರವು ಒಮ್ಮೆಲೆ ಹ್ಯಾಗಾದೀತೆಂದು ನೀನು ಆಶ್ಚರ್ಯಪಡಬೇಡ. ತಕ್ಕಕಾಲವು ಒದಗಿದಕೂಡಲೆ ಭಗವದವತಾರವಾಗಲು, ಆ ಅವತಾರದ ಮೈಮೇಲಿನ ಗಾಳಿತಾಕಿ ಪ್ರಾಣಿಗಳ ಮನಸ್ಸಿನ ಒಲವುಗಳು ಬದಲಾಗಲು, ಕಲಿಯುಗವಿದ್ದದ್ದು ಒಮ್ಮೆಲೆ ಕೃತಯುಗವಾಗುವದೆಂದು ಭಾಗವತಾದಿ ಪುರಾಣಗಳಲ್ಲಿ ಹೇಳಿರುವದು! ಸೃಷ್ಟಿಕರ್ತೃವಿನ ಇಚ್ಛೆಗೆ ಯಾವದು ತಾನೆ ಅಸಾಧ್ಯವು! ಸಾಕ್ಷಾತ್ ಭಗವದವತಾರದ ಸಹವಾಸದಿಂದ ಹೀಗೆ ಆಶ್ಚರ್ಯಕಾರಕ ಸತ್ಪರಿಣಾಮವಾಗುತ್ತಿದ್ದಂತೆ, ಈಗಿನ ಕಲಿಯುಗದಲ್ಲಿಯಾದರೂ ಸತ್ಸಮಾಗಮದಿಂದ ಆ ಸಮಾಗಮಪಡೆದವರ ವೃತ್ತಿಯ ರೂಪಾಂತರವಾಗುವದನ್ನು ನೋಡಬಹುದು. ವಿವೇಕಶೀಲಾ, ಯಾವದಕ್ಕಾದರೂ ಸಮಾಗಮವು ಕಾರಣವೆಂಬದನ್ನು ಲಕ್ಷದಲ್ಲಿಡು. ಈಶ್ವರನಿಷ್ಠರೆನಿಸುವ ಸಜ್ಜನರ ಸಮಾಗಮದಿಂದ ಸದ್ವಸ್ತುವಾದ ಈಶ್ವರನ ಪ್ರಾಪ್ತಿಯೂ, ವಿಷಯನಿಷ್ಠರೆನಿಸುವ ದುರ್ಜನರ ಸಮಾಗಮದಿಂದ ಅಸದ್ವಸ್ತುವಾದ ಮಾಯೆಯು ( ವಿಷಯಜಾಲವ )

ಪ್ರಾಪ್ತಿಯೂ ಆಗುವವು. ಜೀವರಿಗೆ ಗತಿಗಳು ಎರಡು; ಅವರ ಶಾಶ್ವತವಾದ ಶಾಂತಿ ರೂಪ ಒಂದನೆಯ ಗತಿಯು ಪರಮಾತ್ಮನಾದ ಸದಾಶಿವನು; ಅವರ ಅಶಾಶ್ವತವಾದ ದುಃಖರೂಪ ಮನೋರಂಜಕ ಎರಡನೆಯ ಗತಿಯು ಆ ಪರಮಾತ್ಮನ ಮಾಯೆಯು! ಒಟ್ಟಿಗೆ ಭಗವಾನ್ ಸದಾಶಿವನು, ಅಥವಾ ಆತನ ಮಾಯೆಯು ಜೀವರಗತಿಗಳಾಗಿರುವವು; ಈ ಎರಡನ್ನು ಬಿಟ್ಟು ಜೀವರಿಗೆ ಅನ್ಯತ್ರ ಗತಿಯೇ ಇಲ್ಲವು. ವಿವೇಕಶೀಲಾ, ಈಗಿನ ಅಧಾರ್ಮಿಕ ಕಾಲದಲ್ಲಿ ಜೀವರಿಗೆ ದೊರೆಯತಕ್ಕ ಗತಿಯು ಭಗವನ್ಮಾಯೆಯಾಗಿರುವದು. ನೀನು ಹೇಳಿದಂತೆ ಜನರ ಲಕ್ಷ್ಯವು ಈಗ ಧರ್ಮಚ್ಯುತವಾಗಿ ಅದು ವಿಷಯಗಳಕಡೆಗೆ, ಅಂದರೆ ಹೊನ್ನು-ಹೆಣ್ಣು ಮಣ್ಣುಗಳಕಡೆಗೆ ತಿರುಗಿರುವದರಿಂದ ಸ್ಥಿರವಾದ ಸುಖವು ಅವರಿಗೆ ದೊರೆಯುವದಿಲ್ಲ; ಯಾಕಂದರೆ ಧರ್ಮವು ಸ್ಥಿರವೂ, ವಿಷಯಗಳು ಅಸ್ಥಿರವೂ ಇರುವದರಿಂದ, ಧರ್ಮದೃಷ್ಟಿಯವರಿಗೆ ಸ್ಥಿರಸುಖವೂ, ಅಧರ್ಮದೃಷ್ಟಿಯವರಿಗೆ ಅಸ್ಥಿರ ಸುಖವೂ ದೊರೆಯುವದು ಸ್ವಾಭಾವಿಕವು. ಈಗಿನ ಅಧರ್ಮಿಷ್ಠರು ಸುಖಕ್ಕಾಗಿ ಎಡ ತಾಕಿ ಯಾತಾ ಯಾತ ಪಡುವದೇ ಹೆಚ್ಚಾಗಿರುವದಲ್ಲದೆ, ನಿಜವಾದ ಸುಖದ ಗಂಧವು ಕೂಡ ಅವರಿಗೆ ತಗಲುವದಿಲ್ಲ. ಅಧಾರ್ಮಿಕನು ಉಂಡರೂ ಇನ್ನಿಷ್ಟು ಉಣ್ಣುವ ಸಾಧನೆಗಳಿಲ್ಲೆಂದು ಅಳುವನು; ಉಪವಾಸ ವಿದ್ದರಂತು ಊಟವು ಹ್ಯಾಗೆ ಸಿಕ್ಕೀತೆಂದು ಅವನು ಅತ್ತೇಅಳುವನು. ಒಟ್ಟಿಗೆ ವಿಷಯದೃಷ್ಟಿಯು ಈಗಿನ ಹೀನಜನರ ಆಶಿಬುರುಕತನವು ಹೆಚ್ಚಿರುವದರಿಂದ ಅಶಾಂತರಾದ ಅವರಿಗೆ ತ್ರೈಲೋಕ್ಯದ ಸಾಮ್ರಾಜ್ಯ ದೊರೆತರೂ "ಅಶಾಂತಸ್ಯಕುತಃ ಸುಖಂ" ಎಂಬಂತೆ ಅವರಿಗೆ ಸುಖವು ದೊರೆಯಲಾರದು; ಆ ಮೂಢರು ಸುಖದ ಭ್ರಾಂತಿಯಿಂದ ಯಾವಾಗಲೂ ತೊಳಲುತ್ತಲೇ ಇರುವರು! ಆದರೆ ಧರ್ಮದೃಷ್ಟಿಯವರ ಮಾತು ಹಾಗಲ್ಲ! ಅವರ ದೃಷ್ಟಿಯು ಧರ್ಮದಲ್ಲಿರುವದರಿಂದ ಅವರಿಗೆ ನಾಶಿವಂತ ವೈಷಿಕ ಸುಖವು ಇರಲಿ, ಇಲ್ಲದಿರಲಿ; ಅದು ಬಹಳವಿರಲಿ, ಸ್ವಲ್ಪ ವಿರಲಿ; ಅದು ಯಥೇಚ್ಛವಾಗಿ ಬರಲಿ-ಹೋಗಲಿ ಅವಕ್ಕಾಗಿ ಮಹತ್ವಕೊಡದೆ ತಮ್ಮ ಧರ್ಮಪರಾಯಣತೆಯಿಂದ ಅವರು ಸದಾ ಸಂತುಷ್ಟರಾಗಿರುವದರಿಂದ ಅವರು ಸುಖಿಗಳಾಗಿರುವರು. ವಿವೇಕಶೀಲಾ, ಸುಖಪ್ರಾಪ್ತಿಯ ಆಶೆಯಿಂದ ಧರ್ಮವನ್ನು ಆಚರಿಸತಕ್ಕದ್ದಲ್ಲ; ಧರ್ಮದ ಪ್ರಭುವು ಈಶ್ವರನಾಗಿರುವದರಿಂದ ಆತನ ಸಂತೋಷಕ್ಕಾಗಿ ಕರ್ತವ್ಯವೆಂದು ಧರ್ಮವನ್ನು ಆಚರಿಸತಕ್ಕದ್ದು. ಒಟ್ಟಿಗೆ ಧರ್ಮಾಚರಣೆಯ ಫಲವು ವಿಷಯ ಸುಖವಲ್ಲ; ಈಶ್ವರಪ್ರೀತಿಯು. ಅದ್ದರಿಂದ ವಿವೇಕಶೀಲಾ, ಈಗಿನ ವಿಷಯಸುಖಮಗ್ನ ನಾಸ್ತಿಕರ ಆಚಾರ-ವಿಚಾರಗಳಿಗೆ ಲಕ್ಷಗೊಡದೆ ಸತ್ಸಮಾಗಮದಿಂದ ಪ್ರಾಪ್ತವಾಗುವ ಜ್ಞಾನಪ್ರದೀಪದ ಸಹಾಯದಿಂದ ನೀನು ಧರ್ಮರತನಾಗಿ ಪರಮೇಶ್ವರರೂಪ ಸದ್ವಸ್ತುವನ್ನು ಸಂಪಾದಿಸುವ ಯತ್ನಮಾಡು; ಅಂದರೆನಿನ್ನ ಕಲ್ಯಾಣವಾಗುವದು. ಕಲ್ಯಾಣೇಚ್ಛುವು ಭಗವಂತನ ಹಾಗು ಆತನ ಮಾಯೆಯ ಸಂಬಂಧವನ್ನು ಅರಿತುಕೊಂಡು ವಿವೇಕದಿಂದ ವ್ಯವಹಾರ ಮಾಡಬೇಕು.

# ಜ್ಞಾನಪ್ರದೀಪ ಕಿರಣ,

೧ ನೆಯದು.

## ಈಶ್ವರನ ಹಾಗು ಆತನ ಮಾಯೆಯ ಸಂಬಂಧ

ಈ ಮೇರೆಗೆ ಸಿದ್ಧಮುನೀಶ್ವರನು ಹೇಳಿದ್ದನ್ನು ಕೇಳಿ ವಿವೇಕಶೀಲನು—ಗುರುದೇವಾ, ಭಗವಾನ್ ಸದಾಶಿವನ ಹಾಗು ಆತನ ಮಾಯೆಯ ಸಂಬಂಧವನ್ನು ಮೂಢರಾದ ನಮಗೆ ತಿಳಿಯುವಂತೆ ಬೋಧಿಸು, ಎಂದು ಪ್ರಾರ್ಥಿಸಲು, ಸಿದ್ಧಮುನೀಶ್ವರನು—ವಿವೇಕಶೀಲಾ, ಈಶ್ವರನ ಹಾಗು ಆತನ ಮಾಯೆಯ ಕಲ್ಪನೆಯಾಗುವದಕ್ಕಾಗಿ ನಿನಗೊಂದು ವ್ಯಾವಹಾರಿಕ ಉದಾಹರಣೆಯನ್ನು ಹೇಳುವೆನು ಕೇಳು. ಒಬ್ಬ ಉದ್ಯೋಗಸ್ಥನು ತನ್ನ ಶಕ್ತಿಯಿಂದ ದುಡ್ಡಿನಗಳಿಕೆಗಾಗಿ ಒಂದು ದೊಡ್ಡ ಉದ್ಯೋಗವಿಟ್ಟಿರುವನೆಂದು ತಿಳಿ. ಆತನ ಉದ್ಯೋಗದಲ್ಲಿ ನೂರಾರು ಜನರು ದುಡಿಯುತ್ತಿರುವರು. ಅವರಲ್ಲಿ ಬಹು ಜನರು ಉದ್ಯೋಗಸ್ಥನ ಗೊಡವಿಗೆ ಹೋಗದೆ, ಆತನಿಂದ ಹೆಚ್ಚು ದ್ರವ್ಯವನ್ನು ಪಡೆಯಬೇಕೆಂಬ ಉಬ್ಬಿನಿಂದ ಉದ್ಯೋಗದಲ್ಲಿ ಮೈಮುರಿಯೆ ದುಡಿಯುವರಲ್ಲದೆ, ಶಕ್ಯವಾದ ಬೇರೆ ಯುಕ್ತಾಯುಕ್ತವೆನಿಸುವ ಬೇಕು ಬೇಕಾದ ಉಪಾಯಗಳಿಂದಲೂ, ಯಜಮಾನನನ್ನು ಮೆಚ್ಚಿಸಿ ಹೆಚ್ಚು ಪ್ರಾಪ್ತಿ ಮಾಡಿಕೊಳ್ಳಲು ಹೆಣಗುವರು. ಅಂಥವರ ಲಕ್ಷವು ಕೇವಲ ಗಳಿಕೆಯಲ್ಲಿರುವದಲ್ಲದೆ, ಅವರು ಉದ್ಯೋಗಸ್ಥನ ಯೋಗ್ಯತೆಯನ್ನಾಗಲಿ, ಅವನ ಗುಣದೋಷಗಳನ್ನಾಗಲಿ, ಅವನ ಹಿತಾಹಿತಗಳನ್ನಾಗಲಿ ಲಕ್ಷಿಸುವದಿಲ್ಲ. ಒಟ್ಟಿಗೆ ಅವರ ಆಸಕ್ತಿಯು ಉದ್ಯೋಗದಲ್ಲಿಯೇ ಇರುವದಲ್ಲದೆ ಉದ್ಯೋಗದ ಮೂಲಕಾರಣನಾದ ಉದ್ಯೋಗಸ್ಥನಲ್ಲಿರುವದಿಲ್ಲ. ಇದಕ್ಕೆ ವಿರುದ್ಧವಾಗಿ ಇದ್ದರೆ, ತೀರ ಸ್ವಲ್ಪಜನರು ಮಾತ್ರ ಉದ್ಯೋಗಸ್ಥನಿಗಿಂತ ಅವನ ಉದ್ಯೋಗವು ಕ್ಷುದ್ರವೂ, ಅಶಾಶ್ವತವೂ ಎಂದು ತಿಳಿದು ಗಳಿಕೆಯ ವಿಷಯವಾಗಿ ಉದಾಸೀನರಾಗಿ ಕೇವಲ ಉದ್ಯೋಗಸ್ಥನ ಅನುಗ್ರಹ ಸಂಪಾದನೆಗಾಗಿ ದೇಹದಂಡನ ಮಾಡುವರು. ಇಂಥವರು ಮಾತ್ರ ಉದ್ಯೋಗಸ್ಥನಿಗೆ ಸ್ವಕೀಯರಾಗಿ ಅವನ ಅನುಗ್ರಹಕ್ಕೆ ಪಾತ್ರರಾಗುವರು. ಉಳಿದವರು ಕೇವಲ ಗಳಿಕೆಯವರಾಗುವರು.

ವಿವೇಕಶೀಲಾ, ಇನ್ನು ಈ ಉದಾಹರಣೆಯನ್ನು ಈಶ್ವರನ ಹಾಗು ಆತನ ಮಾಯೆಯ ಸಂಬಂಧದಕಡೆಗೆ ಹಚ್ಚುವೆನು, ಲಕ್ಷಪೂರ್ವಕವಾಗಿ ಕೇಳು. ಉದ್ಯೋಗಸ್ಥನು ಈಶ್ವರನೆಂತಲೂ, ಉದ್ಯೋಗಸ್ಥನ ಉದ್ಯೋಗವು ಈಶ್ವರನ ಅಧೀನವಾಗಿರುವ ಅವನ ಮಾಯೆಯೆಂದರೆ ಸೃಷ್ಟಿಯೆಂತಲೂ, ಉದ್ಯೋಗಸ್ಥನ ಉದ್ಯೋಗದಲ್ಲಿ ಕೇವಲ ಗಳಿಕೆಗಾಗಿ ದುಡಿಯುವವರು, ಈಶ್ವರನ ಮಾಯಾರೂಪ ಸೃಷ್ಟಿಯ ವ್ಯವಹಾರದಲ್ಲಿ ಮಗ್ನರಾದವ

ರೆಂತಲೂ, ಉದ್ಯೋಗಸ್ಥನ ಉದ್ಯೋಗವನ್ನು ತುಚ್ಛವೆಂದು ತಿಳಿದು ಕೇವಲ ಉದ್ಯೋಗಸ್ಥನ ಅನುಗ್ರಹ ಸಂಪಾದನೆಗಾಗಿ ದೇಹದಂಡನಮಾಡುವವರು, ಈಶ್ವರನ ಮಾಯಾರೂಪ ಸೃಷ್ಟಿಯ ವ್ಯವಹಾರವನ್ನು ತೃಣೀಕರಿಸಿ ತುಚ್ಛವೆಂದು ತಿಳಿದು ಈಶ್ವರಗುಣಲುಬ್ಧರಾಗಿ ಅವನ ಅನುಗ್ರಹ ಪಡೆಯುವವರೆಂತಲೂ ಕಲ್ಪಿಸು. ವಿವೇಕಶೀಲಾ, ಇನ್ನೊಮ್ಮೆ ಹೇಳುವೆನು ಕೇಳು. ಜಗತ್ತಿನ ಮೂಲಕಾರಣನಾದ ಪರಮಾತ್ಮನೇ ಭಗವಾನ್ ಸದಾಶಿವನೆಂಬ ಉದ್ಯೋಗಸ್ಥನು. ಆತನು ಗಳಿಕೆಗಾಗಿಯಲ್ಲ, ಕ್ರೀಡೆಗಾಗಿ ತನ್ನ ಶಕ್ತಿಯಿಂದ ನಿರ್ಮಿಸಿದ ಈ ಸೃಷ್ಟಿರೂಪ ಉದ್ಯೋಗವೇ ಆ ಸದಾಶಿವನ ಮಾಯೆಯು. ಪರಮಾತ್ಮನನ್ನು ಮರೆತು ಆತನ ಮಾಯೆಯಾದ ಈ ಸೃಷ್ಟಿಯೇ ಶ್ರೇಷ್ಠಫಲದಾತೃವೆಂದು ತಿಳಿದು, ಅದರ ವ್ಯವಹಾರದಲ್ಲಿ ಮಗ್ನರಾಗುವವರು, ಈಶ್ವರೀಮಾಯೆಯಿಂದ ಮೋಹಿಸಿದವರು. ಈ ಸೃಷ್ಟಿಯೊಳಗಿನ ವಿಷಯಭೋಗವನ್ನು ಧಿಕ್ಕರಿಸಿ, ಭಗವಾನ್ ಸದಾಶಿವನ ಪ್ರಸನ್ನತೆಗಾಗಿ ಭಕ್ತಿಯಿಂದ ದೇಹದಂಡನಮಾಡಿ ಅವನಿಂದ ಅನುಗ್ರಹಿಸಲ್ಪಟ್ಟವರೇ ಈಶ್ವರೀ ಮಾಯೆಗೆ ಒಳಗಾಗದವರು, ಅರ್ಥಾತ್ ಮುಕ್ತರು ಆಗಿರುವರು. ವಿವೇಕಶೀಲಾ, ಅನಂತ ವೈಭವಸಂಪನ್ನನಾದ ಈಶ್ವರನಮಾಯೆಯಾದರೂ ಅನಂತ ವೈಭವಸಂಪನ್ನವಾಗಿಯೇ ಇರುವದು. ಈಶ್ವರನ ಯೋಗ್ಯತೆಯ ಸಂಬಂಧದಿಂದ ಈ ಮಾಯೆಯ ಯೋಗ್ಯತೆಯು ಕಡಿಮೆಯಿದ್ದರೂ, ಕ್ಷುದ್ರಜೀವರಾದ ನಮ್ಮ ಯೋಗ್ಯತೆಯ ಸಂಬಂಧದಿಂದ ಈಶ್ವರೀ ಮಾಯೆಯ ಯೋಗ್ಯತೆಯೂ, ವೈಭವವೂ ಅನಂತವಾಗಿರುವವು; ಅಲ್ಲದೆ ಮಾಯೆಯ ವಿಶೇಷಲಕ್ಷಣವಾದ ವಿವಿಧತ್ವದಿಂದ ಅದು ಜೀವರಿಗೆ ಮನೋಹರವಾಗಿ ತೋರಿ ಅವರು ಈಶ್ವರನನ್ನು ಮರೆತು ಆತನ ಆ ವಿಲಕ್ಷಣ ಮಾಯೆಯಲ್ಲಿಯೇ ರಮಮಾಣರಾಗಿರುವರು! ಬರಿಯ ಜೀವರೇ ಏಕೆ, "ಮಮಮಾಯಾ ದುರತ್ಯಯಾ" ಅಂದರೆ ನನ್ನ ಮಾಯೆಯನ್ನು ದಾಟುವದು ನನಗೇ ದುಸ್ತರವೆಂದು ಈಶ್ವರನೇ ಹೇಳಿರುವನು! ವಿವೇಕಶೀಲಾ, ಹೊಟ್ಟೆ ಬಟ್ಟೆಗಾಗಿ ಬಡೆದಾಡುವ ಕ್ಷುದ್ರಜನರಿಗೆ ಉದ್ಯೋಗದ ಮೂಲಕಾರಣನಾದ ಉದ್ಯೋಗಸ್ಥನಿಗಿಂತ ತಮ್ಮ ಹೊಟ್ಟೆಬಟ್ಟೆಗೆ ಕಾರಣವಾದ ಉದ್ಯೋಗವೇ ಮಹತ್ವದ್ದಾಗಿ ತೋರಿ ಅವರು ಉದ್ಯೋಗಸ್ಥನ ಹಂಗಿಲ್ಲದೆ ಉದ್ಯೋಗದಲ್ಲಿ ತೊಡಗಿರುವಂತೆ, ವಿಷಯಾಸಕ್ತರು ಈಶ್ವರನನ್ನು ಮರೆತು ವಿಷಯವ್ಯವಹಾರದಲ್ಲಿ ತೊಡಗಿರುವದು ಸ್ವಾಭಾವಿಕವು. ಜೀವನು, "ನಾನು" ಎಂದು ಅಹಂಕಾರಪಟ್ಟಕೂಡಲೆ "ನನ್ನ ವ್ಯವಹಾರವು" ಎಂಬ ಅವನ ಮಾಯೆಯು ಅವನ ಬೆನ್ನು ಹತ್ತಿಯೇ ತೀರುವದು; ಆದ್ದರಿಂದ ವಿವೇಕಶೀಲಾ, ಅಹಂಕಾರಿಗಳಾದ ಜೀವರನ್ನು ಅವರವರ ಯೋಗ್ಯತೆಯಂತೆ ಅವರವರ ಮಾಯೆಗಳು ಅವರವರನ್ನು ಆವರಿಸಿರುವಂತೆ, ಷಡ್ಗುಣೈಶ್ವರ್ಯಸಂಪನ್ನನಾದ ಭಗವಾನ್ ಸದಾಶಿವನು ಲೀಲೆಗಾಗಿ ಅಹಂಕಾರತಾಳಲು, ಆತನ ಮಾಯಾರೂಪವಾದ ಅನಂತವಿಶ್ವವು ಅವನಲ್ಲಿ ತೋರಿತು! ಆಯಾ ಉದ್ಯೋಗಸ್ಥರ ಉದ್ಯೋಗಗಳು ಉದ್ಯೋಗಸ್ಥರ ಇಚ್ಛೆಯನ್ನವಲಂಬಿಸಿ ಹುಟ್ಟಲೂ ಬಹುದು, ನಡೆಯಲೂ ಬಹುದು, ನಿಂತುಹೋಗಲೂ ಬಹುದು; ಅದರಂತೆ ಲೀಲೆಗಾಗಿ ಮಹಾ ಉದ್ಯೋಗಸ್ಥನಾಗಿರುವ ಭಗವಾನ್ ಸದಾಶಿವನ ಇಚ್ಛೆಯಂತೆ ಈ ಸೃಷ್ಟಿರೂಪ

ಉದ್ಯೋಗವು ಹುಟ್ಟಲೂ ಬಹುದು, ನಡೆಯಲೂ ಬಹುದು, ನಾಶಹೊಂದಲೂ ಬಹುದು; ಉದ್ಯೋಗವನ್ನು ಲಕ್ಷಿಸದೆ, ಉದ್ಯೋಗಸ್ಥನನ್ನು ಹೊಂದಿಕೊಂಡಿದ್ದವನಿಗೆ ಉದ್ಯೋಗದ ಉತ್ಪತ್ತಿ–ಸ್ಥಿತಿ–ಲಯಗಳಸಂಬಂಧವು ಆಗದೆಹೋಗಿ ಅವನು ಉದ್ಯೋಗಸ್ಥನನ್ನು ಹೊಂದಿಕೊಂಡು ಆನಂದದಿಂದಿರುವಂತೆ, ಈಶ್ವರೀಮಾಯೆಯಾದ ಈ ಸೃಷ್ಟಿರೂಪ ಉದ್ಯೋಗವನ್ನು ಲಕ್ಷಿಸದೆ. ಈಶ್ವರನನ್ನೇ ಹೊಂದಿಕೊಂಡಿದ್ದವನಿಗೆ ಸೃಷ್ಟಿಯು ಉತ್ಪತ್ತಿ–ಸ್ಥಿತಿ–ಲಯಗಳ ಸಂಬಂಧವಾಗದೆ ಹೋಗಿ ಅವನು ಈಶ್ವರಕೃಪೆಯಿಂದ ಆನಂದದಿಂದಿರುವನು!

ವಿವೇಕಶೀಲಾ, ಹೀಗೆ ನಾನು ಈಶ್ವರನನ್ನು ಒಬ್ಬ ಉದ್ಯೋಗಸ್ಥನಿಗೂ, ಆತನ ಮಾಯಾಕಾರ್ಯವಾದ ಸೃಷ್ಟಿಯನ್ನು ಒಂದು ಉದ್ಯೋಗಕ್ಕೂ, ಬದ್ಧಜೀವರನ್ನು ವಿವೇಕಶೂನ್ಯರಾದ ಉದ್ಯೋಗಬದ್ಧ ಕತ್ತೆಯ ದುಡಿತದವರಿಗೂ, ಮುಕ್ತಜೀವರನ್ನು ವಿವೇಕಿಗಳಾದ ಈಶ್ವರ ಭಕ್ತರಿಗೂ ಹೋಲಿಸಿದರೂ, ಈ ಹೋಲಿಸುವಿಕೆಯಲ್ಲಿರುವ ಮುಖ್ಯ ವೈಲಕ್ಷಣ್ಯವನ್ನು ನೀನು ಲಕ್ಷದಲ್ಲಿಡತಕ್ಕದ್ದು. ಲೌಕಿಕ ಉದ್ಯೋಗಸ್ಥನು ಧನಪ್ರಾಪ್ತಿಗಾಗಿ ಹೆಣಗುತ್ತಿರುವದರಿಂದ "ಜಾಲಿಯಬಿತ್ತಿ ಕಾಲಿಗೆ ಮೂಲಮಾಡಿಕೊಂಡವನಂ"ತೆ ತನ್ನ ಉದ್ಯೋಗದಕೈಯಲ್ಲಿ ತಾನುಸಿಕ್ಕು, ತನ್ನ ಎಲ್ಲ ಆಗು ಹೋಗುಗಳಿಗೆ ಈ ಸೃಷ್ಟಿರೂಪ ಭಗವನ್ಮಾಯೆಯೇ ಕಾರಣವೆಂದು ಅಜ್ಞಾನದಿಂದ ನಂಬಿ ಒದ್ದಾಡುತ್ತಿರುವನು; ಆದರೆ ಲೀಲೆಗಾಗಿ ಸೃಷ್ಟಿಯನ್ನು ರಚಿಸಿರುವ ಸರ್ವತಂತ್ರಸ್ವತಂತ್ರನೂ, ಪೂರ್ಣಕಾಮನೂ ಆದ ಪರಮಾತ್ಮನು ತಾನು ಸಂಪಾದಿಸತಕ್ಕದ್ದೇನೂ ಇಲ್ಲದ್ದರಿಂದ, ಗಾರುಡಿಗನು ತನ್ನ ಗಾರುಡಿಗತನದಿಂದ ಮೋಹಿತನಾಗದೆ ಜನರನ್ನು ಮೋಹಿಸುವಂತೆ, ಪರಮಾತ್ಮನು ತನ್ನ ಮಾಯೆಯಿಂದ ಮೋಹಿತನಾಗದೆ ಆ ಮಾಯೆಗೆ ಆಧಾರನಾಗಿ ಅದನ್ನು ತನ್ನ ಅಧೀನದಲ್ಲಿಟ್ಟುಕೊಂಡು ಅಜ್ಞಾನಾವೃತ ಜೀವರನ್ನು ಮೋಹಿಸುವನು; ಆದ್ದರಿಂದ ವಿವೇಕಶೀಲಾ, ನೀನು ಪರಮೇಶ್ವರನ ಪ್ರೀತಿಯನ್ನು ಸಂಪಾದಿಸಬೇಕೆಂದು ಇಚ್ಛಿಸುತ್ತಿದ್ದರೆ, ಈ ಸೃಷ್ಟಿಯ ವ್ಯವಹಾರರೂಪಮಾಯೆಯಿಂದ ಮೋಹಿತನಾಗದೆ, ಇದು ಭಗವಂತನ ವೈಭವವೆಂಬ ಜ್ಞಾನದಿಂದ ಆ ವೈಭವಮೂಲವಾದ ಭಗವಂತನ ಸರ್ವಶ್ರೇಷ್ಠತ್ವವನ್ನರಿತು ಆ ಭಗವಾನ್ ಸದಾಶಿವನಲ್ಲಿ ಭಕ್ತಿತಾಳುವ ಭರದಲ್ಲಿ ಆತನ ಮಾಯೆಯನ್ನುಉದಾಸೀನಮಾಡಿ ಅದು ಅವನಿಂದ ಅಭಿನ್ನವೆಂದು ತಿಳಿದು ಅದರ ವಿಷಯವಾಗಿ ವೈರಾಗ್ಯತಾಳತಕ್ಕದ್ದು. ಅದಕ್ಕಾಗಿ ನೀನು ಸದ್ಗುರುವಿಗೆ ಶರಣುಹೋಗಿ, ಭಗವಂತನ ನಿರ್ಗುಣ–ಸಗುಣಸ್ವರೂಪಗಳೇನು? ಮಾಯೆಯ ಸ್ವರೂಪವೇನು? ಮಾಯೆಯನ್ನು ದಾಟುವ ಬಗೆಯಾವದು? ಎಂಬದನ್ನು ಆತನಿಂದ ಅರಿತುಕೊಳ್ಳುವದೊಂದೇ ತಕ್ಕ ಉಪಾಯವು; ಆದ್ದರಿಂದ ನೀನು ಬಿಟ್ಟದ್ದು ಬಿಟ್ಟು ಸದ್ಗುರುವಿಗೆ ಶರಣುಹೋಗಿ ನಿಕಟಸೇವೆಯಿಂದ ಆತನನ್ನು ಪ್ರಸನ್ನೀಕರಿಸಿಕೊಳ್ಳು. ಗುರುವಿನ ಗುಲಾಮರಾಗದವರಿಗೆ ಮುಕ್ತಿಯು ದೊರೆಯಲಾರದು. ಸದ್ಗುರುವಿನ ಕೃಪೆಯಿಂದಲೇ ಭಗವಂತನ ಪ್ರಾಪ್ತಿಯಾಗುವದಲ್ಲದೆ ಅನ್ಯೋಪಾಯಗಳಿಂದ ಸರ್ವಥಾ ಆಗದು. ಅಜ್ಞಾನಾಂಧಃಕಾರವನ್ನು ತೊಲಗಿಸಿ ಭಗವಂತನನ್ನು ತೋರಿಸಿಕೊಡುವ ಜ್ಞಾನಪ್ರದೀಪವು ಸದ್ಗುರುವಿನ ಕೈಯಲ್ಲಿರುವದರಿಂದ ಆತನಿಗೆ ಶರಣುಹೋಗುವದು ಅವಶ್ಯವು. ಈಶ್ವರ

ನನ್ನು ಕಂಡವರೇ ಈಶ್ವರನನ್ನು ತೋರಿಸಲು ಸಮರ್ಥರಾಗುವರಲ್ಲದೆ, ಅನ್ಯರು ಸಮರ್ಥರಾಗಲಾರರು. ಲೀಲೆಗಾಗಿ ತಾನೇ ಭೋಗ್ಯವಾದ ಸೃಷ್ಟಿ, ಭೋಕ್ತಾರನಾದ ಜೀವ ರೂಪಗಳಿಂದ ಪ್ರಕಟನಾದ ಪರಮಾತ್ಮನೇ ಭೋಕ್ತಾರರಾದ ಜೀವರ ಉದ್ಧಾರಕ್ಕಾಗಿ ಸದ್ಗುರುರೂಪದಿಂದ ಪ್ರಕಟವಾಗುತ್ತಿರುವನು. ಒಟ್ಟಿಗೆ ಭಗವಂತನಿಗೂ, ಸದ್ಗುರುವಿಗೂ ಭೇದವಿಲ್ಲ. ಭಗವಂತನು ಲೀಲೆಗಾಗಿ ಪ್ರಕಟವಾಗಿರುವದರಿಂದ ಆತನು ಒಂದು ಬಗೆಯಿಂದ ಜೀವರ ಬಂಧನಕ್ಕೆ ಕಾರಣವಾಗಿರುವನು; ಆದರೆ ಸದ್ಗುರುವು ಜಗತ್ತಿಗೆ ಜ್ಞಾನವನ್ನೀಯುಲು ಅವತರಿಸಿರುವದರಿಂದ ಆತನು ಜೀವರ ಮೋಕ್ಷಕ್ಕೆಕಾರಣವಾಗಿರುವನು. ಅಂತೇ ದೇವರು ಭಕ್ತರಿಗೆ ಬೇಡಿದ್ದನ್ನು ಕೊಟ್ಟರೆ, ಸದ್ಗುರುವು ಶಿಷ್ಯರ ಬೇಡುವ ಇಚ್ಛೆಯನ್ನೇ ನಷ್ಟಪಡಿಸಿ ಅವರಿಗೆ ತಾರಕವಾದ ಸದಾನಂದರೂಪ ಮೋಕ್ಷವನ್ನು ಕೊಡುವನು; ಆದ್ದರಿಂದಲೇ ಹರನಿಗಿಂತ ಗುರುವು ಹೆಚ್ಚಿನವನೆಂಬ ಮಾತು ಪ್ರಸಿದ್ಧವಾಗಿರುವದು. " ನಗುರೋರಧಿಕಂ ನಗುರೋರಧಿಕಂ ನಗುರೋರಧಿಕಂ ಶಿವಶಾಸನತಃ" ಎಂಬ ಶ್ರುತಿವಚನವು ಇದಕ್ಕೆ ಸಾಕ್ಷಿಯಾಗಿರುವದು. ಅದರಂತೆ, " ಹರಮುನಿದರೆ ಗುರುಕಾಯ್ವ"ನೆಂದು ಲೋಕೋಕ್ತಿಯೂ ಇರುವದು; ಆದ್ದರಿಂದ ವಿವೇಕಶೀಲಾ, ನೀನು ಸದ್ಗುರುವಿಗೆ ಶರಣು ಹೋಗಿ ನಿನ್ನ ತಾಪವನ್ನು ದೂರಮಾಡಿಕೊಳ್ಳು. ಹೀಗೆ ಮಾಡದೆ ನೀನು ಮನಸ್ಸಿನಲ್ಲಿ ಕಲ್ಪನಾಕೋಟಗಳನ್ನು ಕಲ್ಪಿಸಿದರೂ, ಶಾಸ್ತ್ರಪುರಾಣಗಳನ್ನು ಹರಡಿಹುಡುಕಿದರೂ, ಮುಗಿಬಿದ್ದು ಮತಗಳ ಖಂಡನಮಂಡನಗಳನ್ನು ಮಾಡಿದರೂ ಭಗವಾನ್ ಸದಾಶಿವನ ಕೃಪೆಯು ನಿನಗೆ ಆಗಲಾರದು.

ಹೀಗೆ ಸಿದ್ಧಮುನೀಶ್ವರನು ಹೇಳಿದ್ದನ್ನು ಕೇಳಿ ವಿವೇಕಶೀಲನು—ಸದ್ಗುರೋ, ನಿನಗಿಂತ ಅಧಿಕನಾದ ಗುರುವು ಮತ್ತಾರಿರುವರು? ಶಿಷ್ಯವತ್ಸಲನಾದ ನಿನ್ನನ್ನು ಬಿಟ್ಟು, ನಾವು ಮತ್ತೆಯಾರಿಗೆ ಶರಣುಹೋಗೋಣ? ನೀನೇ ಸದ್ಬೋಧಾಮೃತದಿಂದ ನಮ್ಮನ್ನು ಉದ್ಧರಿಸು, ಎಂದು ಪ್ರಾರ್ಥಿಸಲು ಸಿದ್ಧಮುನೀಶ್ವರನು—ಶಿಷ್ಯೋತ್ತಮರುಗಳಿರಾ, ನಿಮ್ಮ ಗುರುಭಕ್ತಿಯು ನಿಶ್ಚಯವಾಗಿ ನಿಮ್ಮನ್ನು ತಾರಿಸುವದು. ನಿಮ್ಮ ಉತ್ಕಟವಾದ ಗುರುಭಕ್ತಿಯೇ ನನ್ನಲ್ಲಿ ಬೋಧಕಶಕ್ತಿಯನ್ನುಂಟುಮಾಡುತ್ತಲಿದೆ; ನಿಮ್ಮಂಥ ಭಾವಿಕರ ಮುಂದಲ್ಲದೆ ಭಾವನಾರಹಿತರಮುಂದೆ, ಅಥವಾ ಖಂಬ—ಗೋಡೆಗಳಮುಂದೆ ನಾನು ಕುಳಿತುಕೊಂಡಿದ್ದರೆ ನಾನು ಈಗ ಬೋಧಿಸುವ ವಿಷಯದ ಸ್ಫೂರ್ತಿಯು ನನಗೆ ಎಂದೂಆಗುತ್ತಿದ್ದಿಲ್ಲ. ನಿಮ್ಮಉತ್ಕಟವಾದ ಗುರುಭಕ್ತಿಯಯೋಗದಿಂದ ಸನಾತನ ಸದ್ಗುರುರೂಪಶಕ್ತಿಯು ನನ್ನಲ್ಲಿ ಈಗ ಸದ್ಬೋಧವನ್ನು ಸ್ಫೂರ್ತಿಸುತ್ತಿರುವದೆಂದು ತಿಳಿಯಿರಿ. ಆ ಸದ್ಗುರುಪ್ರೇರಣೆಯಿಲ್ಲದಾಗ ನನ್ನ ತಲೆಯಮೇಲೆ ಕಲ್ಲುಹಾಕಿದರೂ ನನ್ನ ಮುಖದಿಂದ ಒಂದು ಅಕ್ಷರವೂ ಹೊರಡಲಾರದು! ಒಟ್ಟಿಗೆ, ಸದ್ಗುರು ಸತ್ವವೇ ನನ್ನ ರೂಪದಿಂದ ಬೋಧಿಸುವದೆಂತಲೂ, ಆ ಸದ್ಗುರುಸತ್ವವೇ ನಿಮ್ಮರೂಪದಿಂದ ಶ್ರವಣಮಾಡುವದೆಂತಲೂ ತಿಳಿದು ನಾನೂ ನೀವೂ ಅಹಂಕಾರರಹಿತರಾಗಿ ಸದ್ಗುರುವಿನ ಜ್ಞಾನದಾನದ ಹಾಗು ಜ್ಞಾನ ಪ್ರತಿಗ್ರಹದ ಕಾರ್ಯಗಳನ್ನು ನಡಿಸೋಣ! ಈಗ ನಾನು ಲಿಂಗಪುರಾಣ—ಭಾಗವತಾದಿಗಳ

ಆಧಾರದಿಂದ ನಿಮಗೆ ಪರಮಾತ್ಮನ ನಿರ್ಗುಣ-ಸಗುಣರೂಪಗಳನ್ನೂ, ಮಾಯೆಯು ಸ್ವರೂಪವನ್ನೂ, ಜೀವನ ತರಣೋಪಾಯವನ್ನೂ ಯಥಾಮತಿ ಹೇಳುವೆನು ಕೇಳಿರಿ.

## ಜ್ಞಾನಪ್ರದೀಪಕಿರಣ,

೩ ನೆಯದು-

———೧———

### ಈಶ್ವರನ ಸಗುಣ-ನಿರ್ಗುಣ ರೂಪಗಳು.



ವಿವೇಕಶೀಲಾ, ಮೂಲ ಸದಾಶಿವ ಪರಮಾತ್ಮನು ಗುಣವಿವರ್ಜಿತನೂ, ಧ್ರುವನೂ, ಅಕ್ಷಯ್ಯನೂ, ನಿರಾಕಾರನೂ, ಅಂದರೆ ಅಲಿಂಗನೂ ಆಗಿರುವನು. ಆತನೇ ಈ ಜಗತ್ತಿಗೆ ಕಾರಣವಾಗಿರುವನು. ಈ ಭಗವಂತನ ನಿತ್ಯವೂ, ಶುದ್ಧವೂ, ಬುದ್ಧವೂ ಆದ ಪರ ಬ್ರಹ್ಮ ಸ್ವರೂಪವು ಯಾರಿಗೂ ತಿಳಿಯುವದಿಲ್ಲ. ಆತನ ಸ್ವರೂಪವಂತು ಇರಲಿ, ಆತನ ಮಾಯೆಯಿಂದ ಅಂದರೆ ಇಚ್ಛಾಶಕ್ತಿಯಿಂದ ಉತ್ಪನ್ನವಾಗಿರುವ ಸೃಷ್ಟಿಯ ಜ್ಞಾನವೂ ಸಂಪೂರ್ಣವಾಗಿ ಬ್ರಹ್ಮಾದಿದೇವತೆಗಳಿಗೂ ಆಗುವದು ಶಕ್ಯವಿರುವದಿಲ್ಲ. ಅವರು ಆ ಸದಾಶಿವ ಭಗವಂತನ ಲೀಲೆಗಳನ್ನು ಮಾತ್ರ ವರ್ಣಿಸುವರು. ಇಂದ್ರಿಯಗಳನ್ನೂ, ಮನಸ್ಸನ್ನೂ ಗೆದ್ದಂಥ, ಎಲ್ಲವೃತ್ತಿಗಳೂ ಈಶ್ವರನಲ್ಲಿ ಲೀನವಾಗಿರುವಂಥ ವಿಚಾರಶೀಲರಾದ ಪುರುಷರು ಮಾತ್ರ ಆ ಪರಮಾತ್ಮನ ಜ್ಞಾನವನ್ನು ಪಡೆಯುವರು; ಆದರೆ ಅಂಥವರು ಅವನ ಸ್ವರೂಪರಾಗಿ ಹೋಗುವದರಿಂದ “ ಆ ಸ್ವರೂಪವು ಹೀಗೆ ಇರುವದು ” ಎಂದು ಹೇಳಲಿಕ್ಕೆ ಅವರು ಉಳಿದುಕೊಳ್ಳುವದಿಲ್ಲ. ಆ ನಿರ್ಗುಣ ಪರಮಾತ್ಮನ ಚಿನ್ಮಯ ತತ್ವವು ಸ್ಥಾವರ-ಜಂಗಮಶರೀರಗಳನ್ನು ಧರಿಸುವ ಯಾವತ್ತು ಪದಾರ್ಥಗಳಲ್ಲಿ ಇರುತ್ತಿದ್ದರೂ, ಅವಿದ್ಯೆಯ ಅಂದರೆ ಮಾಯೆಯ ಸತ್ವಾದಿಗುಣಗಳ ಮೂಲಕ ಅದು ಅದೃಶ್ಯವಾಗಿರುವದು. ಈ ನಿರ್ಗುಣ ಪರಮಾತ್ಮನು ನಿತ್ಯದಲ್ಲಿ ಸ್ವಾತಂತ್ರ್ಯದಿಂದ ಅಂದರೆ ಸತ್ಯ, ಚಿತ್ಸ್ವರೂಪ, ನಿರ್ಗುಣ, ನಿರ್ವಿಕಾರನಾಗಿಯೂ, ಸೃಷ್ಟಿಯಕಾಲದಲ್ಲಿ ಮಾಯೆಯೊಡನೆಯೂ ವ್ಯವಹರಿಸುವನೆಂಬದಕ್ಕೆ ಶ್ರುತಿಗಳೇ ಸಾಕ್ಷಿಯು. ಯಾವಾಗಲೂ ಇರುತ್ತಿದ್ದ ಈ ನಿರ್ಗುಣ ಪರಮಾತ್ಮನಿಂದಲೇ ಎಲ್ಲವೂ ಹುಟ್ಟಿ, ಕಡೆಗೆ ಅವನಲ್ಲಿಯೇ ಅವೆಲ್ಲ ಲಯವಾಗಿ ಕಡೆಗೆ ಅವನೊಬ್ಬನೆ ಉಳಿಯುವದರಿಂದ, ಮಧ್ಯದಲ್ಲಿ ಹುಟ್ಟಿದ ದೇವ-ಮನುಷ್ಯಾದಿಗಳೂ ಅವನ ಸ್ವರೂಪವನ್ನು ತಿಳಿಯಲಾರವು. ವಿವೇಕಶೀಲಾ, ತಂದೆಯು ನೋಡುತ್ತ ಹುಟ್ಟಿದ ಮಗನು ತಂದೆಯಿರುವಾಗಲೇ ಸತ್ತರೆ ಅವನಿಗೆ ತನಗಿಂತ ಮೊದಲು ಇದ್ದ, ಹಾಗು ತಾನು ಸತ್ತಮೇಲೆ ಇರುವ ತಂದೆಯ ಕೃತ್ಯದ ಸಂಪೂರ್ಣಜ್ಞಾನವು ಹ್ಯಾಗಾಗಬೇಕು? ಆತ್ಮಜ್ಞಾನಿಗಳು ಬ್ರಹ್ಮಾಂಡವನ್ನು ಸತ್ಯವೆಂದು ತಿಳಿಯುವದು ಮಾಯಾಮಯ

ಸೃಷ್ಟಿಯ ದೃಷ್ಟಿಯಿಂದಲ್ಲ; ಆ ಬ್ರಹ್ಮಾಂಡದಲ್ಲಿ ಅದ್ವೈತರೂಪದಿಂದ ತುಂಬಿಕೊಂಡಿರುವ ನಿರ್ಗುಣವೂ, ನಿರ್ವಿಕಾರವೂ, ಚಿದಾನಂದರೂಪವೂ ಆದ ಶಿವತತ್ವದ ದೃಷ್ಟಿಯಿಂದ! ಬಂಗಾರದ ಕುಂಡಲಾದಿ ಅಲಂಕಾರಗಳು ಅಲಂಕಾರರೂಪ ವಿಕೃತಿಯ ದೃಷ್ಟಿಯಿಂದ ಅಸತ್ಯ; ಆದರೆ ಸುವರ್ಣದದೃಷ್ಟಿಯಿಂದ ಸತ್ಯವು. ಅದರಂತೆಯೇ ಜಗತ್ತಿನಲ್ಲೆಲ್ಲ ವ್ಯಾಪಿಸಿರುವ ಶಿವತತ್ವದ ದೃಷ್ಟಿಯಿಂದ ಈ ತ್ರಿಗುಣಾತ್ಮಕ ಜಗತ್ತು ಸತ್ಯ; ಆದರೆ ಮಾಯಾಮಯ ಸೃಷ್ಟಿಯ ದೃಷ್ಟಿಯಿಂದ ವಸ್ತುತಃ ಈ ಜಗತ್ತು ನಿಸ್ಸಂಶಯ ಅಸತ್ಯವಾಗಿರುವದು.

ವಿವೇಕಶೀಲಾ, ಶ್ರೀಮದ್ಭಾಗವತದಲ್ಲಿ ಪಿಪ್ಪಲಾಯನನೆಂಬ ಯೋಗೀಂದ್ರನು ನಿಮಿರಾಜನನ್ನು ಕುರಿತು ಈ ಪರಬ್ರಹ್ಮಸ್ವರೂಪವನ್ನು ಕುರಿತು ಹೇಳಿದ್ದನ್ನು ನಿನಗೆ ಹೇಳುವೆನು ಕೇಳು. ವಾಸ್ತವವಾಗಿ ನೋಡಲು, ಬ್ರಹ್ಮನು ಒಬ್ಬನೇ ಇದ್ದು, ಅವನಿಗಿರುವ ಬೇರೆಬೇರೆ ಸಂಬಂಧಗಳಿಂದ ಅವನಿಗೆ ಬ್ರಹ್ಮ, ಪರಮಾತ್ಮ, ಸದಾಶಿವ ಎಂಬ ಬೇರೆಬೇರೆ ಸಂಜ್ಞೆಗಳುಂಟಾಗುತ್ತವೆ. ಜಾಗ್ರತಿ, ಸ್ವಪ್ನ, ಸುಷುಪ್ತಿ, ತೂರ್ಯ ಎಂಬ ನಾಲ್ಕು ಅವಸ್ಥೆಗಳಲ್ಲಿಯೂ ಪುರುಷನಲ್ಲಿ ವ್ಯಾಪಕರೂಪದಿಂದ ವಾಸಮಾಡುವದಕ್ಕೆ ಬ್ರಹ್ಮವೆನ್ನುವರು. ದೇಹ, ಇಂದ್ರಿಯಗಳು, ಪ್ರಾಣಗಳು, ಮನಸ್ಸು ಇವು ತಮ್ಮ ತಮ್ಮ ಕರ್ಮಗಳನ್ನು ಯಾವನಯೋಗದಿಂದ ಮಾಡುವವೋ ಅವನಿಗೆ ಪರಮಾತ್ಮನೆನ್ನುವರು; ವಿಶ್ವದ ಉತ್ಪತ್ತಿ-ಸ್ಥಿತಿ-ಪ್ರಲಯಗಳನ್ನು ಮಾಯೆಯದ್ವಾರದಿಂದ ಮಾಡುವ ಹಾಗು ತನ್ನ ಅಸ್ತಿತ್ವಕ್ಕೆ ಅನ್ಯಕಾರಣವಿಲ್ಲದ ವಸ್ತುವಿಗೆ ಸದಾಶಿವನೆನ್ನುವರು. ವಿವೇಕಶೀಲಾ, ಸರ್ವವ್ಯಾಪಕವಾದ ಪರಬ್ರಹ್ಮದ ಜ್ಞಾನವನ್ನಾಗಲಿ, ಕಲ್ಪನೆಯನ್ನಾಗಲಿ ಮಾಡಿಕೊಳ್ಳಲಿಕ್ಕೆ ಇಂದ್ರಿಯಗಳು ಸಮರ್ಥವಾಗಲಾರವು; ಯಾಕಂದರೆ ಸರ್ವೇಂದ್ರಿಯಗಳ ವ್ಯಾಪಾರವನ್ನು ಪ್ರಕಾಶಿತವಾಗಿ ಮಾಡುವ ತತ್ವವು ಪರಬ್ರಹ್ಮವೇ ಆಗಿರುವದರಿಂದ, ಇಂದ್ರಿಯಗಳು ಮರ್ಯಾದಿತಸಾಮರ್ಥ್ಯವುಳ್ಳವಾಗಿರುತ್ತವೆ. ಇಂದ್ರಿಯಾದಿಗಳ ಮಾತುಏಕೆ? ಪ್ರತ್ಯಕ್ಷ ಶ್ರುತಿಗಳಿಗೂ ಪರಬ್ರಹ್ಮವನ್ನು ವರ್ಣಿಸಲಿಕ್ಕೆ ಬಾರದ್ದರಿಂದ ಅವು ಆ ಪರಬ್ರಹ್ಮವನ್ನು ಕುರಿತು—"ಪ್ರಾಣದ ಪ್ರಾಣವು, ನೇತ್ರದ ನೇತ್ರವು, ಅನ್ನದ ಅನ್ನವು, ಮನಸ್ಸಿನ ಮನಸ್ಸು" ಎಂಬ ರೀತಿಯಿಂದಲೂ, "ಸ್ಥೂಲಶರೀರವು ಪರಬ್ರಹ್ಮವಲ್ಲ, ಸೂಕ್ಷ್ಮಶರೀರವು ಪರಬ್ರಹ್ಮವಲ್ಲ, ವಾಣಿಯಿಂದ ಉಚ್ಚಾರವಾಗುವದು ಪರಬ್ರಹ್ಮವಲ್ಲ" ಎಂಬ ರೀತಿಯಿಂದಲೂ ಲಾಕ್ಷಣಿಕವಾಗಿ ಅದನ್ನು ವರ್ಣಿಸಿರುವವು.

ವಿವೇಕಶೀಲಾ, ಪರಬ್ರಹ್ಮವು ಮೂಲತಃ ಒಂದು ಇದ್ದು, ಹಲವು ಪ್ರಕಾರಗಳಿಂದ ಭಾಸಮಾನವಾಗುವದು. ಮೂಲ ಅದ್ವಿತೀಯ ಪರಬ್ರಹ್ಮವೇ ಸತ್ವರಜಸ್ತಮೋಗುಣಗಳಿಂದ ಯುಕ್ತವಾಗಿರುವಾಗ ಪ್ರಕೃತಿ (ಮಾಯಾ) ರೂಪದಿಂದಲೂ, ಕ್ರಿಯಾಶಕ್ತಿಯುಕ್ತವಾಗಿದ್ದಾಗ ಸೂತ್ರರೂಪ [ಕಾರಣರೂಪ] ದಿಂದಲೂ, ಜ್ಞಾನಶಕ್ತಿಯುಕ್ತವಾಗಿದ್ದಾಗ ಮಹತ್ತತ್ವ [ಅಹಂಕಾರ] ರೂಪದಿಂದಲೂ ಭಾಸವಾಗುವದು. ಮಹತ್ತತ್ವಾವಸ್ಥೆಯಲ್ಲಿ ಅದಕ್ಕೆ ಅಹಂಕಾರ, ಅಂದರೆ ಜೀವನ ಉಪಾಧಿಯೆನ್ನುವರು; ಮತ್ತು ಮುಂದೆ ಪರಬ್ರಹ್ಮವೇ, ಇಂದ್ರಿಯಗಳ ವಿಷಯಗಳು, ಆ ವಿಷಯಗಳ ಜ್ಞಾನ ಇತ್ಯಾದಿ ರೂಪ

ಗಳಿಂದ ಸರ್ವತ್ರಪ್ರತ್ಯಕ್ಷವಾಗುವದು. ತಾತ್ಪರ್ಯವೇನಂದರೆ, ಪರಬ್ರಹ್ಮದ ಅಸ್ತಿತ್ವವನ್ನು ಸಿದ್ಧಮಾಡಲಿಕ್ಕೆ ಹೊರಗಿನ ಪ್ರಮಾಣಗಳು ಬೇಡ. ಜಗತ್ತಿನ ಈ ಪರಬ್ರಹ್ಮರೂಪತತ್ವವು ಉತ್ಪತ್ತಿ-ಸ್ಥಿತಿ-ಲಯಗಳಿಲ್ಲದ್ದೂ, ಕ್ಷಯ-ವೃದ್ಧಿ ಮೊದಲಾದ ವಿಕಾರಗಳಿಲ್ಲದ್ದೂ ಎಂಬದನ್ನು ಚನ್ನಾಗಿ ಲಕ್ಷದಲ್ಲಿಡು. ಜಾಗ್ರತಿ-ಸ್ವಪ್ನ-ಸುಷುಪ್ತಿ ಎಂಬ ಅವಸ್ಥೆಗಳಲ್ಲಿಯೂ ಪರಬ್ರಹ್ಮವು ಕೂಟಸ್ಥವೆಂದರೆ ನಿರ್ವಿಕಾರವಾಗಿ ಇರುತ್ತದೆಂಬದನ್ನು ಸಹಜವಾಗಿ ಸಿದ್ಧ ಮಾಡಬಹುದು. ಜಾಗ್ರತಿಯಲ್ಲಿ ಆಯಾ ಇಂದ್ರಿಯಗಳು ಮಾಡುವ ವ್ಯಾಪಾರಗಳನ್ನು ನಾವು ನೋಡುವೆವು; ಸ್ವಪ್ನಾವಸ್ಥೆಯಲ್ಲಿ ಇಂದ್ರಿಯಗಳು ವ್ಯಾಪಾರ ಮಾಡದೆ ಸ್ವಸ್ಥವಾಗಿದ್ದರೂ ಇಂದ್ರಿಯಗಳ ಜಾಗ್ರದವಸ್ಥೆಯೊಳಗಿನ ಸಂಸ್ಕಾರವು [ಅಹಂಕಾರವು]ಕಾರ್ಯಮಾಡುತ್ತಿರುವದು ನಮ್ಮ ಅನುಭವಕ್ಕೆ ಬರುತ್ತದೆ; ಸುಷುಪ್ತಿಯಲ್ಲಿ, ಅಂದರೆ ಗಾಢನಿದ್ರೆಯಲ್ಲಿ ಇಂದ್ರಿಯಗಳ ಕರ್ಮಗಳಾಗಲಿ, ಅವುಗಳ ಸಂಸ್ಕಾರಗಳಾಗಲಿ ಎಷ್ಟು ಮಾತ್ರವೂ ಇಲ್ಲದಿದ್ದರೂ, ಗಾಢನಿದ್ರೆಯು ಹತ್ತಿದ್ದರಿಂದಾದ ಸುಖೋತ್ಪತ್ತಿಯು ಜ್ಞಾನವಾಗಿ "ನಾನು ಸುಖದಿಂದ ಮಲಗಿದ್ದೇನೆಂ"ದು ಮಲಗಿದವನು ಹೇಳುತ್ತಾನೆ. ಹೀಗೆ ಮೂರು ಸ್ಥಿತಿಗಳಲ್ಲಿ ಕೂಟಸ್ಥರೂಪದಿಂದ ಇರುವ "ನಾನು" ಎಂದು ಎನಿಸಿಕೊಳ್ಳುವವನು ಆತ್ಮನು, ಅಥವಾ ಪರಬ್ರಹ್ಮನು, ಎಂದು ತಿಳಿದುಕೊಳ್ಳಲೇಬೇಕಾಗುವದೆಂಬದು ಸ್ಪಷ್ಟವಾಗಿರುವದು. ವಿವೇಕಶೀಲಾ, ಸುಷುಪ್ತಿಯ ಸ್ಥಿತಿಯನ್ನು ವಿಚಾರಮಾಡುವದರಿಂದ ಆತ್ಮನ (ಪರಬ್ರಹ್ಮನ) ಜ್ಞಾನವಾಗುವದೆಂದ ಬಳಿಕ, ಅದರ ಜ್ಞಾನಕ್ಕೆ ಬೇರೆ ಪ್ರಯತ್ನವೇಕೆಂದು ನೀನು ಕೇಳಬಹುದು; ಆದರೆ ಸೂರ್ಯನನ್ನು ನೋಡಲಿಕ್ಕೆ ಕಣ್ಣುಗಳು ಸ್ವಚ್ಛವಾಗಿರಬೇಕಾಗುವಂತೆ, ಆತ್ಮನನ್ನು ನೋಡಲಿಕ್ಕೆ ಅವಿದ್ಯೆಯು ನಾಶವಾಗಿ ಮನಸ್ಸು ಸ್ವಚ್ಛವಾಗಿರಬೇಕಾಗುವದೆಂಬದನ್ನು ಲಕ್ಷದಲ್ಲಿಟ್ಟು, ಅವಿದ್ಯೆಯ ನಾಶಕ್ಕೆ ಶಿವಭಕ್ತಿಯೇ ತಕ್ಕ ಉಪಾಯವೆಂದು ತಿಳಿದುಕೋ.

ವಿವೇಕಶೀಲಾ, ಇಂಥ ನಿರ್ಗುಣಪರಮಾತ್ಮನಿಂದ ಸೃಷ್ಟಿಯ ಉತ್ಪತ್ತಿಯು ಹ್ಯಾಗಾಯಿತೆಂಬದನ್ನು ಸಾಧಾರಣವಾಗಿ ಸ್ವಲ್ಪದರಲ್ಲಿ ಹೇಳುವೆನು ಕೇಳು. ಅಲಿಂಗನಾದ ನಿರ್ಗುಣಶಿವನ ಪ್ರಕೃತಿಗೆ ಅಥವಾ ಪ್ರಧಾನಕ್ಕೆ ಲಿಂಗವೆಂಬ ಸಂಜ್ಞೆಯಿರುವದು. ಆ ಲಿಂಗವು ಗುಣಯುಕ್ತವೂ, ಯಾವತ್ತೂ ಜಗತ್ತಿನ ಉತ್ಪತ್ತಿಸ್ಥಾನವೂ, ಜಗತ್ತಿನ ಸ್ಥೂಲ-ಸೂಕ್ಷ್ಮಶರೀರವೂ ಆಗಿರುವದು. ಈ ಪ್ರಕೃತಿಗೆ ಶಿವನ ಇಚ್ಛಾಶಕ್ತಿಯೆಂತಲೂ ಅನ್ನುವರು. ಈ ಪ್ರಕೃತಿಯು ಸತ್ವ-ರಜ-ತಮ ಎಂಬ ಮೂರು ಗುಣಗಳುಳ್ಳದ್ದಾಗಿರುವದು. ಪ್ರಕೃತಿಯಲ್ಲಿಯ ಈ ಮೂರು ಗುಣಗಳು ಸಮಸಮಾನವಾಗಿರುವದರಿಂದ ಸೃಷ್ಟಿಯ ಉತ್ಪತ್ತಿಯಾಗಲಿಕ್ಕೆ ಮಾರ್ಗವಿರುವದಿಲ್ಲವು. ಪರಮಾತ್ಮನು ಅಂದರೆ ಶಿವನು ಸೃಷ್ಟಿಮಾಡುವ ಇಚ್ಛೆಯಿಂದ ಆ ಪ್ರಕೃತಿಯ ಕಡೆಗೆ ನೋಡಲು, ಕೂಡಲೆ ಅದು ಶೈವೀ, ಅಂದರೆ ಶಿವಸಂಬಂಧಿಯವಾಗಿ, ಅದರೊಳಗಿನ ಸತ್ವ-ರಜಸ್ತಮೋಗುಣಗಳು ಶಿವನ ಇಚ್ಛೆಯಂತೆ ಕಾಲನಯೋಗದಿಂದ ಕ್ಷೋಭಗೊಂಡು ವಿಷಮವಾಗಲು, ಆ ಪ್ರಕೃತಿಯು ಮಹತ್ತತ್ವವಾಯಿತು. ಈ ಶಿವಪ್ರವಿಷ್ಟ ಮಹತ್ವತ್ವದಿಂದ ಶಿವಾತ್ಮಕಗಳಾದ

ಮೂರು ಪ್ರಧಾನದೇವತೆಗಳು ಉತ್ಪನ್ನವಾದವು. ಅವುಗಳಲ್ಲಿ ಶಿವಾಂಶವಾದ ಸತ್ವಗುಣಾತ್ಮಕದೇವತೆಗೆ ವಿಷ್ಣುವೆಂತಲೂ, ರಜೋಗುಣಾತ್ಮಕದೇವತೆಗೆ ಬ್ರಹ್ಮನೆಂತಲೂ, ತಮೋಗುಣಾತ್ಮಕದೇವತೆಗೆ ಭಗವಾನ್ ರುದ್ರನೆಂತಲೂ ಹೆಸರು. ಶಿವಾಜ್ಞೆಯಂತೆ ಬ್ರಹ್ಮನು ಸೃಷ್ಟಿಯನ್ನು ಮಾಡುವನು; ವಿಷ್ಣುವು ಸೃಷ್ಟಿಯನ್ನು ರಕ್ಷಿಸುವನು; ಭಗವಾನ್ ರುದ್ರನು ಸೃಷ್ಟಿಯನ್ನು ನಾಶಮಾಡುವನು; ಆದರೆ ಯಾವತ್ತು ಜಗತ್ತು ಶಿವಾತ್ಮಕವಾಗಿರುವದು. ಹೀಗೆ ಶಿವಾಜ್ಞೆಯಂತೆ ಬ್ರಹ್ಮನು ವಿವಿಧಸೃಷ್ಟಿಯನ್ನು ರಚಿಸಲು, ದೇವ-ಮನುಷ್ಯ-ತಿರ್ಯಗಾದಿಯೋನಿವಿಚಿತ್ರವಾದ ಈ ಅತರ್ಕ್ಯವಾದ ಬ್ರಹ್ಮಾಂಡವು ದೃಗ್ಗೋಚರವಾಯಿತು.

ಈ ಮೇರೆಗೆ ಸಿದ್ಧಮುನೀಶ್ವರನು ನಿರೂಪಿಸಿದ್ದನ್ನು ಕೇಳಿ ವಿವೇಕಶೀಲನು—ಗುರುದೇವಾ, ನಿನ್ನ ಗಂಭೀರವಾದ ಉಪದೇಶದಿಂದ ನಮ್ಮ ಅಂತಃಕರಣದಲ್ಲಿ ಜ್ಞಾನಪ್ರದೀಪದ ಜ್ಯೋತಿಯು ಮಿನುಗಹತ್ತಿದ್ದರಿಂದ ಪರಮಾನಂದವಾಗುತ್ತದೆ. ನೀನು ಶ್ರವಣಮಾಡಿಸಿದ ಶ್ರೀ ಶಿವಚರಿತ್ರಗಳಂತೆ ಈ ಜ್ಞಾನಬೋಧವು ತಟ್ಟನೆ ಮನಸ್ಸಿನಲ್ಲಿ ಬಾರದಿದ್ದರೂ, ಅದನ್ನು ವಿಚಾರಪೂರ್ವಕ ಶ್ರವಣಮಾಡುವಾಗ ಮನಸ್ಸಿನ ಜಾಡ್ಯವು ನಷ್ಟವಾಗತೊಡಗಿ ಮನಸ್ಸು ಒಳಿತಾಗಿ ಸುಸಂಸ್ಕೃತವಾಗುವದು. ಸದ್ಗುರುನಾಥಾ, ನೀನು ಭಗವಾನ್ ಸದಾಶಿವನ ನಿರ್ಗುಣರೂಪವನ್ನು ಮನಸ್ಸಿಗೆ ನಡುವಂತೆ ವರ್ಣಿಸಿದರೂ, ಆ ನಿರ್ಗುಣರೂಪವು ಸಗುಣರಾದ ನಮಗೆ ಗ್ರಾಹ್ಯವಾಗಲ್ಲೊಲ್ಲದು. ಪಾಮರರಾದ ನಮ್ಮಂಥ ತ್ರಿಗುಣಬಾಧಿತರ ಉಪಾಸನೆಗೆ ಪರಮಾತ್ಮನ ಸಗುಣಮೂರ್ತಿಯೂ, ಮಹಾತ್ಮರಾದ ತ್ರಿಗುಣಾತೀತರ ಉಪಾಸನೆಗೆ ಪರಮಾತ್ಮನ ನಿರ್ಗುಣಸ್ವರೂಪವೂ ತಕ್ಕವಾಗಬಹುದು; ಆದ್ದರಿಂದ ನಮಗೋಸ್ಕರ ಪರಮೇಶ್ವರನ ಕಲ್ಯಾಣಕಾರಕ ಸಗುಣರೂಪವನ್ನು ವರ್ಣಿಸು. ನಿರ್ಗುಣನಾದ ಭಗವಾನ್ ಸದಾಶಿವನ, ಆ ಶಾಶ್ವತವಾದ ಸಗುಣಮೂರ್ತಿಯನ್ನು ನಾವು ಯಾವಾಗಲೂ ಹೃದಯಕಮಲದಲ್ಲಿ ಧರಿಸಿ, ಆತನ ಧ್ಯಾನಮಾಡುತ್ತ, ಆತನ ಪವಿತ್ರತರ ಚರಿತ್ರಗಳ ಶ್ರವಣಮಾಡುತ್ತ ಚಿತ್ತಶುದ್ಧಿಯನ್ನು ಪಡೆದು ಮೋಕ್ಷಕ್ಕೆ ಅಧಿಕಾರಿಗಳಾಗುವೆವು, ಎಂದು ಕೇಳಿಕೊಳ್ಳಲು, ಶಿಷ್ಯವತ್ಸಲನಾದ ಸಿದ್ಧಮುನೀಶ್ವರನು ಭಗವಾನ್ ಸದಾಶಿವನ ಸಗುಣಮೂರ್ತಿಯನ್ನು ವರ್ಣಿಸುವದಕ್ಕಾಗಿ ಮನಸಾ ಸದಾಶಿವನನ್ನು ಧ್ಯಾನಿಸತೊಡಗಿದನು.

**ಭಗವಾನ್ ಸದಾಶಿವನ ಧ್ಯಾನಯೋಗ್ಯಮೂರ್ತಿಯು:**—ಈ ಮೇರೆಗೆ ಸಿದ್ಧಮುನೀಶ್ವರನು ಮನಸಾ ಸದಾಶಿವನನ್ನು ಧ್ಯಾನಿಸಿ ವಿವೇಕಶೀಲನನ್ನು ಕುರಿತು—ವಿವೇಕಶೀಲಾ, ಧ್ಯಾನಯೋಗ್ಯವಾದ ಭಗವಾನ್ ಸದಾಶಿವನ ಸಗುಣಮೂರ್ತಿಯನ್ನು ಮಹಾತ್ಮರು ವರ್ಣಿಸಿರುವಂತೆ ಯಥಾಮತಿ ವರ್ಣಿಸುವೆನು ಕೇಳು. ಬ್ರಹ್ಮಾದಿದೇವತೆಗಳೂ, ದಕ್ಷಾದಿ ಪ್ರಜಾಪತಿಗಳೂ, ವಸಿಷ್ಠ-ವಾಮದೇವಾದಿ ಋಷಿಗಳೂ, ಉರಗ-ಅಪ್ಸರಾದಿಕರೂ, ವಿವಿಧವಾದ ವಿಲಕ್ಷಣಾಕಾರದ ಪ್ರೀತಿಯ ಪ್ರಮಥಗಣಗಳೂ ಸುತ್ತುಗೊಂಡಿರಲು, ಶ್ರೀ ಶಂಕರನು ಬಗೆಬಗೆಯ ರತ್ನಕೆಚ್ಚಿದ ದಿವ್ಯ ಸಿಂಹಾಸನದಲ್ಲಿ ವಿರಾಜಮಾನನಾಗಿದ್ದು

ವನು. ಆ ಸಿಂಹಾಸನಕ್ಕೆ ರತ್ನಖಚಿತಗಳಾದ ಏಳು ಪ್ರಭಾವಳಿಗಳಿರುವವು. ಅವುಗಳಲ್ಲಿ ಮೊದಲನೆಯ ಪ್ರಭಾವಳಿಯು ರಕ್ತವರ್ಣದ್ದಿದ್ದು, ಎರಡನೆಯದು ಸುವರ್ಣವರ್ಣದ್ದಿರುವದು. ಮೂರನೆಯ ನೀಲವರ್ಣದ ಪ್ರಭಾವಳಿಯು ಸರ್ವೋತ್ಕೃಷ್ಟವಾದ ಕಲಾಕುಸರಿನ ಕೆಲಸದಿಂದ ಪರಿಶೋಭಿಸುತ್ತಿರುವದು. ನಾಲ್ಕನೆಯದು ಶುಭ್ರವರ್ಣದ್ದಾಗಿದ್ದು, ಅದು ಕೆಂಪುರತಪ್ಪ ಕಮಲಗಳಿಂದ ಪರಿಶೋಭಿಸುತ್ತಿರುವದು. ಐದನೆಯ ವೈಡೂರ್ಯ ರತ್ನದ ವಿಖ್ಯಾತವಾದ ಪ್ರಭಾವಳಿಯು ಮುತ್ತು ಸುತ್ತಿ ಉತ್ತಮ ಶೋಭೆಯನ್ನು ಬೀರುತ್ತಿರುವದು. ಆರನೆಯ ಪ್ರಭಾವಳಿಯು ಪುಷ್ಪರಾಗರತ್ನದ್ದು; ಅದೂ ಮುತ್ತಿನ ಜಾಳಿಗೆಯಿಂದ ಶೋಭಿಸುತ್ತಿರುವದು. ಭಗವಂತನ ಈ ವಿಶ್ವಕರ್ಮನಿರ್ಮಿತವಾದ ಸಿಂಹಾಸನದ ಏಳನೆಯ ಪ್ರಭಾವಳಿಯು ವಿವಿಧರತ್ನಗಳ ಕಾಂತಿಯಿಂದ ಶೋಭಾಯಮಾನವಾಗಿದ್ದು, ತ್ರಿಭುವನದಲ್ಲಿ ಅಪೂರ್ವವಾಗಿರುವದು. ಇಂಥ ದಿವ್ಯ ಸಿಂಹಾಸನದಲ್ಲಿ ಕೋಟಿಸೂರ್ಯಪ್ರಭೆಯ ಭಗವಾನ್ ಶಂಕರನು ವಿರಾಜಮಾನನಾಗಿರುವನು. ಆತನು ಹಣೆಗಣ್ಣಿನ ಪ್ರಲಯಾಗ್ನಿಯ ಜ್ವಾಲಾಮಾಲೆಯಿಂದಲೂ, ಜಡೆಯ ಚಂದ್ರನ ಷೋಡಶಕಲೆಗಳಿಂದಲೂ ಶೋಭಿಸುತ್ತಿರುವನು. ಆತನ ಎಡಗಿವಿಯಲ್ಲಿ ತಕ್ಷಕಸರ್ಪವೂ, ಬಲಗಿವಿಯಲ್ಲಿ ವಾಸುಕಿಸರ್ಪವೂ ಅಲಂಕಾರಗಳಾಗಿದ್ದು, ಆ ಮಹಾಸರ್ಪಗಳ ರತ್ನಪ್ರಕಾಂತಿಯು ಕಣ್ಣುಗಳು ಲಕಲಕಿಸುತ್ತಿರುವವು. ನೀಲಕಂಠನಾದ ಆ ಭಗವಂತನು ಹೀಗೆ ಸರ್ಪಾಭರಣಗಳಿಂದಲೂ, ಸರ್ಪದ ಉಡದಾರ ಯಜ್ಞೋಪವೀತಗಳಿಂದಲೂ, ಹುಲಿದೊಗಲ ಹೊದಿಕೆಯಿಂದಲೂ ಶೋಭಿಸುತ್ತಿರುವನು. ಕರ್ಕೋಟಕ, ಪದ್ಮ ಎಂಬ ಸರ್ಪಗಳ ನೂಪುರಗಳಿಂದೊಪ್ಪುವ ಆ ಭಗವಾನ್ ಸದಾಶಿವನು, ಪೌರ್ಣಿಮೆಯ ಚಂದ್ರನ ಪ್ರಭೆಯನ್ನು ಹರಡುತ್ತ, ಕರ್ಪೂರ ಗೌರನೆನಿಸಿ, ಭೋಲಾಚಕ್ರವರ್ತಿಯೆಂದು ಹೊಗಳಿಸಿಕೊಳ್ಳುತ್ತ ಧ್ಯೇಯಮೂರ್ತಿಯಾಗಿ ಸಿಂಹಾಸನದಲ್ಲಿ ವಿರಾಜಿಸುತ್ತಿರುವನು. ಆತನ ರತ್ನದ ಕಿರೀಟದ ಶಿಖರದಲ್ಲಿಯೂ, ಬಾಹುಭೂಷಣ-ಕರ್ಣಕುಂಡಲಗಳಲ್ಲಿಯೂ ಸರ್ಪಗಳು ಶೋಭಿಸುತ್ತಿರುವವು. ಆತನು ದಶಭುಜಗಳುಳ್ಳವನಾಗಿದ್ದು, ಒಂದೊಂದು ಕೈಯಲ್ಲಿ ಒಂದೊಂದರಂತೆ ತ್ರಿಶೂಲ, ಡಮರು, ಖಡ್ಗ, ಪಾಣಿ-ಪಾತ್ರ, ಧನುರ್ಬಾಣ, ಖಟ್ವಾಂಗ, ಪರಶು, ತ್ರಿಶೂಲ, ಶೃಂಗಾಸನ, ಕಮಲ ಇವನ್ನು ಧರಿಸಿರುವನು. ಆ ಸರ್ವೇಶ್ವರನ ವಿಶಾಲವಾದ ಪಂಚಮುಖಗಳು ಸರ್ವಾಲಂಕಾರಗಳಿಂದ ಶೋಭಿಸುತ್ತಿರುವವು. ಕಲಂಕರಹಿತನಾದ ಚಂದ್ರನಂತೆಯೂ, ಕ್ಷೀರಸಮುದ್ರದ ನೊರೆಯಂತೆಯೂ, ಭಸ್ಮಭೂಷಿತರೂಪದಂತೆಯೂ ಒಪ್ಪುವ ಮನ್ಮಥದಾಹಕವಾದ ಒಂದು ಮುಖವು ಚಂದ್ರ-ಸೂರ್ಯಾಗ್ನಿ ನೇತ್ರಗಳಿಂದಲೂ, ಭಸ್ಮ ತ್ರಿಪುಂಡ್ರದಿಂದಲೂ, ಚಂದ್ರನ ಪ್ರಭೆಯಿಂದಲೂ ವಿಭೂಷಿತವಾಗಿದ್ದು, ಮೃದುಹಾಸದ ರಕ್ತವರ್ಣದ ಅಧರೋಷ್ಠದಿಂದ ಒಪ್ಪುತ್ತಿರುವದು. ಎರಡನೆಯ ತಾಮ್ರವರ್ಣದ ಮುಖವು ಉತ್ತರದಿಕ್ಕಿನಲ್ಲಿದ್ದು, ಅದು ದಾಳಿಂಬದ ಹೂವಿನಂತೆ, ಅಥವಾ ಪ್ರಭಾತರವಿಮಂಡಲದಂತೆ ಶೋಭಿಸುತ್ತಿರುವದು. ಮೂರನೆಯ ಮುಖವು ಪೂರ್ವದಿಕ್ಕಿನಲ್ಲಿರುತ್ತಿದ್ದು, ಅದರ ಸರ್ಪವೇಷ್ಟಿತ ಜಡೆಯಲ್ಲಿ ಗಂಗೆಯೂ, ಅರ್ಧಚಂದ್ರನೂ ಒಪ್ಪುತ್ತಿರುವರು. ನೀಲವರ್ಣದ ನಾಲ್ಕನೆಯ

ಮುಖವು ದಕ್ಷಿಣದಿಕ್ಕಿನಲ್ಲಿ ಇದ್ದು, ವಿಕ್ರಾಳವಾದ ಕೋರೆದಾಡೆಗಳಿಂದಲೂ, ಮುಖದ ಜ್ವಾಲೆಗಳಿಂದಲೂ, ರುಂಡಮಾಲೆಯಿಂದಲೂ ಭಯಪ್ರದವಾಗಿರುವದು. ಆ ಭಗವಂತನ ವ್ಯಕ್ತಾವ್ಯಕ್ತವೂ, ಸಾಕಾರ—ನಿರಾಕಾರವೂ, ಸಗುಣ—ನಿರ್ಗುಣವೂ ಎನಿಸುವ ಐದನೆಯ ಮುಖವು ಸಲಕ್ಷಣ—ನಿರ್ಲಕ್ಷಣವಾಗಿ ತೋರುತ್ತಿರುವದು. ಹೀಗೆ ಪಂಚಮುಖಗಳಿಂದೊಪ್ಪುವ ಪರಮೇಶ್ವರನು ಪರಬ್ರಹ್ಮವಸ್ತುವಾಗಿರುವನು. ಆತನ ಚರಣಗಳು ಅರಕ್ತಕಮಲದಂತಿರುವವು. ಆತನ ಉಗುರುಗಳು ಚಂದ್ರನನ್ನು ಹೋಲುವವು. ಆತನ ಪಾದಗಳಲ್ಲಿ ಹಾವುಗೆಗಳು ಒಪ್ಪುವವು. ಗಂಭೀರನಾಭಿಯೂ, ಸುಂದರ ರೋಮರಾಜಿಯೂ ಒಪ್ಪುತ್ತಿರಲು, ಭಕ್ತಮನೋಹರನೂ, ಪರಮಾರ್ಥ ಲಾಭದಾಯಕನೂ ಆದ ಭಗವಾನ್ ರುದ್ರನು ಆದಿಮಾಯೆಯಾದ ಪಾರ್ವತಿಯೊಡನೆ ಸಿಂಹಾಸನದಲ್ಲಿ ಕುಳಿತಿರುವನು. ವಿವೇಕಶೀಲಾ, ಇಂಥ ಸಶಕ್ತಿಕನಾದ ಶಿವನ ದಿವ್ಯಮೂರ್ತಿಯನ್ನು ಭಕ್ತರು ಭಾವಿಸಿ ಧ್ಯಾನಿಸಿ ಕೃತಾರ್ಥರಾಗತಕ್ಕದ್ದು.

---

## ಜ್ಞಾನಪ್ರದೀಪಕಿರಣ,

### ೩ನೆಯದು.

---

## ಮಾಯೆಯ ಅವ್ಯಕ್ತ—ವ್ಯಕ್ತರೂಪಗಳು.

---

ಈ ಮೇರೆಗೆ ಸಿದ್ಧಮುನೀಶ್ವರನು ಹೇಳಿದ ಭಗವಾನ್ ಸದಾಶಿವನ ಮಂಗಲಕಾರಕ ನಿರ್ಗುಣ—ಸಗುಣರೂಪಗಳ ವರ್ಣಿಸಿದ್ದನ್ನು ಕೇಳಿ ವಿವೇಕಶೀಲಾದಿ ಶಿಷ್ಯರಿಗೆ ಪರಮಾನಂದವಾಯಿತು. ಅವರು ಭಗವಂತನ ಧ್ಯಾನಯೋಗ್ಯವಾದ ಆ ಸಗುಣಗಂಭೀರರೂಪವನ್ನು ಮನಸಾ ಸ್ಮರಿಸಿ ಭಕ್ತಿಯಿಂದ ನಮಸ್ಕರಿಸಿ ಸಿದ್ಧಮುನೀಶ್ವರನನ್ನು ಕುರಿತು— ಸದ್ಗುರೋ, ಭಗವಾನ್ ಸದಾಶಿವನ ನಿರ್ಗುಣ—ಸಗುಣರೂಪಗಳನ್ನು ವರ್ಣಿಸಿದಿರಿ. ಅದರಂತೆ ಮಾಯೆಯ ಅವ್ಯಕ್ತ—ವ್ಯಕ್ತರೂಪಗನ್ನು ಕುರಿತು ನಮ್ಮನ್ನು ಬೋಧಿಸಿ ಕೃತಾರ್ಥರನ್ನು ಮಾಡತಕ್ಕದ್ದು, ಎಂದು ಕೇಳಲು, ಸಿದ್ಧಮುನೀಶ್ವರನು ಸಂತೋಷದಿಂದ ಹೇಳತೊಡಗಿದನು.

ಮಾಯೆಯ ಅವ್ಯಕ್ತರೂಪವು:—ವಿವೇಕಶೀಲಾ, ಈಮೊದಲೆ ನಿನಗೆ ಜ್ಞಾನಪ್ರದೀಪದ ಎರಡನೆಯ ಕಿರಣದಲ್ಲಿ ನಿರ್ಗುಣ ಶಿವನಿಗೆ "ಅಲಿಂಗ"ಎಂಬ ಸಂಜ್ಞೆಯಿರುವದೆಂತಲೂ, ಆತನ ಶಕ್ತಿಗೆ ಅಂದರೆ ಮಾಯೆಗೆ "ಲಿಂಗ" ಎಂಬ ಸಂಜ್ಞೆಯು ಇರುವದೆಂತಲೂ ಹೇಳಿದ್ದು ನಿನ್ನ ಸ್ಮರಣದಲ್ಲಿರಬಹುದು. ಸಾಕ್ಷೀರೂಪ ಭಗವಾನ್ ಸದಾಶಿವನ ಕಾರ್ಯ

ವನು. ಆ ಸಿಂಹಾಸನಕ್ಕೆ ರತ್ನಖಚಿತಗಳಾದ ಏಳು ಪ್ರಭಾವಳಿಗಳಿರುವವು. ಅವುಗಳಲ್ಲಿ ಮೊದಲನೆಯ ಪ್ರಭಾವಳಿಯು ರಕ್ತವರ್ಣದ್ದಿದ್ದು, ಎರಡನೆಯದು ಸುವರ್ಣವರ್ಣದ್ದಿರುವದು. ಮೂರನೆಯ ನೀಲವರ್ಣದ ಪ್ರಭಾವಳಿಯು ಸರ್ವೋತ್ಕೃಷ್ಟವಾದ ಕಲಾಕುಸರಿನ ಕೆಲಸದಿಂದ ಪರಿಶೋಭಿಸುತ್ತಿರುವದು. ನಾಲ್ಕನೆಯದು ಶುಭ್ರವರ್ಣದ್ದಾಗಿದ್ದು, ಅದು ಕೆಂಪುರತ್ನ ಕಮಲಗಳಿಂದ ಪರಿಶೋಭಿಸುತ್ತಿರುವದು. ಐದನೆಯ ವೈಡೂರ್ಯ ರತ್ನದ ವಿಖ್ಯಾತವಾದ ಪ್ರಭಾವಳಿಯು ಮುತ್ತು ಸುತ್ತ ಉತ್ತಮ ಶೋಭೆಯನ್ನು ಬೀರುತ್ತಿರುವದು. ಆರನೆಯ ಪ್ರಭಾವಳಿಯು ಪುಷ್ಪರಾಗರತ್ನದ್ದು; ಅದೂ ಮುತ್ತಿನ ಜಾಳಿಗೆಯಿಂದ ಶೋಭಿಸುತ್ತಿರುವದು. ಭಗವಂತನ ಈ ವಿಶ್ವಕರ್ಮನಿರ್ಮಿತವಾದ ಸಿಂಹಾಸನದ ಏಳನೆಯ ಪ್ರಭಾವಳಿಯು ವಿವಿಧರತ್ನಗಳ ಕಾಂತಿಯಿಂದ ಶೋಭಾಯಮಾನವಾಗಿದ್ದು, ತ್ರಿಭುವನದಲ್ಲಿ ಅಪೂರ್ವವಾಗಿರುವದು. ಇಂಥ ದಿವ್ಯ ಸಿಂಹಾಸನದಲ್ಲಿ ಕೋಟಿಸೂರ್ಯಪ್ರಭೆಯ ಭಗವಾನ್ ಶಂಕರನು ವಿರಾಜಮಾನನಾಗಿರುವನು. ಆತನು ಹಣೆಗಣ್ಣಿನ ಪ್ರಲಯಾಗ್ನಿಯ ಜ್ವಾಲಾಮಾಲೆಯಿಂದಲೂ, ಜಡೆಯ ಚಂದ್ರನ ಷೋಡಶಕಲೆಗಳಿಂದಲೂ ಶೋಭಿಸುತ್ತಿರುವನು. ಆತನ ಎಡಗಿವಿಯಲ್ಲಿ ತಕ್ಷಕಸರ್ಪವೂ, ಬಲಗಿವಿಯಲ್ಲಿ ವಾಸುಕಿಸರ್ಪವೂ ಅಲಂಕಾರಗಳಾಗಿದ್ದು, ಆ ಮಹಾಸರ್ಪಗಳ ರತ್ನದಕಾಂತಿಯು ಕಣ್ಣುಗಳು ಲಕಲಕಿಸುತ್ತಿರುವವು. ನೀಲಕಂಠನಾದ ಆ ಭಗವಂತನು ಹೀಗೆ ಸರ್ಪಾಭರಣಗಳಿಂದಲೂ, ಸರ್ಪದ ಉಡದಾರೆಯ ಯಜ್ಞೋಪವೀತಗಳಿಂದಲೂ, ಹುಲಿದೊಗಲ ಹೊದಿಕೆಯಿಂದಲೂ ಶೋಭಿಸುತ್ತಿರುವನು. ಕರ್ಕೋಟಕ, ಪದ್ಮ ಎಂಬ ಸರ್ಪಗಳ ನೂಪುರಗಳಿಂದೊಪ್ಪುವ ಆ ಭಗವಾನ್ ಸದಾಶಿವನು, ಪೌರ್ಣಿಮೆಯ ಚಂದ್ರನ ಪ್ರಭೆಯನ್ನು ಹರಡುತ್ತ, ಕರ್ಪೂರ ಗೌರನೆನಿಸಿ, ಭೋಲಾಚಕ್ರವರ್ತಿಯೆಂದು ಹೊಗಳಿಸಿಕೊಳ್ಳುತ್ತ ಧ್ಯೇಯಮೂರ್ತಿಯಾಗಿ ಸಿಂಹಾಸನದಲ್ಲಿ ವಿರಾಜಿಸುತ್ತಿರುವನು. ಆತನ ರತ್ನದ ಕಿರೀಟದ ಶಿಖರದಲ್ಲಿಯೂ, ಬಾಹುಭೂಷಣ-ಕರ್ಣಕುಂಡಲಗಳಲ್ಲಿಯೂ ಸರ್ಪಗಳು ಶೋಭಿಸುತ್ತಿರುವವು. ಆತನು ದಶಭುಜಗಳುಳ್ಳವನಾಗಿದ್ದು, ಒಂದೊಂದು ಕೈಯಲ್ಲಿ ಒಂದೊಂದರಂತೆ ತ್ರಿಶೂಲ, ಡಮರು, ಖಡ್ಗ, ಪಾಣಿ-ಪಾತ್ರ, ಧನುರ್ಬಾಣ, ಖಟ್ವಾಂಗ, ಪರಶು, ತ್ರಿಶೂಲ, ಶೃಂಗಾಸನ, ಕಮಲ ಇವನ್ನು ಧರಿಸಿರುವನು. ಆ ಸರ್ವೇಶ್ವರನ ವಿಶಾಲವಾದ ಪಂಚಮುಖಗಳು ಸರ್ವಾಲಂಕಾರಗಳಿಂದ ಶೋಭಿಸುತ್ತಿರುವವು. ಕಲಂಕರಹಿತನಾದ ಚಂದ್ರನಂತೆಯೂ, ಕ್ಷೀರಸಮುದ್ರದ ನೊರೆಯಂತೆಯೂ, ಭಸ್ಮಭೂಷಿತರೂಪದಂತೆಯೂ ಒಪ್ಪುವ ಮನ್ಮಥದಾಹಕವಾದ ಒಂದು ಮುಖವು ಚಂದ್ರ-ಸೂರ್ಯಾಗ್ನಿ ನೇತ್ರಗಳಿಂದಲೂ, ಭಸ್ಮ ತ್ರಿಪುಂಡ್ರದಿಂದಲೂ, ಚಂದ್ರನ ಪ್ರಭೆಯಿಂದಲೂ ವಿಭೂಷಿತವಾಗಿದ್ದು, ಮೃದುಹಾಸದ ರಕ್ತವರ್ಣದ ಅಧರೋಷ್ಠದಿಂದ ಒಪ್ಪುತ್ತಿರುವದು. ಎರಡನೆಯ ತಾಮ್ರವರ್ಣದ ಮುಖವು ಉತ್ತರದಿಕ್ಕಿನಲ್ಲಿದ್ದು, ಅದು ದಾಳಿಂಬದ ಹೂವಿನಂತೆ, ಅಥವಾ ಪ್ರಭಾತರವಿಮಂಡಲದಂತೆ ಶೋಭಿಸುತ್ತಿರುವದು. ಮೂರನೆಯ ಮುಖವು ಪೂರ್ವದಿಕ್ಕಿನಲ್ಲಿರುತ್ತಿದ್ದು, ಅದರ ಸರ್ಪವೇಷ್ಟಿತ ಜಡೆಯಲ್ಲಿ ಗಂಗೆಯೂ, ಅರ್ಧಚಂದ್ರನೂ ಒಪ್ಪುತ್ತಿರುವವು. ನೀಲವರ್ಣದ ನಾಲ್ಕನೆಯ

ಮುಖವು ದಕ್ಷಿಣದಿಕ್ಕಿನಲ್ಲಿ ಇದ್ದು, ವಿಕರಾಳವಾದ ಕೋರೆದಾಡೆಗಳಿಂದಲೂ, ಮುಖದ ಜ್ವಾಲೆಗಳಿಂದಲೂ, ರುಂಡಮಾಲೆಯಿಂದಲೂ ಭಯಪ್ರದವಾಗಿರುವದು. ಆ ಭಗವಂತನ ವ್ಯಕ್ತಾವ್ಯಕ್ತವೂ, ಸಾಕಾರ–ನಿರಾಕಾರವೂ, ಸಗುಣ–ನಿರ್ಗುಣವೂ ಎನಿಸುವ ಐದನೆಯ ಮುಖವು ಸಲಕ್ಷಣ–ನಿರ್ಲಕ್ಷಣವಾಗಿ ತೋರುತ್ತಿರುವದು. ಹೀಗೆ ಪಂಚಮುಖಗಳಿಂದೊಪ್ಪುವ ಪರಮೇಶ್ವರನು ಪರಬ್ರಹ್ಮವಸ್ತುವಾಗಿರುವನು. ಆತನ ಚರಣಗಳು ಅರಕ್ತಕಮಲದಂತಿರುವವು. ಆತನ ಉಗುರುಗಳು ಚಂದ್ರನನ್ನು ಹೋಲುವವು. ಆತನ ಪಾದಗಳಲ್ಲಿ ಹಾವುಗೆಗಳು ಒಪ್ಪುವವು. ಗಂಭೀರನಾಭಿಯೂ, ಸುಂದರ ರೋಮರಾಜಿಯೂ ಒಪ್ಪುತ್ತಿರಲು, ಭಕ್ತಮನೋಹರನೂ, ಪರಮಾರ್ಥ ಲಾಭದಾಯಕನೂ ಆದ ಭಗವಾನ್ ರುದ್ರನು ಆದಿಮಾಯೆಯಾದ ಪಾರ್ವತಿಯೊಡನೆ ಸಿಂಹಾಸನದಲ್ಲಿ ಕುಳಿತಿರುವನು. ವಿವೇಕಶೀಲಾ, ಇಂಥ ಸಶಕ್ತಿಕನಾದ ಶಿವನ ದಿವ್ಯಮೂರ್ತಿಯನ್ನು ಭಕ್ತರು ಭಾವಿಸಿ ಧ್ಯಾನಿಸಿ ಕೃತಾರ್ಥರಾಗತಕ್ಕದ್ದು.

---

## ಜ್ಞಾನಪ್ರದೀಪಕಿರಣ,

### ೩ನೆಯದು.

---

## ಮಾಯೆಯ ಅವ್ಯಕ್ತ–ವ್ಯಕ್ತರೂಪಗಳು.

---

ಈ ಮೇರೆಗೆ ಸಿದ್ಧಮುನೀಶ್ವರನು ಹೇಳಿದ ಭಗವಾನ್ ಸದಾಶಿವನ ಮಂಗಲಕಾರಕ ನಿರ್ಗುಣ–ಸಗುಣರೂಪಗಳ ವರ್ಣಿಸಿದ್ದನ್ನು ಕೇಳಿ ವಿವೇಕಶೀಲಾದಿ ಶಿಷ್ಯರಿಗೆ ಪರಮಾನಂದವಾಯಿತು. ಅವರು ಭಗವಂತನ ಧ್ಯಾನಯೋಗ್ಯವಾದ ಆ ಸಗುಣಗಂಭೀರರೂಪವನ್ನು ಮನಸಾ ಸ್ಮರಿಸಿ ಭಕ್ತಿಯಿಂದ ನಮಸ್ಕರಿಸಿ ಸಿದ್ಧಮುನೀಶ್ವರನನ್ನು ಕುರಿತು— ಸದ್ಗುರೋ, ಭಗವಾನ್ ಸದಾಶಿವನ ನಿರ್ಗುಣ–ಸಗುಣರೂಪಗಳನ್ನು ವರ್ಣಿಸಿದಿರಿ. ಅದರಂತೆ ಮಾಯೆಯ ಅವ್ಯಕ್ತ–ವ್ಯಕ್ತರೂಪಗನ್ನು ಕುರಿತು ನಮ್ಮನ್ನು ಬೋಧಿಸಿ ಕೃತಾರ್ಥರನ್ನು ಮಾಡತಕ್ಕದ್ದು, ಎಂದು ಕೇಳಲು, ಸಿದ್ಧಮುನೀಶ್ವರನು ಸಂತೋಷದಿಂದ ಹೇಳತೊಡಗಿದನು.

**ಮಾಯೆಯ ಅವ್ಯಕ್ತರೂಪವು:—**ವಿವೇಕಶೀಲಾ, ಈಮೊದಲೆ ನಿನಗೆ ಜ್ಞಾನಪ್ರದೀಪದ ಎರಡನೆಯ ಕಿರಣದಲ್ಲಿ ನಿರ್ಗುಣ ಶಿವನಿಗೆ "ಅಲಿಂಗ" ಎಂಬ ಸಂಜ್ಞೆಯಿದ್ದವೆಂತಲೂ, ಆತನ ಶಕ್ತಿಗೆ ಅಂದರೆ ಮಾಯೆಗೆ "ಲಿಂಗ" ಎಂಬ ಸಂಜ್ಞೆಯು ಇರುವದನ್ನು ನಿನಗೆ ಹೇಳಿದ್ದು ನಿನ್ನ ಸ್ಮರಣದಲ್ಲಿರಬಹುದು. ಸಾಕ್ಷೀರೂಪ ಭಗವಾನ್ ಸದಾಶಿ

ಕಾರಣರೂಪಶಕ್ತಿಗೆ "ಮಾಯೆ"ಯೆಂಬ ಹೆಸರು. ಈ ಮಾಯೆಗೆ ಅವ್ಯಕ್ತ, ಪ್ರಧಾನ, ಪ್ರಕೃತಿ ಎಂಬ ಹೆಸರುಗಳೂ ಇರುವವು. ಈ ಮಾಯೆಯು ಗುಣಯುಕ್ತವೂ, ಯಾವತ್ತು ಜಗತ್ತಿನ ಉತ್ಪತ್ತಿಸ್ಥಾನವೂ, ಜಗತ್ತಿನ ಸ್ಥೂಲ-ಸೂಕ್ಷ್ಮ ಶರೀರವೂ ಆಗಿರುವದು. ಅಲಿಂಗ ಅಂದರೆ ನಿರ್ಗುಣಶಿವನಿಂದಲೇ ಲಿಂಗವ ಅಂದರೆ ಮಾಯೆಯು ಉತ್ಪತ್ತಿಯಾಗಿರುವದು. ಸೃಷ್ಟಿಯ ಪೂರ್ವದಲ್ಲಿರುವ ಅವ್ಯಕ್ತವಾದ ಮಾಯೆಯನ್ನು ಶಿವನು ಸೃಷ್ಟಿಮಾಡುವ ಇಚ್ಛೆಯಿಂದ ನೋಡಿದಕೂಡಲೆ ಅದು ಗುಣಯುಕ್ತ ಅಂದರೆ ವ್ಯಕ್ತವಾಯಿತು. ಸತ್ವ-ರಜ-ತಮ ಎಂಬ ತ್ರಿಗುಣಯುಕ್ತವಾದ ಈ ವ್ಯಕ್ತ ಪ್ರಕೃತಿಯನ್ನು ಜೀವಾತ್ಮನು ಭೋಗಿಸುವನು; ಆದರೆ ಪರಮಾತ್ಮನು ಅದರ ತ್ಯಾಗಮಾಡುವನು; ಆದರೂ ಪರಮಾತ್ಮನೇ ಈ ಪ್ರಕೃತಿಯು ಅಂದರೆ ಮಾಯೆಯು ಆಧಾರವಾಗಿರುವನು. ಪರಮಾತ್ಮನ ಆಜ್ಞೆಯಂತೆ ಗುಣಗಳ ಸಮತ್ವವುಳ್ಳ ಪ್ರಕೃತಿಯಿಂದ ಗುಣಗಳ ವಿಷಮತ್ವವುಳ್ಳ ಮಹತ್ತ ಮವು ಉತ್ಪನ್ನವಾಗಿ, ಮೂಲತಃ ಅವ್ಯಕ್ತವೂ, ವರ್ಣಿಸಲಶಕ್ಯವೂ ಆದ ಅವ್ಯಕ್ತ ಮಾಯೆಯಿಂದ ವ್ಯಕ್ತ ಸೃಷ್ಟಿಯು ಉತ್ಪನ್ನವಾಯಿತು. ವಿವೇಕಶೀಲಾ, ಮೂಲ ಅವ್ಯಕ್ತ ಮಾಯೆಯು ಸ್ವರೂಪವನ್ನು ಸ್ವತಂತ್ರವಾಗಿ ವರ್ಣಿಸುವದು ಅಶಕ್ಯವು.

**ಮಾಯೆಯ ವ್ಯಕ್ತರೂಪವು**— ವಿವೇಕಶೀಲಾ, ಇದರ ಸಂಬಂಧದಿಂದ ಶ್ರೀಮದ್ಭಾಗವತದಲ್ಲಿ ಅಂತರಿಕ್ಷನೆಂಬ ಯೋಗೀಶ್ವರನು ನಿಮಿರಾಜನನ್ನು ಕುರಿತು ಹೇಳಿದ್ದನ್ನು ನಿನಗೆ ಹೇಳುವೆನು ಕೇಳು. ಯೋಗೀಶ್ವರನು ನಿಮಿರಾಜನಿಗೆ—ರಾಜಾ, ಮಾಯೆಯು ಸ್ವರೂಪವನ್ನು ಸ್ವತಂತ್ರವಾಗಿ ವರ್ಣಿಸುವದು ಅಶಕ್ಯವಾಗಿರುವದು. ಈ ವಿಶ್ವದಲ್ಲಿ ತುಂಬಿಕೊಂಡಿರುವ ಮಹಾಭೂತಾತ್ಮಕವಾದ ಸಣ್ಣ ದೊಡ್ಡ ಅನಂತಪದಾರ್ಥಗಳೂ, ಅವುಗಳ ಕಾರ್ಯಗಳೂ ಎಂದರೆಯೇ ಮಾಯೆಯೆಂದು ತಿಳಿ. ಈ ಮಾಯೆಯು ಆದಿಕಾರಣನು ಪರಮೇಶ್ವರನು. ಪರಮಾತ್ಮನ ಸತ್ಸ್ವರೂಪವನ್ನು ವಿಚಾರಿಸಿ ಈಶ್ವರಭಜನೆಯಲ್ಲಿ ಲೀನವಾಗುವವರ ಉದ್ಧಾರವು ಮಾಯೆಯ ಯೋಗದಿಂದ ಆಗಬೇಕೆಂಬ ಉದ್ದೇಶದಿಂದ ಈಶ್ವರನು ಮಾಯೆಯನ್ನು ಉತ್ಪನ್ನಮಾಡಿರುವನು. ಜಗತ್ತಿನೊಳಗಿನ ಪ್ರಾಣಿಗಳೆಲ್ಲ ಪಂಚಮಹಾಭೂತಗಳಿಂದ ಉತ್ಪನ್ನವಾಗಿದ್ದು, ಆ ಯಾವತ್ತು ಪ್ರಾಣಿಗಳಲ್ಲಿ ಪರಮಾತ್ಮನು ಏಕರೂಪದಿಂದ ವಾಸಿಸುತ್ತಿರುವನಲ್ಲದೆ, ಅವುಗಳ ಇಂದ್ರಿಯಗಳ ದ್ವಾರಗಳಿಂದ ಅವುಗಳಿಗೆ ವಿಷಯಗಳ ಉಪಭೋಗ ಮಾಡಿಸುವನು. ಹೀಗೆ ಏಕರೂಪದಿಂದ ವಾಸಿಸುವ ಪರಮಾತ್ಮನಿಗೇ ಜೀವಾತ್ಮನೆನ್ನುವರು. ಈತನು ದೇಹಾದಿಗಳ ವಿಷಯವಾಗಿ ಅಹಂಕಾರತಾಳಿ ಅವುಗಳಲ್ಲಿ ಆಸಕ್ತನಾದರೆ, ಅವನು ಜನ್ಮಮರಣಗಳ ಸುತ್ತುಗಳಲ್ಲಿ ಸಿಕ್ಕಿಕೊಳ್ಳುವನು. ಹೀಗೆ ಜನ್ಮಮರಣಗಳ ಸುತ್ತುಗಳಲ್ಲಿ ಸಿಕ್ಕಿಕೊಂಡ ಜೀವನಿಗೆ, ಹಾಗೆ ಸಿಕ್ಕಿಕೊಳ್ಳುವ ಕಾರಣವಾದ ಮಾಯಾಮೂಲ ದ್ವೈತಭಾವವು ಅಳಿದಕೂಡಲೆ ಪರಮಾತ್ಮಸ್ವರೂಪದಲ್ಲಿ ಸಹಜವಾಗಿ ಲ್ಲಿದ್ದು, ಕ್ರೊಳ್ಳಲಿಕ್ಕೆ ಬರುವದು. ಒಮ್ಮೆ ಜೀವನಿಗೆ ದೇಹಾಭಿಮಾನವು ಉತ್ಪನ್ನವಾಯಿತ್ತಿರುವದು. ಗೂ ದೇಹಗಳದ್ವಾರದಿಂದ ವಿವಿಧಸುಖಗಳನ್ನು ಸಂಪಾದಿಸುವ ವಾಸನೆಗಳೂ, ಜಡೆಯಲ್ಲಿ ಗಂಗೆನುಸರಿಸಿ ವಿವಿಧಕರ್ಮಗಳೂ ಜೀವನ ಬೆನ್ನುಹತ್ತಿ, ಸುಖದ ಸಲು

ವಾಗಿ ಇಷ್ಟು ಆಯಾಸಪಡುವ ಜೀವನು ಕಡೆಗೆ ದುಃಖಕ್ಕೆ ಗುರಿಯಾಗುವನು! ಈ ವಾಸನೆಯಿಂದಲೇ ಜೀವನು ಬ್ರಹ್ಮಪದಕ್ಕೆ ಎರವಾಗುವನು. ಹೀಗೆ ಕರ್ಮಾಧೀನನಾಗಿ ಹಲವು ದುಃಖಕರ ಯೋನಿಗಳಲ್ಲಿ ಉತ್ಪನ್ನವಾಗುವ ಜೀವನು, ಪ್ರಲಯಕಾಲದಲ್ಲಿ ಈ ಮಾಯಾಮಯ ಸೃಷ್ಟಿಯೊಡನೆ ಪರಮೇಶ್ವರನಲ್ಲಿ ಸಂಕರ್ಷಿತನಾಗಲು, ಆಗ ಅವನು ಪೂರ್ವಸ್ಥಿತಿಯನ್ನು ಹೊಂದುವನು. ಪ್ರಲಯಕಾಲದಹೊರತು ಬೇರೆ ಯಾವಕಾಲದಲ್ಲಿಯೂ ಮಾಯೆಯು ನಾಶವಾಗುವದಿಲ್ಲ. ಹೀಗೆ ಪರಮಾತ್ಮನಲ್ಲಿ ಅವ್ಯಕ್ತವಾಗಿದ್ದ ಜಗತ್ತು ಪುನಃ ವ್ಯಕ್ತವಾಗುವದೇ ಸೃಷ್ಟಿಯು, ವ್ಯಕ್ತವಾಗಿದ್ದ ಸೃಷ್ಟಿಯು ಪುನಃ ಪರಮಾತ್ಮನಲ್ಲಿ ಲೀನವಾಗುವದೇ ಪ್ರಳಯವು. ಈ ಸೃಷ್ಟಿ-ಪ್ರಲಯಗಳಿಲ್ಲದ ಪರಬ್ರಹ್ಮರೂಪ ಕಾಲಸಂಜ್ಞಕ ಈಶ್ವರನೊಬ್ಬನು ಮಾತ್ರ ಶಾಶ್ವತನಿರುವನು.

ರಾಜಾ, ಸೃಷ್ಟಿಯನಾಶದಕ್ರಮವನ್ನು ಹೇಳುವೆನು ಕೇಳು. ಮಹಾಪ್ರಲಯಕಾಲದಲ್ಲಿ ನೂರುವರ್ಷ ಮಳೆಯಾಗದೆ ಒಂದೇಸವನೆ ಬಿಸಿಲುಸುರಿದು ಭಯಂಕರ ಉಷ್ಣತೆಯಿಂದ ಭೂಮಿಯು ಹುರುಪಳಿಸಹತ್ತಿ ಅನರ್ಥಉಂಟಾಗುತ್ತಿರಲು, ಶೇಷನಮುಖದಿಂದ ಭಯಂಕರ ಜ್ವಾಲೆಹೊರಟು, ಅದಕ್ಕೆ ವಾಯುವಿನ ಸಹಾಯವು ದೊರೆಯಲು ಅದು ಮೊದಲು ಪಾತಾಳವನ್ನು ಸುಡಹತ್ತಿ ಕಡೆಗೆ ಬ್ರಹ್ಮಾಂಡವನ್ನೆಲ್ಲ ಸುಡುವದು. ಹೀಗೆ ಬ್ರಹ್ಮಾಂಡವು ಸುಟ್ಟಬಳಿಕ ಆನೆಯ ಸೊಂಡಿಲಿನಂತೆ ಜಲಧಾರೆಯು ಸುರಿಯಹತ್ತಲು, ವಾಯುವು ಪೃಥ್ವಿಯ ಗಂಧಗುಣವನ್ನು ಶೋಷಿಸಿದಾಗ ಪೃಥ್ವಿಯೆಲ್ಲ ಜಲದಲ್ಲಿ ಕೂಡಿಹೋಗಿ ಪೃಥ್ವೀತತ್ವವು ನಷ್ಟವಾಗಿ ಸರ್ವತ್ರ ಜಲತತ್ವವೇ ತೋರುವದು. ತರುವಾಯ ಜಲತತ್ವದ ರಸಗುಣವನ್ನು ವಾಯುವು ಶೋಷಿಸಲು, ಸರ್ವತ್ರ ತೇಜತತ್ವವು ವ್ಯಾಪಿಸಿರುವದು. ಮುಂದೆ ಮಹಾಪ್ರಲಯದ ಗಾಢತೇಜಸ್ಸಿನಲ್ಲಿ, ತೇಜಸ್ಸಿನ ತೇಜೋಗುಣವು ನಷ್ಟವಾಗಲು, ವಾಯುವಿನಹೊರತು ಬೇರೆ ಏನೂ ಅನುಭವಕ್ಕೆ ಬಾರದಾಗುತ್ತದೆ. ಮುಂದೆ ವಾಯುವಿನ ಸ್ಪರ್ಶಗುಣವು ಆಕಾಶದಲ್ಲಿ ಲಯವಾಗಿ ಸರ್ವತ್ರ ಆಕಾಶದಹೊರತು ಮತ್ತೊಂದು ತೋರದಾಗುತ್ತದೆ. ಕಡೆಗೆ ಈ ಆಕಾಶವು ಪರಮೇಶ್ವರನ ಕಾಲರೂಪದಲ್ಲಿ (ತಾಮಸಾಹಂಕಾರದಲ್ಲಿ) ಕೂಡಿ, ಪಂಚಮಹಾಭೂತಗಳ ಪೂರ್ಣ ನಾಶವಾಗುವದು. ನಿಮಿರಾಜಾ, ಅಹಂಕಾರದಲ್ಲಿ ಸಾತ್ವಿಕ, ರಾಜಸ, ತಾಮಸ ಎಂಬ ಮೂರು ಪ್ರಕಾರಗಳಿರುವವು. ಮನಸ್ಸೂ, ಇಂದ್ರಿಯಗಳ ದೇವತೆಗಳೂ ಸಾತ್ವಿಕಾಹಂಕಾರದಲ್ಲಿ ಕೂಡಿಕೊಳ್ಳುವವು; ಇಂದ್ರಿಯಗಳೂ, ಬುದ್ಧಿಯೂ ರಾಜಸಾಹಂಕಾರದಲ್ಲಿ ಕೂಡಿಕೊಳ್ಳುವವು; ಪಂಚಮಹಾಭೂತಗಳು ತಾಮಸಾಹಂಕಾರದಲ್ಲಿ ಕೂಡಿಕೊಳ್ಳುವವು. ಈ ಮೂರು ಅಹಂಕಾರಗಳು ಮಹತ್ತತ್ವದಲ್ಲಿ ಕೂಡಿಕೊಳ್ಳುವವು. ಕಡೆಗೆ ಮಹತ್ತತ್ವವು ಪ್ರಕೃತಿಯಲ್ಲಿ ಲಯವಾಗುವದು. ರಾಜಾ, ಜಗತ್ತಿನ ಉತ್ಪತ್ತಿ-ಸ್ಥಿತಿ-ಲಯಗಳನ್ನು ಮಾಡುವ ಪರಮೇಶ್ವರನ ಮಾಯೆಯು ಈ ಬಗೆಯದಾಗಿರುತ್ತದೆ.

ವಿವೇಕಶೀಲಾ, ಈ ಮಾಯೆಯ ಸ್ವರೂಪವನ್ನು ತಿಳಿಸುವದಕ್ಕಾಗಿ ಭಗವಾನ್ ಕಪಿಲಮುನಿಯು ತನ್ನ ತಾಯಿಯಾದ ದೇವಹೂತಿಯನ್ನು ಕುರಿತು ಹೇಳಿದ್ದನ್ನು ನಿನಗೆ ಹೇಳುವೆನು ಕೇಳು.

ಜೀವ-ಅವಿದ್ಯೆಗಳ ಲಕ್ಷಣ:—ಮಾತೆಯೇ, ನಿನಗೆ ಭಕ್ತಿಯೋಗವನ್ನು ಹೇಳಿದೆನು, ಇನ್ನು ತತ್ವಗಳ ಬೇರೆಬೇರೆ ಲಕ್ಷಣಗಳನ್ನು ಹೇಳುವೆನು ಕೇಳು. ಆ ಲಕ್ಷಣಗಳು ಗೊತ್ತಾಗುವದರಿಂದ ಪುರುಷನು ಮಾಯೆಯ ಗುಣದಿಂದ ಮುಕ್ತನಾಗುವನು. ಈ ವಿಶ್ವವು ಯಾರ ಯೋಗದಿಂದ ವ್ಯಕ್ತವಾಗಿದೆಯೋ ಆ ಆತ್ಮನೇ ಪುರುಷನು. ಆತನು ಸ್ವಯಂಪ್ರಕಾಶನು, ಅಂತರ್ಜ್ಞಾನರೂಪನು, ಪ್ರಕೃತಿಯಿಂದ ಪರನು, ಸರ್ವವ್ಯಾಪಕನೂ, ನಿರ್ಗುಣನು, ಅನಾದಿಯು ಆಗಿರುವನು. ಅದೇ ವ್ಯಾಪಕ ಪುರುಷನೇ, ತನ್ನ ಹತ್ತರಕ್ಕೆ ವಿಷ್ಣುವಿನ ತ್ರಿಗುಣಾತ್ಮಕ ಶಕ್ತಿಯಾದ ಪ್ರಕೃತಿಯು ಲೀಲೆಯಿಂದ ಬರಲು, ಆಕೆಯನ್ನು ಸಹಜವಾಗಿ ಅಂಗೀಕರಿಸಿದನು. ಈ ಪುರುಷನಲ್ಲಿ ಎರಡು ಭೇದಗಳಿರುವವು. ಒಂದು ಜೀವ, ಎರಡನೆಯದು ಈಶ್ವರ. ಅದರಂತೆ ಪ್ರಕೃತಿಯಲ್ಲಿಯೂ ಅವಿದ್ಯಾ, ಮಾಯಾ, ಎಂಬ ಎರಡು ಭೇದಗಳಿರುತ್ತವೆ. ಪ್ರಾರಬ್ಧ ಕರ್ಮವು ನಷ್ಟವಾದಕೂಡಲೆ ಜೀವನು ಈಶ್ವರನಲ್ಲಿ ಕೂಡಿಹೋಗುವನು. ಆ ಕರ್ಮವು ನಷ್ಟವಾಗದಿರುವಾಗ ಅವಿದ್ಯೆಯು ಸತ್ಯಸ್ವರೂಪವನ್ನು ತಿಳಿಯಲಾರದೆ ಆತನು ಅದಕ್ಕೆ ಮರುಳಾಗಿ ಸಂಸಾರಚಕ್ರದಲ್ಲಿ ಸಿಕ್ಕಿಕ್ಕೊಳ್ಳುವನು; ಆದ್ದರಿಂದ ಅವಿದ್ಯೆಯು, ಜ್ಞಾನವನ್ನು ಆಚ್ಛಾದಿಸುವ ಜೀವನ ಉಪಾಧಿಯಾಗಿರುತ್ತದೆ. ಇನ್ನು ಈಶ್ವರನು ಜಗತ್ತಿನ ಸೃಷ್ಟಿ-ಸ್ಥಿತಿ-ಲಯಗಳನ್ನು ಮಾಡುವವನಾಗಿರುವನು. ಸತ್ವ-ರಜ-ತಮಗಳೆಂಬ ಮೂರು ಗುಣಗಳ ಯೋಗದಿಂದ ಅನೇಕ ಪ್ರಕಾರದ ತ್ರಿಗುಣಾತ್ಮಕ ಸೃಷ್ಟಿಯನ್ನು ಉತ್ಪನ್ನ ಮಾಡುವ ಮಾಯೆಯು ಆ ಈಶ್ವರನ ಶಕ್ತಿಯಾಗಿರುವದು. ಈ ಮಾಯೆಯು ಎಲ್ಲ ಬಗೆಯಿಂದ ಈಶ್ವರನ ಸ್ವಾಧೀನವಿರುವದು. ಜೀವನಾದರೂ ವಸ್ತುತಃ ಅಕರ್ತೃವೂ, ಸರ್ವಸಾಕ್ಷಿಯೂ, ನಿತ್ಯನೂ, ಸುಖಸ್ವರೂಪನೂ ಆಗಿರುವನು; ಆದರೆ ಅವಿದ್ಯೆಯಿಂದಲೇ ಆತನು ಕರ್ಮಬದ್ಧನಾಗಿ ಪರತಂತ್ರನಾಗುವನು; ಮತ್ತು ಸತ್ವ-ರಜ-ತಮಗುಣಗಳಿಂದ ಆಗುವ ಕಾರ್ಯಗಳಿಗೆ ತಾನೇ ಕರ್ತೃವೆಂಬ ಅಹಂಕಾರವನ್ನು ವಹಿಸುವನು. ಕಾರ್ಯತ್ವ, ಕಾರಣತ್ವ, ಕರ್ತೃತ್ವ, ಭೋಕ್ತೃತ್ವ ಈ ಎಲ್ಲ ಧರ್ಮಗಳು ಅಹಂಕಾರದಿಂದಲೇ ಉತ್ಪನ್ನವಾಗುತ್ತಿದ್ದರೂ, ಅವುಗಳಲ್ಲಿ ಕಾರ್ಯತ್ವ, ಕಾರಣತ್ವ, ಕರ್ತೃತ್ವ ಇವು ಮೂರು ವಿಕಾರಗಳು, ಕೇವಲ ಅಹಂಕಾರದಲ್ಲಿಯೇ, ಅಂದರೆ ಜಡಪ್ರಕೃತಿಯಲ್ಲಿಯೇ ಅನುಭವಕ್ಕೆ ಬರುವವು. ಭೋಕ್ತೃತ್ವವು ಕೇವಲ ಜೀವನಲ್ಲಿ ಅಂದರೆ ಸಂಸಾರಿ ಪುರುಷನಲ್ಲಿ ಅನುಭವಕ್ಕೆ ಬರುವದು.

ಪ್ರಕೃತಿ-ಪುರುಷರ ಲಕ್ಷಣ:—ಮಾತೆಯೇ, ಪ್ರಕೃತಿ ಪುರುಷರ ಲಕ್ಷಣವನ್ನು ಹೇಳುವೆನು ಕೇಳು. ಪ್ರಕೃತಿತತ್ವದಲ್ಲಿ ಯಾವ ವಿಶೇಷ ಧರ್ಮಗಳೂ ಇರುವದಿಲ್ಲ. ಆದರೆ, ಆಕಾಶದಲ್ಲಿ ಘಟಪಟಾದಿಗಳಿಲ್ಲದಿದ್ದರೂ ಅವಕ್ಕೆ ಆಕಾಶವು ಆಧಾರವಾಗಿರುವಂತೆ, ಪ್ರಕೃತಿಯಲ್ಲಿ ವಿಶೇಷ ಧರ್ಮಗಳಿರದಿದ್ದರೂ ವಿಶೇಷ ಧರ್ಮಗಳಿಗೆ ಅದು ಆಧಾರವಾಗಿರುತ್ತದೆ. ಪ್ರಕೃತಿಯು ತ್ರಿಗುಣಾತ್ಮಕವಾಗಿರುವದು; ಅದು ಇಂದ್ರಿಯಗ

ಳಿಗೆ ಗೋಚರವಾಗುವದಿಲ್ಲ; ಕಾರ್ಯಕಾರಣಗಳೆಂಬವು ಅದರ ರೂಪಗಳಾಗಿರುವವು; ಅದು ಎಂದೂ ನಷ್ಟವಾಗುವದಿಲ್ಲ. ಈ ಪ್ರಕೃತಿಗೆ 'ಪ್ರಧಾನ' ವೆಂತಲೂ ಅನ್ನುವರು. ಪೃಥಿವ್ಯಾದಿ ಪಂಚಮಹಾಭೂತಗಳು, ಶಬ್ದ-ಸ್ಪರ್ಶಾದಿ ಪಂಚ ಸೂಕ್ಷ್ಮಭೂತಗಳು, ಕರ್ಣ-ತ್ವಚೆ ಮೊದಲಾದ ದಶೇಂದ್ರಿಯುಗಳು, ಮನ-ಬುದ್ಧಿ-ಅಹಂಕಾರ-ಚಿತ್ತ ಎಂಬ ಅಂತಃಕರಣ-ಚತುಷ್ಟಯುಗಳು ಹೀಗೆ ಈ ಇಪ್ಪತ್ತುನಾಲ್ಕು ತತ್ವಗಳ ಸಮುದಾಯಕ್ಕೆ "ಪ್ರಧಾನಕಾರ್ಯರೂಪಿಬ್ರಹ್ಮ" ಎಂಬ ಸಂಜ್ಞೆಯಿರುವದು. ಮನ-ಬುದ್ಧಿ-ಅಹಂಕಾರ-ಚಿತ್ತ ಎಂಬ ಅಂತಃಕರಣಚತುಷ್ಟಯುದ ವೃತ್ತಿಗಳು ಕ್ರಮವಾಗಿ ಸಂಕಲ್ಪ, ನಿಶ್ಚಯು, ಅಭಿಮಾನ, ಚಿಂತಾ ಎಂಬವಾಗಿರುತ್ತವೆ. ಈ ಇಪ್ಪತ್ತುನಾಲ್ಕು ತತ್ವಗಳ ಹೊರತು ಕಾಲವೆಂಬ ಇಪ್ಪತ್ತೈದನೆಯ ತತ್ವವೊಂದು ಇರುತ್ತದೆಂದು ಕೆಲವರು ತಿಳಿಯುವರು. ಆ ಕಾಲವು ಪ್ರಕೃತಿಯ ಅವಸ್ಥಾವಿಶೇಷವಾಗಿರುತ್ತದೆ. ಕೆಲವರು ಈಶ್ವರನ ಪರಾಕ್ರಮಕ್ಕೂ ಕಾಲವೆನ್ನುವರು. ಈ ಕಾಲದಲ್ಲಿ ಎರಡುಪ್ರಕಾರಗಳಿರುವವು; ಒಂದು ಸೃಷ್ಟಿಯನ್ನು ಮಾಡುವದು, ಮತ್ತೊಂದು ಸೃಷ್ಟಿಯನ್ನು ಸಂಹರಿಸುವದು. ತ್ರಿಗುಣಾತ್ಮಕ ಸಮತಾರೂಪ ಪ್ರಕೃತಿಯಲ್ಲಿ ಚಲನವಲನಾದಿ ಚೇಷ್ಟೆಗಳನ್ನು ಉಂಟುಮಾಡುವ ಕಾಲವು ಸೃಷ್ಟಿಮಾಡುವ ಕಾಲವು. ದೇಹಾಭಿಮಾನದ ಜೀವನಿಗೆ ಭಯವನ್ನುಂಟುಮಾಡುವ ಕಾಲವು ಸಂಹಾರಮಾಡುವ ಕಾಲವು; ಈ ಮೇರೆಗೆ ಆ ಭಗವಂತನು ತನ್ನ ಮಾಯೆಯುಯೋಗದಿಂದ ಸರ್ವಪ್ರಾಣಿಗಳ ಅಂತರ್ಯಾಮಿರೂಪದಿಂದ ಒಳಗೂ, ಕಾಲರೂಪದಿಂದ ಹೊರಗೂ ವ್ಯಾಪಿಸಿರುವನು. ಒಟ್ಟಗೆ, ಜೀವ-ಈಶ್ವರ ಇವರು ಬಬ್ಬನೇ ಇರುವರೆಂದು ತಿಳಿದರೆ, ಪ್ರಕೃತಿಯ ಇಪ್ಪತ್ತುನಾಲ್ಕು ತತ್ವಗಳು, ಮತ್ತು ಪುರುಷನು ಕೂಡಿ ಇಪ್ಪತ್ತೈದು ತತ್ವಗಳಾಗುತ್ತವೆ; ಜೀವೇಶ್ವರರನ್ನು ಬೇರೆ ಬೇರೆ ಯೆಂದು ತಿಳಿದರೆ ಇಪ್ಪತ್ತಾರುತತ್ವಗಳಾಗುವವು. ಜೀವನಿಗೆ ಪೂರ್ವಕರ್ಮದ ಫಲವು ದೊರೆಯುವ ಕಾಲವು ಒದಗಲು, ಪ್ರಕೃತಿಯ ಗುಣಗಳಲ್ಲಿ ಕ್ಷೋಭವು ಉತ್ಪನ್ನವಾಯಿತು. ಆ ಕಾಲದಲ್ಲಿ ಸರ್ವನಿಯಂತೃವಾದ ಪುರುಷನು(ಪರಮೇಶ್ವರನು)ತಾನು ಪ್ರಕಟವಾಗುವ ಸ್ಥಾನವಾದ ಪ್ರಕೃತಿಯಲ್ಲಿ ತನ್ನ ಚೈತನ್ಯಶಕ್ತಿಯನ್ನು ಸ್ಥಾಪಿಸಿದನು- ಅದರಿಂದ ಮಹತ್ತತ್ವವು ಉತ್ಪನ್ನವಾಯಿತು. ಈ ಮಹತ್ತತ್ವವೇ ಜಗತ್ತಿನ ಮೊದಲನೇಯ ಅಂಕುರವು- ಇದರಿಂದಲೇ ಜಗತ್ತಿನ ಉತ್ಪತ್ತಿಯಾಗುತ್ತಿದ್ದರೂ ಆ ಮಹತತ್ವದ ರೂಪಾಂತರವಾಗಲಿ, ನಾಶವಾಗಲಿ ಆಗುವದಿಲ್ಲ.

ಈ ಮೇರೆಗೆ ಸಿದ್ಧಮುನೀಶ್ವರನು ಹೇಳಿದ್ದನ್ನು ಕೇಳಿ ವಿವೇಕಶೀಲನು ಸಮಾಧಾನಪಟ್ಟು ತನ್ನ ಗುರುವನ್ನು ಕುರಿತು—ಸದ್ಗುರುನಾಥಾ, ಮಹಾತ್ಮನಾದ ನೀನು ಅಚಿಂತ್ಯ ಮಾಯೆಯ ಅವ್ಯಕ್ತ-ವ್ಯಕ್ತರೂಪಗಳನ್ನು ವರ್ಣಿಸಿದೆ; ಆದರೆ ಶಿವನಂತೆ ಶಿವನ ಶಕ್ತಿಯಾದ ಮಾಯೆಯೂ ಮಾನ್ಯಳಾಗಿರುವದರಿಂದ ಆಕೆಯ ಧ್ಯಾನಯೋಗ್ಯವಾದ ರೂಪವನ್ನು ವರ್ಣಿಸು; ಯಾಕಂದರೆ ಸಶಕ್ತಿಕನಾದ ಶಿವನನ್ನಲ್ಲದೆ ಬರಿಯ ಶಿವನನ್ನು ಧ್ಯಾನಿಸಬಾರದೆಂದು ನೀನು ಹೇಳಿರುವೆ, ಎಂದು ಕೇಳಲು, ಸಿದ್ಧಮುನೀಶ್ವರನು—ವಿವೇಕಶೀಲಾ,

ಜಗಜ್ಜನ್ಮಾದಿಕಾರಣನಾದ ನಿರ್ಗುಣಶಿವನಿಗೆ ಧ್ಯಾನಯೋಗ್ಯವಾದ ಮಂಗಲರೂಪವಿರುವಂತೆ, ಜಗಜ್ಜನನಿಯಾದ ಆ ಶಿವಶಕ್ತಿಯೆಂಬ ಮಾಯೆಗೆ ಧ್ಯಾನಯೋಗ್ಯವಾದ ಮಂಗಲರೂಪವಿರುತ್ತದೆ; ಅದನ್ನು ನಿನಗೋಸ್ಕರ ಹೇಳುವೆನು ಕೇಳು. ಶ್ರೀ ಸದಾಶಿವನ ಜ್ಞಾನಕ್ಕೆ ಮಾಯೆಯು ಕಾರಣವಾಗಿರುವದರಿಂದ ಆ ಲೋಕಜನನಿಯ ರೂಪವೂ ಧ್ಯಾನಯೋಗ್ಯವಾಗಿರುವದು.

**ಶಿವಶಕ್ತಿಯ (ಪಾರ್ವತಿಯ) ಧ್ಯಾನಯೋಗ್ಯರೂಪವು:**—ವಿವೇಕಶೀಲಾ, ಅಚಿಂತ್ಯಳಾದ ಆದಿಮಾಯೆಯ ಧ್ಯಾನಯೋಗ್ಯಮೂರ್ತಿಯನ್ನು ದೊಡ್ಡವರು ವರ್ಣಿಸಿರುವಂತೆ ಯಥಾಮತಿ ಸ್ವಲ್ಪದರಲ್ಲಿ ವರ್ಣಿಸುವೆನು ಕೇಳು. ಶಿವಶಕ್ತಿಯೆನಿಸುವ ಆ ಆದಿಮಾಯೆಯ ಹೆಸರು ಪಾರ್ವತಿಯು. ಆ ಸರ್ವೇಶ್ವರಿಯು ವಿವಿಧಾಲಂಕಾರಗಳಿಂದ ಅಲಂಕೃತಳಾಗಿ ಒಪ್ಪುತ್ತಿರುವಳು. ಆಕೆಯು ಸುವರ್ಣಚಂಪಕಕುಸುಮದಂತೆ ಗೌರಕಾಯಳಾಗಿರುವಳು. ಆಕೆಯ ಕೊರಳಲ್ಲಿ ಮುತ್ತಿನ ಹಾರವು ಒಪ್ಪುತ್ತಿರುವದು. ರತ್ನಖಚಿತವಾದ ಆಕೆಯ ಕಿರೀಟವು ಮುತ್ತಿನ ಜಾಳಿಗೆಯಿಂದ ಅಲಂಕೃತವಾಗಿದ್ದು, ಸರ್ಪವೇಷ್ಟಿತವಾಗಿರುವದು. ಹಲವು ಜಾತಿಯ ಪುಷ್ಪಗಳು ಆ ಕಿರೀಟದಲ್ಲಿ ಶೋಭಿಸುತ್ತಿರಲು, ಅವುಗಳ ಸುಗಂಧಕ್ಕೆ ಭ್ರಮರಗಳು ಮುತ್ತುತ್ತಿರುವವು. ಆ ಲೋಕಮಾತೆಯ ಸರಳವಾದ ಮೂಗಿನಲ್ಲಿ ಮುತ್ತು ಸುತ್ತಿದ ರತ್ನವಿರುವದು. ಆಕೆಯ ಕೆಳದುಟಿಯು ಹವಳದಂತೆಯೂ, ದಂತಪಂಗ್ತಿಗಳು ರತ್ನಗಳಂತೆಯೂ ಒಪ್ಪುತ್ತಿರುವವು. ಆ ಮಹಾಮಾಯೆಯ ಕಿವಿಗಳಲ್ಲಿ ರತ್ನದೋಲೆಗಳು ಪ್ರಕಾಶಿಸುತ್ತಿರುವವು. ಆ ಜಗಜ್ಜನನಿಯು ಹಳದಿಯ ಬಣ್ಣದ ಕುಪ್ಪಸವನ್ನು ತೊಟ್ಟಿದ್ದು, ಆಕೆಯ ಕುಚತಟದಲ್ಲಿ ಏಕಾವಳಿಯ ಸರವೂ, ಬಗೆಬಗೆಯ ರತ್ನಹಾರಗಳೂ ಒಪ್ಪುತ್ತಿರುವವು. ಆ ಗಿರಿಜಾಮಾತೆಯು ಕೆಂಪುದುಕೂಲವನ್ನುಟ್ಟು ದಾಳಿಂಬದ ಹೂವಿನ ಬಳ್ಳಿಯಂತೆ ಒಪ್ಪುತ್ತಿರುವಳು. ಆಕೆಯ ಮನೋಹರ ಕೈಗಳಲ್ಲಿ ಕಂಕಣಗಳೂ, ಬೆರಳಲ್ಲಿ ಉಂಗರಗಳೂ, ನಡುವಿನಲ್ಲಿ ಒಡ್ಯಾಣವೂ ಒಪ್ಪುತ್ತಿರುವವು. ಆ ಜಗಜ್ಜನನಿಯ ಹಣೆಯಲ್ಲಿ ಅಷ್ಟಮಿಯ ಚಂದ್ರನಂಥ ತಿಲಕವೂ, ಮುತ್ತಿನ ಸಾಲುಗಳಂತಿರುವ ತ್ರಿಪುಂಡ್ರವೂ ಒಪ್ಪುತ್ತಿರುವವು. ನೂಪುರಯುಕ್ತವಾದ ಚರಣಗಳುಳ್ಳ ಇಂಥ ಜಗನ್ಮಾತೆ ಆದಿಮಾಯೆ ಪಾರ್ವತಿಯನ್ನು ಗಣವು ಧ್ಯಾನಿಸುತ್ತಿರುವದು. ವಿವೇಕಶೀಲಾ, ಈ ತ್ರಿಪುರಸುಂದರಿಯ ಸೌಂದರ್ಯಾತಿಶಯದ ಅಲಂಕೃತರೂಪವನ್ನು ವರ್ಣಿಸಲು ಯಾರು ಸಮರ್ಥರಾದಾರು? ಆದಿಮಾಯೆಯ ಇಂಥ ಮನೋಹರ ರೂಪವು ಭಕ್ತರ ಧ್ಯಾನಕ್ಕೆ ಯೋಗ್ಯವಾಗಿರುವದು.

# ಜ್ಞಾನಪ್ರದೀಪ ಕಿರಣ,

## ೪ ನೆಯದು.

---

## ಶಿವನ ಅಷ್ಟ-ಮೂರ್ತಿಗಳು.

( ಲೋಕಾರಾಧನೆಯೇ ಶ್ರೇಷ್ಠವಾದ ಶಿವಪೂಜೆಯು )

---

ವಿವೇಕಶೀಲಾ, ಈ ವೇಳೆಗೆ ನಿನಗೆ ಅಲಿಂಗನಾದ ನಿರ್ಗುಣ ಶಿವನ ಧ್ಯಾನಯೋಗ್ಯ ಮೂರ್ತಿಯ ಸ್ವರೂಪವನ್ನೂ, ಅದರಂತೆ ಲಿಂಗವಾದ ಮಾಯೆಯ ಧ್ಯಾನಯೋಗ್ಯ ಮೂರ್ತಿಯ ಸ್ವರೂಪವನ್ನೂ ಹೇಳಿದೆನಷ್ಟೇ? ಆದರೆ ಶಿವನನ್ನೂ, ಶಿವಶಕ್ತಿಯನ್ನೂ ಭಿನ್ನವೆಂದು ತಿಳಿದು ದ್ವೈತಭಾವದಿಂದ ನೀನು ಧ್ಯಾನಿಸದೆ, ಶಕ್ತಿಯುಕ್ತಶಿವನನ್ನು ಅದ್ವೈತ ಭಾವದಿಂದಲೇ ಧ್ಯಾನಿಸತಕ್ಕದ್ದು. ಸೃಷ್ಟಿಯ ಉತ್ಪತ್ತಿಯ ಕಾಲದಲ್ಲಿ ಸೃಷ್ಟಿಯು ಶಿವ ನಿಂದ ಬೇರೆಯಾಗಿ ತೋರಿದರೂ, ಅದು ವಸ್ತುತಃ ಶಿವರೂಪವೇ ಆಗಿರುತ್ತದೆ. ಸೂರ್ಯ ಪ್ರಕಾಶವು ಸೂರ್ಯನಿಂದ ಅಭಿನ್ನವಾಗಿರುವಂತೆ, ಶಿವನ ಹಾಗು ಸೃಷ್ಟಿಯ ಸ್ಥಿತಿಯು ಇರುತ್ತದೆ. ಸೃಷ್ಟಿಯ ನಿಮಿತ್ತಕಾರಣವಾದ ಕಾಲವು, ಉಪಾದಾನಕಾರಣವಾದ ಪ್ರಕೃತಿಯು, ಕರ್ತೃವಾದ ಪುರುಷನು ಇವರೆಲ್ಲರೂ ಪರಮೇಶ್ವರನ ರೂಪವೇ ಆಗಿರುವರು. ಕಾರಣ ಸರ್ವರ ಅಂತರಂಗದಲ್ಲಿ ಸ್ಫುರಿಸುವ ಪರಬ್ರಹ್ಮ-ಶಿವನನ್ನು ಅದ್ವೈತದಿಂದ ಆರಾಧಿಸತಕ್ಕದ್ದು. ಆತ್ಮನಿಂದ ಸಹಿತವಾದ ಈಜಗತ್ತೇ ಈಶ್ವರನ ರೂಪವೆಂದು ಹೇಳುವದಕ್ಕೆ ಭಗವಾನ್ ಸದಾಶಿವನ ಅಷ್ಟಮೂರ್ತಿಗಳೇ ಸಾಕ್ಷಿಗಳಾಗಿರುವವು. ಆ ಅಷ್ಟಮೂರ್ತಿಗಳು ಯಾವವೆಂದರೆ—೧ ಪೃಥ್ವೀ, ೨ ಜಲ, ೩ ಅಗ್ನಿ, ವಾಯು, ಆಕಾಶ, ಸೂರ್ಯ, ಚಂದ್ರ, ಯಜಮಾನ ಅಥವಾ ಆತ್ಮಾ ಎಂಬವು. ಗಿಡದ ಬೊಡ್ಡೆಗೆ ನೀರು ಹಾಕಿದರೆ ಹರಿಗಳಿಗೆಲ್ಲ ಮುಟ್ಟುವಂತೆ, ಈಶ್ವರರೂಪಗಳಾದ ಅಗ್ನಿ ಅಥವಾ ಸೂರ್ಯರೂಪೀ ಮಹಾತ್ಮನಿಗೆ ಆಹುತಿಯನ್ನು ಕೊಟ್ಟರೆ, ಈಶ್ವರಾಂಶರಾದ ಯಾವತ್ತು ದೇವತೆಗಳಿಗೆ ಮುಟ್ಟುತ್ತದೆ. ಸೂರ್ಯಾತ್ಮಕ ಸದಾಶಿವ ಪ್ರಭುವಿನ ಕಲೆಗಳು ಅಥವಾ ಕಿರಣಗಳು ಹನ್ನೆರಡು ಇರುವವು. ಅವುಗಳಲ್ಲಿ "ಅಮೃತ"ವೆಂಬ ಹೆಸರಿನ ಕಿರಣವು ಯಾವತ್ತು ಜೀವಜಂತುಗಳಿಗೆ ಜೀವನವನ್ನು ಕೊಡುವದು. "ಚಂದ್ರ"ಎಂಬ ಹೆಸರಿನ ಕಿರಣವು ಓಷಧಿ—ವನಸ್ಪತಿಗಳನ್ನು ವೃದ್ಧಿಗೊಳಿಸುವದು. "ಶುಕ್ಲ" ಎಂಬ ಹೆಸರಿನ ಕಿರಣದ ಯೋಗದಿಂದ ಸಸ್ಯಾದಿ ಧಾನ್ಯಗಳು ಬೆಳೆದು ಪಾಕವಾಗುವದು. "ಹರಿಕೇಶ" ಎಂಬ ಹೆಸರಿನ ಕಿರಣದಿಂದ ನಕ್ಷತ್ರಗಳ ಪೋಷಣವಾಗುವದು. "ವಿಶ್ವಕರ್ಮಾ" ಎಂಬ ಹೆಸರಿನ ಕಿರಣವು ಬುಧಗ್ರಹವನ್ನು ಪೋಷಿಸುವದು. "ವಿಶ್ವವ್ಯಚ"ವೆಂಬ ಕಿರಣವು ಶುಕ್ರಗ್ರಹದ ಪೋಷಕವಾಗಿರುವದು. "ಸಂಯದ್ವಸೂ" ಕಿರಣವು ಮಂಗಳನನ್ನು ಪೋಷಿಸುವದು. "ಅರ್ವಾವಸೂ"

ಕಿರಣವು ಬ್ರಹಸ್ಪತಿಯು ಪೋಷಕವಾಗಿರುವದು. "ಸ್ವರಾಟ" ಕಿರಣವು ಶನಿಯು ಪೋಷಕವಾಗಿರುವದು. "ಸುಷುಮ್ನಾ" ಕಿರಣದಿಂದ ಶಿಶಿರ ಋತುವಿನೊಳಗಿನ ಸೂರ್ಯಪ್ರಕಾಶವು ಬೀಳುವದು. ವಿವೇಕಶೀಲಾ, ಇದರಂತೆ ಶಂಕರನ ಸೋಮಮೂರ್ತಿಯು ಯಾವತ್ತು ವಸ್ತುಗಳ ಪ್ರಕೃತಿಯಾಗಿರುವದು. ಇದು ಯಾವತ್ತು ಶರೀರದಲ್ಲಿ ಶುಕ್ರರೂಪದಿಂದ ಇರುತ್ತಿದ್ದು, ಇದೇ ಮನಸ್ಸು ಆಗಿರುವದು. ಈ ಸೋಮಮೂರ್ತಿಯು ಯಜ್ಞ, ಜೀವ, ಜಲ, ಓಷಧಿ, ಇಂದ್ರಿಯುಗಳು ಇವುಗಳ ಅಧಿಪತಿಯಾಗಿರುವದು. "ಯಜಮಾನ" ಅಥವಾ ಆತ್ಮ ಎಂಬ ಹೆಸರಿನ ಶಿವನ ಮೂರ್ತಿಯು ಹವ್ಯದಿಂದ ದೇವತೆಗಳನ್ನು ಸಂತುಷ್ಟಗೊಳಿಸುವದು, ಕವ್ಯದಿಂದ ಪಿತೃಗಳನ್ನು ಪುಷ್ಟಮಾಡುವದು. ಯಾವತ್ತು ಬ್ರಹ್ಮಾಂಡದ ಒಳಗೂ ಹೊರಗೂ ಶಿವನ ಅಕಾಶಮೂರ್ತಿಯು ಪಸರಿಸಿರುವದು. ಅದರಂತೆಯೇ ಶಿವನ ಜಲಮೂರ್ತಿಯು ನಾಲ್ಕು ಕಡೆಯಲ್ಲಿ ಇರುತ್ತಿದ್ದು, ಯಾವತ್ತು ಶರೀರಗಳಿಗೆ ಜೀವನವನ್ನು (ಉದಕವನ್ನು) ಕೊಡುವದು. ಪರಮೇಶ್ವರನ ವಾಯುಮೂರ್ತಿಯು ಯಾವತ್ತು ಸ್ಥಳದಲ್ಲಿ ಇರುತ್ತಿದ್ದು, ಪ್ರಾಣ, ನಾಗ, ಕೂರ್ಮಾದಿ, ಹಾಗು ಆಹವ ಇತ್ಯಾದಿ ಅದರ ಭೇದಗಳಿರುವವು. ಅಗ್ನಿಯೆಂಬ ಹೆಸರಿನ ಶಂಕರನ ಉತ್ತಮ ಮೂರ್ತಿಯು ಯಾವತ್ತು ಭೂತಗಳಲ್ಲಿ ಇರುವದು. ಇದರ ಸಹಾಯದಿಂದಲೇ ಹವ್ಯಕವ್ಯಾದಿ ಕ್ರಿಯೆಗಳಾಗುವವು. ಇದರಲ್ಲಿ ೪೯ ಭೇದಗಳಿರುವವು. ಪೃಥ್ವಿಯೆಂಬ ಶಂಕರನ ಮೂರ್ತಿಯು ಯಾವತ್ತು ಚರಾಚರ ವಸ್ತುಗಳನ್ನು ಧರಿಸುವದು. ಎಂಟನೆಯ ಮೂರ್ತಿಯಾದ ಆತ್ಮನನ್ನೇ ಕೆಲವರು ಯಜಮಾನನೆಂದು ಕರೆಯುವರು. ಶಿವನ ಈ ಅಷ್ಟಮೂರ್ತಿಗಳು ಸರ್ವಕಲ್ಯಾಣಗಳ ಕಾರಣಗಳಾಗಿರುವದರಿಂದ, ಕಲ್ಯಾಣೇಚ್ಛುಗಳು ಇವುಗಳನ್ನು ವಂದಿಸಬೇಕು

ವಿವೇಕಶೀಲಾ, ಶಿವನ ಈ ಅಷ್ಟಮೂರ್ತಿಗಳ ವರ್ಣನವನ್ನು ಲಿಂಗಪುರಾಣದಲ್ಲಿ ಹೇಳಿದಂತೆ ಇನ್ನೂ ಹೇಳುವೆನು ಕೇಳು. ಯಾವತ್ತು ಚಾರಾಚರವಸ್ತುಗಳನ್ನು ಧರಿಸುವ ವಿಶ್ವಂಭರಾ (ಪೃಥ್ವಿ) ಎಂಬ ಶಿವಮೂರ್ತಿಗೆ "ಶರ್ವ" ಎನ್ನುವರು. ಆ ಶರ್ವನ ಹೆಂಡತಿಯು ವಿಕೇಶಿಯು, ಮಗನು ಅಂಗಾರಕನು (ಮಂಗಳನು). ಜಲರೂಪ ಶಿವಮೂರ್ತಿಗೆ "ಭವ" ಎನ್ನುವರು, ಭವನ ಹೆಂಡತಿಯ ಹೆಸರು "ಉಮೆ"ಯು, ಮಗನ ಹೆಸರು ಶುಕ್ರನು. ವಹ್ನ್ಯಾತ್ಮಕ ಶಂಕರಮೂರ್ತಿಯ ಹೆಸರು "ಪಶುಪತಿ"ಯು. "ಸ್ವಾಹಾ" ಎಂಬವಳು ಆತನ ಹೆಂಡತಿಯು, "ಷಡಾನನ"ನು (ಸ್ಕಂದ) ಆತನ ಮಗನು; ಈತನು ಸರ್ವವ್ಯಾಪಿಯೂ, ಸರ್ವರಕ್ಷಕನೂ ಆಗಿರುವನು. ಪವನಾತ್ಮಕ ಶಿವಮೂರ್ತಿಯ ಹೆಸರು "ಈಶಾನ" ಆತನ ಹೆಂಡತಿಯು "ಶಿವಾ" ಮಗನು "ಮನೋಜವ" ಶಿವನ ಆಕಾಶಮೂರ್ತಿಗೆ ಭೀಮನೆನ್ನುವರು. ಹತ್ತು ದಿಕ್ಕುಗಳು ಅವನ ಸ್ತ್ರೀಯರು, ಸ್ವರ್ಗವು ಆತನ ಮಗನು. ಸೂರ್ಯಾತ್ಮಕ ಶಿವಮೂರ್ತಿಗೆ "ರುದ್ರ"ನೆನ್ನುವರು. ಆತನ ಹೆಂಡತಿಯು "ಸುವರ್ಚಲಾ" ಮಗನು ಶನೈಶ್ಚರನು. ಸೋಮರೂಪಿ ಶಿವಮೂರ್ತಿಯ ಹೆಸರು "ಮಹಾದೇವ" ಆತನ ಹೆಂಡತಿಯು ರೋಹಿಣಿಯು, ಮಗನ ಹೆಸರು ಬುಧನು.

ದೇವತೆಗಳಿಗೂ, ಪಿತೃಗಳಿಗೂ ಕ್ರಮವಾಗಿ ಹವ್ಯ-ಕವ್ಯಗಳನ್ನು ಕೊಡುವ ಯಜಮಾನ ಮೂರ್ತಿಗೆ ಕೆಲವರು "ಉಗ್ರ" ನೆನ್ನುವರು, ಕೆಲವರು "ಈಶ"ನೆನ್ನುವರು. ಈತನ ಹೆಂಡತಿಯ ಹೆಸರು "ದೀಕ್ಷಾ" ಮಗನ ಹೆಸರು "ಯಜ್ಞ"ನು. ದೇಹಧಾರಿಗಳಾದ ಯಾವತ್ತು ವಸ್ತುಗಳೊಳಗಿನ ಕಠಿಣಭಾಗವು ಶರ್ವನ ಅಂಶವಿರುತ್ತದೆಂತಲೂ, ದ್ರವಾತ್ಮಕಭಾಗವು ಭವನ ಅಂಶವೆಂತಲೂ, ಜಠರಾಗ್ನಿಯು ಪಶುಪತಿಯ ಅಂಶವೆಂತಲೂ, ಮೈಯೊಳಗಿನ ವಾಯುವಿನ ಪರಿಣಾಮಗಳು ಈಶಾನನ ಅಂಶವೆಂತಲೂ, ಶರೀರದೊಳಗಿನ ಪೊಳ್ಳು ಅಥವಾ ಛಿದ್ರಗಳು ಭೀಮಾಂಶವೆಂತಲೂ, ಕಣ್ಣೊಳಗಿನ ತೇಜಸ್ಸು ರುದ್ರಾಂಶವೆಂತಲೂ, ಎಲ್ಲರ ಶರೀರದೊಳಗಿನ ಮನಸ್ಸು ಚಂದ್ರನ, ಅಂದರೆ ಮಹಾದೇವನ ಅಂಶವೆಂತಲೂ ತಿಳಿಯತಕ್ಕದ್ದು. ಯಜಮಾನನೆಂಬಹೆಸರಿನಿಂದ ಹೇಳಿದ ಆತ್ಮನು ಯಾವತ್ತು ಶರೀರದಲ್ಲಿರುತ್ತಿದ್ದು, ಆತನು ಪರಮೇಶ್ವರನ ಉಗ್ರಮೂರ್ತಿಯೆಂದು ತಿಳಿಯಬೇಕು. ಪರಮಾರ್ಥಿಗಳು ತಿಳಿಯುವದೇನಂದರೆ—ಪ್ರಾಣಿಯು ಯಾವಜನ್ಮದಲ್ಲಿಯೇ ಹುಟ್ಟಿರಲಿ, ಅದರ ಶರೀರದಲ್ಲಿ ಶಿವನ ಅಷ್ಟಮೂರ್ತಿಯಹೊರತು ಬೇರೆ ಅಂಶವಿರುವದೇಇಲ್ಲ. ಯಾವತ್ತು ದೇಹದ ಭಾಗಗಳು ಶಿವನ ಏಳು ಮೂರ್ತಿಗಳಿಂದಾಗಿದ್ದು, ಶಿವನ ಎಂಟನೆಯ ಮೂರ್ತಿಯಾದ ಆತ್ಮವು ಯಾವತ್ತು ಶರೀರದಲ್ಲಿರುವದು. ಶ್ರೇಯಸ್ಸನ್ನು ಸಂಪಾದಿಸಲಿಚ್ಛಿಸುವವರು ಈ ಸರ್ವಲೋಕಾತ್ಮಕ ಅಷ್ಟಮೂರ್ತಿಯನ್ನು ಭಜಿಸಬೇಕು. ಒಂದಾನೊಂದು ಪ್ರಾಣಿಯನ್ನು ಅನುಗ್ರಹಿಸಿದರೆ ಅಷ್ಟಮೂರ್ತಿ ಶಂಕರನನ್ನು ಆರಾಧಿಸಿದಂತಾಗುವದು. ಯಾರದಾದರೂ ಅವಜ್ಞೆಯನ್ನು ಮಾಡಿದರೆ, ಯಾರನ್ನಾದರೂ ನಿಗ್ರಹಿಸಿದರೆ ಅದೆಲ್ಲ ಶಿವನಕಡೆಗೇ ಹೋಗುವದು; ಆದ್ದರಿಂದ ಲೋಕದಮೇಲೆ ಉಪಕಾರಮಾಡುವದು, ಅನುಗ್ರಹ ಮಾಡುವದು, ಲೋಕಕ್ಕೆ ಅಭಯವೀಯುವದು ಶಂಕರನ ಉತ್ತಮಪೂಜೆಯಾಗಿರುವದು. ಶಿವಭಕ್ತರಾದವರು ಇಂಥ ಲೋಕಾರಾಧನಾರೂಪ ಶಿವಪೂಜೆಯನ್ನೇ ಮಾಡುತ್ತಿರಬೇಕು.

---

## ಜ್ಞಾನಪ್ರದೀಪಕಿರಣ,

ಌ ನೆಯದು.

### ಲಿಂಗಪೂಜೆಯು.

ಈ ಮೇರೆಗೆ ಸಿದ್ಧಮುನೀಶ್ವರರು ಹೇಳಿದ ಶಿವನ ಅಷ್ಟಮೂರ್ತಿಗಳ ರಹಸ್ಯಯುಕ್ತಸಂಗತಿಯನ್ನು ಕೇಳಿ ವಿವೇಕಶೀಲರಾದ ಶಿಷ್ಯರಿಗೆ ಬಹಳ ಸಮಾಧಾನವಾಯಿತು. ಅವರು ಸಿದ್ಧಮುನೀಶ್ವರರನ್ನು ಕುರಿತು—ಸದ್ಗುರೋ, ನಿನ್ನ ನಿರೂಪಣದ ಮಹಿಮೆಯನ್ನು ನಾವು ವರ್ಣಿಸಲಾರೆವು; ಯಾಕಂದರೆ ಅದನ್ನು ಕೇಳಿ ಕೇಳಿದಂತೆ ಅಜ್ಞಾನದ ನಾಶವಾಗಿ ಅದನ್ನು ಮತ್ತೂ ಕೇಳಬೇಕೆಂಬ ಇಚ್ಛೆಯಾಗುತ್ತದೆ. ಗುರುದೇವಾ, ನೀನು

ಧ್ಯಾನಯೋಗ್ಯಗಳಾದ ಶಿವನ ಹಾಗು ಶಿವಶಕ್ತಿಯು ಸಗುಣರೂಪಗಳ ವರ್ಣನಮಾಡಿದೆ; ಅದರಂತೆ, ಶಿವನ ಶಕ್ತಿಯು ಶಿವನಿಂದ ಭಿನ್ನವಾಗಿ ಇರದ್ದರಿಂದ ಶಿವ-ಶಿವಶಕ್ತಿ ಇವರನ್ನು ಅಭೇದ ಬುದ್ಧಿಯಿಂದ ಧ್ಯಾನಿಸಬೇಕೆಂತಲೂ ಹೇಳಿದೆ; ಅದರಂತೆ ಶಿವನ ಅಷ್ಟಮೂರ್ತಿಗಳನ್ನು ವರ್ಣಿಸಿ, ಈ ವಿಶ್ವವೆಲ್ಲ ಶಿವಾತ್ಮಕವಾಗಿರುವದರಿಂದ "ಲೋಕಸೇವೆಯೇ ಶ್ರೇಷ್ಠಶಿವಪೂಜೆ''ಯೆಂತಲೂ ನಿರೂಪಿಸಿದೆ; ಆದರೆ ಗುರುದೇವಾ, ಅಜ್ಞಾನಿಗಳೂ, ಚಂಚಲಮನಸ್ಕರೂ ಆದ ನಾವು ಶಿವನ ಹಾಗು ಶಿವಶಕ್ತಿಯು ಧ್ಯಾನಯೋಗ್ಯಗಳಾದ ಸಗುಣಭಿನ್ನರೂಪಗಳನ್ನು ಏಕರೂಪದಿಂದ ಧ್ಯಾನಿಸಲು ಸಮರ್ಥರಾಗಲಾರೆವು. ಅದರಂತೆ, ಅಹಂಕಾರಾವೃತರಾದ ಪಾಮರರು ನಾವು, ಲೋಕವನ್ನು ಈಶ್ವರಭಾವದಿಂದ ಪೂಜಿಸಲಿಕ್ಕೂ ಸಮರ್ಥರಲ್ಲ; ಅದ್ದರಿಂದ ಶಿವನ ಪೂಜಾ-ಧ್ಯಾನಗಳಿಗಾಗಿ ಇದಕ್ಕೂ ಸುಲಭಮಾರ್ಗವಿದ್ದರೆ ತೋರಿಸಿಕೊಡು, ಎಂದು ಪ್ರಾರ್ಥಿಸಲು, ಸಿದ್ಧಮುನೀಶ್ವರನು— ವಿವೇಕಶೀಲಾ, ಇನ್ನು ನಿನಗೆ ತೋರಿಸುವ ಉಪಾಸನೆಯು ಅತ್ಯಂತ ತಾರಕವಾದ ಸುಲಭಮಾರ್ಗವೆಂದರೆ, ಲಿಂಗಪೂಜೆಯು! ಪಾರ್ವತೀ-ಪರಮೇಶ್ವರರ ಪ್ರತಿಮಾಪೂಜೆಗಿಂತಲೂ ಲಿಂಗಪೂಜೆಯು ಶ್ರೇಷ್ಠವಾದದ್ದು; ಯಾಕಂದರೆ ಲಿಂಗದಲ್ಲಿ ಶಿವ ಹಾಗು ಶಿವಶಕ್ತಿ ಇವರು ಏಕೀಭೂತವಾಗಿರುವರು. ಶಿವನೇ ತನ್ನ ಚಿಚ್ಛಕ್ತಿಯು ಸ್ಫುರಣದಿಂದ ಮಹಾಲಿಂಗವಾದನು. ಈ ಲಿಂಗಪೂಜೆಯನ್ನು ಮಾಡಿಯೇ ಬ್ರಹ್ಮ-ವಿಷ್ಣುಗಳು ಕೃತಾರ್ಥರಾಗಿರುವರೆಂಬದನ್ನು ಹಿಂದೆ ೧೦ನೇ ಸುಧಾತರಂಗದ ಲಿಂಗೋದ್ಭವಲೀಲೆಯಲ್ಲಿ ಹೇಳಿದ್ದು ನಿನ್ನ ಸ್ಮರಣದಲ್ಲಿರಬಹುದು; ಅದರಂತೆ, ಕೃಷ್ಣಾರ್ಜುನರೂ, ಅಶ್ವತ್ಥಾಮನೂ ಜನ್ಮಾಂತರದ ಶಿವಪೂಜೆಯಿಂದ ಧನ್ಯರಾಗಿದ್ದರೂ, ಶಿವಲಿಂಗಪೂಜೆಮಾಡಿದ ಕೃಷ್ಣಾರ್ಜುನರು ಶಿವಮೂರ್ತಿಪೂಜೆ ಮಾಡಿದ ಅಶ್ವತ್ಥಾಮನಿಗಿಂತ ಶ್ರೇಷ್ಠರಾದರೆಂದು ಶ್ರೀ ವೇದವ್ಯಾಸರು ಹೇಳಿದ್ದನ್ನಾದರೂ. ನೀನು ಮರೆತಿರಲಿಕ್ಕಿಲ್ಲ; ಆದ್ದರಿಂದ ವಿವೇಕಶೀಲಾ, ಈಶ್ವರನು ಸರ್ವರೂಪನಿರುವನೆಂದು ತಿಳಿದು ಆ ಪ್ರಭುವನ್ನು ಲಿಂಗರೂಪದಲ್ಲಿ ಪೂಜಿಸುವವನಿಗೆ ಅಷ್ಟಯೋಗವೆಂದರೆ, ಜೀವ-ಬ್ರಹ್ಮೈಕ್ಯದ ಅಪರೋಕ್ಷಜ್ಞಾನವೂ, ಶಾಸ್ತ್ರಯೋಗವೆಂದರೆ, ಜೀವ-ಬ್ರಹ್ಮೈಕ್ಯದ ಪರೋಕ್ಷಜ್ಞಾನವೂ ಉಂಟಾಗುವವೆಂದು ಲಿಂಗಪುರಾಣದಲ್ಲಿ ಹೇಳಿರುವದು. ಆದ್ದರಿಂದ ಯಜನಮಾಡುವ ದೇವತೆಗಳೂ, ಸಿದ್ಧರೂ, ದೊಡ್ಡ ದೊಡ್ಡ ಋಷಿಗಳೂ ಸರ್ವಶ್ರೇಷ್ಠನಾದ ಶಂಕರನನ್ನೇ ಲಿಂಗರೂಪದಿಂದ ಪೂಜಿಸುವರು; ಯಾಕಂದರೆ ಆತನೇ ಎಲ್ಲರ ಉತ್ಪಾದಕನಾಗಿರುವನು. ಕೇಶವನು ರುದ್ರನ ಭಕ್ತನಾಗಿದ್ದು, ಆತನು ರುದ್ರನಿಂದಲೇ ಉತ್ಪನ್ನನಾಗಿರುವದರಿಂದ ಅವರಿಬ್ಬರ ಐಕ್ಯವಿರುವದು; ಆದ್ದರಿಂದ ಯಜ್ಞಮಾಡಿ ಆ ಸನಾತನ ವಿಷ್ಣುಪ್ರಭುವನ್ನು ಪೂಜಿಸಬೇಕು. ಈಶ್ವರನು ಎಲ್ಲರ ಉಗಮವೆಂದು ತಿಳಿದು ಲಿಂಗರೂಪದಿಂದ ಪೂಜಿಸುವವನನ್ನು ಆ ವೃಷಧ್ವಜ ಶಂಕರನು ವಿಶೇಷವಾಗಿ ಮನ್ನಿಸುವನೆಂದು ಲಿಂಗಪುರಾಣದಲ್ಲಿ ಹೇಳಿರುವದು; ಆದ್ದರಿಂದ ವಿವೇಕಶೀಲಾ, ಸರ್ವೋತ್ಪತ್ತಿಸ್ಥಾನವೂ, ಸರ್ವರೂಪವೂ, ಸರ್ವಕಾರಣವೂ ಆದ ಪರಮೇಶ್ವರನ ಲಿಂಗರೂಪವನ್ನು ನೀವು ಪೂಜಿಸಿರಿ. ಆ ಲಿಂಗಪೂಜೆಯು ಈಶ್ವರನ ಪ್ರತಿಮಾ

ಪೂಜೆಗಿಂತ ಶ್ರೇಷ್ಠವಾದದ್ದೆಂದು ಶ್ರೀ ವೇದವ್ಯಾಸರು ಹೇಳಿದ್ದನ್ನು ಚನ್ನಾಗಿ ಲಕ್ಷದಲ್ಲಿಡಿರಿ. ಇನ್ನು ನಿಮಗೆ ಶಿವಲಿಂಗಸ್ವರೂಪವನ್ನೂ, ಶಿವಲಿಂಗಗಳ ಪ್ರಕಾರಗಳನ್ನೂ, ಲಿಂಗ ಪೂಜಾವಿಧಿಯನ್ನೂ, ಲಿಂಗಪುರಾಣದಲ್ಲಿ ಹೇಳಿದಂತೆ ಸ್ವಲ್ಪದರಲ್ಲಿಹೇಳುವೆನು ಕೇಳಿರಿ.

ಶಿವಲಿಂಗಸ್ವರೂಪ:—ವಿವೇಕಶೀಲಾ, ತಮ, ರಜ, ಸತ್ವ ಈ ಮೂರು ಗುಣಗಳು, ಅಥವಾ ಅಗ್ನಿಯು, ಬ್ರಹ್ಮನು, ವಿಷ್ಣುವು ಈ ಮೂರೂ ಮೂರ್ತಿಗಳು ಶಿವ ಲಿಂಗದಲ್ಲಿಯೇ ಇರುತ್ತವೆ. ಲಿಂಗಮೂರ್ತಿಯ ಕೆಳಭಾಗದಲ್ಲಿ ಬ್ರಹ್ಮನಿರುವನು, ನಡುವೆ ವಿಷ್ಣುವಿರುವನು, ಮೇಲ್ಭಾಗದಲ್ಲಿ ಓಂಕಾರಮಯ ಸದಾಶಿವ ಸಾಕ್ಷಾತ್ ಮಹಾದೇವನಿರು ವನು. ಲಿಂಗದ ವೇದಿಯು ಸಾಕ್ಷಾತ್ ಅಂಬಿಕಾರೂಪವಿರುವದು; ಆದ್ದರಿಂದ ವೇದಿಯಿಂದ ಸಹಿತವಾಗಿ ಲಿಂಗವನ್ನು ಪೂಜಿಸುವವನು, ಶಿವ-ಶಿವೆಯರಿಬ್ಬರನ್ನೂ ಪೂಜಿಸಿದಹಾಗಾಗು ವದು. ಲಿಂಗದಲ್ಲಿ ಪರಬ್ರಹ್ಮವಿರುವದರಿಂದ ಶ್ರೇಷ್ಠ ಬ್ರಾಹ್ಮಣರು ಯಥಾಪ್ರಕಾರ ಲಿಂಗವನ್ನು ಮಾಡಿ ಅದನ್ನು ಪೂಜಿಸುವರು. ಲಿಂಗವು ಹೆಬ್ಬೆರಳಿನಷ್ಟು ಇದ್ದು ಸುಂದರ ವಾಗಿ ಇರಬೇಕು. ಅದು ದುಂಡಗೆ, ಅಷ್ಟಕೋನ, ಷೋಡಶಕೋನವಾಗಿ ಇರಬೇಕು. ಅದರ ಜಲಹರಿಯು ಅದರ ಇಮ್ಮಡಿಯಿದ್ದು, ಅದು ಗೋಮುಖದಹಾಗಿರಬೇಕು. ಜಲ ಹರಿಯ ಅಂಚನ್ನು ಬಂಗಾರ, ಅಥವಾ ಬೆಳ್ಳಿ, ಅಥವಾ ತಾಂಬ್ರ ಇವುಗಳಿಂದ ಗೋದಿಯ ಕಾಳಿನಷ್ಟು ಪಟ್ಟಿಯಿಂದ ಮಾಡಿರಬೇಕು. ಈ ಲಿಂಗದ ವೇದಿಕೆಯ ಅಳತೆಯು ಲಿಂಗದ ಅಳತೆಯ ಮೂರು ಪಟ್ಟು ಇರಬೇಕು. ಈ ವೇದಿಕೆಯ ಆಕಾರವು ದುಂಡಗೆ, ಅಥವಾ ತ್ರಿಕೋಣ, ಅಥವಾ ಚತುಷ್ಕೋಣ, ಅಥವಾ ಷಟ್ಕೋನವಾಗಿ ಮಾಡಿರಬೇಕು.

ಶಿವಲಿಂಗಗಳ ಪ್ರಕಾರಗಳು:—ಆರು ಪ್ರಕಾರದ ದ್ರವ್ಯಗಳಿಂದ ಲಿಂಗ ಮೂರ್ತಿಯನ್ನು ಮಾಡಬೇಕು. ಶೈಲಜಲಿಂಗವು ಮೊದಲನೆಯ ಪ್ರಕಾರದ್ದು; ಇದ ರಲ್ಲಿ ನಾಲ್ಕು ಭೇದಗಳಿರುವವು. ಎರಡನೆಯಪ್ರಕಾರದ ಲಿಂಗವು ರತ್ನದ್ದು; ಇದರಲ್ಲಿ ಏಳು ಭೇದಗಳಿರುವವು. ಲಿಂಗದ್ರವ್ಯದ ಮೂರನೆಯ ಜಾತಿಯು ಧಾತುವು; ಇದರಲ್ಲಿ ಎಂಟು ಪ್ರಕಾರಗಳಿರುವವು. ನಾಲ್ಕನೆಯ ದ್ರವ್ಯವು ಕಟ್ಟಿಗೆಯು; ಇದರಲ್ಲಿ ಹದಿನಾರು ಭೇದ ಗಳಿರುವವು. ಏಳನೆಯ ದ್ರವ್ಯವು ಮಣ್ಣು; ಇದರ ಒಳಭೇದಗಳು ಎರಡು. ಇನ್ನು ಏಳನೆಯಪ್ರಕಾರದ ಲಿಂಗವು ಕ್ಷಣಿಕವು; ಇದರಲ್ಲಿ ಏಳುಪ್ರಕಾರಗಳನ್ನು ಕಲ್ಪಿಸಿರುವರು. ಹೀಗೆ ಎಲ್ಲಕೂಡಿ ಲಿಂಗದಲ್ಲಿ ೪೪ ಪ್ರಕಾರಗಳಾಗುವವು. ವಿವೇಕಶೀಲಾ, ಈ ಲಿಂಗ ಭೇದಗಳನ್ನು ಗುರುಮುಖದಿಂದ ತಿಳಿದುಕೊಳ್ಳಬೇಕಾಗಿದ್ದು, ಅವರ ದಿಗ್ದರ್ಶನವನ್ನು ನಾನು ಮಾಡಿರುವೆನು. ಬ್ರಹ್ಮನು ಶೈಲಜಲಿಂಗವನ್ನು ಪೂಜಿಸುತ್ತಿದ್ದು, ಆತನ ಹೇಳಿಕೆ ಯಂತೆ ವಿಶ್ವಕರ್ಮನು ಯಾವತ್ತು ದೇವತೆಗಳಿಗೆ ಬೇರೆ ಬೇರೆ ದ್ರವ್ಯಗಳಿಂದ ಬೇರೆ ಬೇರೆ ಲಿಂಗಗಳನ್ನು ಮಾಡಿಕೊಟ್ಟನು. ಇಂದ್ರನೀಲದ ಲಿಂಗವನ್ನು ವಿಷ್ಣುವಿಗೆ ಕೊಟ್ಟನು- ಪದ್ಮರಾಗದ್ದನ್ನು ಇಂದ್ರನಿಗೂ, ಬಂಗಾರದ್ದನ್ನು ಕುಬೇರನಿಗೂ, ಚಂದ್ರಕಾಂತದ ಲಿಂಗಗಳನ್ನು ವಸುಗಳಿಗೂ, ಹಿತ್ತಾಳಿಯದನ್ನು ವಾಯುವಿಗೂ, ಮಣ್ಣಿನದನ್ನು ಅಶ್ವಿನೀ ಕುಮಾರರಿಗೂ, ಸ್ಫಟಿಕದ್ದನ್ನು ವರುಣನಿಗೂ, ತಾಂಬ್ರದ್ದನ್ನು ಆದಿತ್ಯನಿಗೂ, ಮುತ್ತಿನ

ದನ್ನು ಸೋಮನಿಗೂ, ಉಸುಬಿನದನ್ನು ಚಾಮುಂಡಾ-ಮಾತೃಗಣಗಳಿಗೂ, ಇದರಂತೆ ಉಳಿದ ಎಲ್ಲ ದೇವತೆಗಳಿಗೂ ಬೇರೆ ಬೇರೆ ಲಿಂಗಗಳನ್ನು ಬ್ರಹ್ಮದೇವನು ಮಾಡಿಕೊಟ್ಟನು-ಈ ಯಾವತ್ತು ಚರಾಚರಜಗತ್ತು ಲಿಂಗರೂಪವಿರುವದರಿಂದ ಅದು ಅರ್ಚನೀಯವಾಗಿರುವದು. ರತ್ನದ ಲಿಂಗವನ್ನು ಪೂಜಿಸುವದರಿಂದ ಶ್ರೀಯುಪ್ರಾಪ್ತಿಯಾಗುವದು. ಧಾತುವಿನ ಲಿಂಗವನ್ನು ಪೂಜಿಸುವದರಿಂದ ಧನಪ್ರಾಪ್ತಿಯಾಗುವದು. ಮಣ್ಣಿನ ಲಿಂಗವು ಸರ್ವಸಿದ್ಧಿಗಳನ್ನು ಕೊಡುವದಾಗಿರುವದು. ಯಾವ ದ್ರವ್ಯದ ಲಿಂಗವನ್ನೇ ಮಾಡಿರಲಿ, ಅದನ್ನು ಭಕ್ತಿಯಿಂದ ಸ್ಥಾಪಿಸಿ ಪೂಜಿಸುವದರಿಂದ, ದೇವತೆಗಳು ಆ ಮನುಷ್ಯನ ಸ್ತೋತ್ರಮಾಡುವರು; ಮತ್ತು ಆ ಮನುಷ್ಯನು ಬ್ರಹ್ಮಾಂಡವನ್ನು ಭೇದಿಸಿ ಏಳು ಲೋಕಗಳ ಮೇಲೆ ಹೋಗಿ ಕುಳಿತುಕೊಳ್ಳುವನು.

ವಿವೇಕಶೀಲಾ, ಶಿವಲಿಂಗ ಸ್ವರೂಪವನ್ನೂ, ಶಿವಲಿಂಗ ಭೇದವನ್ನೂ ಕುರಿತು ಮಹಾತ್ಮರಾದ ನಿಜಗುಣಿ ಶಿವಯೋಗಿಗಳು ತಮ್ಮ ವಿವೇಕಚಿಂತಾಮಣಿಯಲ್ಲಿ ಹೇಳಿದ್ದು ರಹಸ್ಯಪೂರ್ಣವಾಗಿರುವದರಿಂದ ಅದನ್ನು ಹೇಳುವೆನು ಕೇಳು. ಅವರು ಅನ್ನುವದೇನಂದರೆ—ಸರ್ವಮಯನಾಗಿಯೂ, ಪೂರ್ಣನಾಗಿಯೂ ಇರುವ ಪರಶಿವನನ್ನು ತಾತ್ವಿಕರೀತಿಯಿಂದ ಆರಾಧಿಸಲರಿಯದವರೂ, ಅಸಮರ್ಥರೂ ಆಗಿರುವ ಬ್ರಹ್ಮ-ವಿಷ್ಣು ಮೊದಲಾದ ದೇವತೆಗಳು ಬೇರೆ ಬೇರೆ ಲಿಂಗಗಳನ್ನು ಮಾಡಿಕೊಂಡರು. (ಆ ಲಿಂಗಗಳಾವವೆಂಬುವನ್ನು ಸಾಧಾರಣವಾಗಿ ಮೇಲೆ ಹೇಳಿರುವದರಿಂದ ಅವನ್ನು ಪುನಃ ಹೇಳದೆ, ಉಳಿದವರಲ್ಲಿ ಕೆಲವರು ಪೂಜಿಸುವ ಲಿಂಗಗಳನ್ನು ಹೇಳಿರುವದು) ಅನ್ನಮಯಲಿಂಗವನ್ನು ಅಗ್ನಿಯು, ಕುಶಮಯಲಿಂಗವನ್ನು ಸಪ್ತಋಷಿಗಳು, ರುದ್ರಾಕ್ಷಲಿಂಗವನ್ನು ಪ್ರಮಥರು, ಪವಿತ್ರಮಯಲಿಂಗವನ್ನು ವಸಿಷ್ಠನು, ದರ್ಭಸ್ತಂಭಮಯ ಲಿಂಗವನ್ನು ವಿಶ್ವಾಮಿತ್ರನು, ಕೂರ್ಚಮಯಲಿಂಗವನ್ನು ವಾಮದೇವನು, ಸ್ವಸ್ವರೂಪಮಯ ಸದಾಶಿವ ಲಿಂಗವನ್ನು ಸನಕಾದಿ ಜ್ಞಾನಯೋಗಿಗಳು, ಇಚ್ಛಾ, ಜ್ಞಾನ, ಕ್ರಿಯಾಮಯ ಲಿಂಗಗಳನ್ನು ಲಕ್ಷ್ಮೀ-ಪಾರ್ವತೀ-ಸರಸ್ವತಿಯರು, ಪತಿಮಯಲಿಂಗವನ್ನು ಅರುಂಧತಿ-ಅನಸೂಯಾ-ಸಾವಿತ್ರಿ ಮೊದಲಾದ ಪತಿವ್ರತೆಯರು, ಮೋಹಮಯಲಿಂಗವನ್ನು ಪಶ್ವಾದಿಗಳು, ಅಗ್ನಿಲಿಂಗವನ್ನು ದ್ವಿಜನು, ಖಡ್ಗಲಿಂಗವನ್ನು ಅರಸನು, ಧನಲಿಂಗವನ್ನು ವರ್ತಕನು, ಧ್ಯಾನಲಿಂಗವನ್ನು ಶೂದ್ರನು ಪೂಜಿಸುವದು ಸಹಜವಾಗಿರುವದು; ಆದರೂ ಶಿವಪೂಜಾಫಲದಲ್ಲಿ ವಿಶೇಷವಿರುವದೆಂದು ನಿಗಮಾಗಮಗಳಲ್ಲಿ ಹೇಳಿರುವದರಿಂದ, ಎಲ್ಲರೂ ಸ್ವಯಂವ್ಯಕ್ತವಾದ ಸ್ವಯಂಭೂಲಿಂಗವನ್ನು ಪೂಜಿಸತಕ್ಕದ್ದು; ಅಥವಾ ಶೈವಸಿದ್ಧಾಂತ ಸಮ್ಮತವಾದ ಪಂಚಲಿಂಗಗಳಾದ—೧ ಸ್ವಯಂಭುಲಿಂಗ, ೨ ಬಾಣಲಿಂಗ, ೩ ಚರಲಿಂಗ, ೪ ಸಂಕೀರ್ಣಲಿಂಗ, ೫ ಪ್ರಾಣಲಿಂಗವೆಂಬೈದರಲ್ಲಿ ತಮ್ಮ ತಮ್ಮ ಶಕ್ತ್ಯನುಸಾರವಾಗಿ ಆಯಾಲಿಂಗಗಳ ಅರ್ಚನೆಯಲ್ಲಿ ತತ್ಪರರಾಗತಕ್ಕದ್ದು.

ಲಿಂಗಪೂಜಾ ವಿಧಿ:—ವಿವೇಕಶೀಲಾ, ಶಿವಲಿಂಗಪೂಜೆಯವಿಧಿಯು ಗುರುಮುಖದಿಂದ ತಿಳಿದುಕೊಳ್ಳತಕ್ಕ ವಿಷಯವಾಗಿರುವದು. ಶೈವರಲ್ಲಿ ಹಲವು ಭೇದ

ಗಳಿದ್ದು, ಆಯಾ ಭೇದದವರು ತಮ್ಮ ತಮ್ಮ ಗುರುಗಳಿಂದ ಲಿಂಗ ಪೂಜಾವಿಧಿಯನ್ನು ಅರಿತುಕೊಂಡು ಭಕ್ತಿಯಿಂದ ಸದಾಶಿವನನ್ನು ಪೂಜಿಸುವದು ಅವಶ್ಯವಾಗಿರುವದರಿಂದ, ಇಲ್ಲಿ ಪೂಜೆಯ ಯಾವ ವಿಧಿಯನ್ನೂ ಹೇಳದೆ ಶೈವರಲ್ಲಿಯ ಭೇದವನ್ನು ಮಾತ್ರ ಹೇಳಿರುತ್ತದೆ.

ಮಹಾತ್ಮರಾದ ನಿಜಗುಣಿ ಶಿವಯೋಗಿಗಳು ತಮ್ಮ ವಿವೇಕಚಿಂತಾಮಣಿಯೆಂಬ ಗ್ರಂಥದಲ್ಲಿ ಶೈವರಲ್ಲಿಯ ಭೇದವನ್ನು ಕುರಿತು—ಅನಾದಿಶೈವ, ಆದಿಶೈವ, ಮಹಾಶೈವ, ಅನುಶೈವ, ಅವಾಂತರಶೈವ, ಪ್ರವರಶೈವ, ಅಂತರಶೈವ ಎಂದು ಶೈವರು ಏಳುವಿಧದವರಾಗಿರುವರೆಂದು ಹೇಳಿರುವರು. ಶಿವನೇ ಅನಾದಿಶೈವನು, ಶಿವನ ಪಂಚವಕ್ತ್ರಗಳಿಂದ ದೀಕ್ಷಿತರಾದ ಕೌಶಿಕಾದಿ ಋಷೀಶ್ವರರು ಆದಿಶೈವರು; ಆ ಋಷಿವಂಶಜರಾಗಿ ದೀಕ್ಷಿತರಾದ ದ್ವಿಜರೇ ಮಹಾಶೈವರು; ಶಿವಸಂಸ್ಕಾರಿಗಳಾದ ಕ್ಷತ್ರಿಯರೇ ಅನುಶೈವರು; ಶಿವದೀಕ್ಷಾಸಂಪನ್ನರಾದ ವೈಶ್ಯರೇ ಅವಾಂತರ ಶೈವರು; ಶಿವದೀಕ್ಷಾಯುಕ್ತರಾದ ಶೂದ್ರಾದಿಗಳು ಪ್ರವರ ಶೈವರು; ದೀಕ್ಷೆಯಿಂದ ಉಳಿದ ಜಾತಿಗಳೇ ಅಂತರಶೈವರು. ಹೀಗೆ ವರ್ಣಗಳಿಗನುಸರಿಸಿ ಶೈವಭೇದಗಳನ್ನು ಹೇಳಿರುವರಲ್ಲದೆ, ಶಿವೋಪಾಸನೆಯ ಕ್ರಮಭೇದವನ್ನನುಸರಿಸಿ ಆ ಮಹಾತ್ಮರಾದ ನಿಜಗುಣಿ-ಶಿವಯೋಗಿಗಳು ಶೈವರಲ್ಲಿ—ಸಾಮಾನ್ಯಶೈವ, ಮಿಶ್ರಶೈವ, ಶುದ್ಧಶೈವ, ವೀರಶೈವ ಎಂದು ನಾಲ್ಕು ಭೇದಗಳಿರುತ್ತವೆಂದು ಹೇಳಿರುವರು. ಈ ಶೈವರ ಲಕ್ಷಣಗಳು ಗೊತ್ತಿರುವದು ಅವಶ್ಯವಾಗಿರುವದರಿಂದ ಅವನ್ನು ಸ್ವಲ್ಪದರಲ್ಲಿ ಹೇಳುವೆನು ಕೇಳು.

ಸಾಮಾನ್ಯ ಶೈವಲಕ್ಷಣ:—ಯಾವನಾದರೊಬ್ಬನು ವಿಭೂತಿಧಾರಣಮಾತ್ರದಿಂದ ಶುದ್ಧಾತ್ಮನಾಗಿ ಸ್ವಯಂಭುಲಿಂಗವನ್ನಾಗಲಿ, ದೇವ-ದಾನವ-ಋಷಿ-ಮಾನವಾದಿ ಪ್ರತಿಷ್ಠಿತಲಿಂಗವನ್ನಾಗಲಿ ಕಂಡಕೂಡಲೆ, ನಮಸ್ಕಾರ-ಪ್ರದಕ್ಷಿಣೆ ಪೂಜಾದಿಗಳನ್ನು ಯಥಾಶಕ್ತಿಯಾಗಿ ಮಾಡುತ್ತ, ಶಿವಭಕ್ತ-ಜನವಾತ್ಸಲ್ಯ, ಶಿವಪೂಜಾರತಿ, ಶಿವಾರ್ಚನೆ, ಶಿವಾರ್ಥವ್ಯಾಪಾರ, ಶಿವಕಥಾಶ್ರವಣೇಚ್ಛೆ, ಶಿವಧ್ಯಾನ, ಶಿವಕಥಾನುಕೂಲತೆ, ಪರಮಸಾತ್ವಿಕತೆ ಎಂಬ ಅಷ್ಟವಿಧಭಕ್ತಿಯುಕ್ತನಾಗಿರುವವನೇ ಸಾಮಾನ್ಯಶೈವನು.

ಮಿಶ್ರಶೈವ ಲಕ್ಷಣ:—ಪೀಠಸ್ಥ ಶಿವಲಿಂಗಪೂಜೆಯೊಡನೆ ವಿಷ್ಣು, ಉಮೆ, ಷಣ್ಮುಖ, ವಿಘ್ನೇಶ್ವರ, ಸೂರ್ಯರೆಂಬ ಪಂಚಾಯತನ ಪೂಜೆಯನ್ನೂ, ಬ್ರಹ್ಮೇಂದ್ರಾದಿ ದೇವತಾರಾಧನೆಗಳನ್ನೂ ಆಯಾಮಂತ್ರಗಳಿಂದ ಮಾಡುತ್ತ, ಶಿವನು ಸರ್ವಾತ್ಮಕನೆಂಬ ಬುದ್ಧಿಯಿಂದಲೂ, ವಿಷ್ಣ್ವಾದಿದೇವತೆಗಳೆಲ್ಲರೂ ಶಿವಭಕ್ತರೆಂಬ ಭಾವನೆಯಿಂದಲೂ ಎಲ್ಲರಲ್ಲಿ ಸಮಾನ ಭಕ್ತಿಯುಳ್ಳವನೇ ಮಿಶ್ರಶೈವನು.

ಶುದ್ಧಶೈವಲಕ್ಷಣ:—ಅನಾದಿಶೈವನಾದ ಸದಾಶಿವನ ಸದ್ಯೋಜಾತಾದಿ ಪಂಚಮುಖಗಳಿಂದ ದೀಕ್ಷಿತರಾದ ಕೌಶಿಕ, ಕಶ್ಯಪ, ಭರದ್ವಾಜ, ಅತ್ರಿ, ಗೌತಮ ಪ್ರಮುಖರಾದ ಶೈವಋಷಿಗೋತ್ರ ಸಂಭೂತನಾಗಿ ಮಹಾಶೈವನೆನಿಸುವ ಶಿವದ್ವಿಜನು ಶುದ್ಧಶೈವನು.

ವೀರಶೈವ ಲಕ್ಷಣ:—ಜಗತ್ತಿನಲ್ಲಿ—ವೀರಶೈವ, ಚರಮ ಶರೀರ, ಸರ್ವೋತ್ತಮವ್ರತಿ, ಅಪ್ರತಿಹತ ಶಿವವ್ರತ, ಲೋಕಪಾವನ ಎಂದು ಸಮಸ್ತಸಜ್ಜನರಿಂದ ಕೊಂಡಾಡಲ್ಪಟ್ಟು ಸಮಸ್ತ ಶೈವರಲ್ಲಿ ವರಿಷ್ಠನಾಗಿಯೂ, ಇತರ ಶೈವರಂತೆ ಕ್ರಿಯಾಬಾಹುಲ್ಯದಿಂದ ಅಲ್ಪ ಫಲವನ್ನು ಪಡೆಯದೆ ಅಲ್ಪ ಕ್ರಿಯೆಯಿಂದ ಅನಂತ ಫಲಪಡೆಯುವವನಾಗಿಯೂ, ಶಿವದೀಕ್ಷೆಯಾದ ಮೇಲೆ ಸ್ನಾನ, ಭೋಜನ, ನಿದ್ರಾ, ಜಾಗರಣ, ಮಲಮೂತ್ರ ವಿಸರ್ಜನ ಕಾಲಗಳಲ್ಲಿ ಅಶುಚಿಭಾವನೆಯನ್ನು ತೊರೆದು ಯಾವಾಗಲೂ ಲಿಂಗಾಂಗಾನುಬಂಧಿಯಾಗಿಯೂ, ಲಿಂಗಭೋಗೋಪಭೋಗಿಯಾಗಿಯೂ, ತನ್ನ ಇಷ್ಟಲಿಂಗದಲ್ಲಿ ಆವಾಹನ ವಿಸರ್ಜನ ಕ್ರಿಯೆಗಳನ್ನು ಮಾಡದಾತನಾಗಿಯೂ, ತ್ರಿಕಾಲಲಿಂಗಾರ್ಚನಾಸಕ್ತನಾಗಿಯೂ, ಲಿಂಗಲೋಪದಲ್ಲಿ ಪ್ರಾಣತ್ಯಾಗವಲ್ಲದೆ ಬೇರೊಂದು ಪ್ರಾಯಶ್ಚಿತ್ತವಿಲ್ಲದವನಾಗಿಯೂ, ಗುರುನಿಂದೆ, ಶಿವನಿಂದೆ, ಶಿವಕಥಾನಿಂದೆ, ಶೈವನಿಂದೆ, ಪ್ರಮಥನಿಂದೆ, ಜಂಗಮನಿಂದೆ, ಶಿವಪಾದೋದಕನಿಂದೆ, ಶಿವನಿರ್ಮಾಲ್ಯನಿಂದೆ, ಭಸ್ಮಧಾರಣನಿಂದೆ, ಶಿವಾಗಮ—ಶಿವಕ್ಷೇತ್ರ—ಶಿವಾಚಾರಸಾಂಪ್ರದಾಯನಿಂದೆ ಇವನ್ನು ಸೈರಿಸದೆ, ಕೇಳಿದ ಕಿವಿಗಳಿಗೆ ಪ್ರಾಯಶ್ಚಿತ್ತಗಳನ್ನು ಮಾಡಿಕೊಂಡು, ನುಡಿದನಾಲಿಗೆಯನ್ನು ಸೀಳುವವನಾಗಿಯೂ, ಶಿವನಿಂದ್ಯರಾದ ವಿಷ್ಣ್ವಾದಿ ದೇವತೆಗಳನ್ನು ತೃಣೀಕರಿಸಿ ಲೆಕ್ಕಿಸದಾತನಾಗಿಯೂ, ಬಾಹ್ಯದಲ್ಲಿ ಲಿಂಗಲಾಂಛನವಿಲ್ಲದ ಭವಿಗಳೊಡನೆ ಏಕಾಸನ, ಶಯನ, ಯಾನ, ಸಹವಾಸ, ಸಂಭಾಷಣ, ಸಂಭೋಜನ, ಸೌಹಾರ್ದಗಳಿಲ್ಲದವನಾಗಿಯೂ, ಭಸ್ಮಮಾತ್ರ ಲಾಂಛನವುಳ್ಳ ಪ್ರಾಣಿಗಳಲ್ಲಿ ದಯೆಯನ್ನು ಪಡೆದವನಾಗಿಯೂ, ಶೈವಚಿಹ್ನವೇ ಇಲ್ಲದ ಪಾಪಿಷ್ಠರನ್ನು ಶಿಕ್ಷಿಸಲಿಚ್ಛೆಯುಳ್ಳವನಾಗಿಯೂ, ಶಿವಧರ್ಮಾಭಿವೃದ್ಧಿಗೋಸ್ಕರ ತನ್ನ ತನು—ಧನ—ಮನಗಳನ್ನು ಸೂರೆಗೊಡುವವನಾಗಿಯೂ, ಅನೃತ—ಅಸ್ಥಿರವಾಕ್ಯ—ವಂಚನೆ—ಪಂಙ್ತಿಭೇದ—ಉದಾಸೀನತೆ—ನಿರ್ದಯ ಎಂಬ ಆರು ದೋಷಗಳಿಂದ ಆರುತರದ ಭವಿಗಳಾಗದಾತನಾಗಿಯೂ, ವೀರಶೈವಮಾಹೇಶ್ವರರನ್ನು ಕಾಣುತ್ತಲೆ, ಅಭ್ಯುತ್ಥಾನ ಅಂದರೆ ಏಳುವದು, ಅಭ್ಯುದ್ಗಮನ ಅಂದರೆ ಎದುರಾಗಿ ನಡೆಯುವದು, ಅವರೊಡನೆ ತಿರುಗಾಡುವದು, ಪ್ರಿಯವಚನವ ನುಡಿಯುವದು, ಗದ್ದುಗೆಯನ್ನಿಡುವದು, ಅನ್ನಪಾನಾದಿಗಳನ್ನು ಸಮರ್ಪಿಸುವದು ಎಂಬ ಮುಕ್ತಿಸೋಪಾನ—ಸಪ್ತಕಕ್ರಮಯುಕ್ತನಾಗಿಯೂ, ಶಿವಧರ್ಮವಿರುದ್ಧವಾದದ್ದೆಲ್ಲವನ್ನೂ ಸರ್ವಾತ್ಮನಾವರ್ಜಿಸುವವನಾಗಿಯೂ, ಜಾತಿಸೂತಕ—ಜನನಸೂತಕ—ಪ್ರೇತಸೂತಕ—ಉಚ್ಛಿಷ್ಟಸೂತಕ-ಪ್ರಜಾಸೂತಕ ಎಂಬ ಪಂಚಸೂತಕಗಳನ್ನು ಅಳಿದಾತನಾಗಿಯೂ, ಲಿಂಗಾಚಾರ—ಸದಾಚಾರ—ಭಕ್ತ್ಯಾಚಾರ—ಶಿವಾಚಾರ—ಗಣಾಚಾರ ಎಂಬ ಪಂಚಾಚಾರನಿಷ್ಠನಾಗಿಯೂ, ದಾಸತ್ವ—ವೀರದಾಸತ್ವ—ಭೃತ್ಯತ್ವ—ವೀರಭೃತ್ಯತ್ವ—ಸಮಯಾಚಾರತ್ವ—ಸಕಲಾವಸ್ಥತ್ವ ಎಂಬ ಷಡ್ವಿಧ ಸಜ್ಜನತ್ವಯುಕ್ತನಾಗಿಯೂ, ದೇಶಕಾಲಕಲ್ಪಿತ ಲೋಕಾಚಾರಗಳನ್ನು ಮೀರಿ ಸ್ವತಂತ್ರಶೀಲನಾಗಿ ಶಿವಾತ್ಮರಿಗೆ ಭೇದಭ್ರಾಂತಿಯನ್ನು ತೋರದವನಾಗಿಯೂ, ಜೀವಲಿಂಗವನ್ನು ಶಿವಲಿಂಗದಲ್ಲಿ ಐಕ್ಯಗೊಳಿಸಿ ಮೆರೆಯುವವನಾಗಿಯೂ, ವೀರಶೈವ ಧರ್ಮಗಳಿಂದ ಕೃತಕೃತ್ಯನಾಗಿಯೂ, ಲಿಂಗಾಂಗಸಂಗಾದ್ವೈತಭಾವನೆಯಿಂದ

ಭಯುವರ್ಜಿತನಾಗಿಯೂ, ಸರ್ವಸಕ್ತಶಿವೋಪಾಶ್ರಯು ಬಲದಿಂದ ಅಘಟನಾಘಟನ ಸಮ ರ್ಥನಾಗುವ ಧೈರ್ಯವುಳ್ಳವನಾಗಿಯೂ, ಹರ್ಷವಿಷಾದಗಳಿಗೆ ಎರಗದಾತನಾಗಿಯೂ, ಶಾಂಭವ ವಿದ್ಯೆಯಲ್ಲಿ ರಮಿಸುವ ಶೈವನಾದದ್ದರಿಂದ ತತ್ಸಂಜ್ಞೆಯುಳ್ಳವನಾಗಿಯೂ, ಜಗ ತ್ಪೂಜ್ಯನಾದಾತನೇ ವೀರಶೈವನು.

ವಿವೇಕಶೀಲಾ, ಹೀಗೆ ಶೈವರಲ್ಲಿ ಭೇದಗಳಿರುವದರಿಂದ ಆಯಾ ಭೇದಗಳಿಗೆ ಒಳ ಪಟ್ಟ ಶೈವರು ತಮ್ಮ ಸದ್ಗುರುಗಳು ಬೋಧಿಸಿದ ವಿಧಿಯಿಂದ ಭಗವಾನ್ ಸದಾಶಿವನನ್ನು ಪೂಜಿಸಿ ಧನ್ಯರಾಗತಕ್ಕದ್ದು.

---

# ಜ್ಞಾನಪ್ರದೀಪಕಿರಣ,

## ೬ನೆಯದು.

---

## ಅಧಿಕಾರಸಂಪನ್ನತೆ !

ಈ ವೇರಿಗೆ ಸಿದ್ಧಮುನೀಶ್ವರನು ನಿರೂಪಿಸಿದ್ದನ್ನು ಕೇಳಿ ವಿವೇಕಶೀಲನು ಸಂತೋಷ ಪಟ್ಟು ತನ್ನ ಗುರುವನ್ನು ಕುರಿತು—ಸದ್ಗುರುನಾಥಾ, ನೀನು ತೋರಿಸಿದ ಸುಲಭಮಾ ರ್ಗವು ಅನಾಯಾಸವಾಗಿ ಭಕ್ತರನ್ನು ಉದ್ಧರಿಸುವಲ್ಲಿ ಸಂಶಯವಿಲ್ಲ; ಆದರೆ ಯಾವಕಾ ರ್ಯವಾಡಲಿಕ್ಕಾದರೂ ಅಧಿಕಾರಬೇಕಷ್ಟೆ? ಅಧಿಕಾರಸಂಪನ್ನನಲ್ಲದವನ ಕಾರ್ಯವು ದುಃಖಕ್ಕೆ ಕಾರಣವಾಗುವದೆಂಬದು ಅನುಭವದ ಮಾತಾಗಿರುವದು. ಸ್ವಾರ್ಥಪರಾಯ ಣತೆಯು ಈಗಿನ ಕಾಲದಲ್ಲಿ ತಮ್ಮ ಅಧಿಕಾರವನ್ನು ನೋಡಿಕೊಳ್ಳದೆ ಸ್ವಾರ್ಥಾಭಿಲಾಷೆ ಯಿಂದ ಕಂಡವರು ಕಂಡಕಾರ್ಯಕ್ಕೆ ದುಮುಕುವದರಿಂದ ಕೈಕೊಂಡ ಕಾರ್ಯವು ಫಲಿ ಸಲಿ—ಫಲಿಸದಿರಲಿ ಜನತೆಯು ದುಃಖದವಾನವು ಮಾತ್ರ ಹೆಚ್ಚುತ್ತಲಿದೆ; ಆದ್ದರಿಂದ ಶಿವೋಪಾಸನೆಗೆ ಅಧಿಕಾರಿಯು ಯಾರು? ಅಥವಾ ತಾರಕವಾದ ಆ ಸರ್ವೋತ್ತಮ ಕಾರ್ಯಕ್ಕೆ ಅಧಿಕಾರಪ್ರಾಪ್ತಿಯಾಗಲಿಕ್ಕೆ ಏನು ಮಾಡಬೇಕು? ಬಡವರು ಒಬ್ಬಾನೊಬ್ಬ ಸಾರ್ವಭೌಮರಾಜನನ್ನಂತು ಇರಲಿ, ಒಬ್ಬ ಘನವಂತನನ್ನೂ ಪೂಜಿಸಿ ಪ್ರಸನ್ನೀಕರಿಸಿಕೊ ಳ್ಳುವದೂ ಅಶಕ್ಯವಾಗಿರಲು, ಸಾರ್ವಭೌಮರ ಸಾರ್ವಭೌಮನೂ, ಅಖಿಲಬ್ರಹ್ಮಾಂಡನಾ ಯಕನೂ ಆದ ಭಗವಾನ್ ಸದಾಶಿವನನ್ನು ನಮ್ಮಂಥ ಅಧಮರು ಪೂಜಿಸಿ ಪ್ರಸನ್ನೀಕರಿಸಿ ಕೊಳ್ಳಲು ಅಧಿಕಾರಿಗಳಾಗಬಹುದೋ? ನಮ್ಮ ಅಧಿಕಾರವನ್ನು ನೋಡಿಕೊಳ್ಳದೆ ಗತಾನು ಗತಿಕರಾಗಿ ಒಬ್ಬರನ್ನು ಕಂಡು ಒಬ್ಬರು ಶಿವಪೂಜೆಮಾಡುತ್ತಬಂದರೆ, ಶಿವಪೂಜೆಯ ಫಲವು ದೊರೆಯಬಹುದೋ? ಒಬ್ಬ ಸಾರ್ವಭೌಮರಾಜನಂಥ ಮಹಾಬಲಿಷ್ಠನ ಹತ್ತರ ಹೋಗ ಲಿಕ್ಕೂ ನಾವು ಅನಧಿಕಾರಿಗಳಾಗಿರಲು, ಸರ್ವತಂತ್ರಸ್ವತಂತ್ರನಾದ ಭಗವಾನ್ ಸದಾಶಿ ವನನ್ನು ದುಡುಕಿಹೋಗಿ ಮುಟ್ಟಿ ಪೂಜಿಸುವದು ಸದಾಶಿವನ ಕ್ಷೋಭಕ್ಕೆ ಕಾರಣವಾಗ

ಲಿಕ್ಕಿಲ್ಲವೆ? ಆದ್ದರಿಂದ ಸದ್ಗುರುನಾಥಾ, ನಮ್ಮಂಥ ಪಾಮರರು ಭಗವಾನ್ ಶಂಕರನನ್ನು ಪೂಜಿಸಲು ಹ್ಯಾಗೆ ಅಧಿಕಾರಿಗಳಾದೇವೆಂಬದನ್ನು ನಮಗೆ ಹೇಳು.

ವಿವೇಕಶೀಲನ ಈ ಸಮಂಜಸ ಪ್ರಶ್ನವನ್ನು ಕೇಳಿ ಸಿದ್ಧಮುನೀಶ್ವರನು—ವಿವೇಕಶೀಲಾ, ನಿನ್ನ ಪ್ರಶ್ನವು ಬಹುರಹಸ್ಯಯುಕ್ತವಾದದ್ದು. ಅದರ ಉತ್ತರವನ್ನು ನೀನು ಲಕ್ಷಪೂರ್ವಕವಾಗಿ ಕೇಳು. ಬಡವನಿಗೆ ಒಬ್ಬಾನೊಬ್ಬ ಸಾರ್ವಭೌಮನಾಗಲಿ, ಘನವಂತನಾಗಲಿ ಪ್ರತ್ಯಕ್ಷವಾಗಿ ಕಣ್ಣಿಗೆ ಬೀಳುವಂತೆ, ಭಗವಾನ್ ಸದಾಶಿವನು ಈ ಲೋಕದಲ್ಲಿ ಯಾವನ ಕಣ್ಣಿಗೂ ಬೀಳುವದಿಲ್ಲ. ಆ ಭಗವಂತನ ಅಸ್ತಿತ್ವವು ಪ್ರತ್ಯಕ್ಷ, ಅಪ್ರತ್ಯಕ್ಷ ಎಂದು ಎರಡು ವಿಧವಾಗಿರುವದು. ಆ ಬ್ರಹ್ಮಾಂಡನಾಯಕನು ತನ್ನ ಮಾಯಾರೂಪವಾದ ಬ್ರಹ್ಮಾಂಡವನ್ನು ಪ್ರಕಟಮಾಡಿ, ಆ ಘನವಾದ ಮಾಯಾಪಟಲದ ಹಿಂದೆ ತಾನು ಮರೆಯಾಗಿರುವದರಿಂದ ಆತನ ಅಸ್ತಿತ್ವವು ಜಗತ್ತಿನಲ್ಲಿ ಬಹುತರ ಅಪ್ರತ್ಯಕ್ಷವಾಗಿಯೇ ಇರುತ್ತದೆಂದು ಹೇಳಬೇಕಾಗುವದು. ಆತನ ಆ ಮಾಯೆಯ ಘನತರವಾದ ಪಟಲವನ್ನು ಅತಿಕ್ರಮಿಸಿ ಹೋದ ಮಹಾತ್ಮರಿಗೆ ಮಾತ್ರ ಆತನ ದರ್ಶನವಾಗುವದು; ಆದ್ದರಿಂದ ನಾವು ಪ್ರತಿಮೆ-ಲಿಂಗಗಳಂಥ ಮಾಯಾರೂಪ ಪ್ರತೀಕಗಳನ್ನೇ ಔಪಾಸನೆಗಾಗಿ ಇಟ್ಟುಕೊಂಡು, ಅವುಗಳ ಉಪಾಸನೆಯಿಂದ ಮನಸ್ಸಿನ ಮಲಗಳನ್ನು ತೊಳೆದು ಶುದ್ಧಭಾವವನ್ನುಂಟುಮಾಡಿಕೊಂಡಾಗ ಮಾತ್ರ ಆ ಮನಸ್ಸಿನಲ್ಲಿ ಅಂದರೆ ನಮ್ಮ ಹೃದಯದಲ್ಲಿ ಭಗವಂತನು ಆವಿರ್ಭವಿಸುವನು. ಆ ಮೇಲೆ ಆ ಭಗವಂತನನ್ನು ಪ್ರತೀಕದಲ್ಲಿ ಸ್ಥಾಪಿಸಿ ಭಕ್ತಿಯಿಂದ ಪೂಜಿಸಿದರೆ ಆತನ ಅನುಗ್ರಹವಾಗಲಿ--ನಿಗ್ರಹವಾಗಲಿ ಆಗಬಹುದು. ಹಾಗೆ ಮಾಡದೆ ಮಲಿನ ಭಾವರಾದ ನಾವು ಎಷ್ಟೋ ತಲೆಗಳಿಂದ ಶಿವನ ಪ್ರತಿಮೆಯನ್ನಾಗಲಿ, ಲಿಂಗವನ್ನಾಗಲಿ ಪೂಜಿಸುತ್ತ ಬಂದರೂ ಅದರಿಂದ ಪ್ರಯೋಜನವೇನು ಆಗಲಾರದು! ಅದೊಂದು ನಮ್ಮ ಹಲವು ಚಟಗಳಂತೆ ಸಮಾಧಾನಕ್ಕೆ ಅಥವಾ ಅಸಮಾಧಾನಕ್ಕೆ ಮಾತ್ರ ಕಾರಣವಾಗಬಹುದಲ್ಲದೆ, ಭಗವಾನ್ ಸದಾಶಿವನ ಅನುಗ್ರಹಕ್ಕಾಗಲಿ, ನಿಗ್ರಹಕ್ಕಾಗಲಿ ಕಾರಣವಾಗಲಾರದು. ಅತ್ತವರ ಕಣ್ಣು ಒರಿಸುವಂತೆ, ಕೇವಲ ಕರ್ಮಾಧೀನರಾದ ನಾವು ಉಪಚಾರಕ್ಕಾಗಿ ದೇವರನ್ನು ಪೂಜಿಸಿದರೂ, ನಮ್ಮ ಸುಖ–ದುಃಖ--ರೂಪಫಲಗಳಿಗೆ ಆ ಪರಮಾತ್ಮನ ತಂತ್ರತ್ವದಂತೆ ನಮ್ಮ ಕರ್ಮಗಳೇ ಕಾರಣವಾಗುವವಲ್ಲದೆ, ಆ ಈಶ್ವರನ ಅನುಗ್ರಹವಾಗಲಿ, ನಿಗ್ರಹವಾಗಲಿ ಕಾರಣವಾಗಲಾರವು! ಆದ್ದರಿಂದಲೇ "ಭ್ರಾಂತಿಯಲಿ ಕಲ್ಲು–ಕಟ್ಟಿಗೆಯ ನುತಿಸುತಿಪ್ಪನತ್ಯಂತ ಮೂರ್ಖನು ಕಾಣೊ" ಎಂದು ಜ್ಞಾನಿಗಳು ಅಂದಿರುವರು; ಆದ್ದರಿಂದ ನಾವು ಶುದ್ಧಭಾವವುಳ್ಳವರಾಗಿ ದೇವರನ್ನು ನಮ್ಮ ಹೃದಯದಲ್ಲಿ ವ್ಯಕ್ತಮಾಡಿಕೊಳ್ಳುವದು ಮೊದಲನೆಯ ಕೆಲಸವು. ಆ ಮೇಲೆ ಆತನ ಪೂಜೆಯಿಂದ ನಿಗ್ರಹಾನುಗ್ರಹಗಳನ್ನು ಸಂಪಾದಿಸುವದು ಎರಡನೆಯ ಕೆಲಸವು. ರಾವಣಾದಿ ಮಹಾಭಕ್ತರು ಪರಮೇಶ್ವರನನ್ನು ಪ್ರತ್ಯಕ್ಷಮಾಡಿಕೊಂಡಮೇಲೆ, ಅವರವರ ಅಧಿಕಾರದಂತೆ ಅವರವರಿಗೆ ನಿಗ್ರಹವಾಗಲಿ, ಅನುಗ್ರಹವಾಗಲಿ ಆಗಿರುವದು. ವಿವೇಕಶೀಲಾ, ಬಹಿರಂಗವನ್ನು ಅಂದರೆ ಹೊರಗಿನದನ್ನು ನೋಡುವ ಸಾರ್ವಭೌಮ ರಾಜನನ್ನಾಗಲಿ,

ಘನವಂತನನ್ನಾಗಲಿ ಒಲಿಸಿಕೊಳ್ಳಲಿಕ್ಕೆ ಸದ್ಭಾವಕ್ಕಿಂತ ಬಾಹ್ಯೋಪಚಾರಗಳಿಗೆ ಮಹತ್ವವಿರುವಂತೆ, ಅಂತರಂಗವನ್ನು ಅಂದರೆ ಸದ್ಭಾವ ಅಥವಾ ಸದ್ಭಕ್ತಿಯನ್ನು ನೋಡುವ ಪರಮಾತ್ಮನನ್ನು ಒಲಿಸಿಕೊಳ್ಳಲಿಕ್ಕೆ ಬಾಹ್ಯೋಪಚಾರಕ್ಕಿಂತ ಸದ್ಭಕ್ತಿಗೆ ಮಹತ್ವವಿರುವದು. ಭಗವಾನ್ ಸದಾಶಿವನಲ್ಲಿ ಸದ್ಭಕ್ತಿಯನ್ನು ತಾಳುವದೆಂದರೆ, ಆತನ ಸಲುವಾಗಿ ಆತನಿಂದ ಹೊರತಾದ ಎಲ್ಲ ವಸ್ತುಗಳಲ್ಲಿ ವೈರಾಗ್ಯತಾಳಿ ಆತನೇ ಗತಿಯೆಂದು ಆತನಿಗೆ ಶರಣು ಹೋಗುವದಾಗಿರುತ್ತದೆ. ಇಂಥ ಸದ್ಭಕ್ತರು ಪತ್ರವನ್ನಾಗಲಿ, ಪುಷ್ಪವನ್ನಾಗಲಿ, ಫಲವನ್ನಾಗಲಿ, ಉದಕವನ್ನಾಗಲಿ ಕೊಟ್ಟರೂ ಭಗವಂತನು ಅದನ್ನು ಸ್ವೀಕರಿಸಿ ಸಂತುಷ್ಟನಾಗುವನು. ಆದ್ದರಿಂದ ಸದ್ಭಾವವುಳ್ಳ ದರಿದ್ರರೂ, ಸಾರ್ವಭೌಮರಾಜರೂ ಭಗವಂತನಿಗೆ ಸರಿಯಾಗಿಯೇ ಪ್ರಿಯರಾಗಿರುವರು; ಯಾಕಂದರೆ ಅವರಿಬ್ಬರೂ ಸರ್ವಸಂಗಪರಿತ್ಯಾಗದಿಂದ ಕೇವಲ ಭಗವಂತನಿಗೆ ಶರಣುಹೋಗಿರುವದು ಭಗವಂತನ ಪ್ರಸನ್ನತೆಗೆ ಕಾರಣವಾಗಿರುವದಲ್ಲದೆ, ಅವರ ಸಿರಿವಂತಿಗೆಯಾಗಲಿ, ಬಡತನವಾಗಲಿ ಕಾರಣವಾಗಿರುವದಿಲ್ಲ. ಹೀಗೆ ಸರ್ವಸಂಗಪರಿತ್ಯಾಗಮಾಡಿ ಭಗವಂತನನ್ನು ಭಕ್ತಿಯಿಂದ ಒಲಿಸಿಕೊಂಡ ಸಾತ್ವಿಕಭಕ್ತನಿಗೆ ಸುಖದಾಯಕ ಸಾತ್ವಿಕಫಲವು, ರಾಜಸ ತಾಮಸ ಭಕ್ತರಿಗೆ ದುಃಖದಾಯಕ ರಾಜಸ-ತಾಮಸ ಫಲವು, ನಿರ್ಗುಣಭಕ್ತರಿಗೆ ಶಾಂತಿದಾಯಕ ಸಾಯುಜ್ಯ ಫಲವು ದೊರೆಯುವವು. ಆದ್ದರಿಂದ ವಿವೇಕಶೀಲಾ, ನಮ್ಮ ಶಿವೋಪಾಸನೆಯು ಫಲದಾಯಕವಾಗಬೇಕಾದರೆ, ನಾವು ಉಪಾಸನೆಮಾಡುವ ಅಧಿಕಾರವನ್ನು ಮೊದಲು ಸಂಪಾದಿಸಬೇಕು. ಈ ಅಧಿಕಾರವನ್ನು ನಮಗೆ ಒದಗಿಸಿಕೊಡುವ ಸಾಮರ್ಥ್ಯವು ಸದ್ಗುರುವಿನಲ್ಲಿಮಾತ್ರ ಇರುವದು. ಭಗವಾನ್ ಸದಾಶಿವನೇ ಬೇಡಿದ್ದನ್ನು ಕೊಡಲಿಕ್ಕೆ ದೇವರೂಪದಿಂದಲೂ, ಬೇಡದ ಹಾಗೆ ಮಾಡಲಿಕ್ಕೆ, ಅಥವಾ ತಕ್ಕದ್ದನ್ನು ಬೇಡುವಂತೆ ಮಾಡಲಿಕ್ಕೆ ಸದ್ಗುರು ರೂಪದಿಂದಲೂ ಪ್ರಕಟವಾಗಿರುವನೆಂದು ತಿಳಿದುಕೋ; ಆದ್ದರಿಂದ ಪರಮಾತ್ಮನ ಉಪಾಸನೆಯಿಂದ ಹಿತವಾಗಬೇಕೆಂದು ನೀನು ಇಚ್ಛಿಸುತ್ತಿದ್ದರೆ, ಮೊದಲು ಸದ್ಗುರುವಿಗೆ ಶರಣು ಹೋಗಬೇಕು. ಹಾಗೆ ಮಾಡದೆ ಕರ್ಮದಿಂದ ಬೇಕಾದದ್ದನ್ನು ಸಂಪಾದಿಸುತ್ತಾಗಲಿ, ಭಕ್ತಿಯ ಬಲದಿಂದ ದೇವರನ್ನು ಒಲಿಸಿಕೊಂಡು ತನ್ನ ಮನಸ್ಸಿಗೆ ಬಂದದ್ದನ್ನು ಬೇಡುತ್ತಾಗಲಿ ಹೋದರೆ, ಈ ಸಂಪಾದಿಸುವ ಹಾಗು ಬೇಡಕೊಡುವ ವ್ಯವಹಾರವು ಎಂದಿಗೂ ಮುಗಿಯದೆ ಹೋಗಿ, ನಿರಂತರವಾಗಿ ಆಯಾಸಪಡಬೇಕಾಗುವದು; ಆದ್ದರಿಂದ ಈ ಕೊಡಕೊಳ್ಳುವ ವ್ಯವಹಾರವನ್ನು ಹಿತಕರವಾಗಿ ಮಾಡುವದಕ್ಕಾಗಿ ನಾವು ಸದ್ಗುರು-ರೂಪ ದಲಾಲನಿಗೆ ಶರಣುಹೋಗತಕ್ಕದ್ದು. ಈ ಸದ್ಗುರು ರೂಪ ದಲಾಲನಿಗೆ ನಮ್ಮ ಗುರುತೂ, ದೇವರ ಗುರುತೂ ಇರುವದರಿಂದ, ಈ ನಿಸ್ಪೃಹಿಯಾದ ದಲಾಲನು ಶಿಷ್ಯನಿಂದ ಗ್ರಹಿಸಿದ ಸೇವಾರೂಪ ದಲಾಲಿಯನ್ನು ಸರ್ವಾಧಾರನಾದ ಪರಮಾತ್ಮನಿಗೆ ಕೊಟ್ಟುಬಿಟ್ಟು, ಶಿಷ್ಯೋದ್ಧಾರ ರೂಪ ಫಲದಿಂದ ತಾನು ಸಂತುಷ್ಟನಾಗುವನು; ಆದ್ದರಿಂದ ಪರಮಾತ್ಮನಾದ ಭಗವಾನ್ ಸದಾಶಿವನ ಸತ್ಯಸ್ವರೂಪವನ್ನರಿತುಕೊಂಡು, ಆತನಿಂದ ಹಿತವಾದದ್ದನ್ನು ಸಂಪಾದಿಸಬೇಕೆಂದಾಗಲಿ, ಆತನನ್ನೇ ಹೊಂದಬೇಕೆಂದಾಗಲಿ ಇಚ್ಛಿಸುವ ಮುಮುಕ್ಷುಗಳು, ಸದ್ಗುರುವಿಗೆ ಶರಣು

ಹೋಗತಕ್ಕದ್ದು; ಹೀಗೆ ಸದ್ಗುರುವಿಗೆ ಶರಣು ಹೋಗುವದೇ ಅಧಿಕಾರಪ್ರಾಪ್ತಿಯ ಲಕ್ಷಣವಾಗಿರುವದು.

ವಿವೇಕಶೀಲಾ, ಹೀಗೆ ಸದ್ಗುರುವಿಗೆ ಶರಣುಹೋದ ಅಧಿಕಾರಿಗಳ ಭೇದಗಳನ್ನು ಕುರಿತು ಜ್ಞಾನಿವರ್ಯರಾದ ನಿಜಗುಣಿ-ಶಿವಯೋಗಿಗಳು ತಮ್ಮ ವಿವೇಕಚಿಂತಾಮಣಿಯೆಂಬ ಗ್ರಂಥದಲ್ಲಿ ಹೇಳಿದ್ದನ್ನು ನಿನಗೆ ಹೇಳುವೆನು ಕೇಳು. ಆ ಶಿವಯೋಗಿ ವರ್ಯರು ಅನ್ನುವದೇನಂದರೆ—ಕರ್ಮಕಾಂಡಿ, ಭಕ್ತಿಕಾಂಡಿ, ಜ್ಞಾನಕಾಂಡಿ ಎಂಬ ಮೂವರಧಿಕಾರಿಗಳಿರುವರು. ಅವರಲ್ಲಿ ದೇಹ, ಗೃಹಕೃತ್ಯಾದಿಗಳಲ್ಲಿ ಕ್ರಮದಿಂದ ನಾನು, ನನ್ನದೆಂಬ ಅಹಂಕಾರ-ಮಮಕಾರಗಳುಳ್ಳಾತನೇ ಕರ್ಮಕಾಂಡಿಯೆನಿಸುವನು; ಸಕಲಕರ್ಮಗಳನ್ನು ಈಶ್ವರಾರ್ಪಣಮಾಡುವವನೇ ಭಕ್ತಿಕಾಂಡಿಯೆನಿಸುವನು; ಸರ್ವಕರ್ಮಸಾಕ್ಷಿಕನು ತಾನೆಂಬಾತನೇ ಜ್ಞಾನಕಾಂಡಿಯಾಗುವನು. ವಿವೇಕಶೀಲಾ, ಹೀಗೆ ಶಿವಯೋಗಿವರ್ಯರು ಸಾಧನಗಳ ಸಂಬಂಧದಿಂದ ಅಧಿಕಾರಿಗಳಲ್ಲಿ ಮೂರು ವರ್ಗಗಳನ್ನು ಮಾಡಿರುವರಲ್ಲದೆ, ಅಧಿಕಾರಿಯ ಸ್ಥಿತಿಭೇದದಿಂದ ಅಧಿಕಾರಿಗಳಲ್ಲಿ ಐದು ಭೇದಗಳಿರುವವೆಂದು ಹೇಳಿರುವರು; ಅವು—ಕರ್ಮಿ, ಮುಮುಕ್ಷು, ಅಭ್ಯಾಸಿ, ಅನುಭವಿ, ಆರೂಢ ಎಂಬವು. ಮೂಢತನದಿಂದ ತನ್ನ ಜಾತಿಮಾತ್ರದ ಕರ್ಮವನ್ನು ಹಿಡಿದು ನೂರುಜನ್ಮದಲ್ಲಿ ಮುಕ್ತನಾಗುವವನೇ ಕರ್ಮಿಯು; ಜಗತ್ಸತ್ಯವೆಂದು ತಿಳಿದು ಬಾಹ್ಯಕರ್ಮನಿಷ್ಠನಾಗಿ ಮೂರು ಜನ್ಮಗಳಲ್ಲಿ ಮುಕ್ತನಾಗುವವನೇ ಮುಮುಕ್ಷುವು; ಸ್ವಪ್ನದಂತೆ ಪ್ರಪಂಚವೆಲ್ಲವೂ ಮಿಥ್ಯವೆಂದು ತಿಳಿದು ಅಭ್ಯಂತರದಲ್ಲಿ ಧ್ಯಾನಾದಿ ಕರ್ಮಯುಕ್ತನಾಗಿ ಎರಡು ಜನ್ಮಗಳಲ್ಲಿ ಮುಕ್ತನಾಗುವವನೇ ಅಭ್ಯಾಸಿಯು; ವ್ಯವಹಾರವೆಲ್ಲವನ್ನೂ ಉಪೇಕ್ಷಿಸಿ ವಿವೇಕತತ್ಪರನಾಗಿ ಒಂದು ಜನ್ಮದಲ್ಲಿ ಮುಕ್ತನಾಗುವವನೇ ಅನುಭವಿಯೆನಿಸುವನು; ವಿಶ್ವವಿಕೃತಿತೊರೆದು ತತ್ವಜ್ಞಾನದಿಂದ ಸದ್ಯೋಮುಕ್ತನಾಗುವವನೇ ಆರೂಢನು. ವಿವೇಕಶೀಲಾ, ಈ ಯೋಗಿವರ್ಯರು ಹೇಳಿರುವ ಈ ಆನಂದಕಾರಕ ಪರಂಪರೆಯನ್ನು ನೋಡಿದೆಯಾ! ಆ ಮಹಾತ್ಮರು ಮತ್ತೆ ಅಧಿಕಾರಿಗಳಲ್ಲಿ—ವಿವೇಕ, ವಿರಕ್ತಿ, ದೈವಗತಿಗಳಿಂದ ಮುಕ್ತರಾಗುವ ಮೂವರು ಅಧಿಕಾರಿಗಳನ್ನು ಹೇಳಿರುವರು ಕೇಳು. ವಿವೇಕಶೀಲಾ, ಜ್ಞಾನಿಗಳ ಸದ್ಬೋಧದಹೊರತು ಹೆಚ್ಚಿನ ಆನಂದದಾಯಕವಿಷಯವು ಯಾವದಿರುವದು ಹೇಳು? ಇರಲಿ, ನಾನು ಹೇಳುವದರಕಡೆಗೆ ಲಕ್ಷ್ಯವಿಡು. ಜಗತ್ತೆಂಬ ಕಮಲದ ಬಳ್ಳಿಯ ಮೂಲವಾವುದೆಂಬ ವಿಚಾರಮುಖದಿಂದ ಶ್ರೀಗುರುವನ್ನು ಹೊಂದಿ ಬ್ರಹ್ಮಜ್ಞಾನಿಯಾಗಿ ಮೋಕ್ಷವನ್ನು ಪಡೆಯುವಾತನು ವಿವೇಕಿಯಾದ ಒಂದನೆಯ ಅಧಿಕಾರಿಯು; ದೇಹಾದಿಗಳ ನಶ್ವರತ್ವವನ್ನು ಕಂಡು ಭೋಗಾಪೇಕ್ಷೆತೊರೆದು ಶ್ರೀಗುರುವನ್ನು ಹೊಂದಿ ತತ್ವಜ್ಞಾನಿಯಾಗಿ ಮೋಕ್ಷವನ್ನು ಪಡೆಯುವಾತನು ವಿರಕ್ತನಾದ ಎರಡನೆಯ ಅಧಿಕಾರಿಯು; ಒಬ್ಬಾನೊಬ್ಬ ಶ್ರೀಗುರುವು ತನ್ನ ಶಿಷ್ಯನಿಗೆ ಉಪದೇಶಮಾಡುವದನ್ನು ಕೇಳಿದ ಮಾತ್ರಕ್ಕೆ ಅಕಸ್ಮಾತ್ ಜ್ಞಾನಿಯಾಗಿ ನಿರ್ವಾಣವನ್ನು ಪಡೆಯುವವನು ದೈವಶಾಲಿಯಾದ ಮೂರನೆಯ ಅಧಿಕಾರಿಯು! ವಿವೇಕಶೀಲಾ, ಹೀಗೆ ಅಧಿಕಾರಿಗಳ ಪ್ರಭೇದವಿರುವದನ್ನು ತಿಳಿದು, ಶ್ರೀ ಸದ್ಗುರುಕೃಪೆಯಿಂದ ಈ ಅಧಿಕಾರಿಗಳ ತಾರತಮ್ಯವರಿತು ನೀನು ಉತ್ತಮಾಧಿಕಾರವನ್ನು ಪಡೆದು ಧನ್ಯನಾಗತಕ್ಕದ್ದು.

ಕಾರಿಯೂ, ಕ್ಷೋಭರಹಿತನೂ, ಜಿತೇಂದ್ರಿಯನೂ, ನಿರ್ಮಲಾಚರಣೆಯುಳ್ಳವನೂ, ಪ್ರತಿಗ್ರಹಕ್ಕೆ ಹೇಸುವವನೂ, ವಿರಕ್ತನೂ, ಧಾರ್ಮಿಕನೂ, ನನ್ನ ಧ್ಯಾನನಿರತನೂ, ಬ್ರಹ್ಮಚಿಂತನ ತತ್ಪರನೂ, ವಿವೇಕಿಯೂ, ಕ್ಷುಧಾ-ತೃಷಾ-ಶೋಕ-ಮೋಹ-ಜರಾ-ಮೃತ್ಯುಗಳೆಂಬ ಷಡ್ವಿಕಾರಗಳನ್ನು ಜಯಿಸಿದವನೂ, ಉಪದೇಶ ಮಾಡುವಲ್ಲಿ ದಕ್ಷನೂ, ತಾನು ಮಾನಾಪೇಕ್ಷಿಯಾಗಿರದೆ ಅನ್ಯರ ಮನ್ನಣೆಯಲ್ಲಿ ದಕ್ಷನೂ, ಅನ್ಯರನ್ನು ಮೋಸಗೊಳಿಸದವನೂ, ಭೂತದಯಾ ದಕ್ಷನೂ ಇರುವನು. ಭಗವದ್ಧ್ಯಾನದಲ್ಲಿ ಚಾಂಚಲ್ಯವುಂಟಾಗುವದಾಗಿ ಕಂಡಲ್ಲಿ ಆತನು ಶ್ರುತಿ ಪ್ರಣೀತ ಧರ್ಮಗಳನ್ನೂ ತ್ಯಜಿಸುವನು. ಉದ್ಧವಾ, ನನ್ನ ನಿರ್ಗುಣ-ನಿರ್ವಿಕಾರ-ಸರ್ವವ್ಯಾಪಕ ಸ್ವರೂಪದ ಜ್ಞಾನವು ಆಗಲಿ, ಆಗದಿರಲಿ, ನನ್ನಲ್ಲಿ ಅನನ್ಯಭಾವದಿಂದ ಭಕ್ತಿಯನ್ನಿಡುವದು ಸಾಧುವಿನ ಮುಖ್ಯ ಲಕ್ಷಣವಾಗಿರುವದು. ಆತ್ಮದೃಷ್ಟಿಯಿಂದ ಚರಾಚರ ವಿಶ್ವದೊಳಗಿನ ಸರ್ವ ಪದಾರ್ಥಗಳ ವಿಷಯವಾಗಿ ಸಮಭಾವವನ್ನು ವಹಿಸುವ ಸದ್ಗುರುವು ಪಂಡಿತನೆನಿಸುವನು. ಬ್ರಾಹ್ಮಣಾದಿಕ ಉಚ್ಚವರ್ಣದ ವಿಷಯವಾಗಿ, ಚಾಂಡಾಲಾದಿಕ ನೀಚವರ್ಣದ ವಿಷಯವಾಗಿ, ಬ್ರಹ್ಮಸ್ವಹರಣದ ತಸ್ಕರನ ವಿಷಯವಾಗಿ, ಬ್ರಾಹ್ಮಣಪೂಜಕ ಸತ್ಪುರುಷರ ವಿಷಯವಾಗಿ, ತೇಜೋನಿಧಿ ಸೂರ್ಯನ ವಿಷಯವಾಗಿ, ಕ್ಷುದ್ರತೇಜದ ಕೀಟಕದ ವಿಷಯವಾಗಿ, ಶಾಂತರಾದ ಮಹಾತ್ಮರ ವಿಷಯವಾಗಿ, ಪರಪೀಡಾಮಗ್ನರಾದ ಖಲರ ವಿಷಯವಾಗಿ ಪಂಡಿತರು ಸಮಾನ ಬುದ್ಧಿಯನ್ನು ಧರಿಸಿರುವರು; ಯಾಕೆಂದರೆ, ಆತ್ಮನಿಷ್ಠರಾದ ಅವರ ಮನಸ್ಸಿನಲ್ಲಿ ದ್ವಿಧಾಭಾವವು ಸರ್ವಥಾ ಬರುವದಿಲ್ಲ. ಉದ್ಧವಾ, ಯಾವತ್ತು ಮನುಷ್ಯರು, ಕಿಂಬಹುನಾ ಸರ್ವಪ್ರಾಣಿಗಳು ಪರಮೇಶ್ವರರೂಪವಿರುವವೆಂದು ಭಾವಿಸುತ್ತಿರುವದರಿಂದ ಅವರ ಸ್ಪರ್ಧೆಯು, ಅಂದರೆ ಸಮಾನಸ್ಕಂಧ ವ್ಯಕ್ತಿಯ ವಿಷಯದ ಹೊಟ್ಟೆಕಿಚ್ಚು; ಹಾಗು ಅಸೂಯೆ, ಅಂದರೆ ತನಗಿಂತ ಹೆಚ್ಚಿನವರ ಸಂಬಂಧದ ಹೊಟ್ಟೆಯಕಿಚ್ಚು; ಅದರಂತೆ ತಿರಸ್ಕಾರ, ಅಂದರೆ ಹೀನ ವ್ಯಕ್ತಿಗಳ ಸಂಬಂಧದ ದ್ವೇಷಬುದ್ಧಿಯು; ಅಹಂಕಾರ, ಅಂದರೆ ತನ್ನ ವಿಷಯದ ಅಭಿಮಾನವು ಇವೆಲ್ಲ ದೋಷಗಳು ದೂರವಾಗಿರುವವು. ವಿವೇಕಶೀಲಾ, ಸದ್ಗುರುವಿನ ಲಕ್ಷಣವ ಕುರಿತು ಮಹಾತ್ಮರಾದ ನಿಜಗುಣ ಶಿವಯೋಗಿಗಳು ತಮ್ಮ ವಿವೇಕಚಿಂತಾಮಣಿಯಲ್ಲಿ ಸ್ವಲ್ಪದರಲ್ಲಿ ಸುಂದರವಾಗಿ ಹೇಳಿದ್ದನ್ನು ನಿನಗೆ ಹೇಳುವೆನು ಕೇಳು. ಅವರು ಹೇಳುವದೇನಂದರೆ—"ವಿಧಿವದಧೀತ ವೇದಾಂತನಿಷ್ಠಾಪರನಾಗಿ ಶರಣಾಗತನಾದ ಶಿಷ್ಯನಿಗೆ ಮರಳಿ ಸಂಶಯವು ಅಂಕುರಿಸದಂತೆ ತತ್ತ್ವೋಪದೇಶವನ್ನು ಮಾಡಿ ಅಜ್ಞಾನವನ್ನು ಪರಿಹರಿಸುವವನೇ ಸದ್ಗುರುವು."

ಗುರುವು ಸಾಧಕರಾದ ಶಿಷ್ಯರ ಅಧಿಕಾರ ಭೇದದಿಂದ—೧ಬೋಧಕಗುರು, ೨ವೇದಕಗುರು, ೩ ನಿಷಿದ್ಧಗುರು, ೪ ಕಾಮ್ಯಗುರು, ೫ ಸೂಚಕಗುರು, ೬ ವಾಚಕಗುರು, ೭ ಕಾರಣಗುರು, ೮ ವಿಹಿತಗುರು ಎಂದು ಎಂಟು ವಿಧವಾಗಿರುವನೆಂದು ಶಿವಯೋಗಿಗಳು ಹೇಳಿರುವರು. ಶಾಸ್ತ್ರ-ಶಬ್ದಾರ್ಥಗಳನ್ನೇ ಬೋಧಿಸುವಾತನು ಬೋಧಕ ಗುರುವು; ತತ್ತ್ವಪ್ರವರ್ತಕನೇ ವೇದಕಗುರುವು; ವಶ್ಯಾ-ರಕ್ಷಣಾದಿಗಳಿಂದ ಇಹಲೋಕದಲ್ಲಿ ಸುಖವನ್ನು

ಪರಲೋಕದಲ್ಲಿ ದುಃಖವನ್ನೂ ಕೊಡುವಾತನೇ ನಿಷಿದ್ಧಗುರುವು; ಪುಣ್ಯಕರ್ಮೋಪದೇಶ ದಿಂದ ಇಹ ಪರಗಳಲ್ಲಿ ಸುಖ ಕೊಡುವವನೇ ಕಾಮ್ಯಗುರುವು; ವಿವೇಕವುಳ್ಳದಿಂದ ಶಮದಮಾದಿ ಷಡ್ಗುಣಗಳನ್ನು ಕೊಡುವವನೇ ಸೂಚಕ ಗುರುವು; ವಿಷಯಗಳ ಮಿಥ್ಯಾತ್ವದರ್ಶನದಿಂದ ಆತ್ಮಾನುರಾಗವನ್ನುಂಟುಮಾಡುವವನೇ ವಾಚಕ ಗುರುವು; ಶಿವಜೀವೈಕ್ಯಜ್ಞಾನಪ್ರದನೇ ಕಾರಣಗುರುವು; ಸಂಶಯ ನಿರಸನ ದ್ವಾರದಿಂದ ನಿತ್ಯ ಮುಕ್ತಿಯನ್ನು ಕೊಡುವವನೇ ವಿಹಿತಗುರುವು. ವಿವೇಕಶೀಲಾ, ನೋಡಿದೆಯಾ ಮಹಾತ್ಮರು ತೋರಿಸಿರುವ ಈ ಸುವ್ಯವಸ್ಥಿತವಾದ ಗುರುಪರಂಪರೆಯನ್ನು! ಗುರುವಿನ ಈ ಎಂಟು ಲಕ್ಷಣಗಳನ್ನು ನೋಡಿ ತನಗೆ ಬೇಕಾದ ಗುರುವಿಗೆ ಶರಣು ಹೋಗಬೇಕೆಂಬ ನೀಗದ ಕೆಲಸಕ್ಕೆ ಸಾಧಕನು ಕೈಹಾಕದೆ, ತಾನು ಉದ್ಧೃತನಾಗಬೇಕೆಂಬ ಉತ್ಕಟೇಚ್ಛೆಯಿಂದ ಸದಾಚಾರಸಂಪನ್ನನೂ, ಈಶ್ವರನಿಷ್ಠನೂ ಆಗಿ ಶ್ರೀಗುರುವಿನ ಹಾದಿಯನ್ನು ನೋಡಿದರೆ ಆ ಕರುಣಾಳುವು ತಾನೇ ಬರಬಹುದು; ಅಥವಾ ಸ್ಪೃಹಿಗಳಿಗಿಂತ ಮುಖ್ಯವಾಗಿ ನಿಸ್ಪೃಹಿಗಳು ಶರಣು ಹೋಗುವ ಗುರುತನ್ನುನೋಡಿ, ಆ ಗುರುತು ಉಳ್ಳ ಮಹಾತ್ಮನಿಗೆ ಶರಣು ಹೋಗಿ ಆತನನ್ನು ಸೇವಿಸಲೂ ಬರಬಹುದು. ಒಟ್ಟಿಗೆ, ಸದ್ಗುರು-ಪ್ರಾಪ್ತಿಯು ಪುಣ್ಯಶಾಲಿಗೆ ಈಶ್ವರ ಕೃಪೆಯಿಂದಾಗತಕ್ಕದ್ದೇಸರಿ!

ವಿವೇಕಶೀಲಾ, ಸದ್ಗುರುವಿಗೆ ಶರಣು ಹೋಗುವದರ ಮಹತ್ವವನ್ನು ಇಷ್ಟೆಂದು ಹೇಳಲಾಸಲ್ಲ. ಈ ಸಂಬಂಧದಿಂದ ಭಾಗವತದ ದಶಮಸ್ಕಂಧದ ವೇದಸ್ತುತಿಯ ಪ್ರಕರಣದಲ್ಲಿ ಹೇಳಿದ್ದೇನಂದರೆ—ಪರಮೇಶ್ವರನಲ್ಲಿ ದೃಢಭಕ್ತಿಯು ಉತ್ಪನ್ನವಾಗುವದಕ್ಕಾಗಿ ಮೊದಲು ಮನೋನಿಗ್ರಹ ಮಾಡುವದು ಅವಶ್ಯವಾಗಿರುವದು. ಒಂದು ವೇಳೆ ನಾವು ಇಂದ್ರಿಯಗಳನ್ನು ಜಯಿಸಬಹುದು, ಅಥವಾ ನಮಗೆ ಪ್ರಾಣಾದಿಗಳ ನಿರೋಧ ಮಾಡಲಿಕ್ಕೂ ಬರಬಹುದು; ಆದರೆ ಮನೋನಿಗ್ರಹ ಮಾಡುವದು ಕಠಿಣವಾಗಿರುವದು. ದೊಡ್ಡ ದೊಡ್ಡ ಯೋಗಿಗಳು ಇಂದ್ರಿಯಗಳ ಹಾಗು ಪ್ರಾಣಗಳ ನಿಯಮನ ಮಾಡಲು ಸಮರ್ಥರಿರುವರು; ಆದರೆ ಅವರಿಗೆ ಮನಸ್ಸನ್ನು ಜಯಿಸಲಿಕ್ಕೆ ಬಾರದ್ದರಿಂದ ಅವರ ಇಂದ್ರಿಯಜಯ ಪ್ರಾಣನಿರೋಧಗಳು ವ್ಯರ್ಥವಾಗಿ, ಮನಸ್ಸಿನ ಆಧಿಪತ್ಯದಿಂದ ಅವರು ಆತ್ಮಸುಖಕ್ಕೆ ಎರವಾಗುವರು! ಆದ್ದರಿಂದ ಮನೋನಿಗ್ರಹ ಮಾಡದೆ ಭಗವದ್ಭಕ್ತಿಯು ಸಾಧ್ಯವಾಗಲಾರದು. ಮನೋರೂಪ ವೇಗಶಾಲಿ ಅಶ್ವಗಳನ್ನು ಜಗ್ಗಿ ಹಿಡಿಯುವದಕ್ಕಾಗಿ ಸದ್ಗುರುವನ್ನೇ ಆಶ್ರಯಿಸಬೇಕಾಗುವದು. ಎರಡನೆಯ ಉಪಾಯಗಳಿಂದ ಮನೋನಿಗ್ರಹ ಮಾಡಹೋದರೆ ಕ್ಲೇಶಮಾತ್ರ ಉಂಟಾಗುವದಲ್ಲದೆ, ಹಲವು ವಿಘ್ನಗಳುಂಟಾಗಿ ಪೂರ್ಣ ನಿರಾಶೆಪಡಬೇಕಾಗುವದು. ಸಮುದ್ರದ ನೌಕೆಯಲ್ಲಿ ಸರ್ವಸಾಮಗ್ರಿಗಳಿದ್ದು, ಕರ್ಣಧಾರನೊಬ್ಬನು ಇಲ್ಲದಿದ್ದರೆ ವ್ಯಾಪಾರಸ್ಥರ ಗತಿಯಾಗುವಂತೆ, ಭಗವದ್ಭಕ್ತಿಯ ಅನ್ಯ ಸಾಧನಗಳೆಲ್ಲ ಅನುಕೂಲವಿದ್ದು, ಸದ್ಗುರುವು ಒಬ್ಬನಿಲ್ಲದಿದ್ದರೆ ಸಾಧಕನ ಗತಿಯಾಗುವದು. ಸಾಧಕನಿಗೆ ಸದ್ಗುರು ಪ್ರಾಪ್ತಿಯಾಗಿ ಅಖಂಡ ಭಕ್ತಿಯೋಗವು ಕೈಸೇರಿದಮೇಲೆ ಪರಮೇಶ್ವರನ ಬ್ರಹ್ಮತತ್ವದ ಜ್ಞಾನವಾಗಿ ಅವನ ಮಾಯಾಮೋಹವು

ಸಮೂಲ ನಷ್ಟವಾಗುವದು. ಅಂಥವನು ಭಗವಂತನ ಪೂರ್ಣ ಆನಂದರೂಪದಲ್ಲಿ ನಿಮಗ್ನನಾದನೆಂದರೆ, ಸ್ತ್ರೀ, ಪುತ್ರ, ದೇಹ, ಆಪ್ತ, ಸುಹೃದ, ಧನ, ಭೂಮಿ, ಪ್ರಾಣ ಮೊದಲಾದ ಇಂದ್ರಿಯ ತೃಪ್ತಿಯ ವಿಷಯಗಳು ಅವನಿಗೆ ತೀರ ತುಚ್ಛವಾಗಿ ತೋರು ವವು. ಹಾಗೆ ಮಾಡದವನು ಭೋಗಾಸಕ್ತನಾಗಿ ಹೆಚ್ಚು ಹೆಚ್ಚು ವಿಪತ್ತಿಗೊಳ ಗಾಗುವನು.

ವಿವೇಕಶೀಲಾ, ಐಹಿಕವಿಷಯಗಳಮೇಲಿನ ಆಸಕ್ತಿಯನ್ನು ದೂರಮಾಡಲಿಕ್ಕೆ ಸದ್ಗುರುವಿನ ಆಶ್ರಯದಂಥ ಎರಡನೆಯ ಸಾಧನವಿಲ್ಲ. ಸದ್ಗುರುವಿನ ಆಶ್ರಯ ಮಾಡಿದ ವನಿಗೆ ಪರಮೇಶ್ವರನು ವಶವಾಗುವಂತೆ, ಅಷ್ಟಾಂಗಯೋಗ, ತತ್ವವಿಚಾರ, ಅಹಿಂಸಾ ದಿಕ ಧರ್ಮಗಳು, ವೇದಾಭ್ಯಾಸ, ಕೃಚ್ಛ್ರ-ಚಾಂದ್ರಾಯಣಾದಿ ತಪಸ್ಸು, ಸನ್ಯಾಸ, ಅಗ್ನಿಹೋತ್ರಾದಿ ಇಷ್ಟಕರ್ಮಗಳು, ವಾಪಿ-ಕೂಪಾದಿ ಪೂರ್ತಕರ್ಮಗಳು, ಉಪವಾ ಸಾದಿ ವ್ರತಗಳು, ದೇವತಾರ್ಚನ, ಜಪಜಾಪ್ಯ, ತೀರ್ಥಯಾತ್ರಾ, ಯಮನಿಯಮಾದಿ ಗಳು ಇತ್ಯಾದಿಗಳ ಯೋಗದಿಂದ ಆತನು ವಶವಾಗುವದಿಲ್ಲ. ಕೇವಲ ಸತ್ಸಂಗದಿಂದ ದೈತ್ಯರು, ರಾಕ್ಷಸರು, ಮೃಗಗಳು, ಪಕ್ಷಿಗಳು, ಗಂಧರ್ವರು, ಅಪ್ಸರರು, ನಾಗರು, ಸಿದ್ಧರು, ಚಾರಣರು, ಗುಹ್ಯಕರು, ವಿದ್ಯಾಧರರು, ಅದರಂತೆ ಮನುಷ್ಯರೊಳಗಿನ ವೈಶ್ಯರು, ಶೂದ್ರರು, ಸ್ತ್ರೀಯರು, ಅಂತ್ಯಜರು ಇವರೆಲ್ಲರು ರಾಜಸ-ತಾಮಸ ಪ್ರಕೃತಿ ಯುವರಿದ್ದರೂ ಬೇರೆ ಬೇರೆ ಯುಗಗಳಲ್ಲಿ ಪರಮೇಶ್ವರನನ್ನು ಹೊಂದಿರುವರು. ವಿವೇಕ ಶೀಲಾ, ದೇಹಾಭಿಮಾನವಿರುವತನಕ ಪ್ರವೃತ್ತಿ-ನಿವೃತ್ತಿ ಮುಂತಾದ ಕರ್ಮಗಳು; ದೇಹಾ ಭಿಮಾನವನ್ನು ಬಿಟ್ಟು ಭಗವಾನ್ ಸದಾಶಿವನನ್ನೇ ಶರಣುಹೋಗುವವರು ಕರ್ಮತ್ಯಾಗ ಮಾಡುವದೇ ಸರಿ! ಆದ್ದರಿಂದ ಸಾಧಕನಾದವನು ಸದ್ಗುರುವಿನ ಆಶ್ರಯಮಾಡಿ ಸಾವಧಾ ನಚಿತ್ತದಿಂದ ನಡೆದು ಇಂದ್ರಿಯಗಳ ಆಕಲನಮಾಡಿ ಸದ್ಗುರುವಿನ ದೃಢವಾದ ಉಪಾಸನೆ ಯಿಂದ ಆತನ ಅನುಗ್ರಹಪಡೆದು, ಆ ಅನುಗ್ರಹದಿಂದ ಪರಮೇಶ್ವರ-ವಿಷಯಕ ಅದ್ವೈತ ಜ್ಞಾನವನ್ನು ಸಂಪಾದಿಸಬೇಕು. ಆಮೇಲೆ ಆ ಅದ್ವೈತಜ್ಞಾನರೂಪ ತೀಕ್ಷ್ಣಖಡ್ಗದಿಂದ ತ್ರಿಗುಣಾತ್ಮಕ ಲಿಂಗಶರೀರವನ್ನು ಛೇದಿಸಿ, ಕೃತಾರ್ಥನಾಗಬೇಕು.

ಸದಾಸತ್ಸಂಗದಲ್ಲಿರುವದರ ಅವಶ್ಯಕತೆ:—ವಿವೇಕಶೀಲಾ, ಸದ್ಗುರು ಪ್ರಾಪ್ತಿಯಿಂದ ಮೇಲೆ ಹೇಳಿದ ಪ್ರಯೋಜನಗಳಾಗುವದು ನಿಜವು; ಆದರೆ ಇಷ್ಟರಿಂದಲೇ ಮುಗಿಯುವದೆಂದು ಮಾತ್ರ ತಿಳಿಯಲಾಗದು; ಯಾಕಂದರೆ ಗುರೂಪದೇಶದಿಂದ ಪ್ರಾಪ್ತ ನಾದ ವಿವೇಕಬುದ್ಧಿಯು ಸುಸ್ಥಿರವಾಗಿರದಿದ್ದತೆ, ಪುನಃ ಮನಸ್ಸು ಚಂಚಲವಾಗಿ ಮನು ಷ್ಯನು ಪೂರ್ವಸ್ಥಿತಿಗೆ ಬಂದಾನೆಂಬದರ ಎಚ್ಚರವಿರುವದು ಅವಶ್ಯವು. ವಿವೇಕಬುದ್ಧಿಯು ಸ್ಥಿರವಾಗುವದಕ್ಕಾಗಿ ಸತ್ಸಮಾಗಮವು ನಿತ್ಯದಲ್ಲಿ ಒದಗಲೇಬೇಕು. ದೊಡ್ಡದೊಡ್ಡ ಋಷಿ ಗಳೂ ಇದೇ ಮಾರ್ಗವನ್ನೇ ಅನುಸರಿಸುವರು; ಅವರು ಘನತರವಾದ ಯೋಗ್ಯತೆಯುಳ್ಳ ವರಾಗಿದ್ದರೂ, ಮನಸ್ಸು ಚಂಚಲವಾದದ್ದರಿಂದ ಅದು ಯಾವಾಗ ಕೆಟ್ಟೀತೆಂಬದರ ನಂಬಿಗೆ ಯಿಲ್ಲದೆ ಪೃಥ್ವಿಯಲ್ಲಿರುವ ಅನೇಕ ಪುಣ್ಯತೀರ್ಥಗಳ, ಹಾಗು ದೇವಾಲಯಗಳ ಆಶ್ರಯ

ಮಾಡಿ ಸತ್ಸಮಾಗಮಪಡೆಯುವರು. ವಿವೇಕಶೀಲಾ, ಸದ್ಗುರುಕೃಪೆಯಿಂದಲೂ, ಸತ್ಸಮಾಗಮದಿಂದಲೂ ಪರಮೇಶ್ವರನ ಧ್ಯಾನ-ಮನನ-ನಿದಿಧ್ಯಾಸಗಳಲ್ಲಿ ಯಾವಾಗಲೂ ರಮಮಾಣನಾಗಿರುವವನು ಗೃಹಸೌಖ್ಯವನ್ನು ಎಂದೂ ಸೇವಿಸಲಾರನು. ವಿವೇಕ, ಸ್ಥೈರ್ಯ, ಧೈರ್ಯ, ಕ್ಷಮಾ, ದಯಾ, ಶಾಂತಿ ಮೊದಲಾದ ಸದ್ಗುಣಗಳನ್ನು ಸಂಪಾದಿಸಿ, ಯಾವತ್ತು ವಸುಧೆಯು—ಕಿಂಬಹುನಾ ಯಾವತ್ತು ವಿಶ್ವದ ಕಲ್ಯಾಣಮಾಡುವದು ತನ್ನ ಕರ್ತವ್ಯವೆಂದು ತಿಳಿದು, ಬ್ರಹ್ಮಚಿಂತನಮಾಡುವ ಆ ಪುರುಷನು ಸದ್ಗುಣಗಳ ಲೋಪಮಾಡುವ ಪ್ರಪಂಚದಲ್ಲಿ ಬೀಳುವದಿಲ್ಲವು.

---

## ಜ್ಞಾನಪ್ರದೀಪಕಿರಣ,

ಅನೆಯದು.

---

## ಸಾಧಕನ ಅಥವಾ ಮುಮುಕ್ಷುವಿನ ಕರ್ತವ್ಯ.



ವಿವೇಕಶೀಲಾ, ಇನ್ನು ಮುಮುಕ್ಷುವಿನ ಕರ್ತವ್ಯಗಳನ್ನು ಹೇಳುವೆನು ಕೇಳು. ಇದೇ ಈಗ ನಿನಗೆ ಹೇಳಿದಂತೆ ಮುಮುಕ್ಷುವು ಪ್ರಯತ್ನಪೂರ್ವಕ ಸದ್ಗುರುವಿನ ಆಶ್ರಯ ಮಾಡಿ, ಆತನ ಆಜ್ಞೆಗಳನ್ನು ತಪ್ಪದೆ ಪಾಲಿಸಬೇಕು. ಸದ್ಗುರುವಿನ ಆಜ್ಞೆಗಳು ಸನಾತನಗಳೆಂತಲೂ, ತಾತ್ಕಾಲಿಕಗಳೆಂತಲೂ ಎರಡು ವಿಧಗಳಾಗಿರುವವು. ಮುಮುಕ್ಷುಗಳು ತಮ್ಮ ತಮ್ಮ ಜಾತಿ ಪಂಥಗಳಿಗನುಸರಿಸಿ ಶ್ರುತಿ-ಸ್ಮೃತಿ—ಆಗಮೋಕ್ತವಾದ ಸದ್ಗುಣ—ಸದಾಚಾರಗಳುಳ್ಳವರಾಗಿರಬೇಕೆಂಬದೇ ಸದ್ಗುರುವಿನ ಸನಾತನ ಆಜ್ಞೆಯು; ಇದನ್ನು ಶಿಷ್ಯನು ಅವಶ್ಯವಾಗಿ ಪಾಲಿಸಲೇಬೇಕು. ಶಿಷ್ಯನವೃತ್ತಿಯನ್ನು ಸುಸಂಸ್ಕೃತ ಮಾಡುವದಕ್ಕಾಗಿ ಪರಮ ಕಾರುಣಿಕನಾದ ನಿಸ್ಪೃಹಸದ್ಗುರುವು, ಆಗಾಗ್ಗೆ ಕಂಠರವದಿಂದ ಶಿಷ್ಯನಿಗೆ ಮಾಡುವ ಆಜ್ಞೆಗಳು ಸದ್ಗುರುವಿನ ತಾತ್ಕಾಲಿಕ ಆಜ್ಞೆಗಳು. ಇವು ಪ್ರತ್ಯಕ್ಷ ಸದ್ಗುರುವಿನ ಮುಖದಿಂದ ಹೊರಟವಾದದ್ದರಿಂದ ಒಂದು ಬಗೆಯಿಂದ ಆತನ ಸನಾತನ ಆಜ್ಞೆಗಳಿಗಿಂತಲೂ ಅವಶ್ಯವಾಗಿ ಪಾಲಿಸಲ್ಪಡತಕ್ಕವೆಂದು ತಿಳಿದು, ಮುಮುಕ್ಷುವಾದ ಶಿಷ್ಯನು ತನ್ನ ದೇಹಪಾತವನ್ನೂ ಲಕ್ಷಿಸದೆ ಅವನ್ನು ಪಾಲಿಸಬೇಕು! ವಿವೇಕಶೀಲಾ, ಶ್ರುತ್ಯಾಗಮಾದಿಗಳಿಗೂ ನಿಯಾಮಕನಾಗಿರುವ ಸರ್ವತಂತ್ರ ಸ್ವತಂತ್ರ ಸದ್ಗುರುವಿನ ಕಂಠೋಕ್ತ ಆಜ್ಞೆಗಳನ್ನು ಪಾಲಿಸುವ ಶಿಷ್ಯನು ನಿಶ್ಚಯವಾಗಿ ಉದ್ಧೃತನಾಗುವನು; ಆದರೆ ಮಹಾತ್ಮರಾದ ಆಯಾ ಸದ್ಗುರುಗಳು ತಮ್ಮ ತಮ್ಮ ಶಿಷ್ಯರ ಯೋಗ್ಯತೆಯನ್ನರಿತು ತಮ್ಮ ತಮ್ಮ ಶಿಷ್ಯರಿಗೆ ಮಾಡುವ ಆ ತಾತ್ಕಾಲಿಕ ಆಜ್ಞೆಗಳನ್ನು ಆಯಾ ಗುರುಗಳೇ ಮಾಡಬಲ್ಲರಾದ್ದರಿಂದ, ಅವು ಇಂಥವೇ ಎಂದು ಅನ್ಯರು ಉಲ್ಲೇಖಿಸುವದು ಕೇವಲ ಅಶಕ್ಯವಾಗಿರುವದು;

ಆದ್ದರಿಂದ, ಶ್ರುತ್ಯಾಗಮ-ಸ್ಮೃತಿ-ಪುರಾಣ ಸಮ್ಮತವಾದ ಸದ್ಗುರುವಿನ ಸನಾತನವಾದ ಆಜ್ಞೆಗಳನ್ನು ಮುಖ್ಯವಾಗಿ ಭಾಗವತದ ಆಧಾರದಿಂದ ನಿನಗೆ ಹೇಳುವೆನು ಕೇಳು.

ವಿವೇಕಶೀಲಾ, ಮುಮುಕ್ಷುವಾದವನು ವಾತುಲಾದಿ ಶೈವಾಗಮಗಳಲ್ಲಿ ಹೇಳಿರುವ ಶೈವಧರ್ಮದಕಡೆಗೆ ದುರ್ಲಕ್ಷ್ಯಮಾಡದೆ, ತನ್ನ ವರ್ಣ, ಕುಲ, ಆಶ್ರಮಗಳಿಗನುಸರಿಸಿ ವಿಹಿತಕರ್ಮಗಳನ್ನು ಫಲಾಶೆಯಿಲ್ಲದೆ ಕರ್ತವ್ಯವೆಂದು ತಿಳಿದು ಮಾಡಿ ಅವನ್ನು ಪರಮೇಶ್ವರನಿಗೆ ಅರ್ಪಿಸಬೇಕು. ಹೀಗೆ ಮಾಡಿದ ನಿಷ್ಕಾಮಕರ್ಮದಿಂದ ಸಾಧಕನ ಚಿತ್ತಶುದ್ಧಿಯಾಗಿ, ವಿಷಯಸುಖಕ್ಕಾಗಿ ಪಡುವ ಆಯಾಸವು ವ್ಯರ್ಥವೆಂಬ ನಂಬಿಗೆಯು ಅವನಿಗೆ ಆಗುತ್ತದೆ. ದೇಹಾದಿ ಅಸತ್ಯವಸ್ತುಗಳ ಸುಖಕ್ಕಾಗಿ ಯತ್ನಮಾಡುವದು ಹುಚ್ಚುತನವೇ ಸರಿ. ಶಾಶ್ವತ ಸುಖಕ್ಕಾಗಿ, ಅಂದರೆ ಈಶ್ವರನ ಪ್ರಾಪ್ತಿಗಾಗಿ ಸಾಧಕನು ಯಾವಾಗಲೂ ಆ ಭಗವಂತನ ಚಿಂತನ ಮಾಡಬೇಕು. ಫಲಸಿದ್ಧಿಗೆ ಕಾರಣವಲ್ಲದ ಸ್ನಾನ-ಸಂಧ್ಯೆ-ಶ್ರಾದ್ಧ-ಪಕ್ಷಾದಿ ತಮ್ಮ ತಮ್ಮ ವರ್ಣಗಳಿಗೆ ಉಕ್ತವಾದ ನಿತ್ಯನೈಮಿತ್ತಿಕಕರ್ಮಗಳನ್ನು ಮಾತ್ರ ಆತನು ಮಾಡಬೇಕಲ್ಲದೆ, ಯಜ್ಞಯಾಗಾದಿಕ ಭೋಗೈಶ್ವರ್ಯದಾಯಕವಾದ ಕರ್ಮಗಳನ್ನು ಸರ್ವಥಾ ಮಾಡಬಾರದು. ಬ್ರಹ್ಮಸ್ವರೂಪಜ್ಞಾನಕ್ಕಾಗಿ ನಿತ್ಯದಲ್ಲಿ ಯತ್ನಿಸುತ್ತ, ಅಧಿಕಾರವು ಹೆಚ್ಚಿದಂತೆ ನಿತ್ಯ-ನೈಮಿತ್ತಿಕಕರ್ಮಗಳಮೇಲಿನ ಆದರವನ್ನೂ ಕಡಿಮೆಮಾಡಬೇಕು. ಬ್ರಹ್ಮಚಿಂತನತತ್ಪರನಾದ ಪುರುಷನು ಬ್ರಹ್ಮಚರ್ಯ, ದಯಾ, ಶಾಂತಿ, ಅಹಿಂಸಾ ಇತ್ಯಾದಿ “ಯಮ” ಅಂದರೆ ದೇಹೇಂದ್ರಿಯಗಳ ಆಕಲನಮಾಡುವ ಕೃತ್ಯಗಳನ್ನು ಒಳ್ಳೇ ಸೇರಿಕೆಯಿಂದ ಮಾಡಬೇಕು; ಮತ್ತು ಶೌಚ, ಇಜ್ಯಾ, ತಪ, ದಾನ, ವ್ರತ, ಉಪವಾಸ ಮೊದಲಾದ “ ನಿಯಮ ” ಅಂದರೆ ಶ್ರುತಿ-ಸ್ಮೃತಿ ಪ್ರಣೀತ ಕರ್ಮಗಳನ್ನು ಶಕ್ತ್ಯನುಸಾರ ಅನುಕೂಲತೆಯಂತೆ ಬ್ರಹ್ಮಚಿಂತನಕ್ಕೆ ವ್ಯತ್ಯಯಬಾರದ ರೀತಿಯಿಂದ ಮಾಡಬೇಕು. ರಾಗದ್ವೇಷರಹಿತನೂ, ಪರಮೇಶ್ವರನ ಜ್ಞಾನದಿಂದ ಬ್ರಹ್ಮರೂಪನಾದವನೂ ಆದ ಸದ್ಗುರುವನ್ನು ಸೇವಿಸಬೇಕು. ಸದ್ಗುರುಸೇವೆಗೆ ಪಾತ್ರನಾಗುವದಕ್ಕಾಗಿ ಶಿಷ್ಯನು ಅಭಿಮಾನ, ಅಸೂಯೆ, ಪರನಿಂದೆ, ಅಸತ್ಯ ಮೊದಲಾದವನ್ನು ಬಿಟ್ಟಿರಬೇಕು. ಸದಾ ಬ್ರಹ್ಮಚಿಂತನತತ್ಪರನಾಗಿ ಸ್ತ್ರೀಪುತ್ರಾದಿಕರ ವಿಷಯದಲ್ಲಿ ಉದಾಸೀನನೂ, ವಿರಕ್ತನೂ ಆಗಿರಬೇಕು. ಇಂಥವನೇ ಸದ್ಗುರುವಿನ ಆಶ್ರಯದಿಂದ ಆತ್ಮಜ್ಞಾನವನ್ನು ಪಡೆಯಲಿಕ್ಕೆ ಅಧಿಕಾರಿಯಾಗುವನು.

ವಿವೇಕಶೀಲಾ, ಯಾವದೊಂದು ಪ್ರಾಣಿಯ ಘಟಕದ್ರವ್ಯಗಳ ಪ್ರಥಕ್ಕರಣಮಾಡಿದರೆ ಅದರಲ್ಲಿ ಮೂರು ಅವಯವಗಳಿರುವವೆಂದು ಅನುಭವಕ್ಕೆ ಬರುವದೆಂದು ಭಾಗವತದಲ್ಲಿ ಶ್ರೀ ಕೃಷ್ಣನು ಉದ್ಧವನಿಗೆ ಹೇಳಿರುವನು. ಅವು (೧) ಸ್ಥೂಲಶರೀರ. (೨) ಲಿಂಗ (ಸೂಕ್ಷ್ಮ) ಶರೀರ. (೩) ಆತ್ಮ. ಇವುಗಳಲ್ಲಿ ಸ್ಥೂಲಶರೀರವು ಪಂಚಮಹಾಭೂತಗಳಿಂದಲೂ, ಸೂಕ್ಷ್ಮಶರೀರವು ಮನ, ಚಿತ್ತ, ಬುದ್ಧಿ, ಪ್ರಾಣ, ಇಂದ್ರಿಯಶಕ್ತಿ ಇವುಗಳಿಂದಲೂ ಆಗಿರುವವು. ಆತ್ಮ, ಅಂದರೆ ಪರಬ್ರಹ್ಮವು ಇವೆರಡರ ಉಪಾದಾನ ಕಾರಣವು, ಅಥವಾ ಅಧಿಷ್ಠಾನವು ಆಗಿರುವದು. ಆತ್ಮನು ಸ್ವತಸ್ಸಿದ್ಧ ಶಕ್ತಿಯುಳ್ಳ

ವನಾಗಿದ್ದು, ಯಾವ ಶಕ್ತಿಯೂ ಇಲ್ಲದ ಸ್ಥೂಲ–ಸೂಕ್ಷ್ಮ ದೇಹಗಳಿಗೆ ಶಕ್ತಿಯನ್ನು ಕೊಟ್ಟು, ಕಟ್ಟಿಗೆ–ಜ್ವಾಲೆಗಳಿಂದ ಅಗ್ನಿಯು ಬೇರೆಯಾಗಿರುವಂತೆ, ಆ ಸ್ಥೂಲ–ಸೂಕ್ಷ್ಮ ದೇಹಗಳಿಂದ ಆತನು ದೂರವಾಗಿರುವನು; ಆದರೂ ದೇಹಗಳ ಸಂಬಂಧದಿಂದ ಆ ಆತ್ಮನು ದೇಹಗಳಂತೆ ಉತ್ಪತ್ತಿ–ನಾಶಗಳುಳ್ಳವನೂ, ಲಘು–ಗುರು ಮೊದಲಾದ ಹಲವು ಭೇದಗಳಿಗೆ ಒಳಗಾದವನೂ ಆದಂತೆ ತೋರುವನು. ಕಟ್ಟಿಗೆಯ ನಾಶದೊಡನೆ ಅಗ್ನಿಯ ನಾಶವಾಗುವದೂ, ಕಟ್ಟಿಗೆಗಳು ಹೆಚ್ಚು ಕಡಿಮೆಯಾಗಿ ಕೆಂಡವು ಹೆಚ್ಚು ಕಡಿಮೆಯಾದಂತೆ, ಅಗ್ನಿಯು ಹೆಚ್ಚುಕಡಿಮೆಯಾದಹಾಗೆ ತೋರುವದೂ ಇದಕ್ಕೆ ಸಾದೃಶ್ಯವಾಗಿರುವ ವು. ಹೀಗೆ ಆತ್ಮನು ದೇಹಾದಿಗಳಲ್ಲಿ ಪ್ರವೇಶಿಸಿ ಅವುಗಳ ಉಪಾಧಿಗಳನ್ನು ಧರಿಸುವನೆಂಬದು ಕೇವಲ ಅಜ್ಞಾನವು. ಈ ಅಜ್ಞಾನದಿಂದಲೇ ಜೀವನು ಜನ್ಮಮರಣಗಳ ಪರಂಪರೆಯನ್ನು ಭೋಗಿಸುವನು. ಈ ಅಜ್ಞಾನ ನಿವಾರಣಕ್ಕಾಗಿ ಸದ್ಗುರು–ಸೇವೆಯಿಂದ ಮೊದಲು ದೇಹಾಭಿಮಾನವನ್ನು ಬಿಡಬೇಕು. ಈ ಅಜ್ಞಾನದ ನಾಶಕ್ಕಾಗಿ ಜ್ಞಾನಾಗ್ನಿಯು ಉತ್ಪನ್ನವಾಗಬೇಕಾದರೆ ಗುರು–ಶಿಷ್ಯರೆಂಬ ಕೆಳಗಿನ ಮೇಲಿನ ಅರಣಿಗಳ ಮಧ್ಯದಲ್ಲಿ ಉಪದೇಶರೂಪ ಮಂಥನದಂಡದಿಂದ ವಾದಪ್ರತಿವಾದ ರೂಪ ಘರ್ಷಣವು ಭರದಿಂದ ಆಗಬೇಕಾಗುವದು. ಹೀಗಾಗಿ ಉತ್ಪನ್ನವಾದ ಬ್ರಹ್ಮವಿದ್ಯಾರೂಪಜ್ಞಾನವು ಜೀವನ ಸಂಸಾರದ ನಿವೃತ್ತಿಯನ್ನು ಮಾಡಿ, ಅವನನ್ನು ಪರಮಾತ್ಮನಲ್ಲಿ ಲೀನಗೊಳಿಸಿದ ಮೇಲೆ ಸ್ವತಃ ತಾನು ನಷ್ಟವಾಗುವದು; ಅಂದರೆ ಅದು ಬೇರೆ ರೂಪದಿಂದ ಉಳಿಯದೆ ಹೋಗುವದು.

ವಿವೇಕಶೀಲಾ, ಕೇವಲ ಶ್ರುತ್ಯಾದಿಗಳ ಅಭ್ಯಾಸದಿಂದ ಪ್ರಾಪ್ತವಾದ ಪರೋಕ್ಷಜ್ಞಾನದಿಂದ ಮುಮುಕ್ಷುವಿನ ಕಾರ್ಯಭಾಗವು ಸಾಧಿಸಲಾರದು; ಆತನಿಗೆ ಅದ್ವೈತದ ಅಪರೋಕ್ಷಪ್ರಾಪ್ತಿಯು ಆಗಲೇಬೇಕು. ಹೀಗೆ ಅವನಿಗೆ ಸಾಧಿಸಿದ ಜ್ಞಾನ–ವಿಜ್ಞಾನಗಳೆರಡರ ಲಯವನ್ನು ಪರಮೇಶ್ವರನಲ್ಲಿ ಮಾಡಬೇಕು; ಯಾಕಂದರೆ ಜ್ಞಾನ ( ಪರೋಕ್ಷಜ್ಞಾನ )– ವಿಜ್ಞಾನ ( ಅಪರೋಕ್ಷಜ್ಞಾನ )ಗಳೆರಡೂ ಪರಮೇಶ್ವರನ ಪ್ರಾಪ್ತಿಯ ಸಾಧನಗಳಾಗಿರುವವು. ಅವುಗಳಿಂದ ಇಚ್ಛಿಸಿದ ಪರಮಾರ್ಥವಾದರೂ ಪರಬ್ರಹ್ಮದ ಪ್ರಾಪ್ತಿಯೇ ಆಗಿರುವದು. ಜಗತ್ತಿನ ನಾಶವಂತಸ್ವರೂಪಜ್ಞಾನದ, ಹಾಗೂ ಪರಬ್ರಹ್ಮದ ಅದ್ವೈತಸ್ಥಿತಿಯ ಅನುಭವದ ನಿದಿಧ್ಯಾಸವನ್ನು ನಡಿಸುವದು ಒಂದು ಪ್ರಕಾರದ ಯಜ್ಞವೇ ಆಗಿರುವದು. ಅದಕ್ಕೆ ಜ್ಞಾನಯಜ್ಞವೆನ್ನುವರು. ವಿವೇಕಶೀಲಾ, ಭಗವಾನ್ ಸದಾಶಿವನಲ್ಲಿ ಭಕ್ತಿಯನ್ನುಂಟು ಮಾಡುವದೇ ಧರ್ಮವೆಂತಲೂ, ಪರಮಾತ್ಮನ ವ್ಯಾಪಕವೂ, ಅದ್ವೈತವೂ ಆದ ರೂಪದ ಬೋಧಮಾಡಿಕೊಡುವದೇ ಜ್ಞಾನವೆಂತಲೂ, ವಿಷಯಸುಖದ ನಿವೃತ್ತಿಯೇ ವೈರಾಗ್ಯವೆಂತಲೂ, ಅಣಿಮಾದಿ ಅಷ್ಟಸಿದ್ಧಿಗಳನ್ನು ಪ್ರಾಪ್ತಮಾಡಿ ಕೊಡುವದೇ ಐಶ್ವರ್ಯವೆಂತಲೂ ಮುಮುಕ್ಷುವು ತಿಳಿದುಕೊಳ್ಳಬೇಕು.

ವಿವೇಕಶೀಲಾ, ಮೋಕ್ಷಪ್ರಾಪ್ತಿಯ ದೃಷ್ಟಿಯಿಂದ ಭಾಗವತದಲ್ಲಿ ಭಗವಾನ್ ಶ್ರೀಕೃಷ್ಣನು, ಯಮ–ನಿಯಮಾದಿಗಳನ್ನು ಕುರಿತು ಉದ್ಧವನು ಮಾಡಿದ ಪ್ರಶ್ನಗಳಿಗೆ ಕೊಟ್ಟ ಮಹತ್ವದ ಉತ್ತರಗಳನ್ನು ನಿನಗೆ ಹೇಳುವೆನು ಕೇಳು.

(೧) ಅಹಿಂಸಾ, ಸತ್ಯ, ಅಸ್ತೇಯ, ಅಸಂಗ ಲಜ್ಜಾ, ಅಸಂಚಯ, ಆಸ್ತಿಕ್ಯ, ಬ್ರಹ್ಮಚರ್ಯ, ಮೌನ, ಸ್ಥೈರ್ಯ, ಕ್ಷಮಾ, ಅಭಯ ಈ ಹನ್ನೆರಡು ಯಮಗಳು; ಅಂತಶ್ಶುದ್ಧಿ, ಬಹಿಶ್ಶುದ್ಧಿ, ಜಪ, ತಪಶ್ಚರ್ಯ, ಹೋಮ, ಶ್ರದ್ಧಾ, ಆತಿಥ್ಯ, ಈಶ್ವರಭಕ್ತಿ, ತೀರ್ಥಾಟನ, ಪರಹಿತಬುದ್ಧಿ, ಸಂತೋಷ, ಗುರುಸೇವಾ ಇವು ಹನ್ನೆರಡು ನಿಯಮಗಳು. ಇವುಗಳ ಆಚರಣೆಯಿಂದ ಸಕಾಮಪುರುಷನಿಗೆ ವೈಭವವೂ, ನಿಷ್ಕಾಮ ಪುರುಷನಿಗೆ ಸಾಯುಜ್ಯವೂ ದೊರೆಯುವವು.

(೨) ಉದ್ಧವಾ, ಶಮವೆಂದರೆ ಪರಮಾತ್ಮನಲ್ಲಿ ಬುದ್ಧಿಯು ನಿಷ್ಠೆಯನ್ನಿಡುವದು; ಆದರೆ ಶಾಂತಿಯನ್ನು ತಾಳುವದು ಶಮವಲ್ಲ. ದಮವೆಂದರೆ ಇಂದ್ರಿಯಗಳ ಆಕಲನಮಾಡುವದು; ಆದರೆ ಶತ್ರುಮೊದಲಾದವರನ್ನು ಜರ್ಜರ ಮಾಡುವದು ದಮವಲ್ಲ. ತಿತಿಕ್ಷೆಯೆಂದರೆ ವಿಹಿತಕರ್ಮವನ್ನು ಆಚರಿಸುವಾಗ ಪ್ರಾಪ್ತವಾಗುವ ಕ್ಲೇಶವನ್ನು ಸಹಿಸುವದು; ಆದರೆ ಅಪಮಾನಾದಿಗಳನ್ನು ಸಹಿಸುವದು ತಿತಿಕ್ಷೆಯಲ್ಲ. ಧೃತಿಯೆಂದರೆ ಜಿಹ್ವಾ, ಉಪಸ್ಥಗಳ ಆವೇಶವನ್ನು ಬಿಗಿಹಿಡಿಯುವದು; ಆದರೆ ಆಪತ್ತಿನೊಳಗಿಂದ ಪಾರಾಗುವದಕ್ಕಾಗಿ ಉದ್ಯೋಗ ಮಾಡುವದು ಧೃತಿಯಲ್ಲ.

(೩) ಪ್ರಾಣಿಮಾತ್ರಗಳೊಡನೆ ಪ್ರೇಮದಿಂದ ನಡೆಯುವದೇ ದಾನವು; ವಿಷಯಸುಖದಲ್ಲಿ ವೈರಾಗ್ಯ ತಾಳುವದೇ ತಪಶ್ಚರ್ಯವು; ವಾಸನಾಗಳ ಸಂಯಮನ ಮಾಡುವದೇ ಶೌರ್ಯವು; ಬ್ರಹ್ಮವಿಚಾರವೇ ಸತ್ಯವು; ಸತ್ಯವೂ—ಪ್ರಿಯವೂ ಆದ ಮಾತನ್ನು ಆಡುವದೇ ಋತವು.

(೪) ಕರ್ಮದಲ್ಲಿ ಆಸಕ್ತಿಯನ್ನು ಇಡದಿರುವದೇ ಶುದ್ಧಿಯು; ಕರ್ಮಗಳನ್ನು ಬಿಟ್ಟುಬಿಡುವದೇ ತ್ಯಾಗವು; ಧರ್ಮಾಚರಣೆಯೇ ಧನಸಂಪಾದನವು; ಪರಮೇಶ್ವರ ಧ್ಯಾನವೇ ಯಜ್ಞವು; ಜ್ಞಾನೋಪದೇಶವೇ ದಕ್ಷಿಣೆಯು.

(೫) ಪ್ರಾಣಾಯಾಮದಿಂದ ಮನಸ್ಸಿನ ಆಕಲನ ಮಾಡಲಿಕ್ಕೆ ಬರುತ್ತದಾದ್ದರಿಂದ ಪ್ರಾಣಾಯಾಮವೇ ಪುರುಷನ ಬಲವು; ಯೋಗಾಭ್ಯಾಸದಿಂದ ಈಶ್ವರನ ರೂಪವು ಪ್ರಾಪ್ತವಾಗುವದರಿಂದ, ಆ ಯೋಗಾಭ್ಯಾಸವೇ ಉತ್ತಮ ಭಾಗ್ಯವು; ಭಗವದ್ಭಕ್ತಿಯಿಂದ ಸಾಯುಜ್ಯ ಪ್ರಾಪ್ತಿಯಾಗುವದರಿಂದ, ಆ ಭಗವದ್ಭಕ್ತಿಯೇ ಉತ್ಕೃಷ್ಟಲಾಭವು.

(೬) ಪರಬ್ರಹ್ಮಸ್ವರೂಪದಲ್ಲಿ ಭಾಸಮಾನವಾಗಿರುವ ಜಗತ್ತನ್ನು ಬ್ರಹ್ಮನಿಂದ ಬೇರೆಯೆಂದು ತಿಳಿದಿರುವದೇ ವಿದ್ಯೆಯೆಂದು ತಿಳಿಯಬೇಕು; ಅಯೋಗ್ಯ ಕೃತ್ಯಗಳ ಮಾಡುವ ವಿಷಯದಲ್ಲಿ ಪರಾಙ್ಮುಖವಾಗಿರುವದೇ ಲಜ್ಜೆಯೆಂದು ತಿಳಿಯಬೇಕು; ನಿರಪೇಕ್ಷತೆಯನ್ನು ಧರಿಸುವದೇ ಭೂಷಣವೆಂದು ತಿಳಿಯಬೇಕು.

(೭) ಸುಖವೆಂದರೆ ಅನುಕೂಲ ಅಥವಾ ಪ್ರತಿಕೂಲ ವೇದನೆಗಳಿಂದ ಅಲಿಪ್ತವಾಗಿರುವದು; ದುಃಖವೆಂದರೆ ವಿಷಯೋಪಭೋಗಗಳನ್ನು ಇಚ್ಛಿಸುವದು.

(೮) ಸಂಸಾರಬಂಧದ ಹಾಗು ಸಂಸಾರಮೋಕ್ಷದ ಬೀಜವನ್ನು ತಿಳಿದುಕೊಳ್ಳುವವನೇ ಸುಜ್ಞನು; ದೇಹಾದಿಕಗಳಲ್ಲಿ ಮಮತ್ವ ಬುದ್ಧಿಯನ್ನು ತಾಳುವವನೇ ಅಜ್ಞನು.

(೯) ಮಾರ್ಗವೆಂದರೆ ನನ್ನ ಪದಕ್ಕೆ ಮುಟ್ಟುವ ಉಪಾಯವು (ನಿವೃತ್ತಿಮಾರ್ಗ); ಅಮಾರ್ಗವೆಂದರೆ ಭೋಗಪ್ರಾಪ್ತಿಯ ಅಭಿಲಾಷೆಯು(ಪ್ರವೃತ್ತಿಮಾರ್ಗ) ; ಸ್ವರ್ಗವೆಂದರೆ ಸತ್ವಗುಣದ ಉತ್ಕರ್ಷವು; ನರಕವೆಂದರೆ ತಮೋಗುಣದ ವೃದ್ಧಿಯು!

(೧೦) ಜೀವನಿಗೆ ಸದ್ಗತಿಯನ್ನು ಒದಗಿಸಿಕೊಡುವ ಸದ್ಗುರುವೇ ಬಂಧುವು; ಪರಮಾರ್ಥ ಪ್ರಾಪ್ತಿಯ ಸಾಧನಗಳಿಂದ ಯುಕ್ತವಾದ ಮನುಷ್ಯ—ದೇಹವೇ ಗೃಹವು; ಗುಣಸಂಗ್ರಹವುಳ್ಳವನೇ ಸಂಪನ್ನನು; ಅಸಂತುಷ್ಟಚಿತ್ತವುಳ್ಳವನೇ ದರಿದ್ರನು; ಇಂದ್ರಿಯಗಳ ಆಕಲನಮಾಡಲಾರದವನೇ ದುರ್ಬಲನು; ಇಂದ್ರಿಯಗಳ ಆಕಲನ ಮಾಡುವವನೇ ಸಬಲನು.

ವಿವೇಕಶೀಲಾ, ಯಾವದೊಂದು ಪ್ರಾಣಿಯ ಘಟಕದ್ರವ್ಯಗಳು ಜಡದೇಹ, ಲಿಂಗದೇಹ, ಆತ್ಮ ಎಂದು ಮೂರು ಇರುತ್ತವೆಂದು ಈವೊದಲೆ ನಿನಗೆ ಹೇಳಿರುವೆನಷ್ಟೆ? ಇವುಗಳಲ್ಲಿ ಸತ್ವ—ರಜಸ್ತಮಗಳೆಂಬ ತ್ರಿಗುಣಾತ್ಮಕವಾದ ಲಿಂಗಶರೀರವನ್ನು ಗುರ್ವನುಗ್ರಹದಿಂದ ಪ್ರಾಪ್ತವಾದ ಅದ್ವೈತಜ್ಞಾನರೂಪ ಖಡ್ಗದಿಂದ ಭೇದಿಸಿದ ಹೊರತು ಆತ್ಮಸ್ವರೂಪ ಜ್ಞಾನವು ಆಗಲಾರದು. ಇನ್ನು ನೀನು ತ್ರಿಗುಣಗಳ ನಿವೃತ್ತಿಗೆ ಉಪಾಯವೇನೆಂದು ಕೇಳಬಹುದು. ಆ ಉಪಾಯವನ್ನು ಹೇಳುವೆನು ಕೇಳು. ಮಾಯೆಗೆ ಸಂಬಂಧಿಸಿದವಾದ ಈ ಮೂರುಗುಣಗಳಲ್ಲಿ ಸತ್ವಗುಣವು ಸುಖದಾಯಕವು, ರಜೋಗುಣವು ದುಃಖದಾಯಕವು, ತಮೋಗುಣವು ಮೋಹಪ್ರದವು; ಈ ಮೂರು ಗುಣಗಳ ಅಭಾವವೇ ಮೋಕ್ಷದಾಯಕವು; ಆದ್ದರಿಂದ ಸುಖಾಪೇಕ್ಷಿಯು ಮೊದಲು ಸತ್ವಗುಣದ ಅಭಿವೃದ್ಧಿಯಿಂದ ರಜಸ್ತಮೋಗುಣಗಳ ನಾಶಮಾಡಿ, ಆಮೇಲೆ ಸತ್ವಗುಣದಿಂದ ಸತ್ವಗುಣದ ನಾಶಮಾಡಿ—ಬಿಡಬೇಕು. ಹೀಗಾಗುವದಕ್ಕಾಗಿ ಮೊದಲು ಸತ್ವಗುಣವನ್ನು ಬೆಳಿಸಬೇಕು. ಸತ್ವಗುಣದ ಅಭಿವೃದ್ಧಿಯಿಂದ ಪರಮೇಶ್ವರನ ಭಕ್ತಿಯವಿಷಯವಾಗಿ ಪ್ರಬಲವಾದ ಇಚ್ಛೆಯು ಉತ್ಪನ್ನವಾಗುತ್ತದೆ. ಭಕ್ತಿಯ ಯೋಗದಿಂದ ರಜಸ್ತಮೋಗುಣಗಳ ನಾಶವಾಗುತ್ತದೆ. ಅಧರ್ಮಪ್ರವೃತ್ತಿಗೆ ರಜಸ್ತಮೋಗುಣಗಳು ಕಾರಣವಾಗಿದ್ದು, ಸತ್ವಗುಣವು ಹೆಚ್ಚುವದರಿಂದ ಅಧರ್ಮ-ಪ್ರವೃತ್ತಿಯು ತಾನೇ ನಷ್ಟವಾಗುತ್ತದೆ. ಆಮೇಲೆ ಬರಿಯ ಸತ್ವಗುಣವೂ, ಆಗುಣದ ಸತ್ಯ , ದಯಾ ಮೊದಲಾದ ವೃತ್ತಿಗಳೂ ಮಾತ್ರ ಉಳಿಯುವವು. ಸತ್ವಗುಣದ ವೃದ್ಧಿಯ ಸುಲಭಸಾಧನವು ಸಾತ್ವಿಕವಿಷಯಗಳ ಗ್ರಹಣಮಾಡುವದಾಗಿರುತ್ತದೆ. ವಿವೇಕಶೀಲಾ, ಶಾಸ್ತ್ರ, ಜಲ, ಸಹವಾಸ, ದೇಶ, ಕಾಲ, ಕರ್ಮ, ಜನ್ಮ, ಧ್ಯಾನ , ಮಂತ್ರ, ಸಂಸ್ಕಾರ ಎಂಬ ಈಹತ್ತು ವಿಷಯಗಳಿಂದ ತ್ರಿಗುಣಗಳ ವೃದ್ಧಿಯಾಗುತ್ತದೆ. ಸತ್ವಗುಣಾಪೇಕ್ಷಿಯು ಸಾತ್ವಿಕವಾದ ಈಹತ್ತು ವಿಷಯಗಳನ್ನೂ, ರಜೋಗುಣಾಪೇಕ್ಷಿಯು ರಾಜಸವಾದ ಈಹತ್ತು ವಿಷಯಗಳನ್ನೂ, ತಮೋಗುಣಾಪೇಕ್ಷಿಯು ತಾಮಸವಾದ ಈಹತ್ತು ವಿಷಯಗಳನ್ನೂ ಸೇವಿಸಬೇಕು. ಆ ಸಾತ್ವಿಕ, ರಾಜಸ, ತಾಮಸ ಗುಣವೃದ್ಧಿಕರವಾದ ಹತ್ತು ಹತ್ತು ವಿಷಯಗಳು ಯಾವವೆಂದರೆ—

ಸಾತ್ವಿಕವಿಷಯಗಳು:—ಶಾಸ್ತ್ರಜ್ಞರು ಹೊಗಳುವ ವಿಷಯಗಳು ಸಾತ್ವಿಕಗಳು; ಅವು ಯಾವವೆಂದರೆ—[೧] ನಿವೃತ್ತಿಪರಶಾಸ್ತ್ರಗಳು. [೨]ತೀರ್ಥಗಳು. [೩]ವಿರಕ್ತಪುರುಷರು. [೪]ಸಮಾಧಿಯೇರಿಸುವ ಸ್ಥಳಗಳು. [೫] ಬ್ರಾಹ್ಮಕಾಲ [೬] ನಿಷ್ಕಾಮಕರ್ಮಗಳು [೭]ಶೈವದೀಕ್ಷಾ [೮]ಭಗವದ್ಧ್ಯಾನ [೯]ಪ್ರಣವಮಂತ್ರ [೧೦]ಚಿತ್ತಶುದ್ಧಿಕಾರಕಸಂಸ್ಕಾರಗಳು.

ರಾಜಸವಿಷಯಗಳು:—ಶಾಸ್ತ್ರಜ್ಞರು ಉದಾಸೀನರಾಗಿರುವ ವಿಷಯಗಳು ರಾಜಸವಿಷಯಗಳು; ಅವು ಯಾವವೆಂದರೆ—(೧)ಪ್ರವೃತ್ತಿಪರಶಾಸ್ತ್ರಗಳು (೨)ಸುಗಂಧಿಜಲ (೩)ಸಂಸಾರಿಪುರುಷ (೪)ತುರುಮಂದಿಯ ಸ್ಥಳ (೫)ಪ್ರದೋಷಕಾಲ (೬)ಸಕಾಮಕರ್ಮಗಳು(೭)ಸಾಮಾನ್ಯವರ್ತನ (೮)ವಿಷಯಧ್ಯಾನ (೯)ಕಾಮ್ಯಮಂತ್ರ (೧೦)ಶರೀರವರ್ಧಕಸಂಸ್ಕಾರ.

ತಾಮಸವಿಷಯಗಳು:—ಶಾಸ್ತ್ರಜ್ಞರು ನಿಂದಿಸುವ ವಿಷಯಗಳು ತಾಮಸವಿಷಯಗಳು; ಅವು—(೧) ಪಾಖಂಡಶಾಸ್ತ್ರ (೨) ಮದ್ಯವೊದಲಾದವು (೩) ದುರಾಚಾರಿಪುರುಷ (೪)ಜೂಜಿನಸ್ಥಳ (೫)ಮಧ್ಯರಾತ್ರಿ (೬)ಜಾರಣಮಾರಣಕರ್ಮ (೭)ಶಾಕ್ತದೀಕ್ಷಾ (೮)ಶತ್ರುನಾಶದ ಅಥವಾ ಭೋಗಸುಖದ ಧ್ಯಾನ (೯)ಜಾರಣಮಂತ್ರ (೧೦] ಗೃಹಾದಿಗಳ ವ್ಯವಸ್ಥೆಯ ಸಂಸ್ಕಾರ.

ವಿವೇಕಶೀಲಾ, ಈ ವಿಷಯ ಭೇದವರಿತು ಸಾತ್ವಿಕ ವಿಷಯ ಸೇವನದಿಂದ ಸಾತ್ವಿಕಗುಣದ ವೃದ್ಧಿಯನ್ನು ಮಾಡಬೇಕು; ಅಂದರೆ ರಜಸ್ತಮೋಗುಣಗಳ ನಾಶವಾಗಿ, ಭಗವದ್ಭಕ್ತಿಯ ವಾಸನೆಯು ದೃಢವಾಗಿ ಭಗವಚ್ಚಿಂತನದಲ್ಲಿ ಚಿತ್ತದ ಲಯುವಾಗುವದು. ಆಮೇಲೆ ತ್ರಿಗುಣಗಳಿಂದಾದ ಸ್ಥೂಲ-ಸೂಕ್ಷ್ಮ ಶರೀರಗಳ ನಾಶವು ಆ ಗುಣಗಳ ನಾಶದೊಡನೆ ಆಗಿಹೋಗಿ, ಆತ್ಮಸಾಕ್ಷಾತ್ಕಾರವಾಗುವದು. ಈ ವಿಷಯವು ಭಾಗವತದಲ್ಲಿ ಹೇಳಿದ್ದಾಗಿರುವದು. ಹೀಗೆ ಸಾಧಕನಿಗೆ ಹೇಳತಕ್ಕ ಮುಖ್ಯಮುಖ್ಯ ವಿಷಯಗಳನ್ನು ನಿನಗೆ ಹೇಳಿದೆನು, ಇನ್ನೇನು ಹೇಳಬೇಕು ಕೇಳು.

ಸದ್ಗುರುವು ಹೀಗೆ ಪ್ರಶ್ನ ಮಾಡಲು, ವಿವೇಕಶೀಲನು—ಗುರುದೇವಾ, ಸಾಧಕನಿಗೆ ಉಪಯುಕ್ತವಾದ ಹಲವು ವಿಷಯಗಳನ್ನು ಹೇಳಿದ್ರಿ; ಆದರೆ ಶಿಷ್ಯನು ಗುರುವಿಗೆ ಹ್ಯಾಗೆ ಶರಣು ಹೋಗಬೇಕೆಂಬದನ್ನೂ, ಗುರುಸೇವೆಯು ಹ್ಯಾಗೆ ಮಾಡಬೇಕೆಂಬದನ್ನೂ ನಮಗೋಸ್ಕರ ನಿರೂಪಿಸು, ಎಂದು ಕೇಳಲು, ಮಹಾತ್ಮರಾದ ಸಿದ್ಧಮುನಿಗಳು—ವಿವೇಕಶೀಲಾ, ನಿನ್ನ ಹೆಸರಿಗೆ ಒಪ್ಪುವಂತೆ ನೀನು ಪ್ರಶ್ನಮಾಡುವದನ್ನು ನೋಡಿ ನನಗೆ ಬಹಳ ಸಂತೋಷವಾಗುತ್ತದೆ. ನಿನ್ನ ಉತ್ತಮವಾದ ಎರಡು ಪ್ರಶ್ನಗಳ ಸಂಬಂಧದಿಂದ ಜ್ಞಾನಿವರ್ಯರಾದ ನಿಜಗುಣಿ ಶಿವಯೋಗಿಗಳು ತಮ್ಮ ವಿವೇಕಚಿಂತಾಮಣಿಯೆಂಬ ಗ್ರಂಥದಲ್ಲಿ ಹೇಳಿದ್ದನ್ನು ನಿನಗೆ ಹೇಳುವೆನು ಕೇಳು. ಶಿಷ್ಯನು ವಿಧಿಯಂತೆ ಗುರುವಿಗೆ ಶರಣುಹೋಗುವ ಕ್ರಮವನ್ನು, ಅಂದರೆ ಶಿಷ್ಯೋಪಸನ್ನತಿಯನ್ನು ಕುರಿತು ನಿನಗೆ ಮೊದಲು ಹೇಳುವೆನು.

ಶಿಷ್ಯೋಪಸನ್ನತಿ:—ಅಧಿಕಾರಿಯಾದ ಶಿಷ್ಯನು ತ್ರಯಾಗ್ನಿಯಿಂದ ಬೆಂದು ವ್ಯಾಕುಲಚಿತ್ತನಾಗಿ—ನಾನು ಯಾರು? ನನಗೆ ಈ ಸಂಸಾರವು ಏನು ಕಾರಣದಿಂದ ಬಂದಿತು? ಇದು ಯಾರ ಮುಖದಿಂದ ನಿವೃತ್ತಿಯಾದೀತು? ಎಂಬದನ್ನು ವಿಚಾರಿಸಿ ನೋಡಿ, ಪತ್ರ–ಪುಷ್ಪ–ಫಲ–ಸಮಿಧಾದ್ಯುಪಹಾರಪಾಣಿಯಾಗಿ, ವಿದ್ಯಾ–ವಿನಯ–ವೈರಾಗ್ಯಗಳೊಡನೆ ಷಡ್ಗುಣೈಶ್ವರ್ಯ ಸಂಪನ್ನನಾದ ಶ್ರೋತ್ರಿಯ–ಬ್ರಹ್ಮನಿಷ್ಠ–ಸದ್ಗುರುವನ್ನು ಹೊಂದಿ, ಚೈತನ್ಯ–ಶಾಶ್ವತ–ಶಾಂತ ಎಂಬವೇ ಮೊದಲಾದ ಮಂತ್ರಾಷ್ಟಕಪಠಣಪೂರ್ವಕವಾಗಿ, ಪದದ್ವಯ–ಭುಜದ್ವಯ–ಹಸ್ತದ್ವಯ–ವಕ್ಷೋ–ಲಲಾಟಗಳೆಂಬ ಅಷ್ಟಾಂಗಗಳೂ ನೆಲವನ್ನು ಮುಟ್ಟುವಂತೆ ಪ್ರಣತನಾಗಿ, ಆಮೇಲೆ ಎದ್ದು ಭಕ್ತಿಭಾವದಿಂದ ಕರಕಮಲವನ್ನು ಮುಗಿದು ಕಿಂಕರಭಾವವನ್ನೂ, ಕಾರ್ಪಣ್ಯವನ್ನೂ ತೋರಿಸಿ, ಕೂರ್ಮೆಯಿಂದ ಕೊಂಡಾಡಿ—"ಎಲೈ, ಜ್ಞಾನ–ವೈರಾಗ್ಯ–ಕೀರ್ತಿ–ಶ್ರೀ–ಬಲ–ಐಶ್ವರ್ಯಗಳೆಂಬ ಷಡ್ಗುಣಸಮಗ್ರತೆಯಿಂದ ಭಗವಂತನಾದ ಸದ್ಗುರುವೇ, ಆಯಾಸವಿಲ್ಲದೆ ಯಾವ ತೆರದಿಂದಾದರೂ ನನ್ನ ಈ ಭವಬಂಧನವನ್ನು ಬಿಡಿಸಬೇಕು, ಎಂದು ವಿಜ್ಞಾಪಿಸುವದೇ ಶಿಷ್ಯನ ವಿಧಿವದುಪ್ರಸನ್ನತ್ವವು. ವಿವೇಕಶೀಲಾ, ಹೀಗೆ ಸದ್ಗುರುವಿಗೆ ಶರಣುಹೋದಬಳಿಕ ಆತನ ಸೇವೆಯನ್ನು ಹ್ಯಾಗೆ ಮಾಡಬೇಕೆಂಬದನ್ನು ಯೋಗಿವರ್ಯರು ತಮ್ಮ ಗ್ರಂಥದಲ್ಲಿ ಸ್ವಲ್ಪದರೊಳಗೆ ಹೇಳಿರುವರು ಕೇಳು.

ಗುರುಸೇವಾ ವಿಧಿ:—ಸಾಧನಚತುಷ್ಟಯ ಸಂಪನ್ನನಾದ ಅಧಿಕಾರಿಶಿಷ್ಯನು ಮಾಡುವ ಗುರುಸೇವೆಯು—೧ ಆಪ್ತ ೨ ಅಂಗ ೩ ಸ್ಥಾನ ೪ ಸದ್ಭಾವ ಎಂದು ನಾಲ್ಕು ವಿಧವಾಗಿರುವದು. ಗುರುವಿಗೆ ಅನುಕೂಲವಾದ ವೃತ್ತಿಯೇ ಆಪ್ತವೆನಿಸುವದು; ಗುರುಪಾದ–ಪ್ರಕ್ಷಾಲನಾದಿಕವೇ ಅಂಗವೆನಿಸುವದು; ಗುರುವಿನ ಗೃಹ–ಕ್ಷೇತ್ರರಕ್ಷಣಾದಿಕವೇ ಸ್ಥಾನವೆನಿಸುವದು; ಗುರುವೇ ಸಾಕ್ಷಾತ್ ಪರಮೇಶ್ವರನೆಂಬ ವಿಶ್ವಾಸವೇ ಸದ್ಭಾವವೆನಿಸುವದು. ವಿವೇಕಶೀಲಾ, ಇಷ್ಟು ಗೊತ್ತಾದಮೇಲೆ ಗುರು–ಸೇವೆಯ ಪದ್ಧತಿಯನ್ನು ನಿನಗೆ ವಿವರಿಸಿ ಹೇಳುವದೇಕೆ? ಮಹಾತ್ಮರ ಈ ಶಾಸ್ತ್ರೀಯ ಪದ್ಧತಿಯಿಂದ ಗುರುಸೇವೆ ಮಾಡಿ ನೀನು ಧನ್ಯನಾಗತಕ್ಕದ್ದು. ಶಿಷ್ಯೋತ್ತಮಾ, ಇನ್ನು ನಿನಗೇನು ಹೇಳಲಿ?

ಸಿದ್ಧಮುನೀಶ್ವರನ ಈ ಪ್ರಶ್ನವನ್ನು ಕೇಳಿ ವಿವೇಕಶೀಲನು—ಗುರುದೇವಾ, ನೀನು ಈಗ "ಸಾಧನಚತುಷ್ಟಯ ಸಂಪನ್ನ–ಶಿಷ್ಯನು" ಎಂದು ಹೇಳಿದೆಯಲ್ಲ? ಆ ಸಾಧನಚತುಷ್ಟಯಗಳನ್ನು ಕುರಿತು ನನಗೆ ಹೇಳು, ಎಂದು ಕೇಳಲು. ಸಿದ್ಧಮುನಿಗಳು—ವಿವೇಕಶೀಲಾ, ಸಾಧನ ಚತುಷ್ಟಯಸಂಪನ್ನತೆಯೇ ಸರ್ವಶಿಷ್ಯ ಸಾಧ್ಯ ಅಧಿಕಾರಸಂಪನ್ನತೆಯು. ಈ ಸಂಬಂಧದಿಂದ ಶಿವಯೋಗಿಗಳು—ವೇದಾಂತದ ಶ್ರವಣಕ್ಕೆ, ಮನನ–ನಿದಿಧ್ಯಾಸಗಳಿಗೆ ಧರ್ಮಜಿಜ್ಞಾಸಾಪೂರ್ವಕವಾಗಿ ಕರ್ಮಕಾಂಡಸಿದ್ಧನಾದ ಸಚ್ಛ್ರೋತ್ರಿಯನೇ ಅಧಿಕಾರಿಯೆಂದು ಹೇಳಿದ್ದರೂ, ಬ್ರಹ್ಮಜ್ಞಾನಸಾಧ್ಯವಾದ ಮೋಕ್ಷವು ಜಾತ್ಯಾದಿ ನಿರ್ಬಂಧಗಳಿಲ್ಲದೆ ಪರಿಪಕ್ವಾಂತಃಕರಣದವರಿಗೆ ಮಾತ್ರ ಲಭ್ಯವಾಗಿರುವದರಿಂದ, ಸಾಧನ ಚತುಷ್ಟಯವು

ಸಂಪನ್ನನಾದವನೇ ಬ್ರಹ್ಮವಿದ್ಯೆಗೆ ಅಧಿಕಾರಿಯೆಂದು ಸಿದ್ಧಾಂತ ಮಾಡಲ್ಪಟ್ಟಿದ್ದಾಗಿರುವ ವೆಂದು ಹೇಳಿ, ಸಾಧನಚತುಷ್ಟಯಗಳನ್ನು ಕುರಿತು ಹೀಗೆ ಹೇಳಿರುವರು, ಕೇಳು.

ಸಾಧನಚತುಷ್ಟಯ:—(೧)ನಿತ್ಯಾನಿತ್ಯವಸ್ತುವಿವೇಕ (೨)ಇಹಾಮುತ್ರಾರ್ಥ ಫಲಭೋಗ ವಿರಾಗ(೩)ಶಮಾದಿಷಟ್ಕಸಂಪತ್ತಿ (೪) ಮುಮುಕ್ಷುತ್ವ ಎಂಬವೇ ಸಾಧನಚತುಷ್ಟಯಗಳು. (೧) ಸಚ್ಚಿದಾನಂದರೂಪನಾದ ಆತ್ಮನೊಬ್ಬನೇ ನಿತ್ಯನು. ಅನೃತ-ಜಡ-ದುಃಖಾತ್ಮಕವಾದ ದ್ವೈತ ಪ್ರಪಂಚವೆಲ್ಲ ಮಿಥ್ಯೆಯೆಂದು ವಿಚಾರ-ಪರೀಕ್ಷೆಗಳಿಂದ ದೃಢತರವಾಗಿ ತಿಳಿಯುವದೇ ನಿತ್ಯಾನಿತ್ಯವಸ್ತುವಿವೇಕವೆನಿಸುವದು; (೨) ಇಹಪರಗಳಲ್ಲಿ ಸ್ರಕ್-ಚಂದನ-ವನಿತಾದಿ ವಿಷಯಗಳೆಲ್ಲವೂ ಕರ್ಮಜನ್ಯವಾಗಿರುವದರಿಂದ ಅನಿತ್ಯವಾಗಿಯೂ, ಸಂಪಾದಿಸುವಾಗಿನಿಂದ ಭೋಗಿಸುವವರೆಗೆ ವಿಚಾರಿಸಲು ಅವು ಕಷ್ಟಸಾಧ್ಯವಾಗಿರುವದರಿಂದ ವೈರಸ್ಯಕಾರಣವಾಗಿಯೂ, ಅರಿಷಡ್ವರ್ಗ-ಸನ್ನಿಹಿತವಾಗಿ ಜ್ಞಾನಪ್ರತಿಬಂಧಕವಾಗಿರುವದರಿಂದ, ನಿತ್ಯಾನಂದಪ್ರತಿಬಂಧಕವಾಗಿಯೂ ಇರುವ ಸಂಸೃತಿಯು ದುಃಖರೂಪವೆಂದರಿತು, ನಾಯಿಯು ಕಾರಿಕೆ--ಮೂತ್ರ-ಮಲಗಳಂತೆ ಭೋಗದಲ್ಲಿ ಮನಸ್ಸು ಇಚ್ಛಿಸದೆ ಸನ್ಯಾಸಿಯಾಗಿರುವದೇ ಇಹಾಮುತ್ರಾರ್ಥ ಫಲಭೋಗವಿರಾಗವೆನಿಸುವದು; (೩) ಶಮ-ದಮ-ತಿತಿಕ್ಷೆ-ಸಮಾಧಾನ-ಶ್ರದ್ಧಾ--ಭಕ್ತಿಗಳೆಂಬ ಆರು, ಶಮಾದಿ ಷಟ್ಕವೆನಿಸುವದು. ಅವುಗಳಲ್ಲಿ ಅಂತಃಕರಣನಿಗ್ರಹವೇ ಶಮೆಯು; ಬಾಹ್ಯಕರಣ ನಿಗ್ರಹವೇ ದಮೆಯು; ಪ್ರಾರಬ್ಧಸಿದ್ಧವಾದ ತಾಪತ್ರಯ ಶೀತೋಷ್ಣಾದಿ ದುಃಖಗಳನ್ನು ಸೈರಿಸುವದೇ ತಿತಿಕ್ಷೆಯು; ಕಾಮಕ್ರೋಧಾದಿ ಕಲುಷವಾಗದ ಸಾತ್ವಿಕವಾದ ಚಿತ್ತಸ್ಥೈರ್ಯವೇ ಸಮಾಧಾನವು; ಗುರುವೇದಾಂತವಾಕ್ಯಗಳಲ್ಲಿರುವ ದೃಢತರವಾದ ವಿಶ್ವಾಸವೇ ಶ್ರದ್ಧೆಯು; ಪರಮೇಶ್ವರನಲ್ಲಿ ಆರಾಧ್ಯತ್ವ-ತನ್ನಲ್ಲಿ ಆರಾಧಕತ್ವ, ಗುರುವಿನಲ್ಲಿ ಸೇವ್ಯತ್ವ-ತನ್ನಲ್ಲಿ ಸೇವಕತ್ವ, ವೇದಾಂತಶಾಸ್ತ್ರದಲ್ಲಿ ಶಾಸನತ್ವ-ತನ್ನಲ್ಲಿ ಶಾಸಕತ್ವವೆಂದು ನಂಬಿರುವದೇ ಭಕ್ತಿಯು; (೪) ಬೆಂಕಿಹತ್ತಿದ ಮನೆಯೊಳಗಿದ್ದ ಕುಟುಂಬಿಗನು ಹೆಂಡಿರು ಮಕ್ಕಳು ಮೊದಲಾದವರನ್ನು ಬಿಟ್ಟು ತಾನು ಉಳಿದು ಓಡುವಂತೆ, ಜನನ-ಮರಣ-ದುಃಖಪ್ರವಾಹರೂಪವಾದ ಸಂಸಾರ ತಾಪವನ್ನು ಸಹಿಸಲಾರದೆ ಮೋಕ್ಷವನ್ನಿಚ್ಛಿಸಿ ಸರ್ವಸನ್ಯಸ್ತನಾಗುವದೇ ಮುಮುಕ್ಷುತ್ವವು.

---

## ಜ್ಞಾನಪ್ರದೀಪಕಿರಣ,

### ೯ನೆಯದು.

## ಯೋಗತ್ರಯನಿರೂಪಣ.



ಈ ಮೇರೆಗೆ ಸಿದ್ಧನಾಮೇಶ್ವರನು ಹೇಳಿದ್ದನ್ನು ಕೇಳಿ ವಿವೇಕಶೀಲನು—"ಸದ್ಗುರೊ, ನಿನ್ನ ಬೋಧದಿಂದ ನಾನು ನಿಶ್ಚಯವಾಗಿ ಕೃತಾರ್ಥನಾದೆನು. ನೀನು ಈಗ ವಿವೇಚಿಸಿದ

"ಅಧಿಕಾರ ಸಂಪನ್ನತೆ" "ಸದ್ಗುರುವಿನ ಲಕ್ಷಣವೂ ಆತನ ಮಹಿಮೆಯೂ" "ಮುಮುಕ್ಷುವಿನ ಕರ್ತವ್ಯ" ಎಂಬ ವಿಷಯಗಳನ್ನು ಕೇಳಿ ನನಗೆ ಬಹಳ ಸಮಾಧಾನವಾಯಿತು; ಆದರೆ ಸದ್ಗುರೋ, ನಿನ್ನ ಬೋಧದಂತೆ ನಾನು ಸದ್ಗುರುವಾದ ನಿನಗೆ ಶರಣು ಬಂದಿದ್ದೇನೆ. ನಿನ್ನಂಥ ಮಹಾತ್ಮನ ಆಶ್ರಯವು ದೊರೆತಿರುವದರಿಂದ ನಾನು ಉದ್ಧಾರದ ಯಾವ ಮಾರ್ಗವನ್ನು ಹಿಡಿಯಲಿಕ್ಕೂ ನಿಶ್ಚಯವಾಗಿ ಅಧಿಕಾರಿಯಾಗಿರುವೆನು. ನನ್ನ ಪ್ರಾಚೀನ ಪುಣ್ಯದಿಂದಲೇ ನನಗೆ ಸತ್ಸಮಾಗಮದ ಯೋಗವು ಒದಗಿರುತ್ತದೆ; ಆದ್ದರಿಂದ "ಗಾಳಿ ಬಿಟ್ಟಕೈಯಲ್ಲಿ ತೂರಿಕೊಳ್ಳೆ"ಂಬ ವ್ಯಾವಹಾರಿಕ ಬೋಧದಿಂದ ನಾನು ಈ ಭವಬಂಧದಿಂದ ಮುಕ್ತನಾಗಲು ಇಚ್ಛಿಸುವೆನು; ಆದ್ದರಿಂದ ನನಗೆ ಮಾರ್ಗವನ್ನು ತೋರಿಸು, ಎಂದು ಬೇಡಿಕೊಳ್ಳಲು, ಸಿದ್ಧಮುನೀಶ್ವರರು—ವಿವೇಕಶೀಲಾ, ನಿನ್ನಂತೆಯೇ ಭಗವದ್ಭಕ್ತಶಿಖಾಮಣಿಯಾದ ಉದ್ಧವನು ಭಾಗವತದಲ್ಲಿ ಭಗವಾನ್ ಶ್ರೀಕೃಷ್ಣನನ್ನು ಕುರಿತು ಪ್ರಶ್ನ ಮಾಡಿದಾಗ, ಆ ಭಗವಂತನು ಹೇಳಿದ್ದನ್ನೇ ನಿನಗೆ ನಾನು ಹೇಳುವೆನು ಕೇಳು. ಶ್ರೀ ಕೃಷ್ಣನು ಉದ್ಧವನನ್ನು ಕುರಿತು—ಉದ್ಧವಾ, ಮನುಷ್ಯನ ಶಾಶ್ವತ ಕಲ್ಯಾಣವಾಗಬೇಕೆಂದು ನಾನು ಕರ್ಮಯೋಗ, ಜ್ಞಾನಯೋಗ, ಭಕ್ತಿಯೋಗಗಳೆಂಬ ಮೂರು ಉಪಾಯಗಳನ್ನು ಹೇಳಿರುವೆನು; ಇವುಗಳ ಹೊರತು ನಾಲ್ಕನೆಯ ಉಪಾಯವು ಎಲ್ಲಿಯೂ ಉಪಲಬ್ಧವಾಗಿಲ್ಲ. ಈ ಮೂರೂ ಉಪಾಯಗಳಿಗೆ ಕ್ರಮವಾಗಿ ಕರ್ಮಕಾಂಡ, ಜ್ಞಾನಕಾಂಡ, ಉಪಾಸನಾಕಾಂಡ ಎಂದು ಅನ್ನುವರು. ಉದ್ಧವಾ, ಕರ್ಮದ ಫಲಗಳು ದುಃಖರೂಪವೆಂಬದನ್ನರಿಯದೆ ಕರ್ಮಗಳಲ್ಲಿ ಆಸಕ್ತಿಯನ್ನಿಟ್ಟವನಿಗೆ ಕರ್ಮಯೋಗವು ಫಲದ್ರೂಪವಾಗುವದು; ಕರ್ಮಗಳ ಫಲಗಳು ದುಃಖರೂಪವೆಂಬದನ್ನರಿತು ವೈರಾಗ್ಯದಿಂದ ಆ ಕರ್ಮಗಳ ತ್ಯಾಗ ಮಾಡುವವನಿಗೆ ಜ್ಞಾನಯೋಗವು ಫಲದ್ರೂಪವಾಗುವದು; ಈಶ್ವರನಾದ ನನ್ನ ಗುಣಕರ್ಮಾದಿಗಳಲ್ಲಿ ಸಹಜವಾಗಿ ಪ್ರೇಮವು ಉತ್ಪನ್ನವಾಗಿ, ಕರ್ಮದ ವಿಷಯದಲ್ಲಿ ವಿಶೇಷ ಆಸಕ್ತನು, ಅಥವಾ ಅನಾಸಕ್ತನು ಆಗದಿರುವವನಿಗೆ ಭಕ್ತಿಯೋಗವು ಫಲದ್ರೂಪವಾಗುವದು. ಹೀಗೆ ಪರಮಾರ್ಥದ ಸಾಧನಗಳು ಮಾನಸಿಕ ಸ್ಥಿತಿಯ ಭೇದವನ್ನವಲಂಬಿಸಿರುವದರಿಂದ, ಮಾನಸಿಕ ಸ್ಥಿತಿಯು ಬದಲಾದಕೂಡಲೆ ಸಾಧನವನ್ನೂ ಬದಲಿಸುವದು ಇಷ್ಟವಾಗಿರುತ್ತದೆ. ಕರ್ಮಫಲಗಳ ವಿಷಯದ ಆಸಕ್ತಿ, ಕರ್ಮಫಲಗಳ ವಿಷಯದ ಅನಾಸಕ್ತಿ, ಕರ್ಮಫಲಗಳ ವಿಷಯದ ಔದಾಸೀನ್ಯ ಈ ಮೂರು ಸ್ಥಿತಿಗಳನ್ನನುಸರಿಸಿ, ಕರ್ಮಕಾಂಡ, ಜ್ಞಾನಕಾಂಡ, ಭಕ್ತಿಕಾಂಡ ಇವು ಉಪಾಯಗಳಾಗಿರುವವು. ಇದರಿಂದ ಸ್ಪಷ್ಟವಾಗುವದೇನಂದರೆ, ಕರ್ಮಫಲದ ಆಸಕ್ತಿಯು ಕಡಿಮೆ ಅಥವಾ ನಷ್ಟವಾದಕೂಡಲೆ, ಕರ್ಮಯೋಗದ ಅವಶ್ಯಕತೆಯು ಕಡಿಮೆ ಅಥವಾ ನಷ್ಟವಾಗುವದು; ಅಂದರೆ ಭಕ್ತಿಯೋಗದ ಅಥವಾ ಜ್ಞಾನಯೋಗದ ಅವಶ್ಯಕತೆಯುಂಟಾಗುವದು.; ಆದ್ದರಿಂದ ಉದ್ಧವಾ, ಈಶ್ವರನಾದ ನನ್ನ ಗುಣಕೀರ್ತನದ ಸವಿಹತ್ತಿ, ಕರ್ಮಗಳ ವಿಷಯವಾಗಿ ಔದಾಸೀನ್ಯವು ಉತ್ಪನ್ನವಾಗದಿರುವವರೆಗೆ, ಅಥವಾ ಕರ್ಮಗಳ ಫಲಗಳು ದುಃಖಪರಿಣಾಮಿಗಳಾಗಿರುವವೆಂಬದರ ಅರಿಕೆಯಾಗಿ ಅವು

ಗಳ ವಿಷಯದ ವೈರಾಗ್ಯವು ಉತ್ಪನ್ನವಾಗದಿರುವವರೆಗೆ ಕರ್ಮಯೋಗವನ್ನು ನಡಿಸ ಬೇಕಾಗುವದು.

**ಕರ್ಮಯೋಗ:**—ಅಪ್ಪಾ, ಕೇವಲ ಕರ್ಮಯೋಗದ ಸಾಮರ್ಥ್ಯವಾದರೂ ಸಾಮಾನ್ಯವೆಂದು ತಿಳಿಯಬೇಡ. ನಿಷಿದ್ಧಕರ್ಮಗಳನ್ನೂ, ಕಾಮ್ಯಕರ್ಮಗಳನ್ನೂ ಪರಿತ್ಯಜಿಸಿ, ಫಲಾಸಕ್ತಿಯಿಲ್ಲದೆ ಶ್ರುತ್ಯನುಸಾರವಾಗಿ ಯಥಾವಿಧಿ ಯಜ್ಞಯಾಗಾದಿ ಕರ್ಮಗಳನ್ನು ಮಾಡುವವನು ನರಕಕ್ಕಾಗಲಿ, ಸ್ವರ್ಗಕ್ಕಾಗಲಿ ಹೋಗದೆ, ಪರಮಾತ್ಮನ ಸಚ್ಚಿದಾನಂದಸ್ವರೂಪದಲ್ಲಿ ಲೀನನಾಗುವನು! ಯಾಕಂದರೆ, ನಿಷಿದ್ಧಕರ್ಮಮಾಡುವವನಿಗೆ ನರಕವೂ, ವಿಹಿತವಾದ ಕಾಮ್ಯಕರ್ಮಮಾಡುವವನಿಗೆ ಸ್ವರ್ಗವೂ ಫಲಗಳಾಗಿದ್ದು, ವಿಹಿತವಾದ ಕರ್ಮಗಳನ್ನು ನಿಷ್ಕಾಮವಾಗಿ ಮಾಡುವವನಿಗೆ ಈ ಎರಡೂ ಸ್ಥಿತಿಗಳಿಂದ ಬೇರೆಯಾದ ಮೂರನೆಯ ನಿರ್ಗುಣನಿರ್ವಿಕಾರಸ್ಥಿತಿಯೆಂದರೆ ಮೋಕ್ಷದ ಹೊರತು ಅನ್ಯಗತಿಯಿಲ್ಲವು. ಉದ್ಧವಾ, ನಿಷ್ಕಾಮಬುದ್ಧಿಯಿಂದ ವಿಹಿತಕರ್ಮಗಳನ್ನು ಮಾಡುವ ಸಾಧಕನಿಗೆ ಅದೇಜನ್ಮದಲ್ಲಿ ಜ್ಞಾನ-ಭಕ್ತಿಗಳಲ್ಲಿ ಯಾವದೊಂದರ ಸಾಧ್ಯವು ತನ್ನಿಂದತಾನೇ ಆಗುವದರಿಂದ, ಅವನು ಜ್ಞಾನಯೋಗದಲ್ಲಿಯಾಗಲಿ, ಭಕ್ತಿಯೋಗದಲ್ಲಿಯಾಗಲಿ ರಮಮಾಣನಾಗಿ ಕರ್ಮಯೋಗವನ್ನು ಬಿಟ್ಟುಕೊಡುವನು. ಸಾರಾಂಶ, ಮುಮುಕ್ಷುವು ನಿಷ್ಕಾಮಕರ್ಮಮಾಡುವಾಗ ಅವನಿಗೆ ಮೃತ್ಯುವು ಒದಗಿದರೆ ಅವನು ಒಮ್ಮೆಲೆ ಪರಬ್ರಹ್ಮದಲ್ಲಿ ಲೀನನಾಗುವನು; ಆದರೆ ಹೀಗಾಗದೆ ಕರ್ಮಯೋಗವು ಸಿದ್ಧಿಸಿದಬಳಿಕ ಅವನು ಜೀವದಿಂದ ಇದ್ದರೆ, ಕರ್ಮದ ಮೇಲಿನ ಆಸಕ್ತಿಯು ಕಡಿಮೆಯಾಗಿ ಅವನು ಭಕ್ತಿಯೋಗವನ್ನು ಸ್ವೀಕರಿಸುವನು; ಅಥವಾ ಕರ್ಮಯೋಗದ ಮೇಲಿನ ಆಸಕ್ತಿಯು ಸಂಪೂರ್ಣನಷ್ಟವಾಗಿ ಅವನು ಜ್ಞಾನಯೋಗವನ್ನು ಸ್ವೀಕರಿಸುವನು. ಹೀಗಾಗಿ ಅವನು ಕಡೆಗೆ ಮೋಕ್ಷವನ್ನು ಹೊಂದುವನು!

**ನರದೇಹ ಪ್ರಶಂಸಾ:**—ಅಪ್ಪಾ ಉದ್ಧವಾ, ಹೀಗೆ ಮನುಷ್ಯದೇಹವು ನಿಷ್ಕಾಮಕರ್ಮದ ದ್ವಾರದಿಂದ, ಅಥವಾ ಸ್ವತಂತ್ರವಾಗಿ ಪರಮೇಶ್ವರನ ಭಕ್ತಿಯನ್ನು, ಅಥವಾ ಪರಬ್ರಹ್ಮದ ಜ್ಞಾನವನ್ನು ಒದಗಿಸಿಕೊಡತಕ್ಕದಾದ್ದರಿಂದ ನರಕದಲ್ಲಿದ್ದವರೂ, ಸ್ವರ್ಗದಲ್ಲಿದ್ದ ದೇವತೆಗಳೂ ಕೂಡ ನರದೇಹವನ್ನು ಇಚ್ಛಿಸುವರು! ಯಾಕಂದರೆ ಆ ಎರಡೂ ಲೋಕಗಳೂ ಜ್ಞಾನ-ಭಕ್ತಿಗಳನ್ನು ಒದಗಿಸಿಕೊಡಲಿಕ್ಕೆ ಅಪಾತ್ರವಾಗಿರುವವು. ಅಂತೇ ವಿಚಾರವುಳ್ಳವನು ನರಕದಂತೆ ಸ್ವರ್ಗವನ್ನೂ ತಿರಸ್ಕರಿಸತಕ್ಕದ್ದು; ಹಾಗು ಪುನಃ ನರದೇಹಪ್ರಾಪ್ತಿಯ ವಾಸನೆಯನ್ನು ತಾಳದೆ ಇದೇ ಜನ್ಮದಲ್ಲಿಯೇ ದೇಹಬಂಧನದಿಂದ ಮುಕ್ತನಾಗುವ ವ್ಯವಸ್ಥೆಯನ್ನು ಮಾಡತಕ್ಕದ್ದು. ಉದ್ಧವಾ, ಬರಿಯ ನರಜನ್ಮಪ್ರಾಪ್ತಿಯಾಗಿ ಪ್ರಯೋಜನವೇನು? ಕರ್ಮ-ಭಕ್ತಿ-ಜ್ಞಾನಗಳಲ್ಲಿ ಯಾವದನ್ನೂ ಸಾಧಿಸದ ಮನುಷ್ಯಜನ್ಮವು ವ್ಯರ್ಥವೇಸರಿ! ಆದ್ದರಿಂದ ದೇಹದ ನಶ್ವರತೆಯನ್ನರಿತು ಮೃತ್ಯುವು ಪ್ರಾಪ್ತವಾಗುವದರೊಳಗೇ ಮೋಕ್ಷಸಾಧನದ ಅವಲಂಬನಮಾಡಿ ದೇಹದ ಸಾಫಲ್ಯಮಾಡುವದು ಇಷ್ಟವಾಗಿರುವದು. ನರದೇಹವು ಪ್ರಾಪ್ತವಾದಾಗ ದೇಹಸಂಗೋಪನದಲ್ಲಿಯೂ, ಇಂದ್ರಿ

ಯಗಳ ತೃಪ್ತಿಯಲ್ಲಿಯೂ ಜೀವನು ತತ್ಪರನಾಗಿ ಮೋಕ್ಷಕ್ಕೆ ವಿಘ್ನಒದಗುವ ಸಂಭವವು ವಿಶೇಷವಾಗಿರುತ್ತದೆ! ಆದ್ದರಿಂದ ಮುಮುಕ್ಷುವು ವಾಸನೆಯನ್ನು ಪರಿತ್ಯಜಿಸಿ ಶಾಂತನಾಗಿರ ಬೇಕು. ಗಿಡವನ್ನು ಕಡಿಯಹತ್ತಿದಕೂಡಲೆ ಅದರ ಮೇಲೆ ಗೂಡು ಕಟ್ಟಿಕೊಂಡಿದ್ದ ಹಕ್ಕಿಯು ಕೂಡಲೆ ಹಾರಿಹೋಗುವಂತೆ, ಈ ದೇಹದ ಆಯುಷ್ಯವನ್ನು ಕಡಿಯಲಿಕ್ಕೆ ಹಗಲು ರಾತ್ರಿಗಳು ಉಪಕ್ರಮಿಸಿರುವವೆಂದು ತಿಳಿದು ವಿವೇಕಿಯಾದ ಪುರುಷನು ದೇಹವನ್ನು ತ್ಯಜಿಸಲು ಸಿದ್ಧನಾಗಿರಬೇಕು! ಹೀಗೆ ಪರಮಾರ್ಥಸಾಧಕವಾದ ಅತ್ಯಂತ ಶ್ರೇಷ್ಠನರದೇಹವು ಅತ್ಯಂತ ದುರ್ಲಭವಾದದ್ದರಿಂದ ಅದರ ನಾಶವಾಗುವದರೊಳಗಾಗಿ ಜ್ಞಾನ-ಭಕ್ತಿ ಮೊದಲಾದ ಸಾಧನಗಳಿಂದ ಸಂಸಾರ—ಮುಕ್ತನಾಗದವನು ಆತ್ಮಘಾತಕಿಯೇ ಸರಿ!

ಜ್ಞಾನಯೋಗ: —ಉದ್ಧವಾ, ದುಃಖರೂಪವಾದ ಯಜ್ಞಯಾಗಾದಿಕರ್ಮಗಳ ಫಲಗಳ ವಿಷಯವಾಗಿ ವೈರಾಗ್ಯತಾಳಿದವನು ಇಂದ್ರಿಯನಿಗ್ರಹಮಾಡಿ ಬ್ರಹ್ಮಚಿಂತನವನ್ನು ಸಾಗಿಸಬೇಕು. ಬ್ರಹ್ಮವಿಚಾರದಲ್ಲಿ ಸ್ಥಿರಗೊಳಿಸಿದ ಮನಸ್ಸು ಕೂಡಲೆ ಚಂಚಲವಾದರೆ, ಕಡೆಯಲ್ಲಿ ಹ್ಯಾಗಾದರೂ ಇದನ್ನು ಜಗ್ಗಿಹಿಡಿಯಲೇ ಬೇಕಾಗಿರುವದೆಂಬದನ್ನು ನೆನಪಿನಲ್ಲಿಟ್ಟು, ಆ ಮನಸ್ಸನ್ನು ಕೆಲಮಟ್ಟಿಗೆ ಸ್ವಚ್ಛಂದವಾಗಿ ವರ್ತಿಸಗೊಡಬೇಕು; ಅಂದರೆ ಮನಸ್ಸಿನ ಒಲವಿನಂತೆ ಕೆಲಮಟ್ಟಿಗೆ ನಡೆಯಬೇಕು. ಹೀಗೆ ಮೊಟ್ಟ ಕುದುರೆಯನ್ನು ಅದರ ಒಲವು ನೋಡಿ ನಡೆದು ಅದನ್ನು ಸ್ವಾಧೀನಪಡಿಸಿಕೊಳ್ಳುವಂತೆ, ಮನಸ್ಸನ್ನು ಅದರ ಒಲವಿಗನುಸರಿಸಿ ಕೆಲಮಟ್ಟಿಗೆ ನಡೆದು ಮೆಲ್ಲಮೆಲ್ಲನೆ ಅದನ್ನು ಸ್ವಾಧೀನಪಡಿಸಿಕೊಳ್ಳಬೇಕು. ಮನಸ್ಸಿನ ಓಟವು ಎತ್ತಕಡೆಗಿರುವದೆಂಬದನ್ನು ಅವಶ್ಯವಾಗಿ ತಿಳಿದುಕೊಂಡಿರಬೇಕು. ಮನಸ್ಸು ತೀರ ಕೈಮೀರಿ ಕೊಸರಿಕೊಂಡು ಹೋಗುವಂಥ ಕೃತ್ಯಗಳನ್ನು ಮಾಡಬಾರದು. ಅಂಥ ಪ್ರಸಂಗದಲ್ಲಿ ಪ್ರಾಣಾಯಾಮಾದಿ ಸಾಧನಗಳಿಂದ ವೃತ್ತಿಯನ್ನು ಅಂತರ್ಮುಖವಾಗಿ ಮಾಡಿ, ರಾಜಸ-ತಾಮಸ ಬುದ್ಧಿಯನ್ನು ತ್ಯಜಿಸಿ ಸಾತ್ವಿಕ ಬುದ್ಧಿಯ ಸಹಾಯದಿಂದ ಮನಸ್ಸಿನ ಸಂಯಮನ ಮಾಡಬೇಕು! ಉದ್ಧವಾ, ಸ್ವಾಧೀನಪಡಿಸಿಕೊಂಡ ಮನಸ್ಸನ್ನು ಸ್ಥಿರಪಡಿಸಿಕೊಳ್ಳುವದೂ ಅತ್ಯಂತ ದುಸ್ತರವಾಗಿರುವದು. ಅದನ್ನು ಸುಸ್ಥಿರಗೊಳಿಸುವ ಉಪಾಯವೆಂದರೆ, ಮುಮುಕ್ಷುವು ಈ ಸೃಷ್ಟಿಯ ಅನುಲೋಮಘಟನೆಯನ್ನೂ, ಪ್ರತಿಲೋಮ ನಾಶವನ್ನೂ ಯಾವಾಗಲೂ ಚಿಂತಿಸಬೇಕು. ಚಿತ್ತವು ಪೂರ್ಣಸ್ಥಿರವಾಗುವವರೆಗೆ ಈ ನಿಧಿಧ್ಯಾಸವನ್ನು ಬಿಡಬಾರದು; ಅಂದರೆ ಮನಸ್ಸಿಗೆ ಐಹಿಕವಿಷಯಗಳಲ್ಲಿ ಪೂರ್ಣವೈರಾಗ್ಯವು ಉತ್ಪನ್ನವಾಗಿ ಸದ್ಗುರುವಿನ ಉಪದೇಶ ಮೊದಲಾದವುಗಳ ಪ್ರಕಾಶವು ಚಿತ್ತದಲ್ಲಿ ಬಿದ್ದು ಇವೆಲ್ಲವುಗಳ ನಿದಿಧ್ಯಾಸದಿಂದ ಅಹಂಕಾರವು ದೂರವಾಗುವದು! ಉದ್ಧವಾ, ಹೀಗೆ ಮನಸ್ಸನ್ನು ಸುಸ್ಥಿರಗೊಳಿಸಿದ ಬಳಿಕ ಅದರ ಲಯವನ್ನು ನನ್ನ ಚಿಂತನದಲ್ಲಿಯೇ ಮಾಡಬೇಕು. ಈ ಮಾತು ಸಾಧ್ಯವಾಗಲಿಕ್ಕೆ ಯಮನಿಯಮಾದಿ ಯೋಗಮಾರ್ಗಗಳು, ಪರಮಾತ್ಮನ ಅದ್ವೈತ ಸ್ಥಿತಿಯು, ನನ್ನ ದೃಢಭಕ್ತಿಯು ಈ ಮೂರು ಸಾಧನಗಳ ಹೊರತು ಅನ್ಯಸಾಧನಗಳಿಲ್ಲವು. ಉದ್ಧವಾ, ಬ್ರಹ್ಮಚಿಂತನದಲ್ಲಿ, ಅಥವಾ ನನ್ನ ಭಕ್ತಿಯಲ್ಲಿ ನಿಮಗ್ನನಾ

ಗಿರುವ ಯೋಗಿಯು ಕೈಯಿಂದ ಅಪ್ಪಿ ತಪ್ಪಿ ನಿಷಿದ್ಧ; ಅಥವಾ ನಿಂದ್ಯಕರ್ಮಗಳೊದಗಿದರೂ ಅವುಗಳಿಂದ ಆ ಯೋಗಿಗೆ ದೋಷವು ತಟ್ಟುವದಿಲ್ಲ; ಯಾಕಂದರೆ, ಪರಮಾತ್ಮ ಚಿಂತನದಿಂದ, ಅಥವಾ ನನ್ನ ಭಕ್ತಿಯಿಂದ ಆ ಯೋಗಿಯು ನಿಂದ್ಯಕರ್ಮಗಳಿಂದ ಉಂಟಾಗುವ ದೋಷಗಳನ್ನು ಸುಟ್ಟುಬಿಡುವನು! ಆದ್ದರಿಂದ ಅವನಿಗೆ ಬೇರೆ ಪ್ರಾಯಶ್ಚಿತ್ತಗಳ ಅಪೇಕ್ಷೆಯಿರುವದಿಲ್ಲವು; ಯಾಕಂದರೆ ಮೂಲತಃ ಕರ್ಮ ಮಾಡುವದೇ ದೋಷವಾಗಿದ್ದು, ಜ್ಞಾನದಿಂದ ಅಥವಾ ಭಕ್ತಿಯಿಂದ ಮುಮುಕ್ಷುವು ನನ್ನ ಚಿತ್ಸ್ವರೂಪದ ಚಿಂತನಮಾಡತೊಡಗಿದ ಕೂಡಲೆ ಆತನ ಗುಣರೂಪ ಕರ್ಮಗಳ ನಿವೃತ್ತಿಯಾಗಲು, ಅವನು ನಿಷಿದ್ಧ-ವಿಹಿತಕರ್ಮಗಳೆರಡರಿಂದಲೂ ನಿವೃತ್ತನಾಗಿ ನನ್ನ ರೂಪವನ್ನು ಹೊಂದುವನು! ಅಂಥವನು ಕರ್ಮಮಾಡಿದರೇನು, ಬಿಟ್ಟರೇನು? ಅದಕ್ಕಾಗಿ ಅವನಿಗೆ ಪಾತಕವು ತಟ್ಟದು; ಅಂದಬಳಿಕ ಅವನಿಗೆ ಅನ್ಯ ಪ್ರಾಯಶ್ಚಿತ್ತವೇಕೆ?

ಉದ್ಧವಾ, ಎರಡನೆಯವರ ಸ್ವಭಾವ-ಆಚರಣೆಗಳ ಸ್ತುತಿಯನ್ನು ಅಥವಾ ನಿಂದೆಯನ್ನು ಮಾಡುವದು ಸರ್ವಥಾ ಅಪ್ರಶಸ್ತವಾಗಿರುವದು; ಯಾಕಂದರೆ, ಪ್ರಕೃತಿಪುರುಷರಿಂದಾದ ಈ ಸರ್ವವಿಶ್ವವು ಒಂದೇ ಪ್ರಕಾರದ್ದಾಗಿರುವದು; ಅದರಲ್ಲಿ ಭೇದಭಾವವೆಣಿಸಲಿಕ್ಕೆ ಏನೂ ಆಧಾರವಿಲ್ಲವು. ಎರಡನೆಯವರ ಗುಣಗಳ ಪ್ರಶಂಸೆಯನ್ನಾಗಲಿ, ಅವಹೇಲನೆಯನ್ನಾಗಲಿ ಮಾಡುವವನು, ಈ ಚರಾಚರ ಮಿಥ್ಯಾಸೃಷ್ಟಿಯು, ವ್ಯಾಪಕ ಪರಮಾತ್ಮನಿಂದ ಭಿನ್ನವಾದದ್ದೆಂದು ತಿಳಿದು ಅದರಿಂದ ಜ್ಞಾನರೂಪಸ್ವಾರ್ಥದಿಂದ ಭ್ರಷ್ಟನಾಗಿ ಪರಿಣಾಮದಲ್ಲಿ ಸಂಸಾರಚಕ್ರದಲ್ಲಿ ಭ್ರಮಿಸತೊಡಗುವನು; ಆದ್ದರಿಂದ ಉದ್ಧವಾ, ದ್ವೈತಭಾವನೆಯು ಅನರ್ಥಕಾರಕವಾದದ್ದು. ಉದ್ಧವಾ, ಈಸೃಷ್ಟಿಯು ಸುಳ್ಳು ಇದ್ದ ಬಳಿಕ ಇದು ಒಳ್ಳೆಯದು ಇದು ಕೆಡಕು ಎಂದು ಎಣಿಸುವದು ಕೇವಲ ಭ್ರಮವಾಗಿರುವದು. ಇನ್ನು, ಅಸತ್ಯ ವಸ್ತುವಿನಲ್ಲಿ ಆಸಕ್ತಿಯನ್ನಿಡುವದರಿಂದ ಯಾವ ಭಯವನ್ನೂ ಹಿಡಿಯುವ ಕಾರಣವಿಲ್ಲೆಂದು ಮಾತ್ರ ತಿಳಿಯಬೇಡ. ನೋಡು, ನೆಳ್ಳಿಗೆ ದೆವ್ವವೆಂದು ತಿಳಿದು ಚಿತ್ತದಲ್ಲಿ ಭೀತಿಯು ಉತ್ಪನ್ನವಾಗಲು, ಅದರ ನಿವಾರಣಕ್ಕಾಗಿ ಹಲವು ಉಪಾಯಗಳನ್ನು ಮಾಡುವಂತೆ, ಸ್ಥಾವರಜಂಗಮಾತ್ಮಕ ಪದಾರ್ಥಗಳು ವಸ್ತುತಃ ಸುಳ್ಳು ಇದ್ದರೂ, ಜೀವನು ಅವನ್ನು ಯಥಾರ್ಥವಾಗಿ ತಿಳಿಯದಿದ್ದರೆ ಅವನು ಬಹುವಿಧ ವ್ಯವಹಾರಗಳನ್ನು ಮಾಡಬೇಕಾಗಿ ಪರಿಣಾಮದಲ್ಲಿ ಅವನು ಮುಂದಿನ ಜನ್ಮದ ಸಿದ್ಧತೆಯನ್ನು ಮಾಡುವನೆಂಬದರಲ್ಲಿ ಸಂಶಯವಿಲ್ಲ! ಈ ಸಂಬಂಧದಿಂದ ಶ್ರುತಿಯು—"ಉತ್ಪನ್ನವಾದ ಈ ಜಗತ್ತೂ, ಅದನ್ನು ಉತ್ಪನ್ನಮಾಡುವ ಈಶ್ವರನೂ, ರಕ್ಷಿಸತಕ್ಕ ಈ ವಿಶ್ವವೂ, ಅದನ್ನು ರಕ್ಷಿಸುವ ಪ್ರಭುವೂ, ಅದರಂತೆ ಸಂಹರಿಸತಕ್ಕ ಈ ತ್ರಿಭುವನವೂ, ಅವನ್ನು ಸಂಹರಿಸುವ ಪರಮಾತ್ಮನೂ ಇವು ಅಭಿನ್ನವೆಂದರೆ ಏಕರೂಪವೆಂ"ದು ಹೇಳುವದರಿಂದ, ಪರಮಾತ್ಮನ ವ್ಯಾಪ್ತಿಯು ಸರ್ವತ್ರ ಅದ್ವೈತವಾಗಿ ಓತಪ್ರೋತವಾಗಿರುತ್ತದೆಂಬ ಅರ್ಥವು ಸ್ಪಷ್ಟವಾಗುತ್ತದೆ. ಉದ್ಧವಾ, ಹೀಗೆ ಜಗತ್ತಿನ ಮಿಥ್ಯಾತ್ವವನ್ನೂ, ಪರಮಾತ್ಮನ ಸಾರ್ವತ್ರಿಕ ವ್ಯಾಪಕತ್ವವನ್ನೂ ಮನಸ್ಸಿನಲ್ಲಿ ತಂದು, ಹಾಗು ಅವರ ಅನು

ಭವ ಪಡೆದು ಹೊರ ಸ್ತುತಿ-ನಿಂದೆಗಳನ್ನೂ ಮಾಡದೆ ಸರ್ವತ್ರ ಸಮದೃಷ್ಟಿಯುಳ್ಳವನಾಗಿ ಜನರೊಡನೆ ನಡಕೊಳ್ಳತಕ್ಕದ್ದು. ಉದ್ಧವಾ, ಆತ್ಮನು ಸರ್ವರ ಸಾಕ್ಷಿಯಾಗಿರುವದರಿಂದ ಕೇವಲ ಚಿತ್ಸ್ವರೂಪನಾಗಿರುವನು; ದೇಹವು ದೃಶ್ಯವಾದದ್ದರಿಂದ ಕೇವಲ ಜಡವಾಗಿರುವದು; ಆದ್ದರಿಂದ ಸಂಸಾರ ಭ್ರಮಣವನ್ನು ಹೊಂದಲಿಕ್ಕೆ ಇವೆರಡೂ ಅಪಾತ್ರವಾಗಿರುವವು; ಆದರೆ ದೇಹ, ಇಂದ್ರಿಯ, ಪ್ರಾಣಗಳು ಇತ್ಯಾದಿಕಗಳಿಗೆ ಆತ್ಮನ ಸಂಬಂಧವಿರುತ್ತದೆಂದು ಜೀವನು ತಿಳಿದುಕೊಳ್ಳುವದರಿಂದ ಆ ಅಹಂಕಾರಿ ಜೀವಾತ್ಮನು ಸಂಸಾರದಲ್ಲಿ ಬೀಳುವನು. ಅದರಿಂದ ಸ್ವಪ್ನದಲ್ಲಿಯ ಹರ್ಷಶೋಕಾದಿಗಳಂತೆ ಅವನು ದೈಹಿಕ ಪದಾರ್ಥಗಳಿಂದಲೂ ಸುಖದುಃಖಾದಿ ವಿಕಾರಗಳನ್ನು ಭೋಗಿಸುವನು; ಆದರೆ ಜಾಗ್ರತಿಯಲ್ಲಿ ಆ ಸ್ವಪ್ನದಿಂದ ಲೇಶಮಾತ್ರವೂ ವಿಕಾರವಾಗದಿರುವಂತೆ, ದೇಹಾಭಿಮಾನವನ್ನು ತೊರೆದ ಜೀವಾತ್ಮನಿಗೆ ಸಂಸಾರಭಯವು ಉಳಿಯುವದಿಲ್ಲ. ಹರ್ಷ, ಶೋಕ, ಭಯ, ಕ್ರೋಧ, ಲೋಭ, ಮೋಹ, ಇಚ್ಛಾ, ಜನ್ಮ, ಮರಣ ಇವೆಲ್ಲವು ಅಹಂಕಾರದಿಂದ ಜೀವಾತ್ಮನಿಗೆ ಪ್ರಾಪ್ತವಾಗುವವು. ದೇಹ, ಇಂದ್ರಿಯ, ಪ್ರಾಣ, ಮನಸ್ಸು ಇತ್ಯಾದಿಗಳ ಅಭಿಮಾನವಹಿಸಿ ಜೀವಾತ್ಮನು ಗುಣಕರ್ಮನಿಮಗ್ನನಾಗಿ ಪರಮಾತ್ಮನ ಪ್ರೇರಣೆಯಿಂದ ಸೂತ್ರ-ಮಹತ್ತತ್ವ ಇತ್ಯಾದಿ ಅನಂತ ಹೆಸರುಗಳಿಂದ ಸಂಸಾರದಲ್ಲಿ ಪ್ರವಿಷ್ಟನಾಗುವನು.

ಆದ್ದರಿಂದ ಉದ್ಧವಾ, ಜೀವನು ಸದ್ಗುರುವಿನಿಂದ ಜ್ಞಾನವನ್ನು ಸಂಪಾದಿಸಿ ದೇಹಾದಿಗಳ ವ್ಯರ್ಥವಾದ ಅಭಿಮಾನವನ್ನು ತ್ಯಜಿಸಬೇಕು. ಜ್ಞಾನವೆಂದರೆ ವಿವೇಕವು; ಚಿತ್ ಮತ್ತು ಜಡ ಇವುಗಳ ಯಥಾರ್ಥಸ್ವರೂಪವನ್ನು ಅರಿತುಕೊಳ್ಳುವದೇ ಜ್ಞಾನವು. ಜ್ಞಾನದ ಸಾಧನಗಳು—ಶ್ರುತಿ, ಸ್ವಧರ್ಮ, ಸ್ವಾನುಭವ, ಉಪದೇಶ, ಅನುಮಾನ ಇವು ಆಗಿರುವವು. ಸೃಷ್ಟಿಯ ಪೂರ್ವದಲ್ಲಿಯೂ ಅನಂತರವೂ ಉಳಿದಿರುವ ಪರಬ್ರಹ್ಮವೇ ಮಧ್ಯದಲ್ಲಿಯೂ ಸತ್ಸ್ವರೂಪದಿಂದ ವಿದ್ಯಮಾನವಾಗಿರುವದು; ದೃಶ್ಯಜಗತ್ತು ಆದ್ಯಂತಯುಕ್ತವಾದದ್ದರಿಂದ ಅಸತ್ಯವಾದದ್ದು. ದೃಶ್ಯಜಗತ್ತಿನ ಉತ್ಪತ್ತಿ-ಸ್ಥಿತಿ-ಲಯಗಳು ಕಾಲರೂಪನಾದ ಪರಮೇಶ್ವರನ ಅಧೀನವಾಗಿರುವವು; ಅವನೇ ಸ್ಥಾವರಜಂಗಮ ವಿಶ್ವದ ಪ್ರತೀತಿಯನ್ನುಂಟುಮಾಡುವನು; ಎಂಬ ನಿಶ್ಚಯವಾಗುವದೇ ಜ್ಞಾನದ ಫಲವು. ಉದ್ಧವಾ, ಶ್ರುತಿ, ಧರ್ಮಶಾಸ್ತ್ರ, ಪ್ರತ್ಯಕ್ಷಪ್ರಮಾಣ, ಮಹದ್ವಚನ, ಅನುಮಾನ ಇವೆಲ್ಲವುಗಳ ಯೋಗದಿಂದ ಸತ್ಯಾಸತ್ಯವಿವೇಕವನ್ನು ದೃಢಪಡಿಸಿಕೊಂಡು ಅಸತ್ಯವಸ್ತುವಿನ ಸಂಬಂಧದಿಂದ ಅನಾಸಕ್ತಿಯನ್ನೂ, ಸತ್ಯವಸ್ತುವಿನ ಸಂಬಂಧದಿಂದ ಆಸಕ್ತಿಯನ್ನೂ ವಹಿಸಿ ಪರಬ್ರಹ್ಮಚಿಂತನದಲ್ಲಿ ಮಗ್ನನಾಗಿ ಹೋಗುವದು ಶ್ರೇಯಸ್ಕರವು. ಮೇಘವು ಅಡ್ಡಬರುವದರಿಂದ ಸೂರ್ಯನಿಗೆ ಅಪಕಾರವಾಗಲಿ ಉಪಕಾರವಾಗಲಿ ಆಗದಿರುವಂತೆ, ಪರಬ್ರಹ್ಮಸ್ವರೂಪವನ್ನು ಹೊಂದಿದ ಸಾಧಕನಿಗೆ ಸತ್ವ-ರಜ-ತಮ ಇತ್ಯಾದಿ ಅನಂತ ವಿಕಾರಗಳಿಂದ ಏನೂ ಅಪಾಯವಾಗುವದಿಲ್ಲ! ಆದರೂ ಆತ್ಮಾನಾತ್ಮವಿಚಾರವು ಪರಿಪಕ್ವವಾಗಿ ಬ್ರಹ್ಮಸಾಕ್ಷಾತ್ಕಾರವಾಗುವವರೆಗೆ ಸಾಧಕನಾದ ಯೋಗಿಯು ವಿಷಯಾದಿ

ಗಳಿಂದ ಅಲಿಪ್ತನಾಗಿರಬೇಕು. ಉದ್ಧವಾ, ಯೋಗಾಭ್ಯಾಸಿಯು ಬ್ರಹ್ಮಚಿಂತನ ಮಾಡಹತ್ತಿದನೆಂದರೆ ದೇವತೆಗಳ ಪ್ರೇರಣೆಯಿಂದ ಅವನ ಆಪ್ತ-ಸುಹೃದ್-ಶಿಷ್ಯರೇ ಮೊದಲಾದವರಿಂದ ನಾನಾವಿಧ ವಿಘ್ನಗಳು ಒದಗಿ, ಕದಾಚಿತ್ ಅವನು ನಡುವೇ ಭ್ರಷ್ಟನೂ ಆಗಬಹುದೆಂಬದು ನಿಜವು ; ಆದರೆ ಜನ್ಮಾಂತರದಲ್ಲಿ ಅವನು ಪುನಃ ಯೋಗಾಭ್ಯಾಸವನ್ನೇ ಮಾಡುವದರಿಂದ ಕರ್ಮಪ್ರವರ್ತನಾಗುವದಿಲ್ಲ. ಇನ್ನು ಮಹಾ ಜ್ಞಾನಿಗಳಿಗೂ ಕರ್ಮವು ಬಿಡದಿರಲು, ಕರ್ಮವಿಲ್ಲದೆ ಯೋಗಿಗಳು ಹ್ಯಾಗೆ ನಡೆಯುವ ರೆಂದು ನೀನು ಕೇಳಬಹುದು; ಆದರೆ ಯೋಗಿಗಳು ಕರ್ಮಮಾಡುತ್ತಿದ್ದರೂ, ಹಾಗು ದೇಹಪುಷ್ಟಿ ಮೊದಲಾದದನ್ನು ಹೊಂದುತ್ತಿದ್ದರೂ ಅವರಲ್ಲಿ ವಾಸನೆಯು ಉತ್ಪನ್ನವಾಗು ವದಿಲ್ಲೆಂಬದನ್ನು ಲಕ್ಷದಲ್ಲಿಡು. ಅವರು ಬ್ರಹ್ಮಚಿಂತನ ನಿಮಗ್ನರಾಗಿರುವದರಿಂದ ಅವರ ಕರ್ಮಗಳಿಂದ ಹರ್ಷಶೋಕಾದಿ ಯಾವ ಭಾವನೆಗಳೂ ಉತ್ಪನ್ನವಾಗದಿರಲು, ಅವರಿಗೆ ಸಂಸಾರಬಂಧನವಿಲ್ಲವು. ಬ್ರಹ್ಮಚಿಂತನತತ್ಪರನಿಗೆ ತನ್ನ ದೇಹದ ಪರಿವೆಯಿರುವದಿಲ್ಲವು. ಅವನು ನೋಡುವ ಸರ್ವವಿಷಯಗಳನ್ನು ಸ್ವಪ್ನದಂತೆ ಸುಳ್ಳೆಂದು ತಿಳಿದು ಅವುಗಳಲ್ಲಿ ಆಸಕ್ತನಾಗದೆ ಇರುವನು. ಅವನಿಗೆ ಬ್ರಹ್ಮವು ನಿರ್ವಿಕಾರವೂ, ಚಿನ್ಮಯವೂ ಇರುವ ದೆಂಬ ಸಾಕ್ಷಾತ್ಕಾರವಾಗಿರುವದರಿಂದ ಕೇವಲ ಜ್ಞಾನರೂಪದಿಂದ ಭೂಮಿಯ ಮೇಲೆ ಅವನು ಸಂಚರಿಸುವನು. ಯೋಗಾಭ್ಯಾಸ ಮಾಡುವಾಗ ವಿಘ್ನಗಳೊದಗಿದರೆ ಯೋಗ ಧಾರಣದಿಂದ ಅವುಗಳ ನಾಶಮಾಡಬೇಕು; ಅಂದರೆ ದುಸ್ಸಹತಾಪವಾದರೆ ಸೋಮನ ಧಾರಣೆಯನ್ನೂ, ರೋಗಪಿಡಿಗಳಾದರೆ ಸೂರ್ಯನ ಧಾರಣೆಯನ್ನೂ ಮಾಡಬೇಕು. ವಾತಾದಿಕಗಳು ಕ್ಷುಬ್ಧವಾದರೆ ಆಸನವಿಧಿ-ಪ್ರಾಣಾಯಾಮಗಳಿಂದ ಅವುಗಳ ನಿಯಮನ ಮಾಡಬೇಕು. ಪಾಪಗ್ರಹ--ಸರ್ಪ ಇತ್ಯಾದಿಗಳ ಬಾಧೆಯಾದರೆ ತಪಶ್ಚರ್ಯ-ಮಂತ್ರೌ ಷಧಿಗಳಿಂದ ಅವುಗಳ ಹರಣಮಾಡಬೇಕು. ಕಾಮಾದಿಷಡ್ರಿಪುಗಳು ಕ್ಷೋಭಿಸಿದರೆ ನನ್ನ ಧ್ಯಾನ-ನಾಮಸಂಕೀರ್ತನಗಳಿಂದ ಅವನ್ನು ಗೆಲ್ಲಬೇಕು. ದಂಭ, ಅಭಿಮಾನಾದಿ ವಿಕಾ ರಗಳನ್ನು ಸದ್ಗುರುಸೇವೆಯಿಂದ ದೂರಮಾಡಬೇಕು. ಉದ್ಧವಾ, ಯೋಗಾಭ್ಯಾಸಿಯು ಸಿದ್ಧಿಗಳಿಗೆ ಮರುಳಾಗದೆ ನನ್ನಲ್ಲಿ ಚಿತ್ತದ ಲಯಮಾಡಿ ಯೋಗಾಭ್ಯಾಸ ಮಾಡಿದರೆ ಅವನಿಗೆ ಎಂದೂ ವಿಘ್ನಗಳು ಒದಗಲಾರವು; ಯಾಕಂದರೆ ನನ್ನಲ್ಲಿ ಯೋಗಿಯ ಚಿತ್ತದ ಲಯವಾಗುವದರಿಂದ ಅವನ ಇಚ್ಛೆಯು ನಿರ್ಮಲವಾಗಲು, ಅದರಿಂದ ದುಃಖನಾಶವಾಗಿ ಅವನು ಆತ್ಮಸುಖದ ಪೂರ್ಣ ಅನುಭವ ಪಡೆಯುವನು.

ಭಕ್ತಿಯೋಗ:—ಉದ್ಧವಾ, ನನ್ನ ಗುಣಕಥೆಗಳಲ್ಲಿ ಶ್ರದ್ಧೆಯುಂಟಾದವನಿಗೆ ಕರ್ಮಗಳನ್ನು ಮಾಡಲಿಕ್ಕೆ ಬೇಸರಬರುವದಲ್ಲದೆ, ಕರ್ಮಮಾಡುವವನಿಗೆ ದುಃಖಪ್ರಾಪ್ತಿ ಯಾಗುತ್ತದೆಂಬದೂ ಆತನಿಗೆ ಗೊತ್ತಿರುತ್ತದೆ; ಆದರೂ ಕರ್ಮತ್ಯಾಗಮಾಡುವದು ಆತ ನಿಂದ ಆಗುವದಿಲ್ಲ! ಇಂಥವನು ದೃಢಭಕ್ತಿಯುಳ್ಳವನಾಗಿ ಒಳ್ಳೇಪ್ರೇಮದಿಂದ ಒಂದೇಸವನೆ ನನ್ನ ಉಪಾಸನೆಯನ್ನು ಮಾಡಬೇಕು; ಆತನು ವಿಷಯಸುಖಗಳನ್ನು ಭೋಗಿಸಿದರೂ ಅವು ಗಳಿಂದ ಪರಿಣಾಮದಲ್ಲಿ ನಿಶ್ಚಯವಾಗಿ ದುಃಖವಾಗುತ್ತದೆಂಬ ಮಾತನ್ನು ಲಕ್ಷ್ಯದಲ್ಲಿಟ್ಟು

ಅದಷ್ಟುಮಟ್ಟಿಗೆ ಮನಸ್ಸನ್ನು ಬಿಗಿಹಿಡಿಯಲು ಯತ್ನಿಸುತ್ತಿರಬೇಕು. "ನಾನು ಒಳ್ಳೆಯವನು, ಎರಡನೆಯವರು ಕೆಟ್ಟವರು" ಎಂಬ ಬುದ್ಧಿಯನ್ನು ಎಂದೂ ವಹಿಸಬಾರದು; ಒಳಿತು-ಕೆಡಕುಗಳಿಗಾಗಿ ಸ್ತುತಿನಿಂದೆಗಳನ್ನು ಮಾಡಬಾರದು; ನಾಯಿ, ಎತ್ತು, ಕತ್ತೆ, ಚಾಂಡಾಲ ಇವರೆಲ್ಲರೂ ಪರಬ್ರಹ್ಮರೂಪವೆಂದು ತಿಳಿದು ಅವರಿಗೆ ಸಾಷ್ಟಾಂಗ ನಮಸ್ಕಾರಮಾಡಬೇಕು; ಅಪ್ಪಾ, ಅದ್ವೈತದ ಸಾಕ್ಷಾತ್ಕಾರವಾಗುವವರೆಗೆ ವಾಣಿ, ಮನಸ್ಸು, ಶರೀರ ಇವುಗಳ ಯೋಗದಿಂದ ಈ ಮೇರೆಗೆ ಎಲ್ಲರ ವಿಷಯವಾಗಿ ಸಮಾನವಾಗಿ ಆಚರಿಸಬೇಕು; ಹೀಗೆ ಮಾಡುವದರಿಂದ ಬ್ರಹ್ಮಸ್ವರೂಪದ ಜ್ಞಾನವು ಪ್ರಾಪ್ತವಾಗುವದು; ಸಮಸ್ತ ಜಗತ್ತು ಬ್ರಹ್ಮಮಯವಾಗಿ ತೋರುವದು; ದ್ವೈತಮೂಲಕವಾದ ಯಾವತ್ತುಭ್ರಮಗಳು ದೂರವಾಗುವವು. ಉದ್ಧವಾ, ಹೀಗೆ ಬ್ರಹ್ಮದೃಷ್ಟಿಯು ಪ್ರಾಪ್ತವಾದಮೇಲೆ ಸರ್ವಕ್ರಿಯೆಗಳ ತ್ಯಾಗಮಾಡಬಹುದು. ಸರ್ವಭೂತಗಳಲ್ಲಿ ನನ್ನ, ಅಂದರೆ ಪರಮಾತ್ಮನ ವ್ಯಾಪ್ತಿಯು ಏಕರೂಪದಿಂದ ಇರುತ್ತದೆಂದು ಭಾವಿಸುವದು ಸಾಯುಜ್ಯಪ್ರಾಪ್ತಿಯ ಶ್ರೇಷ್ಠ ಉಪಾಯವಾಗಿರುವದು. ಉದ್ಧವಾ, ನಾನು ಭಕ್ತನ ಅಂತರಂಗದಲ್ಲಿ ವಾಸಿಸಿ ಆತನ ಮನಸ್ಸಿನೊಳಗಿನ ಸಮಸ್ತವಿಷಯಗಳನ್ನು ಭಸ್ಮಮಾಡಿಬಿಡುವೆನು! ಅವನ ಅಹಂಕಾರವು ನಷ್ಟವಾಗಿ ಎಲ್ಲಕಡೆಯಲ್ಲಿ ನನ್ನ ರೂಪವೇ ಅವನ ಕಣ್ಣಿಗೆ ಬೀಳುವದು; ಜಗತ್ತಿನ ವಿಷಯದ ಅವನ ಭ್ರಮಗಳೆಲ್ಲ ದೂರವಾಗುವವು. ಉದ್ಧವಾ, ಕರ್ಮ-ಜ್ಞಾನ-ಭಕ್ತಿ ಇವು ಮೂರು ನನ್ನ ಪ್ರಾಪ್ತಿಯ ಸಾಧನಗಳಾಗಿದ್ದರೂ, ಅವುಗಳಲ್ಲಿ ಭಕ್ತಿಯೇ ಅಗ್ರಗಣ್ಯವಾಗಿರುವದು; ಯಾಕಂದರೆ ಭಕ್ತಿಗೆ ಕರ್ಮದ, ಅಥವಾ ಜ್ಞಾನ-ವೈರಾಗ್ಯಗಳ ಅಪೇಕ್ಷೆಯು ಸರ್ವಥಾ ಇರುವದಿಲ್ಲ. ತಪಶ್ಚರ್ಯಾದಿ ಸಾಧನಗಳಿಂದ ಪ್ರಾಪ್ತವಾಗುವ ಫಲಗಳನ್ನು ನನ್ನ ಭಕ್ತನು ಅನಾಯಾಸವಾಗಿ ಪಡೆಯುವನು! ಬಹಳ ಹೇಳುವದೇನು ಇಚ್ಛಿಸಿದರೆ ಸ್ವರ್ಗ, ಮೋಕ್ಷ, ವೈಕುಂಠಗಳಾದರೂ ಅವನಿಗೆ ಪ್ರಾಪ್ತವಾಗುವವು! ಆದರೆ ನನ್ನ ಭಕ್ತರು ಏನನ್ನೂ ಇಚ್ಛಿಸುವದಿಲ್ಲ ಉದ್ಧವಾ, ನಿರಪೇಕ್ಷತೆಯೇ ಶ್ರೇಷ್ಠಕಲ್ಯಾಣವಾಗಿರುವದು; ಆದ್ದರಿಂದ ನಿಷ್ಕಾಮದಿಂದ ನನ್ನ ಗುಣಕೀರ್ತನಮಾಡುವವನಿಗೇ ಭಕ್ತಿಯು ಸಿದ್ಧಿಸುವದು. ಒಟ್ಟಿಗೆ ಕರ್ಮ, ಜ್ಞಾನ, ಭಕ್ತಿ ಈ ಮೂರು ಯೋಗಗಳನ್ನು ಆಚರಿಸುವವರು ಪರಿಣಾಮದಲ್ಲಿ ಸುಖದಿಂದ ನನ್ನ ಸ್ಥಾನವನ್ನು ಪಡೆದು ಬ್ರಹ್ಮರೂಪರಾಗುವರು!

ವಿವೇಕಶೀಲಾ, ಹೀಗೆ ನಿನಗೆ ಯೋಗತ್ರಯಗಳನ್ನು ಕುರಿತು ನಿರೂಪಿಸಿದೆನು. ಈ ಯೋಗತ್ರಯಗಳ ಸಂಬಂಧದಿಂದ ಶ್ರೀ ನಿಜಗುಣಿ ಶಿವಯೋಗಿಗಳು ಸ್ವಲ್ಪದರಲ್ಲಿ ಸುಂದರವಾಗಿ ವಿವರಿಸಿದ್ದು ನಿನ್ನ ಲಕ್ಷದಲ್ಲಿರಬಹುದು.

11943

# ಜ್ಞಾನಪ್ರದೀಪಕಿರಣ,

## ೮೨ ನೆಯದು.

---

## ಭಕ್ತಿಯೋಗದ ವಿಶೇಷವಿಚಾರವು.

ಈಮೇರೆಗೆ ಸಿದ್ಧಮುನೀಶ್ವರನು ನಿರೂಪಿಸಿದ್ದನ್ನುಕೇಳಿ ವಿವೇಕಶೀಲನು—ಸದ್ಗುರೋ, ನೀನು ಭಾಗವತದೊಳಗಿನ ಕರ್ಮಯೋಗ, ಜ್ಞಾನಯೋಗ, ಭಕ್ತಿಯೋಗಗಳನ್ನು ನಿರೂಪಿಸಿದೆ; ಅವುಗಳಲ್ಲಿ ಭಕ್ತಿಯೋಗವೇ ಶ್ರೇಷ್ಠವೆಂತಲೂ ಹೇಳಿದೆ. ಭಕ್ತಿಯೋಗವೇ ಸರ್ವರಿಗೆ ತಾರಕವಾಗಿರುವಂತೆ ತೋರುವದರಿಂದ ಅದನ್ನು ನನಗೆ ಇನ್ನಿಷ್ಟು ವಿವರಿಸು, ಎಂದು ಪ್ರಾರ್ಥಿಸಲು, ಸಿದ್ಧಮುನೀಶ್ವರನು—ವಿವೇಕಶೀಲಾ, ಬಹು ಯೋಗ್ಯ ಪ್ರಶ್ನಮಾಡಿದೆ. ನೀನು ಕೇಳಿಕೊಂಡಂತೆ ಭಕ್ತಿಮಾರ್ಗವು ಕೃತಾರ್ಥತೆಯ ಸುಲಭಸಾಧನವೆಂಬದು ನಿಜವು. ಆದ್ದರಿಂದ ಆದೇ ಭಾಗವತದಲ್ಲಿ ನಿಮಿರಾಜನಿಗೆ ಇಬ್ಬರು ಯೋಗೀಶ್ವರರು ಹೇಳಿದ ಭಾಗವತಧರ್ಮವನ್ನೂ, ಭಗವದ್ಭಕ್ತರ ಲಕ್ಷಣವನ್ನೂ, ಮತ್ತು ಆದೇ ಭಾಗವತದಲ್ಲಿ ಕಪಿಲನು ತನ್ನ ತಾಯಿಯಾದ ದೇವಹೂತಿಗೆ ಹೇಳಿರುವ ಭಕ್ತಿಯ ಪ್ರಕಾರಗಳನ್ನೂ ಹೇಳುವೆನು ಕೇಳು. ಮೊದಲು ಕವಿ ಎಂಬ ಯೋಗೀಶ್ವರನು ನಿಮಿರಾಜನನ್ನು ಕುರಿತು ಭಾಗವತಧರ್ಮದ ವಿಷಯವಾಗಿ ಹೇಳಿರುವದನ್ನು ಶ್ರವಣಮಾಡು.

ರಾಜಾ, ಭಾಗವತ-ಧರ್ಮವೆಂದರೆ, ಸಾಧಕರಿಗೆ ಭಗವತ್ಪ್ರಾಪ್ತಿಯಾಗುವದಕ್ಕಾಗಿ ಭಗವಂತನು ಸ್ವತಃ ಹೇಳಿದ ಉಪಾಯವು. ಮನು, ಯಾಜ್ಞವಲ್ಕ್ಯ ಮೊದಲಾದವರು ವರ್ಣಾಶ್ರಮಧರ್ಮಗಳನ್ನು ಪ್ರತಿಪಾದಿಸಿ ಕೆಲವು ಉಪಾಯಗಳನ್ನು ಹೇಳಿರುವರು; ಆದರೆ ಅವು ಸಾಮಾನ್ಯಜನರಿಗೆ ತಿಳಿಯುವಷ್ಟು ಸುಲಭವಾದವುಗಳಲ್ಲ; ಆದ್ದರಿಂದ ಪರಮೇಶ್ವರನು ಭಾಗವತಧರ್ಮವನ್ನು ಅಜ್ಞಜನರ ಉದ್ಧಾರಕ್ಕಾಗಿ ಸ್ವತಃ ಹೇಳಿರುವನು. ಈ ಧರ್ಮವು ಸುಲಭವಾಗಿರುವದರಿಂದ ಆಚರಿಸುವಾಗ ತಪ್ಪುಗಳಾಗುವದಿಲ್ಲ; ಒಂದುಪಕ್ಷದಲ್ಲಿ ತಪ್ಪು ಆದರೂ, ಶ್ರುತಿ ಸ್ಮೃತಿ ಪ್ರಣೀತ ಧರ್ಮಾಚರಣೆಯಲ್ಲಿ ತಪ್ಪಾದರೆ ದೋಷತಟ್ಟುವಂತೆ ಈ ಧರ್ಮದಲ್ಲಿ ದೋಷತಟ್ಟುವ ಅಂಜಿಕೆಯಿಲ್ಲ. ನಿಮಿರಾಜಾ, ನಿನಗೆ ಆ ಭಾಗವತಧರ್ಮವನ್ನು ಹೇಳುವೆನು ಕೇಳು. ಸರ್ವೇಂದ್ರಿಯಗಳಿಂದಾಗುವ ಸರ್ವ ಕರ್ಮಗಳನ್ನು ಭಗವಂತನಿಗೆ ಅರ್ಪಿಸಬೇಕು; ಯಾಕಂದರೆ ನಮಗೂ ಈಶ್ವರನಿಗೂ ಅಭೇದವಿದ್ದು, ನಮ್ಮಿಂದಾಗುವ ಕಾರ್ಯಗಳನ್ನೆಲ್ಲ ಈಶ್ವರನೇ ಮಾಡುವದರಿಂದ ಅವನೇ ಸರ್ವಕಾರ್ಯಗಳ ಫಲಗಳನ್ನು ಭೋಗಿಸತಕ್ಕವನೆಂಬದನ್ನು, ನಾವು ವ್ಯಕ್ತಪಡಿಸಬೇಕಾಗುವದು. ಹೀಗೆ ಮಾಡದೆ ನಾವು ದೇಹಾದಿಗಳಲ್ಲಿ ಮಮತ್ವವನ್ನು ಕಲ್ಪಿಸಿದಕೂಡಲೆ ನಾವು ಪರಮೇಶ್ವರನಿಂದ ದೂರಾದೆವೆಂಬ ತಿಳುವಳಿಕೆಯು ಸಹಜವಾಗಿ ಉತ್ಪನ್ನವಾಗಿ, ನಾವು ಮಾಯಾಮೋಹದಲ್ಲಿ ಬೀಳಲು, ನಮಗೆ ಪರಮೇಶ್ವರನ ಸ್ಮೃತಿಯೂ ಉಳಿಯದಂತಾಗುತ್ತದೆ! ಆದ್ದರಿಂದ ನಿಮಿರಾಜಾ,

ಮುಮುಕ್ಷುವಾದವನು ಸದ್ಗುರುವನ್ನು ಆಶ್ರಯಿಸಿ ಅದ್ವೈತಭಕ್ತಿಯಿಂದ ಪರಮೇಶ್ವರನನ್ನು ಆರಾಧಿಸಬೇಕು; ಮತ್ತು ಆ ಆರಾಧನೆಯು ಉತ್ತಮರೀತಿಯಿಂದ ಸಿದ್ಧಿಸುವದಕ್ಕಾಗಿ ದೇಹಾದಿಗಳಿಂದಾಗುವ ಕಾರ್ಯಗಳನ್ನು ಸಚ್ಚಿದಾನಂದ ಪ್ರಭುವಿಗೆ ಅರ್ಪಿಸಬೇಕು. ರಾಜಾ! ಜಗತ್ತಿನಲ್ಲಿರುವ ವಸ್ತುಗಳಲ್ಲಿಯು ಭಗವಂತನು ಕಾಣದಿರುವದರಿಂದ ಆ ವಸ್ತುಗಳು ಪರಮೇಶ್ವರನಿಂದ ಭಿನ್ನವಾದವುಗಳೆಂದು ನೀನು ಶಂಕಿಸಬಹುದು; ಆದರೆ ಇದು ಮಾಯೆಯು ಪ್ರಾಬಲ್ಯದ ಅಶುದ್ಧ ವಿಚಾರಸರಣಿಯು ಪರಿಣಾಮವಾದ್ದರಿಂದ ಅದನ್ನು ಸ್ವಪ್ನದಂತೆ ಸುಳ್ಳು ಎಂದು ತಿಳಿಯಬೇಕು. ವಸ್ತುವಿನ ಅಥವಾ ಅದರ ಕಾರ್ಯದ ಸತ್ಯಾಸತ್ಯತೆಗಳ ಜ್ಞಾನ ಮಾಡಿಕೊಡುವ ಮನಸ್ಸನ್ನು ಮಾಯೆಯಿಂದ ತಿರುಗಿಸಿದರೆ ಮನುಷ್ಯನಿಗೆ ಪರಮಾತ್ಮಸ್ವರೂಪದ ವಿಸ್ಮೃತಿಯಾಗುವ ಭಯವು ತಪ್ಪುವದು. ಇನ್ನು ಮನೋನಿಗ್ರಹ ಮಾಡುವದು ಪರಮ ದುಸ್ತರವೆಂಬ ಮಾತು ಒಪ್ಪತಕ್ಕದ್ದೇಸರಿ; ಆದರೆ ಈ ಮನೋನಿಗ್ರಹಕ್ಕೆ ಭಗವಂತನ ಅವತಾರಚರಿತ್ರಗಳ ಶ್ರವಣ–ಮನನ–ನಾಮಕೀರ್ತನ–ನಿದಿಧ್ಯಾಸಗಳನ್ನು ಸತತವಾಗಿ ಮಾಡುವ ಪರಿಪಾಠವಿಡಬೇಕು.

ವಿವೇಕಶೀಲಾ ಹರಿಯೆಂಬ ಯೋಗೀಶ್ವರನು ನಿಮಿರಾಜನನ್ನು ಕುರಿತು ಭಗವದ್ಭಕ್ತರ ಲಕ್ಷಣವನ್ನು ಕುರಿತು ಹೇಳಿದ್ದು ಹ್ಯಾಗಂದರೆ—ನಿಮಿರಾಜಾ, ತಾನು ಸ್ವತಃ ಭಗವತ್ಸ್ವರೂಪನಿರುವೆನೆಂದು ತಿಳಿದು ಯಾವತ್ತು ಸ್ಥಾವರಜಂಗಮ ಪದಾರ್ಥಗಳಲ್ಲಿ ತನ್ನ ಸ್ವರೂಪವೇ ಇರುವದೆಂತಲೂ. ತನ್ನಲ್ಲಿಯೇ ಯಾವತ್ತೂ ಸ್ಥಾವರಜಂಗಮ ಪದಾರ್ಥಗಳ ಅಸ್ತಿತ್ವವಿರುವದೆಂತಲೂ ತಿಳಿಯುವವನು ಉತ್ತಮಭಗವದ್ಭಕ್ತನು; ಈಶ್ವರನಲ್ಲಿ ಪ್ರೀತಿಯನ್ನೂ, ಭಗವದ್ಭಕ್ತರಲ್ಲಿ ಸ್ನೇಹವನ್ನೂ, ಅಜ್ಞಜನರಲ್ಲಿ ದಯೆಯನ್ನೂ, ಶತ್ರುಗಳಲ್ಲಿ ಕ್ಷಮೆಯನ್ನೂ ತಾಳುವವನು ಮಧ್ಯಮಭಗವದ್ಭಕ್ತನು; ಯಾಕಂದರೆ ಅವನಲ್ಲಿ ಅಂಶತಃ ಭೇದಭಾವವಿರುತ್ತಿರುವದು. ಭಗವಂತನ ಪ್ರತಿಮೆಯನ್ನು ಮಾತ್ರ ಶ್ರದ್ಧೆಯಿಂದ ಪೂಜಿಸುತಿದ್ದು, ಭಗವದ್ಭಕ್ತರನ್ನು, ಹಾಗು ಅನ್ಯರನ್ನು ಹಾಗೆ ಪೂಜಿಸದವನು ಪ್ರಾಕೃತ( ಸಂಸ್ಕಾರಹೀನ )ಅಥವಾ ಕಲಿಕೆಯ ಭಗವದ್ಭಕ್ತನೆನಿಸುವನು; ಯಾಕಂದರೆ ಅವನಲ್ಲಿ ದ್ವೈತಭಾವವು ವಿಶೇಷವಾಗಿದ್ದು, ಕೇವಲ ಈಶ್ವರಪ್ರಾಪ್ತಿಯ ಇಚ್ಛೆಯು ಮಾತ್ರ ಅವನಲ್ಲಿದ್ದದ್ದು ಅನುಭವಕ್ಕೆ ಬರುವದು. ಇವು ಭಗವದ್ಭಕ್ತರ ಸಂಕ್ಷಿಪ್ತಲಕ್ಷಣಗಳು. ಇದಲ್ಲದೆ ಉತ್ತಮ ಭಗವದ್ಭಕ್ತನಲ್ಲಿ ವಿಷಯಾಸಕ್ತಿಯಿರುವದಿಲ್ಲ. ವಿಷಯಗಳೂ, ತಜ್ಜನ್ಯ ಸುಖದುಃಖಗಳೂ ಅವಿದ್ಯಾತ್ಮಕವೆಂದು ತಿಳಿಯುವದರಿಂದ ಅವನ ಮೇಲೆ ಕ್ಷುದ್ರ ಸುಖದುಃಖಗಳ ಪರಿಣಾಮವಾಗುವದಿಲ್ಲ. ಹುಟ್ಟು–ಸಾವುಗಳು ದೇಹಧರ್ಮವೆಂತಲೂ, ಹಸಿವೆ ನೀರಡಿಕೆಗಳು ಪ್ರಾಣಗಳ ಧರ್ಮವೆಂತಲೂ; ಭಯವು ಮನಸ್ಸಿನ ಧರ್ಮವೆಂಲೂ ಉತ್ತಮ ಭಗವದ್ಭಕ್ತನು ತಿಳಿಯುವನು; ಹಾಗು ಈ ಯಾವತ್ತು ಸ್ಥೂಲ ಸೂಕ್ಷ್ಮ ಅವಯವಗಳು ಪರಮೇಶ್ವರನಿಂದ ಭಿನ್ನವಾಗಿರದ್ದರಿಂದಲೂ, ಪರಮೇಶ್ವರನ ವ್ಯಾಪ್ತಿಯು ಜಗತ್ತಿನ ಯಾವತ್ತೂ ಪದಾರ್ಥದಗಳಲ್ಲಿ ಸಮಾನವಾಗಿರುವದರಿಂದಲೂ ಈ ಅವಯವಗಳಿಗೆ ಸ್ವಾಭಾವಿಕಧರ್ಮದಿಂದ (ಅದ್ವೈತದೃಷ್ಟಿಯಿಂದ )ಸುಖ ದುಃಖ ವಿಕಾರಗಳು ಸಂಭವಿಸದೆ, ಈ ಅವಯವಗಳು

ಪರಮೇಶ್ವರನಿಂದ ಭಿನ್ನವಿರುತ್ತವೆಂಬ ದ್ವೈತಭಾವದಿಂದ (ಮಾಯೆಯಿಂದ) ಸುಖದುಃಖಗಳು ಸಂಭವಿಸುತ್ತವೆಯೆಂದು ತಿಳಿಯುವನು. ಅದರಂತೆ, ಉತ್ತಮ ಭಾಗವತನಲ್ಲಿ ಬೀಜರೂಪವಾಸನೆಯು, ವಾಸನೆಯಿಂದುತ್ಪನ್ನವಾಗುವ ಇಚ್ಛೆಯು, ಇಚ್ಛೆಯಿಂದಾದ ಕ್ರಿಯೆಗಳು ಇವುಗಳ ಪ್ರಾದುರ್ಭಾವವು ಮೂಲತಃ ಆಗುವದೇ ಇಲ್ಲ. ಉತ್ತಮ ಭಗವದ್ಭಕ್ತನು ಯಾವಾಗಲೂ ಸರ್ವತ್ರ ಸಮದೃಷ್ಟಿಯುಳ್ಳವನೂ, ಸಂತುಷ್ಟನೂ, ಭಗವಚ್ಚರಣಕಮಲರತನೂ ಆಗಿರುವನು. ನಿಮಿರಾಜಾ, ಭಕ್ತಿಯ ಪ್ರಭಾವವನ್ನೇನು ವರ್ಣಿಸುವದು! ಭಕ್ತನು ಸಂಕಟ ಸಮಯದಲ್ಲಿ ಭಗವಂತನ ಬರಿಯ ನಾಮಸ್ಮರಣಮಾಡಿದರೂ, ಆ ಭಗವಂತನು ಭಕ್ತನ ಪಾತಕಗಳನ್ನೆಲ್ಲ ನಾಶಮಾಡಿ ಸ್ವತಃ ಆತನ ಮನಸ್ಸಿನಲ್ಲಿ ನೆಲಿಸಿ, ಅಲ್ಲಿ ಅನ್ಯ ವಾಸನೆಗಳು ನೆಲಿಸತೊಡಗಿದರೆ ಅವನ್ನು ಕೂಡಲೆ ನಾಶಮಾಡುವನು! ಹೀಗೆ ಭಗವಂತನು ಭಕ್ತನ ಸೇವಕನಾಗಲಿಕ್ಕೆ, ಭಕ್ತರು ಆತನನ್ನು ಪ್ರೇಮಪಾಶದಿಂದ ಬಂಧಿಸುವದೇ ಕಾರಣವಾಗಿರುವದು!

ವಿವೇಕಶೀಲಾ, ಇನ್ನು ಭಕ್ತಿಯ ಪ್ರಕಾರಗಳನ್ನು ಕುರಿತು ಭಗವಾನ್ ಕಪಿಲನು ದೇವಹೂತಿಯನ್ನು ಕುರಿತು ಬೋಧಿಸಿದ್ದನ್ನು ಕೇಳು. ಕಪಿಲನು ತಾಯಿಯನ್ನು ಕುರಿತು—ಮಾತೆಯೇ, ಮೋಕ್ಷದ ಸಾಧನಗಳಾದ ಅಷ್ಟಾಂಗಯೋಗ-ಭಕ್ತಿಯೋಗಗಳಲ್ಲಿ ಈಗ ನಿನಗೆ ಅಷ್ಟಾಂಗಯೋಗವನ್ನು ಹೇಳಿದೆನು. ಇನ್ನುಮೇಲೆ ಭಕ್ತಿಯೋಗವನ್ನು ಹೇಳುತ್ತೇನೆ ಕೇಳು. ಮನುಷ್ಯರು ಬೇರೆ ಬೇರೆ ಹೇತುವಿನಿಂದ ನನ್ನಲ್ಲಿ ಭಕ್ತಿಯನ್ನಿಡುವದರಿಂದ ಭಕ್ತಿಯೋಗದ ಆಚರಣೆಗಳು ಭಿನ್ನಭಿನ್ನವಾಗಿರುವವು. ಅವುಗಳಲ್ಲಿ ತಾಮಸ-ರಾಜಸ-ಸಾತ್ವಿಕ ಎಂಬ ಮೂರು ಮುಖ್ಯಭೇದಗಳಿದ್ದು, ಪ್ರತಿಒಂದರಲ್ಲಿ ಮತ್ತೆ ಮೂರು ಮೂರು ಭೇದಗಳು ಇರುವವು. ನನ್ನಲ್ಲಿ ದ್ವೈತಬುದ್ಧಿಯನ್ನು ವಹಿಸಿ ಹಿಂಸೆ, ದಂಭ, ಮಾತ್ಸರ್ಯಗಳಿಗಾಗಿ ಮಾಡುವ ಭಕ್ತಿಯು ತಾಮಸವು. ಈ ಅಧಮವಾದ ತಾಮಸಭಕ್ತಿಯಲ್ಲಿಯೂ ಹಿಂಸೆಯ ಸಲುವಾಗಿ ಮಾಡುವ ಭಕ್ತಿಯು ಅಧಮವು, ದಂಭಕ್ಕಾಗಿ ಮಾಡುವದು ಮಧ್ಯಮವು, ಮಾತ್ಸರ್ಯದಿಂದ ಮಾಡುವದು ಉತ್ತಮವು. ಅದರಂತೆ ನನ್ನಲ್ಲಿ ದ್ವೈತಬುದ್ಧಿಯನ್ನು ವಹಿಸಿ ವಿಷಯೋಪಭೋಗ, ಕೀರ್ತಿ, ಐಶ್ವರ್ಯ ಇವುಗಳ ಸಂಪಾದನಕ್ಕಾಗಿ ಮಾಡುವ ಭಕ್ತಿಯು ರಾಜಸವು; ಈ ಮಧ್ಯಮವಾದ ರಾಜಸಭಕ್ತಿಯಲ್ಲಿಯೂ ವಿಷಯೋಪಭೋಗಕ್ಕಾಗಿ ಮಾಡುವ ಭಕ್ತಿಯು ಅಧಮವು; ಕೀರ್ತಿಗಾಗಿ ಮಾಡುವದು ಮಧ್ಯಮವು; ಐಶ್ವರ್ಯಕ್ಕಾಗಿ ಮಾಡುವದು ಉತ್ತಮವು. ಅದರಂತೆ, ನನ್ನಲ್ಲಿ ದ್ವೈತಭಾವವನ್ನು ವಹಿಸುವದಂತು ಸರಿಯೇ; ಆದರೆ ಪಾಪಕ್ಷಾಲನ, ಈಶ್ವರಪ್ರಾಪ್ತಿ, ವೇದಾಜ್ಞಾಪಾಲನ ಇವುಗಳಿಗಾಗಿ ನನ್ನಲ್ಲಿ ಮಾಡುವ ಭಕ್ತಿಯು ಸಾತ್ವಿಕವು. ಈ ಉತ್ತಮವಾದ ಸಾತ್ವಿಕ ಭಕ್ತಿಯಲ್ಲಿಯೂ, ಪಾಪಕ್ಷಾಲನಕ್ಕಾಗಿ ಮಾಡುವದು ಅಧಮವು, ಈಶ್ವರಪ್ರಾಪ್ತಿಗಾಗಿ ಮಾಡುವದು ಮಧ್ಯಮವು, ವೇದಾಜ್ಞಾಪಾಲನಕ್ಕಾಗಿ ಮಾಡುವದು ಉತ್ತಮವು. ಹೀಗೆ ಭಕ್ತಿಯಲ್ಲಿ ಒಂಬತ್ತು ಪ್ರಕಾರಗಳಾದವು. ಈ ಪ್ರತಿಒಂದು ಪ್ರಕಾರದಲ್ಲಿ-ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ, ದಾಸ್ಯ, ಸಖ್ಯ,

ಆತ್ಮನಿವೇದನ ಹೀಗೆ ಮತ್ತೆ ಒಂಬತ್ತು ವಿಧಗಳಾಗಿ ಒಟ್ಟಿಗೆ ಭಕ್ತಿಯಲ್ಲಿ ಎಂಬತ್ತೊಂದು ಪ್ರಕಾರಗಳಾಗುವವು. ಇನ್ನು ನಿರ್ಗುಣ ಭಕ್ತಿಯು ಪ್ರಕಾರವು ಒಂದೇಒಂದಾಗಿರುವದು. ಮಾತೆಯೇ, ನನ್ನ ಲೀಲಾಶ್ರವಣಮಾತ್ರದಿಂದ ಅಂತಃಕರಣವು ಭಕ್ತಿಪರಿಪ್ಲುತವಾಗಿ ಗಂಗೋದಕ ಪ್ರವಾಹವು ಸಮುದ್ರವನ್ನು ಕುರಿತು ತೆರಳುವಂತೆ ನನ್ನಕಡೆಗೆ ತಿರುಗಿ ನನ್ನಲ್ಲಿಯೇ ರಮಿಸುವದಕ್ಕೆ ನಿರ್ಗುಣಭಕ್ತಿಯೆನ್ನುವರು. ಈ ಭಕ್ತಿಮಾರ್ಗವು "ಆತ್ಯಂತಿಕ" ಅಂದರೆ ಎಂದೂ ನಷ್ಟವಾಗದ್ದು ಎನಿಸುವದು. ಇದರ ಯೋಗದಿಂದಲೇ ಮನುಷ್ಯನು ತ್ರಿಗುಣಾತ್ಮಕವಾದ ಸಂಸಾರ ಸಮುದ್ರವನ್ನು ಉಲ್ಲಂಘಿಸಿ ನನ್ನ ಸ್ವರೂಪದಲ್ಲಿ ಬಂದು ಕೂಡಿಕೊಳ್ಳುವನು.

ಭಕ್ತಿಯು ಉತ್ಪನ್ನವಾಗುವ ಯೋಗ್ಯ ಆಚರಣೆಯು:—ತಾಯಿಯೇ, ಮನುಷ್ಯನು ಪರಮೇಶ್ವರಾರ್ಪಣ ಬುದ್ಧಿಯಿಂದ ಸ್ವಧರ್ಮವನ್ನು ಉತ್ತಮರೀತಿಯಿಂದ ಆಚರಿಸಬೇಕು. ಯಜ್ಞಯಾಗಾದಿಗಳ ಮಟ್ಟಿಗೆ ಹಿಂಸೆಮಾಡಿ, ಪಂಚರಾತ್ರಾದಿ ಆಗಮಗಳಲ್ಲಿ ಹೇಳಿದಂತೆ ನನ್ನನ್ನು ನಿಷ್ಕಾಮ ಬುದ್ಧಿಯಿಂದ ಪೂಜಿಸಬೇಕು, ಪ್ರಾಣಿಮಾತ್ರಗಳಲ್ಲಿ ಅಭೇದತ್ವದಿಂದ ಪರಮೇಶ್ವರನೇ ತುಂಬಿಕೊಂಡಿರುವನೆಂಬ ಸದ್ಭಾವವನ್ನು ವಹಿಸಬೇಕು. ಅಂತಃಕರಣದಲ್ಲಿ ಧೈರ್ಯವನ್ನೂ, ವಿಷಯದಲ್ಲಿ ವೈರಾಗ್ಯವನ್ನೂ ತಾಳಬೇಕು. ಸತ್ಪುರುಷರ ವಿಷಯವಾಗಿ ಸನ್ಮಾನವನ್ನೂ, ಸಮಾನಶೀಲರಲ್ಲಿ ಸ್ನೇಹವನ್ನೂ, ಅನಾಥರಲ್ಲಿ ದಯಾಗುಣವನ್ನೂ ವಹಿಸಬೇಕು. ಯಮನಿಯಮಾದಿಗಳನ್ನು ಪಾಲಿಸಬೇಕು. ನನ್ನ ನಾಮಸ್ಮರಣಮಾಡಬೇಕು. ಆತ್ಮಪ್ರತಿಪಾದನ ಮಾಡುವ ಶಾಸ್ತ್ರಗಳ ಶ್ರವಣ-ಮನನಗಳನ್ನು ಯಾವಾಗಲೂ ಮಾಡುತ್ತಿರಬೇಕು. ಮನಸ್ಸನ್ನು ಸದಾ ಶಾಂತವಾಗಿಯೂ, ಸರಳವಾಗಿಯೂ ಇಡಬೇಕು. ಸತ್ಸಮಾಗಮವನ್ನು ಅವಶ್ಯವಾಗಿ ಮಾಡತಕ್ಕದ್ದು. ಹೀಗೆ ನಡೆಯುವವನ ಅಂತಃಕರಣವು ಶುದ್ಧವಾಗಿ, ಭಗವಂತನ ಗುಣಗಳ ಶ್ರವಣ ಮಾಡಿದಕೂಡಲೆ ಅಲ್ಲಿ ಅವನ ಅಂತಃಕರಣವು ನಟ್ಟು ಅದು ಸಹಜವಾಗಿ ಪರಮೇಶ್ವರನನ್ನು ಸ್ವಾಧೀನಪಡಿಸಿಕೊಳ್ಳುವದು. ದೇಹಾಭಿಮಾನಿಯೂ, ಭೇದಬುದ್ಧಿಯವನೂ, ಪ್ರಾಣಿಮಾತ್ರಗಳ ಅಂತರಂಗದಲ್ಲಿ ವಾಸಮಾಡುವ ನನ್ನಲ್ಲಿ ಪರಬುದ್ಧಿಯಿಂದ ದ್ವೇಷಬಳಿಸುವವನೂ ಆದ ಮನುಷ್ಯನು ಮಾಡಿದ ನನ್ನ ಪೂಜೆಯು, ಬೂದಿಯಲ್ಲಿ ಹೋಮಮಾಡಿದ ಹಾಗೆಯೇ ಸರಿ! ಪ್ರಾಣಿಮಾತ್ರಗಳಲ್ಲಿ ದ್ವೇಷಬಳಿಸುವವನು ಸರ್ವೋಪಚಾರಗಳಿಂದ ನನ್ನನ್ನು ಪೂಜಿಸಿದರೂ ನಾನು ಸರ್ವಥಾ ಸಂತುಷ್ಟನಾಗುವದಿಲ್ಲ. ತನ್ನಿಂದ ಹಾಗು ಪ್ರಾಣಿಮಾತ್ರಗಳಿಂದ ಪರಮೇಶ್ವರನು ಬೇರೆ ಇರುವನೆಂದು ಭಾವಿಸುವವನಿಗೆ ನಾನು ಸ್ವತಃ ಸಂಸಾರದುಃಖಗಳನ್ನೊದಗಿಸಿಕೊಟ್ಟು, ಮೃತ್ಯುಭಯವನ್ನುಂಟುಮಾಡುವೆನು; ಆದ್ದರಿಂದ ಸರ್ವಾಂತರ್ಯಾಮಿಯಾದ ನನ್ನನ್ನು ಸರ್ವಭೂತಗಳಲ್ಲಿಯೂ ಪೂಜಿಸಬೇಕು; ಹ್ಯಾಗಂದರೆ—ತನಗಿಂತ ಶ್ರೇಷ್ಠರಾದವರನ್ನು ಸನ್ಮಾನಿಸಬೇಕು; ಸರಿಕರೊಡನೆ ಸ್ನೇಹಬಳಿಸಬೇಕು; ತನಗಿಂತ ಹೀನರಾದವರಿಗೆ ಪ್ರಿಯವಾದದ್ದನ್ನು ಮಾಡಿ ಸಂತುಷ್ಟರನ್ನಾಗಿ ಮಾಡಬೇಕು; ಮತ್ತು ಸರ್ವಭೂತಗಳಲ್ಲಿಯೂ ಸಮದೃಷ್ಟಿಯನ್ನಿರಿಸಬೇಕು.

ವೊತೇ, ಸರ್ವಕರ್ಮಗಳನ್ನು ನನಗೆ ಅರ್ಪಿಸಿ, ಕರ್ತೃತ್ವಾಭಿಮಾನರಹಿತನೂ, ಭೂತಮಾತ್ರಗಳಲ್ಲಿ ಸಮದೃಷ್ಟಿಯುಳ್ಳವನೂ ಆದ ಪುರುಷನು ನನಗೆ ಉತ್ತಮರಲ್ಲಿ ಉತ್ತಮನಾಗಿ ತೋರುವನು. ತಾಯಿಾ ದೇವಹೂತೀ, ಈಗ ನಾನು ನಿನಗೆ ಹೇಳಿದ ಭಕ್ತಿಯೋಗ-ಅಷ್ಟಾಂಗಯೋಗಗಳಲ್ಲಿ ಯಾವದನ್ನಾಚರಿಸಿದರೂ ಈಶಪ್ರಾಪ್ತಿಯಾಗುವದು.

## ಜ್ಞಾನಪ್ರದೀಪ ಕಿರಣ,

### ೧೧ ನೆಯದು.

### ಜೀವನಸಂಸಾರಸ್ಥಿತಿಯು.

ಹೀಗೆ ಸಿದ್ಧಮುನೀಶ್ವರರು ಯೋಗತ್ರಯಗಳನ್ನು, ಅದರಲ್ಲಿಯೂ ವಿಶೇಷವಾಗಿ ಭಕ್ತಿಯೋಗವನ್ನು ವರ್ಣಿಸಲು, ವಿವೇಕಶೀಲನು ಪರಮಾನಂದಪಟ್ಟು—ಸದ್ಗುರೋ, ನಿನ್ನ ಅನುಗ್ರಹದಿಂದ ನಿಶ್ಚಯವಾಗಿ ನಾವು ಕೃತಾರ್ಥರಾದೆವು; ಆದರೆ ಸತ್ಯಮಾಗಮ ಮಾಡದೆ ಕೇವಲ ಸಂಸಾರಮಗ್ನರಾಗಿರುವ ಜೀವರ ಸ್ಥಿತಿಯನ್ನು ನನಗೋಸ್ಕರ ನಿರೂಪಿಸಬೇಕು; ಯಾಕಂದರೆ ಆ ಭಯಂಕರ ಸ್ಥಿತಿಯನ್ನು ನಿನ್ನ ಮುಖದಿಂದ ಶ್ರವಣ ಮಾಡುವದರಿಂದ ಕೇಳುವವರಿಗೆ ಸಂಸಾರ ಮಾಡುವ ವಿಷಯದಲ್ಲಿ ಪೂರ್ಣಎಚ್ಚರವು ಉಂಟಾಗುವದು, ಅನ್ನಲು, ಸಿದ್ಧಮುನೀಶ್ವರನು—ಶಿಷೋತ್ತಮಾ, ನೀನು ಅನ್ನುವದು ನಿಜವು. ಸಂಸಾರಾಸಕ್ತಿಯ ಭಯಂಕರ ಸ್ಥಿತಿಯನ್ನು ವಿಚಾರಿಸುವದರಿಂದ ಎಚ್ಚರವು ಹುಟ್ಟುವ ಸಂಭವವಿರುತ್ತದೆ; ಆದ್ದರಿಂದ ಭಗವಾನ್ ಕಪಿಲಮುನಿಯು ತನ್ನ ತಾಯಿಯನ್ನು ಕುರಿತು ಹೇಳಿದ ಭಾಗವತದೊಳಗಿನ ವಿಷಯವನ್ನೇ ನಿನಗೋಸ್ಕರ ಹೇಳುವೆನು ಕೇಳು. ಕಪಿಲಮುನೀಶ್ವರನು ತನ್ನ ತಾಯಿಯನ್ನು ಕುರಿತು—ತಾಯಿಯೇ, ಸರ್ವಸೃಷ್ಟಿಯ ನಿಯಮನ ಮಾಡುವ ಭಗವಂತನ ಪ್ರಕೃತಿ-ಪುರುಷಾತ್ಮಕ, ಹಾಗು ಬೇರೆ ತತ್ವಾತ್ಮಕ ರೂಪಕ್ಕೆ ದೈವವೆನ್ನುವರು. ದೈವಪ್ರೇರಣೆಯಿಂದಲೇ ಜೀವನಿಗೆ ಕರ್ಮದಶೆಯು ಪ್ರಾಪ್ತವಾಗಿ, ಆತನಿಗೆ ನಾನಾ ಪ್ರಕಾರದ ಗತಿಗಳು ಉಂಟಾಗುವವು. ಭಗವಂತನ ಈ ರೂಪವೇ ಪದಾರ್ಥಗಳ ಭಿನ್ನತ್ವಕ್ಕೆ ಕಾರಣವಾಯಿತೆಂದರೆ ಆ ರೂಪಕ್ಕೆ ಕಾಲವೆನ್ನುವರು. ಎಲ್ಲವೂ ಕಾಲಾಧೀನವಾಗಿರುವದು. ಈ ಜಗತ್ತಿನಲ್ಲಿ ಓತಪ್ರೋತವಾಗಿ ತುಂಬಿಕೊಂಡಿರುವ ತ್ರಿಗುಣಗಳ ನಿಯಂತೃಗಳಾದ ಬ್ರಹ್ಮ-ವಿಷ್ಣು-ಮಹೇಶ್ವರರು ಪ್ರತಿಒಂದು ಕಲ್ಪದಲ್ಲಿ ಈ ಜಗತ್ತಿನಲ್ಲಿ ಉತ್ಪತ್ತಿ-ಸ್ಥಿತಿ-ಲಯಗಳನ್ನು ಮಾಡಲು ಪ್ರವೃತ್ತರಾಗುವದು ಕೂಡ ಕಾಲನ ಆಜ್ಞೆಯಿಂದಲೇ! ಅಂದಬಳಿಕ, ಎಲ್ಲವೂ ಕಾಲಾಧೀನವೆಂದು ಬೇರೆಯಾಕೆ ಹೇಳಬೇಕು? ಕಾಲನ ಭಯದಿಂದಲೇ ಸೃಷ್ಟಿಯ ಎಲ್ಲ ವ್ಯವಹಾರಗಳು ನಡೆದಿರುವವು. ಈ ಪ್ರಚಂಡಶಕ್ತಿಯ ಕಾಲನ ಯೋಗದಿಂದಲೇ ಜೀವನಿಗೆ ಬೇರೆ ಬೇರೆ ಅವಸ್ಥೆಗಳು ಪ್ರಾಪ್ತವಾಗುತ್ತವೆ. ತನಗೆ ಸುಖವಾಗಬೇಕೆಂದು ಒಳ್ಳೇ ಪ್ರಯತ್ನದಿಂದ ಮನುಷ್ಯನು ಸಂಪಾ

ದಿಸುವ ಪದಾರ್ಥಗಳನ್ನೆಲ್ಲ ಕಾಲವು ನಾಶಮಾಡುವದು; ಅದರಿಂದ ಆ ಪದಾರ್ಥಗಳ ಸಲುವಾಗಿ ಮನುಷ್ಯನು ಶೋಕಮಾಡತೊಡಗುವನು. ಹೆಂಡಿರು-ಮಕ್ಕಳಿಂದ ಸಹಿತವಾದ ತನ್ನ ದೇಹವು ನಶ್ವರವಾಗಿದ್ದರೂ, ಆ ಮಂದಬುದ್ಧಿಯು ಮನುಷ್ಯನು ತನ್ನ ದೇಹದ ಸಂಬಂಧದಿಂದ ಪ್ರಾಪ್ತವಾದ ಹೊಲ-ಮನೆ-ದ್ರವ್ಯ ಮೊದಲಾದವನ್ನು ಅಜ್ಞಾನದಿಂದ ಶಾಶ್ವತವೆಂದು ತಿಳಿಯುವನು. ಈ ಸಂಸಾರದಲ್ಲಿ ಪ್ರಾಣಿಗಳಿಗೆ ಅವು ಜನ್ಮ ಹೊಂದಿದ ಯೋನಿಗಳಲ್ಲಿಯೇ ಸುಖವಾಗುತ್ತಿರುವದು. ಪ್ರತ್ಯಕ್ಷ ನರಕದಲ್ಲಿ ಜನ್ಮ ಹೊಂದಿದ್ದರೂ ವಿಷ್ಟಾಭಕ್ಷಣವೇ ಅಲ್ಲಿ ಹುಟ್ಟಿದ ಪ್ರಾಣಿಗೆ ಸುಖಪ್ರದವಾಗಿ ತೋರುತ್ತದೆ- ತನ್ನ ಆ ಸುಖದ ವಸ್ತುವು ದೊರೆಯುತ್ತಿರುವವರೆಗೆ ತನ್ನ ದೇಹವನ್ನು ಬಿಟ್ಟು ಹೋಗುವ ಮನಸ್ಸು ಅದ ಕ್ಕಾಗುವದಿಲ್ಲ! ಯಾಕಂದರೆ ಈಶ್ವರೀಮಾಯೆಯಿಂದ ಅದು ಪೂರ್ಣ ಮೋಹಿತವಾಗಿ ರುತ್ತದೆ. ಸ್ವತಃ ತನ್ನ ದೇಹ, ಹೆಂಡಿರು, ಮಕ್ಕಳು, ಹೊಲ ಮನೆ, ದನಕರುಗಳು, ಬಾಂಧವರು ಇವರೆಲ್ಲರ ಸಂಬಂಧದ ಬಗೆಬಗೆಯ ವಿಚಾರಗಳು ಮನುಷ್ಯನ ಮನಸ್ಸಿನಲ್ಲಿ ಉತ್ಪನ್ನವಾಗಿ, ಅವುಗಳಿಂದಲೇ ತಾನು ಧನ್ಯನೆಂದು ಅವನು ತಿಳಿಯುತ್ತಿರುವನು; ಮತ್ತು ಅವರೆಲ್ಲರ ಪೋಷಣದ ಚಿಂತೆಯಿಂದ ಯಾವಾಗಲೂ ಕೊರಗುತ್ತಿರುವನು; ಆದ್ದರಿಂದ ಈ ಮೂಢಪ್ರಾಣಿಯು ಒಂದರ ಹಿಂದೊಂದರಂತೆ ಹಲವು ಪಾಪಕೃತ್ಯಗಳನ್ನು ಮಾಡುವನು- ಮಾಯಾವೀಸ್ತ್ರೀಯರಿಂದಾಗುವ ಏಕಾಂತದ ಸುಖ, ಸಣ್ಣ ಹುಡುಗರ ಮುದ್ದುಮಾತು ಗಳು ಮೊದಲಾದವುಗಳ ಯೋಗದಿಂದ ಮನುಷ್ಯನ ಅಂತಃಕರಣವೂ, ಇಂದ್ರಿಯಗಳೂ ಆಕರ್ಷಿಸಲ್ಪಡುವದರಿಂದ. ಅವನು ದುಃಖಮಯ ಸಂಸಾರದಲ್ಲಿದ್ದು ದುಃಖದ ಪ್ರತಿಕಾರ ಮಾಡಲು ಹೆಣಗುತ್ತ, ಅದೊಂದು ಸುಖವೇ ಎಂದು ಭಾವಿಸುವನು! ಹೆಂಡಿರುಮಕ್ಕಳ ಸಂರಕ್ಷಣದ ಸಲುವಾಗಿ ಅವನು ಅನೇಕ ಘೋರಕರ್ಮಗಳನ್ನು ಮಾಡಿ ದ್ರವ್ಯವನ್ನು ಸಂಪಾದಿಸಲು, ಅದರಿಂದ ಕುಟುಂಬದವರು ಚಕ್ಕಂದವಾಡುವರು. ಅವರಿಗೆ ಸಾತು ಉಳಿದರೆ ಮಾತ್ರ ಅದಕ್ಕೆ ಇವನು ಪಾಲುಗಾರನಾಗುವನು; ಆದರೆ ಅವನು ಮಾಡಿದ ಘೋರಕರ್ಮಗಳ ಪಾಪಕ್ಕೆ ಮಾತ್ರ ಕುಟುಂಬದವರು ಪಾಲುಗಾರರಾಗುವದಿಲ್ಲ. ಇವರ ಒಡಲಿಗೆ ಈಡುಮಾಡುವದಕ್ಕಾಗಿ ಅವನು ಮಾಡಬಾರದ ವ್ಯವಹಾರಗಳನ್ನು ಮಾಡುವಾಗ ಪ್ರಾರಬ್ಧಕರ್ಮದಿಂದ ಹಾನಿತಟ್ಟಿದರೆ, ಲೋಭವು ಹೆಚ್ಚಾಗಿ ಮತ್ತೂ ಅದೇ ಬಗೆಯ ವ್ಯವಹಾರಗಳನ್ನು ಆತನು ಮಾಡುವನು. ಕಡೆಗೆ ಅವನು ಸಂಪೂರ್ಣ ಲೋಭದ ಅಧೀನ ನಾಗಿ ಪರದ್ರವ್ಯವನ್ನು ಅಪಹರಿಸಲಿಕ್ಕೂ ಹಿಂದೆಮುಂದೆ ನೋಡುವದಿಲ್ಲ; ಆದರೆ ಏನು ಮಾಡಿದರೂ ಆ ಮಂದಭಾಗ್ಯನ ತಾಪತ್ರಯವು ಹಿಂಗುವದಿಲ್ಲ. ಆಗ ಅವನಿಂದ ಕುಟುಂಬದ ಪೋಷಣವಾಗದಾಗಲು, ಕುಟುಂಬದವರು ಅವನನ್ನು ತಿರಸ್ಕರಿಸುತ್ತ, ಒಕ್ಕ ಲಿಗರು ದುಡಿಯಲಾರದ ಮುದಿ ಎತ್ತಿಗೆ ಮೇವು ನೀರುಗಳ ವಿಷಯವಾಗಿ ದುರ್ಲಕ್ಷ್ಯಮಾಡು ವಂತೆ, ಇವನ ಊಟಉಡಿಗೆಗಳ ವಿಷಯವಾಗಿ ದುರ್ಲಕ್ಷ್ಯಮಾಡುವರು; ಇಷ್ಟಾದರೂ ಆ ಮೂಢನಿಗೆ ವೈರಾಗ್ಯವು ಉತ್ಪನ್ನವಾಗುವದಿಲ್ಲ. ಮುಂದೆ ಮುಪ್ಪಿನಿಂದ ಅವನ ಶರೀರವು ವಿದ್ರೂಪಹೊಂದಿ ಜರ್ಜರವಾಗಲು, ಅವನ ಪ್ರೀತಿಯ ಹೆಂಡಿರು ಮಕ್ಕಳು ಬೇಸತ್ತು,

ನಾಯಿಯ ಮುಂದೆ ಬಕ್ಕರಿಯ ಚೂರು ಒಗೆಯುವಂತೆ ಅವನಿಗೆ ಅನ್ನ ಹಾಕುವರು! ಆದರೂ ಆ ಮರಣೋನ್ಮುಖ ಪುರುಷನು ಅಪಮಾನ ಪೂರ್ವಕವಾಗಿ ಅದನ್ನು ಸ್ವೀಕರಿಸುವನು. ಇಷ್ಟಾದರೂ ತನ್ನ ಮನೆಮಾರು ಹೆಂಡಿರು ಮಕ್ಕಳ ವಿಷಯವಾಗಿ ವೈರಾಗ್ಯವು ಅತನಲ್ಲಿ ಉತ್ಪನ್ನವಾಗುವದಿಲ್ಲ! ಕಡೆಗೆ ಅವನ ಪ್ರಾಣವಾಯುವು ದೇಹಬಿಟ್ಟು ಹೊರಟು ಹೋಗುವಾಗ ಗಂಟಲಲ್ಲಿ ಗೊರಗುಟ್ಟುತ್ತ ವರ್ಣಿಸಲಾಗದ ವ್ಯಥೆಯನ್ನುಂಟುಮಾಡುತ್ತಿರಲು, ಆಪ್ತರು "ಅಪ್ಪಾ! ಅಣ್ಣಾ!" ಎಂದು ಕೂಗುತ್ತಿರುವಾಗ, ಅವರೊಡನೆ ಒಂದು ಶಬ್ದವನ್ನೂ ನುಡಿಯಲಾರದೆ ಆ ಪ್ರಾಣಿಯು ಪರಲೋಕಕ್ಕೆ ಸೇರಳುವನು!

**ಯಮಯಾತನೆಯು:**—ಹೀಗೆ ಇಂದ್ರಿಯಗಳನ್ನು ಜಯಿಸದೆ ಕೇವಲ ಕುಟುಂಬದ ಹಿತಕ್ಕಾಗಿ ಪೇಚಾಡಿ ತನ್ನ ಆಯುಷ್ಯವನ್ನು ವ್ಯರ್ಥವಾಗಿ ಕಳಕೊಂಡಿದ್ದ ಪ್ರಾಣಿಯು, ತನ್ನನ್ನು ಒಯ್ಯಬಂದ ಯಮದೂತರನ್ನು ಕಂಡು ಅಂಜುವನು. ಆಗ ಅವನಿಗೆ ಶೌಚಮೂತ್ರಗಳೆರಡೂ ಆಗುವವು! ಆ ಮೃತ ಮನುಷ್ಯನು ಯಾತನೆಯನ್ನು ಭೋಗಿಸುವದಕ್ಕಾಗಿ ಯಮದೂತರು ತಮ್ಮ ಸಂಗಡ ತಂದಿದ್ದ ಶರೀರದಲ್ಲಿ ಅವನನ್ನು ಹಾಕಿಕೊಂಡು ಅವನ ಕೊರಳಿಗೆ ಪಾಶವನ್ನು ಬಿಗಿದು ಎಳೆಯುತ್ತ ಅವನನ್ನು ಒಯ್ಯುವರು. ಹಾದಿಯಲ್ಲಿ ನಾಯಿಗಳು ಅವನನ್ನು ಹರಿದು ತಿನ್ನುವಾಗ ಅವನ ಪಾಪಗಳೆಲ್ಲ ಅವನ ನೆನಪಿಗೆ ಬರುವವು. ಅವನು ಕಾದ ಉಸುಬಿನಮೇಲೆ ನಡೆದು ಹೋಗಬೇಕಾಗುವದು. ಈ ಸ್ಥಿತಿಯಲ್ಲಿ ಒಂದು ಹೆಜ್ಜೆಕಿತ್ತಿ ಇಡುವದೂ ಅವನಿಂದಾಗುವದಿಲ್ಲ. ಆಗ ಯಮದೂತರು ಬಾರಿಕೋಲುಗಳಿಂದ ಅವನನ್ನು ಹೊಡೆಯಹತ್ತುವರು! ಆತನಿಗೆ ಎಷ್ಟು ಹಸಿವ ನೀರಡಿಕೆಗಳಾದರೂ ಅನ್ನ ನೀರು ಸಿಗುವದಿಲ್ಲ. ಹಾದಿಯಲ್ಲಿ ನಡೆಯುವದಾಗದಾಗ ನೆಲಕ್ಕೆ ಬೀಳಲು, ಯಮದೂತರು ಅವನನ್ನು ದರಗುಟ್ಟಿ ಎಳೆಯುವರು. ಭೂಲೋಕದಿಂದ ಯಮಪುರಿಯು ಒಂಬತ್ತುಸಾವಿರದ ತೊಂಬತ್ತು ಯೋಜನ ದೂರವಿರುವದು. ಇಷ್ಟುಹಾದಿಯನ್ನು ಅವನು ಮೂರು ಮುಹೂರ್ತಗಳಲ್ಲಿ, ಅಂದರೆ ಆರು ಗಳಿಗೆಗಳಲ್ಲಿ ಕ್ರಮಿಸಿ ಹೋಗಬೇಕಾಗುವದು. ಮಹಾಪಾಪಿಯನ್ನು ಎರಡೇ ಮುಹೂರ್ತಗಳಲ್ಲಿ ಯಮದೂತರು ಎಳೆದೊಯ್ಯುವರು! ಇಂಥ ದುಃಖಕಾರಕ ಪ್ರವಾಸವು ಮುಗಿದ ಬಳಿಕ ಯಮಪುರಿಯ ಘೋರಯಾತನೆಗೆ ಆರಂಭವಾಗುವದು. ಅವನ ಮೈಗೆ ಉರಿಯುವ ಕಟ್ಟಿಗೆಗಳನ್ನು ಕಟ್ಟಿ ಮೈಯನ್ನು ಸುಡುವರು. ಅವನ ಶರೀರದ ಮಾಂಸವನ್ನು ಅವನ ಕೈಯಿಂದಲೇ ಹರಿಸಿ ತಿನಿಸುವರು; ಎರಡನೆಯವರಿಂದಲೂ ತುಂಡುಮಾಡಿಸಿ ತಿನಿಸುವರು! ಅಲ್ಲಿರುವ ನಾಯಿ, ಹದ್ದುಗಳು ಅವನ ಕರುಳು ಹರಿದು ತಿನ್ನುವವು. ಮಾತೆಯೇ, ಅಲ್ಲಿಯ ಶಿಕ್ಷೆಗಳನ್ನು ಎಷ್ಟೆಂದು ವರ್ಣಿಸಬೇಕು! ಹಾವು ಚೇಳುಗಳ ಕಡತ, ಮದ್ದಾನೆಯ ತುಳತ, ಗುಡ್ಡದ ಮೇಲಿಂದ ಯಮದೂತರ ಒಗತ, ಕೆಸರಿನಲ್ಲಿಯ ಹುಗತ, ಈ ಪ್ರಕಾರದ ಭಯಂಕರ ಯಾತನೆಗಳನ್ನು ಭೋಗಿಸಬೇಕಾಗುವದು! ಇಷ್ಟಾದಬಳಿಕ ಕರ್ಮಾನುಸಾರವಾಗಿ ಪ್ರಾಣಿಗಳನ್ನು ತಾಮಿಸ್ರ, ಅಂಧತಾಮಿಸ್ರ, ರೌರವ ಮೊದಲಾದ ನರಕಗಳಲ್ಲಿ ದೂಡಿಬಿಡುವರು. ತಾನು ಗಳಿಸಿದ ಗಳಿಕೆಯೆಲ್ಲ ಇಲ್ಲಿಯೇ ಉಳಿಮ, ಅದನ್ನು

ಗಳಿಸುವಾಗ ಮಾಡಿದ ಪಾಪವು ಮಾತ್ರ ಈ ಭಯಂಕರ ಯಾತನೆಗೂ—ಘೋರನರಕಕ್ಕೂ ಗುರಿಮಾಡುವದಕ್ಕಾಗಿ ಮನುಷ್ಯನ ಸಂಗಡ ಬರುತ್ತದೆ. ತನ್ನ ಶರೀರವನ್ನು, ಅಥವಾ ಕುಟುಂಬದವರನ್ನು ಇಲ್ಲಿಯೇ ಬಿಟ್ಟು ಹೋಗುವಂತೆ, ಪಾಪವನ್ನು ಇಲ್ಲಿಯೇ ಬಿಟ್ಟು ಹೋಗಲಿಕ್ಕೆ ಮನುಷ್ಯನಿಗೆ ಬರುವದಿಲ್ಲ. ಅದನ್ನು ದೈವವು ಆತನ ಬಳಿಯಲ್ಲಿ ತಂದು ಇಡುವದು. ಹೀಗೆ ಪ್ರಾಣಿಯು ನರಕವಾಸವು ಮುಗಿದಬಳಿಕ ಆತನು ಹಂದಿ—ನಾಯಿಗಳ ಜನ್ಮ ಹೊಂದಿ ಅಲ್ಲಿಯು ಸುಖಪಡಬೇಕಾಗುತ್ತದೆ! ಇದರಂತೆ ಅನುಕ್ರಮವಾಗಿ ಪಾಪಕ್ಷಯವಾಯಿತೆಂದರೆ ಮತ್ತೆ ಮನುಷ್ಯಜನ್ಮವು ಆತನಿಗೆ ಪ್ರಾಪ್ತವಾಗುವದು!

**ಪ್ರಾಣಿಯಜನ್ಮವು:**—ಮಾತೆಯೇ, ಇನ್ನು ಪ್ರಾಣಿಯು ಜನ್ಮಕ್ಕೆ ಬರುವ ಕ್ರಮವನ್ನು ಹೇಳುವೆನು ಕೇಳು. ಜೀವನಿಗೆ ಶರೀರವು ಪ್ರಾಪ್ತವಾಗಲಿಕ್ಕೆ ಅವನ ಪೂರ್ವಕರ್ಮವೇ ಕಾರಣವಾಗಿರುವದು. ಆತನ ಕರ್ಮಪ್ರವರ್ತಕನು ಈಶ್ವರನು. ಆ ಪೂರ್ವ ಕರ್ಮವು ಫಲಿಸುವ ಕಾಲವು ಒದಗಿತೆಂದರೆ ಜೀವನು ಧಾನ್ಯಕಣದ ಆಶ್ರಯದಿಂದ ಪುರುಷನ ಶರೀರವನ್ನು ಪ್ರವೇಶಿಸಿ, ಆಮೇಲೆ ಆತನ ರೇತಃಕಣದ ಆಶ್ರಯದಿಂದ ಸ್ತ್ರೀಯ ಉದರವನ್ನು ಪ್ರವೇಶಿಸುವನು. ಮೊದಲನೆಯ ರಾತ್ರಿಯಲ್ಲಿ ಆ ಪುರುಷನ ರೇತಸ್ಸು ಹಾಗು ಸ್ತ್ರೀಯ ರುಧಿರ ಇವೆರಡರ ಮಿಶ್ರಣವು ಒತ್ತಟ್ಟಿಗೆ ಆಗುವದು. ಮುಂದೆ ಐದು ರಾತ್ರಿಗಳಲ್ಲಿ ಅದರ ದುಂಡನ್ನ ಬುದ್ಬುದವಾಗುವದು ಹತ್ತು ರಾತ್ರಿಗಳಲ್ಲಿ ಅದು ಕೆಲ ಮಟ್ಟಿಗೆ ಬಿರುಸು ಆಗಿ ಬೋರೆಯಕಾಯಿಯಂತೆ ದುಂಡಗೆ ಆಗುವದು. ಒಂದು ತಿಂಗಳಲ್ಲಿ ಮಾಂಸಪಿಂಡದಂತೆ ಅದರ ಆಕಾರವಾಗುವದು. ಆ ರೇತವು ತಿರ್ಯಕ್ ಯೋನಿಯಲ್ಲಿದ್ದರೆ ತತ್ತಿಯ ಆಕಾರದ್ದಾಗುವದು. ಆ ಮೇಲೆ ಅದಕ್ಕೆ ತಲೆಯು ಆಗುವದು. ಎರಡುತಿಂಗಳಲ್ಲಿ ಕೈಕಾಲು ಮುಂತಾದ ಅವಯವಗಳಾಗುವವು. ಮೂರು ತಿಂಗಳಲ್ಲಿ ರೋಮಗಳು, ಅಸ್ಥಿಗಳು, ತ್ವಚೆ ಇವು ಉತ್ಪನ್ನವಾಗುವವು. ಆ ಗರ್ಭವು ಸ್ತ್ರೀ ಅಥವಾ ಪುರುಷವಿದ್ದಂತೆ ಅದಕ್ಕೆ ಚಿಹ್ನಗಳಾಗುವವು. ನಾಲ್ಕು ತಿಂಗಳಲ್ಲಿ ಮಾಂಸಾದಿಕ ಸಪ್ತಧಾತುಗಳು ಉತ್ಪನ್ನವಾಗುವವು. ಐದು ತಿಂಗಳಲ್ಲಿ ಹಸಿವೆ—ನೀರಡಿಕೆಗಳು ಉತ್ಪನ್ನವಾಗುವವು. ಆರುತಿಂಗಳಲ್ಲಿ ಆ ಗರ್ಭವು ಚರ್ಮದಿಂದ ಹೊದಿಸಲ್ಪಟ್ಟು ಬಲಗಡೆಯಮಗ್ಗಲಲ್ಲಿ ಅದು ಸರಿದಾಡಹತ್ತುವದು. ಆ ಮೇಲೆ ತಾಯಿಯ ಅನ್ನೋದಕದ ಸೇವನದಿಂದ ಆ ಗರ್ಭದ ಸಪ್ತಧಾತುಗಳು ಉತ್ತರೋತ್ತರ ಅಭಿವೃದ್ಧವಾಗುವವು. ತಾಯಿಯ ಗರ್ಭವೆಂದರೆ ಮಲಮೂತ್ರ ತುಂಬಿದ್ದೊಂದು ಕುಣಿಯು. ಅದರಲ್ಲಿ ಜಂತುಗಳ ಉತ್ಪತ್ತಿಯು ಆಗುತ್ತಲೇ ಇರುವದು. ಅಂಥ ಸ್ಥಳದಲ್ಲಿ ಇರುವದು ಜೀವನಿಗೆ ಯೋಗ್ಯತೋರುವದಿಲ್ಲ; ಆದರೆ ಮಾಡುವದೇನು? ಅಲ್ಲಿ ಅವನು ಬಹಳ ಯಾತನೆಗಳನ್ನು ಸಹಿಸಬೇಕಾಗುವದು. ಅವನ ಕೋಮಲ ದೇಹಕ್ಕೆ ಕ್ರಿಮಿಗಳು ಕಚ್ಚುವವು. ತಾಯಿಯು ತಿಂದ ಹುಳಿ—ಉಪ್ಪು—ಖಾರಗಳು ಮೈಗೆಹತ್ತಿ ಸರ್ವಾಂಗದಲ್ಲಿ ವೇದನೆಯಾಗುವದು. ಅವನ ಶರೀರದಮೇಲೆ ಗರ್ಭಾಶಯದ ಆವರಣವಿರುವದು. ಅದರಹೊರಗೆ ತಾಯಿಯ ಕರುಳಿನ ಹೊದಿಕೆಯಿರುವದು. ಗರ್ಭದಬೆನ್ನೂ, ತಲೆಯೂ ದೊನ್ನಿಯಹಾಗೆ ಬಾಗಿದ್ದು, ಮಗ್ಗಲಲ್ಲಿ ತಲೆಸೇರಿಸಿಕೊಂಡು

ಆ ಗರ್ಭವು ವಿುಸಿಕಾಡಲಾರದೆ ಇರುವದು. ಇಂಥ ಪ್ರಸಂಗದಲ್ಲಿ ಅದಕ್ಕೆ ದೈವಯೋಗ ದಿಂದ ಸ್ಮರಣಶಕ್ತಿಯು ಪ್ರಾಪ್ತವಾಗುವದು. ಅದರಿಂದ ಅದಕ್ಕೆ ಹಿಂದಿನ ನೂರು ಜನ್ಮ ಗಳಲ್ಲಿ ಮಾಡಿದ ಕರ್ಮಗಳ ನೆನಪು ಆಗುವದು. ಆ ಮೇಲೆ ಅದಕ್ಕೆ ಏಳನೇ ತಿಂಗಳಲ್ಲಿ ಜ್ಞಾನೋದಯವಾಗುತ್ತದೆ. ಪ್ರಸೂತಿವಾಯುವು ಒಂದೇ ಸವನೆ ದೂಡುತ್ತಿರುವದರಿಂದ ಅದು ಒತ್ತಟ್ಟಿಗೆ ಸ್ಥಿರವಾಗಿರದೆ ಮಲದೊಳಗಿನ ಹುಳದಂತೆ ಉದರದಲ್ಲಿ ಸರಿದಾಡುತ್ತಿರು ತ್ತದೆ. ಆ ಕಾಲದಲ್ಲಿ ಅದಕ್ಕೆ ದೇಹಾತ್ಮಗಳ ಜ್ಞಾನವಾಗಿರುವದರಿಂದ ತನ್ನ ದುಃಸ್ಥಿತಿಯು ಬಗ್ಗೆ ಅದಕ್ಕೆ ದುಃಖವಾಗುವದು. ಆಗ ಅದು ಸದ್ಗದಿತವಾಣಿಯಿಂದ ಈಶ್ವರನನ್ನು ಕುರಿತು—"ಭಗವನ್, ಮಹಾಪಾಪಿಯಾದ ನನಗೆ ಯೋಗ್ಯವಾದ ಗತಿಯನ್ನೇ ನೀನು ಕೊಟ್ಟಿರುತ್ತೀ; ಆದರೆ ಈಗ ನನಗೆ ಪೂರ್ಣಪಶ್ಚಾತ್ತಾಪವಾಗಿರುವದರಿಂದ ನಿನಗೆ ಶರಣು ಬಂದಿದ್ದೇನೆ. ನನ್ನನ್ನು ಈ ನರಕದೊಳಗಿಂದ ಯಾವಾಗ ಮುಕ್ತ ಮಾಡುವೆ? ಅಥವಾ ಇಲ್ಲಿಯೇ ನನ್ನನ್ನು ಇರಗೊಡು; ಯಾಕಂದರೆ ನಾನು ಹೊರಬಿದ್ದಕೂಡಲೆ ಅವಿ ದ್ಯೆಯ ಮೂಲಕ ನನ್ನ ಈಗಿನ ಜ್ಞಾನವು ನಷ್ಟವಾಗುವದರಿಂದ ನನಗೆ ನಿನ್ನ ದರ್ಶನವಾ ಗದೆ ಹೋಗಿ ಅಹಂಕಾರದಿಂದ ದುಃಖಮಯ ಸಂಸಾರದ ಚಕ್ರದಲ್ಲಿಸಿಕ್ಕು ನಾನು ಒದ್ದಾಡ ಬೇಕಾಗುವದು." ಎಂದು ಪ್ರಾರ್ಥಿಸುತ್ತಿರಲು, ಹತ್ತುತಿಂಗಳ ಆ ಕೂಸನ್ನು ಪ್ರಸೂತಿಯು ವಾಯುವು ಹೊರಗೆ ದೂಡಿಬಿಡುವದು. ಆಗ ಅದರ ಉಸುರುಗಟ್ಟುವದು, ಸ್ಮೃತಿಯು ನಷ್ಟವಾಗುವದು, ಆಗ ಅದಕ್ಕಾಗುವ ಕಷ್ಟವನ್ನು ಅದೇ ಬಲ್ಲದು. ಅದು ಈ ಛಂದ ದಿಂದ ಭೂಮಿಯ ಮೇಲೆ ಬಿದ್ದಾಗ ತಾಯಿಯ ರಕ್ತ-ಮೂತ್ರ-ಮಲಗಳಲ್ಲಿ ಕ್ರಿಮಿಯಂತೆ ಒದ್ದಾಡುತ್ತ, ತನ್ನ ಜ್ಞಾನವು ನಷ್ಟವಾದದ್ದಕ್ಕಾಗಿ ಅಳತೊಡಗುವದು. ಆ ಮೇಲೆ ಅದು ಶೈಶವದ ಕಷ್ಟಗಳನ್ನು ಅನುಭವಿಸಬೇಕಾಗುವದು; ಆಗ ಮೈಗೆ ಸುತ್ತಿದ ಆ ಹೊಲಸು ಅರಿವೆ, ಆ ತಗಣಿ ಚಿಕ್ಕಾಡಗಳ ಕಡತ, ತಾನು ಅಳುವ ಕಾರಣ ಒಂದಿದ್ದರೆ ಉಪಚಾರ ಒಂದಾದ್ದರಿಂದ ಆಗುವ ವ್ಯಥೆ ಇಂಥ ಹಲವು ಕಷ್ಟಗಳಲ್ಲಿ ಅದರ ಶೈಶವಾವ ಸ್ಥೆಯು ಮುಗಿದು, ಪೌಗಂಡಾವಸ್ಥೆಯು ಒದಗುವದು. ಆಗಿನ ಪರಾಧೀನತೆಯಿಂದಲೂ ಅದಕ್ಕೆ ಬಹಳ ವ್ಯಥೆಯಾಗುವದು. ಇನ್ನು ತಾರುಣ್ಯದೊಳಗಿನ ಅನರ್ಥಗಳನ್ನು ವರ್ಣಿಸ ಲಾಸಲ್ಲ! ಹೊನ್ನು-ಹೆಣ್ಣು-ಮಣ್ಣುಗಳ ಆಶೆಯಿಂದ ಮಾಡುವ ಪಾಪಗಳನ್ನು ಇಷ್ಟಿಷ್ಟೆಂದು ಹೇಳಲಾಗುವದಿಲ್ಲ. ಈ ಲೋಕದಲ್ಲಿ ಶಿಶ್ನೋದರಪರಾಯಣರಾದ ಜನರೇ ಬಹಳ. ಅಂಥವರು ತಾವು ಕೆಡುವದಲ್ಲದೆ, ತಮ್ಮ ಸಹವಾಸ ಮಾಡಿದವರ ಕೇಡಿಗೂ ಕಾರಣವಾ ಗುವರು. ಯಾಕಂದರೆ ವಿಷಯಾಸಕ್ತರಾದ ಮೂಢರು ಸ್ತ್ರೀಯರು ಸಾಕಿದ ಪಶುಗಳಾಗಿ ರುವರು. ಸ್ತ್ರೀವ್ಯಾಮೋಹವು ಬಹು ಕೆಟ್ಟದು. ಸಾಕ್ಷಾತ್ ಬ್ರಹ್ಮನೂ ತನ್ನ ಮಗಳ ವಿಷಯವಾಗಿ ಪಾಪವಾಸನೆಯನ್ನು ತಾಳಿದನು; ಅಂದಬಳಿಕ ಆತನಿಂದ ನಿರ್ಮಿತರಾದ ಪುರುಷರ ಪಾಡೇನು! ತಾಯಿಯೇ, ಈ ಮಾತನ್ನು ಮುಮುಕ್ಷುಗಳಾದ ಸ್ತ್ರೀಯರೂ ನೆನಪಿನ ಲ್ಲಿಡಬೇಕು. ಅತ್ಯಂತವಾದ ಸ್ತ್ರೀಯರ ಆಸಕ್ತಿಯಿಂದ ಪುರುಷನಿಗೆ ಸ್ತ್ರೀಜನ್ಮವು ಪ್ರಾಪ್ತವಾ ಗುವಂತೆ, ಅತ್ಯಂತವಾದ ಪುರುಷಾಸಕ್ತಿಯಿಂದ ಸ್ತ್ರೀಗೆ ಪುರುಷ ಜನ್ಮವು ಪ್ರಾಪ್ತವಾಗು

ವದು. ಹೀಗೆ ಸಂಸಾರ ಚಕ್ರದ ಗತಿಯು ಸಾಗಿದರೆ ಉದ್ಧಾರವಾಗುವ ಮಾರ್ಗವೆತ್ತ? ಸ್ತ್ರೀಯಾಗಲಿ, ಪುರುಷನಾಗಲಿ ವಿಷಯಗಳು ನಾಶದ ಸಾಧನಗಳೆಂದು ತಿಳಿದು ಅವುಗಳಲ್ಲಿ ಆಸಕ್ತಿಯನ್ನಿಡಬಾರದು. ತಾಯಿಯೇ, ಜೀವನು ವ್ಯಾಪಕನೂ, ನಿತ್ಯನೂ ಆಗಿರುವದರಿಂದ ಆತನಿಗೆ ಪರಲೋಕಾದಿಗಳ ಗಮನವು ಹ್ಯಾಗೆ ಸಂಭವಿಸುವದೆಂದು ನೀನು ಕೇಳಬಹುದು; ಆದರೆ ಲಿಂಗದೇಹದ ಉಪಾಧಿಯಿಂದ ಜೀವನಿಗೆ ಲೋಕಾಂತರಗಮನವು ಸಂಭವಿಸುತ್ತದೆ. ಆತ್ಮನ ಅನುರೋಧದಿಂದ ನಡೆಯುವ ಜೀವನ ಪಂಚಭೂತಾತ್ಮಕ ಸ್ಥೂಲದೇಹ, ಹಾಗು ಉಪಾಧಿಭೂತ ಲಿಂಗದೇಹ ಇವು ತಮ್ಮತಮ್ಮ ಕಾರ್ಯಮಾಡಲಿಕ್ಕೆ ಅಸಮರ್ಥವಾಗಲು, ಸ್ಥೂಲದೇಹವು ಬಿದ್ದುಹೋಗುವದೇ ಜೀವನ ಮರಣವು. ಪುನಃ ಆ ಸ್ಥೂಲ ದೇಹವು ಲಿಂಗದೇಹದೊಡನೆ ಪ್ರಕಟವಾಗುವದೇ ಜೀವನಜನ್ಮವು. ಮೋಕ್ಷವಾಗದೆ ಲಿಂಗದೇಹವು ನಷ್ಟವಾಗುವದಿಲ್ಲವಾದ್ದರಿಂದ ಜೀವನು ಆ ದೇಹದಿಂದ ಲೋಕಾಂತರಗಮನಮಾಡಿ ಅಲ್ಲಿ ಸುಖದುಃಖಗಳನ್ನು ಭೋಗಿಸಬೇಕಾಗುತ್ತದೆ. ವಸ್ತುತಃ ಜೀವನಿಗೆ ಜನ್ಮ-ಮರಣಗಳು ಇಲ್ಲವೇಇಲ್ಲ. ಆದ್ದರಿಂದಲೇ ಮುಮುಕ್ಷುವು ಮರಣದ ಅಂಜಿಕೆಯನ್ನು ಸ್ವಲ್ಪವೂ ಹಿಡಿಯದೆ, ಆತನು ಧೈರ್ಯದಿಂದ ಜೀವನಅಜ್ಞಾತವಾದ ಗತಿಯು ಜ್ಞಾನಮಾಡಿಕೊಂಡು ಸರ್ವಸಂಗಪರಿತ್ಯಾಗ ಮಾಡಬೇಕು; ಅಂದರೆ ಆತನ ಬುದ್ಧಿಯು ಸುಸಂಸ್ಕೃತವಾಗಿ ದೇಹಾಸಕ್ತಿಯು ಕಡಿಮೆಯಾಗುವದು.



## ಶ್ರೀಸದ್ಗುರು-ಬೋಧದ ಫಲಿತವು !



ಈ ಮೇರೆಗೆ ಸಿದ್ಧಮುನೀಶ್ವರನು ಹೇಳಿದ್ದನ್ನು ಕೇಳಿ ವಿವೇಕಶೀಲರಾದ ಶಿಷ್ಯರು ಪರಮಾನಂದಪಟ್ಟು ಮತ್ತೆ ತಮ್ಮ ಗುರುಗಳನ್ನು ಕುರಿತು-ಸದ್ಗುರೋ, ಈ ಶೈವಸುಧಾರ್ಣವವೆಂಬ ಬೋಧಪ್ರದ ವಿಷಯವನ್ನು ಶಿವಪುರಾಣ, ಲಿಂಗಪುರಾಣ, ಮಹಾಭಾರತ, ವೀರಶೈವಗ್ರಂಥಗಳು ಇವುಗಳಿಂದ ಸಂಗ್ರಹಿಸಿದ್ದು ಯೋಗ್ಯವಾಯಿತು; ಆದರೆ ಇದರಲ್ಲಿ ಭಾಗವತದ ವಿಷಯವನ್ನೂ ಸಂಗ್ರಹಿಸಿದೆಯಲ್ಲ! ಭಾಗವತವು ವಿಷ್ಣುಪುರಾಣವಲ್ಲವೆ? ಅದು ಶೈವರಿಗೆ ಸಂಬಂಧಿಸಬಹುದೋ ಎಂಬ ಸಂಶಯವು ನನ್ನಲ್ಲಿ ಉತ್ಪನ್ನವಾಗಿದೆ; ಇನ್ನು ಅದರೊಳಗಿನ ಮಹತ್ವದ ವಿಷಯಗಳ ಶ್ರವಣಮಾಡಿ ನಮಗೆ ಆನಂದವಾದದ್ದೇನೋ ನಿಜ; ಆದರೆ ಅದು ವಿಷ್ಣುಭಕ್ತರಿಗಾಗಿ ನಿರೂಪಿಸಿದ್ದಲ್ಲವೇ? ಅದು ಶಿವಭಕ್ತರಿಗೂ ಸಂಬಂಧಿಸುವದೇನು? ಎಂದು ಕೇಳಲು, ಸಿದ್ಧಮುನೀಶ್ವರನು ನಗೆಮೊಗದಿಂದ ತಮ್ಮ ಶಿಷ್ಯರನ್ನು ಕುರಿತು-ವಿವೇಕಶೀಲಾ, ನಿನ್ನ ಈ ಸಂಶಯವು ನಿನ್ನಲ್ಲಿಯ ಉತ್ಕಟ ಶಿವಭಕ್ತಿಯನ್ನು ತೋರಿಸುವದೆಂದು ನಾನು ತಿಳಿಯುವೆನು. ಶ್ರೀಮದ್ಭಾಗವತದಲ್ಲಿ ಹೇಳಿರುವ ಈ ಜ್ಞಾನರಹಸ್ಯವು ಶೈವರಿಗೂ ಸಂಬಂಧಿಸುತ್ತದೆಂಬದು ನಿನಗೆ ಗೊತ್ತಾದರೆ

